# ಶ್ರೀಮದ್ಭಾಗವತ



ಟಿ.ಕೆ.ವೇಣುಗೋಪಾಲದಾಸರು

# ಶ್ರೀಮದ್ಭಾಗವತ

(ಸಾಪ್ತಾಹಿಕರೂಪ)

ಸಂಗ್ರಹಕಾರರು :
ಟಿ. ಕೆ. ವೇಣುಗೋಪಾಲದಾಸರು

ಗುರುರಾಜ ಪ್ರಕಾಶನ
ನಂ. 35, 2ನೇ ಅಡ್ಡರಸ್ತೆ,
ರಾಮಚಂದ್ರ ಅಗ್ರಹಾರ, ಚಾಮರಾಜಪೇಟೆ,
ಬೆಂಗಳೂರು-560 018

# ಮುನ್ನುಡಿ

ಶ್ರೀಮದ್ಭಾಗವತದ ಕನ್ನಡ ಭಾಷಾಂತರವು ಸಪ್ತಾಹಕ್ಕೆ ಅನುಕೂಲವಾಗಿ. ಮಾಡಲ್ಪಟ್ಟಿದೆ. ಇದರ ವೈಶಿಷ್ಟ್ಯವೇನೆಂದರೆ :- 1) ಪ್ರತಿಸ್ಕಂಧದ ಆದ್ಯಂತ ಶ್ಲೋಕಗಳು. 2) ಶ್ರೀಮಧ್ವಾಚಾರ್ಯರ ಶ್ರೀಮದ್ಭಾಗವತ ತಾತ್ಪರ್ಯಸಹಿತವಾಗಿದೆ 3) ಕಥೆಗಳನ್ನು ಸಂಗ್ರಹವಾಗಿ ಹೇಳಿ, ತತ್ತ್ವಗಳನ್ನು ವಿಶದಪಡಿಸಿದೆ. 4) ಶ್ರುತಿ ಗೀತೆ ಮೊದಲಾದುವುಗಳ ಪ್ರತಿಶ್ಲೋಕದ ಅರ್ಥವನ್ನೂ ಪ್ರತ್ಯೇಕಪ್ರತ್ಯೇಕವಾಗಿ ಬರೆಯಲ್ಪಟ್ಟಿದೆ. 5) ಎಲ್ಲಕ್ಕಿಂತ ಮೇಲಾಗಿ ಶ್ರೀದಾಸರ ಪದ, ಸುಳಾದಿ, ಉಗಾ ಭೋಗಗಳನ್ನು ಭಾಗವತದ ಅರ್ಥಗಳಿಗೆ ಸಂವಾದಗಳಾಗಿ ಉಕ್ತವಾಗಿವೆ.

ನಮ್ಮ ಗುರುಗಳಾದ ಶ್ರೀ ಟಿ.ಕೆ. ವೇಣುಗೋಪಾಲದಾಸರು ಭಾಗವತ ಸಪ್ತಾಹ ವನ್ನು ಮಾಡಬೇಕೆಂದು ಸಂಗ್ರಹವಾಗಿ ಗುರುತು ಹಾಕಿದ್ದರು. ಅದನ್ನು ನೋಡಿದ ನಾನು ಸದ್ವೈಷ್ಣವರೆಲ್ಲರಿಗೂ ಇದು ಮಹೋಪಯುಕ್ತವಾಗಿ ಶ್ರೇಯಸ್ಕರವಾಗುತ್ತದೆ ಯೆಂದು ನಿಶ್ಚಯಿಸಿ, ಇದನ್ನು ಅಚ್ಚು ಮಾಡಿಸುವೆನೆಂದೆನು. ಗುರುಗಳು ಸಂತೋಷ ಪಟ್ಟು ಅನುಮತಿಯನ್ನು ಕೊಟ್ಟರು ನನ್ನಲ್ಲಿ ಪವಿತ್ರವಾದ ಪುತ್ರಪ್ರೇಮವನ್ನು ಇಟ್ಟಿದ್ದ, ದಿವಂಗತರಾದ ನಮ್ಮ ಗುರುಪತ್ನಿ ಶ್ರೀಮತಿ ಹರಿದ್ರಾಕುಂಕುಮ ಶೋಭಿತರಾದ ಶೇಷಮ್ಮನವರಿಗೆ ಈ ಪುಸ್ತಕವನ್ನು ಭಕ್ತಿಪೂರ್ವಕವಾಗಿ ಸಮರ್ಪಿಸುವೆನು.

ಸದ್ವೈಷ್ಣವರು ಆಜನ್ಮಪರ್ಯಂತವಾಗಿ ಪ್ರತಿ ದಿನವೂ ಈ ಪುಸ್ತಕದ ಕೆಲವು ಪುಟಗಳನ್ನು ಪಾರಾಯಣ ಮಾಡುವುದಾದರೆ ಖರ್ಚು ಮಾಡಿ ಈ ಪುಸ್ತಕವನ್ನು ಅಚ್ಚುಮಾಡಿಸಿದುದು ಸಾರ್ಥಕವಾಗುವುದು.

ಶ್ರೀ ಪ್ರಜಾಪತಿಸಂ. ಮಾಘಶುದ್ಧ
ಮಧ್ವನವಮಿ
12-2-1992

ಇತಿ ಶ್ರೀಹರಿದಾಸಪಾದ ಸೇವಕ
ಎಂ ಆರ್. ಗುರುರಾಜದಾಸ್
ಶ್ರೀರಂಗಪಟ್ಟಣ



ಹರಿದಾಸರತ್ನ, ಹರಿಕಥಾಂಬುಧಿಚಂದ್ರ

ಶ್ರೀ ಟಿ. ಕೆ. ವೇಣುಗೋಪಾಲದಾಸರು



ಶ್ರೀ ಟಿ. ಕೆ. ವೇಣುಗೋಪಾಲದಾಸರ ಧರ್ಮಪತ್ನಿ
ಮಾತೋಶ್ರೀ ಹ॥ಕಂ॥ಶೋ॥ ದಿವಂಗತ ಶೇಷಮ್ಮನವರಿಗೆ

-:ಸಮರ್ಪಣೆ:-

**ಶ್ರೀ ಮದ್ರಾಘವೇಂದ್ರ ಗುರು ಸಾರ್ವಭೌಮಾಯ ನಮಃ**

# ಸಪ್ತಾಹದ ಶ್ರೀಮದ್ಭಾಗವತ

**ಅವತಾರಿಕೆ ;** ಶ್ರೀಪರಮಾತ್ಮನ ಉಪದೇಶ ಪರಂಪರೆಯಿಂದ ಬಂದ ಮುಕ್ತಿ ಮಾರ್ಗವಾದ ತತ್ತ್ವಜ್ಞಾನವು ಕಲಿ ಪ್ರಭಾವದಿಂದ ಭೂಲೋಕದಲ್ಲಿ ಮರೆಯಾಗಿ ನಾನಾವಿಧ ಸಾಂಸಾರಿಕ ಕ್ಲೇಶದಲ್ಲಿ ಸಿಕ್ಕಿ ನರಳುತ್ತಿದ್ದ ಸಜ್ಜನರನ್ನು ಉದ್ಧರಿಸಬೇಕೆಂದು ದಯಾಳುಗಳಾದ ಬ್ರಹ್ಮರುದ್ರೇಂದ್ರಾದಿಗಳ ಪ್ರಾರ್ಥನೆಯನ್ನು ಲಾಲಿಸಿ, ಶ್ರೀಮನ್ನಾರಾಯಣನು ಬಹುಕಾಲ ತಪಸ್ಸನ್ನು ಮಾಡಿ ಶುದ್ಧಳಾದ ಸತ್ಯವತೀದೇವಿಯಲ್ಲಿ ಪರಾಶರರಿಂದ ಆವಿರ್ಭವಿಸಿದ ವ್ಯಾಸನೆಂದು ಪ್ರಸಿದ್ಧನಾದ ಮುರಧ್ವಂಸಿಶ್ರೀಮನ್ನಾರಾಯಣನು ಶಾಪದಿಂದ ಹಾಳಾಗಿದ್ದ ವೇದವೆಂಬ ಕಲ್ಪವೃಕ್ಷವನ್ನು ಮತ್ತೆ ಉದ್ಧಾರ ಮಾಡಿ, ಮಂದಮತಿಗಳಾದ ಜನರಲ್ಲಿ ಕನಿಕರದಿಂದ ವೇದವನ್ನು ಶಾಖೆಗಳನ್ನಾಗಿಯೂ, ಉಪ ಶಾಖೆಗಳನ್ನಾಗಿಯೂ ವಿಂಗಡಿಸಿದವನಾಗಿ ಆ ವೇದಗಳ ಅರ್ಥವನ್ನು ನಿರ್ಣಯಿಸುವ ಇಚ್ಛೆಯಿಂದ ಬ್ರಹ್ಮಸೂತ್ರಗಳನ್ನು ರಚಿಸಿದನು. ಆ ವೇದಗಳಲ್ಲಿ ಅಧಿಕಾರಿಗಳಲ್ಲದ ಸ್ತ್ರೀ ಶೂದ್ರರೇ ಮೊದಲಾದ ಜನರಿಗೂ ಮೋಕ್ಷವಾಗಲೆಂದು ಹದಿನೆಂಟು ಪುರಾಣಗಳನ್ನು ಬರೆದು ಅವುಗಳಲ್ಲಿ ಪ್ರಸಿದ್ಧವೂ, ಬ್ರಹ್ಮಸೂತ್ರಗಳ ಅರ್ಥವನ್ನೇ ಪ್ರಕಾಶಪಡಿಸುವುದೂ, 12 ಸ್ಕಂಧಗಳೆಂದು ವಿಭಾಗಿಸಲ್ಪಟ್ಟದ್ದೂ, 18 ಸಾವಿರ ಗ್ರಂಥಗಳನ್ನುಳ್ಳದೂ ಆದ ಶ್ರೀಮದ್ಭಾಗವತವೆಂಬ ಪುರಾಣ ಸಂಹಿತೆಯನ್ನು ಬರೆಯಲು ಇಷ್ಟವುಳ್ಳವರಾಗಿ ಆದಿಯಲ್ಲಿ ಸಕಲರಿಗೂ ಇಷ್ಟದೇವತೆಯಾದ ಶ್ರೀನಾರಾಯಣನ ಧ್ಯಾನರೂಪ ಮಂಗಳವನ್ನು ಮಾಡಿದ್ದಾರೆ. ಈ ರೀತಿ ಮಾಡುವ ಮಂಗಳಕ್ಕೆ ತಾವು ರಚಿಸ ಬೇಕೆಂದಿರುವ ಗ್ರಂಥವು ನಿರ್ವಿಘ್ನವಾಗಿ ಸಮಾಪ್ತಿಯಾಗುವುದೆ ಪ್ರಯೋಜನ. ಪ್ರಕೃತ ಭಾಗವತಕರ್ತರಾದ ಶ್ರೀ ವೇದವ್ಯಾಸರು ಸಾಕ್ಷಾನ್ನಾರಾಯಣನ ಅವತಾರರಾದ್ದರಿಂದ ಅವರ ಕಾರ್ಯಕ್ಕೆ ವಿಘ್ನ ಪ್ರಸಕ್ತಿಯೇ ಇಲ್ಲವಾದ ಕಾರಣ ನಿರ್ವಿಘ್ನ ಪರಿಸಮಾಪ್ತಿಯ ಉದ್ದೇಶದಿಂದ ಮಂಗಳಮಾಡಿರುವುದು ಹೇಗೆ ಯುಕ್ತವಾದೀತು ? ಎಂದು ಶಂಕಿಸ ಬಹುದು. ಆದರೆ ಮಂಗಳ ಮಾಡುವುದಕ್ಕೆ ನಿರ್ವಿಘ್ನ ಪರಿಸಮಾಪ್ತಿಯೊಂದೇ ಪ್ರಯೋಜನವಲ್ಲ. ಅನೇಕ ಪ್ರಯೋಜನಗಳಿವೆ. ಮಂಗಳ ಪೂರ್ವಕವಾದ ಗ್ರಂಥವೇ ಅಧ್ಯಯನ, ಅಧ್ಯಾಪನೆ ಮಾಡುವವರಿಗೆ ಶ್ರೇಯಃ ಪ್ರದವೂ, ಪ್ರಸಿದ್ಧಿಯೂ ಆಗುವ ಕಾರಣ ಈ ಗ್ರಂಥಾಧ್ಯಯನ ಮಾಡುವವರಿಗೆ ಶ್ರೇಯಸ್ಸಾಗಲಿ, ಅಸನ್ನಿಹಿತರಾದ ಶಿಷ್ಯರು ಮಂಗಳಾನುಷ್ಠಾನಪೂರ್ವಕ ಗ್ರಂಥರಚನೆ ಮಾಡಬೇಕೆಂಬ ಸಂಪ್ರದಾಯವನ್ನು ತಿಳಿಯಲಿ ಮುಂತಾಗಿ ಅನೇಕ ಪರಪ್ರಯೋಜನಗಳಿಗಾಗಿ ಶ್ರೀವೇದವ್ಯಾಸರು ಸಿರಿವಿಧಿ ಮೊದಲಾದ ಸರ್ವದೇವತೆಗಳಿಗೂ ಅತ್ಯಂತ ಇಷ್ಟದೇವತೆಯಾದ ನಾರಾಯಣನನ್ನು ಸ್ಮರಿಸುತ್ತಾರೆ.

|| ಶ್ರೀ ವೇದವ್ಯಾಸಾಯ ನಮಃ ಹರಿಃ ಓಂ ||

ಜನ್ಮಾದ್ಯಸ್ಯ ಯತೋಽನ್ವಯಾದಿತರತಶ್ಚಾರ್ಥೇಷ್ವಭಿಜ್ಞಃ ಸ್ವರಾಟ್
ತೇನೇ ಬ್ರಹ್ಮ ಹೃದಾ ಯ ಆದಿಕವಯೇ ಮುಹ್ಯಂತಿ ಯಂ ಸೂರಯಃ ।
ತೇಜೋವಾರಿ ಮೃದಾಂ ಯಥಾ ವಿನಿಮಯೋ ಯತ್ರ ತ್ರಿಸರ್ಗೋ ಮೃಷಾ
ಧಾಮ್ನಾಸ್ವೇನ ಸದಾ ನಿರಸ್ತಕುಹಕಂ ಸತ್ಯಂ ಪರಂ ಧೀಮಹಿ || ೧ ||

## ಸಂಗ್ರಹಾರ್ಥ

1. ಶ್ರೀನಾರಾಯಣನೇ ಚೇತನಾಚೇತನ ಜಗತ್ತಿನ ಸೃಷ್ಟಿ ಮೊದಲಾದವುಗಳ ಕರ್ತನು.
2. ಉಪಕ್ರಮಾದಿಸಾಧನಗಳಿಂದ ಶ್ರುತಿ–ಸ್ಮೃತಿಗಳನ್ನು ವಿಚಾರ ಮಾಡಿದಾಗ ಅವುಗಳ ತಾತ್ಪರ್ಯ ಹರಿಯೇ ಜಗತ್ಸೃಷ್ಟ್ಯಾದಿಕರ್ತನೆಂಬುದು ವಿಶದವಾಗುವುದು
3. ವೇದಗಳಿಗೆ ಅನುಕೂಲಗಳಾದ ತರ್ಕಗಳಿಂದಲೂ ಈ ಸಿದ್ಧಾಂತವೇ ನಿರ್ಣಯಿಸಲ್ಪಡುವುದು.
4. ಶ್ರೀಹರಿಯೇಸರ್ವಜ್ಞನು.
5. ಇನ್ನೊಬ್ಬ ಅಧಿಪತಿ ತನಗಿಲ್ಲದವನು. ಸ್ವತಂತ್ರ ಕರ್ತನು.
6. ಜ್ಞಾನದಲ್ಲಿ ಬ್ರಹ್ಮದೇವರಿಗೇ ವೇದೋಪದೇಶಕನಾದ ಜಗದ್ಗುರು.
7. ಅವನ ಅನುಗ್ರಹವಿಲ್ಲದೆ ಅವನನ್ನು ಯಾರೂ ತಿಳಿಯಲಾರರು
8. ಪೂರ್ಣನಾದ್ದರಿಂದ ರಾಮಕೃಷ್ಣಾದಿರೂಪಗಳಿಂದ ಅವತಾರ ಮಾಡುವುದರಿಂದಲೂ ಜೀವರಿಗೆ ಜಡದೇಹಗಳನ್ನು ಕೊಟ್ಟು ಸೃಷ್ಟಿ ಮಾಡುವುದರಿಂದಲೂ, ಪ್ರಕೃತಿಯಿಂದ ತತ್ತ್ವಾದಿನಳನ್ನು ಸೃಷ್ಟಿಸುವುದರಿಂದಲೂ ಯಾವ ಪ್ರಯೋಜನವನ್ನೂ ಹೊಂದುವುದಿಲ್ಲ. ಅವನ ಸ್ವಭಾವವೇ ಹೀಗೆ.
9. ಹಾವಾಡಿಗರವನಂತೆ ಇಂದ್ರಜಾಲ ಮೊದಲಾದ ವಂಚನೆಯಿಲ್ಲದವನು.
10. ನಿರ್ದೋಷ ಜ್ಞಾನಾನಂದಮೂರ್ತಿಯಾದ್ದರಿಂದ ಸತ್ಯನಾಮಕನು
11. ಪೂರ್ಣನೂ, ಸರ್ವೋತ್ತಮನೂ, ಸಕಲರಕ್ಷಕನೂ ಆದವನು. ಇಂಥ ನಾರಾಯಣನನ್ನು ಧ್ಯಾನಿಸುತ್ತೇವೆ.

## ವಿಸ್ತಾರವಾದ ಅರ್ಥ

ಗ್ರಂಥಾರಂಭದಲ್ಲಿ ನಾರಾಯಣನನ್ನೇ ಧ್ಯಾನಿಸಬೇಕೆಂದು ಏಕೆ ಹೇಳಿದರೆಂದರೆ :–
1) ಈ ಭಾಗವತವು ಅವನ ವಿಷಯವನ್ನೇ ಹೇಳುತ್ತಿದೆ. 2) ಮೇಲಾಗಿ

ಅವನಂತಹ ಭಕ್ತಪ್ರೇಮಿ ಯಾರೂ ಇಲ್ಲವಾದ್ದರಿಂದ ಭಕ್ತನಿಗೆ ಇಷ್ಟವಾದ ದೈವ ವೆಂದರೆ ಅವನೇ. ಶ್ರುತಿಯು—"ತದೇತತ್ಪ್ರೇಯಃ ಪುತ್ರಾತ್ಪ್ರೇಯೋ" ಇತ್ಯಾದಿಯಾಗಿ ಹೇಳುತ್ತೆ. ಶ್ರೀವ್ಯಾಸರಾಜರು ಇದನ್ನೇ ಹೇಳುವರು :

**ತ್ರಿಪುಟತಾಳ :—**

ಪುತ್ರ ಮಿತ್ರ ಕಳತ್ರ ವರ್ಗದಿಂದ । ದೇಹ ಕರ್ಮಜ್ಞಾನೇಂದ್ರಿಯಗಳಿಂದ । ಚಿತ್ತ ಬುದ್ಧಿ ಮನೋ ಹಮ್ಮುಗಳಿಂದ(ಈ ಅಹಂಕಾರವು ಅಂತಃಕರಣದ ಒಂದು ಭಾಗ. ಅಸ್ವರೂಪ ದಲ್ಲಿ ಸ್ವರೂಪ ತಾಬುದ್ಧಿ. ಉದಾ ದೇಹವೇ ಜೀವವೆಂದು ತಿಳಿಯುವುದು. ನಾನು ದಾಸ ಹರಿಶ್ರೀಶನೆಂದು ತಿಳಿಯುವುದು. ಇದೇ ಕರ್ತವ್ಯ ಎಂಬ ಭಾವನೆಯನ್ನು ಹುಟ್ಟಿಸುವುದು. ಅನಿರುದ್ಧನು ಇದಕ್ಕೆ ನಿಯಾಮಕ) ಪ್ರಾಣದಿಂದ ತನ್ಮಾತ್ರದಿಂದ ನೀನೇ ಪ್ರಿಯನಾಗಿಹೆ ಶ್ರೀಕೃಷ್ಣ । ನಿನ್ನ ನೆನಹಿಗಿಂತ ಬೇರೆ ಪರಮ ಸುಖವುಂಟೆ ॥

**ಸಂಗ್ರಹಾನ್ವಯ · "ಪರಂ ಧೀಮಹಿ" ಪರನನ್ನು ಧ್ಯಾನಿಸುವೆವು. ಪರ "ಪೄಪಾಲನ ಪೂರಣಯೋಃ" ಪಾಲನೆ, ಪೂರ್ಣ. ಹರಿಯು ರಕ್ಷಕ, ಪೂರ್ಣ. ಶ್ರುತಿ "ಬ್ರಹ್ಮವಿದಾಪ್ನೋತಿ ಪರಂ" ಬ್ರಹ್ಮಜ್ಞಾನಿ ಪರನನ್ನು ಹೊಂದುವನೆಂದು ಶ್ರುತಿಯು ಹೇಳುತ್ತ ಪರನೆಂದರೆ ಪರಬ್ರಹ್ಮನೆಂದು ತಿಳಿಸಿತು.**

**ದುರ್ವಾಸರು ಸತ್ಯಂತಪನೆಂಬುವನ ಪ್ರಶ್ನೆಗೆ ಉತ್ತರಿಸುತ್ತಾರೆ :**

**ಯದೇತತ್ಪರಮಂ ಬ್ರಹ್ಮ ವೇದವಾದೇಷು ಪಠ್ಯತೇ ।**

**ಸದೇವ ಪುಂಡರೀಕಾಕ್ಷಃ ಸ್ವಯಂ ನಾರಾಯಣಃ ಪರಃ ॥ ಹರಿವಂಶ**

ಧ್ಯಾಯೇಮ ಎಂದು ಹೇಳುವ ಬದಲು ಧೀಮಹಿ ಎಂದು ಹೇಳಿರುವರು. ಇದು ವೇದದಪ್ರಯೋಗ. ಭಾಗವತ ಗಾಯತ್ರೀಮಂತ್ರಾರ್ಥವನ್ನೇ ಹೇಳುತ್ತದೆಂದು ತಿಳಿಸು ವುದಕ್ಕಾಗಿ ಛಾಂದಸಪ್ರಯೋಗ. ಭಾಗವತವು ಶಾಸ್ತ್ರವೆಂದು ಗರುಡಪುರಾಣವೂ ಹೇಳುತ್ತೆ :

ಶ್ಲೋಕ : **ಅರ್ಥೋಽಯಂ ಬ್ರಹ್ಮಸೂತ್ರಾಣಾಂ ಭಾರತಾರ್ಥವಿನಿರ್ಣಯಃ ।**
**ಗಾಯತ್ರೀಭಾಷ್ಯರೂಪೋಽಸೌ ವೇದಾರ್ಥಪರಿಬೃಂಹಿತಃ ।**
**ಪುರಾಣಾನಾಂ ಸಾರರೂಪಃ ಸಾಕ್ಷಾದ್ಭಗವತೋದಿತಃ ।**
**ದ್ವಾದಶ ಸ್ಕಂಧ ಸಂಯುಕ್ತಃ ಶತವಿಚ್ಛೇದ ಸಂಯುತಃ ।**
**ಗ್ರಂಥೋಽಷ್ಟಾದಶ ಸಾಹಸ್ರಃ ಶ್ರೀಮದ್ಭಾಗವತಾಭಿಧಃ ॥**

(ವಿಚ್ಛೇದ = ಶೌನಕರ ಪ್ರಶ್ನೆ, ಸೂತರ ಉತ್ತರ ಇದಕ್ಕೆ ವಿಚ್ಛೇದವೆಂದು ಹೆಸರು ಗ್ರಂಥ = 32 ಅಕ್ಷರ)

ಇಡೀ ಶ್ಲೋಕದ ಉಳಿದ ಭಾಗವು ನಾರಾಯಣನ ಮಹಿಮೆಗಳನ್ನು ತಿಳಿಸುವುದು.

**ಜನ್ಮಾದ್ಯಸ್ಯ ಯತಃ**

ಜನ್ಮಾದಿ. ಆದಿ ಶಬ್ದದಿಂದ ಸಂಗ್ರಹಿಸಬೇಕಾದ್ದು. ಶ್ಲೋಕ

**ಸೃಷ್ಟಿಃಸ್ಥಿತಿಶ್ಚ ಸಂಹಾರೋ ನಿಯತಿಃ ಜ್ಞಾನಮಾವೃತಿಃ ।**
**ಬಂಧಮೋಕ್ಷೌಚ ಪುರುಷಾತ್ ಯಸ್ಮಾತ್‌ಸ ಹರಿರೇಕರಾಟ್॥ ಸ್ಕಾಂದ**

ಸೃಷ್ಟಿ, ರಕ್ಷಣೆ, ಲಯ, ಇಚ್ಛೆ ಅಥವಾ ಪ್ರವೃತ್ತಿ, ಪ್ರೇರಣೆ, ಜ್ಞಾನ, ಅಜ್ಞಾನ, ಸಂಸಾರ ಬಂಧ, ಅದರಿಂದ ಮುಕ್ತಿ. ಈ 8ಯಥಾಯೋಗ್ಯವಾಗಿ ಪೂರ್ಣನಿಂದಾಗುತ್ತೆ, ಅವನೇಸ್ವತಂತ್ರನಾದ ಶ್ರೀಹರಿ ಎಂದು ಸ್ಕಾಂದದಲ್ಲಿದೆ.

**ಅನ್ವಯಾತ್**

ಶ್ರೀಹರಿ ಜಗಜ್ಜನ್ಮಾದಿ ಕರ್ತನೆಂಬುದಕ್ಕೆ ಆಧಾರ

1. **"ಯತೋವಾ ಇಮಾನಿ ಭೂತಾನಿ ಜಾಯಂತೇ ಯೇನ ಜಾತಾನಿ ಜೀವಂತಿ" ತೈತ್ತಿರೀಯ.**
2. **"ಯೋನಃಪಿತಾ ಜನಿತಾ ಯೋವಿ ಧಾತಾ"–ಶ್ರುತಿ**
3. **ಅಹಂ ಸರ್ವಸ್ಯ ಪ್ರಭವಃ ಮತ್ತಃ ಸರ್ವಂ ಪ್ರಪದ್ಯತೇ–ಗೀತಾ 8/10.**
4. **ಸ್ರಷ್ಟಾ ಪಾತಾ ಸಂಹರ್ತಾ ಸ ಏಕೋ ಹರಿರೀಶ್ವರಃ ? ಸ್ರಷ್ಟಾ ಪಾತಾ ತಥೈವಾತ್ತಾ ನಿಖಿಲಸ್ಯೈವ ಏವತು ॥ ಸ್ಮೃತಿ**

ಹರಿಯೇ ಸೃಷ್ಟ್ಯಾದಿ ಅಷ್ಟಕರ್ತಾ ಎಂಬುದನ್ನು ಶ್ರುತಿ ಸ್ಮೃತಿಗಳಿಂದ ತಿಳಿಯುವ ಬಗೆ ಹೇಗೆಂದರೆ ಅದಕ್ಕೆ ಇರುವ ಉಪಾಯಗಳು :

1. ಉಪಕ್ರಮ
2. ಉಪಸಂಹಾರ
3. ಅಭ್ಯಾಸ (ಅನೇಕಬಾರಿ ಒಂದೇ ಬಗೆಯಾಗಿ ಹೇಳುವುದು)
4. ಅಪೂರ್ವತಾ (ಇತರ ಪ್ರಮಾಣಗಳಿಂದ ಸಿದ್ಧವಾಗದಿರುವ ಅರ್ಥ )
5. ಫಲ
6. ಅರ್ಥವಾದ (ಸ್ತುತಿ ಅಥವಾ ನಿಂದಾ ಪ್ರಕರಣ)

ಈ ಆರು ಉಪಾಯಗಳಿಗೂ ತಾತ್ಪರ್ಯ ಲಿಂಗಗಳೆಂದು ಹೆಸರು. ಈ ಸಾಧನ ಗಳಿಂದ ಹರಿಯೇ ಜಗತ್ತಿನ ಸೃಷ್ಟಿ ಮೊದಲಾದುವುಗಳ ಕರ್ತನೆಂದು ನಿರ್ಣಯಿಸುವ ಶ್ರುತಿ ಸ್ಮೃತಿಗಳು ಇದನ್ನೇ ಅನ್ವಯಾತ್ ಎಂಬುದು ಹೇಳುತ್ತೆ.

## ಇತರೇತರಶ್ಚ

ಹರಿಯೇ ಜಗತ್ಸೃಷ್ಟ್ಯಾದಿಕರ್ತಾ ಎಂಬುದಕ್ಕೆ ಶ್ರುತಿ ಸ್ಮೃತಿಗಳಿಗೆ ಅನುಕೂಲ ವಾಗಿರುವ ಯುಕ್ತಿಗಳೂ ಇವೆ. ಉದಾ : ಪುತ್ರಾದಿಗಳ ಸೃಷ್ಟಿ ಚೇತನರಾದ ತಂದೆ ಮುಂತಾದವರಿಂದಲೇ ಆಗತಕ್ಕದ್ದು. ಆದ್ದರಿಂದ ಕೇವಲ ಜಡದಿಂದ ಯಾವುದೂ ಹುಟ್ಟುವುದಿಲ್ಲ. ಈ ಜಗತ್ತು ಅಲ್ಲಿರುವ ಯಾವ ಚೇತನನಿಂದಲೂ ಹುಟ್ಟಿಲ್ಲ. ಪರಿ ಶೇಷದಿಂದ ಜಗತ್ಸೃಷ್ಟಿಕರ್ತ ಚೇತನೋತ್ತಮನಾದ ಶ್ರೀನಾರಾಯಣನಿಂದಲೇ ಜಗತ್ತಿನ ಸೃಷ್ಟಿಯಾಗಿದೆ ಎಂದು ಸಿದ್ಧವಾಗುತ್ತೆ.

## ಅರ್ಥೇಷು ಅಭಿಜ್ಞ :

ಉಂಗುರವನ್ನು ಮಾಡುವವನಿಗೆ ಅದನ್ನು ಮಾಡುವ ಬಗ್ಗೆ ಬೇಕಾದ ಜ್ಞಾನ ವಿರಬೇಕಷ್ಟೆ ? ಹಾಗೆ ಜಗತ್ತಿನ ಸೃಷ್ಟಿ ಮೊದಲಾದುದನ್ನು ಮಾಡುವ ಹರಿಗೆ ಆ ಬಗ್ಗೆ ಜ್ಞಾನವಿದೆಯೋ ಎಂದು ಕೇಳಿದರೆ 'ಅರ್ಥೇಷು ಅಭಿಜ್ಞ' ಎಂದುತ್ತರ. ಅದಕ್ಕೆ ಅರ್ಥ: ಪ್ರಕೃತ್ಯಾದಿಗಳಲ್ಲಿರತಕ್ಕ ಎಲ್ಲ ವಿಶೇಷಗಳನ್ನೂ ಹರಿಯು ತಿಳಿದವನು. ಅಂದರೆ ಸರ್ವಜ್ಞನು.

## ಸ್ವರಾಟ್

ರುದ್ರಾದಿಗಳೂ ಜ್ಞಾನಿಗಳೇ. ಆದ್ದರಿಂದ ಅವರೇ ಜಗತ್ಕರ್ತರೆಂದೇಕೆ ಹೇಳಬಾರದು ? ಎಂದರೆ ಹರಿಯು ಸ್ವರಾಟ್ ಅಂದರೆ ಇನ್ನೊಬ್ಬರ ಸಹಾಯವಿಲ್ಲದೆ 'ಸ್ವಯಮೇವ ವಿರಾಜತೇ' ತನ್ನನ್ನು ತಾನೇ ಬೆಳಗುವವನು. ರುದ್ರಾದಿಗಳು ಅಸ್ವತಂತ್ರ ರಾದ್ದರಿಂದ ಸ್ವಪ್ರಕಾಶರಲ್ಲ. ಇದರ ಮೇಲೆ ಹರಿಯು ಸ್ವರಾಟ್ ಅಂದರೆ ತನಗೆ ತಾನೇ ಪ್ರಭು (ಅನನ್ಯಾಧಿಪತಿ ಅಂದರೆ ಸ್ವತಂತ್ರನು). ಸರ್ವಜ್ಞಳೆನಿಸಿದ ಲಕ್ಷ್ಮಿಯೇ "ಮಮ ಯೋನಿರಪ್ಸ್ವ ಅಂತಃ ಸಮುದ್ರೇ" ಎಂದು ಹೇಳಿರುವಳು. ಅಂದರೆ ಯಾರನ್ನು ರುದ್ರಾದಿಗಳನ್ನಾಗಿ ಮಾಡಲಿಚ್ಛಿಸುವಳೋ ಅಂತಹವರನ್ನು ರುದ್ರಾದಿ ಗಳನ್ನಾಗಿ ಮಾಡುವ ಸರ್ವಜ್ಞಳಾದ ಲಕ್ಷ್ಮಿಯು "ನನಗೆ ಕಾರಣೀ ಭೂತನು ಕ್ಷೀರಾಬ್ಧಿ ಶಾಯಿ" ಎನ್ನುವಳು. ಇದರಿಂದ ರಮಾಬ್ರಹ್ಮಾದಿಗಳೂ ಶ್ರೀಹರ್ಯಧೀನರು ಎಂದು ನಿರ್ಣಯ. ಹರಿ ಇತರರ ಅಧೀನನಲ್ಲ ಸರ್ವಸ್ವತಂತ್ರ.

## ಶ್ರೀಹರಿಯು ನಿರವಧಿಕ ಸರ್ವಜ್ಞನೆಂಬುದಕ್ಕೆ ಯುಕ್ತಿ :
## ತೇನೇ ಬ್ರಹ್ಮ ಹೃದಾ ಯ ಆದಿಕವಯೇ

ಬ್ರಹ್ಮದೇವರು ಸಾಮಾನ್ಯರಲ್ಲ ಆದಿಕವಿ ಅಂದರೆ ಜಗದ್ಗುರುವಾಗಿ ರುದ್ರಾದಿ ಗಳಿಗೆ ಉಪದೇಶಮಾಡತಕ್ಕ ಮಹಾಜ್ಞಾನಿ ಅಂತಹ ಬ್ರಹ್ಮದೇವರಿಗೆ ಷಡಂಗ ಸಹಿತವಾದ ವೇದವನ್ನು (ವೇದಪ್ರತಿಪಾದ್ಯ ತನ್ನ ಮಹಿಮೆಯನ್ನು) ಪ್ರೇಮದಿಂದ ಅನುಗ್ರಹ ಪೂರ್ವಕವಾಗಿ, ವಿಸ್ತಾರವಾಗಿ ಉಪದೇಶಿಸಿದನು. ಇದರಿಂದ ಜಗತ್ತಿನಲ್ಲಿ ಹ[illegible] ಸರ್ವಜ್ಞನು [illegible] ಇನ್ನೊಬ್ಬನು ಹೇಳಿದ ಹಾಗಾಯಿತು.

ಹರಿಯು ಅಪ್ರಮೇಯನೆನ್ನುವರು : **ಮುಹ್ಯಂತಿ ಯಂ ಸೂರಯಃ**

ಹಿಂದಿನ, ಮುಂದಿನ, ಈಗಿನ ಬ್ರಹ್ಮಾದಿ ಮಹಾಜ್ಞಾನಿಗಳೂ ಶ್ರೀ ಹರಿಯ ಪ್ರಸಾದವಿಲ್ಲದೆ ಅವನ ಮಹಿಮೆಯನ್ನು ತಿಳಿಯಲಾರರು ಕೆಲವರು ಅವನನ್ನು ಅನ್ಯಥಾ ತಿಳಿಯುವರು ಇದರಿಂದಲೂ ಹರಿಯು ಮಹಾ ಸರ್ವಜ್ಞನೆಂಬುದನ್ನು ತಿಳಿಸಿದರು

ದಾಸರ ಮಾತು . ಉಗಾಭೋಗ

**ಎನ್ನಮ್ಮ ಸಿರಿದೇವಿ ಇನ್ನೂ ಅರಿಯಳು ಮಹಿಮೆ । ಕುನ್ನಿಮಾನವ ನಾನೇನ ಬಲ್ಲೆನೊ । ಪನ್ನಗಾದ್ರಿನಿಲಯನೆ ಪಾವನ ಮೂರುತಿ ಕೃಷ್ಣ । ಎನ್ನನುದ್ಧರಿಸಯ್ಯ ಪುರಂದರ ವಿಠಲ॥**

ಪ್ರಶ್ನೆ : ಫಲಾಕಾಂಕ್ಷೆಯಿಂದ ಹರಿಯು ಸೃಷ್ಟ್ಯಾದಿವ್ಯಾಪಾರ ಮಾಡುವನೆ ? ಹೌದೆಂದರೆ ಅವನು ಅಪೂರ್ಣನೆಂದಾಗುವನು ಅವನು ಎಂದೆಂದೂ ಪೂರ್ಣನೆ ಸರಿ. ಲೋಕದಲ್ಲಿ ಫಲೋದ್ದೇಶವಿಲ್ಲದೆ ದಡ್ಡನೂ ಯಾವ ಕಾರ್ಯ ವನ್ನೂ ಮಾಡಲಾರ ಅಂದ ಬಳಿಕ ಪೂರ್ಣನಾದ ಹರಿ ಜಗತ್ಸೃಷ್ಟ್ಯಾದಿ ವ್ಯಾಪಾರ ವನ್ನು ಏಕೆ ಮಾಡುವನು ? ಎಂದರೆ ಮಾಂಡೂಕೋಪನಿಷತ್ತು ಹೇಳುತ್ತೆ :

**"ದೇವಸ್ಯೈಷ ಸ್ವಭಾವೋsಯಂ ಆಪ್ತಕಾಮಸ್ಯ ಕಾಸ್ಪೃಹಾ" ಶ್ರೀಹರಿಯ ಜಗತ್ಸೃಷ್ಟ್ಯಾದಿ ರೂಪವ್ಯಾಪಾರವು ಇಚ್ಛಾರೂಪವು, ಸ್ವಭಾವವು.**

ಜಗತ್ಸೃಷ್ಟ್ಯಾದಿಗಳಿಂದ ಹರಿಗೆ ಪ್ರಯೋಜನವಿಲ್ಲ. ಪರರಿಗೆ ಪ್ರಯೋಜನ ವಾಗುತ್ತೆ, ಆದ್ದರಿಂದ ಕರುಣಾಳುವಾದ ಹರಿ ಇತರರಿಗೆ ಅನುಕೂಲವಾಗಲಿ ಎಂದೇ ಸೃಷ್ಟ್ಯಾದಿ ವ್ಯಾಪಾರ ಮಾಡುತ್ತಾನೆ. ಸೃಷ್ಟಿ ಮೂರುಬಗೆ : ಈಶ್ವರ ಸೃಷ್ಟಿ, ಜೀವಸೃಷ್ಟಿ, ಜಡಸೃಷ್ಟಿ.

ಈ ಮೂರು ಸೃಷ್ಟಿಗೂ ಉಪಮಾನ ಕೊಡುತ್ತಾರೆ : **ತೇಜೋವಾರಿ ಮೃದಾಂ ಯಥಾ ವಿನಿಮಯಃ ಯತ್ರತ್ರಿಸರ್ಗ** . (ತೇಜಸ್ಸು, ನೀರು, ಮಣ್ಣು ಈ 3ರ ಸೃಷ್ಟಿಯಂತೆ)

**ತೇಜೋಸೃಷ್ಟಿಯಂತೆ ಈಶ್ವರ ಸೃಷ್ಟಿ**

ಒಂದೇ ಮೂಲಭೂತವಾದ ತೇಜಸ್ಸು ತನ್ನಿಂದ ಹುಟ್ಟಿದ ಜಲ, ನೆಲ ಈ ಭೂತ ಪದಾರ್ಥಗಳಲ್ಲಿ ಅನೇಕ ಪ್ರಕಾರವಾಗಿ ಪ್ರವೇಶ ಮಾಡಿರುತ್ತೆ ಮತ್ತು ಮಥ ನಾದಿಗಳಿಂದ ಹೊರಗೂ ಕಾಣಸುತ್ತದೆ. ಅದರಂತೆ ಪರಮಾತ್ಮನೂ ಜಗತ್ತನ್ನು ಹುಟ್ಟಿಸಿ' ಅನೇಕ ರೂಪಗಳಿಂದ ಆ ಜಗತ್ತಿನ ಪದಾರ್ಥಗಳೊಳಗೆಲ್ಲ ಪ್ರವೇಶಿಸುವನು.

ಮತ್ತು ಜೀವರಲ್ಲಿರುವ ದಯೆಯಿಂದ ವಾಸುದೇವಾದಿರೂಪಗಳಿಂದ ಹೊರಗೆ ವ್ಯಕ್ತನಾಗುವನು ಇದೇ ಈಶ್ವರ ಸೃಷ್ಟಿ ಅಥವಾ ದೀಪದಿಂದ ದೀಪಹಚ್ಚಿದಂತೆ (ತೈಜಸ=ಅಗ್ನಿ–ಮೊದಲಿನ ದೀಪದಲ್ಲಿರುವ ಅಗ್ನಿ ಹಚ್ಚಿದ ದೀಪದಲ್ಲೂ ಒಂದಂಶ ದಿಂದಿರುವಂತೆ) ಪರಮಾತ್ಮನ ಒಂದು ರೂಪದಿಂದ ಮತ್ತೊಂದು ರೂಪವು ಆವಿರ್ಭವಿಸುವುದು.

## ಮಣ್ಣಿನಂತೆ ಜಡಸೃಷ್ಟಿ, ನೀರಿನಂತೆ ಜೀವಸೃಷ್ಟಿ

ಕುಂಬಾರನು ಮಣ್ಣನ್ನು ಉಪಾದಾನ ಕಾರಣವನ್ನಾಗಿ ಮಾಡಿಕೊಂಡು ಅದ ರಿಂದ ವಾಡೆ, ಮಡಿಕೆ, ಕುಡಿಕೆ ಮುಂತಾದ ಪದಾರ್ಥಗಳನ್ನು ಸೃಷ್ಟಿ ಮಾಡುವಂತೆ ಈಶ್ವರನೂ ಕೂಡ ಜಡ ಪ್ರಕೃತಿಯೆಂಬ ಉಪಾದಾನದಿಂದ ಮಹತ್ತತ್ತ್ವ, ಅಹಂಕಾರ ಮೊದಲಾದ ಜಡ ಪದಾರ್ಥಗಳನ್ನೆಲ್ಲ ಸೃಷ್ಟಿಸುವನು ಇದೇ ಜಡಸೃಷ್ಟಿ

ಸೂರ್ಯನ ಬೆಳಕು ನೀರಿನ ಮೇಲೆ ಅಥವಾ ಸೂರ್ಯಕಾಂತಾ ಶಿಲೆಯ ಮೇಲೆ ಬೀಳುವುದರಿಂದ ಅನೇಕ ಪ್ರತಿಬಿಂಬಗಳು ಹುಟ್ಟುವುವು ಅದರಂತೆ ಪ್ರತಿಬಿಂಬರಾದ ಜೀವರು ಸೂಕ್ಷ್ಮ, ಸ್ಥೂಲ ಮೊದಲಾದ ಶರೀರಗಳೆಂಬ ಉಪಾಧಿಗಳ ನಿಮಿತ್ತದಿಂದ ಶ್ರೀ ಹರಿಯಿಂದ ಹುಟ್ಟುವರು ಜೀವರಿಗ ಈ ದೇಹಗಳ ಪ್ರಾಪ್ತಿಯೇ ಅವರ ಸೃಷ್ಟಿ.

## ಯೆತ್ರುತ್ರಿಸರ್ಗೋ ಮೃಷಾ

ಪರಮಾತ್ಮನಿಗೆ ಈ ಸೃಷ್ಟಿ ವ್ಯಾಪಾರದಿಂದ ಲಾಭವಿಲ್ಲ ಅದನ್ನು ಮೃಷಾ ಎಂಬ ಶಬ್ದದಿಂದ ಹೇಳಿದರು ಮೃಷಾ ಎಂದರೆ ಮಿಥ್ಯೆ ಎಂದು ಅರ್ಥವಲ್ಲ. ವ್ಯರ್ಥವೆಂದೇ ಅರ್ಥ ಇದಕ್ಕೆ ಆಧಾರ : ದಶಮಸ್ಕಂಧದಲ್ಲಿ **"ಭಿತ್ವಾಮೃಷಾಶ್ರು ದೃಷದಶ್ಮನಾ ರಹೋ ಜಘಾಸ ಹೈಯ್ಯಂಗವಮಂತರಂ ಗತಃ"** ಇಲ್ಲಿನ ಮೃಷಾ ಶಬ್ದಕ್ಕೆ ಸುಳ್ಳು ಎಂದರ್ಥವಲ್ಲ. ಯಶೋದಾ ದೇವಿಯು ಕೃಷ್ಣನ ಕಣ್ಣೀ ರನ್ನು ಪ್ರತ್ಯಕ್ಷವಾಗಿ ಕಂಡಳು ಆದ್ದರಿಂದ ಮೃಷಾ ಎಂದರೆ ವ್ಯರ್ಥ. ಈ ಆಧಾರದಿಂದ ಹರಿಗೆ ಸೃಷ್ಟ್ಯಾದಿ ವ್ಯಾಪಾರದಿಂದ ಮೃಷಾ - ಯಾವ ಲಾಭವೂ ಇಲ್ಲ ಹಾಗಾದರೆ ಜೀವರಿಗೆ ವ್ಯರ್ಥವಲ್ಲವೆ ? ಅಮೃಷಾ ಎಂದು ಪದಚ್ಛೇದ. ಜೀವರು ಸೃಷ್ಟಿಗೆ ಬಂದು ಸಾಧನ ಮಾಡುವುದರಿಂದ ಅವರಿಗೆ ಲಾಭವೇ ಸರಿ

ಪ್ರಶ್ನೆ : ಮಾಯಾವಾದಿಗಳು ಇಲ್ಲಿರುವ ಮೃಷಾ ಶಬ್ದಕ್ಕೆ ಸುಳ್ಳು ಎನ್ನುವರು. ಜಗತ್ತು ಇದ್ದಂತೆ ತೋರುವುದು ವಾಸ್ತವಿಕವಾಗಿ ಇಲ್ಲ ಒಟ್ಟಿನಲ್ಲಿ ಇಂದ್ರ ಜಾಲ ದಂತೆ ಸೃಷ್ಟಿ ಎನ್ನುವರು ಇಂದ್ರ ಜಾಲವನ್ನು ದಡ್ಡನೂ ಬಡವನೂ ಆದ ಆಟಗಾರನು ಮಾಡುವನೇ ಹೊರತು ನಿರ್ದೋಷ ಹರಿಯು ಮಾಡುವನೇ ? ಎಂದು ಜ್ಞಾನಿಗಳು ಹೇಳುವರು

## ಧಾಮ್ನಾ ಸ್ವೇನ ಸದಾ ನಿರಸ್ತ ಕುಹಕಂ

ಶ್ರೀ ಹರಿಯು ತನ್ನ ಸ್ವರೂಪ ಜ್ಞಾನ ಮಹಿಮೆಯಿಂದಲೇ ಯಾವಾಗಲೂ ಇಂದ್ರಜಾಲಾದಿ ಮಾಯೆಗಳಿಂದ, ಮೋಸ, ಕಪಟ, ಮೊದಲಾದ ದೋಷಗಳಿಂದ ದೂರನು. ಅವನ ಸೃಷ್ಟಿ ಸತ್ಯ ಜಗತ್ತು ಸುಳ್ಳಲ್ಲ

ಪ್ರಶ್ನೆ · ಹರಿ ದೋಷ ದೂರ–ಗುಣಪರಿಪೂರ್ಣನೆಂಬುದಕ್ಕೆ ಆಧಾರವೇನು ?

ಉತ್ತರ : **ಸತ್ಯಂ**

ಸತ್–ಉತ್ತಮ, ತಿ–ಆನಂದ, ಯ–ಜ್ಞಾನ ಒಟ್ಟಿನಲ್ಲಿ ನಿರ್ದುಃಖನಿತ್ಯ ನಿರತಿಶಯ ಆನಂದಾನುಭವಸ್ವರೂಪಿ ಇದಕ್ಕೆ ಆಧಾರ : **ಸತ್ ಶಬ್ದ ಉತ್ತಮಂ ಬ್ರೂಯಾದಾನಂದಂತೀತಿ ವೈವದೇತ್। ಯೇತಿ ಜ್ಞಾನಂ ಸಮುದ್ದಿಷ್ಟಂ॥**
**2) ನಿರ್ದುಃಖಪೂರ್ಣಾನಂದತ್ವಾದ್ಯಮಾಹುಃ ಸತ್ಯಮಚ್ಯುತಂ। ನಿರ್ದೋಷ ಗುಣಪೂರ್ಣತ್ವಾತ್ ಪರಂ ಚಾಹುರ್ಜನಾರ್ದನಂ ॥ –ತಾತ್ಪರ್ಯ**

## ಸಮಗ್ರ ಶ್ಲೋಕದ ಅರ್ಥ

ಉಪಕ್ರಮಾದಿ ತಾತ್ಪರ್ಯ ಮತ್ತು ಸದ್ಯುಕ್ತಿಯಿಂದ ಸಹಿತವಾದ ಸರ್ವಶ್ರುತಿ ಸ್ಮೃತಿಗಳ ಹೃದಯವನ್ನು ಪರ್ಯಾಲೋಚನೆ ಮಾಡಿದರೆ ಜಗತ್ಸೃಷ್ಟ್ಯಾದಿ ಕರ್ತನು ಶ್ರೀ ಹರಿಯು ಎಂದು ನಿರ್ಣಯವಾಗುವುದು ಅವನು ಸರ್ವಜ್ಞನು ;ಅನನ್ಯಾಧಿಪತಿ. ಬ್ರಹ್ಮನಿಗುಪದೇಶಕನಾದ ಗುರು. ತನ್ನ ಅನುಗ್ರಹವಿಲ್ಲದೆ ಜ್ಞಾನಿಗಳಿಗೆ ದುರ್ಜ್ಞೇಯ. ಲಾಭವನ್ನು ಬಯಸದೆ ಇತರರಪ್ರಯೋಜನಕ್ಕಾಗಿ ಕೇವಲ ಲೀಲೆಯಿಂದ ಜಗತ್ತನ್ನು ಸೃಷ್ಟಿಸುವನು ನಿತ್ಯನಿರಸ್ತೇಂದ್ರಜಾಲನೂ, ನಿಷ್ಕಪಟಿಯೂ, ನಿರ್ದುಃಖ ನಿತ್ಯನಿರತಿಶಯಾನಂದ ಜ್ಞಾನರೂಪನೂ, ಸರ್ವಗುಣ ಪರಿಪೂರ್ಣನೂ ಆದ ಶ್ರೀನಾರಾಯಣನನ್ನು ಶ್ರವಣ, ಮನನ, ನಿಧಿಧ್ಯಾಸನ ರೂಪವಾದ ಜಿಜ್ಞಾಸೆಯಿಂದ ಉಪಾಸನೆ ಮಾಡೋಣ

2 ಅವ : ವಿಷಯ, ಅಧಿಕಾರಿ, ಫಲಗಳನ್ನು ಹೇಳುತ್ತಾರೆ :

**ಧರ್ಮಃ ಪ್ರೋಜ್ಝಿತಕೈತವೋಽತ್ರ ಪರಮೋ ನಿರ್ಮತ್ಸರಾಣಾಂ ಸತಾಂ ವೇದ್ಯಂ ವಾಸ್ತವಮತ್ರ ವಸ್ತು ಶಿವದಂ ತಾಪತ್ರಯೋನ್ಮೂಲನಂ। ಶ್ರೀಮದ್ಭಾಗವತೇ ಮಹಾಮುನಿಕೃತೇ ಕಿಂ ವಾ ಪರೈಃ ಈಶ್ವರಃ ಸದ್ಯೋ ಹೃದ್ಯವರುಧ್ಯತೇಽತ್ರ ಕೃತಿಭಿಃ ಶುಶ್ರೂಷುಭಿಸ್ತ ತ್ಕ್ಷಣಾತ್ ॥೨॥**

ಶ್ರೀಮದ್ಭಾಗವತವು ನಾರದರಿಂದ ಪ್ರಾರ್ಥಿತರಾದ ಶ್ರೀವೇದವ್ಯಾಸರೆಂಬ ಪೂರ್ಣ ಜ್ಞಾನಿಗಳಿಂದ ರಚಿತವಾಗಿದೆ. ಇತರ ಪುರಾಣಗಳಿಗಿಂತ ಉತ್ತಮ ಪುರು

ಷಾರ್ಥವನ್ನು ಕೊಡತಕ್ಕದ್ದು. ಈಶ್ವರಾರಾಧನರೂಪ ನಿಷ್ಕಾಮ ಕರ್ಮವನ್ನು ಮಾತ್ರವೇ ಹೇಳಿದೆ ಇದನ್ನು ಅಧ್ಯಯನ ಮಾಡುವ, ಸ್ವೋತ್ತಮರಲ್ಲಿ ಮಾತ್ಸರ್ಯ ವಿಲ್ಲದ ಸಜ್ಜನರಿಗೆ ಮಾತ್ರವೇ ಪರಮಾನಂದವನ್ನುಂಟು ಮಾಡುತ್ತದೆ ಅಷ್ಟೇ ಅಲ್ಲ, ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ ದುಃಖಗಳನ್ನೆಲ್ಲ ಸಮೂಲ ನಾಶ ಮಾಡುತ್ತದೆ. ಈ ಭಾಗವತದಲ್ಲಿ ಪ್ರಧಾನವಾಗಿ ಪರಮಾತ್ಮನನ್ನು ಪ್ರತಿಪಾದಿಸಿದೆ ಪರಮಾತ್ಮ ನಾದರೋ ಶ್ರವಣ-ಮನನ-ನಿಧಿಧ್ಯಾಸನಗಳಿಂದ ಜ್ಞಾನಕ್ಕೆ ಗೋಚರನು ಸರ್ವ ಕಾಲದಲ್ಲೂ ದೋಷದೂರನಾಗಿ ಗುಣಗಳಿಂದ ಪರಿಪೂರ್ಣನೂ, ಅನಾದಿ ನಿತ್ಯ, ಸರ್ವತ್ರವ್ಯಾಪ್ತ. ನಿರ್ಮತ್ಸರದಿಂದ ಜ್ಞಾನಿಗಳಿಗೆ ತನ್ನ ಜ್ಞಾನದ ಮೂಲಕ ಪರಮಾ ನಂದವನ್ನು ಕೊಡುವವನು. ಇವನನ್ನು ಚೆನ್ನಾಗಿ ತಿಳಿಸುವ ಈ ಗ್ರಂಥವು ಬರೀ ಭಾಗವತವಲ್ಲ ಶ್ರೀಮದ್ಭಾಗವತವು ಅಂದರೆ ಕೇಳುವುದಕ್ಕೆ ಕಿವಿಗಿಂಪಾಗಿಯೂ, ಬಹಳ ಅರ್ಥಗರ್ಭಿತವಾಗಿಯೂ ಇರುವುದರಿಂದ ಶ್ರೀಮದ್ಭಾಗವತವೆಂಮ ಕರೆಸ ಲ್ಪಡುವುದು. ಭಗವಂತನ ಜ್ಞಾನವನ್ನುಂಟುಮಾಡದಿರುವ ಅರ್ಥಕಾಮಾದಿಗಳನ್ನು ಹೇಳಿ ಪ್ರಯೋಜನವಿಲ್ಲ. ಇತರ ಶಾಸ್ತ್ರಗಳಿಂದ ಹರಿಯಲ್ಲಿ ಬೇಗ ಭಕ್ತಿ ಹುಟ್ಟುವುದಿಲ್ಲ. ಈ ಭಾಗವತದ ವಿಷಯ ಹಾಗಲ್ಲ. ಶಿಕ್ಷಿತ ಬುದ್ಧಿಯುಳ್ಳವರೂ, ಗುರ್ವಾದಿಗಳ ಸೇವೆ ಯಲ್ಲಿ ನಿಪುಣರೂ ಆದ ಯೋಗ್ಯಜೀವರು ಈ ಭಾಗವತವನ್ನು ಅಭ್ಯಾಸ ಮಾಡಬೇಕು. ಹಾಗೆ ಮಾಡಿದ್ದೇ ಆದರೆ ಶ್ರೀಹರಿ ಅವರ ಹೃದಯ ಕಮಲದಲ್ಲಿ ಪ್ರಕಾಶಿಸುತ್ತಾನೆ. ಅವನಲ್ಲಿ ಭಕ್ತಿ ಹೆಚ್ಚುತ್ತೆ. ಅಂಥ ಭಕ್ತಿಗೆ ವಶನಾದ ಪರಮಾತ್ಮನು ಪಾಶದಿಂದ ಬದ್ಧ ನಂತೆ ಅವರ ಹೃದಯವನ್ನು ಬಿಟ್ಟು ಕದಲುವುದೇ ಇಲ್ಲ. ಶ್ರವಣಾದಿ ಸಾಧನ ಉಳ್ಳ ವರಿಗೆ ತಡವಿಲ್ಲದೆ ಕೂಡಲೇ ಗೋಚರನಾಗುವನು. ಸಾಧನೆ ಒದಗಿಸಿಕೊಳ್ಳುತ್ತಿರುವ ಜೀವರಿಗೆ ಮಿಕ್ಕ ಪುರಾಣಗಳಿಂದ ಗೋಚರನಾಗುವುದಕ್ಕಿಂತ ಶೀಘ್ರವಾಗಿಯೇ ಈ ಪುರಾಣಶ್ರವಣದಿಂದ ಗೋಚರನಾಗುವನು.

3. ಅವ : ಬೇಗ ಭಾಗವತ ಶ್ರವಣ, ಅಭ್ಯಾಸ ಮಾಡಬೇಕೆಂದು ಮನಸ್ಸು ಮಾಡಲಿ ಎಂಬುದಕ್ಕಾಗಿ ಇದನ್ನು ಹೊಗಳುತ್ತಾರೆ :

**ನಿಗಮಕಲ್ಪತರೋರ್ಗಲಿತಂ ಫಲಂ ಶುಕಮುಖಾದಮೃತದ್ರವ ಸಂಯುತಂ ।**
**ಪಿಬತ ಭಾಗವತಂ ರಸಮಾಲಯಂ ಮುಹುರಹೋ ರಸಿಕಾ ಭುವಿ ಭಾವುಕಾಃ**
**॥ ೩ ॥**

ಭೂಲೋಕದಲ್ಲಿ ಹುಟ್ಟುವ ಸ್ವಭಾವವುಳ್ಳ ಭಕ್ತಿರಸವನ್ನು ಬಲ್ಲ ಸಜ್ಜನರೇ ! ವೇದಗಳು ಭಕ್ತರು ಅಪೇಕ್ಷಿಸುವ ಸರ್ವಪುರುಷಾರ್ಥಗಳನ್ನೂ ತಿಳಿಸುವುದರಿಂದ ಕಲ್ಪವೃಕ್ಷಗಳೆನಿಸುವುವು. ಇವುಗಳಿಂದ ಸಜ್ಜನರ ಉದ್ಧಾರಕ್ಕಾಗಿ ಪರಿಪಕ್ವವಾದ ಹಣ್ಣನ್ನು ಉದುರಿಸಿರುವೆನು. ಗಿಳಿ ಹಣ್ಣನ್ನು ಕಚ್ಚಿ ಅದನ್ನು ಅಮೃತಮಯವನ್ನಾಗಿ ಮಾಡಿದಂತೆ ಶುಕಾಚಾರ್ಯನು ಮೋಕ್ಷಕ್ಕೆ ಮಾರ್ಗವಾಗುವಂತೆ ವೇದವಾಖ್ಯಾನರೂಪ

ವಾಗಿ ವಿವರಿಸಿರುವನು ಇಂಥ ಭಾಗವತರಸವನ್ನು (ತಾತ್ಪರ್ಯ ವಿಷಯವಾದ ಅರ್ಥವನ್ನು) ಜನ್ಮಜನ್ಮಗಳಲ್ಲೂ, ಲಿಂಗಶರೀರ ಭಂಗವಾಗುವವರೆಗೂ ಅಷ್ಟೇ ಅಲ್ಲ ಮೋಕ್ಷದಲ್ಲೂಕುಡಿಯುತ್ತಿರಿ. ಅಂದರೆ ಆದರದಿಂದ ಕೇಳಿ ಅಭ್ಯಾಸ ಮಾಡುತ್ತಿರಿ.

ನೈಮಿಷಾರಣ್ಯದಲ್ಲಿ ಸತ್ರಯಾಗದೀಕ್ಷಿತರಾಗಿದ್ದ ಶೌನಕಾದಿಗಳು ತಮ್ಮಲ್ಲಿಗೆ ಬಂದ ಸೂತರನ್ನು ಪ್ರಶ್ನಿಸಿದರು.

1. ಅಧಿಕಾರಿಗಳಿಗೆ ತಪ್ಪದೆ ಶ್ರೇಯಸ್ಸಾಧನವು ಯಾವುದೆಂದು ನೀನು ನಿಶ್ಚಯಿಸಿರುವೆಯೋ ಅದನ್ನು ಹೇಳು.

2. ಕಲಿಯುಗದಲ್ಲಿ ಅಲ್ಪಾಯು, ಅಲ್ಪಶಕ್ತಿ, ಅಲ್ಪ ಪ್ರಜ್ಞೆ, ಅಲ್ಪ ಪುಣ್ಯವುಳ್ಳ ಜೀವರೇ ಜಾಸ್ತಿ. ಯಾವುದನ್ನೂ ವಿಸ್ತಾರವಾಗಿ ಕೇಳಲವಕಾಶವಿಲ್ಲ. ಇರುವ ಅತ್ಯಲ್ಪಕಾಲದಲ್ಲಿ ತಿಳಿದು ಅನುಷ್ಠಾನ ಮಾಡಬಹುದಾದ ಸಾಧನವನ್ನು ಹೇಳು. ಅಂದರೆ ಬಿಂಬರೂಪಿಯಾದ ಪರಮಾತ್ಮನು ಮಾಡಿಸುವ ಸಾಧನವನ್ನು ಹೇಳೆಂದು ಭಾವ.

3. ಶ್ರೀಕೃಷ್ಣಾವತಾರವು ಸುಜೀವರ ಇಹಪರ ಸುಖ ಸಾಧನ. ಜ್ಞಾನಾದ್ಯೈಶ್ವರ್ಯ ಅಭಿವೃದ್ಧಿ ಕರ. ಅದನ್ನು ಹೇಳು.

4. ಮೂಲರೂಪಿಯಾದ ನಾರಾಯಣನು ಕಲಿಕೃತಪಾಪನಾಶ ಮಾಡುವುದರಲ್ಲಿ ಸಮರ್ಥನು. ಇದೇ ಹರಿಯ ಯಶಸ್ಸು. ಅಂತಃಕರಣ ನಿರ್ಮಲವಾಗುವುದಕ್ಕಾಗಿ ಅವನ ಚರಿತ್ರೆ ಕೇಳಲೇಬೇಕು. ಅದನ್ನು ಹೇಳು.

5. ಸ್ವೇಚ್ಛೆಯಿಂದಲೇ ಪ್ರಳಯಜಲವಿಹಾರಾದಿ ಕ್ರೀಡೆ ಮಾಡುವ ಹರಿಯ ಅವತಾರಗಳ ಕಥೆ ಹೇಳು.

6. ಕೃಷ್ಣಾವತಾರ ಸಮಾಪ್ತಿ ನಂತರ ಧರ್ಮರಕ್ಷಕನಾರು ?

ಈ ಆರು ಪ್ರಶ್ನೆಗಳಿಗೂ ಮುಂದೆ ಹೇಳುವ ಉತ್ತರವು ಭಾಗವತವೇ ಆಗಿದೆ.

ಒಂದನೇ ಅಧ್ಯಾಯ ಮುಗಿದುದು

ಸೂತ : (ಗುರುಗಳ ಮಹಿಮೆ ಹೇಳಿ ನಮಸ್ಕರಿಸುವರು)

**ಯಂ ಪ್ರವ್ರಜಂತಮನುಪೇತಮಪೇತಕೃತ್ಯಂ ದ್ವೈಪಾಯನೋ ವಿರಹಕಾತರ ಆಜುಹಾವ ।**

**ಪುತ್ರೇತಿ ತನ್ಮಯತಯಾ ತರವೋಽಭಿನೇದುಸ್ತಂ ಸರ್ವಭೂತ ಹೃದಯಂ ಮುನಿಮಾನತೋಽಸ್ಮಿ ॥ ೩ ॥**

ಶುಕಾಚಾರ್ಯರು ದೇಹಾಭಿಮಾನವಿಲ್ಲದವರು, ಕೃತಕೃತ್ಯರು, ಸಂನ್ಯಾಸವನ್ನು ಸ್ವೀಕರಿಸಲು ಹೊರಟರು. ಮಗನ ಅಗಲಿಕೆಯನ್ನು ಸಹಿಸಲಾರದೆ ಆಧೈರ್ಯಪಟ್ಟವರಂತೆ ವೇದವ್ಯಾಸರು 'ಪುತ್ರಾ' ಎಂದು ಕೂಗಿದರು

ರಮಾಬ್ರಹ್ಮಾದಿ ನಿಯಾಮಕ ಪರಮಾತ್ಮನೇ ವೇದವ್ಯಾಸರು. ಮಾನವನಾಗಿ ಅವತರಿಸಿದಾಗ ಮನುಷ್ಯರಂತೆ ನಡೆದುಕೊಳ್ಳಬೇಕೆಂಬ ನಿಯಮಕ್ಕಾಗಿ ಪಾಮರ ಜನರಂತೆ ಅವರು ನಟಿಸಿದರೇ ಹೊರತು ದೇವರಿಗೆ ಅಧೈರ್ಯವೆಲ್ಲಿ ಬಂತು ? ಮಕ್ಕಳಿಗಾಗಿ ತಪಸ್ಸು ಮಾಡುವುದಿಲ್ಲವೆ ? ಅದರಂತೆ ತೋರಿಸಿದ್ದೂ, ಅಧೈರ್ಯಾದಿಗಳನ್ನು ಪ್ರದರ್ಶನ ಮಾಡಿದ್ದೂ ದೈತ್ಯ ಮೋಹನಕ್ಕಾಗಿಯೇ ಹೊರತು ನಿಜವಲ್ಲ. ದೇವರು ಪೂರ್ಣಾನಂದ ನಿತ್ಯತೃಪ್ತ. ಕೂಗಿದ ತಂದೆಗೆ ಉತ್ತರವಾಗಿ ಪ್ರತಿಯೊಂದು ಗಿಡದ ಒಳಗಿನಿಂದಲೂ ಓಂ ಎಂಬ ಧ್ವನಿಯನ್ನು ಶುಕರು ಮಾಡಿ "ನನ್ನ ವಿರಹದಿಂದ ನೀವು ನೋಯಬೇಕಾದ್ದಿಲ್ಲ." ಅಹಂಕಾರ ದೇವತೆಯ ಅಂಶರಾದ್ದರಿಂದ ಶುಕರು "ನಾನು ಎಲ್ಲೆಡೆ ಇರುವೆನು" ಎಂದು ಸೂಚಿಸಿದರು. ಇಂಥ ಶುಕಾಚಾರ್ಯರನ್ನು ನಮಿಸುವೆನು.

ಶ್ಲೋಕ

**ಯಃ ಸ್ವಾನುಭಾವಮಖಿಲಶ್ರುತಿಸಾರಮೇಕಮಧ್ಯಾತ್ಮದೀಪಮತಿತಿ ತೀರ್ಷತಾಂ ತಮೋಂಧಂ । ಸಂಸಾರಿಣಾಂ ಕರುಣಯಾಹ ಪುರಾಣಗುಹ್ಯಂ ತಂ ವ್ಯಾಸಸೂನುಮುಪಯಾಮಿ ಗುರುಂ ಮುನೀನಾಂ ॥ ೩ ॥**

ಸ್ವತಂತ್ರ ಸಾಮರ್ಥ್ಯವುಳ್ಳವನೂ, ಸಕಲಶ್ರುತಿಪ್ರತಿಪಾದ್ಯನೂ, ಸರ್ವೋತ್ತಮನೂ, ಸರ್ವನಿಯಾಮಕನೂ, ಭಾಗವತಾದಿ ಪುರಾಣಗಳಿಗೆ ರಹಸ್ಯಾರ್ಥಭೂತನೂ ಆದ ಪರಬ್ರಹ್ಮನನ್ನು ಪುರಾಣವೆಂಬ ದೀಪವನ್ನು ಬೆಳಗಿಸಿ ಅಜ್ಞಾನ ಕತ್ತಲಲ್ಲಿದ್ದ ಅಧಿಕಾರಿಗಳನ್ನು ಉಪದೇಶದ ಮೂಲಕ ಉದ್ಧರಿಸಿದ ವ್ಯಾಸಪುತ್ರರನ್ನು ಮರೆ ಹೋಗುವೆನು.

ಶ್ಲೋಕ :

**ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಂ ।**
**ದೇವೀಂ ಸರಸ್ವತೀಂ ವ್ಯಾಸಂ ತತೋ ಗ್ರಂಥಮುದೀರಯೇತ್ ॥**

ಅರ್ಥ :—

ಗ್ರಂಥ ಪ್ರತಿಪಾದ್ಯನಾದ ನಾರಾಯಣನನ್ನೂ, ಗ್ರಂಥಕರ್ತೃ ಶ್ರೀ ವೇದವ್ಯಾಸರನ್ನೂ, ಗ್ರಂಥದ ಒಡತಿ ಲಕ್ಷ್ಮೀದೇವಿಯನ್ನೂ, ಜೀವೋತ್ತಮರಾದ ವಾಯುದೇವರನ್ನೂ, ಗ್ರಂಥಾಭಿಮಾನಿ ಸರಸ್ವತಿಯನ್ನೂ, ಉಪಸಾಧಕ ಶೇಷದೇವರನ್ನೂ ನಮಿಸಿ ಭಾಗವತವನ್ನು ಹೇಳಬೇಕು.

ಸೂತರು ; ಶೌನಕಾದಿಗಳೇ ! ನೀವು ಒಳ್ಳೆ ಪ್ರಶ್ನೆ ಮಾಡಿದಿರಿ

ರಾಗ ತಾಳ

**ಹರಿಕಥಾ ಶ್ರವಣ ಮಾಡೊ–ನಿರಂತರ । ಪಥಾ ವೈಕುಂಠಕಿದು ನೋಡೋ ॥**
**ಸರಸಿಜನಾಭನ ಸರ್ವದಾ ಹೊಗಳುತ । ದುರಿತದೂರಕೀಡಾಡೋ ॥೧॥**
**ಜ್ಞಾನಭಕುತಿ ವೈರಾಗ್ಯವೀವ ನಮ್ಮ । ಆನಂದತೀರ್ಥರ ಪಾಡೋ ॥೨॥**
**ಪರಮಪುರುಷ ಶ್ರೀ ಪುರಂದರ ವಿಠಲನ । ಚರಣಕಮಲದಲಿ ಕೂಡೊ ॥೩॥**

ಶ್ರೀಹರಿ ಸರ್ವೋತ್ತಮ, ಸಂಸೇವ್ಯ, ದೇಹಸೃಷ್ಟಿಸಿ ಅದರೊಳಗಿದ್ದರೂ ಬದ್ಧನಲ್ಲ. ಅವನಿಗೂ ಅವನರೂಪ, ಗುಣಗಳಿಗೂ ಭೇದವಿಲ್ಲ. ಭೋಕ್ತೃವೂ ಹೌದು ಅಭೋಕ್ತೃವೂ ಹೌದು. ಇಂದ್ರಿಯ ವಿಷಯಗಳಲ್ಲಿದ್ದು ತನ್ನದೇ ಆಗಿರುವ ಆನಂದ ವನ್ನು ಭೋಗಿಸುವನು. ಅಸಾರವೂ, ಅಶುಭವೂ ಆದ ವಿಷಯವನ್ನು ಅನುಭವಿಸುವು ದಿಲ್ಲ. ಶ್ರೀಹರಿ ಸತ್ವಗುಣದಿಂದ ಸಜ್ಜನರನ್ನು ರಕ್ಷಿಸುತ್ತ, ವರಾಹಾದ್ಯವತಾರಗಳನ್ನು ಮಾಡಿ ಆಯಾ ಜಾತಿಗೆ ಅನುಸಾರವಾದ ಚೇಷ್ಟೆ ಮಾಡುತ್ತಾನೆ.

ಎರಡನೆಯ ಅಧ್ಯಾಯ ಮುಗಿದುದು.

ಪರಮಾತ್ಮನ ರೂಪಗಳ ದೇಹವು ಪ್ರಾಕೃತವಲ್ಲ. ಹುಟ್ಟು ನಾಶಗಳಿಲ್ಲ. ಜ್ಞಾನಾತ್ಮಕ, ಆನಂದ ಪರಿಪೂರ್ಣ. ಹರಿಯ ಧರ್ಮಗಳಿಗೂ ಅವನಿಗೂ ಭೇದವಿಲ್ಲ. ಅವನಲ್ಲಿ ಸ್ಥೂಲ-ಅಣು, ಅವರ್ಣ-ವರ್ಣಗಳು ಈ ವಿರುದ್ಧ ಧರ್ಮಗಳಿವೆ. ಯಾವ ದೋಷವೂ ಇಲ್ಲ. ಅವನ ಐಶ್ವರ್ಯವು ಯಾವ ದೋಷವೂ ಅವನ ಹತ್ತಿರ ಸುಳಿಯುವುದಕ್ಕೂ ಅವಕಾಶ ಕೊಡುವುದಿಲ್ಲ. ಪರಿಪೂರ್ಣನಾದ ಹರಿ ಪ್ರಳಯ ಕಳೆದ ಕೂಡಲೆ ಸೃಷ್ಟಿಸಲಿಚ್ಛಿಸಿ ಆಗ ಆವರಿಸಿದ್ದ ಕತ್ತಲನ್ನು ನಾಶ ಮಾಡಿದ. ಅವನು ವ್ಯಕ್ತನಾದ. ಇದೇ ಅವನ ರೂಪ ಸ್ವೀಕಾರ. ಇದಕ್ಕೆ ಪರಮ ಪುರುಷ ಎಂದು ಹೆಸರು. ಮಹದಾದಿ ತತ್ತ್ವಗಳನ್ನು ಸೃಷ್ಟಿಸಿ ಅವುಗಳಿಂದ ಬ್ರಹ್ಮಾಂಡವನ್ನು ಸೃಷ್ಟಿಸಿದನು. ಅದರೊಳಗೆ ಪ್ರವೇಶಿಸಿ ಅಲ್ಲಿದ್ದ ಜಲರಾಶಿಯಲ್ಲಿ ಶೇಷಶಾಯಿಯಾಗಿ ಮಲಗಿದನು. ಅವನ ನಾಭಿಯಿಂದ ಲೋಕರೂಪ ಪದ್ಮವನ್ನು ಸೃಷ್ಟಿಸಿದನು. ಇದಕ್ಕೆ ಪದ್ಮಕಲ್ಪ ವೆಂದು ಹೆಸರು. ಹರಿ ತನ್ನ ಸಾಮರ್ಥ್ಯವನ್ನು ಪ್ರಕಟಿಸದಿರುವುದೇ ಅವನ ನಿದ್ರೆ. ಅವನ ನಾಭಿಯಿಂದ ಬ್ರಹ್ಮದೇವರು ಹುಟ್ಟಿದರು.

ಹರಿಯು ಬ್ರಹ್ಮಾಂಡದೊಳಗೆ ಹಿಂದೆ ವಿರಾಟ್ಪುರುಷನಾಗಿ ಅವತರಿಸಿದ್ದನು. ಅವನ ಅವಯವಗಳಿಂದ 14 ಲೋಕಗಳನ್ನು ಸೃಷ್ಟಿಸಿದನು.

ಪದ್ಮನಾಭ ರೂಪವು ಮತ್ಸ್ಯಾದಿ ಅವತಾರ ರೂಪಗಳಿಗೆ ಕಾರಣವಾದುದು.

1 **ಸನತ್ಕುಮಾರ** · ಇದೇ ಮೊದಲನೆಯ ಅವತಾರ. ಈ ರೂಪದಿಂದಲೇ ಸನಕಾದಿಗಳು ಯೋಗವಿದ್ಯೆ ಕಲಿತರು.

2 **ವರಾಹಾವತಾರ** : ತನ್ನ ಅವಯವಗಳಿಂದ ಯಜ್ಞಸಾಮಗ್ರಿಗಳನ್ನು ಸೃಷ್ಟಿಸಿ, ಯಜ್ಞೇಶನೆನಿಸಿದನು. ರಸಾತಲಕ್ಕೆ ಒಯ್ಯಲ್ಪಟ್ಟ ಭೂಮಿಯನ್ನು ಮೇಲಕ್ಕೆ ತಂದ.

3 **ಇತರಾದೇವಿಪುತ್ರ ಮಹಿದಾಸ** : ನಾರದರಿಗೆ ಪಂಚರಾತ್ರ ಶಾಸ್ತ್ರವನ್ನು ಉಪದೇಶಿಸಿದನು.

4 **ನರನಾರಾಯಣ** ; ನರನಲ್ಲಿ ಸ್ವರೂಪಾಂಶದಿಂದ ಆವಿಷ್ಟ. ನಾರಾಯಣ ಸಾಕ್ಷಾದ್ರೂಪ. ಅವರಿಬ್ಬರು ತಪಸ್ಸನ್ನು ಮಾಡಿದರು.

5 **ಕಪಿಲ** . ಆಸುರಿ ಎಂಬ ಶಿಷ್ಯನಿಗೆ ಸಾಂಖ್ಯವೆಂಬ ವೇದಾರ್ಥಪೂರ್ಣವಾದ ಶಾಸ್ತ್ರವನ್ನುಪದೇಶಿಸಿದನು.

6 **ದತ್ತ** : ಪ್ರಹ್ಲಾದ ಮುಂತಾದವರಿಗೆ, ಅಲರ್ಕನೆಂಬುವನಿಗೆ ಆನ್ವೀಕ್ಷಿಕೀ ಎಂಬ ತತ್ತ್ವವಿದ್ಯೆ ಉಪದೇಶಿಸಿದನು.

7 **ಯಜ್ಞ** : ಇಂದ್ರಪದವಿಯನ್ನು ಪ್ರಥಮಮನ್ವಂತರದಲ್ಲಿ ಆಳಿದನು.

8 **ಋಷಭ** : ಅಗ್ನೀಧ್ರರಾಜನಮಗ ನಾಭಿ ಮತ್ತು ಮೇರುದೇವಿಯಲ್ಲಿ ಅವತಾರ. ಋಷಭನು ಸಂನ್ಯಾಸಿಯಾಗಿ ಸಂನ್ಯಾಸಾಶ್ರಮದ ಸತ್ಸಂಪ್ರದಾಯಗಳನ್ನು ಉಪದೇಶಿಸಿದನು.

9 **ಪೃಥು** . ಸಾಕ್ಷಾದವತಾರವಲ್ಲ. ಪೃಥು ಚಕ್ರವರ್ತಿಯಲ್ಲಿ ಆವಿಷ್ಟವಾದ ಅವತಾರ. ಗೋರೂಪದ ಭೂದೇವಿಯಲ್ಲಿ ಎಲ್ಲ ವಿಧವಾದ ಸಾರ ಪದಾರ್ಥಗಳನ್ನೂ ಹಾಲಿನ ರೂಪದಲ್ಲಿ ಕರೆದುಕೊಟ್ಟ.

10 **ಮತ್ಸ್ಯ** : ಚಾಕ್ಷುಷಮನ್ವಂತರದಲ್ಲಿ ಸತ್ಯವ್ರತ ರಾಜನಾಗಿದ್ದ ವೈವಸ್ವತ ಮನುವಿಗೆ ಭೂಮಿಯನ್ನೇ ದೋಣಿ ಮಾಡಿ, ಆ ಪ್ರಲಯ ಜಲದಲ್ಲಿ ರಕ್ಷಿಸಿದನು.

11 **ಕೂರ್ಮ** · ಚಾಕ್ಷುಷ ಮತ್ತು ವೈವಸ್ವತ ಮನ್ವಂತರಗಳಲ್ಲಿ ನಡೆದ ಸಮುದ್ರ ಮಥನದಲ್ಲಿ ಮುಳುಗಿದ್ದ ಮಂದರ ಪರ್ವತವನ್ನೆತ್ತಿ ತನ್ನ ಬೆನ್ನಿನ ಮೇಲೆ ಹಿಡಿದುಕೊಂಡನು.

12 **ಧನ್ವಂತರಿ** , ಅಮೃತಕಲಶ ಹಿಡಿದು ಸಮುದ್ರದಿಂದ ಪ್ರಕಟನಾದನು.

13 **ಮೋಹಿನಿ :** ದೈತ್ಯರಿಗೆ ಅಮೃತವು ದೊರೆಯದಂತೆ ಮಾಡಿ ದೇವತೆಗಳಿಗೆ ಅಮೃತವನ್ನು ಹಂಚಿದನು.

14 **ನರಸಿಂಹಾವತಾರ :** ಹಿರಣ್ಯಕಶಿಪುವನ್ನು ಚಾಪೆಜೊಂಡನ್ನು ಸೀಳುವಂತೆ ಸೀಳಿ ಕೊಂದನು.

15 **ವಾಮನ .** ಬಲಿಚಕ್ರವರ್ತಿಯ ಯಜ್ಞ ಮಂಟಪಕ್ಕೆ ದಾನ ಕೇಳಲು ವಾಮನನಾಗಿ ಬಂದನು.

16 **ಪರಶುರಾಮ** · 21 ಬಾರಿ ಭೂಮಿಯಲ್ಲಿದ್ದ ದುಷ್ಟ ಕ್ಷತ್ರಿಯರ ವಂಶಗಳನ್ನೇ ಸಂಹರಿಸಿದನು, ಕೋಪವಿಲ್ಲ.

17 **ವೇದವ್ಯಾಸ :** ರಾಮಾವತಾರಕ್ಕೆ ಮುಂಚೆ ವೈವಸ್ವತ ಮನ್ವಂತರ 3ನೇ ಮಹಾಯುಗ, 7, 16, 25, 28 ದ್ವಾಪರ ಯುಗಗಳಲ್ಲಿ ಪರಾಶರರಿಂದ ಸತ್ಯವತಿಯಲ್ಲಿ ವ್ಯಾಸರಾಗಿ ವ್ಯಕ್ತನಾಗಿ ವೇದಗಳನ್ನು ಶಾಖೆಗಳನ್ನಾಗಿ ವಿಂಗಡಿಸಿದನು.

18 **ರಾಮಾವತಾರ :** ಸಮುದ್ರ ರಾಜನನ್ನು ನಿಗ್ರಹಿಸಿ, ಸೇತುವೆ ಕಟ್ಟಿ ರಾವಣಾದಿಗಳನ್ನು ಸಂಹರಿಸಿದನು.

19 **ಬಲರಾಮನಲ್ಲಿ ಆವಿಷ್ಟ ಶುಕ್ಲ ಕೇಶ :** ಶೇಷದೇವರು ಬಲರಾಮನಾಗಿ ಹುಟ್ಟಿದಾಗ ಅವರಲ್ಲಿ ಈ ರೂಪ ಆವೇಶಿಸಿತ್ತು.

20 **ಕೃಷ್ಣ .** ಭೂಭಾರ ಹರಣ ಮಾಡಲು ವಸುದೇವನ ಮನೆಯಲ್ಲಿ ವ್ಯಕ್ತನಾದ. ವೃಷ್ಣಿ ವಂಶವೆಂಬ ಕುಲದಲ್ಲಿ ಅವತಾರ.

21 **ಬುದ್ಧ :** ಕೃಷ್ಣಾವತಾರವಾದಮೇಲೆ ಕಲಿಯುಗವು ಪ್ರಾರಂಭ ವಾಗುತ್ತ ಬಂದಿತು. ಆಗ ಅಯೋಗ್ಯರಾದ ಅಸುರರು ವೈದಿಕ ಮಾರ್ಗದಲ್ಲಿ ನಿರತರಾಗಿ ತ್ರಿಪುರಗಳಲ್ಲಿ ವಾಸಿಸುತ್ತಿದ್ದರು. ಅವರನ್ನು ಮೋಹಗೊಳಿಸಬೇಕೆಂದು ಹರಿಯು ಮಾರ್ಗದಲ್ಲಿ ಬಾಲರೂಪಿಯಾಗಿ ವ್ಯಕ್ತನಾದ. ಈ ಕಾರ್ಯವು ನಡೆದದ್ದು ಮಗಧದೇಶದ ಮಧ್ಯಭಾಗವಾದ ಗಯೆ ಎಂಬ ಸ್ಥಳದಲ್ಲಿ. ಆ ಮಾರ್ಗದಲ್ಲಿ ಬಂದ ಜಿನನು ಬಾಲಕನನ್ನು ನೋಡಿ ತನ್ನ ಮಗನೆಂದು ಸ್ವೀಕರಿಸಿದನು. ಅವನಿಗೆ ಈ ಮಗುವು ಮೋಹಗೊಳಿಸುವುದೆಂದು ತಿಳಿದಿರಲಿಲ್ಲ. ಬಳಿಕ ಆ ಮಗು ಅವರಿಗೆ ಆಶ್ಚರ್ಯವಾಗುವಂತೆ ಅಹಿಂಸೆಯೇ ಪರಮ ಧರ್ಮವೆಂದು ವೇದವಿರುದ್ಧ ಮಾರ್ಗವನ್ನು ಬೋಧಿಸಿತು. ಅದನ್ನು ಕೇಳಿದ ದುರ್ಜನರೆಲ್ಲರೂ ವೇದಬಾಹಿರರಾದರು.

22 **ಕಲ್ಕಿ :** ಕಲಿ, ಕೃತಯುಗಗಳ ಸಂಧಿಕಾಲದಲ್ಲಿ ಈ ಅವತಾರ. ಕಳ್ಳರಾಗಿದ್ದ ನೀಚ ಅರಸರನ್ನು ಶಿಕ್ಷಿಸಿ ಧರ್ಮಸ್ಥಾಪಿಸಿದ ವಿಷ್ಣುಯಶನೆಂಬ ಬ್ರಾಹ್ಮಣನಲ್ಲೇ ಕಲ್ಕ್ಯವತಾರ.

ಹೀಗೆ ಹರಿಯ ಅವತಾರ ಅನಂತವಾದ್ದರಿಂದ ಹೇಳಿ ಮುಗಿಸಲು ಸಾಧ್ಯವಿಲ್ಲ. ಇವನ್ನು ಪಠಿಸುವವರು ಸಂಸಾರದಿಂದ ಪಾರಾಗಿ ಮುಕ್ತಿ ಹೊಂದುವರು. ಪದ್ಮ ಪುರಾಣವು ಹರಿಗೆ 3 ರೂಪಗಳೆಂದು ಹೇಳಿದೆ. 1 ಸ್ವರೂಪರೂಪ, 2 ಪ್ರತಿಬಿಂಬ, 3 ಪ್ರತಿಮಾ (ಅರೋಪಿತ) ರೂಪ ಅಂದರೆ ಜಡವು ಪ್ರತಿಮಾ ರೂಪವು. ಜೀವರು ಪ್ರತಿಬಿಂಬ ರೂಪರು, 3 ಗುಣಗಳು ಅನಾದಿಯಿಂದ ಜೀವರನ್ನು ಆವರಿಸಿದೆ. ಈ ಆವರಣವಿರುವುದರಿಂದ ಜೀವರು ಪರಮಾತ್ಮನನ್ನು ಉಪಾಸಿಸುತ್ತಿಲ್ಲ. ಸಾಕ್ಷಾತ್ಕಾರ ವಿಲ್ಲದ್ದರಿಂದ ಪದೇ ಪದೇ ಹುಟ್ಟಿ ಸಾಯುತ್ತಿರುವವರು ಈ ಜೀವರೇ ಪರಮಾತ್ಮನ ಪ್ರತಿಬಿಂಬರು. ಅವರು ಯಾವಾಗಲೂ ಹರ್ಯಧೀನರು-ಭಿನ್ನರು, ಧ್ಯಾನದಿಂದ ಅಪರೋಕ್ಷ, ಪ್ರಾರಬ್ಧ ಮುಗಿದು ಹರಿಯ ಅತ್ಯರ್ಥಪ್ರಸಾದವಾದಾಗ ಮುಕ್ತಿ. ಇಲ್ಲೂ ಮುಕ್ತಿಯಲ್ಲೂ ಭೇದ, ತಾರತಮ್ಯವಿದ್ದೇ ಇದೆ.

ಹರಿ ಪರಾಧೀನನಲ್ಲ. ಫಲಾಪೇಕ್ಷೆಯಿಂದ ಕರ್ಮ ಮಾಡುವವನಲ್ಲ. ಆದ್ದರಿಂದ ಅವನು ಅಕರ್ತನು, ಸರ್ವವಿಲಕ್ಷಣ, ಜನನರಹಿತ, ಹೃದಯ ನಿಯಾಮಕ, ಶ್ರೀ ಹರಿಯ ಅವತಾರ ಮತ್ತು ಅದರ ಕಾರ್ಯಗಳನ್ನು ಸ್ಮರಿಸಿ ಜೀವರು ಮುಕ್ತರಾಗ ಲೆಂದೇ ಹರಿಯು ಹೀಗೆ ಮಾಡುವನು. ಹರಿಯ ಯಾವ ಕ್ರೀಡೆಯೂ ವ್ಯರ್ಥವಲ್ಲ. ಆದ್ದರಿಂದ ಸತ್ಯಕಾಮ ನಾಮಕನು. ಜಗತ್ತನ್ನು ಹುಟ್ಟಿಸಿ ರಕ್ಷಿಸಿ, ಸಂಹರಿಸುವ ಹರಿಗೆ ಕರ್ಮಫಲದಲ್ಲಿ ಆಸಕ್ತಿಯೇ ಇಲ್ಲ ಅವನು ಸರ್ವೇಂದ್ರಿಯ ಪ್ರೇರಕ, ಎಲ್ಲರೊಳಗಿದ್ದು ಆನಂದವನ್ನು ಭೋಗಿಸುತ್ತಿರುವನು. ಇಂಥವನು ದುಃಖಿಯಾದ ಜೀವನಾಗುವನೇ ? ಎಂದಿಗೂ ಇಲ್ಲ.

ಹರಿ ಶ್ರೀಶ, ನಾನು ದಾಸನೆಂದು ಉಪಾಸನೆ ಮಾಡುವುದಕ್ಕೆ "ಆತ್ಮಭಾವ" ಎಂದು ಹೆಸರು. ನಾನು ಹೇಳುವ ಕಥೆ ಭಾಗವತ ಪುರಾಣ, ಅಂದರೆ ಭಗವಂತನು ಪುರಾತನ ಎಂದು ತೋರಿಸುವ ಗ್ರಂಥ. ಪರೀಕ್ಷಿದ್ರಾಜರು ಪ್ರಾಯೋಪವೇಶ ವ್ರತ ವನ್ನು ಹಿಡಿದು ಕುಳಿತಿರುವಾಗ ಬಂದ ಶುಕಾಚಾರ್ಯರು ಈ ಪುರಾಣವನ್ನು ಹೇಳಿದರು ಶುಕರ ಮತ್ತು ಬ್ರಾಹ್ಮಣರ ಅನುಗ್ರಹದಿಂದ ನನಗೂ ಆ ಸಭೆಯಲ್ಲಿ ಪ್ರವೇಶ ದೊರೆಯಿತು. ಪರೀಕ್ಷಿದ್ರಾಜರಿಗೆ ಹೇಳುತ್ತಿದ್ದ ಶುಕಾಚಾರ್ಯರಿಂದ ಇದನ್ನು ಅಭ್ಯಾಸ ಮಾಡಿದೆ. ಅದನ್ನೇ ಹೇಳುವೆನು.

ಕೃಷ್ಣನು ಪರಂಧಾಮಕ್ಕೆ ಹೋದ ಮೇಲೆ ಧರ್ಮವು ಭಗವಂತನೇ ಆದ ವೇದವ್ಯಾಸರನ್ನು ಶರಣು ಹೊಂದಿತು. ಸಜ್ಜನರ ಉದ್ಧಾರಕ್ಕಾಗಿ ಅವರು ಭಾಗವತ ವೆಂಬ ಸೂರ್ಯನು ಉದಯವಾಗುವಂತೆ ಮಾಡಿದರು. ಆದ್ದರಿಂದ ಧರ್ಮವನ್ನು ರಕ್ಷಿಸಿದವರು ವೇದವ್ಯಾಸರೇ.

ಮೂರನೆಯ ಅಧ್ಯಾಯ ಮುಗಿಯಿತು.

ಶೌನಕ : ಸೂತ ! ಶುಕರು ಹೇಳಿದ ಭಾಗವತವನ್ನು ಹೇಳು. ವೇದ ವ್ಯಾಸರು ಏಕೆ ಈ ಗ್ರಂಥ ರಚಿಸಿದರು ? ರಚಿಸಿರಿ ಎಂದು ಪ್ರಾರ್ಥಿಸಿದವರಾರು ? ಶುಕರು ವಿರಕ್ತರು. ಮೂಕಬಧಿರರಂತೆ ತೋರುವವರು. ಹಸ್ತಿನಾವತಿ ನಗರವಾಸಿಗಳು ಇವರು ಶುಕರೆಂದು ಹೇಗೆ ಗುರ್ತಿಸಿದರು? ಶುಕರು ಮನೆಯ ಮುಂದೆ ಗೋದೋಹನ ದಕಾಲಮಾತ್ರ ನಿಲ್ಲುವವರು. ಪರೀಕ್ಷಿದ್ರಾಜರಿಗೆ ಭಾಗವತವನ್ನು ಪೂರ್ಣವಾಗಿ ಹೇಳು ವಷ್ಟು ದೀರ್ಘಕಾಲ ಒಂದೆಡೆ ಇದ್ದರೆಂದರೆ ಅಸಂಭಾವಿತ. ಪರೀಕ್ಷಿದ್ರಾಜರ ಜನ್ಮ ಕರ್ಮಗಳನ್ನು ಹೇಳು. ಸರ್ವವನ್ನೂ ತ್ಯಜಿಸಿ ರಾಜರು ಪ್ರಾಯೋಪವೇಶಕ್ಕೆ ಕೂಡಲು ಕಾರಣವೇನು ? ಪರೀಕ್ಷಿತ್ತಿನ ಕಥೆ ಮೊದಲು ಹೇಳು.

ಸೂತ : ದ್ವಾಪರಾಂತ್ಯದಲ್ಲಿ ಅವತರಿಸಿದ ನಾರಾಯಣಾಂಶರಾದ ವೇದ ವ್ಯಾಸರು ಸರ್ವಸಜ್ಜನರಿಗೆ ಹಿತವಾದ ಮಾರ್ಗ ಯಾವುದೆಂದು ಆಲೋಚಿಸಿದವರಂತೆ ನಟಿಸಿದರು. ವೇದವನ್ನು ವಿಭಾಗಿಸಿ 5ನೇ ವೇದ ಭಾರತ ಮುಂತಾದ ಪುರಾಣಗಳನ್ನು ರಚಿಸಿದರು. ಇದರಿಂದ ವೇದಕ್ಕೆ ಅಧಿಕಾರಿಗಳೂ, ಅನಧಿಕಾರಿಗಳೂ ಅಧ್ಯಯನಾದಿ ಗಳಿಂದ ಉದ್ಧೃತರಾಗುವಂತೆ ಮಾಡಿದರು. ಇಷ್ಟು ಮಾಡಿದರೂ ಅವರ ಮನಸ್ಸಿಗೆ ತೃಪ್ತಿಯಾಗಲಿಲ್ಲ. ಇನ್ನೂ ಗ್ರಂಥರಚನೆ ಆವಶ್ಯಕವೆಂದು ಬಗೆದರು. ಅವತಾರದಲ್ಲಿ ಬಿಟ್ಟಿರುವ ಕಾರ್ಯವೇನು ? ಇದೆಲ್ಲ ನಟನೆ. ನಾರದರ ಪ್ರಾರ್ಥನೆಯಂತೆ ಭಾಗವತ ರಚಿಸಿ ಅವರಿಗೆ ಕೀರ್ತಿ ಕೊಡಬೇಕೆಂದು ಬಗೆದು ಈ ನಾಟಕವಾಡುತ್ತಿದ್ದರು. ನಾರದರು ಬಂದು ಪ್ರಾರ್ಥಿಸಿದ್ದರಿಂದ ಭಾಗವತವನ್ನು ವೇದವ್ಯಾಸರು ರಚಿಸಿದರು.

ನಾಲ್ಕನೆಯ ಅಧ್ಯಾಯ ಮುಗಿಯಿತು.

ನಾರದ ; ಜ್ಞಾನಕಾರ್ಯ ಸಂಪೂರ್ಣವಾಗಿ ಮಾಡಿರುವಿರಿ. ಹಾಗಿದ್ದರೂ ಪೂರ್ಣವಾಗಿಲ್ಲವೆನ್ನುವ ಹಾಗೆ ಜಗತ್ತಿಗೆ ನಿಮ್ಮನ್ನು ತೋರಿಸಿಕೊಳ್ಳುತ್ತಿರುವಿರಿ.

ವೇದವ್ಯಾಸರು , ತೃಪ್ತಿ ಬಂದಿಲ್ಲ. ಕಾರಣವೇನು ? ನೀವೇ ಹೇಳಿ. ನೀವು ಎಷ್ಟೇ ಆಗಲಿ ಬ್ರಹ್ಮದೇವರ ಪ್ರಿಯ ಪುತ್ರರಲ್ಲವೆ ? ಶ್ರೀ ಹರಿಯನ್ನು ಅಪರೋಕ್ಷೀ ಕರಿಸಿಕೊಂಡಿರುವಿರಿ. ಹರ್ಯನುಗ್ರಹಕ್ಕೆ ಪಾತ್ರರು. ನಿಮಗೆ ತಿಳಿಯದ ವಿಷಯವೇ ಇಲ್ಲ. ನನಗೆ ತೃಪ್ತಿಯಾಗಬೇಕಾದರೆ ಏನು ಮಾಡಬೇಕೆಂಬುದನ್ನು ತಿಳಿಸಿರಿ.

ನಾರದ : (ವ್ಯಾಸರ ಮೋಹಕದ ಮಾತಿಗೆ ಅವರಂತೆಯೇ ಉತ್ತರ ಕೊಡುತ್ತಾರೆ) ಶ್ರೀ ಹರಿಯ ಮಹಿಮೆಯನ್ನು ಭಾರತಾದಿ ಶಾಸ್ತ್ರಗಳಲ್ಲಿ ವರ್ಣಿಸಿರು ವಿರಿ. ಆದರೆ ಭಾರತದಲ್ಲಿ ಸಮಾಧಿ, ದರ್ಶನ, ಗುಹ್ಯವೆಂಬ ಮೂರು ಭಾಷೆಗಳನ್ನು ಉಪಯೋಗಿಸಿರುವಿರಿ. ಅದನ್ನು ತಿಳಿಯುವುದು ಅಲ್ಪ ಪ್ರಜ್ಞರಾದ ಅಧಿಕಾರಿಗಳಿಗೆ

ಸಾಧ್ಯವಿಲ್ಲ. ಅವರ ಪಾಲಿಗೆ ಶ್ರೀಹರಿಯ ಯಶಸ್ಸು ಅಲ್ಲಿ ವರ್ಣಿತವಾಗಿಲ್ಲವೆಂದೇ ಹೇಳಬಹುದಾಗಿದೆ. ಮಂದಾಧಿಕಾರಿಗಳಿಗೂ ಸ್ಪಷ್ಟವಾಗಿ ಅರ್ಥವಾಗುವಂತೆ ಶ್ರೀಹರಿಯ ಯಶಸ್ಸನ್ನು ತಿಳಿಸುವ ಶಾಸ್ತ್ರವೊಂದನ್ನು ರಚಿಸಿರಿ. ಐಹಿಕಜೀವನಕ್ಕೆ ಮಾತ್ರ ಉಪಯುಕ್ತವಾದ ಶಾಸ್ತ್ರಗಳಿಂದ ಎಂದಿಗೂ ಮೋಕ್ಷವನ್ನು ಹೊಂದ ಲಾಗುವುದೇ ಇಲ್ಲ. ಸನಕಾದಿ ಪರಮಹಂಸರು ಅಂತಹ ಶಾಸ್ತ್ರವನ್ನು ಕಣ್ಣೆತ್ತಿಯೂ ನೋಡುವುದಿಲ್ಲ. ಮಾನಸ ಸರೋವರದಲ್ಲಿ ವಿಹರಿಸುವ ಹಂಸಗಳು ಕಾಗೆಯೆಂಜಲೆನಿ ಸುವ ನೀರಿನಲ್ಲಿ ಮುಳುಗುವುದಿಲ್ಲವಷ್ಟೆ ? ಆದ್ದರಿಂದ ಮುಕ್ತಿಗಲ್ಲದ ವಿಷಯವನ್ನು ಎಷ್ಟು ಅಲ್ಪವಾಗಿ ಹೇಳಿದರೂ ಸಾಕು. ಪರಮಾತ್ಮನ ಮಹಿಮೋಪೇತವಾದ ಗ್ರಂಥ ಗಳನ್ನು ಮಾತ್ರ ಶುಕಾದಿಗಳು ಹೇಳುವರು. ಜ್ಞಾನಿಗಳು ಕೇಳುವರು. ಭಗವನ್ಮಹಿಮೆ ಸಜ್ಜನರಿಗೆ ಮೋಕ್ಷ ಕೊಡುವುದು. ಅಂತಹ ಗ್ರಂಥದಲ್ಲಿ ಅಪಶಬ್ದ ಗಳಿರಬಹುದು. ವ್ಯಾಕರಣವಿಲ್ಲದಿರಬಹುದು. ಶಬ್ದಾಲಂಕಾರ, ಅರ್ಥಾಲಂಕಾರ ಗಳಿಲ್ಲದಿರಬಹುದು. ಆದರೂ ಕಾಲ, ದೇಶ, ಗುಣಗಳಿಂದ ಪೂರ್ಣನಾದ ಹರಿಯ ಯಶಸ್ಸನ್ನು ತಿಳಿಸುವ ಗ್ರಂಥವೇ ಶ್ರೇಷ್ಠಗ್ರಂಥ.

ಹರಿಕಥಾಮೃತಸಾರದಲ್ಲಿ ಶ್ರೀ ಜಗನ್ನಾಥ ದಾಸರು ಇದನ್ನೇ ಹೇಳುವರು :—

**ಪತಿತನ ಕಪಾಲದಲಿ ಭಾಗೀ**
**ರಥಿಯ ಜಲವಿರೆ ಹೇಯವೆನಿಪುದೆ**
**ಇತರ ಕವಿ ನಿರ್ಮಿತ ಕುಕಾವ್ಯಾಶ್ರಾವ್ಯ ಬುಧರಿಂದ ||**
**ಕೃತಿಪತಿ ಕಥಾನ್ವಿತವೆನಿಪ ಪ್ರಾ**
**ಕೃತವೆ ತಾ ಸಂಸ್ಕೃತವೆನಿಸಿ ಸ**
**ದ್ಗತಿಯನೀವುದು ಭಕ್ತಿಪೂರ್ವಕ ಕೇಳಿಪೇಳ್ವರಿಗೆ || ೩೭, ಸಂ ೧೭.**

ಹರಿಯ ಮಹಿಮಾಜ್ಞಾನವೂ, ನಿಷ್ಕಾಮಕರ್ಮವೂ ಹರಿಭಕ್ತಿರಹಿತವಾದರೆ ಮುಕ್ತಿಪ್ರದವಲ್ಲ. ಅಂದಬಳಿಕ ಅಮಂಗಳ ಕಾಮ್ಯಕರ್ಮವು ಮುಕ್ತಿ ಪ್ರದವಲ್ಲವೆಂದು ಹೇಳಬೇಕೇನು ?

ಶ್ರೀವ್ಯಾಸರಾಯರು ಹೇಳುತ್ತಾರೆ :— ಮೋಹನರಾಗ ಅಟತಾಳ

**ಅಮರೇಶಕೃಷ್ಣಗರ್ಪಿತವಲ್ಲದ ಕರ್ಮ ಅಸತಿಯ ವ್ರತ ನೇಮವು |**
**ರಮೆಯರಸಗೆ ಪ್ರೀತಿಯಿಲ್ಲದ ವಿತರಣೆ (ದಾನ) ರಂಡೆ ಕೊರಳ ಸೂತ್ರವು |**
**ಕಮಲನಾಭನ ಪಾಡಿ ಪೊಗಳದ ಸಂಗೀತ ಗಾರ್ದಭರೋದನವು**
**ಮಮತೆಯಿಂದಲಿ ಕೇಶವಗೆ ನಮಸ್ಕಾರ ಮಾಡದವನೆ ಮೃಗವು—ಎಂದೆಂದಿಗು**
**|| ೨ ||**

ಆದ್ದರಿಂದ ಹರಿಸ್ವರೂಪರೂ, ಆಪ್ತರೂ ಆದ ತಾವು ಸಜ್ಜನರ ಸಂಸಾರ

ನಾಶಕ್ಕಾಗಿ ಶ್ರೀಹರಿಯ ಜಗತ್ಸೃಷ್ಟ್ಯಾದಿ ವ್ಯಾಪಾರಗಳನ್ನು ಯಥಾಸ್ಥಿತವಾಗಿ ವರ್ಣಿಸುವ ಸಮಾಧಿ ಭಾಷೆಯಿಂದ ಭಗವನ್ಮಹಿಮಾ ಪ್ರತಿಪಾದಕ ಶ್ರೀಮದ್ಭಾಗವತ ವನ್ನು ರಚಿಸೋಣವಾಗಲಿ. ಇದರಿಂದ ತಮ್ಮ ಅವತಾರಕಾರ್ಯ ಪೂರ್ಣವಾಗುತ್ತದೆ.

ಶ್ರೀಹರಿಯ ಗುಣಗಣವರ್ಣನೆ ಎಂಬ ಕಥೆಯನ್ನು ಕೇಳುವುದರಿಂದ ಮೋಕ್ಷಕ್ಕೆ ಮಾರ್ಗ. ಅದಕ್ಕೆ ನಾನೇ ಸಾಕ್ಷಿ.

## ನಾರದರ ವೃತ್ತಾಂತ

ಹಿಂದಿನ ಬ್ರಹ್ಮಕಲ್ಪದ ಕೊನೆಯಲ್ಲಿ ನಾರದನಾದ ನಾನು ದಾಸಿಯ ಮಗ ನಾಗಿದ್ದೆ. ನನ್ನ ತಾಯಿ ಹರಿಭಕ್ತಳು. ಅವಳು ಬ್ರಾಹ್ಮಣರ ಮನೆಯಲ್ಲಿ ದಾಸಿ ಯಾಗಿದ್ದಳು. ನಾವಿದ್ದ ಊರಿಗೆ ಬ್ರಹ್ಮಜ್ಞಾನಿಗಳಾದ ಸಂನ್ಯಾಸಿಗಳು ಬಂದು ಚಾತುರ್ಮಾಸ್ಯ ಸಂಕಲ್ಪಮಾಡಿ ಕುಳಿತರು. ನಾನು ಅವರ ಸೇವೆಗೆ ನಿಯಮಿ ಸಲ್ಪಟ್ಟೆನು. ನನಗೆ ಹುಡುಗುತನಕ್ಕೆ ಸಹಜವಾದ ಚಾಪಲ್ಯಾದಿ ದೋಷಗಳಿರಲಿಲ್ಲ. ಜಿಹ್ವಾಚಾಪಲ್ಯವೂ ಇರಲಿಲ್ಲ. ಮಿತ ಭಾಷ್ಯಿ. ಸದಾ ಸಂನ್ಯಾಸಿಗಳ ಸೇವೆಯಲ್ಲಿಯೇ ನಿರತನಾಗಿದ್ದೆ. ಆಯತಿಗಳು ಸರ್ವವೂ ಶ್ರೀಹರಿಯ ಅಧೀನವೆಂದು ತಿಳಿದವರಾಗಿ ತಾಳ್ಮೆಯುಳ್ಳವರಾಗಿದ್ದರು. ಅವರು ನನಗೆ ಅನುಗ್ರಹಮಾಡಿದರು. ಅದೇ ನನ್ನ ಮೇಲೆ ಅವರು ತೋರಿದದಯೆ. ಅವರು ಉಂಡ ಮೇಲೆ ಪಾತ್ರೆಗಳನ್ನು ತೊಳೆಯು ಯುವುದು, ಆ ಸ್ಥಳವನ್ನು ಗೋಮಯದಿಂದ ಸಾರಿಸುವುದು, ಉಳಿದಿದ್ದ ಅನ್ನವನ್ನು ತಿನ್ನುವುದು ಇದಕ್ಕೆ ಅವರು ಅನುಮತಿ ಕೊಟ್ಟರು. ನಾನು ಆ ಜ್ಞಾನಿಗಳುಂಡು ಉಳಿದ ಅನ್ನವನ್ನು ಒಪ್ಪತ್ತು ಮಾತ್ರ ತಿಂದೆನು. ಅದರಿಂದ ನನ್ನ ಪಾಪಗಳೆಲ್ಲ ಹೋಗಿ ಮನಸ್ಸು ನಿರ್ಮಲವಾಗಿ, ಯತಿಗಳ ಧರ್ಮವಾದ ವೈರಾಗ್ಯವು ಬಂದು ಹರಿಕಥಾಶ್ರವಣ ದಲ್ಲಿ ನನಗೆ ಆಸಕ್ತಿ ಹುಟ್ಟಿತು. ಅವರು ದಿನವೂ ಭಜನೆ ಮಾಡುತ್ತ ಹರಿಯ ಕಥೆ ಯನ್ನು ಹೇಳುತ್ತಿದ್ದರು. ಅದನ್ನು ಕೇಳಲು ನನಗೆ ಅಪ್ಪಣೆ ಕೊಟ್ಟರು ಅದರಿಂದ ಹರಿಯ ಧ್ಯಾನವೆಂಬ ಉಪಾಸನೆ ಆರಂಭವಾಯಿತು. ಭಕ್ತಿ ಉಂಟಾಗಿ ವೈರಾಗ್ಯ ಬಂದಿತು. ಯತಿಗಳು ವ್ರತವನ್ನು ಮುಗಿಸಿ ಹೊರಡುವಾಗ ನನ್ನ ಕರೆದು ಅನುಗ್ರಹ ಪೂರ್ವಕವಾಗಿ ಹರಿಯ ಮಹಿಮೆಯನ್ನು ಉಪದೇಶಿಸಿದರು. ಒಳಿಕ ನನ್ನ ವರ್ಣಕ್ಕೆ ನುಸಾರವಾಗಿ ನಿಷ್ಕಾಮದಿಂದ ಧರ್ಮವನ್ನು ಆಚರಿಸುತ್ತಿದ್ದೆ. "ಹರಿಯೇ ಸರ್ವೋತ್ತಮನು, ಸ್ವತಂತ್ರನು, ಸರ್ವನಿಯಾಮಕನು" ಎಂಬ ಜ್ಞಾನವು ಖಚಿತ ವಾಯಿತು. ಹೀಗಿರುವುದರಿಂದ ಜ್ಞಾನ-ಭಕ್ತಿಯನ್ನುಂಟು ಮಾಡುವ ಶ್ರೀಮದ್ಭಾಗ ವತನ್ನು ತಾವು ರಚಿಸೋಣವಾಗಲಿ.

### ಐದನೆಯ ಅಧ್ಯಾಯ ಮುಗಿದುದು

**ವ್ಯಾಸರು ;** ನಾರದರೇ ! ನಿಮ್ಮ ಆ ಜನ್ಮದ ಮುಂದಿನ ವೃತ್ತಾಂತವನ್ನು ಹೇಳಿ,

**ನಾರದರು :** ಐದು ವರ್ಷದ ವಯಸ್ಸಿನ ಬಾಲಕನಾದ ನಾನು ತಾಯಿಯ ಜೊತೆಯಲ್ಲಿಯೇ ಇದ್ದೆ.

ಒಂದು ದಿನ ರಾತ್ರಿ ನನ್ನ ತಾಯಿಯು ಹಾಲನ್ನು ಕರೆಯಲು ಕತ್ತಲಲ್ಲಿ ಹೊರಟಳು. ಹಾದಿಯಲ್ಲಿದ್ದ ಹಾವಿನ ಮೇಲೆ ಕಾಣದೆ ಕಾಲಿಟ್ಟಳು. ಅದು ಕಚ್ಚಿ ತಾಯಿ ಸತ್ತಳು. ಅವಳ ಅಂತ್ಯಕ್ರಿಯೆ ಮಾಡಿ ಮುಗಿಸಿದೆ. ಸಂಸಾರದಲ್ಲಿ ನನಗೆ ಯಾವ ಬಂಧನವೂ ಇರಲಿಲ್ಲ ಉತ್ತರದಿಕ್ಕನ್ನು ಕುರಿತು ಒಬ್ಬನೇ ಹೊರಟೆನು. ಅನೇಕ ಬಗೆಯ ಸ್ಥಳಗಳನ್ನು ದಾಟಿ ಒಂದು ಗೊಂಡಾರಣ್ಯಕ್ಕೆ ಹೋದೆ. ಒಳಲಿದ್ದ ನಾನು ಅಲ್ಲಿದ್ದ ಮಡುವಿನ ನೀರಿನಲ್ಲಿ ಮುಳುಗಿ ಸ್ನಾನ ಮಾಡಿ ತೃಪ್ತಿಯಾಗುವಂತೆ ನೀರನ್ನು ಕುಡಿದು ಒಂದು ಅರಳಿಗಿಡದ ಕೆಳಗೆ ಧ್ಯಾನ ಮಾಡಲು ಕುಳಿತೆ ಯತಿಗಳ ಉಪದೇಶದಂತೆ ನನ್ನ ಬಿಂಬರೂಪಿ ಹರಿಯನ್ನು ಧ್ಯಾನಿಸಲಾರಂಭಿಸಿದೆನು. ಒಮ್ಮೆ ಹೃದಯದಲ್ಲಿ ಶ್ರೀ ಹರಿಯು ವ್ಯಕ್ತನಾದನು. ಅವನ ರೂಪವನ್ನು ನೋಡುತ್ತ ಸುಖವನ್ನು ಹೊಂದಿದೆನು. ಆದರೇನು ? ವ್ಯಕ್ತವಾಗಿದ್ದ ಆ ಭಗವದ್ರೂಪವು ಕ್ಷಣ ಮಾತ್ರದಲ್ಲಿ ಕಣ್ಮರೆಯಾಯಿತು. ಆಗ ಬಹು ದುಃಖವಾಯಿತು. ಬಹಿರ್ಮುಖನಾದೆನು.' ತಿರುಗಿ ಏಕಾಗ್ರ ಮನಸ್ಸಿನಿಂದ ಧ್ಯಾನಿಸಿದೆ ದರ್ಶನವಾಗಲೇ ಇಲ್ಲ. ಬಹಿರ್ಮುಖನಾಗಿ ಅತ್ತು ಹೊರಳಾಡಿದೆ. ಆಗ ಶ್ರೀ ಹರಿಯು ಅದೃಶ್ಯನಾಗಿಯೇ ಹೀಗೆ ಅಪ್ಪಣೆ ಕೊಡಿಸಿದ

**ಹರಿ –:** ಕಂದ ! ಪಾಪದ ಫಲವನ್ನು ಅನುಭವಿಸಿ ಅದನ್ನು ಕಳೆದುಕೊಂಡು ತಮ್ಮ ಸಾಧನವನ್ನು ಮುಂದುವರಿಸುವರು. ಅಂತಹ ಯೋಗಿಗಳು ಮಾತ್ರ ನನ್ನನ್ನು ಸುಲಭವಾಗಿ ಕಾಣುವರು. ನೀನು ನಿನ್ನ ಈ ಹುಟ್ಟಿನಲ್ಲಿ ಪುನಃ ನನ್ನನ್ನು ನೋಡಲಾರೆ. ನನ್ನ ದರ್ಶನ ಮಾಡಲು ಕುತೂಹಲವುಂಟು ಮಾಡಬೇಕೆಂದು ನನ್ನ ರೂಪವನ್ನು ನಿನಗೆ ತೋರಿಸಿದೆ. ಯಾರು ನನ್ನೀರೂಪವನ್ನು ನೋಡಲು ಹಂಬಲಿಸುವವನೇ ನನ್ನ ಭಕ್ತನು.

ಮೋಹನರಾಗ ಅಟತಾಳ

**ಅಂತರಂಗದಲ್ಲಿ ಹರಿಯ ಕಾಣದವನೆ ಹುಟ್ಟು ಕುರುಡ ಕಾಣೋ ॥ಪ॥**
**ಸಂತತ ಶ್ರೀ ಕೃಷ್ಣ ಚರಿತೆಯ ಕೇಳದವನೆ ಜಡಮತಿ ಕಿವುಡ ಕಾಣೊ**
**ಎಂದೆಂದಿಗೂ ॥ಅ॥**

ನೀನು ಈ ದೇಹವನ್ನು ಬಿಡು. ಮುಂದೆ ಬ್ರಹ್ಮದೇವರ ಮಗನಾಗಿ ಹುಟ್ಟುವೆ. ಆಗ ಪರಮಭಾಗವತನಾಗಿ ನನ್ನ ಅನುಗ್ರಹಕ್ಕೆ ಪಾತ್ರನಾಗುವೆ. ನಿನಗೆ ಮುಂದೆ ಈ ಜಾತಿ ಸ್ಮರಣೆ ಹೋಗುವುದಿಲ್ಲ.

ಶ್ರೀ ಹರಿಯು ನಿರ್ವ್ಯಾಜವಾಗಿ ಮಾಡಿದ ಈ ಉಪಕಾರಕ್ಕೆ ಪ್ರತಿಯಾಗಿ ನಾನೇನ ಮಾಡಬಲ್ಲೇ ? ನಮಸ್ಕಾರ ಮಾಡಿದೆ. ಮುಂದೆ ಮರಣ ಕಾಲ ಬಂತು. ಅದು ಕಲ್ಪದ ಕೊನೆ. ಬ್ರಹ್ಮದೇವರ ದೇಹದೊಳಗೆ ಪ್ರವೇಶಿಸಿದೆ. ಕಲ್ಪ ಪ್ರಳಯ ಕಳೆಯಿತು. ಬ್ರಹ್ಮದೇವರು ಹರಿಯ ಉದರದಿಂದ ಈಚೆಗೆ ಬಂದು ಹರಿಯಾಜ್ಞೆಯಂತೆ ಜಗತ್ತನ್ನು ಸೃಷ್ಟಿಸಲಾರಂಭಿಸಿದರು. ಆಗ ನಾನು ಅವರ ತೊಡೆಯಿಂದ ಹುಟ್ಟಿ ಬಂದೆ. ಬ್ರಹ್ಮಚಾರಿಯಾಗಿಯೇ ಉಳಿದಿರುವೆನು. ಮೂರು ಲೋಕದ ಒಳಗೂ ಹೊರಗೂ ಸಂಚರಿಸುತ್ತಿರುವೆನು. ನನ್ನ ಸಂಚಾರಕ್ಕೆ ಎಲ್ಲೂ ತಡೆಯೇ ಇಲ್ಲ. ದೇವರೇ ಈ ವೀಣೆಯನ್ನು ಕೊಟ್ಟಿರುವುದರಿಂದ ಇದಕ್ಕೆ ದೇವದತ್ತವೆಂದು ಹೆಸರು ಇದನ್ನು ನುಡಿಸುತ್ತ ಹೋದ ಕಡೆ ಹರಿಕಥೆಯನ್ನು ಮಾಡುವೆನು. ತಾವು ಭಾಗವತವನ್ನು ರಚಿಸಿದರೆ ಸಜ್ಜನರಿರುವ ಸ್ಥಳಗಳಿಗೆ ಹೋಗಿ ಅದನ್ನೇ ಹೇಳುತ್ತಿರುವೆನು. ಆದ್ದರಿಂದ ತಾವು ದಯೆಮಾಡಿ ಭಾಗವತಗ್ರಂಥವನ್ನು ರಚಿಸಿರಿ.

**ಆರನೆಯ ಅಧ್ಯಾಯ ಮುಗಿದುದು**

ಯಜ್ಞಕ್ಕೆ ಉಪಯೋಗಿಯಾದ ಮರದ ಕೊಂಬೆಯ ತುಂಡು ಬಿದ್ದ ಸ್ಥಳವು ಯಜ್ಞಕ್ಕೆ ಪರಮಪವಿತ್ರವೆಂದು ಉಕ್ತವಾಗಿದೆ. ಬದರಿಯಲ್ಲಿ ಇಂಥ ಸ್ಥಳವಿದೆ. ಅದಕ್ಕೆ ಶಮ್ಯಾಪ್ರಾಸವೆಂದು ಹೆಸರು. ವೇದವ್ಯಾಸರು ಈ ಶ್ರಮ್ಯಾಪ್ರಾಸ ಆಶ್ರಮ ದಲ್ಲಿ ಕುಳಿತು ಭಕ್ತಿಯೋಗವನ್ನು ಹುಟ್ಟಿಸುವ ಭಾಗವತಸಂಹಿತೆಯನ್ನು ರಚಿಸಿ ಶುಕಾ ಚಾರ್ಯರಿಗೆ ಅಭ್ಯಾಸ ಮಾಡಿಸಿದರು. ಶುಕರು ಅದನ್ನು ಪ್ರತಿನಿತ್ಯವೂ ಅಭ್ಯಾಸ ಮಾಡಿದ್ದಲ್ಲದೆ ಇತರ ಭಕ್ತರಿಗೂ ಅಭ್ಯಾಸಮಾಡಿಸಿದರು. **ಶ್ರೀಮದ್ಭಾಗವತವು ವಿಷ್ಣುಭಕ್ತರಿಗೆ ಪ್ರಿಯವಾದ ಶಾಸ್ತ್ರ.**

**ಸೂತ :** ಇನ್ನು ಪರೀಕ್ಷಿತನ ಶಕ್ತಿ ಮುಂತಾದುವನ್ನು ತಿಳಿಯೋಣ. ಭೀಮನ ಗದೆಯಿಂದ ದುರ್ಯೋಧನನ ತೊಡೆ ನುಚ್ಚುನೂರಾಗಿ ಅವನು ಕೆಳಗೆ ಬಿದ್ದ. ಅಶ್ವತ್ಥಾಮನು ದುರ್ಯೋಧನನಿಗೆ ಪ್ರಿಯವನ್ನುಂಟುಮಾಡಬೇಕೆಂದು ರಾತ್ರಿ ಶಿಬಿರದಲ್ಲಿ ನಿದ್ರಿಸುತ್ತಿದ್ದ ದ್ರೌಪದಿಯ ಐದು ಮಂದಿ ಮಕ್ಕಳನ್ನು ಕೊಂದು ಬಿಟ್ಟನು. ಇದನ್ನು ಕೇಳಿ ದ್ರೌಪದಿಯು ದುಃಖಪಟ್ಟಳು. ಅವಳನ್ನು ಅರ್ಜುನನು ಸಮಾಧಾನ ಮಾಡಿ, ಅಶ್ವತ್ಥಾಮನ ಬೆನ್ನು ಹತ್ತಿದನು. ಅವನು ಬದುಕಬೇಕೆಂದು ಬ್ರಹ್ಮಾಸ್ತ್ರ ವನ್ನು ಪ್ರಯೋಗಿಸಿಬಿಟ್ಟನು. ಅದು ಜಗತ್ತನ್ನು ಸುಡುತ್ತ ಬರುದುದನ್ನು ಕಂಡು ಅರ್ಜುನನು ಶ್ರೀಕೃಷ್ಣನ ಸಲಹೆಯಂತೆ ಪ್ರತಿಯಾಗಿ ಬ್ರಹ್ಮಾಸ್ತ್ರವನ್ನೇ ಬಿಟ್ಟನು. ಈ ಎರಡು ಅಸ್ತ್ರಗಳಿಂದ ಲೋಕಗಳು ನಾಶವಾಗಲು ಆರಂಭಿಸಿದುದನ್ನು ಕಂಡ ಶ್ರೀಕೃಷ್ಣನ ಅಪ್ಪಣೆಯಂತೆ ಅರ್ಜುನನು ಎರಡು ಅಸ್ತ್ರಗಳನ್ನೂ ಉಪಸಂಹಾರ ಮಾಡಿದನು. ಮತ್ತು ಅಶ್ವತ್ಥಾಮನನ್ನು ಪಶುವನ್ನು ಕಟ್ಟುವಂತೆ ಕಟ್ಟಿ ಶಿಬಿರಕ್ಕೆ ಒಯ್ದನು. ಎಲ್ಲರ

ಇದಿರಿಗೆ ಶ್ರೀ ಕೃಷ್ಣನು ಅರ್ಜುನನಿಗೆ ಮಲಗಿದ್ದ ಮಕ್ಕಳನ್ನು ಕೊಂದುದರಿಂದ ಅಶ್ವತ್ಥಾಮನನ್ನು ಕೊಲ್ಲೆಂದು ಹೇಳಿದನು.

**ದ್ರೌಪದಿ** , ಇವನು ಗುರುಪುತ್ರ. ಕೊಲ್ಲಬಾರದು. ಇವನ ತಾಯಿ ನನ್ನಂತೆ ಪುತ್ರ ದುಃಖಿಯಾಗಬಾರದು. ಬ್ರಹ್ಮಹತ್ಯೆ ಕುಲಕ್ಕೇ ಕಳಂಕ. ಬಿಡಿಬಿಡಿ

ಇದನ್ನು ಕೇಳಿ ಧರ್ಮರಾಜನೇ ಮೊದಲಾದವರು ದ್ರೌಪದಿಯನ್ನು ಹೊಗಳಿದರು. ಭೀಮಸೇನನು "ಇವನು ಪುತ್ರಘಾತಿಯಾದ್ದರಿಂದ ಇವನನ್ನು ಕೊಲ್ಲುವುದೇ ಯೋಗ್ಯವೆಂದನು.

**ಕೃಷ್ಣ** : ಅರ್ಜುನ ! ಬ್ರಾಹ್ಮಣನನ್ನು ಕೊಲ್ಲಬಾರದು. ಆತ ತಾಯಿಯನ್ನು ಕೊಲ್ಲದೆ ಬಿಡಬಾರದು. ಈ ಎರಡನ್ನೂ ನಾನು ಹೇಳಿರುವೆನು ನನ್ನ ಮಾತನ್ನೂ ಪಾಲಿಸು. ನಿನ್ನ ಪ್ರತಿಜ್ಞೆಯನ್ನೂ ನಡೆಸು. ದ್ರೌಪದೀಭೀಮಸೇನರಿಗೆ ಪ್ರಿಯವಾಗು ವಂತೆ ಮಾಡು.

ಅರ್ಜುನನು ಅಶ್ವತ್ಥಾಮನ ಶಿರಸ್ಸಿನಲ್ಲಿ ಸಹಜವಾಗಿದ್ದ ಮಣಿಯನ್ನು ಕಿತ್ತು ತೆಗೆದು ಶಿಬಿರದಿಂದ ಹೊರದೂಡಿದನು.

ಇಲ್ಲಿ ಗಮನಿಸಬೇಕಾದುದು :– ಭಾಗವತದಲ್ಲಿ ಹೇಳಿದುದು ಅಶ್ವತ್ಥಾಮನಿಗೆ ಸ್ವಪ್ನದಲ್ಲಿ ಕಂಡ ರೀತಿಯದು. ಭೀಮಸೇನನೇ ಅಶ್ವತ್ಥಾಮನನ್ನು ಹಿಡಿದುತಂದು ತಲೆಯಲ್ಲಿದ್ದ ರತ್ನವನ್ನು ಎಬ್ಬಿದನು. ಇದು ಭಾರತದಲ್ಲಿ ಬರುವ ಕಥೆ. ಭಾಗವತ ದಲ್ಲಿನ ಈ ಕಥೆ ಸ್ವಪ್ನವೃತ್ತಾಂತವೆಂದು ಸ್ಕಾಂದಪುರಾಣವು ಹೇಳುತ್ತಿದೆ. ಈ ತಾತ್ಪ ರ್ಯದ ಮಾತನ್ನು ಮನನಮಾಡಬೇಕು.

## ಏಳನೆಯ ಅಧ್ಯಾಯ ಮುಗಿದುದು

ಕುರುಕ್ಷೇತ್ರದ ಯುದ್ಧದಲ್ಲಿ ಮೃತರಾದವರ ದೇಹವನ್ನು ಪಾಂಡವರು ಸುಟ್ಟರು. ಶ್ರೀಕೃಷ್ಣನು ಮಾತು ಕೊಟ್ಟಂತೆ ಮೃತಪತಿಗಳಾದ ದುರ್ಯೋಧನಾದಿಗಳ ಹೆಂಡಂದಿರು ಮೃತಪತಿಗಳ ದೇಹವನ್ನು ಅಪ್ಪಿರೋದಿಸಿದುದನ್ನು ದ್ರೌಪದಿಗೆ ತೋರಿ ಸಿದನು, ರಾಜ್ಯವನ್ನು ಒಲ್ಲೆನೆಂದ ಧರ್ಮರಾಜನಿಗೆ ಶ್ರೀಕೃಷ್ಣನು ಸಮಾಧಾನ ಮಾಡಿ ಪಟ್ಟಗಟ್ಟಿದನು. ಪಾಂಡವರ ಕೈಲಿ ಒಬ್ಬೊಬ್ಬನೂ ಮೂರು ಮೂರು ಅಶ್ವಮೇಧಗಳನ್ನು ಮಾಡಿಸಿ ಆವರ ಕೀರ್ತಿಯನ್ನು ಹರಡಿದನು. ಬಳಿಕ ದ್ವಾರಕಿಗೆ ಹೊರಟ ಸಮಯದಲ್ಲಿ ಉತ್ತರೆಯು ಓಡಿ ಬಂದು "ಕೃಷ್ಣ ! ಕಾಪಾಡು ! ಕಾಪಾಡು! ಅಶ್ವತ್ಥಾಮ ಬಿಟ್ಟ ಬ್ರಹ್ಮಾಸ್ತ್ರವು ಕಾದ ಕಬ್ಬಿಣದ ಕಂಬಿಯಂತೆ ನನ್ನನ್ನು ಸುಡಲು ಬರುತ್ತಿದೆ. ನಾನು ಸತ್ತರೂ ಚಿಂತಿಲ್ಲ. ಗರ್ಭದಲ್ಲಿರುವ ಮಗುನಿಗೆ ಅಪಾಯ ವಾಗಬಾರದು" ಎಂದು ಮೊರೆಯಿಟ್ಟಳು. ಪಾಂಡವರ ವಂಶವನ್ನೇ ನಾಶ ಮಾಡ ಬೇಕೆಂದು ಅಶ್ವತ್ಥಾಮನು ಬ್ರಹ್ಮಾಸ್ತ್ರವನ್ನು ಬಿಟ್ಟಿರುವನು–ಎಂದು ಶ್ರೀಕೃಷ್ಣನು ತಿಳಿದು ಪಾಂಡವರೈವರ ಮೇಲೆ ಬಂದೆರಗಿದ ಬ್ರಹ್ಮಾಸ್ತ್ರವನ್ನು ಸುದರ್ಶನಾಸ್ತ್ರದಿಂದ

ತಡೆದು ರಕ್ಷಿಸಿದನು. ಮತ್ತು ಉತ್ತರೆಯ ಗರ್ಭವನ್ನು ಹೊಕ್ಕು ಆ-ಮಗುವನ್ನು ರಕ್ಷಿಸಿದನು. ಬಳಿಕ ದ್ವಾರಕಿಗೆ ಹೊರಟ ಶ್ರೀಕೃಷ್ಣನನ್ನು ಕುರಿತು ಕುಂತಿಯು ಹೀಗೆನ್ನುವಳು. "ನಿನ್ನ ದರ್ಶನ ಮಾಡಿಸತಕ್ಕ ವಿಪತ್ತು ಸದಾ ಬರುತ್ತಿರಲಿ. ಅದು ಬಂದರೆ ನಿನ್ನ ಸ್ಮರಣೆಯು ಬರುತ್ತದೆ. ಅದರಿಂದ ನಿನ್ನದರ್ಶನವಾಗುತ್ತದೆ. ಅದರಿಂದ ಮುಕ್ತಿಯಾಗುವುದು. ಆದ್ದರಿಂದ ಶ್ರೀಕೃಷ್ಣ !

ನಾದ ನಾಮ ಕ್ರಿಯೆರಾಗ ಅಟತಾಳ

**ಇಂಥಿಂಥಾದ್ದೆಲ್ಲನು ಬರಲಿ – ನಿಶ್ಚಿಂತೆಂಬುದು ದೃಢವಾಗಿರಲಿ || ಪ ||**
**ಬಡತನವೆಂಬುದು ಕಡೆತನಕಿರಲಿ | ಒಡನೆ ವಸ್ತ್ರಗಳು ಹಾಳಾಗ್ಹೋಗಲಿ ||**
**ನಡೆಯುವ ಹಾದಿ ಹಿಡಿಯದೆ ಹೋಗಲಿ | ಅಡವಿಲಿ ಗಿಡಗಳು ಸಿಗದ ಹಾಗಾಗಲಿ ೧**
**ವಾಸಿ ಪಂಥಗಳು ನಡೆಯದೆ ಹೋಗಲಿ | ಹಾಸ್ಯ ಮಾಡಿ ಜನರೆಲ್ಲರು ನಗಲಿ ||**
**ಶ್ರೀಶಪುರಂದರ ವಿಟ್ಠಲರಾಯನ | ದಾಸತ್ವವು ಶಾಶ್ವತವಾಗಿರಲಿ ೨**

ಗೋವು, ಜ್ಞಾನಿ, ದೇವತೆ, ಇವರ ದುಃಖವನ್ನು ಕಳೆಯುವುದಕ್ಕಾಗಿಯೇ ನೀನು ಅವತರಿಸುವೆ. ನೀನೇ ಉಪದೇಶಕ ಗುರುವು. ಪೂಜ್ಯಶ್ರೀಹರಿಯೇ ! ನಿನಗೆ ನಮಸ್ಕಾರ."

ಹೀಗೆ ಕುಂತಿ ಪ್ರಾರ್ಥಿಸಿದಳು. ಧರ್ಮರಾಜನು ದ್ವಾರಕಿಗೆ ಹೋಗಬೇಡವೆಂದು ಶ್ರೀಕೃಷ್ಣನಲ್ಲಿ ಮರೆಯಿಟ್ಟು ಅವನನ್ನು ತಡೆದು ನಿಲಿಸಿ ಕೊಂಡನು.

**ಎಂಟನೆಯ ಅಧ್ಯಾಯ ಮುಗಿದುದು**

ದುರ್ಯೋಧನಾದಿಗಳ ಸಂಹಾರ ಅನ್ಯಾಯವೆಂದು ಧರ್ಮರಾಜ ಸಂದೇಹಿಸಿ ರಾಜ್ಯವನ್ನು ಬಿಡಲು ಮನಸ್ಸು ಮಾಡಿದನು. ಆಗ ಶ್ರೀಕೃಷ್ಣನು ಭೀಷ್ಮನನ್ನು ಕೇಳಿಂದನು. ಅವನು ಅದರಂತೆ ಅವರ ಬಳಿಗೆ ಹೋಗಿ ಪ್ರಶ್ನಿಸಿದನು.

ಭೀಷ್ಮ :– ಧರ್ಮರಾಜನೇ ! ಭಗವದ್ದ್ವೇಷಿಗಳನ್ನೂ, ಅವರ ಅನುಬಂಧಿಗಳನ್ನೂ ಕೊಂದು ಶಿಷ್ಟರನ್ನು ಪರಿಪಾಲಿಸುವುದೇ ಕ್ಷತ್ರಿಯನಿಗೆ ವಿಹಿತವಾದ ಧರ್ಮ. ಅದನ್ನು ಅಧರ್ಮವೆಂದು ನೀನು ತಿಳಿದೆಯಲ್ಲ ! ಆ ಭಾವನೆಯನ್ನು ಬಿಡು. ಶ್ರೀಕೃಷ್ಣನನ್ನು ಯಾರೆಂದು ತಿಳಿದಿರುವೆ ? ಸಾಕ್ಷಾನ್ನಾರಾಯಣನೇ ಇವನು. ನಿನ್ನ ಸೋದರ ಮಾವನ ಮಗನಲ್ಲ. ಅವನ ಸೇವೆಯಿಂದು ರಾಜ್ಯವಾಳಿ ಧನ್ಯನಾಗು. (ಕೃಷ್ಣನನ್ನು (ಕುರಿತು) ದೇವ ! ನಾನು ದೇಹ ಬಿಡುವವರೆಗೂ ದರ್ಶನ ಕೊಡುತ್ತ ಇಲ್ಲೇ ಇರು.

ಹೀಗೆ ಹೇಳಲು ಶ್ರೀಕೃಷ್ಣನು ಭೀಷ್ಮರೊಳಗೆ ನಿಂತು ಸಕಲ ಧರ್ಮಗಳನ್ನೂ ಉಪದೇಶಿಸಿ ಅವರಿಗೆ ಕೀರ್ತಿಕೊಟ್ಟನು. ಭೀಷ್ಮರು ಭಕ್ತರಲ್ಲಿ ಶ್ರೀಕೃಷ್ಣನು ಮಾಡುವ

ವಾತ್ಸಲ್ಯವನ್ನೂ, ದುಷ್ಟನಿಗ್ರಹ ಮಾಡಿದ ರೀತಿಯನ್ನೂ ಹೊಗಳಿ ದೇಹಬಿಟ್ಟು ಉತ್ಕ್ರಾಂತರಾದರು. ಪಾಂಡವರು ಅವರ ಔರ್ಧ್ವದೈಹಿಕ ಕರ್ಮವನ್ನು ಮಾಡಿ ಧರ್ಮ ದಿಂದ ರಾಜ್ಯವಾಳುತ್ತ ಅವರವರ ಯೋಗ್ಯತೆಯನ್ನು ಅನುಸರಿಸಿ ಶ್ರೀಹರಿಯ ಸೇವೆ ಯನ್ನು ಮಾಡುತ್ತ ಬಂದರು.

## ಒಂಬತ್ತನೆಯ ಅಧ್ಯಾಯ ಮುಗಿದುದು

ಶ್ರೀಕೃಷ್ಣನು ಹಸ್ತಿನಾವತಿಯಿಂದ ದ್ವಾರಕಿಗೆ ಹೊರಟನು. ಮೆರವಣಿಗೆಯಲ್ಲಿ ಬಂದ ಶ್ರೀಕೃಷ್ಣನನ್ನು ಹಸ್ತಿನಾವತಿಯ ಸ್ತ್ರೀಪುರುಷರು ಅವನ ವೇದೋಕ್ತವಾದ ಮಹಾಮಹಿಮೆಯನ್ನು ಹೊಗಳಿದರು. ಶ್ರೀಕೃಷ್ಣನು ದ್ವಾರಕಿಗೆ ಬಂದನು. ಅವನನ್ನು ನೋಡಿ ಪುರಜನರು ಭಕ್ತಿಯಿಂದ ಕೊಂಡಾಡಿದರು. ಶ್ರೀ ಹರಿಯು ಪ್ರಾಕೃತ ಪುರುಷನಂತೆ ಅವನ ಪತ್ನಿಯರನ್ನು ಸಂತೋಷಪಡಿಸಿದನು. ಆದರೆ ಅವನು ಎಂದೂ ಸ್ತ್ರೀಜಿತನಲ್ಲ. ಕೃಷ್ಣನ ಪತ್ನಿಯರ ನೋಟನಗೆಗಳಿಂದ ಮನ್ಮಥನೇ ಮೋಹ ಗೊಂಡು ಬಿಲ್ಲನ್ನು ಕೆಳಗೆ ಹಾಕಿದನು. ಅಂದರೆ ಅಂತಹ ಸುಂದರಿಯರವರು. ಅಂಥ ಸುಂದರಿಯರೂ ತಮ್ಮ ಕಾಮಚೇಷ್ಟೆಗಳಿಂದ ಶ್ರೀ ಹರಿಯ ಮನಸ್ಸನ್ನು ವಿಕಾರ ಹೊಂದುವಂತೆ ಮಾಡಲು ಸಮರ್ಥರಾಗಲಿಲ್ಲ. ಹೀಗಿದ್ದರೂ ಅಜ್ಞಾನಿ ಜನರು ತಮ್ಮಂತೆ ಶ್ರೀಕೃಷ್ಣನು ಸ್ತ್ರೀಜಿತನೆಂದು ಬಗೆದರು. ಅದೇ ಜ್ಞಾನಿಗಳಾದರೋ "ಶ್ರೀ ಹರಿಯು ಸದಾ ತ್ರಿಗುಣಗಳಿಗೆ ಆಧಾರ, ನಿರ್ಗುಣ. ಆದ್ದರಿಂದ ಅವನು ಈಶ್ವರನು" ಎಂದು ತಿಳಿವರು. ಅಜ್ಞಾನಿಗಳು ಏನೇ ಹೇಳಿದರೂ ಆಪ್ತಕಾಮನಾದ ಶ್ರೀಹರಿಯು ಯಾವ ಕಾಲಕ್ಕೂ ಸ್ತ್ರೀಜಿತನಲ್ಲವೇ ಅಲ್ಲ.

## ಹತ್ತನೆಯ ಅಧ್ಯಾಯ ಮುಗಿದುದು

**ಶೌನಕ :** ಶ್ರೀಕೃಷ್ಣನು ಉತ್ತರಾದೇವಿಯ ಹೊಟ್ಟೆಯಲ್ಲಿದ್ದ ಶಿಶುವನ್ನು ಹೇಗೆ ಬದುಕಿಸಿದನು ? ಹೇಳಿರಿ ಮತ್ತು ಪರೀಕ್ಷಿದ್ರಾಜನ ಅವತಾರ, ಮಾಡಿದ ವ್ಯಾಪಾರ ಮತ್ತು ಅವನ ದೇಹತ್ಯಾಗಗಳನ್ನು ವರ್ಣಿಸು ಮತ್ತು ಶುಕಾಚಾರ್ಯರು ಅವನಿಗೆ ಭಾಗವತೋಪದೇಶ ಮಾಡಿದ ಪ್ರಕಾರವನ್ನೂ ತಿಳಿಸು.

**ಸೂತ ,** ಪರೀಕ್ಷಿತ್ ತಾಯಿಯ ಹೊಟ್ಟೆಯಲ್ಲಿದ್ದಾಗ ಹೆಬ್ಬೆಟ್ಟಿನ ಗಾತ್ರದ, ತೇಜಸ್ವಿಯಾದ ಪುರುಷನನ್ನು ನೋಡಿದನು. ಆ ಪುರುಷನು ಶಿಶುವನ್ನು ಸುಡಲು ಅಸ್ತ್ರವು ಬಂದಾಗ ಅದನ್ನು ತನ್ನಗದೆಯಿಂದ ಓಡಿಸುತ್ತಿದ್ದನು. ಶಿಶುವು ಆ ವ್ಯಕ್ತಿ ಯನ್ನು ಕಂಡು, ಅವನು ಯಾರು ? ಎಂದು ತಿಳಿಯಲಾರದವನಾದನು. ಶಿಶುವಿನ ಹತ್ತನೇ ತಿಂಗಳಲ್ಲಿ ಶ್ರೀಹರಿಯು ಆ ಶಿಶುವು ನೋಡುತ್ತಿದ್ದಂತೆಯೇ ಅದೃಶ್ಯನಾದನು. ಶುಭವಾದ ಮುಹೂರ್ತದಲ್ಲಿ ಶಿಶು ಜನನವಾಯಿತು. ಧೌಮ್ಯರೂ, ಕೃಪಾಚಾರ್ಯರೂ ಆ ಮಗುವಿನ ಜಾತಕರ್ಮವನ್ನು ನೆರವೇರಿಸಿದರು. ಆಗ ಧರ್ಮರಾಜನು ಸುವರ್ಣ,

ಗೋಭೂಮುಂತಾದುವನ್ನು ದಾನ ಮಾಡಿದನು. ಸಂತುಷ್ಟರಾದ ಬ್ರಾಹ್ಮಣರು ಹೀಗೆ ಹೇಳುತ್ತಾರೆ :

ಹುಟ್ಟಿ ಸತ್ತ ಮಗುವನ್ನು ಶ್ರೀ ಹರಿಯು ಬದುಕಿಸಿರುವನು. ಆದ್ದರಿಂದ ಈ ಮಗುವಿಗೆ 'ವಿಷ್ಣುರಾತ'ನೆಂದೇ ಹೆಸರು ಪ್ರಸಿದ್ಧಿಯಾಗುತ್ತದೆ. ಇವನು ವಿಷ್ಣುಭಕ್ತ. ಬ್ರಾಹ್ಮಣ ಪ್ರಿಯ. ದಾನಿ. ಪರಾಕ್ರಮದಲ್ಲಿ ಕಾರ್ತವೀರ್ಯ, ಅರ್ಜುನನಿಗೆ ಸಮನು. ಇಕ್ಷ್ವಾಕುರಾಜನಂತೆ ಪ್ರಜೆಗಳನ್ನು ಸಂರಕ್ಷಿಸುವನು. ಸತ್ಯಸಂಧನು. ಈ ಗುಣಗಳಲ್ಲಿ ಶ್ರೀರಾಮನಂತಿರುವನು. (ಇದು ಅಧಿಕ ದೃಷ್ಟಾಂತ. ಕಿಂಚಿತ್ ಸಾಮ್ಯವಿದೆ ಎಂದು ಅರ್ಥ) ದ್ವಿಜಕುಮಾರನ ಶಾಪದಿಂದ ತಕ್ಷಕನು ಕಚ್ಚಿ ಮರಣ ಬರುವುದೆಂದು ತಿಳಿದು ಇವನು ತನ್ನ ಸತಿಸುತಾದಿಗಳಲ್ಲಿ ಮಮತೆಯನ್ನು ಬಿಟ್ಟು ಶ್ರೀಹರಿಯ ಪದವನ್ನು ಕೊನೆಗೆ ಹೊಂದುವನು.

**ಸೂತ :** ಧರ್ಮರಾಜನು ಅಶ್ವಮೇಧಯಾಗ ಮಾಡಲು ಸಿದ್ಧನಾದನು. ಪಾಂಡವರು ವೇದವ್ಯಾಸರಿಂದ ಪ್ರೇರಿತರಾಗಿ ಉತ್ತರದಿಕ್ಕಿನಲ್ಲಿ ಮರುತ್ತ ರಾಜನು ಯಜ್ಞ ಮಾಡಿ ಬಿಟ್ಟು ಹೋಗಿದ್ದ ಸುವರ್ಣ ಭಾಂಡಾದಿಗಳನ್ನೂ, ದ್ರವ್ಯಗಳನ್ನೂ ತಂದರು. ಪಾಂಡವರು ಐವರೂ ಒಬ್ಬೊಬ್ಬರು ಮೂರು ಮೂರು ಅಶ್ವಮೇಧ ಗಳನ್ನು ಮಾಡಿ ಶ್ರೀಕೃಷ್ಣನನ್ನು ಪೂಜಿಸಿದರು. ಬಳಿಕ ಶ್ರೀಕೃಷ್ಣನು ಅರ್ಜುನನನ್ನು ಕರೆದುಕೊಂಡು ದ್ವಾರಕಿಗೆ ಹೊರಟು ಹೋದನು.

## ಹನ್ನೊಂದನೆಯ ಅಧ್ಯಾಯ ಮುಗಿದುದು

**ಸೂತ :–** ಶೌನಕರೇ ! ಕುರುಕ್ಷೇತ್ರ ಯುದ್ಧವು ನಡೆಯುತ್ತಿರುವಾಗ ವಿದುರನು ಹಸ್ತಿನಾವತಿ ಬಿಟ್ಟು ತೀರ್ಥಯಾತ್ರೆಗೆ ಹೊರಟಾಗ ಮಧ್ಯದಲ್ಲಿ ಮೈತ್ರೇ ಯರನ್ನು ಭೇಟಿಮಾಡಿ ಅವರಿಂದ ಜೀವ–ಪರಮಾತ್ಮರ ಸ್ಥಿತಿಯನ್ನು ಅರಿತನು. ಯಾತ್ರೆ ಮುಗಿಸಿ ಬಂದ ವಿದುರನನ್ನು ಧರ್ಮರಾಜ, ಧೃತರಾಷ್ಟ್ರ, ಗಾಂಧಾರಿ ದ್ರೌಪದೀ ಮೊದಲಾದವರು ಸಂತೋಷದಿಂದ ಇದಿರುಗೊಂಡರು. ವಿದುರರು ಊಟಮಾಡಿ ವಿಶ್ರಾಂತಿಯನ್ನು ಹೊಂದುತ್ತ ಕುಳಿತಿರುವವರ ಬಳಿಗೆ ಬಂದು

**ಧರ್ಮರಾಜ :–** ತೀರ್ಥಯಾತ್ರಾಕಾಲದಲ್ಲಿ ನಮ್ಮನ್ನು ಸ್ಮರಿಸುತ್ತ ಇದ್ದಿರಾ ? ನಮ್ಮ ಯಾದವರಿಗೆಲ್ಲರಿಗೂ ಸುಖವೆ ?

**ಸೂತ :–** ವಿದುರನು ಉದ್ಧವನಿಂದ ಮುಂದೆ ಆಗುವ ಯಾದವರ ನಾಶವನ್ನು ತಿಳಿದಿದ್ದನು. ಅದನ್ನು ಧರ್ಮರಾಜನಿಗೆ ಹೇಳಲಿಲ್ಲ. ಏಕೆಂದರೆ ಅದು ಅಪ್ರಿಯವು. ಉಳಿದ ಯಾದವರ ಕುಶಲ ವಾರ್ತೆಯನ್ನು ವಿದುರನು ತಿಳಿಸಿದನು. (ವಿದುರನು ಉದ್ಧವನನ್ನು ಕಂಡದ್ದು ಯಾವಾಗ ? ಉದ್ಧವನು ಮುಂದೆ ಮಾಡಿದ ವ್ಯಾಪಾರ ವೇನು ? ಎಂಬ ವಿಷಯದಲ್ಲಿ ಸಂದೇಹಬರುವುದು. ಆದ್ದರಿಂದ ಇದೇ ಸ್ಕಂಧ

12ನೆ ಅಧ್ಯಾಯ, 12ನೇ ಶ್ಲೋಕದ ತಾತ್ಪರ್ಯವನ್ನು ಶ್ರೀಮದಾಚಾರ್ಯರು ಹೀಗೆ ಹೇಳಿರುವರು :–

ಉದ್ಧವನು ಮುಂದೆ ಯದುಕುಲವು ನಾಶವಾಗಲಿ ಎಂದು ಕಣ್ವಾದಿ ಋಷಿಗಳು ಕೊಟ್ಟ ಶಾಪವನ್ನು ಕೇಳಿದನು. ಶ್ರೀಕೃಷ್ಣನು ಇದಕ್ಕಾಗಿ ಸ್ವಲ್ಪವೂ ಚಿಂತಿಸದೆ ಸಂತೋಷಿಯಾಗಿಯೇ ಇದ್ದು ಉದಾಸೀನನಂತೆ ಇರುವುದನ್ನು ನೋಡಿದನು. ಮತ್ತು ಶ್ರೀಕೃಷ್ಣನು ತನ್ನ ಲೋಕವನ್ನು ಹೊಂದಲಿಚ್ಛಿಸುವುದನ್ನು ತಿಳಿದ ಉದ್ಧವನು ಏಕಾಂತ ಸ್ಥಳದಲ್ಲಿ ಶ್ರೀಕೃಷ್ಣನನ್ನು ಭೇಟಿ ಮಾಡಿ ಭಗವತ್ತತ್ತ್ವವನ್ನು ಅವನಿಂದ ಶ್ರವಣ ಮಾಡಿದನು. ಆ ಸಮಯದಲ್ಲೇ ಮೈತ್ರೇಯರೂ ಅಲ್ಲಿಗೆ ಬಂದು ಸೇರಿ ದರು. ಶ್ರೀಕೃಷ್ಣನು ಅವರಿಬ್ಬರಿಗೂ ಭಗವತಸ್ವರೂಪವನ್ನು ಚೆನ್ನಾಗಿ ಉಪದೇಶಿಸಿ ದನು. ಮತ್ತು ಅವನು ಪರಂಧಾಮಕ್ಕೆ ತೆರಳುವ 26 ವರ್ಷಗಳ ಮೊದಲೇ ಉದ್ಧವನನ್ನು ಬದರಿಯ ಬಳಿಯಿರುವ ಕಲಾಪ ಗ್ರಾಮದಲ್ಲಿದ್ದ ತನ್ನ ಭಕ್ತರಿಗೆ ಈ ಎಲ್ಲ ತತ್ತ್ವಗಳನ್ನು ಹೇಳುವುದಕ್ಕಾಗಿ ಕಳುಹಿಸಿದನು. ಉದ್ಧವನು ಮಧ್ಯಮಾರ್ಗ ದಲ್ಲಿ ತೀರ್ಥಯಾತ್ರೆಯನ್ನು ಮಾಡುತ್ತಾ ಇದ್ದ ವಿದುರನನ್ನು ಸಂಧಿಸಿ ಅವನಿಗೆ ಮುಂದೆ ಆಗುವ ಯದುಕುಲ ನಾಶವನ್ನು, ಶ್ರೀಕೃಷ್ಣನು ಪರಂಗ್ರಾಮಕ್ಕೆ ತೆರಳಲು ಇಚ್ಛಿಸಿರುವುದನ್ನು ಹೇಳಿ, ವಿದುರನ ಅಪೇಕ್ಷೆಯಂತೆ ಶ್ರೀಕೃಷ್ಣನ ಮಹಿಮೆಯನ್ನು ತಿಳಿಸಿದನು. ವಿದುರನು ಕೃಷ್ಣನು ಮಾಡಿದ್ದ ಉಪದೇಶವನು ತಿಳಿಸೆಂದನು. ಉದ್ಧವನು "ವಿದುರಾ ! ನಿನಗೆ ಉಪದೇಶಿಸುವಂತೆ ಶ್ರೀಕೃಷ್ಣನು ಮೈತ್ರೇಯರಿಗೆ ಅಪ್ಪಣೆ ಮಾಡಿರುವನು. ಆದ್ದರಿಂದ ಅವರನ್ನು ಭೇಟಿ ಮಾಡು" ಎಂದು ಹೇಳಿ ಕಲಾಪಗ್ರಾಮಕ್ಕೆ ಹೋಗಿ ತತ್ತ್ವವನ್ನು ಅಲ್ಲಿದ್ದವರಿಗೆ ತಿಳಿಸಿ, 26 ವರ್ಷದ ನಂತರ ತಿರುಗಿ ಬರುವುದಾಗಿ ಉದ್ಧವನು ಹೇಳಿ ಶ್ರೀಕೃಷ್ಣನ ಬಳಿಗೆ ಬಂದು ಅವನನ್ನು ಸೇವಿಸುತ್ತಿದ್ದನು. ವಿದುರನು ಮೈತ್ರೇಯರನ್ನು ಸಂಧಿಸಿ ತತ್ತ್ವೋಪದೇಶ ಮಾಡಿ ರೆಂದನು. ಅವರು ಕೃಷ್ಣೋಕ್ತಪ್ರಮೇಯನ್ನು ವಿದುರರಿಗೆ ವಿಸ್ತಾರವಾಗಿ ಹೇಳಿದರು. ತೀರ್ಥಯಾತ್ರೆ ಮುಗಿಸಿಕೊಂಡು ಬಂದ ವಿದುರರನ್ನು ಕುರಿತು ಧರ್ಮರಾಜನು ಯಾದವರ ಯೋಗಕ್ಷೇಮವನ್ನು ವಿಚಾರಿಸಿದನಷ್ಟೆ ! ವಿದುರರು ಪಾಂಡವರಿಗೆ ಯದುಗಳು ಮುಂದೆ ಪರಸ್ಪರ ಕಲಹದಿಂದ ಕ್ಷಯವನ್ನು ಹೊಂದುವರೆಂಬುದನ್ನು ಹೇಳದೆ ಉಳಿದೆಲ್ಲ ಯೋಗಕ್ಷೇಮವನ್ನು ತಿಳಿಸಿದರು. ಯಾರೇ ಆಗಲಿ ಅಪ್ರಿಯವಾದ ಸಂಗತಿಯನ್ನು ಹೇಳಬಾರದೆಂದು ಪದ್ಮಪುರಾಣವು ಸಾರುತ್ತಿದೆ.

ವಿದುರರು ಕೊನೆಗಾಲದಲ್ಲಿ ಧೃತರಾಷ್ಟ್ರನು ಧ್ಯಾನಿಸಿ ಆತ್ಮೋದ್ಧಾರ ಮಾಡಿ ಕೊಳ್ಳುವುದಕ್ಕಾಗಿ ಅರಮನೆ ಬಿಟ್ಟು ವನಕ್ಕೆ ಬೇಗ ಹೊರಡುವಂತೆ ಎಚ್ಚರಿಸಿದರು. ಅದರಂತೆ ಧೃತರಾಷ್ಟ್ರ, ಗಾಂಧಾರಿ, ಕುಂತಿ, ಸಂಜಯ ಇವರೆಲ್ಲರೂ ವಿದುರರೊಡನೆ ಬದರಿಗೆ ಹೋಗಿ ವಿರಕ್ತಿಪೂರ್ವಕ ತಪಸ್ಸನ್ನು ಮಾಡಿದರು. ಇತ್ತ ಧರ್ಮರಾಜನು

ತನ್ನ ದೊಡ್ಡಪ್ಪ ಮೊದಲಾದ ಹಿರಿಯರನ್ನು ನೋಡಲು ಸಕಲ ಪರಿವಾರದೊಡನೆ ಬದರಿಗೆ ಹೋದನು. ಆಗ ಯಮ ಧರ್ಮಾಂಶರಾದ ವಿದುರರು ಅದೇ ಅಂಶನಾದ ಯುಧಿಷ್ಠಿರನಲ್ಲಿ ಪ್ರವೇಶಿಸಿ ಏಕೀಭಾವವನ್ನು ಹೊಂದಿದರು. ಹಿರಿಯರನ್ನು ಉಪ ಚರಿಸಿ ಯುಧಿಷ್ಠಿರನು ಊರಿಗೆ ಹಿಂತಿರುಗಿದನು. ಅರಮನೆಯಲ್ಲಿ ಧೃತರಾಷ್ಟ್ರನು ಇದ್ದ ಸ್ಥಳಕ್ಕೆ ಪ್ರತಿದಿನವೂ ಧರ್ಮರಾಜನು ಬಂದು ಧ್ಯಾನದಿಂದ ಬದರಿಯಲ್ಲಿದ್ದ ಹಿರಿಯ ರನ್ನು ನೋಡಿ ಅಭಿನಂದಿಸುತ್ತಿದ್ದನಂತೆ. ಎಂದಿನಂತೆ ಒಂದು ದಿನ ಅಲ್ಲಿಗೆ ಹೋಗಿ ಧ್ಯಾನ ಮಾಡಿದಾಗ ಯುಧಿಷ್ಠಿರನಿಗೆ ಹಿರಿಯರು ಗೋಚರಿಸಲಿಲ್ಲ. ಅದೇ ಚಿಂತೆಯಲ್ಲಿ ಮುಳುಗಿದ್ದಾಗ ಸಂಜಯನು ಬಂದು ಧೃತರಾಷ್ಟ್ರ, ಗಾಂಧಾರಿ ಮತ್ತು ಕುಂತಿಯರು ಸುಸಂಸ್ಕೃತವಾದ ಅಗ್ನಿಯನ್ನು ಪ್ರವೇಶಿಸಿ ದೇಹಬಿಟ್ಟರೆಂದು ಹೇಳಿದನು. ಇದನ್ನು ಕೇಳಿ ಧರ್ಮರಾಜಾದಿಗಳು ದುಃಖಿಸುತ್ತಿದ್ದಾಗ ನಾರದರು ಬಂದು ಸಮಾಧಾನ ಮಾಡಿದರು. ಧರ್ಮರಾಜನು ಆ ಶೋಕವನ್ನು ಬಿಟ್ಟು ಹರಿಸ್ಮರಣಪೂರ್ವಕ ರಾಜ್ಯ ವಾಳಿದನು.

### ಹನ್ನೆರಡನೆಯ ಅಧ್ಯಾಯ ಮುಗಿದುದು

ಧರ್ಮರಾಜನು ದ್ವಾರಕಿಯಲ್ಲಿನ ಬಂಧುಗಳನ್ನು ನೋಡಿ ಅವರ ಕ್ಷೇಮ ಸಮಾಚಾರಗಳನ್ನು ತಿಳಿದು ಬರುವಂತೆ ಅರ್ಜುನನನ್ನು ಕಳುಹಿಸಿಕೊಟ್ಟನು. ಏಳು ದಿನಗಳಾದರೂ ಅರ್ಜುನನು ಹಿಂತಿರುಗಿರಲಿಲ್ಲ. ರಾಜನು ಚಿಂತೆಗೊಳಗಾದನು. ಅದರಿಂದ ಏಳುದಿನಗಳು ಆವನ ಭಾಗಕ್ಕೆ ಏಳು ತಿಂಗಳುಗಳಂತೆ ಭಾಸವಾದುವು ರಾಜನು ಅನೇಕ ದುರ್ನಿಮಿತ್ತಗಳನ್ನು ನೋಡಿದನು. ಅಲ್ಲದೆ ಪ್ರಜೆಗಳ ಪಾಪಪ್ರವೃತ್ತಿ, ಕಪಟದ ವ್ಯವಹಾರ, ತಂದೆ ತಾಯಿ ಮಿತ್ರ ಭ್ರಾತೃ ದಂಪತಿಗಳ ಪರಸ್ಪರ ಕಲಹ, ಲೋಭ ಈ ಪ್ರವೃತ್ತಿಗಳನ್ನು ನೋಡಿ ಧರ್ಮರಾಜನು ಭೀಮಸೇನನನ್ನು ಕುರಿತು ಮಾತಾಡಿದನು. "ಭೀಮ! ಅರ್ಜುನನು ಹಿಂತಿರುಗಿ ಬರಲಿಲ್ಲ. ನಮ್ಮನ್ನು ಸುಖವಾಗಿಟ್ಟದ್ದ ಶ್ರೀ ಕೃಷ್ಣನು ತನ್ನ ಸ್ಥಾನಕ್ಕೆ ತೆರಳಿದನೋ ಏನೋ ? ಭೂಕಂಪನ, ಬಿರುಗಾಳಿಯ ಪ್ರತಾಪ, ರಕ್ತದ ಮಳೆ ಮುಂತಾದ ಉತ್ಪಾತಗಳಿಂದ ಬಹುತೇಕ ಹರಿರಹಿತವಾದ ಪೃಥ್ವಿಯಾಯಿತೆಂದು ಭಾವಿಸುವೆನು" ಎಂದನು. ಅರ್ಜುನನು ಬಂದು ನಮಿಸಿದನು.

**ಧರ್ಮರಾಜ :** ಅರ್ಜುನಾ ! ಏಕೆ ತೇಜೋಹೀನನಾಗಿರುವೆ ? ಯಾರಿ ಗಾದರೂ ಮಾತು ಕೊಟ್ಟು ಅದರಂತೆ ನಡೆದು ಕೊಳ್ಳಲಿಲ್ಲವೆ ? ಅಥವಾ ಶರಣಾ ಗತರನ್ನು ರಕ್ಷಿಸಲಿಲ್ಲವೆ ? ಪರರಿಂದ ತಿರಸ್ಕಾರವಾಯಿತೇನು ? ವೃದ್ಧರು ಬಾಲಕರನ್ನು ಬಿಟ್ಟು ನೀನೊಬ್ಬನೇ ಊಟಮಾಡಿದೆಯಾ ? ಇಲ್ಲವೇ ಶ್ರೀಕೃಷ್ಣನನ್ನು ಅಗಲಿಬಿಟ್ಟೆಯಾ ?

### ಹದಿಮೂರನೆಯ ಅಧ್ಯಾಯ ಮುಗಿದುದು

**ಅರ್ಜುನ** . (ಅತಿ ದುಃಖಿತನಾಗಿ) ಅಣ್ಣಾ ! ನಾನು ಶ್ರೀಕೃಷ್ಣನಿಂದ ವಿಯುಕ್ತನಾದೆನು. ದೇವತೆಗಳಿಗೂ ಆಶ್ಚರ್ಯವನ್ನುಂಟುಮಾಡುತ್ತಿದ್ದ ನನ್ನ ಸಾಮರ್ಥ್ಯವು ಇಲ್ಲವೆಂದಾಯಿತು. ಅಂದರೆ ಶ್ರೀಕೃಷ್ಣನು ಅವ್ಯಕ್ತನಾಗುವಾಗ ನನ್ನ ಶಕ್ತಿಯನ್ನೂ ಸಂಗಡವೇ ತೆಗೆದುಕೊಂಡು ಹೋಗಿಬಿಟ್ಟನು. ವಾಯುದೇವರಿಲ್ಲದ ದೇಹ ಹೆಣವಾದಂತೆ ನನ್ನ ಸ್ಥಿತಿಯೂ ಆಗಿದೆ. ಪಾಂಡವರಾದ ನಾವು ಶ್ರೀಕೃಷ್ಣನ ಪರಮಾನುಗ್ರಹದಿಂದಲೇ ದುಷ್ಟರನ್ನು ವಧಿಸಿ ಧರ್ಮವಂತರಾಗಿ ಉಸಿರಾಡಿಸು ತ್ತಿದ್ದೇವೆ. ಸರ್ವದೇವತೋಪಾಸ್ಯನಾದ ಶ್ರೀಹರಿಯನ್ನು ನನ್ನ ಸಮ ವಯಸ್ಕನಾದ ಮನುಷ್ಯನೆಂದು ತಿಳಿದು ಸಲಿಗೆಯಿಂದ ಅವನೊಡನೆ ಒಂದೇ ಆಸನದಲ್ಲಿ ಕುಳಿತು ಒಂದೇ ಹಾಸಿಗೆಯಲ್ಲಿ ಮಲಗಿದೆ. ಓಡಾಡಿದೆ. ಆಡಬಾರದುದನ್ನು ಆಡಿದೆ. ನನ್ನ ಹೊಗಳಿ ಕೊಂಡೆ. ಸರ್ವೋತ್ತಮನೊಡನೆ ಹೀಗೆ ನಾನು ವ್ಯವಹರಿಸಿದುದು ಅಪರಾಧವಲ್ಲವೇ ? ಸರ್ವೋತ್ತಮ ದೇವತೆಯಾದ ಶ್ರೀಕೃಷ್ಣನನ್ನು ನನ್ನ ಸಮನೆಂದು ತಿಳಿದು ಮೋಸ ಹೋದೆ. ಸ್ನೇಹಿತನ ಅಪರಾಧವನ್ನು ಸಹಿಸುವ ಸ್ನೇಹಿತನಂತೆ ಮಗನ ಅಪರಾಧವನ್ನು ಸಹಿಸುವ ತಂದೆಯಂತೆ ಶ್ರೀಹರಿಯು ನನ್ನ ಸರ್ವ ಅಪರಾಧಗಳನ್ನೂ ಸಹಿಸಿದನು. ಅವನು ನನ್ನ ಬಿಟ್ಟು ಅದೃಶ್ಯನಾಗ, ನನ್ನ ಹೃದಯ ಶೂನ್ಯವಾಗಿದೆ. ಹರಿಯು ಕಣ್ಮರೆಯಾದ ಮೇಲೆ ನನಗೆ ಹಿಂದಿನ ಸಾಮರ್ಥ್ಯವೆಲ್ಲಿಂದ ಬಂದೀತು. ? ಹರಿಯ 16100 ಮಂದಿ ಪತ್ನಿಯರನ್ನು ರಕ್ಷಿಸುತ್ತ ಕರೆದುಕೊಂಡು ಬರುತ್ತಿದ್ದಾಗ ದಾರಿಯಲ್ಲಿ ಅಲ್ಪಬಲವುಳ್ಳ ಗೊಲ್ಲರು ನನ್ನನ್ನು ಸೋಲಿಸಿದರು ಹಿಂದಿನ ಗಾಂಡೀವ ಧನಸ್ಸು, ರಥ, ಕುದುರೆ ಮತ್ತು ಹಿಂದಿನ ಶರಗಳ ಸದೃಶ ಶರಗಳು ಈಗಲೂ ಇವೆ. ಹಿಂದಿನ ರಥಿಕನೇ ನಾನು. ಆದರೇನು ? ಶ್ರೀಹರಿಯು ಅದೃಶ್ಯನಾದ ಮೇಲೆ ತಕ್ಷಣ ಆ ಬಿಲ್ಲು, ಮೊದಲಾದುವುಗಳು ಉಪಯೋಗವಿಲ್ಲವಾಗಿವೆ. ರಾಜೇಂದ್ರ ! ನಮ್ಮ ಬಂಧುಗಳಾದ ಯಾದವರು ಕುಡಿದು ಮತ್ತರಾಗಿ ಪರಸ್ಪರ ಬಡಿದಾಡಿ ಸತ್ತರು.

**ಸೂತ** —: ಹೀಗೆ ಶ್ರೀಕೃಷ್ಣನ ಚರಣಾರವಿಂದವನ್ನು ಸ್ಮರಿಸುವ ಅರ್ಜುನನಿಗೆ ಮತಿಯು ಹಿಂದಿಗಿಂತಲೂ ಹೆಚ್ಚಾಗಿ ಪರಮಾತ್ಮನಲ್ಲೀ ಆಸಕ್ತವಾಯಿತು.

## ಹದಿನಾಲ್ಕನೆಯ ಅಧ್ಯಾಯ ಮುಗಿದುದು

ಅರ್ಜುನನು ಹಿಂದೆ ಹರಿಯಿಂದ ಉಪದೇಶ ಹೊಂದಿದ್ದ ಗೀತೆಯನ್ನು ಸ್ಮರಿಸಿ ಮನನ ಮಾಡತೊಡಗಿದನು. ಶ್ರೀಹರಿಯು ಜ್ಞಾನಿಯ ಪ್ರಾರಬ್ಧ ಕರ್ಮವನ್ನು ಕಡಿಮೆ ಮಾಡಿದರೂ ಕೆಲವನ್ನು ಅನುಭವಿಸಿಯೇ ಕಳೆದುಕೊಳಬೇಕು. ಆದ್ದರಿಂದಲೇ ಅರ್ಜುನನು ಕೆಲವು ಪ್ರಾರಬ್ಧ ಕರ್ಮಗಳನ್ನು ಅನುಭವಿಸಲೇ ಬೇಕಾಯಿತು.

ಧರ್ಮರಾಜನು, ಶ್ರೀಕೃಷ್ಣನು ತನ್ನ ಸ್ಥಾನಕ್ಕೆ ಹೋದ ಪ್ರಕಾರವನ್ನೂ,

ಯದುಗಳ ನಾಶವನ್ನೂ ಕೇಳಿ ಕಲಿಯು ಬಂದು ಆವರಿಸುತ್ತಿರುವುದನ್ನೂ ತಿಳಿದು ಪರೀಕ್ಷಿತ್ತಿಗೆ ಪಟ್ಟಗಟ್ಟಿದನು. ವೀರರು ಹೋಗತಕ್ಕ ಸ್ವರ್ಗ ಮಾರ್ಗವನ್ನು ತಮ್ಮಂದಿರು ಮತ್ತು ದ್ರೌಪದಿಯವರೊಡನೆ ಅನುಸರಿಸಿದನು ಮಧುರಾಪಟ್ಟಣ ದಲ್ಲಿ ಅನಿರುದ್ಧನ ಮಗ ವಜ್ರನನ್ನು ಶೂರಸೇನರಾಜನನ್ನಾಗಿ ಅಭಿಷೇಕಿಸಿದನು. ಯಾಗ ಮಾಡಿ ತ್ರೇತಾಗ್ನಿಯನ್ನು ತನ್ನೊಳಗೆ ಸಮಾರೋಪ ಮಾಡಿಕೊಂಡನು. ಮರಣ ಕಾಲದಲ್ಲಿ ಮಾಡಬೇಕಾದ ಲಯಚಿಂತನೆ ಮಾಡಿದನು. ಪಾಂಡವರು ಪತ್ನಿಯ ಸಹಿತರಾಗಿ ಏಳುದಿನ ಯಾವತ್ತು ಭೂಮಿಯನ್ನೂ ಪ್ರದಕ್ಷಿಣೆ ಮಾಡಿ, ಗಂಧಮಾದನ ಪರ್ವತದಲ್ಲಿರುವ ದೊಡ್ಡ ಬದರಿಯಲ್ಲಿಳಿದು ಅಲ್ಲಿಯೇ ಪರಮಾತು ನನ್ನು ಧ್ಯಾನಿಸುತ್ತ ನಡೆದು ತಮ್ಮ ತಮ್ಮ ಶರೀರವನ್ನು ಬಿಟ್ಟರು. ಮೊದಲ್ಕ ದೇಹಬಿಟ್ಟವಳು ದ್ರೌಪದಿ

ಶ್ರೀಹರಿಯು ಅವ್ಯಕ್ತನಾದ್ದನ್ನೂ ಪಾಂಡವರ ಸ್ವರ್ಗಾರೋಹಣವನ್ನೂ ತಿಳಿಸುವ ಈ ಕಥೆಯು ಅತ್ಯಂತ ಕ್ಷೇಮಕರ. ಪವಿತ್ರ. ಇದನ್ನು ಶ್ರದ್ಧೆಯಿಂದ ಕೇಳಿದ ವರಿಗೆ ಶ್ರೀಹರಿಯಲ್ಲಿ ಭಕ್ತಿ ಮತ್ತಷ್ಟು ಹೆಚ್ಚಿ ಅವನ ಅನುಗ್ರಹದಿಂದ ಅಪರೋಕ್ಷವಾಗಿ ಮೋಕ್ಷವು ದೊರೆಯುವುದು

## ಹದಿನೈದನೆಯ ಅಧ್ಯಾಯ ಮುಗಿದುದು

**ಸೂತ –:** ರಾಜ್ಯವಾಳುತ್ತಿದ್ದ ಪರೀಕ್ಷಿದ್ರಾಜನು ಉತ್ತರನ ಮಗಳಾದ ಇರಾವತಿಯನ್ನು ಮದುವೆಯಾಗಿ ಅವಳಲ್ಲಿ ನಾಲ್ಕುಮಂದಿ ಪುತ್ರರನ್ನು ಪಡೆದನು. ಅವರಲ್ಲಿ ಹಿರಿಯ ಮಗನೇ ಜನಮೇಜಯನು. ಪರೀಕ್ಷಿದ್ರಾಜನು ಗಂಗಾತೀರದಲ್ಲಿ ಮೂರು ಅಶ್ವಮೇಧಗಳನ್ನು ಮಾಡಿದನು. ಇವನು ದಿಗ್ವಿಜಯ ಮಾಡುತ್ತ ಒಂದು ಸ್ಥಳದಲ್ಲಿ ಕಲಿಯನ್ನು ನಿಗ್ರಹಿಸಿದನು. ಆಗ ಕಲಿಯು ಶೂದ್ರನಾಗಿ ರಾಜನ ಚಿಹ್ನೆ ಯನ್ನು ಧರಿಸಿ ಒಂದು ಆಕಳು ಮತ್ತು ಎತ್ತನ್ನು ಕಾಲಿನಿಂದ ಒದೆಯುತ್ತಿದ್ದನು.

**ಶೌನಕ :–** ರಾಜನು ಕಲಿಯನ್ನು ನಿಗ್ರಹಿಸಲು ಕಾರಣವೇನು ? ಈ ಕಥೆಯು ಹರಿಯ ಅಥವಾ ಅವನ ಭಕ್ತರ ಮಹಿಮೆಯನ್ನು ತಿಳಿಸುವಂತಿದ್ದರೆ ಹೇಳು. ನಿನ್ನಿಂದ ಹರಿಕಥೆ ಕೇಳುತ್ತಿರುವ ನಾವೇ ಭಾಗ್ಯವಂತರು.

**ಸೂತ :–** ಪರೀಕ್ಷಿದ್ರಾಜನು ತನ್ನ ರಾಜ್ಯಕ್ಕೆ ಕಲಿಪ್ರವೇಶಿಸಿದನೆಂದು ಕೇಳಿ ದಿಗ್ವಿಜಯಕ್ಕೆ ಹೊರಟನು. ಭದ್ರಾಶ್ವ, ಕೇತುಮಾಲ, ಭರತಖಂಡ, ಕಿಂಪುರುಷ ಮೊದಲಾದ ಖಂಡಗಳನ್ನೂ ಉತ್ತರಕುರು ಮೊದಲಾದ ದೇಶಗಳನ್ನೂ ಗೆದ್ದು ಅಲ್ಲಿದ್ದ ರಾಜರಿಂದ ಕಪ್ಪಕಾಣಿಕೆಗಳನ್ನು ಪಡೆದನು. ಹೋದ ಕಡೆ ಶ್ರೀಕೃಷ್ಣ ಮಹಿಮೆ ಯನ್ನು ಸೂಚಿಸುವ ತಮ್ಮ ಹಿರಿಯರಾದ ಪಾಂಡವರ ಚರಿತ್ರೆಯನ್ನು ಗಾಯಕರು

ಹಾಡುವುದನ್ನು ಕೇಳಿ ಅವರನ್ನು ಸನ್ಮಾನಿಸಿದನು. ಹರಿಭಕ್ತಿಯು ವೃದ್ಧಿಯಾಯಿತು. ಅವನು ಹೀಗೆ ಸಂಚರಿಸುತ್ತಾ ಬರುವಾಗ ಒಂದು ಕಡೆ ಆಶ್ಚರ್ಯವೊಂದನ್ನು ನೋಡಿದನು. ಅದೇನೆಂದರೆ –:

ಸನಾತನ ಧರ್ಮವು ಎತ್ತಿನ ರೂಪವನ್ನು ಧರಿಸಿ ತನ್ನ ನಾಲ್ಕು ಕಾಲುಗಳಲ್ಲಿ ಸತ್ಯ ಎಂಬ ಒಂದೇ ಪಾದದಿಂದ ಕುಂಟುತ್ತಿತ್ತು. ಅಲ್ಲಿಯೇ ಗೋರೂಪದಲ್ಲಿ ಭೂದೇವಿ ಇದ್ದಳು. ಕಣ್ಣೀರು ಸುರಿಯುತ್ತಿದೆ. ಕರುವನ್ನು ಕಳೆದುಕೊಂಡಂತೆ ಅಳುತ್ತಿದ್ದಾಳೆ.

**ಧರ್ಮ** –: ಪೂಜ್ಯಳೆ ! ನಿನ್ನ ಮುಖಬಾಡಿದೆ. ಅನಾರೋಗ್ಯವೆ ? ಒಂಟಿ ಕಾಲಿನವನು ನಾನೆಂದು ದುಃಖವೆ ? ಯಜ್ಞವಿಲ್ಲ. ಮಳೆ ಬೆಳೆಗಳಿಲ್ಲ ಪ್ರಜೆಗಳು ದರಿದ್ರರಾಗುವರೆಂಬ ದುಃಖವೆ ? ಗಂಡಂದಿರಿಂದ ರಕ್ಷಿತರಾಗದ ಸ್ತ್ರೀಯರ ನಿಮಿತ್ತ ಶೋಕವೆ ? ಪಿತೃಗಳಿಂದ ರಕ್ಷಿತರಾಗದ ಬಾಲಕರಿಗಾಗಿಯೇ ? ಬ್ರಾಹ್ಮಣರು ದುರಾಚಾರಿಗಳಾಗಿ, ಕ್ಷತ್ರಿಯರು ಬ್ರಾಹ್ಮಣರನ್ನು ಅವಮಾನ ಮಾಡುತ್ತಿರಲು, ಅನಧಿಕಾರಿಗಳು ವೇದಾಭ್ಯಾಸ ಮಾಡುತ್ತಾರೆಂದು ಶೋಕವೆ ? ಕೃಷ್ಣನು ಕಣ್ಮರೆಯಾದನೆಂದು ಪ್ರಲಾಪವೆ ?

**ಭೂ ದೇವಿ** –: ಶ್ರೀಹರಿಯು ಅನಂತಕಲ್ಯಾಣಗುಣಪರಿಪೂರ್ಣನು, ಸತ್ಯವಂತ, ಶುಚಿ, ದಯಾಪರ, ದಾನಶೀಲ, ಸಂತುಷ್ಟನು, ಋಜು, ಶಾಂತ, ದಾಂತ, ಸಮನು, ಅಪರಾಧ ಸಹಿಷ್ಣು, ಸರ್ವಜ್ಞ, ಈಶ್ವರ, ಶೂರ, ತೇಜಸ್ವಿ, ಅವಿಕಾರಿ, ಮರೆವು ಇಲ್ಲದವನು, ಸ್ವತಂತ್ರ, ಕುಶಲ, ಕಾಂತ, ಸುಭಗ, ಮೃದು, ಕ್ರೋಧ ರಹಿತ, ವಿನೀತ, ಸುಶೀಲ, ಸಹಿಷ್ಣು, ಬಲಿಷ್ಠ, ಗಂಭೀರ, ಸ್ಥಿರ, ಕೀರ್ತಿವಂತ, ಮಾನಿ, ನಿರಹಂಕಾರಿ, ಹೀಗೆಯೇ ಅಪಾರ ಮಹಾಮಹಿಮ. ಇಂತಹಸ್ವಾಮಿ ನಮ್ಮನ್ನು ಬಿಟ್ಟು ನಡೆದು ಬಿಟ್ಟ. ಪಾಪಿ ಕಲಿಯು ಗಂಟು ಬಿದ್ದ. ಅದಕ್ಕಾಗಿ ಶೋಕಿಸುತ್ತಿರುವೆನು. ಮತ್ತು ನನಗೆ, ನಿನಗೆ, ಪಿತೃಋಷಿ ಸಜ್ಜನರಿಗೆ, ವರ್ಣಾಶ್ರಮಿಗಳಿಗೂ ದುಃಖ ಬಂತಲ್ಲಾ ಎಂದು ಅಳುತ್ತಿರುವೆನು. ಯದುಗಳಲ್ಲಿ ಅವತರಿಸಿ ಭೂಭಾರವನ್ನು ಪರಿಹರಿಸಿದ ಶ್ರೀಹರಿಯ ವಿಯೋಗವನ್ನು ಹೇಗೆ ತಾನೆ ಸಹಿಸಲಿ ?

**ಹದಿನಾರನೆಯ ಅಧ್ಯಾಯ ಮುಗಿದುದು**

**ಪರೀಕ್ಷಿತ್** –: (ಶೂದ್ರ ವೇಷಧಾರಿಯನ್ನು ಕುರಿತು) ನೀನಾರು ? ವೇಷದಲ್ಲಿ ರಾಜ, ಕೆಲಸದಲ್ಲಿ ಶೂದ್ರ ಇದು ನನ್ನ ರಾಜ್ಯ. ನಾನು ರಕ್ಷಕ. ಕೃಷ್ಣನು ಕಣ್ಣಿಗೆ ಕಾಣುತ್ತಿಲ್ಲ. ಅರ್ಜುನನು ಇಹಲೋಕವನ್ನು ತೊರೆದ. ಕೇಳುವವರಾರಿಲ್ಲ, ಇದೇ ಸಮಯವೆಂದು ಗೋಮಿಥುನಕ್ಕೆ ತೊಂದರೆ ಕೊಡುತ್ತಿರುವೆ. ನಿನ್ನನ್ನು ಕೊಂದು

ಬಿಡುವೆನು. ಎತ್ತೆ ! ಒಂದೇ ಕಾಲಿನಲ್ಲಿ ನಿಂತಿರುವೆ. ಮೂರು ಕಾಲುಗಳು ಕಾಣು ವುದಿಲ್ಲ. ನಿನ್ನ ನೋಡಿ ದುಃಖಿಸುವ ನಮಗೆ ಗೋಚರಿಸದ ಯಾವನೋ ದೇವತೆಯೇ ಆಗಿರಬೇಕು. ನೀನಿನ್ನು ದುಃಖಿಸಬೇಡ. ಇವನ ಭಯ ಹೋಯಿತೆಂದು ತಿಳಿ. ಅಮ್ಮ ಗೋಮಾತೆ ! ನೀನು ಯಾರಮ್ಮ ? ಅಳಬೇಡ. ದುಃಖಿತರ ದುಃಖವನ್ನು ಹೋಗಲಾಡಿಸುವುದೇ ರಾಜರ ಮುಖ್ಯ ಧರ್ಮ. ಪ್ರಾಣಿಹಿಂಸಕನಾದ ಇವನನ್ನು ಕೊಲ್ಲುವೆನು.

**ಎತ್ತು (ಯಮಧರ್ಮ)** :– ರಾಜ ! ನೀನೆಷ್ಟೇ ಆಗಲಿ ಪಾಂಡವರ ವಂಶಜ. ವಂಶಕ್ಕೆ ತಕ್ಕಮಾತಾಡಿದೆ. ಜೀವರಾದವರ ಶೋಕಕ್ಕೆ ಕಾರಣ ಯಾವುದು ? ಒಂದೊಂದು ಕಡೆ ಒಂದೊಂದು ರೀತಿಯಾಗಿ ಹೇಳಿರುವುದರಿಂದ ವೇದವ್ಯಾಕ್ಯಗಳಿಗನು ಸಾರವಾಗಿ ಇದೇ ಕಾರಣವೆಂದು ಹೇಳಲು ಬರುವುದಿಲ್ಲ. ನಿಶ್ಚಯಿಸಲು ಕಷ್ಟವಾಗಿದೆ. ಜೀವನು ತನ್ನ ದುಃಖಕ್ಕೆ ತಾನೇ ಕಾರಣನೆಂದು ಕೆಲವರು ಹೇಳುತ್ತಾರೆ. ಪ್ರಕೃತಿ ಪುರುಷರು ಭಿನ್ನರೆಂಬ ಜ್ಞಾನವಿಲ್ಲವಾದ್ದರಿಂದ ದುಃಖವಾಗುವುದೆಂದು **ಹೇಳುವ ಸಾಂಖ್ಯರು** ಅಂತಃಕರಣವೇ ದುಃಖಕ್ಕೆ ಕಾರಣವೆನ್ನುವರು. ಮತ್ತೆ ಕೆಲವರು ಅದೃಷ್ಟವು ದುಃಖಕ್ಕೆ ಕಾರಣವೆನ್ನುವರು. ಇತರರು ಪುಣ್ಯಪಾಪಗಳೇ ಸುಖದುಃಖ ಗಳಿಗೆ ಕಾರಣವೆನ್ನುವರು. **ಚಾರ್ವಾಕರೇ** ಮೊದಲಾದವರು ಸ್ವಭಾವವೇ ದುಃಖ ಜನಕವೆನ್ನುವರು. ಜ್ಞಾನಿಗಳಾದ **ವೇದಾಂತಿಗಳು ಶ್ರೀಹರಿಯೇ ದುಃಖಕ್ಕೆ ಕಾರಣವೆನ್ನುವರು**. ಮತ್ತೆ ಕೆಲವರು ಪ್ರಕೃತಿಯಿಂದ ಆವರಿಸಲ್ಪಟ್ಟಿರುವ ಪ್ರಯುಕ್ತ ಜೀವರು ದುಃಖಕ್ಕೆ ಗುರಿಯಾಗುತ್ತಿರುವರು ಎಂದು ಸಿದ್ಧಾಂತಿಸಿರುವರು. ಮಾಯಾ ವಾದಿಗಳು ಸತ್ (ಇರುವುದು), ಅಸತ್ (ಇಲ್ಲದಿರುವುದು) ಮತ್ತು ಸದಸತ್ (ಇದ್ದೂ ಇಲ್ಲದಿರುವುದು) ಎಂದು ಹೇಳಲಿಕ್ಕೆ ಬಾರದ ಭಾವ ಪದಾರ್ಥವೆನಿಸುವ ಅಜ್ಞಾನದಿಂದ ಕ್ಲೇಶವಾಗುವುದೆಂದು ನಿಶ್ಚಯಿಸಿರುವರು. ಇವುಗಳಲ್ಲಿ ಶ್ರುತಿ ಸ್ಮೃತಿ ಗಳಿಗೆ ಸಮ್ಮತವಾದುದು ಯಾವುದೆಂಬುದನ್ನು ರಾಜನೇ ! ನೀನೇ ನಿಶ್ಚಯಿಸಿ ತಿಳಿ.

ಹೀಗೆ 'ಧರ್ಮನು ಹೇಳುತ್ತಿರುವಾಗ ಪರೀಕ್ಷಿದ್ರಾಜನು ಏಕಾಗ್ರಚಿತ್ತದಿಂದ ಚಿಂತಿಸಿದನು. ಧರ್ಮಪ್ರಭುವೇ ಎತ್ತಿನ ರೂಪದಿಂದ ಮಾತಾಡುತ್ತಿರುವನೆಂಬುದು ಗೊತ್ತಾಯಿತು. ಶ್ರೀಹರಿಯು ಆತ್ಮ, ದೈವ, ಕರ್ಮ, ಸ್ವಭಾವನೆಂದೂ, ಊಹಿಸ ಲಾಗದವನೆಂದೂ, ಅಪ್ರಸಿದ್ಧನಾದ್ದರಿಂದ ಅನಿರ್ವಾಚ್ಯನೆಂದೂ, ವೇದಗಳಲ್ಲಿ ಹೇಳಲ್ಪಟ್ಟಿರುವುದರಿಂದ ಜೀವರ ಕರ್ಮಕ್ಕೆ ಅನುಸಾರವಾಗಿ ಫಲವನ್ನು ಕೊಡುವ ಶ್ರೀಹರಿಯೇ ಜೀವರ ಕ್ಲೇಶಕ್ಕೆ ಮುಖ್ಯಕಾರಣನೆಂದು ವಿಮರ್ಶೆ ಮಾಡಿ ತಿಳಿದನು.

**ಪರೀಕ್ಷಿತ್** . (ಎತ್ತನ್ನು ಕುರಿತು) ಧರ್ಮವನ್ನರಿತ ನೀನು ಧರ್ಮವನ್ನೇ

ಹೇಳುತ್ತಿರುವೆ. ಆದ್ದರಿಂದ ನೀನು ಯಮಧರ್ಮನೇ ಇರಬೇಕು. ನಮ್ಮನ್ನು ಮೋಹಗೊಳಿಸಲು ಎತ್ತಿನ ರೂಪದಲ್ಲಿರುವೆ. ಅಧರ್ಮ ಮಾಡುವವನು ಹೊಂದುವ ನರಕಗಳನ್ನು ಅವನ ದೋಷವನ್ನು ಬಾಯಲ್ಲಾಡಿದವನೂ ಹೊಂದುವನು ಆದರೆ ದುಷ್ಟನ ಅಧರ್ಮವನ್ನು ಹೇಳುವುದು ಧರ್ಮವೇಸರಿ. ಸಜ್ಜನರು ಮಾಡಿದ ಅಧರ್ಮವನ್ನು ಬಾಯಲ್ಲಾಡಿದರೆ ಅವನಿಗೆ ಪಾಪ ಬರುವುದು. ಈ ಸೂಕ್ಷ್ಮವನ್ನು ಅರಿತ ನೀನು ನಿನ್ನ ವಿರೂಪಕ್ಕೆ ಕಾರಣವನ್ನು ಹೇಳದಿರುವುದೂ ಧರ್ಮವೇ. ಅಥವಾ ನಿನಗೆ ಗೊತ್ತಿದ್ದರೂ ಕ್ಲೇಶಕ್ಕೆ ಕಾರಣವಾದ ಸ್ವತಂತ್ರ ಹರೀಚ್ಛೆಯನ್ನು ಜನರು ತಿಳಿಯಲಾರರು ಎಂಬುದನ್ನು ತಿಳಿಸುವುದಕ್ಕಾಗಿ ನೀನು "ನನಗೆ ತಿಳಿಯದು" ಎಂದು ಹೇಳಿರುವೆ. ಕೃತಯುಗದಲ್ಲಿ ನಿನ್ನ ತಪಸ್ಸು, ಶುಚಿತ್ವ, ದಯೆ ಮತ್ತು ಸತ್ಯ ಎಂಬ ನಾಲ್ಕು ಪಾದಗಳೂ ಪೂರ್ಣವಾಗಿದ್ದುವು. ಅವುಗಳಲ್ಲಿ ಅಹಂಕಾರದಿಂದ ತಪಸ್ಸು, ವಿಷಯಾಸಕ್ತಿಯಿಂದ ಶುಚಿತ್ವ, ಮದದಿಂದ ದಯೆ ಮುರಿದು ಬಿದ್ದಿವೆ ಉಳಿದಿರುವುದು ಸತ್ಯವೆಂಬ ಒಂದೇಪಾದ. ಅದನ್ನೂ ಕಲಿಯು ಮುರಿಯ ಬೇಕೆಂದಿರುವನು. ಭೂದೇವಿಯು ಹರಿಯು ಕಣ್ಮರೆಯಾದ ಮೇಲೆ ಭಾಗ್ಯಹೀನೆಯಂತೆ ಕಣ್ಣೀರಿಡುತ್ತಿರುವಳು.

**ಸೂತ :** ಹೀಗೆ ಈ ಇಬ್ಬರನ್ನೂ ಸಮಾಧಾನ ಮಾಡಿದ ಮೇಲೆ ಪರೀಕ್ಷಿದ್ರಾಜನು ಕಲಿಯನ್ನು ಕೊಲ್ಲಲು ಕತ್ತಿ ಹಿರಿದನು, ಕೂಡಲೇ ಕಲಿಯು ನಡುಗಿ ರಾಜನ ಪಾದಗಳಲ್ಲಿ ಮೊರೆಬಿದ್ದನು. ಕಲಿಯು ಅಲ್ಪರವಿಷಯದಲ್ಲಿ ಶೂರ. ವೀರರ ವಿಷಯದಲ್ಲಿ ಭೀರು.

**ಪರೀಕ್ಷಿತ್ :** ಕಲಿಯೆ ! ಶರಣಾಗತನಾದ ನಿನ್ನನ್ನು ಕೊಲ್ಲುವುದಿಲ್ಲ. ನೀನಿದ್ದ ಕಡೆ ಹಾಳು ಆದ್ದರಿಂದ ನಮ್ಮ ರಾಷ್ಟ್ರದಲ್ಲಿ ನೀನಿರಲಾಗದು.

**ಕಲಿ :** ನಾನು ಎಲ್ಲೆಲ್ಲಿ ವಾಸಿಸಬಹುದೆಂಬುದನ್ನು ತಿಳಿಸು. ಅಲ್ಲಿ ನಿನ್ನ ಅಪ್ಪಣೆ ಮೀರದಂತೆ ಇರುವೆನು.

**ಪರೀಕ್ಷಿತ್ :** ಜೂಜು, ಮದ್ಯಪಾನ, ವ್ಯಭಿಚಾರ ಸ್ತ್ರೀಯರು, ಪ್ರಾಣಿಗಳ ಕೊಲೆ ಈ ನಾಲ್ಕು ಅಧರ್ಮಗಳು ಇರುವ ಸ್ಥಳಗಳಲ್ಲಿ ವಾಸಮಾಡು.

**ಸೂತ :** ಕಲಿಯು ಮತ್ತೊಂದು ಸ್ಥಾನವನ್ನು ಕೊಡಬೇಕೆಂದು ಯಾಚಿಸಿದ. ರಾಜನು ಬಂಗಾರವಿದ್ದೆಡೆ ವಾಸಿಸೆಂದನು ಈ ಐದು ಪದಾರ್ಥಗಳ ಬಳಕೆಯಿಂದ ಸುಳ್ಳು, ಅಹಂಕಾರ, ವಿಷಯಾಭಿಲಾಷೆ, ರಾಜಸವೃತ್ತಿ ಮತ್ತು ಪರಸ್ಪರ ಶತ್ರುತ್ವ ಬೆಳೆಯುವುದು. ಕಲಿಯು ಉಕ್ತ ಸ್ಥಾನಗಳಲ್ಲಿ ನಿಂತನು. ಆದ್ದರಿಂದ ಮೋಕ್ಷಾದಿ

ಪುರುಷಾರ್ಥವನ್ನು ಸಂಪಾದಿಸಬೇಕೆಂಬ ಸುಜೀವರು ಎಂದೂ ಇವುಗಳನ್ನು ಸೇವಿಸ ಬಾರದು. ಹೀಗೆ ರಾಜನು ಕಲಿಯನ್ನು ನಿಗ್ರಹಿಸಿ ಧರ್ಮದ ಮೂರು ಪಾದಗಳನ್ನೂ ಕೊಡಿಸಿಕೊಟ್ಟು, ಭೂದೇವಿಯನ್ನು ಸಮಾಧಾನ ಮಾಡಿ ಕೀರ್ತಿಯನ್ನು ಗಳಿಸಿ ವಿರಾಜಿಸುತ್ತಿರುವನು. ಅವನು ರಾಜ್ಯವಾಳುತ್ತಿರುವ ಈ ಸಮಯದಲ್ಲೇ ನೀವು ಸತ್ರಯಾಗವನ್ನು ಮಾಡುತ್ತಿರುವಿರಿ.

## ಹದಿನೇಳನೆಯ ಅಧ್ಯಾಯ ಮುಗಿದುದು

**ಸೂತ :** ಒಂದು ದಿನ ಪರೀಕ್ಷಿದ್ರಾಜನು ಬೇಟೆ ಯಾಡಲು ಕಾಡಿಗೆ ಬಂದು ಒಂದು ಮೃಗವನ್ನು ಬೆನ್ನಟ್ಟಿ ಹೋದ. ಮೃಗ ದೊರೆಯಲಿಲ್ಲ. ಸಂಚಾರದಿಂದ ಬಳಲಿದ. ಹಸಿವೆ ಹೆಚ್ಚಾಯಿತು. ನೀರನ್ನು ಹುಡುಕಿದ ಸಿಗಲಿಲ್ಲ. ಅಲ್ಲಿದ್ದ ಆಶ್ರಮ ವನ್ನು ನೋಡಿ ಆದರೊಳಗೆ ಹೋದನು. ಅಲ್ಲಿ ಋಷಿಗಳೊಬ್ಬರು ಅಸಂಪ್ರಜ್ಞಾತ ಸಮಾಧಿಯಲ್ಲಿ ಕುಳಿತ್ತಿದ್ದರು. ಇದು ರಾಜನಿಗೆ ತಿಳಿಯದು. ನೀರು ಬೇಕೆಂದು ಕೇಳಿದ. ಋಷಿಗಳಿಗೆ ಹೊರಜಗತ್ತಿನ ಜ್ಞಾನವೇ ಇರಲಿಲ್ಲ. ಆದ್ದರಿಂದ ರಾಜನನ್ನು ಸನ್ಮಾನಿಸ ಲಿಲ್ಲ. ನೀರಡಿಸಿದ್ದ ರಾಜನು ಆದನ್ನು ತಿರಸ್ಕಾರವೆಂದು ಬಗೆದು ಆ ಋಷಿಯ ಮೇಲೆ ಕುಪಿತನಾದನು. ಶೌನಕರೇ! ಪರೀಕ್ಷಿದ್ರಾಜನಿಗೆ ಹಿಂದೆ ಎಂದೂ ಬ್ರಾಹ್ಮಣರ ವಿಷಯದಲ್ಲಿ ಈ ಬಗೆಯ ಕೋಪವಾಗಲೀ, ನನ್ನ ಅಧೀನವಾಗಲಿಲ್ಲವಲ್ಲ ಎಂಬ ಮಾತ್ಸರ್ಯವಾಗಲಿ ಬಂದಿರಲಿಲ್ಲ. ಈಗ ಕಲಿ ತಲೆಯಮೇಲಿರುವ ಬಂಗಾರದ ಕಿರೀಟ ದಲ್ಲಿದ್ದು ಹಸಿವು ಬಾಯಾರಿಕೆ ಉಂಟುಮಾಡಿ ಸಾತ್ವಿಕರ ಅಪಚಾರಮಾಡುವಂತೆ ಪ್ರೇರಿಸಿದನು. ರಾಜನು ಕುಪಿತನಾಗಿ ಹಿಂತಿರುಗುವಾಗ ಸತ್ತು ಬಿದ್ದಿದ್ದ ಹಾವೊಂದನ್ನು ಬಿಲ್ಲಿನಕೊನೆಯಿಂದ ಎತ್ತಿ ಆ ಋಷಿಗಳ ಕೊರಳಿಗೆ ಹಾಕಿ ನಗರಕ್ಕೆ ಹಿಂತಿರುಗಿದನು. ಆಗ ರಾಜನು "ಋಷಿಯು ನಿಜವಾಗಿಯೂ ಬಹಿರ್ವ್ಯಾಪಾರ ಶೂನ್ಯನಾಗಿರುವನೆ ? ಅಥವಾ ಕ್ಷತ್ರಿಯನಾದ ಈ ಅಲ್ಪನಿಂದ ನಮಗೇನಾಗಬೇಕು ಎಂದು ಉದಾಸೀನವಾಗಿ ಸಮಾಧಿಸ್ಥನಂತೆ ನಟಿಸುತ್ತಿರುವನೇ ?" ಎಂದು ಆಲೋಚಿಸಿದನು.

ಆ ಋಷಿಗಳಿಗೆ ಶೃಂಗಿಯೆಂಬ ಮಗನಿದ್ದನು. ರಾಜನು ಬಂದು ಹೋದ ಮೇಲೆ ಈತನು ಬಂದು ತಂದೆಯ ಕೊರಳಲ್ಲಿದ್ದ ಹಾವನ್ನು ನೋಡಿ, ಇದು ರಾಜನ ಕೆಲಸವೇ ಸರಿಯೆಂದು ಕುಪಿತನಾಗಿ "ಏನಿದು ! ಎಂಜಲನ್ನವನ್ನು ತಿಂದು ಜೀವಿಸುವ ಕಾಗೆ ಯಂತೆ ಕ್ಷತ್ರಿಯರು ಅಧರ್ಮ ಮಾಡುತ್ತಿರುವರಲ್ಲ ! ಸಾಕಿದ ನಾಯಿ ಕಾಲು ಕಚ್ಚು ವಂತೆ ಬ್ರಾಹ್ಮಣರ ಮನೆಯ ಬಾಗಿಲನ್ನು ಕಾಯಬೇಕಾದ ಈ ರಾಜರು ಯಜಮಾನ ವಿಪ್ರನಿಗೇ ದ್ರೋಹಮಾಡುತ್ತಿರುವರಲ್ಲ! ಧರ್ಮರಕ್ಷಕನಾದ ಶ್ರೀಕೃಷ್ಣನು ಪರಂಧಾಮಕ್ಕೆ ಪಯಣಿಸಿದ್ದರಿಂದ ಇವರು ಮಾರ್ಗ ತಪ್ಪಿ ಶಿಕ್ಷಕರಿಲ್ಲವೆಂದು ಹೆಚ್ಚಿ ಹೋಗಿದ್ದಾರೆ. ಇರಲಿ, (ದರ್ಭೆಯನ್ನು ಕೈಲಿಡಿದು ಆಚಮನ ಮಾಡಿ) ಧರ್ಮವನ್ನು ಮೀರಿ ನಮ್ಮ

ಕುಲವನ್ನೇ ದಹಿಸಲು ಹೊರಟ ಆ ರಾಜನನ್ನು ಇಂದಿಗೆ ಏಳನೆಯ ದಿನ ನನ್ನ ಶಾಪ ದಿಂದ ಪ್ರೇರಿತನಾದ ತಕ್ಷಕನು ವಿಷದಿಂದ ಸುಡಲಿ" ಎಂದು ಶಪಿಸಿದನು.

**ಶಮೀಕ ;** (ಇದನ್ನು ತಿಳಿದು) ಮಗನೇ ! ನೀನು ದೊಡ್ಡ ಪಾಪ ಮಾಡಿದೆ. ಮಾನವರಿಗೆ ದೇವರೆನಿಸಿದ ರಾಜನಿಗೆ ಅಪರಾಧ ಮಾಡುವುದೆ ? ದುಷ್ಟರ ಬಾಧೆ ಯಿಲ್ಲದೆ ನಾವು ಸುರಕ್ಷಿತರಾಗಿರುವುದು ರಾಜನಿಂದಲ್ಲವೆ ? ರಾಜಾಂತರ್ಯಾಮಿ ಚಕ್ರ ಪಾಣಿ ಶ್ರೀ ಹರಿಯು ರಕ್ಷಿಸದೇ ಹೋದರೆ ಕಳ್ಳರು ಹೆಚ್ಚಿ ಸಜ್ಜನರು ಒಂದು ಕ್ಷಣದಲ್ಲಿ ನಾಶವಾಗುವರು. ರಾಜ್ಯವು ಅರಾಜಕವಾಗಲು ನಾವು ಕಾರಣರಾದೆವು. ಅದರಿಂದ ಅಪಾರ ಪಾಪ ಬರುವುದು. ದುಷ್ಟರು ಹೆಚ್ಚಿ ಹೆಣ್ಣುಮಕ್ಕಳನ್ನು ಅವಮಾನಿಸುವರಲ್ಲ ! ಆಸ್ತಿ ಪಾಸ್ತಿ ಲೂಟಿ ಮಾಡುವರಲ್ಲ ! ಹಿಂದೂ ಧರ್ಮ ಹ್ರಾಸವಾಗುವುದಲ್ಲ ! ಹೊನ್ನು ಹೆಣ್ಣುಗಳನ್ನು ಕಾಮಿಸುವವರು ನಾಯಿಗಳಂತೆ ವರ್ತಿಸಿ ವರ್ಣಸಾಂಕರ್ಯ ವಾಗುವುದಲ್ಲ ! ಹರಿಭಕ್ತನಾದ ಚಕ್ರವರ್ತಿ ನಮ್ಮಲ್ಲಿಗೆ ಬಂದಿದ್ದ. ಅಂತಹವನಿಗೆ ಶಾಪಕೊಡಬಹುದೆ ? ನಾರಾಯಣನೆ! ಬುದ್ಧಿಯಿಲ್ಲದ ಈ ಹುಡುಗನ ಶಾಪವನ್ನು ಕ್ಷಮಿಸು. ರಾಜನು ತಿರಸ್ಕೃತನಾಗಲಿ, ಶಪ್ತನಾಗಲಿ, ತಾಡಿತನಾಗಲಿ ಅವನು ಪ್ರತೀಕಾರ ಮಾಡುವವನಲ್ಲ. ಅಶಕ್ತರಿಗೆ ಕ್ಷಮೆಯೇ ಬಲ. ಶಕ್ತರಿಗೂ ಕ್ಷಮೆಯೇ ಭೂಷಣ.

**ಸೂತ :** ಶೌನಕರೇ ! ಜ್ಞಾನಿಗಳಾದ ಶಮೀಕ ಋಷಿಗಳು ಶಪಿಸಿದ ಮಗನ ತಪ್ಪಿಗೆ ಪಶ್ಚಾತ್ತಾಪ ಪಟ್ಟರೇ ಹೊರತು ತಮಗೆ ದ್ರೋಹಿಯಾದ ರಾಜನು ಅಪರಾಧಿ ಯೆಂದು ಸ್ಮರಿಸಲಿಲ್ಲ. ಹರಿಭಕ್ತರೇ ಹೀಗೆ.

**ಹದಿನೆಂಟನೆಯ ಅಧ್ಯಾಯ ಮುಗಿದುದು**

ಇತ್ತ ಪರೀಕ್ಷಿದ್ರಾಜನು ಊರಿಗೆ ಹಿಂತಿರುಗಿ ಬರುತ್ತ ತಾನು ಮಾಡಿದ ವ್ಯಾಪಾರಕ್ಕಾಗಿ ಮನಸ್ಸಿನಲ್ಲಿ ಪಶ್ಚಾತ್ತಾಪ ಪಡುತ್ತಾನೆ :

**ಪರೀಕ್ಷಿತ್ ,** ಅಯ್ಯೋ ! ಬ್ರಾಹ್ಮಣನಿಗೆ ಮಾಡಿದ ಅವಮಾನ ಶ್ರೀ ಹರಿಗೆ ಮಾಡಿದಂತೆಯೇ ಆಯಿತು. ಇದರಿಂದ ವಿಪತ್ತು ಬಂದೇ ಬರುತ್ತದೆ. ಬರಲಿ. ರಾಜ್ಯ ಕೋಶ, ಸೈನ್ಯ, ಸಕಲವೂ ಈಗಲೇ ಸುಟ್ಟುಹೋಗಲಿ. ತಿರುಗಿ ನನಗೆ ಇಂತಹ ಪಾಪಬುದ್ಧಿ ಬರದಿರಲಿ.

**ಸೂತ ,** ತಕ್ಷಕ ಸರ್ಪವು ಕಚ್ಚಿ ರಾಜನು ಸಾಯಲಿ ಎಂಬ ಋಷಿಪುತ್ರ ಶೃಂಗಿಯು ಶಾಪ ಕೊಟ್ಟ ಸಂಗತಿ ರಾಜನಿಗೆ ತಿಳಿಯಿತು. ಅವನು "ಒಳ್ಳೆಯದೇ ಆಯಿತು. ಶಾಪದಿಂದ ವೈರಾಗ್ಯ ಬಂದಂತಾಯಿತು. ಆದದ್ದೆಲ್ಲ ಒಳಿತೇ ಆಯಿತು."

ಎಂದು ತೀರ್ಮಾನಿಸಿ, ಈ ಲೋಕಸ್ವರ್ಗಲೋಕಗಳು ದುಃಖಮಯಗಳೇ. ಹರಿಪಾದ ಸೇವೆಯೊಂದೇ ಮೋಕ್ಷಕ್ಕೆ ಕಾರಣವೆಂದು ತಿಳಿದು ರಾಜ್ಯಾದಿಗಳಲ್ಲಿ ಅಭಿಮಾನವನ್ನು ಬಿಟ್ಟು ಗಂಗಾನದಿಯಲ್ಲಿ ದಕ್ಷಿಣ ತೀರದ ಸಮೀಪದಲ್ಲಿ ರಚಿತವಾಗಿದ್ದ ಪ್ರಾಸಾದದಲ್ಲಿ ಪ್ರಾಯೋಪವೇಶಕ್ಕೆ ಕುಳಿತು ಹರಿಧ್ಯಾನಾಸಕ್ತನಾದನು.

ತೀರ್ಥವನ್ನು ಶುದ್ಧಿ ಮಾಡಲು ತೀರ್ಥಯಾತ್ರೆಗೆ ಹೊರಟ, ಜಗತ್ತನ್ನೇ ಪಾವನ ಮಾಡುವ ಅತ್ರಿ, ವಸಿಷ್ಠ, ವೇದವ್ಯಾಸದೇವರು, ನಾರದರೇ ಮೊದಲಾದ ದೇವರ್ಷಿಗಳು, ಬ್ರಹ್ಮರ್ಷಿಗಳು, ರಾಜರ್ಷಿಗಳು ಅವರವರ ಶಿಷ್ಯರೊಂದಿಗೆ ಅಲ್ಲಿಗೆ ಬಂದರು. ರಾಜನು ಅವರಿಗೆಲ್ಲ ನಮಿಸಿ ಸತ್ಕಾರ ಮಾಡಿದನು.

**ಪರೀಕ್ಷಿತ್ :** ಮಹಾನುಭಾವರೇ ! ನಾನು ತಮ್ಮ ಅನುಗ್ರಹಕ್ಕೆ ಪಾತ್ರನಾದ್ದರಿಂದ ಧನ್ಯನಾದೆ. ನನಗೆ ಬಂದ ವಿಪ್ರಶಾಪವು ವೈರಾಗ್ಯಕ್ಕೆ ಕಾರಣವಾಗಿ ಶ್ರೀ ಹರಿಯಲ್ಲಿ ಮನಸ್ಸು ಪ್ರಸಕ್ತವಾಗುವಂತೆ ಮಾಡಿದೆ. ವಿಷಯ ಲೋಲುಪನಿಗೆ ಭಯ. ಹರಿಭಕ್ತನಿಗೆ ಭಯವೆಲ್ಲಿ ಬಂತು ? ಈಗ ತಾವು ನನ್ನನ್ನು ಬಿಟ್ಟು ಹೋಗಬಾರದು. ಗಂಗೆಯೂ ನನ್ನನ್ನು ಬಿಡದಿರಲಿ. ತಕ್ಷಕನು ನನ್ನ ಕಚ್ಚಿ ಸುಟ್ಟು ಬ್ರಾಹ್ಮಣನ ಶಾಪವನ್ನು ಸತ್ಯಮಾಡಲಿ. ನೀವು ಹರಿಯ ನಾಮಗಳನ್ನೇ ಹಾಡಿರಿ. ನನಗೆ ಮುಂದೆ ಯಾವ ಜನ್ಮವೇ ಬರಲಿ. ಹರಿಯಲ್ಲಿ, ಅವನ ಭಕ್ತರಲ್ಲಿ ಆಸಕ್ತಿ, ಪ್ರೇಮ ಬೆಳೆಯಲಿ. ಸರ್ವಬ್ರಾಹ್ಮಣರಿಗೂ ನಮಸ್ಕಾರ, (ರಾಜನು ಜನಮೇಜಯನಿಗೆ ಪಟ್ಟಗಟ್ಟಿದನು. ರಾಜವೈಭವವನ್ನು ಕಳಚಿ, ಪವಿತ್ರವನ್ನಿಟ್ಟುಕೊಂಡು ಕೃಷ್ಣಾಜಿನವನ್ನು ಹೊದ್ದು ದರ್ಭೆಯ ಮೇಲೆ ಕುಳಿತನು. ಆಗ ದೇವತೆಗಳು ರಾಜನ ಮೇಲೆ ಪುಷ್ಪವೃಷ್ಟಿ ಮಾಡಿದರು. ದೇವ ದುಂದುಭಿಗಳು ಮೊಳಗಿದುವು.)

**ಮಹರ್ಷಿಗಳು :** ರಾಜರ್ಷಿಶ್ರೇಷ್ಠನೇ ! ನಿನ್ನ ವೈರಾಗ್ಯ, ಹರಿಯನುಸರಣೆ ಆಶ್ಚರ್ಯಕರವಲ್ಲ. ನೀನು ದೇಹ ಬಿಟ್ಟು ಹರಿಯನ್ನು ಹೊಂದುವವರೆಗೂ ನಾವಿಲ್ಲಿಯೇ ಉಳಿಯುವೆವು.

**ಸೂತ :** ಜ್ಞಾನಿಗಳ ಈ ಅಮೃತವಾಣಿಯಿಂದ ವಿಪ್ರಶಾಪ ನಿಮಿತ್ತ ಸರ್ಪವು ಕಚ್ಚಿದರೂ ರಾಜನಿಗೆ ದುರ್ಮರಣವು ಬರುವುದು ತಪ್ಪಿತು.

**ಪರೀಕ್ಷಿತ್ :** ಸಜ್ಜನಾನುಗ್ರಹಶೀಲರೇ ! ಸಾಯಲಿರುವವನು ಮಾಡಲೇ ಬೇಕಾದ ಕರ್ತವ್ಯವೇನು ? ವಿಮರ್ಶಿಸಿ ಅನುಗ್ರಹಿಸಿರಿ.

**ಹತ್ತೊಂಭತ್ತನೆಯ ಅಧ್ಯಾಯ ಮುಗಿದುದು**

**ಸೂತ :** ಶ್ರೀ ಹರಿಯ ಪ್ರೇರಣೆಯಂತೆ ಆ ವೇಳೆಗೆ ಸರಿಯಾಗಿ ಶುಕಾ

ಚಾರ್ಯರು ಅಲ್ಲಿಗೆ ಬಂದರುವರು. ಅಸಾಮಾನ್ಯರೆ ? ಯಾವ ವಿಷಯದಲ್ಲಿಯೂ ಅಪೇಕ್ಷೆಯಿಲ್ಲದವರು. ಅನಪೇಕ್ಷರು ಅಂದರೆ ಅನಪ – ವಾಯುದೇವರಿಗೆ ಸ್ವಾಮಿಯಾದ ಹರಿ. ಅವನಲ್ಲಿ ಈಕ್ಷಾ – ನೋಟವುಳ್ಳವರು. ಸ್ವರೂಪಾನಂದದಿಂದ ತೃಪ್ತರು. ಯಾವ ಆಶ್ರಮದ ಚಿಹ್ನೆಯನ್ನೂ ಹೊರಗೆ ತೋರಿಸದೇ ಇರುವವರು. ದಿಗಂಬರರು. ರಾಜಧಾನಿಯ ಹುಡುಗರು ಇವರನ್ನು ನೋಡಿ ಸುತ್ತುವರೆದರು. ಹದಿನಾರು ವರ್ಷದ ತರುಣರು ಶುಕರು. ಅವರ ದೇಹ ಕೋಮಲ. ಉತ್ತಮವಾದ ತೇಜಸ್ಸು. ಇವರನ್ನು ಹುಡುಗರೂ, ಸ್ತ್ರೀಯರೂ ಮುತ್ತಿಕೊಂಡು ಗೇಲಿ ಮಾಡುತ್ತಿದ್ದರು. ಶುಕರು ರಾಜನಿರುವ ಮಂದಿರ ಪ್ರವೇಶಿಸಿದರು. ಕೂಡಲೇ ಋಷಿಗಳು ಭಕ್ತಿಯಿಂದ ಎದ್ದು ನಿಂತರು. ಪರೀಕ್ಷಿದ್ರಾಜನು ಭಕ್ತಿಯಿಂದ ಅವರನ್ನು ಪೂಜಿಸಿದನು. ಇದನ್ನು ಕಂಡು ಅಜ್ಞಾನಿಗಳಾದ ಹುಡುಗರೂ, ಹೆಂಗಸರೂ ಮೊದಲಾದವರೆಲ್ಲ ಹೆದರಿ ಹಿಂತಿರುಗಿ ಹೋದರು. ಋಷಿಗಳ ಮಧ್ಯದಲ್ಲಿ ಶಾಂತಮನಸ್ಕರಾಗಿ ಆಸನದಲ್ಲಿ ಕುಳಿತಿದ್ದ ಶುಕಾಚಾರ್ಯರ ಬಳಿಗೆ ರಾಜನು ಬಂದು ಶಿರಸಾ ನಮಸ್ಕರಿಸಿ ಕೈಮುಗಿದುಕೊಂಡು

**ಪರೀಕ್ಷಿತ್ :** ಬ್ರಹ್ಮಜ್ಞಾನಿಗಳೇ ! ತಾವು ಬಂದದ್ದರಿಂದ ನಾವು ಪವಿತ್ರರಾದೆವು. ತಮ್ಮ ದರ್ಶನ, ಸ್ಪರ್ಶನ, ಪಾದೋದಕ ಇವು ದೊರೆತಮೇಲೆ ಹೇಳುವುದೇನು? ಶ್ರೀವಿಷ್ಣುವಿನ ಸನ್ನಿಧಾನದಿಂದ ಅಸುರರು ನಾಶವಾಗುವಂತೆ, ತಮ್ಮ ಸಂನಿಧಾನದಿಂದ ಮಹಾಪಾಪಗಳೆಲ್ಲ ತಕ್ಷಣ ನಾಶ ಹೊಂದುವುವು. ಶ್ರೀಕೃಷ್ಣನು ನನಗೆ ಆಪ್ತಬಂಧುವು. ಇಲ್ಲವಾಗಿದ್ದರೆ ಯಾರಿಗೂ ಕಾಣಿಸದ, ಸಿದ್ಧಪುರುಷರಾದ ತಮ್ಮ ದರ್ಶನವು ಹೇಗೆ ತಾನೆ ಆಗುತ್ತಿತ್ತು ? ಅದರಲ್ಲೂ ಸಾಯಲಿರುವ ನನಗೆ ಸರ್ವಥಾ ಆಗುತ್ತಿರಲಿಲ್ಲ. ಆದ್ದರಿಂದ ತಮ್ಮ ದರ್ಶನವಾದ ಈ ಸಮಯದಲ್ಲೇ ಪ್ರಶ್ನಿಸುವೆನು. ಸಾಯಲಿರುವವನು ಬಿಡದೆ ಮಾಡಲೇ ಬೇಕಾದ ಕಾರ್ಯ ಯಾವುದು ? ಕೇಳಬಾರದ್ದು ಜಪಿಸಬಾರದ್ದು, ಸ್ಮರಿಸಬಾರದ್ದು ಯಾವುದು ? ಇದನ್ನು ಈಗಲೇ ಹೇಳಿಬಿಡಿ. ಏಕೆಂದರೆ ಜ್ಞಾನಿಗಳಾದ ತಾವು ಎಲ್ಲೂ, ಗೃಹಸ್ಥರ ಮನೆಯ ಬಾಗಿಲಲ್ಲೂ ಆಕಳು ಹಾಲು ಕರೆಯುವಷ್ಟು ಕಾಲಕ್ಕಿಂತ ಹೆಚ್ಚು ಕಾಲ ನಿಲ್ಲತಕ್ಕವರಲ್ಲ. ಆದ್ದರಿಂದ ಈಗಲೇ ಹೇಳಿಬಿಡಿ.

**ಸೂತ ಉವಾಚ :**

**ಶ್ಲೋಕ|| ಏವಮಾಭಾಷಿತಃ ಪೃಷ್ಟಃ ಸ ರಾಜ್ಞಾ ಶ್ಲಕ್ಷ್ಣಯಾ ಗಿರಾ |**
**ಪ್ರತ್ಯಭಾಷತ ಧರ್ಮಜ್ಞೋ ಭಗವಾನ್ ಬಾದರಾಯಣಿಃ ||**

ಹೀಗೆ ಪರೀಕ್ಷಿದ್ರಾಜನು ಮಧುರವಾದ ಮಾತಿನಿಂದ ಸಂಬೋಧಿಸಿ ಪ್ರಶ್ನಿಸಿದಾಗ ಗುರುಶಿಷ್ಯ ಸಂವಾದರೂಪವಾದ ಧರ್ಮವನ್ನು ಬಲ್ಲ ಪೂಜ್ಯರಾದ ಶುಕಾಚಾರ್ಯರು ಮಧುರವಾದ ಮಾತಿನಿಂದ ಉತ್ತರವನ್ನು ಹೇಳಿದರು.

**ಇಪ್ಪತ್ತನೆಯ ಅಧ್ಯಾಯ ಮತ್ತು ಪ್ರಥಮ ಸ್ಕಂಧ ಮುಗಿದುದು**

**ಶ್ರೀಶುಕ ಉವಾಚ :– ವರೀಯಾನೇಷ ತೇ ಪ್ರಶ್ನಃ ಕೃತೋ ಲೋಕಹಿತಂ ನೃಪ ।
ಆತ್ಮವಿತ್ಸಂಮತ: ಪುಂಸಾಂ ಶ್ರೋತವ್ಯಾದಿಷು ಯಃಪರಃ ॥ 11"**

ಶ್ರೀಶುಕರು ಹೇಳುತ್ತಾರೆ :— ಪರೀಕ್ಷಿದ್ರಾಜನೇ ! ಸಾಯಲಿರುವವನು ಮುಖ್ಯವಾಗಿ ಏನನ್ನು ಜಪಿಸಬೇಕು ? ಏನನ್ನು ಕೇಳಬೇಕು ? —ಎಂದು ನೀನು ಕೇಳಿದ ಪ್ರಶ್ನೆ ಬಹಳ ಉತ್ತಮವಾದುದು. ಇದರಿಂದ ನಿನಗೆ ಮಾತ್ರವಲ್ಲದೆ ಲೋಕಕ್ಕೆ ಹಿತವುಂಟಾಗುವುದು. ಬ್ರಹ್ಮಜ್ಞಾನಿಗಳೆನಿಸಿದ ಬ್ರಹ್ಮದೇವರೇ ಮೊದಲಾದವರಿಗೂ ಸಂಮತವಾದುದು. ಕೇಳಲು ಅರ್ಹವಾದ, ಧ್ಯಾನಾರ್ಹ ವಸ್ತುಗಳಲ್ಲಿ ಪರಮಾತ್ಮನೇ ಶ್ರೇಷ್ಠನಾಗಿರುವುದರಿಂದ ನೀನು ಮಾಡಿದ ಭಗವಂತನ ವಿಷಯಕವಾದ ಪ್ರಶ್ನೆ ಅತಿಶ್ರೇಷ್ಠ.

ಪರ–ಅಪರತತ್ತ್ವಗಳನ್ನು ತಿಳಿಯದೆ, ಪ್ರಕೃತಿ ಬದ್ಧರಾಗಿ ಕಾಮದಿಂದ ಗೃಹಸ್ಥಾಶ್ರಮಧರ್ಮಾನುಷ್ಠಾನ ಮಾಡುವವರಿಗೆ ಸಾವಿರಾರು ಕೇಳತಕ್ಕವುಗಳಿವೆಯೆಂದು ಹೇಳುವವರು ಅಜ್ಞಾನಿಗಳು. ಅವರು ರಾತ್ರಿ ನಿದ್ರೆ ಮಾಡುತ್ತ ಹಗಲು ದುಡ್ಡನ್ನು ಗಳಿಸುತ್ತ ಕುಟುಂಬ ಪೋಷಣೆ ಮಾಡುತ್ತ, ತಮ್ಮ ಯೌವನವನ್ನು ವಿಷಯ ಭೋಗಗಳನ್ನು ಅನುಭವಿಸುತ್ತ ಹಾಳು ಮಾಡಿಕೊಳ್ಳುವರು. ಇದರಿಂದ ಆತ್ಮ ನಾಶವಾಗುವುದು. ಮುಮುಕ್ಷುವು ಹರಿಕಥಾಶ್ರವಣ ಮಾಡುತ್ತ, ಹರಿಕೀರ್ತನೆ ಮಾಡಬೇಕು. ಅವನ ಗುಣಗಳನ್ನು ಧ್ಯಾನಿಸಬೇಕು. ಹೀಗೆ ಮಾಡದೇ ಹೋದರೆ ಸಂಸಾರವು ತಪ್ಪುವುದೇ ಇಲ್ಲ. ಪ್ರಭುವಾದ ಶ್ರೀಹರಿಯು ಸರ್ವತ್ರ ವ್ಯಾಪ್ತ, ಸರ್ವಾಭೀಷ್ಟ ಪ್ರದ, ನಿರತಿಶಯ ಗುಣಪೂರ್ಣ, ಪೂಜ್ಯ, ಸ್ಮರಣೆ ಮಾತ್ರದಿಂದ ಸಂಸಾರನಾಶಕ. ಇಂಥವನ ಮಹಿಮೆಯನ್ನು ಕೇಳಿ, ಮನನ ಮಾಡಿ, ಧ್ಯಾನದಿಂದ ಅಪರೋಕ್ಷವನ್ನು ಹೊಂದಬೇಕು. ಅವಸಾನ ಕಾಲದಲ್ಲಿ ಅವನನ್ನು ಸ್ಮರಿಸುತ್ತಾ ದೇಹವನ್ನು ಬಿಡುವವನ ಜನ್ಮ ಸಫಲವೆಂದು ಶಾಸ್ತ್ರಗಳು ಹೇಳುತ್ತಿವೆ.

ರಾಜನೇ ! ಈಗ ನಿನಗೆ ಹೇಳಬೇಕೆಂದಿರುವ ಭಾಗವತ ಪುರಾಣವನ್ನು ಕೃಷ್ಣಾವತಾರಕ್ಕೆ ಮೊದಲು ನಮ್ಮ ತಂದೆಯಿಂದ ಅಭ್ಯಾಸ ಮಾಡಿರುವೆನು. ಭಕ್ತರಲ್ಲಿ ನೀನು ಉತ್ತಮನಾದ್ದರಿಂದ ಅದನ್ನೇ ನಿನಗೆ ಹೇಳುವೆನು. ನಿರಂತರ ಹರಿನಾಮ ಸ್ಮರಣೆಯೇ ಮರಣ ಕಾಲದಲ್ಲಿ ಸ್ಮೃತಿ ತಂದುಕೊಡುವುದು. ವಿಷಯಾಸಕ್ತನಿಗೆ ದೀರ್ಘಾಯುಷ್ಯ ವಿದ್ದರೇನು ? ಹರಿಸ್ಮರಣೆ ಮಾಡಿದ ಗಳಿಗೆಯೇ ಶ್ರೇಷ್ಠ. ಹೆಚ್ಚು ಆಯುಷ್ಯವಿಲ್ಲವೆಂದು ನೀನು ಕಳವಳಿಸಬೇಡ. ಒಂದೇ ಮುಹೂರ್ತ (48 ನಿಮಿಷಗಳು) ಆಯುಷ್ಯವಿದ್ದ ಖಟ್ವಾಂಗರಾಜನು ಹರಿಯನ್ನು ಸ್ಮರಿಸಿ ಮುಕ್ತನಾಗಿ ಬಿಟ್ಟನು. ನಿನಗಾದರೋ ಏಳು ದಿನಗಳ ಆಯುಷ್ಯವಿದೆ. ಈ ಕಾಲದಲ್ಲಿ ಮುಕ್ತಿಸಾಧಕವಾದ ಭಾಗವತವನ್ನು ಕೇಳು.

ಅಂತ್ಯಕಾಲದಲ್ಲಿ ಹರಿಸ್ಮರಣೆ ಬರುವುದು. ಶ್ರೀ ಹರಿಯ ರೂಪವನ್ನು ಹೀಗೆ ಸ್ಮರಿಸಬೇಕು :– ಮನಸ್ಸನ್ನು ವಶಮಾಡಿಕೊಂಡು ಹರಿಯ ಪಾದವೇ ಮೊದಲಾದ ಒಂದೊಂದು ಅವಯವವನ್ನು ಧ್ಯಾನಿಸಿ ಅಭ್ಯಾಸಬಲದಿಂದ ಹರಿಯ ಸಮಗ್ರರೂಪವನ್ನು ಸ್ಮರಿಸಬೇಕು. ಈ ನಿರಂತರ ಧ್ಯಾನವು ಮನಸ್ಸಿನಲ್ಲಿರುವ ಅಭಿಮಾನವೆಂಬ ಕೊಳೆಯನ್ನೂ, ಅಜ್ಞಾನಾದಿಗಳನ್ನೂ ನಾಶಮಾಡುವುದು. ಹೀಗೆ ಧ್ಯಾನಿಸುವವನೇ ಧೀರ. ಅವನಿಗೇ ಅಪರೋಕ್ಷ ಮತ್ತು ಮೋಕ್ಷ ದೊರೆಯುವುದು.

**ಪರೀಕ್ಷಿತ್ :–** ಈ ಬಗೆಯ ಧ್ಯಾನಮಾಡುವುದನ್ನು ಕಲಿಯುವ ಬಗೆ ಹೇಗೆ?
**ಶುಕ :–** ಮೊದಲು ಆಸನಜಯವನ್ನು ಹೊಂದಿ, ಶ್ವಾಸವನ್ನು ವಾಯುದೇವರ ಅನುಗ್ರಹದಿಂದ ಜಯಿಸಿ, ಇಂದ್ರಿಯಗಳನ್ನು ವಶಮಾಡಿಕೊಂಡು ಧ್ಯಾನಮಾಡುವ ಅಭ್ಯಾಸಮಾಡಬೇಕು.

**ಪರೀಕ್ಷಿತ್ :–** ಯಾವುದನ್ನು ಧ್ಯಾನಮಾಡಬೇಕು ?

**ಶುಕ :** ಭಗವಂತನ ಸ್ಥೂಲಪ್ರತಿಮೆಯನ್ನು ಧ್ಯಾನಿಸಬೇಕು. ಹೇಗೆಂದರೆ ಬ್ರಹ್ಮಾಂಡವೇ ಹರಿಯ ಅತ್ಯಂತ ಸ್ಥೂಲವಾದ ಪ್ರತಿಮೆ. ಇದರೊಳಗೆ ವಿಶೇಷವಾಗಿ ಪ್ರಕಾಶಿಸುತ್ತ ವ್ಯಾಪ್ತನಾಗಿ, ಸರ್ವೋತ್ತಮನೂ, ಸಕಲಕರ್ಮಫಲಪ್ರದನೂ ಆದ ಶ್ರೀ ಹರಿಯು ಇರುವನು. ಇವನನ್ನು ಕುರಿತು ಮಾಡಿದ ಧಾರಣೆಯೇ ಮನಸ್ಸಿನ ಕೊಳೆ(ಕಾಮ)ಯನ್ನು ಪರಿಹರಿಸಲು ಸಮರ್ಥವಾಗುವುದು.

ಬ್ರಹ್ಮಾಂಡದಲ್ಲಿರುವ ಪಾತಾಳಾದಿ ಲೋಕಗಳು ಆ ಪರಮಾತ್ಮನ ಪ್ರತಿಮೆಯಲ್ಲಿ ಕಾಣುವ ಅವಯವಗಳು. ಅವು ಪರಮಾತ್ಮನ ಸ್ವರೂಪಭೂತವಾದ ಅಪ್ರಾಕೃತ ಅವಯವಗಳಿಂದ ಹುಟ್ಟಿ ಅವುಗಳನ್ನೇ ಆಶ್ರಯಿಸಿವೆ. ಅವು ಪರಮಾತ್ಮನ ಅವಯವಗಳಂತೆ ಜ್ಞಾನಾನಂದ ಸ್ವರೂಪಗಳಲ್ಲ. ಹೀಗೆಯೇ ಇಂದ್ರಾದಿ ದೇವತೆಗಳೂ ಶ್ರೀ ಹರಿಯ ಅವಯವಗಳಿಂದ ಹುಟ್ಟಿ, ಅವನ್ನೇ ಆಶ್ರಯಿಸಿರುವರು.

ಪರಮಾತ್ಮನ ಸ್ಥೂಲಪ್ರತಿಮೆಯ ಪಾದದ ಬುಡವೇ ಪಾತಾಳ. ಪಾದಾಗ್ರವೇ ರಸಾತಳ. ಪಾದದ ಗೆಣ್ಣುಗಳೇ ಮಹಾತಳ, ಮೀನಖಂಡ ತಲಾತಲ. ಮೊಳಕಾಲುಗಳೆ ಸುತಲ, ತೊಡಗಳ ಕೆಳಭಾಗವೇ ವಿತಲ, ಮೇಲ್ಭಾಗವೇ ಅತಲ ಕಟಿಯ ಹಿಂಭಾಗ ಭೂತಲ, ನಾಭಿ ಆಕಾಶ, ವಕ್ಷಃಸ್ಥಳ ಜ್ಯೋತಿಃಸಮೂಹ, ಮಹರ್ಲೋಕ ಕುತ್ತಿಗೆ, ಮುಖ ಜನೋಲೋಕ, ಹಣೆ ತಪೋಲೋಕ. ಶಿರಸ್ಸು ಸತ್ಯಲೋಕ. ಇಂದ್ರಾದಿ ದೇವತೆಗಳು ಬಾಹುಗಳಿಂದ ಹುಟ್ಟಿದರು. ದಿಗ್ದೇವತೆಗಳು ಕಿವಿಗಳಿಂದಲೂ, ಶಬ್ದವು ಶ್ರೋತ್ರೇಂದ್ರಿಯದಿಂದಲೂ, ಅಶ್ವಿನೀದೇವತೆಗಳು ಮೂಗಿನಿಂದಲೂ, ಗಂಧವು ಘ್ರಾಣೇಂದ್ರಿಯದಿಂದಲೂ, ಅಗ್ನಿಯು ಮುಖದಿಂದಲೂ, ದ್ಯುಲೋಕವು

ಕಣ್ಣುಗಳಿಂದಲೂ ಸೂರ್ಯನು ಚಕ್ಷುರಿಂದ್ರಿಯದಿಂದಲೂ, ಹಗಲು ರಾತ್ರಿಗಳ ಅಭಿಮಾನಿ ದೇವತೆಗಳು ರೆಪ್ಪೆಗಳಿಂದಲೂ, ಬ್ರಹ್ಮಲೋಕವು ಹುಬ್ಬುಗಂಟನಿಂದಲೂ ಹುಟ್ಟಿ ಜನಕ ಸ್ಥಳಗಳನ್ನೇ ಆಶ್ರಯಿಸಿವೆ. ಈ ಪ್ರತಿಮೆಯ ದವಡೆಯಿಂದ ನೀರು, ನಾಲಗೆಯಿಂದ ರಸ, ವಾಕ್ಕಿನಿಂದ ಗಾಯತ್ರಿ ಮೊದಲಾದ ಛಂದಸ್ಸುಗಳು, ದವಡೆಯ ಹಲ್ಲುಗಳಿಂದ ಚಂದ್ರ ಸೂರ್ಯರು, ಹಲ್ಲುಗಳಿಂದ ನಕ್ಷತ್ರಗಣಗಳೂ, ನಗುವಿನಿಂದ ಜನ ಮೋಹಕ ಮಾಯೆ, ಕುಡಿಗಣ್ಣಿನ ನೋಟದಿಂದ ಕೊನೆಯಿಲ್ಲದ ಸೃಷ್ಟಿ, ಕೆಳತುಟಿಯಿಂದ ಲಜ್ಜೆ, ಮೇಲ್ತುಟಿಯಿಂದ ಲೋಭ, ಸ್ತನದಿಂದ ಧರ್ಮ, ಬೆನ್ನಿನಿಂದ ಅಧರ್ಮಗಳು ಹುಟ್ಟಿದುವು. ಗುಹ್ಯೇಂದ್ರಿಯದಿಂದ ಪ್ರಜೇಶ್ವರ, ವೃಷಣಗಳಿಂದ ಮಿತ್ರ, ಹೊಟ್ಟೆಯಿಂದ ಸಮುದ್ರಗಳು, ಮೂಳೆಗಳಿಂದ ಬೆಟ್ಟಗಳೂ, ನಾಡಿಗಳಿಂದ ನದಿಗಳೂ, ಕೂದಲುಗಳಿಂದ ಗಿಡಗಳೂ, ವೀರ್ಯದಿಂದ ಅನ್ನವೂ, ಶ್ವಾಸದಿಂದ ಗಾಳಿಯೂ ಹುಟ್ಟಿದುವು. ವಯಸ್ಸೇ ಗಮನ, ಸತ್ವಾದಿಗುಣಗಳ ಪ್ರವಾಹವೇ ಕರ್ಮ. ಮೋಡ ತಲೆಗೂದಲುಗಳು. ಸಂಜೆ ಉಡುವ ಬಟ್ಟೆ. ಮೂಲಪ್ರಕೃತಿಯೇ ಹೃದಯ ಚಂದ್ರನೇ ಮನಸ್ಸು. ವಿಜ್ಞಾನ ಶಕ್ತಿ. ಬ್ರಹ್ಮನೇ ಬುದ್ಧಿ. ರುದ್ರನೇ ಅಂತಃಕರಣ. ಅಶ್ವಾದಿಯಾದಿ ಪ್ರಾಣಿಗಳು ಉಗುರು. ಮೃಗಪಶುಗಳು ನಡುವಿನ ಮುಂಭಾಗ. ವಾಯುದೇವರು ವಿಚಾರಶಕ್ತಿ. ಮುಖದಿಂದ ಬ್ರಾಹ್ಮಣ, ಭುಜದಿಂದ ಕ್ಷತ್ರಿಯ, ತೊಡೆಯಿಂದ ವೈಶ್ಯ, ಪಾದದಿಂದ ಶೂದ್ರನು.

ವೈರಾಜನೆಂಬ ಹರಿಯ ಪ್ರತಿಮೆರೂಪದ ಅವಯವಗಳು ಇಂತಹವು. ಈ ಪ್ರತಿಮೆಯೇ ಅತ್ಯಂತ ದೊಡ್ಡದು. ಜ್ಞಾನಿಗಳು ಧ್ಯಾನಿಸುವುದು ಈ ಪ್ರತಿಮೆಯನ್ನೇ. ಇದರಿಂದ ಮನಸ್ಸು ನಿರ್ಮಲವಾಗುವುದು.

## ಮೊದಲನೆಯ ಅಧ್ಯಾಯ ಮುಗಿದುದು

ದಿನ ಕಲ್ಪದ ಮೊದಲಿನಲ್ಲಿ ಬ್ರಹ್ಮದೇವರು ಹರಿಯನ್ನು ಧ್ಯಾನಮಾಡಿ ಹಿಂದಿನ ಕಲ್ಪದ ಸೃಷ್ಟಿಯನ್ನು ಸ್ಮರಣೆಗೆ ತಂದುಕೊಂಡು ಸೃಷ್ಟಿಯ ಉದ್ಯೋಗದಲ್ಲಿ ತೊಡಗಿದರು. ಹೀಗೆ ಫಲವು ದೊರೆತಿರುವುದರಿಂದ 'ಧಾರಣೆಯು' ಸಫಲವಾಗಿದೆ. ವೇದ ಮೊದಲಾದ ಸಕಲ ಶಬ್ದಗಳ ಅರ್ಥವೇ ಶ್ರೀಹರಿ. ಅವನು ಸ್ವತಂತ್ರನೂ, ಸರ್ವವ್ಯಾಪ್ತನೂ ಮತ್ತು ಗುಣ ಪರಿಪೂರ್ಣನೂ ಆದ್ದರಿಂದ ಹರಿಯೇ ಸಕಲ ಶಬ್ದಗಳ ಮುಖ್ಯಾರ್ಥನಾದ್ದರಿಂದ ಅವನನ್ನೇ ಸ್ಮರಿಸಬೇಕು. ಉದಾಹರಣೆಗೆ ಇಂದ್ರ ಅಂದರೆ ನಿರವಧಿಕ ಐಶ್ವರ್ಯವುಳ್ಳವನು-ಎಂದರ್ಥ. ಅದು ಶಚೀಪತಿಯಾದ ಇಂದ್ರನಲ್ಲಿ ಇಲ್ಲ. ಆದ್ದರಿಂದ ಇಂದ್ರನೆಂದರೆ ಹರಿ. ಹೀಗೆ ಹರಿಯೇ ಸಕಲ ಶಬ್ದದ ಮುಖ್ಯಾರ್ಥನಾದ್ದರಿಂದ ಅವನನ್ನೇ ಸ್ಮರಿಸಬೇಕು. ಇತರರನ್ನು ಅವನ ಪರಿವಾರಭೂತರೆಂದೇ

ಸ್ಮರಿಸಬೇಕು. ಮಲಗುವುದು, ಊಟ ಮುಂತಾದುವು ತಾವಾಗಿ ಸಿದ್ಧವಾಗಿರುವಾಗ ಅವುಗಳಿಗಾಗಿ ಶಬ್ದಗಳನ್ನು ಬಳಸಬಾರದು.

ಹಾಸಿಗೆಗಾಗಿ ಶ್ರಮಪಡಬೇಕಾದ್ದಿಲ್ಲ. ನೆಲವೇ ಹಾಸಿಗೆ. ತೋಳೇ ತಲೆದಿಂಬು, ನೀರನ್ನು ಕುಡಿಯಲು ಬೊಗಸೆಯೇ ಪಾತ್ರೆ. ದಿಕ್ಕುಗಳೇ ವಸ್ತ್ರ. ಮರಗಳು ಹಣ್ಣುಗಳನ್ನು ಕೊಟ್ಟು ತೃಪ್ತಿಪಡಿಸುತ್ತವೆಯಾದ್ದರಿಂದ ಹೊಟ್ಟೆಪಾಡಿಗೆ ಯಾರನ್ನೂ ಆಶ್ರಯಿಸಬೇಕಾದ್ದಿಲ್ಲ. ನದಿಗಳು ನೀರನ್ನು ಒದಗಿಸುತ್ತವೆ ಮಲಗಲು ಗುಹೆಗಳಿವೆ. ಶ್ರೀಹರಿಯು ಬೆಂಗಾವಲಾಗಿರುವುದರಿಂದ ಹುಲಿ ಸಿಂಹಾದಿಗಳಿಂದ ಭಯಪಡಬೇಕಾದ್ದಿಲ್ಲ. ಹೀಗೆ ಜೀವನಕ್ಕೆ ಬೇಕಾದ್ದೆಲ್ಲವನ್ನೂ ಹರಿಯು ಕೊಡುತ್ತಿರುವುದರಿಂದ ಜ್ಞಾನಿಗಳು ಧನದುರ್ಮದಾಂಧರನ್ನು ಏಕೆ ಆಶ್ರಯಿಸುವರು ?

ಶ್ರೀಹರಿಯು ಅಪರಿಚ್ಛಿನ್ನ ಅಂದರೆ ಅಳತೆಗೆ ಸಿಗದವನು. ದೇಹಾದಿಗಳಿಗಿಂತ ಅತ್ಯಂತ ಪ್ರಿಯ. ಅವಿದ್ಯಾನಾಶಕ. ಮೋಕ್ಷಪ್ರದ. ಸರ್ವಜ್ಞ. ಸರ್ವರ ಹೃದಯದೊಳಗಿದ್ದು ಆನಂದವನ್ನು ಅನುಭವಿಸುವವನು ತನ್ನಿಚ್ಛೆಯಿಂದಲೇ ಅವತರಿಸುವವನು, ಸರ್ವರಿಗೂ ಸ್ವಾಮಿ. ಹೀಗೆ ಅವನ ಗುಣಗಳನ್ನು ಉಪಾಸನೆ ಮಾಡಬೇಕು. ಕೊನೆ ಪಕ್ಷ ಸತ್, ಚಿತ್, ಆನಂದ ಆತ್ಮಾ (ಸ್ವಾಮಿ) ಎಂಬ ನಾಲ್ಕು ಗುಣಗಳಿಂದಲಾದರೂ ಶ್ರೀಹರಿಯನ್ನು ಉಪಾಸನೆ ಮಾಡಬೇಕು, ಹಾಗೆ ಮಾಡದಿದ್ದರೆ ಆತ್ಮಹತ್ಯಾದೋಷವು ಬಂದು ತಮಸ್ಸಿನಲ್ಲಿ ಬೀಳಬೇಕಾಗುವುದು. ಅಂತಹವರು ಪಶುಗಳು. ವೇದಭಾರವನ್ನು ಹೊರುವ ಕತ್ತೆಗಳು.

ಸ್ಥೂಲರೂಪವನ್ನು ಉಪಾಸಿಸುವ ಯೋಗ್ಯತೆ ಉಳ್ಳವರು ಉಕ್ತ ವಿರಾಡ್ರೂಪವನ್ನು ವಿಚಾರ ಮಾಡುವರು. ಕೆಲವರು ತಮ್ಮ ಹೃದಯ ಕಮಲದಲ್ಲಿರುವ ಭಗವದ್ರೂಪವನ್ನು ಧ್ಯಾನ ಮಾಡಿದರೆ ಅಪರೋಕ್ಷಜ್ಞಾನವಾಗುವುದು. ಜ್ಞಾನಿಯು ತನ್ನ ದೇಹವನ್ನು ಬಿಡಬೇಕೆಂದು ಬಯಸಿದಾಗ ಹೀಗೆ ಲಯಚಿಂತನೆ ಮಾಡಬೇಕು :-

ಇಂದ್ರಿಯಾಭಿಮಾನಿಗಳು ಮನೋಭಿಮಾನಿ ಇಂದ್ರನ ಅಧೀನವೆಂದೂ, ಆ ಇಂದ್ರನು ಉಮಾದೇವಿಯ ಅಧೀನವೆಂದೂ, ಅವಳು ರುದ್ರಾಧೀನಳೆಂದೂ, ರುದ್ರನು ವಾಣಿಯ ಅಧೀನ, ವಾಣಿಯು ಬ್ರಹ್ಮದೇವರ ಅಧೀನ, ಅವರು ಲಕ್ಷ್ಮಿಯ ಅಧೀನ, ಲಕ್ಷ್ಮಿಯು ಜೀವಾಂತರ್ಯಾಮಿಯಾದ ಹರಿಯ ಅಧೀನಳು, ಜೀವಾಂತರ್ಯಾಮಿ ಹರಿಯನ್ನು ದೇಹದ ಮಧ್ಯದಲ್ಲಿರುವ ಹರಿಯೊಡನೆ ಐಕ್ಯ ಚಿಂತನೆ ಮಾಡಬೇಕು. ಅವನನ್ನು ಸರ್ವತ್ರ ವ್ಯಾಪ್ತ ಹರಿಯೊಡನೆ ಐಕ್ಯಚಿಂತನೆ ಮಾಡಬೇಕು,

ಹೀಗೆ ಚಿಂತಿಸಿ ದೇಹಬಿಟ್ಟ ಜ್ಞಾನಿಯು ವಿಷ್ಣುಲೋಕವನ್ನು ಸೇರುವನು. ಆ ಲೋಕವೂ ವಿಷ್ಣುವಿನಂತೆ ನಿರ್ದೋಷವಾದುದು. ಅಪರೋಕ್ಷ ಜ್ಞಾನಿಯು

ದೇಹವನ್ನು ಬಿಡಬೇಕೆಂದು ಬಯಸಿದಾಗ, ಬಿಂಬದರ್ಶನ ಮಾಡಿ, ಉದಾನ ವಾಯು ವನ್ನೆಬ್ಬಿಸಿ ನಾಭಿ, ಹೃದಯ, ವಕ್ಷಃಸ್ಥಳ, ದವಡೆಯ ಮೂಲ, ಹುಬ್ಬುಗಳ ಮಧ್ಯ ಮತ್ತು ಶಿರಸ್ಸು ಎಂಬ ಆರು ಸ್ಥಳಗಳಲ್ಲಿ ಕ್ರಮವಾಗಿ ಮೇಲಕ್ಕೇರಿಸಿ ಭ್ರೂ ಮಧ್ಯ ಬಂದು ಅರ್ಧಮುಹೂರ್ತ ಕಾಲ ಶ್ರೀ ಹರಿಯನ್ನು ಧ್ಯಾನಿಸಬೇಕು. ನೆತ್ತಿ ಸೀಳಿ ದೇಹದಿಂದ ವಾಯುವನ್ನು ಹೊರಡಿಸಬೇಕು. ಉತ್ತಮರಾದ ಯೋಗಿಗಳಿಗೆ ಈ ಬಗೆಯ ಮರಣವನ್ನು ಹರಿಯು ಕರುಣಿಸುವನು. ಹೀಗೆ ಮರಣ ಹೊಂದಿದವನು ತಿರುಗಿ ಸಂಸಾರಕ್ಕೆ ಬರುವುದಿಲ್ಲ. ಅಪ್ರತೀಕಾಲಂಬನನಾದ (ವ್ಯಾಪ್ತ್ಯೋಪಾಸಕನಾದ) ಪಕ್ವಯೋಗಿಯು ವೈಕುಂಠದ ಅಮುಕ್ತಸ್ಥಾನವನ್ನು ಸೇರಿ ಅಲ್ಲಿಯೇ ವಾಸ ಮಾಡು ತ್ತಿದ್ದು ಬ್ರಹ್ಮದೇವರ ಜೊತೆಯಲ್ಲಿ ಮುಕ್ತನಾಗುವನು. ಆಗ ಪ್ರತೀಕಾಲಂಬನರು ಸತ್ಯಲೋಕದಲ್ಲಿರುವ ಚತುರ್ಮುಖ ಬ್ರಹ್ಮನನ್ನು ಹೊಂದುತ್ತಾರೆ.

ಶರೀರದ ಹೃದಯ ದೇಶದಲ್ಲಿ 101 ನಾಡಿಗಳಿವೆ. ಬಲಭಾಗದಲ್ಲಿ 50. ಎಡ ಭಾಗದಲ್ಲಿ 50, ಮಧ್ಯದಲ್ಲಿ ಒಂದು. ಅವಕ್ಕೆ ಕ್ರಮವಾಗಿ ಪಿಂಗಲಾ, ಇಡಾ, ಸುಷುಮ್ನಾ ನಾಡಿಗಳೆಂದು ಹೆಸರು. ಪಿಂಗಳಾನಾಡಿಗಳಿಂದ ಉತ್ಕ್ರಾಂತರಾದವರು ಅಹಸ್ಸೆಂದು ಕರೆಸುವ ದೇವಯಾನ (ಅರ್ಚಿರಾದಿ) ಮಾರ್ಗವನ್ನು ಸೇರುವರು. ಇಡಾ ನಾಡಿಯಿಂದ ಹೊರಟವರು ರಾತ್ರಿ ಎಂದು ಹೆಸರುಳ್ಳ ಪಿತೃಯಾನ (ಧೂಮಾದಿ) ಮಾರ್ಗವನ್ನು ಸೇರುವರು. ಸುಷುಮ್ನಾ ನಾಡಿಯಿಂದ ಉತ್ಕ್ರಾಂತರಾದವರು ಬ್ರಹ್ಮ ಮಾರ್ಗವನ್ನು ಸೇರುವರು. ದೇವ ಮಾರ್ಗದ ಒಳಭೇದವೇ ಬ್ರಹ್ಮಮಾರ್ಗ, ಆ ಮಾರ್ಗದಲ್ಲಿ ಹೋದವರು ಶಿಂಶುಮಾರ ಲೋಕವನ್ನು ಸೇರಿ ಬಳಿಕ ಶ್ರೀ ಹರಿಯ ಅಪ್ಪಣೆಯನ್ನು ಪಡೆದು, ರಾಗಾದಿ ದೋಷ ರಹಿತರಾಗಿ, ಸೂಕ್ಷ್ಮ ರೂಪದಿಂದಿರುವ ಆ ಎಲ್ಲ ಬ್ರಹ್ಮಜ್ಞಾನಿಗಳೂ ವೈಕುಂಠಾದಿ ಲೋಕಗಳನ್ನು ಸೇರುವರು.

ಅದರ ವಿವರ : ಉತ್ಕ್ರಾಂತರಾದ ಬ್ರಹ್ಮಜ್ಞಾನಿಗಳೆಲ್ಲರೂ ಶಿಂಶುಮಾರ ಮೂರ್ತಿಯ ಬಳಿಗೆ ಹೋಗಿ ಆವನ ಅಪ್ಪಣೆ ಪ್ರಕಾರ ಮಹರಾದಿ ಲೋಕಗಳಲ್ಲಿ ಮುಕ್ತಿಯವರೆಗೂ ಇರುತ್ತಾರೆ. ಬ್ರಹ್ಮಪುರಾಣದ ಮಾತು ಹೀಗಿದೆ :

**ಮನ್ವಂತರಾಯುಷಃ ಸ್ವರ್ಗ್ಯಾ ಮಹರ್ಲೋಕೇ ತು ಕಾಲ್ಪಿಕಾಃ ।**
**ಆ ಬ್ರಹ್ಮಣೋ ಜನಾದ್ಯಾಸ್ತು ಮಹರ್ಲೋಕೇऽಪಿ ಯೇ ವರಾಃ ॥**

ಅರ್ಥ : ಸ್ವರ್ಗದಲ್ಲಿರುವ ದೇವತೆಗಳು ಒಬ್ಬ ಮನುವು ಭೋಗಿಸುವ ಕಾಲ ಅಂದರೆ ಒಂದು ಮನ್ವಂತರ ಕಾಲದವರೆಗೆ ಆಯುಷ್ಯವುಳ್ಳವರು. ಮಹರ್ಲೋಕದಲ್ಲಿ ರುವವರು ಬ್ರಹ್ಮದೇವರ ಒಂದು ದಿನ ಪರ್ಯಂತ ಆಯುಷ್ಯವುಳ್ಳವರು. ಜನೋಲೋಕ ತಪೋಲೋಕ ಮತ್ತು ಸತ್ಯ ಲೋಕದಲ್ಲಿರುವವರು ಬ್ರಹ್ಮಪ್ರಳಯ ಪರ್ಯಂತ ಆಯುಷು ವುಳ್ಳವರು ಮಹರ್ಲೋಕದಲ್ಲಿರುವವರಲ್ಲಿಯೂ ಶ್ರೇಷ್ಠರಾದ ಭೃಗುಮೊದಲಾದವರ್‍ಯ ಬ್ರಹ್ಮಪ್ರಳಯ ಪರ್ಯಂತವಾಗಿ ಆಯುಷ್ಯವುಳ್ಳವರು.

ಇಲ್ಲಿ ತಿಳಿಯಲ್ಪಡಬೇಕಾದ ಅನೇಕ ವಿಷಯಗಳಿವೆ .

1) ಜ್ಞಾನಿಗಳಲ್ಲಿ ಅಪಕ್ವಸಾಧನರೆಂದೂ ಪಕ್ವಸಾಧನರೆಂದೂ ಎರಡು ಬಗೆ. ಅಪಕ್ವಸಾಧನರು ಪಿಂಗಲಾ ನಾಡಿಯಿಂದ ಉತ್ಕ್ರಾಂತರಾಗುವರು. ಅವರಲ್ಲಿ ಮೂರು ಬಗೆ. ಅಪಕ್ವಸಾಧನರು, ಅಪಕ್ವಸಾಧನತರರು. ಅಪಕ್ವಸಾಧನತಮರು. ಮೊದಲನೆಯವರು ತಪೋಲೋಕಕ್ಕೂ, ಎರಡನೆಯವರು ಜನೋಲೋಕಕ್ಕೂ, ಮೂರನೆಯವರು ಮಹರ್ಲೋಕಕ್ಕೂ ಹೋಗುವರು. ಪಕ್ವಸಾಧನರು ಬ್ರಹ್ಮನಾಡಿಯಿಂದ ಉತ್ಕ್ರಾಂತರಾಗುವರು. ಪ್ರತೀಕಾಲಂಬನರು ಸತ್ಯಲೋಕಕ್ಕೂ, ಅಪ್ರತೀಕಾಲಂಬನರು ವೈಕುಂಠಕ್ಕೂ ಹೋಗುವರು

2) ದೇಹಾದಿಗಳಲ್ಲಿ ಬ್ರಹ್ಮದರ್ಶನವನ್ನು ಹೊಂದುವ ಇವರು ಚತುರ್ಮುಖನನ್ನು ಹೊಂದುವರು. ಸರ್ವವಸ್ತುಗಳಲ್ಲಿರತಕ್ಕ ಬ್ರಹ್ಮನನ್ನು ದರ್ಶನ ಮಾಡುವವರು ಅಪ್ರತೀಕಾಲಂಬನರು. ಇವರನ್ನು ವ್ಯಾಪ್ತೋಪಾಸಕರೆಂದು ಕರೆಯುವರು. ಇವರೆಲ್ಲ ಪರಬ್ರಹ್ಮನನ್ನು ಹೊಂದುತ್ತಾರೆ. ನೂರು ಮಂದಿ ದೇವತೆಗಳು, ನೂರು ಮಂದಿ ಗಂಧರ್ವರು, ನೂರು ಮಂದಿ ಋಷಿಗಳು, ನೂರು ಮಂದಿ ರಾಜರು, ನೂರು ಮಂದಿ ಅಪ್ಸರ ಸ್ತ್ರೀಯರು ಇವರೇ ಅಪ್ರತೀಕಾಲಂಬನರು.

3) ಮಹರ್ಲೋಕವನ್ನು ಹೊಂದುವವರಾರೆಂದರೆ :

ಶ್ಲೋಕ (ಭಾಗ ೨-೨-೨೩,೨೪)

**ಅಪಕ್ವಾ ಯೇ ನ ತೇ ಯಾಂತಿ ವಾಯುಂ ವಾ ಹರಿಮೇವ ವಾ ।**
**ಸ್ಥಾನಮಾತ್ರಾಶ್ರಿತಾಸ್ತೇ ತು ಪುನರ್ಜನಿ ವಿವರ್ಜಿತಾಃ ॥** ಇತಿ ಬ್ರಹ್ಮತರ್ಕೇ

ಬ್ರಹ್ಮನಾಡಿಯಿಂದ ಉತ್ಕ್ರಾಂತರಾಗದೇ ಇರುವವರು ಸತ್ಯಲೋಕದಲ್ಲಿ ಚತುರ್ಮುಖನನ್ನಾಗಲಿ, ಅಮುಕ್ತ ವೈಕುಂಠದಲ್ಲಿರುವ ಶ್ರೀಹರಿಯನ್ನಾಗಲಿ ಹೊಂದುವುದಿಲ್ಲ. ಅವರು ಮಹರ್ಲೋಕವನ್ನು ಹೊಂದುತ್ತಾರೆ. ಆದರೆ ಅವರು ತಿರುಗಿ ಹುಟ್ಟುವುದಿಲ್ಲವೆಂದು ಬ್ರಹ್ಮತರ್ಕದಲ್ಲಿ ಹೇಳಿದೆ.

**ಪ್ರಶ್ನೆ :** ಮಹಾಪ್ರಳಯ ಕಾಲದಲ್ಲೇ ಸತ್ಯಲೋಕ, ವೈಕುಂಠ ಲೋಕಗಳ ಪ್ರಾಪ್ತಿಯು. ಅದಕ್ಕಿಂತ ಮೊದಲು ಇಲ್ಲವೆಂದು ತೋರುತ್ತೆ. ಇಂಥ ಭ್ರಮೆಯನ್ನು ಹೋಗಲಾಡಿಸುತ್ತಾರೆ :-

**ವಿಷ್ಣೋರ್ಲೋಕಂ ತದೇವೈಕೇ ಯಾಂತಿ ಕಾಲಾಂತರೇ ಪರೇ ।**
**ಆಪ್ಲುತ್ಯೈವ ಹರೇಃ ಕೇಚಿದಪೂರ್ತೇಃ ಕೇಚಿದಂಜಸಾ ।**
**ವಿಹೃತ್ಯೈವಾನ್ಯ ಲೋಕೇಷು ಮುಚ್ಯಂತೇ ಬ್ರಹ್ಮಣಾ ಸಹ ॥ ಇತಿ ವಾಮನೇ**

ಮಹಾ ಪ್ರಳಯಕ್ಕೆ ಮುಂಚೆಯೇ ಸತ್ಯಲೋಕಕ್ಕೆ ಹೋಗುವ ಕಾಲದಲ್ಲೇ ಸಾಧನ ಸಂಪತ್ತುಳ್ಳ ಅಪ್ರತೀಕಾಲಂಬನರು 'ಇಂಥ ಕಾಲದಲ್ಲಿ ನನ್ನಲೋಕಕ್ಕೆ ಬರಲಿ' ಎಂಬ ಶ್ರೀ ಹರಿಯ ಆಜ್ಞೆಯಿಂದಲೇ ವೈಕುಂಠ ಲೋಕಕ್ಕೆ ಹೋಗುತ್ತಾರೆ. ಬೇರೆ ಯವರು ಸಾಧನ ಸಂಪತ್ತು ಪೂರ್ಣವಾಗದೇ ಇರುವುದರಿಂದ, ಅದು ಪೂರ್ಣವಾದ ಮೇಲೆ ವೈಕುಂಠಕ್ಕೆ ಹೋಗುತ್ತಾರೆ. ಅವರಿಗೆ ಯಾವಾಗ ಮುಕ್ತಿ ಯೆಂದರೆ ಮಹಾಪ್ರಳಯದವರೆಗೆ ಬೇರೆ ಲೋಕಗಳಲ್ಲಿದ್ದು ಚೆನ್ನಾಗಿ ಕ್ರೀಡಾದಿಗಳನ್ನು ಮಾಡಿಯೇ ಸಾಧನ ಪೂರ್ತಿ ಮಾಡಿಕೊಂಡು ಚತುರ್ಮುಖನಿಂದ ಕೂಡಿಕೊಂಡ್ರು ಮುಕ್ತಿಯನ್ನು ಹೊಂದುತ್ತಾರೆ—ಎಂದು ವಾಮನ ಪುರಾಣವು ಹೇಳುತ್ತದೆ.

**ವಿಶೇಷ :** ಅಪ್ರತೀಕಾಲಂಬನರಿಗೆ (ವ್ಯಾಪ್ತ್ಯೋಪಾಸಕರಿಗೆ) ಮುಕ್ತಿಗೆ ಮುಂಚೆ ದೊರೆಯುವ ಲೋಕವನ್ನು ಮೇಲಿನ ವಚನಗಳು ಹೇಳುತ್ತಿವೆಯಷ್ಟೆ ? ಪ್ರಹ್ಲಾದನ ಅಂಶಸಂಭೂತರಾದ ಶ್ರೀವ್ಯಾಸರಾಜರು ಅಪ್ರತೀಕಾಲಂಬನರು ಅಂದರೆ ವ್ಯಾಪ್ತ್ಯೋಪಾ ಸಕರಾದ್ದರಿಂದ, ಅವರು ದೇಹವನ್ನು ಬಿಟ್ಟಕೂಡಲೇ ವೈಕುಂಠಕ್ಕೆ ತೆರಳಿದರೆಂದು ಶ್ರೀ ಪುರಂದರದಾಸರು ಹೇಳಿರುವರು—ಎಂಬುದನ್ನು ಶ್ರೀ ಗುರುರಾಜರ ಭಕ್ತರು ತಿಳಿಯಬೇಕು.

ಈ ಮುಕ್ತರು ಹೊರಡುವ ಮಾರ್ಗ ಮತ್ತು ಇತರ ವಿಷಯಗಳನ್ನು ಶ್ರೀ ವಾಸುದೇವನು ಬ್ರಹ್ಮದೇವರಿಗೆ ಉಪದೇಶಿಸಿದನು ಭಾಗವತಕ್ಕಿಂತ ಉತ್ತಮ ಮಂಗಳ ಮಾರ್ಗವು ಮತ್ತೊಂದಿಲ್ಲ. ವೇದವ್ಯಾಸರಿಂದ ರಚಿತವಾದ ಈ ಭಾಗವತ ದಲ್ಲಿ "ಹರಿಯು ಸ್ವತಂತ್ರನು, ಜೀವರು ಅಸ್ವತಂತ್ರರು, ಹರಿಯೇ ನಿಯಾಮಕನು" ಎಂದು ಉಕ್ತವಾಗಿದೆ. ಶ್ರೀಹರಿಯ ಗುಣಗಳನ್ನು ಶ್ರವಣಮಾಡಿದವರು ಮುಕ್ತರಾಗುವರು.

## ಎರಡನೆಯ ಅಧ್ಯಾಯ ಮುಗಿದುದು

**ಶುಕ ;** ಸಾಯಲಿರುವ ಜ್ಞಾನಿಯು ಮಾಡಬೇಕಾದ ಉಪಾಸನೆಯ ಕ್ರಮ ವನ್ನು ವಿವರಿಸಿದೆನು. ಈಗ ಹರಿಯು ಯಾವ ಯಾವ ದೇವತೆಯಲ್ಲಿದ್ದು ಯಾವ ಯಾವ ಇಷ್ಟಗಳನ್ನು ಪೂರೈಸುವನೆಂಬುದನ್ನು ಹೇಳುವೆನು ಕೇಳು : ಬ್ರಹ್ಮವರ್ಚಸ್ಸು ಬೇಕಾದರೆ ಬೃಹಸ್ಪತಿಯನ್ನೂ. ಇಂದ್ರಿಯ ಪಾಟವವನ್ನು ಬಯಸುವವನು ಇಂದ್ರ ನನ್ನೂ, ಪ್ರಜಾಕಾಂಕ್ಷಿಯು ಪ್ರಜೇಶ್ವರನನ್ನೂ, ಸಂಪತ್ತನ್ನು ಬಯಸುವವರು ಲಕ್ಷ್ಮಿ ಯನ್ನೂ, ತೇಜಸ್ಸಿಗಾಗಿ ಸೂರ್ಯನನ್ನೂ' ಬಂಗಾರಕ್ಕಾಗಿ ವಸುಗಳನ್ನೂ, ವೀರನಾಗಲು ರುದ್ರದೇವರನ್ನೂ, ಅನ್ನಾಕಾಂಕ್ಷೆಯು ಅದಿತಿದೇವಿಯನ್ನೂ, ಸ್ವರ್ಗಾಪೇಕ್ಷಿಯು ಆದಿತ್ಯರನ್ನೂ. ರಾಜ್ಯ ಬಯಸುವವರು ವಿಶ್ವೇದೇವತೆಗಳನ್ನೂ, ಸಾಧನೆಗೆ ಸಾಧ್ಯ

ರೆನ್ನೂ, ಆಯುಷ್ಯಕ್ಕೆ ಅಶ್ವಿನೀ ದೇವತೆಗಳನ್ನೂ, ಪುಷ್ಟಿಗೆ ಇಳಾದೇವಿ, ಅಧಿಕಾರ ಸ್ಥಿರತೆಗೆ ದ್ಯಾವಾಪೃಥಿವೀ, ಸೌಂದರ್ಯಕ್ಕೆ ಗಂಧರ್ವ, ಹೆಣ್ಣಿಗೆ ಉರ್ವಶಿ, ಆಧಿಪತ್ಯಕ್ಕೆ ಚತುರ್ಮುಖಬ್ರಹ್ಮ, ಯಶಸ್ಸಿಗೆ ಯಜ್ಞನಾಮಕ ಇಂದ್ರ, ನಿಧಿಗೆ ವರುಣ, ಜ್ಞಾನಕ್ಕೆ ಗಿರೀಶ, ದಾಂಪತ್ಯಸುಖವು ಅನುಗಾಲವಿರಲು ಉಮಾದೇವಿ, ಧರ್ಮಕ್ಕೆ ವಿಷ್ಣು, ಸಂತತಿಗೆ ಪಿತೃದೇವತೆಗಳು, ಗ್ರಹಪೀಡಾ ಪರಿಹಾರಕ್ಕೆ ಮಣಿಭದ್ರ, ಓಜಸ್ಸಿಗೆ ಮರುತ್ತುಗಳು, ರಾಜ್ಯನಿರ್ವಹಣೆಗೆ ಮನುಗಳು, ಆಭಿಚಾರಿಕಕಾರ್ಯಕ್ಕೆ ನಿರ್ಋತಿ, ವಿಷಯಭೋಗಕ್ಕೆ ಸೋಮನನ್ನೂ ಮತ್ತು ಅನಿಷಿದ್ಧ ಕಾರ್ಯಕ್ಕೆ ಪೂರ್ಣನಾದ ಶ್ರೀಹರಿಯನ್ನೂ ಸೇವಿಸಬೇಕು.

ಹರಿಕಥೆಯು ಸಜ್ಜನರ ಗುಂಪಿನಲ್ಲಿ ಮಾತ್ರ ನಡೆಯುತ್ತದೆ. ಕಥಾಶ್ರವಣದಿಂದ ಮನಸ್ಸು ನಿರ್ಮಲವಾಗುವುದು. ಆಗ ವೈರಾಗ್ಯ ಮೂಡುವುದು. ಅದರಿಂದ ಭಕ್ತಿ ಉಂಟಾಗುವುದು. ಅದರಿಂದ ಅಪರೋಕ್ಷಜ್ಞಾನ, ಅದರಿಂದ ಮುಕ್ತಿಯು ದೊರೆಯುವುದು.

**ಶೌನಕ :** ಸೂತನೆ ! ಪರೀಕ್ಷಿದ್ರಾಜನು ಮತ್ತೇನನ್ನು ಕೇಳದನು ? ಶುಕರು ಯಾವುದನ್ನು ಹೇಳಿದರು ? ಅದನ್ನು ವಿವರಿಸು. ಸಜ್ಜನರು ಸೇರಿದಾಗಲೇ ಬರ ತಕ್ಕದ್ದು ಹರಿಕಥೆ ಮಾತ್ರ. ಇನ್ನಾವುದೂ ಇಲ್ಲ. ಪರಮಾತ್ಮನ ಕಥೆಯನ್ನು ಬಿಟ್ಟು ಕಳೆಯುವ ಒಂದೊಂದು ಕ್ಷಣವೂ ವ್ಯರ್ಥ, ಅದಿಲ್ಲದೆ ಬಹುಕಾಲ ಬದುಕಿದ್ದರೆ ಫಲ ವೇನು ? ಮರಗಿಡಗಳು ಬಹುಕಾಲವಿರುವುದಿಲ್ಲವೆ ? ತಿದಿಯು ಉಸಿರು ಬಿಡುವು ದಿಲ್ಲವೆ ? ನಾಯಿ, ನರಿ ಆಹಾರವನ್ನು ತಿಂದು ಮಲ ವಿಸರ್ಜನೆ ಮಾಡುವುದಿಲ್ಲವೆ ? ಮಾನವನು ಹೀಗೇ ಬದುಕಿದರೆ ಫಲವೇನು ಬರುತ್ತದೆ ? ಹರಿ ಚರಿತ್ರೆಯನ್ನು ಕೇಳದವನು ಕತ್ತೆ, ನಾಯಿಗಳಿಗೆ ಸಮನು. ಹರಿಕಥೆಗಳನ್ನು ಕೇಳದ ಕಿವಿಗಳು ಬೆಟ್ಟದ ಗವಿಗಳು. ಗೀತವನ್ನು ಹಾಡದ ನಾಲಗೆ ಕಪ್ಪೆ ನಾಲಗೆ, ಹರಿಗೆರಗದ ತಲೆ ಭಾರವಾದ ಕಲ್ಲುಬಂಡೆ. ಪೂಜಿಸದ ಕೈಗಳು ಹೆಣದ ಕೈಗಳು. ಹರಿಯ ಪ್ರತಿಮೆಗಳನ್ನು ನೋಡದ ಕಣ್ಣುಗಳು ನವಿಲುಗರಿಯ ಕಣ್ಣುಗಳು. ಯಾತ್ರೆ ಮಾಡದ ಕಾಲು ಮರದ ಕಾಲು. ಹರಿಯ ಮತ್ತು ಅವನ ಭಕ್ತರ ಪಾದಧೂಳಿಯನ್ನು ಬಯಸದವನು ಉಸಿರಾಡುವ ಹೆಣ. ಹರಿಕಥೆಯನ್ನು ಕೇಳುವಾಗ ಏಕಾಗ್ರವಾಗದ ಮನಸ್ಸು ಕಲ್ಲು. ಸೂತನೇ! ರಾಜನ ಪ್ರಶ್ನೆಗೆ ಶುಕರು ಕೊಟ್ಟ ಉತ್ತರವನ್ನು ವಿವರಿಸು.

## ಮೂರನೆಯ ಅಧ್ಯಾಯ ಮುಗಿದುದು

**ಪರೀಕ್ಷಿತ್ :-** ಆಚಾರ್ಯ ! ತಮ್ಮ ವಾಣಿಯು ಅಜ್ಞಾನವನ್ನೋಡಿಸುವುದ ರಿಂದ ಅದು ಸಮೀಚೀನವಾಗಿದೆ. ಶ್ರೀಪರಮಾತ್ಮನು ಈ ಜಗತ್ತನ್ನು ಹೇಗೆ ಸೃಷ್ಟಿಸಿ

ರಕ್ಷಿಸಿ ಲಯ ಮಾಡುವನು ? ಜೀವರನ್ನು ಇದರಲ್ಲಿ ಹೇಗೆ ಬದ್ಧರನ್ನಾಗಿ ಮಾಡಿರು
ವನು ? ತನ್ನ ಅವತಾರಗಳಿಂದ ಹೇಗೆ ಕ್ರೀಡಿಸುವನು ? ಅದನ್ನೆಲ್ಲ ಹೇಳಿ.

**ಶುಕ :-** ( ಮೊದಲು ಹರಿಗೆ ನಮಸ್ಕರಿಸುತ್ತಾರೆ-: ) ಶ್ರೀ ಹರಿಯು
ಪರಿಪೂರ್ಣನು. ಸುಖಸ್ವರೂಪಿಯು ಸೃಷ್ಟ್ಯಾದಿಗಳನ್ನು ಲೀಲೆಯಿಂದ ಮಾಡ
ತಕ್ಕವನು. ಅವನ ಶಕ್ತಿಗಳು ಇಚ್ಛಾ, ಜ್ಞಾನ, ಕ್ರಿಯಾ ಶಕ್ತಿಗಳೆಂದು ಕರೆಯಲ್ಪಡು
ವುವು. ಅವು ನಿತ್ಯಗಳು ಮತ್ತು ಅವನ ಸ್ವರೂಪ ಭೂತಗಳೇ ಆಗಿವೆ. ಅವನು
ಅಂತರ್ಯಾಮಿ, ತನ್ನವರಿಗೆ ಸುಲಭನು. ದುರ್ಜನರಿಗೆ ದುರ್ಲಭನು. ಭಕ್ತರ ಪಾಪ
ಗಳನ್ನು ಸಂಪೂರ್ಣವಾಗಿ ನಾಶಮಾಡಿಬಿಡುವನು. ತನ್ನನ್ನು ಅರ್ಚಿಸುವವನಿಗೆ
ಮುಕ್ತಿಯನ್ನೇ ಕೊಟ್ಟು ಬಿಡುವನು. ಅವನಿಗೆ ಸಮಾನನೇ ಇಲ್ಲವಾದ್ದರಿಂದ ಅಧಿಕನು
ಯಾರೂ ಇಲ್ಲ. ತನ್ನಲ್ಲಿ ತಾನೇ ಕ್ರೀಡಿಸುವವನು. ಸ್ವತಂತ್ರನು. ಯಾರು ಇವನ
ಕೀರ್ತನೆ, ಶ್ರವಣ, ವಂದನೆ, ದರ್ಶನ, ಸ್ಮರಣೆ ಮತ್ತು ಪೂಜೆಗಳನ್ನು ಭಕ್ತಿಯಿಂದ
ಮಾಡುವರೋ ಅವರ ಸರ್ವ ಪಾಪಗಳನ್ನೂ ತಕ್ಷಣವೇ ನಾಶಮಾಡಿ ಬಿಡುವನು.
ಜ್ಞಾನಿಗಳು ಅವನಿಗೆ ವಿಹಿತ ಕರ್ಮಗಳನ್ನು ಅರ್ಪಿಸಿ, ಅವನ ಅಪರೋಕ್ಷವನ್ನು ಹೊಂದಿ
ಕೊನೆಗೆ ಮುಕ್ತಿಯನ್ನು ಹೊಂದಿಬಿಡುವರು. ಕಿರಾತ, ಹೂಣ ಮೊದಲಾದವರು
ಹೀನಕುಲದವರಾದರೇನು? ಅವರು ಹರಿಭಕ್ತರನ್ನಾಶ್ರಯಿಸಿದರೆ ಶುದ್ಧ
ರಾಗುವರು. ಅಂದ ಬಳಿಕ ಶ್ರೀಹರಿಯನ್ನು ಅವರು ಆಶ್ರಯಿಸಿದರೆ ಸುತರಾಂ ಶುದ್ಧ
ರಾಗೇ ತೀರುವರು. ಹರಿಯು ಮುಕ್ತರಿಗೂ, ಅಮುಕ್ತರಿಗೂ ನಿಯಾಮಕ. ವೇದ,
ಧರ್ಮ, ತಪಸ್ಸು ಇವನ್ನು ಆಚರಿಸಿದವರಿಗೆ ವಶನಾಗಿ ಬಿಡುವನು. ಅವನು ಸರ್ವ
ಸ್ವಾಮಿ, 'ಲಕ್ಷ್ಮೀಪತಿ, ಪ್ರಜಾಪತಿ, ಬುದ್ಧಿಪ್ರೇರಕ, ಸರ್ವಲೋಕರಕ್ಷಕ, ಸಕಲ
ಭೂಮಿಗೂ ಆಧಾರ, ಯಾದವ ಪಾಲಕ, ಗತಿಪ್ರದ, ಸಜ್ಜನಪಾಲಕ, ಭಾಗವತವನ್ನು
ರಚಿಸಿದ ವೇದವ್ಯಾಸರೂಪಿಯು, ಆತ್ಮಾ, ಅಂತರಾತ್ಮಾ ಇವೇ ಮೊದಲಾದ ರೂಪ
ಗಳಿಂದಿರತಕ್ಕವನು. ಇಂಥ ಅಪಾರ ಮಹಿಮನಾದ ಶ್ರೀಹರಿಯು ಭಾಗವತ ವ್ಯಾಖ್ಯಾನ
ಮಾಡಬೇಕೆಂದಿರುವ ನನ್ನ ವಚನಗಳನ್ನು ಅಲಂಕರಿಸಿ ಸುಪ್ರೀತನಾಗಲಿ. ಜಗತ್ಕರ್ತ
ನಾದ ವಾಸುದೇವನಿಗೆ ನಮಸ್ಕಾರ ! ನಾರದಾದಿ ಬ್ರಹ್ಮಜ್ಞಾನಿಗಳಿಗೆ ಭಾಗವತವೆಂಬ
ಮಧುಪಾನ ಮಾಡಿಸಿದ ಬ್ರಹ್ಮದೇವರಿಗೆ ನಮಸ್ಕಾರ ! ವೇದವ್ಯಾಸರಿಗೆ ನಮಸ್ಕಾರ
ರಾಜನೇ! ಬ್ರಹ್ಮದೇವರು ನಾರದರಿಗೆ ಹೇಳಿದ ಉತ್ತರವನ್ನೇ ನಿನ್ನಪ್ರಶ್ನೆಗೆ ಉತ್ತರ
ವನ್ನಾಗಿ ಹೇಳುವೆನು.

**ನಾಲ್ಕನೆಯ ಅಧ್ಯಾಯ ಮುಗಿದುದು**

**ನಾರದ :** ಬ್ರಹ್ಮದೇವ! ನಮಸ್ಕಾರ! ಸಕಲಭೂತಗಳನ್ನು ಸೃಷ್ಟಿಸುವವರೂ,
ಮೊದಲು ಹುಟ್ಟಿದವರೂ ಆದ ನೀವು ಪೂಜ್ಯರು. ಹರಿಯ ನೈಜ ಮಹಿಮೆಯನ್ನು

ತಿಳಿಸಿರಿ. ಜಗತ್ತು ಸುಳ್ಳಲ್ಲ. ಕಣ್ಣಿಗೆ ಕಾಣಿಸುವುದರಿಂದಲೂ, ಕಾರ್ಯಕಾರಿಯಾಗಿರುವುದರಿಂದಲೂ ಸತ್ಯವಾಗಿದೆ. ಶ್ರೀಹರಿಯು ಈ ಜಗತ್ತಿನೊಳಗೆ ವಾಸಮಾಡುವುದರಿಂದ ಇದು ಹರಿಯ ಪ್ರತಿಮೆ. ಇದಕ್ಕೆ ಶ್ರೀಹರಿಯೇ ಮೂಲಾಧಾರ. ಅವನೇ ಇದನ್ನು ಸೃಷ್ಟಿಸಿ ಬೀಳದಂತೆ ಆಧಾರನಾಗಿರುವನು. ಅವನೇ ಸರ್ವೋತ್ತಮ, ಜಗದ್ರಕ್ಷಕ, ಸರ್ವವೂ ಅವನ ಅಧೀನ. ಅವನ ಮಹಿಮೆಯನ್ನು ಸರಿಯಾಗಿ ತಿಳಿಸಿರಿ. ಶ್ರೀಹರಿಯೇ ನಿಮಗೂ ಆಧಾರನೂ, ಸ್ವಾಮಿಯೂ ಆಗಿರುವನು. "ನಿಮ್ಮ ಇಚ್ಛೆಯಿಂದಲೇ ಈ ಜಗತ್ತನ್ನು ನೀವೊಬ್ಬರೇ ಸೃಷ್ಟಿಸಿ ಪಾಲಿಸುವಿರಿ. ನಿಮಗೆ ಸಮಾನರು ಯಾರೂ ಕಂಡು ಬರುತ್ತಿಲ್ಲ. ಅಂದಬಳಿಕ ನಿಮಗೆ ಉತ್ತಮರು ಎಲ್ಲಿ ಬರಬೇಕು? ಹೀಗಿದ್ದರೂ ನೀವು ಅತಿಶಯ ತಪಸ್ಸನ್ನು ಆಚರಿಸುತ್ತಿರುವಿರಿ. ಇದರಿಂದ ನಿಮಗೂ ಸಾಮರ್ಥ್ಯವನ್ನು ಕೊಡುವ ಮತ್ತೊಂದು ವಸ್ತುವು ಇರಬೇಕೆಂದು ನನಗೆ ತೋರುತ್ತಿದೆ. ಈ ಸಂದೇಹವನ್ನು ಪರಿಹರಿಸಿರಿ.

(ಹರಿಯೇ ಸರ್ವೋತ್ತಮನೆಂದು ನಾರದರು ತಿಳಿದಿದ್ದರೂ ಅವನ ವಿಷಯವನ್ನು ವಿಶೇಷವಾಗಿ ತಿಳಿಯ ಬೇಕೆಂದು ಹೀಗೆ ಕೇಳಿದರು.)

ಬ್ರಹ್ಮ -: ಮಗೂ ! ಜನರ ಮೇಲಿನ ದಯೆಯಿಂದ ನೀನು ಹೀಗೆ ಪ್ರಶ್ನಿಸಿರುವೆ. ಆದ್ದರಿಂದ ಇದು ಉತ್ತಮ. ನಾನೊಬ್ಬನೇ ಸೃಷ್ಟಿಸುವೆನೆಂದು ನೀನು ಹೇಳಿದ್ದು ಸುಳ್ಳು. ಇದನ್ನು ಕೇಳಿ ಮನಸ್ಸಿಗೆ ನೋವಾಗಿದೆ. ಈ ಪಾಪ ಪರಿಹಾರಕ್ಕೆ ಶ್ರೀಹರಿಗೆ ನಮಸ್ಕಾರ ಮಾಡಲೇಬೇಕು. ಈ ಮೋಹವನ್ನು ತಂದಿಟ್ಟ ಶ್ರೀಹರಿಗೆ ನಮಸ್ಕಾರ ! ಶ್ರೀಹರಿಯು ನನ್ನಿಂದ ಸೃಷ್ಟಿಕರ್ಮವನ್ನು ಮಾಡಿಸುವವನಾದ್ದರಿಂದ ರಾಮನು ಬಿಟ್ಟ ಬಾಣವು ರಾವಣನನ್ನು ಕೊಂದರೂ ಶ್ರೀರಾಮನೇ ಕರ್ತನಾದಂತೆ ಶ್ರೀಹರಿಯೇ ಮುಖ್ಯ ಕರ್ತನು. 1) ಶ್ರೀಹರೀಚ್ಛೆಯು ಮುಖ್ಯಮಾಯೆ. 2) ಪ್ರಕೃತಿಯು ಅಮುಖ್ಯ ಮಾಯೆ. 3) ಜೀವರ ಬಂಧಕ ಶಕ್ತಿಯೇ ಅಮುಖ್ಯತಮ ಮಾಯೆಯು. ಶ್ರೀಹರಿಯ ದೃಷ್ಟಿಪಥದಲ್ಲಿ ನಿಲ್ಲುವುದಕ್ಕೂ ಮಾಯೆಗೆ ಧೈರ್ಯವಿಲ್ಲ. ನಾಚುತ್ತದೆ "ಶೈವಲ" ಎಂಬ ಈ ಜೀವಾಚ್ಛಾದಿಕೆಯಿಂದ ಪೂರ್ಣವಾಗಿ ಮುಗ್ಧರಾಗಿ ಜೀವರು ತಾವೇ ಸ್ವತಂತ್ರರೆಂದು ತಿಳಿಯುತ್ತಾರೆ. ಶ್ರೀಹರಿಯ ಧ್ಯಾನ ಮಾಡಿದಾಗಲೇ ಈ ಮಾಯೆಯು ತೊಲಗಿ ಹೋಗುವುದು. ಶ್ರೀಹರಿಗಿಂತ ಅಧಿಕವಾದುದು ಒಂದೂ ಇಲ್ಲ. ಎಲ್ಲವೂ ಅವನಿಂದ ಭಿನ್ನ. ಶ್ರೀ ಹರಿಯೊಬ್ಬನೇ ಜನ್ಮಾದಿ ಕರ್ತನು, ಮುಖ್ಯಾಶ್ರಯನು, ಸರ್ವನಿಯಾಮಕನು, ಸರ್ವಸ್ವಾಮಿಯಾಗಿರುವನು. ಲಕ್ಷ್ಮಿಯ ಕಟಾಕ್ಷ ವೀಕ್ಷಣೆಯಿಂದ ಪ್ರೇರಿತನಾಗಿ, ಹರಿಯಿಂದ ಸೃಷ್ಟನಾದ ನಾನು ಈ ಜಗತ್ತನ್ನು ಸೃಷ್ಟಿಮಾಡುತ್ತೇನೆ.

ಗುಣವೈಷಮ್ಯವುಳ್ಳ (ಸೃಷ್ಟಿ)ಕಾಲ, ಪ್ರಕೃತಿ, ಬ್ರಹ್ಮನಾದ ನನ್ನ ಅದೃಷ್ಟ

ಇವುಗಳಿಂದ ವಿಕಾರ ಹೊಂದಿದ ಪ್ರಕೃತಿಯಿಂದ ಮಹತ್ತತ್ತ್ವವೂ ಅದರಿಂದ ಅಹಂಕಾರ ತತ್ತ್ವವೂ ಉತ್ಪನ್ನವಾಯಿತು. ಅಹಂಕಾರವು ವಿಕಾರ ಹೊಂದಿ ವೈಕಾರಿಕ, ರಾಜಸ ಮತ್ತು ತಾಮಸ ಅಹಂಕಾರವೆಂದು ಮೂರು ಒಗೆ ಆಯಿತು.

ರುದ್ರದೇವನ ದೇಹವೇ ಅಹಂಕಾರತತ್ತ್ವ. ರುದ್ರ ಮತ್ತು ಈ ಅಹಂಕಾರತತ್ತ್ವ ಇವುಗಳೂ, ಪಂಚಭೂತಗಳೂ, ಕರ್ಮಜ್ಞಾನೇಂದ್ರಿಯಗಳೂ, ಮನಸ್ಸು ಮತ್ತು ದಿಕ್ಕುಗಳು ಇವನ್ನೂ, ಇವುಗಳ ಅಭಿಮಾನಿ ದೇವತೆಗಳನ್ನೂ ಸೃಷ್ಟಿಸುವ ಶಕ್ತಿಯನ್ನು ಹೊಂದಿರುವುವು. ಶ್ರೀಹರಿಯು ತಾಮಸಾಹಂಕಾರದಿಂದ ಶಬ್ದ ತನ್ಮಾತ್ರವನ್ನು ಸೃಷ್ಟಿಸಿ, ಆದರಿಂದ ಆಕಾಶವನ್ನು ಸೃಷ್ಟಿಸಿದನು. ಆಕಾಶದ ಗುಣ ಶಬ್ದ. ಈ ಶಬ್ದವೇ ಶ್ರೀಹರಿಯನ್ನೂ, ಅವನಿಂದ ಕಾಣಲ್ಪಡುವ ಜಗತ್ತನ್ನೂ ತೋರಿಸುವ ಪ್ರಮಾಣ. ಆಕಾಶದಿಂದ ಸ್ಪರ್ಶಯುಕ್ತವಾದ ಗಾಳಿಯನ್ನು ಸೃಷ್ಟಿಸಿದನು. ಈ ವಾಯುಭೂತದಲ್ಲಿ ಶಬ್ದಗುಣವೂ ಬಂದು ಸೇರಿದೆ. ಈ ವಾಯುವು ಎಲ್ಲರನ್ನೂ ಚೇಷ್ಟಿಸುವಂತೆ ಮಾಡುವುದರಿಂದ ಪ್ರಾಣವೆಂದೂ, ತಿರಸ್ಕರಿಸುವ ಶಕ್ತಿ ಇರುವುದರಿಂದ ಓಜಸ್ಸೆಂದೂ ಶತ್ರುಗಳಿಂದ ತಿರಸ್ಕಾರವನ್ನು ಹೊಂದದಿರುವುದರಿಂದ ಸಹಃ ಎಂದೂ, ತನಿಚ್ಛಾನುಸಾರ ಕಾರ್ಯಮಾಡುವುದರಿಂದ ಬಲವೆಂದೂ, ಸರ್ವಧಾರಕವದ್ದರಿಂದ ವಿಧೃತಿಯೆಂದೂ ಕರೆಸಿಕೊಳ್ಳುವುದು. ಶ್ರೀಹರಿಯು, ರೂಪ ಸ್ಪರ್ಶ, ಶಬ್ದಗಳನ್ನುಳ್ಳ ತೇಜಸ್ಸನ್ನು ಸೃಷ್ಟಿಸಿದನು. ಇದರಿಂದ ರಸ, ರೂಪ, ಸ್ಪರ್ಶ, ಶಬ್ದಗಳನ್ನು ಹೊಂದಿರುವ ಪೃಥಿವಿಯನ್ನು ಸೃಷ್ಟಿಸಿದನು. ವೈಕಾರಿಕಾಹಂಕಾರದ ಸಾತ್ವಿಕ ಭಾಗದಿಂದ ಅಂತಃಕರಣವೆನಿಸಿದ ಮನಸ್ಸನ್ನು ಸೃಷ್ಟಿಸಿದನು. ವಿಶಿಷ್ಟ ಕಾರ್ಯಶಕ್ತಿವುಳ್ಳವರಾದುದರಿಂದ ವೈಕಾರಿಕರೆನಿಸುವ ದಿಗ್ದೇವತೆಗಳು, ವಾಯು, ಸೂರ್ಯ ವರುಣ ಅಶ್ವಿನೀದೇವತೆಗಳು, ಅಗ್ನಿ, ಇಂದ್ರ ವಿಷ್ಣು, ಮಿತ್ರ ಮತ್ತು ದಕ್ಷ ಇವರು ಕ್ರಮವಾಗಿ ಶ್ರೋತ್ರ, ಸ್ಪರ್ಶ, ಚಕ್ಷುಃಸು, ಜಿಹ್ವೆ, ಘ್ರಾಣ, ವಾಕ್, ಪಾಣಿ, ಪಾದ, ಪಾಯು ಮತ್ತು ಗುಹ್ಯ ಎಂಬ ಜ್ಞಾನ ಕರ್ಮೇಂದ್ರಿಯಗಳ ಅಭಿಮಾನಿ ದೇವತೆಗಳನ್ನು ಸೃಷ್ಟಿಸಿದನು. ತೈಜಸಾಹಂಕಾರದಿಂದ ಹತ್ತು ಇಂದ್ರಿಯಗಳನ್ನು ಸೃಷ್ಟಿಸಿದನು. ಬುದ್ಧಿ ಮತ್ತು ಅದರ ಅಭಿಮಾನಿನಿಯಾದ ಉಮಾದೇವಿ ಕರ್ಮ ಮಾಡಲು ಶಕ್ತಿ ಕೊಡುವ ಅಹಂಕಾರಿಕ ಪ್ರಾಣನನ್ನೂ ಸೃಷ್ಟಿಸಿದನು. ಇವೆಲ್ಲ ಬ್ರಹ್ಮಾಂಡದ ಹೊರಗಿನ ಸೃಷ್ಟಿ. ತತ್ತ್ವದೇವತೆಗಳಿಂದ ಸ್ತುತ್ಯನಾಗಿ ಶ್ರೀಹರಿಯು ತತ್ತ್ವಗಳಲ್ಲಿ ಪ್ರವೇಶಿಸಿ ಪಂಚಭೂತಗಳ ಪರಸ್ಪರ ಸಂಯೋಗದಿಂದ ಬ್ರಹ್ಮಾಂಡವನ್ನು ಸೃಷ್ಟಿಸಿದನು. ಇದೇ ಜೀವರಿಗೆ ಸಂಸಾರವೆಂಬ ಭಯವನ್ನುಂಟು ಮಾಡುವ ಗೃಹವು. ಈ ಬ್ರಹ್ಮಾಂಡವು ಸಾವಿರ ವರ್ಷಗಳು ನೀರಿನ ಮಧ್ಯೆ ಇತ್ತು. ಶ್ರೀಹರಿಯು ಆದರೊಳಗೆ ಪ್ರವೇಶಿಸಿ, ಬ್ರಹ್ಮದೇವನನ್ನು ಸೃಷ್ಟಿಸಿದನು. ಬ್ರಹ್ಮಾಂಡದಲ್ಲಿ ವ್ಯಕ್ತವಾದ ಭಗವಂತನಿಗೆ ಪುರುಷ ಎಂದು ಹೆಸರು. ಅವನಿಗೆ ಅನಂತ ತೊಡೆ, ಕಾಲು, ತೋಳು, ಕಣ್ಣು, ಮುಖ ಮತ್ತು ಶಿರಸ್ಸುಗಳುಂಟು. 50 ಕೋಟಿ ಯೋಜನ

ವಿಸ್ತಾರವಾದ ಬ್ರಹ್ಮಾಂಡದಷ್ಟೇ ದೊಡ್ಡದೇಹವುಳ್ಳ ಪುರುಷನ ಅವಯವಗಳನ್ನು ಆಶ್ರಯಿಸಿ 14 ಲೋಕಗಳೂ ಸೃಷ್ಟವಾದುವು. ಇವನ ಮುಖಾದಿಗಳಿಂದ ಬ್ರಾಹ್ಮಣಾದಿ ನಾಲ್ಕು ವರ್ಣಗಳೂ ಉತ್ಪನ್ನವಾದುವು. ಹೀಗೆ ಲೋಕಗಳನ್ನು ಸೃಷ್ಟಿಸಿ, ಅವಕ್ಕೆ ಆಧಾರನಾಗಿ, ಅವುಗಳಲ್ಲಿ ವ್ಯಾಪ್ತನಾಗಿ, ಅವುಗಳಿಗಿಂತ ಉತ್ತಮನಾದ್ದರಿಂದ ವಿರಾಟಪುರುಷನಾಮಕನಾದ ಅವನಿಗೆ ಲೋಕಮಯನೆಂದು ಹೆಸರು. ಸ್ಥೂಲ ರೂಪೋಪಾಸಕರು ಈ ವಿರಾಟ ರೂಪವನ್ನೇ ಉಪಾಸಿಸುವರು.

## ಐದನೆಯ ಅಧ್ಯಾಯ ಮುಗಿದುದು

ಇಂದ್ರಿಯಾಭಿಮಾನಿ ದೇವತೆಗಳು, ಸಪ್ತ ಛಂದಸ್ಸುಗಳು, ಹವ್ಯ, ಕವ್ಯ, ಎಲ್ಲ ಬಗೆ ಅನ್ನಗಳು, ಪ್ರಾಣ, ಓಷಧಿಗಳು, ಯಜ್ಞ ಮತ್ತು ಅದಕ್ಕೆ ಬೇಕಾದ ವಸ್ತುಗಳು ಮೊದಲಾದ ಸರ್ವವೂ ಪರಮಾತ್ಮನಿಂದ ಉತ್ಪನ್ನಗಳಾಗಿವೆ ಮತ್ತು ಅವನನ್ನೇ ಆಶ್ರಯಿಸಿವೆ. ನಾರದ ! ನಾನು, ನೀನು ಹೆಚ್ಚೇನು ? ಹಿಂದಿನ, ಇಂದಿನ. ಮುಂದಿನ ಸಕಲವಸ್ತುಗಳೂ ಶ್ರೀಹರಿಯ ಅಧೀನಗಳೂ, ಅವನಿಂದ ವ್ಯಾಪ್ತಗಳಾಗಿವೆ. ಅವನೇ ಸರ್ವರ ಚಟುವಟಿಕೆಗಳಿಗೂ ಕಾರಣನಾಗಿ ಪ್ರಾಣ ನೆನಿಸಿರುವವನು. ಬ್ರಹ್ಮಾಂಡದ ಒಳಗೆ, ಹೊರಗೆ ಇರುವ ಸಕಲ ಪದಾರ್ಥಗಳನ್ನೂ ನೋಡುವವನು. ಮುಕ್ತ, ಅಮುಕ್ತ ಜಗತ್ತಿನಿಂದ ಭಿನ್ನನು. ಅವ್ಯಕ್ತಾದಿ ಸಕಲ ತತ್ತ್ವಗಳೂ, ತತ್ತ್ವಾಭಿಮಾನಿಗಳೂ, ಸಕಲಜೀವರೂ ಇವರನ್ನೆಲ್ಲ ಮೀರಿರುವವನು. ಆದ್ದರಿಂದಲೇ ಅನಂತ ಮುಕ್ತ ಸಮುದಾಯಕ್ಕೆ ಸರ್ವಾಭೀಷ್ಟಪ್ರದನೂ, ನಿಯಾಮಕನೂ ಆಗಿರುವವನು. ಈ ಮಹಿಮೆ ಅವನನ್ನು ಬಿಟ್ಟರೆ ಇನ್ನಾರಲ್ಲೂ ಇಲ್ಲ. ಲಕ್ಷ್ಮೀಬ್ರಹ್ಮಾದಿ ಸಮಸ್ತ ಚೇತನರೂ ಇವನ ಭಿನ್ನಾಂಶರೆಂದು ಜ್ಞಾನಿಗಳು ಹೇಳಿರುವರು. ಪರಮಾತ್ಮನ ಸ್ವರೂಪಾಂಶಗಳು ಯಾವುವೆಂದರೆ :- ಅನಂತಾಸನದಲ್ಲಿರುವವನು ಅನಂತಾಸನನು. ಅವನಿಗೆ ಅಮೃತನೆಂದು ಹೆಸರು. ವೈಕುಂಠದಲ್ಲಿರುವ ವೈಕುಂಠನಾಮಕನು ಕ್ಷೇಮ ನೆಂದು ಕರೆಯಲ್ಪಡುವನು. ಶ್ವೇತದ್ವೀಪದಲ್ಲಿರುವ ಪದ್ಮನಾಭನು ಅಭಯ ನೆನಿಸುತ್ತಾನೆ. ಹರಿಯಸ್ವರೂಪಾಂಶಗಳಾದ ಈ ಮೂರೂ, ಅನಂತಾಸನ, ವೈಕುಂಠ, ಶ್ವೇತದ್ವೀಪಗಳೆಂಬ ಮೂರು ಲೋಕಗಳನ್ನೂ ಮೂರು ತಲೆಗಳ ಮೇಲೆ ಧರಿಸಿವೆ. ಇಂದ್ರ ಲೋಕದ ಕೆಳಗೆ ಇರುವುದು ವೈಶ್ವಾನರ ಲೋಕ. ಅಲ್ಲಿರುವ ಯಜ್ಞನಾಮಕ ಶ್ರೀಹರಿಯನ್ನು ಗೃಹಸ್ಥರು ಸೇವಿಸುವರು. ಧ್ರುವ ಮೊದಲಾದ ಲೋಕಗಳಲ್ಲಿರುವ ಶ್ರೀಹರಿಯ ರೂಪಗಳನ್ನು ಸಂನ್ಯಾಸಿಗಳೇ ಮೊದಲಾದವರೂ, ಮೇರುವಿನಲ್ಲಿರತಕ್ಕ ರೂಪವನ್ನು ವಾನಪ್ರಸ್ಥರೂ, ಸೂರ್ಯಮಂಡಲದಲ್ಲಿರುವ ಪರಮಾತ್ಮನನ್ನು ಬ್ರಹ್ಮಚಾರಿಗಳೂ ಸೇವಿಸುವರು.

ಬ್ರಹ್ಮಾಂಡದೊಳಗೆ ಶ್ರೀಹರಿ ವಿರಾಟ್ ನಾಮಕನಾಗಿ ಶೇಷನ ಮೇಲೆ ಮಲಗಿರುವನು. ಅವನ ನಾಭಿಯ ಕಮಲದಿಂದ ಚತುರ್ಮುಖನಾದ ನಾನು ಹುಟ್ಟಿದೆ. ನಾರದ ! ಆಗ ಯಜ್ಞ ಮಾಡಬೇಕೆಂದು ನೋಡಿದೆ. ಒಂದೂ ಇರಲಿಲ್ಲ. ಆಗ ಬ್ರಹ್ಮಾಂಡ ವ್ಯಾಪಿಯಾದ ಹರಿಯು ತನ್ನ ಅವಯವಗಳಿಂದ ಯಜ್ಞ ಸಾಮಗ್ರಿಗಳನ್ನು ಸೃಷ್ಟಿಸಿ ಅವುಗಳಲ್ಲಿ ತಾನೂ ವ್ಯಾಪ್ತನಾಗಿದ್ದುಕೊಂಡು ಯಜ್ಞಸಾಮಗ್ರಿಗಳನ್ನು ಒದಗಿಸಿದನು. ಅವನಿಂದ ಪ್ರೇರಿತನಾಗಿ ಆ ಸಾಮಗ್ರಿಗಳಿಂದ ಶ್ರೀಹರಿಯನ್ನು ಕುರಿತು ಯಜ್ಞ ಮಾಡಿದೆನು. ನನ್ನಂತೆಯೇ ಈ ಪ್ರಜೇಶ್ವರರೂ ಹರಿಯನ್ನು ಯಜ್ಞಗಳಿಂದ ಸೇವಿಸಿದರು. (ಇದೇ ಪುರುಷಸೂಕ್ತದ ಅರ್ಥ) ಸಕಲ ಬಲವೂ ನನಗೆ ಬಂದಿರುವುದು ಶ್ರೀಹರಿಯ ಅನುಗ್ರಹದಿಂದಲೇ. ಅವನಿಂದಲೇ ನಿಯುಕ್ತನಾಗಿ ನಾನು ಸೃಷ್ಟಿಸುವೆನು. ಅವನ ಅಧೀನನಾಗಿಯೇ ರುದ್ರನು ಜಗತ್ತನ್ನು ಸಂಹರಿಸುವನು. ಈ ಸೃಷ್ಟಿ, ಸಂಹಾರ, ರಕ್ಷಣಾ ಶಕ್ತಿಗಳು ಶ್ರೀಹರಿಗೇ ಸೇರಿರುವುವು. ಜ್ಞಾನ, ಬಲ, ಕ್ರಿಯಾ ಶಕ್ತಿಗಳೂ ಅವನವೇ. ಇಂತಹ ಶಕ್ತಿವಂತನಾದ ಶ್ರೀವಿಷ್ಣುವೇ ಜಗದ್ರಕ್ಷಕನೇ ಹೊರತು ನಾನಲ್ಲ.

ನಾರದ ! ನೀನು ಕೇಳಿದ್ದಕ್ಕೆ ಉತ್ತರಿಸಿರುವೆನು. ಎಂದೂ ನನ್ನ ಬಾಯಲ್ಲಿ ಸುಳ್ಳುಬರುವುದಿಲ್ಲ. ನಾನು ಹೇಳಿದ್ದೆಲ್ಲ ಸತ್ಯವಾದುದು. ನಾನು ಎಲ್ಲರಿಗಿಂತ ಜ್ಞಾನಿ ಶ್ರೇಷ್ಠನಾದರೂ ನನಗೆ ಕಾರಣನಾದ ಶ್ರೀಹರಿಯನ್ನು ಪೂರ್ಣವಾಗಿ ತಿಳಿಯಲಾರೆನು. ಸಂಸಾರಕ್ಕೆ ಕಾರಣವಾದ ಕರ್ಮರಸವನ್ನು ಸ್ಮರಿಸಿದ ಮಾತ್ರಕ್ಕೆ ಬತ್ತಿಸುವ ಶ್ರೀಹರಿಯ ಅವತಾರರೂಪಗಳನ್ನು ಜ್ಞಾನಿಗಳು ಉಪಾಸಿಸುವರು. ಅವು ಅನಂತವಾಗಿವೆ. ಆದರೂ ಕೆಲವನ್ನು ಹೇಳುವೆನು.

**ಆರನೆಯ ಅಧ್ಯಾಯ ಮುಗಿದುದು**

**1. ವರಾಹ** : ಶ್ವೇತವರಾಹ ಕಲ್ಪದಲ್ಲಿ ಮೊದಲು ಶ್ರೀಹರಿಯು ವರಾಹ ರೂಪದಿಂದ ಅವತರಿಸಿದನು. ಅಪ್ರಾಕೃತದೇಹದಿಂದಲೇ ಯಾಗಕ್ಕೆ ಬೇಕಾದ ಸರ್ವ ಸಾಮಗ್ರಿಗಳನ್ನು ಸೃಷ್ಟಿಮಾಡಿ **ಯಜ್ಞವರಾಹ**ನೆಂದು ಪ್ರಸಿದ್ಧನಾದನು. ಭೂಮಿಯು ತಾನಾಗಿ ಮುಳುಗಿ ರಸಾತಳವನ್ನು ಸೇರಿದ್ದಿತು. ಶ್ರೀಶ್ವೇತವರಾಹಸ್ವಾಮಿಯು ಆ ಭೂಮಿಯನ್ನು ತನ್ನ ದಾಡೆಯ ಕೊನೆಯಲ್ಲಿಟ್ಟುಕೊಂಡು ಮೇಲಕ್ಕೆ ಬರುತ್ತಿದ್ದನು. ಆಗ ಆದಿದೈತ್ಯ ಹಿರಿಣ್ಯಾಕ್ಷನು ತಡೆದನು. ಶ್ರೀಹರಿಯು ಗದೆಯಿಂದ ಹೊಡೆದು ಆದೈತ್ಯನ ದೇಹವನ್ನು ಸೀಳಿ ಕೊಂದನು.

2. **ಯಜ್ಞ** , ರುಚಿ ಪ್ರಜೇಶ್ವರ ಮತ್ತು ಅವನ ಪತ್ನಿಯಾದ ಆಕೂತಿ ದೇವಿಯಲ್ಲಿ ಹರಿಯು ಯಜ್ಞನಾಮಕನಾಗಿ ಅವತರಿಸಿದನು. ಅನಾದಿ ಪತ್ನಿಯಾದ

ಲಕ್ಷ್ಮೀದೇವಿಯೂ ದಕ್ಷಿಣಾ ನಾಮಕಳಾಗಿ ಅವತರಿಸಿದಳು. ಯಜ್ಞನು ಪ್ರಥಮ ಮನ್ವಂತರದಲ್ಲಿ ಇಂದ್ರಪದವಿಯನ್ನು ಆಳಿದನು. ಆಮನ್ವಂತರ ದೇವತೆಗಳಿಗೆ ತುಷಿತರು ಎಂದು ಹೆಸರು. ಆ ದೇವತೆಗಳನ್ನು ಯಜ್ಞನು ಸೃಷ್ಟಿಸಿದನು. ಆಕೂತಿಯ ತಂದೆ ಯಾದ ಸ್ವಾಯಂಭುವ ಮನುವು ಈಶಾವಾಸ್ಯಾದಿ ಮಂತ್ರಗಳಿಂದ ಯಜ್ಞನನ್ನೇ ಸ್ತುತಿಸಿ, ರಾಕ್ಷಸರ ಭಯವನ್ನು ಪರಿಹರಿಸಿಕೊಂಡನು. ಸಂಸಾರ ಕ್ಲೇಶವನ್ನು ಪರಿಹರಿ ಸುವುದರಿಂದ ಯಜ್ಞನಿಗೆ ಹರಿ ಎಂಬ ಹೆಸರು ಸಾರ್ಥಕವಾಯಿತು.

3. **ಕಪಿಲ**. ದೇವರು ಕರ್ದಮಪ್ರಜೇಶ್ವರ ತತ್ಪತ್ನಿ ದೇವ ಹೂತಿಯ ರಲ್ಲಿ ಕಪಿಲನೆಂಬ ನಾಮದಿಂದ ಅವತರಿಸಿದನು. ತಾಯಿಗೆ ತತ್ತ್ವಸಂಖ್ಯಾನವೆಂಬ ಆತ್ಮ ವಿದ್ಯೆಯನ್ನು ಉಪದೇಶಿಸಿದನು

4. **ದತ್ತ**, ಅತ್ರಿ ಮತ್ತು ಅನಸೂಯೆಯರಲ್ಲಿ ಅವತರಿಸಿದ ಶ್ರೀ ಹರಿಗೆ ದತ್ತನೆಂದು ಹೆಸರು. ಇವನನ್ನು ಸೇವಿಸಿದ ಯದು ಮತ್ತು ಕಾರ್ತವೀರ್ಯಾರ್ಜುನಾದಿ ರಾಜರು ಅಣಿಮಾದಿ ಅಷ್ಟಸಿದ್ಧಿಯನ್ನು ಪಡೆದರು.

5. **ವಿಷ್ಣು**: ಮೊದಲು ಜಗತ್ಸೃಷ್ಟಿಸಬೇಕೆಂದು ಬ್ರಹ್ಮನಾದ ನಾನು ತಪಸ್ಸನ್ನು ಮಾಡಿದೆ. ರಕ್ಷಣೆಗಾಗಿ "ವಿಷ್ಣು"ರೂಪದಿಂದ ಶ್ರೀಹರಿಯು ಅವತರಿಸಿದನು. ಆಗ ಇನ್ನೂ ಸನಕಾದಿಗಳು ಹುಟ್ಟಿರಲಿಲ್ಲ. ವಿಷ್ಣುರೂಪೀ ಹರಿಯು ನನಗೆ ಪರಮಾತ್ಮ ವಿದ್ಯೆಯನ್ನು ಉಪದೇಶಿಸಿದನು. ಮುಖ್ಯಪ್ರಯೋಜನ ಜಗತ್ತಿನ ರಕ್ಷಣೆ.

6. **ನರನಾರಾಯಣ**· ಯಮಧರ್ಮ ಮತ್ತು ಅವನ ಪತ್ನಿಯಾದ ದಕ್ಷ ಪುತ್ರಿ ಮೂರ್ತಿದೇವಿಯಲ್ಲಿ ಹರಿ, ಕೃಷ್ಣ, ನರ, ನಾರಾಯಣ ಎಂಬ ರೂಪ ಗಳಿಂದ ಅವತರಿಸಿದನು. ಈ ನಾಲ್ಕು ರೂಪಗಳಲ್ಲಿ ಶೇಷದೇವರು ನರರೂಪದಿಂದ ಅವತರಿಸಿದರು. ಅವರೊಳಗೆ ನರನಾಮಕ ಪರಮಾತ್ಮನು ಆವೇಶ ಅವತಾರವನ್ನು ಮಾಡಿದನು. ನರನಾರಾಯಣರು ಬದರಿಯಲ್ಲಿ ತಪಸ್ಸನ್ನು ಮಾಡುತ್ತಿ ದ್ದಾಗ ಆ ತಪಸ್ಸನ್ನು ಭಂಗಪಡಿಸಲು ಅಪ್ಸರಸ್ತ್ರೀಯರು ಯತ್ನಿಸಿ ದರು. ಆಗ ನಾರಾಯಣನು ಈ ಅಪ್ಸರೆಯರಿಗಿಂತ ಅತ್ಯಂತ ಸುಂದರಿಯಾದ ಊರ್ವಶಿ ಎಂಬುವಳನ್ನು ತನ್ನ ತೊಡೆಯಿಂದ ಸೃಷ್ಟಿಸಿದನು. ಇದನ್ನು ನೋಡಿ ಬಂದವರೆಲ್ಲರೂ ನಾಚಿ ಹಿಂತಿರುಗಿದರು. ಆದರೆ ತಪಸ್ಸನ್ನು ಭಂಗ ಪಡಿಸಲು ಮುಖಂಡ ನಾಗಿ ಬಂದ ಕಾಮನನ್ನು ಹಿಂದೆ ರುದ್ರನು ಕಾಮನನ್ನು ಸುಟ್ಟು ಬಳಿಕ ಕೋಪವನ್ನು ಸುಡಲಿಲ್ಲ ನಾರಾಯಣನು ಹಾಗಲ್ಲ. ಏಕೆಂದರೆ ಕೋಪವು ಹರಿಯ ಮನಸ್ಸನ್ನು ಪ್ರವೇಶಿಸಲು ಹೆದರುವುದು. ಹೀಗಿರುವಾಗ ಕಾಮಕ್ಕೆಡೆಯೆಲ್ಲಿ ?

7. **ವಾಸುದೇವ**. ಧ್ರುವನಿಗೆ ಅನುಗ್ರಹವನ್ನು ಮಾಡಲು ಹರಿಯು

ವಾಸುದೇವನಾಗಿ ಅವತರಿಸಿದನು. ಅವನು ತನಗೆ ತಾನೇ ಅಧಿಪತಿಯಾಗಿದ್ದು ತನ್ನ ಸ್ಥಾನವನ್ನು ಧ್ರುವನಿಗೆ ಕೊಟ್ಟನು.

8. **ಪೃಥುನಾಮಕ ಆವೇಶಾವತಾರ :** ವೇನನೆಂಬ ದೈತ್ಯನು ತನ್ನ ಬಿಟ್ಟರೆ ಬೇರೆ ದೇವರಿಲ್ಲವೆಂದೂ, ಮಾಡುವ ಯಾಗಾದಿವಿಹಿತ ಕರ್ಮಗಳೆಲ್ಲವನ್ನೂ ತನಗೇ ಅರ್ಪಿಸಬೇಕೆಂದೂ ಬೊಗಳುತ್ತ ಸಜ್ಜನರನ್ನು ಹಿಂಸಿಸುತ್ತ ಬಂದನು. ನೊಂದ ಋಷಿಗಳು ಶಪಿಸಿ ಅವನನ್ನು ಕೊಂದರು. ಅವನು ತನ್ನ ಪಾಪಕ್ಕೆ ನಿತ್ಯ ನರಕದಲ್ಲಿ ಬಿದ್ದನು. ಋಷಿಗಳು ಮಂತ್ರವನ್ನು ಹೇಳುತ್ತ ವೇನನ ಬಲಭುಜವನ್ನು ಮಥಿಸಿದರು. ಅಲ್ಲಿಂದ ಪೃಥುರಾಜನು ಹುಟ್ಟಿದನು. ಬ್ರಹ್ಮಾದಿಗಳಿಂದ ಪ್ರಾರ್ಥಿತನಾದ ಶ್ರೀಹರಿಯು ಈ ಪೃಥುರಾಜನಲ್ಲಿ "ಪ್ರಥು" ಎಂಬ ತನ್ನ ರೂಪದಿಂದ ಪ್ರವೇಶಿಸಿದನು. ಇವನೇ ಭೂಮಿಯನ್ನು ಗೋವನ್ನಾಗಿ ಮಾಡಿಕೊಂಡು ಅಮೃತ ಮೊದಲಾದ ಎಲ್ಲ ದ್ರವ್ಯಗಳನ್ನು ಕ್ಷೀರರೂಪದಿಂದ ಕರೆದು ಜಗತ್ತನ್ನು ರಕ್ಷಿಸಿದನು.

9. **ಋಷಭ ·** ನಾಭಿರಾಜ ಅವನ ಪತ್ನಿ ಮೇರುದೇವಿಯಲ್ಲಿ ಋಷಭನಾಮಕನಾಗಿ ಅವತರಿಸಿದನು. ಯೋಗಾಭ್ಯಾಸಗಳಿಂದ ಪರಮ ಹಂಸರು ವ್ರತಗಳನ್ನು ಆಚರಿಸುವ ರೀತಿಯನ್ನು ಲೋಕಕ್ಕೆ ಉಪದೇಶಮಾಡಿ, ಅವರಂತೆ ತಾನೂ ಆಚರಿಸಿ ತೋರಿದನು. ಪರಮಹಂಸರು ಋಷಭನನ್ನೇ ಆಶ್ರಯಿಸಿ ಸದ್ಗತಿ ಹೊಂದುವರು.

10. **ಹಯಗ್ರೀವ :** ನಾರದ ! ನಾನು ಯಜ್ಞ ಮಾಡುತ್ತಿದ್ದಾಗ ಶ್ರೀಹರಿಯು ಹಯಗ್ರೀವನಾಗಿ ಅವತರಿಸಿದನು. ಇವನೇ ಸರ್ವವೇದಗಳಿಗೂ ವಿಷಯನು. ಎಲ್ಲ ಯಜ್ಞಗಳಿಗೂ ಉದ್ದೇಶನು. ಇವನ ಶ್ವಾಸಗಳೇ ವೇದಗಳು.

11. **ಮತ್ಸ್ಯ** ಸೃಷ್ಟಿ ಆರಂಭದಲ್ಲಿ ಮತ್ಸ್ಯನಾಗಿ ಅವತರಿಸಿ ವೇದವನ್ನು ಕದ್ದ ಹಯಗ್ರೀವಾಸುರನನ್ನು ಕೊಂದು ವೇದಗಳನ್ನು ಹಿಂದಕ್ಕೆ ತಂದುಕೊಟ್ಟನು. ಚಾಕ್ಷುಷಮನ್ವಂತರ ಪ್ರಳಯದಲ್ಲಿ ಎರಡನೆ ಬಾರಿ ಮತ್ಸ್ಯಾವತಾರ ಮಾಡಿ ವೈವಸ್ವತ ಮನುವನ್ನು ಉದ್ಧರಿಸಿದನು.

12. **ಕೂರ್ಮ :** ಸಮುದ್ರಮಥನ ನಡೆಯುತ್ತಿದ್ದಾಗ ಕಡಗೋಲಾದ ಮಂದರಪರ್ವತವು ಸಮುದ್ರದಲ್ಲಿ ಮುಳುಗಿತು. ಆಗ ಶ್ರೀಹರಿಯು ಕೂರ್ಮನಾಗಿ ಆ ಪರ್ವತವನ್ನು ಹೊತ್ತನು. ಅದು ತಿರುಗುತ್ತಿದ್ದಾಗ ಬೆನ್ನಿನ ನವೆಯನ್ನು ಹೋಗಲಾಡಿಸಲು ಕೆರೆದಂತಾಗುತ್ತಿತ್ತು. ಅಂದರೆ ಸುತರಾಂ ಅದರಿಂದ ಯಾವ ತೊಂದರೆಯೂ ಆಗಲಿಲ್ಲವೆಂದು ಭಾವ. ಆಮಥನಕಾಲದಲ್ಲಿ ಶ್ರೀ ಹರಿಯು ಹಾವಿನಲ್ಲೂ, ದೇವದಾನವರಲ್ಲೂ ಸೇರಿಕೊಂಡು ಆ ಕಾರ್ಯವನ್ನು ಮುಗಿಸಿದನು.

**13. ನರಸಿಂಹ ;** ನರಸಿಂಹನಾಗಿ ಅವತರಿಸಿ ಹಿರಣ್ಯ ಕಶಿಪುವನ್ನು ತೊಡೆಯ ಮೇಲೆ ಹಾಕಿಕೊಂಡು ಉಗುರುಗಳಿಂದಲೇ ಆ ದುಷ್ಟನನ್ನು ಸೀಳಿಬಿಟ್ಟನು.

**14. ಗಜೇಂದ್ರ ರಕ್ಷಕ :** ನಕ್ರನಬಾಯಿಗೆ ಸಿಕ್ಕಿ ಸೊರಗಿದ ಗಜೇಂದ್ರನು ಭಗವಂತನಲ್ಲಿಯೇ ಮೊರೆಹೊಕ್ಕು ಸೊಂಡಿಲಿನಿಂದ ಕಮಲಪುಷ್ಪವನ್ನು ಎತ್ತಿ ಸಮರ್ಪಿಸಿ "ಆದಿಪುರುಷನೇ ! ಅಖಿಲ ಲೋಕನಾಥನೆ, ತೀರ್ಥಶ್ರವನೇ ! (ಪವಿತ್ರ ಕೀರ್ತಿವಂತನೆ!) ಶ್ರವಣಮಂಗಳ ನಾಮಧೇಯನೇ ! ಕಾಪಾಡು" ಎಂದನು. ಶ್ರೀ ಹರಿಯು ಕೂಡಲೇ ಒಂದು ಚಕ್ರದಿಂದ ಮೊಸಳೆಯನ್ನು ಕತ್ತರಿಸಿ ಕರುಣೆಯಿಂದ ಗಜೇಂದ್ರನನ್ನು ರಕ್ಷಿಸಿ ಉದ್ಧರಿಸಿದನು.

**15. ವಾಮನ :** ಗುಣೋತ್ತಮನಾದ ಶ್ರೀಹರಿಯು ದೈತ್ಯರ ಗರ್ವನಾಶ ಮಾಡಬೇಕೆಂದು ದೇವತೆಗಳ ತಮ್ಮನಾಗಿ ವಾಮನ ರೂಪದಿಂದವತರಿಸಿದನು. ಮೂರು ಹೆಜ್ಜೆಯ ನೆಪದಿಂದ ಮೂರು ಲೋಕಗಳನ್ನೂ ಆಕ್ರಮಿಸಿದನು. ಆದರಿಂದ ತ್ರಿವಿಕ್ರಮ ನೆಂದೂ ಪ್ರಸಿದ್ಧನಾದನು

**16. ಮಹಿದಾಸ :** ಶ್ರೀಹರಿಯು ಇತರಾದೇವಿಯಲ್ಲಿ ಮಹಿದಾಸನಾಮಕ ನಾಗಿ ಅವತರಿಸಿದನು. ಮುಕ್ತಿಗೆ ಕಾರಣವೆನಿಸಿದ ಕರ್ಮಯೋಗ ಮತ್ತು ಜ್ಞಾನ ಯೋಗಗಳನ್ನೂ, ಭಾಗವತವನ್ನೂ ಉಪದೇಶಿಸಿದನು. ಇದನ್ನು ತಿಳಿಯಬಲ್ಲವರು ವೈಷ್ಣವರೇ ಹೊರತು ಅವೈಷ್ಣವರಲ್ಲ.

**17. ರಾಜರಾಜೇಶ್ವರ .** ನಾಲ್ಕು ಭುಜಗಳುಳ್ಳ ರಾಜರಾಜೇಶ್ವರನೆಂಬ ಪರಮಾತ್ಮನು 14 ಮನ್ವಂತರಗಳಲ್ಲಿರತಕ್ಕ ಚಕ್ರವರ್ತಿಗಳಲ್ಲಿದ್ದು ದುಷ್ಟರಾಜರನ್ನು ಧ್ವಂಸಮಾಡುತ್ತ ಈ ಜಗತ್ತನ್ನು ರಕ್ಷಿಸುತ್ತಿರುವನು.

**18. ಧನ್ವಂತರಿ :–** ಶ್ರೀಹರಿಯು ಧನ್ವಂತರಿಯಾಗಿ ಅವತರಿಸಿದನು. ಅವನ ನಾಮಸ್ಮರಣೆಮಾತ್ರದಿಂದ ಜೀವರು ನಿರೋಗಿಗಳಾಗುವರು. ಅವನು ಅಜ್ಞಾನಾದಿ ಗಳನ್ನು ನಾಶಮಾಡಿ ಮೋಕ್ಷವನ್ನು ಕೊಡುತ್ತಾನೆ. ಯಜ್ಞದಲ್ಲಿ "ಧನ್ವಂತರಯೇ ಸ್ವಾಹಾ" ಎಂದು ಹೇಳಿ ಕೊಡುವ ಹವಿರ್ಭಾಗವನ್ನು ಸ್ವೀಕರಿಸುವನು ಆಯುರ್ವೇದ ವೈದ್ಯ ಶಾಸ್ತ್ರವನ್ನು ರಚಿಸಿ ಬಳಕೆಗೆ ತಂದನು.

**19. ಪರಶುರಾಮ :** ಪರಶುರಾಮನಾಗಿ ಅವತರಿಸಿ ಇಪ್ಪತ್ತೊಂದು ಬಾರಿ ದುಷ್ಟಕ್ಷತ್ರಿಯರ ವಂಶವನ್ನು ನಿರ್ಮೂಲ ಮಾಡಿದನು.

20. ರಾಮ : ಪ್ರಾಣ, ಶ್ರದ್ಧಾ ಮೊದಲಾದ ಹದಿನಾರು ಕಲಾಭಿಮಾನಿಗಳಿಗೆ ಸ್ವಾಮಿಯಾದ ಶ್ರೀಹರಿಯು ರಾಮನಾಗಿ ಅವತರಿಸಿದನು. ಇವನು ಭಗವಂತನೆಂದರಿದ ವರುಣನು ನಡುಗಿ ಸಮುದ್ರವು ಅಡ್ಡ ಬರದಂತೆ ದಾರಿ ಬಿಟ್ಟನು. ದೇವತೆ ಮೊದಲಾದವರನ್ನೆಲ್ಲ ಗೆದ್ದಿದ್ದ ರಾವಣನ ಪ್ರಾಣಗಳು ರಾಮನ ಧನುಷ್ಟಂಕಾರ ಧ್ವನಿ ಕೇಳಿದ ಮಾತ್ರದಿಂದಲೇ ತೊಲಗಿ ಹೋದುವು.

21. ಕೃಷ್ಣ : ಶ್ರೀಹರಿಯು ಕೃಷ್ಣಾವತಾರ ಮಾಡಿ ಅನೇಕ ಕಾರ್ಯವನ್ನು ಮಾಡಿರುವನು. ಇವು ಇನ್ನಾರೊಬ್ಬರಿಂದಲೂ ಮಾಡಲು ಸಾಧ್ಯವೇ ಇಲ್ಲ. ವಿಷ್ಣುವೇ ಕೃಷ್ಣನಾದ್ದರಿಂದ ಸ್ವಮಹಿಮೆಯಿಂದಲೇ ಇವನ್ನು ಮಾಡಿರುವನು. ಉಳಿದವರು ಮಾಡುವುದೆಲ್ಲ ಶ್ರೀಹರಿಯ ಪ್ರೇರಣೆಯಿಂದಲೇ. ಪಾಮರರು ಇವನ ಮಾರ್ಗವನ್ನು ಅರಿಯಲಾರರು ಅಸುರರಿಂದ ಜಗತ್ತಿಗೆ ಪೀಡೆವುಂಟಾಯಿತು. ಈ ಭೂಭಾರವನ್ನಿಳಿಸಲು ಶ್ರೀಹರಿಯು ಸ್ವರೂಪಾಂಶವಾದ ಶುಕ್ಲ ಕೇಶದಿಂದ ಶೇಷಾವತಾರಿಯಾದ ಬಲರಾಮನಲ್ಲಿ ಆವಿಷ್ಟನಾಗಿಯೂ, ಕೃಷ್ಣ ಕೇಶದಿಂದ ಕೃಷ್ಣನಾಗಿಯೂ ಅವತರಿಸಿದನು. ಅವನಿಗೆ ಹತ್ತು ದಿನ ತುಂಬದಿರುವಾಗಲೇ ಅವನನ್ನು ಕೊಲ್ಲಲು ಬಂದ ಪೂತನಿಯ ಮೊಲೆಯುಣ್ಣುವ ನೆಪದಿಂದ ಅವಳ ಪ್ರಾಣವನ್ನೇ ಹೀರಿ ಕೊಂದನು. ಮೂರು ತಿಂಗಳು ಮಗುವಾಗಿರುವಾಗಲೇ ಬಂಡಿಯ ಕೆಳಗೆ ಮಲಗಿದ್ದ ಅವನು ಕಾಲುಗಳನ್ನು ಬಡಿದು ಬಂಡಿಯನ್ನು ತಲೆಕೆಳಗು ಮಾಡಿ ಬಂಡಿಯರೂಪದ ಶಕಟಾಸುರನನ್ನು ಕೊಂದನು. ಅವನನ್ನು ಒರಳಿಗೆ ಕಟ್ಟಿ ಹಾಕಿದ್ದರೂ ಅದನ್ನೂ ಎಳೆದುಕೊಂಡು ಹೋಗಿ ಸಾವಿರ ಧನುಃಸ್ಸುಗಳಷ್ಟು ಎತ್ತರವಾಗಿದ್ದ ಎರಡು ಅರ್ಜುನ (ಬಸರೀ) ವೃಕ್ಷಗಳ ನಡುವೆ ನುಗ್ಗಿ ಅವುಗಳನ್ನುರುಳಿಸಿದನು. ಇವನು ಹರಿಯಲ್ಲದಿದ್ದರೆ ಇಂತಹ ಕಾರ್ಯವನ್ನು ಮಾಡುತ್ತಿದ್ದನೆ ? ಗೋಕುಲದ ಗೋವು, ಗೊಲ್ಲರು ಮಡುವಿನ ವಿಷೋದಕವನ್ನು ಕುಡಿದು ಸತ್ತರು. ಶ್ರೀಕೃಷ್ಣನು ಅನುಗ್ರಹ ದೃಷ್ಟಿಯಿಂದ ನೋಡಿ ಅವರೆಲ್ಲರನ್ನೂ ಬದುಕಿಸಿದನು. ಮತ್ತು ಅವನು ಆ ಮಡುವಿನೊಳಗೆ ಹಾರಿ ಅಲ್ಲಿದ್ದ ಕಾಲಿಯ ಸರ್ಪನ ಮದವನ್ನು ಮುರಿದು, ಆ ಮಡುವಿನಿಂದ ಅವನನ್ನು ಓಡಿಸಿ ಆ ಮಡುವಿನ ನೀರನ್ನು ಪಾನಯೋಗ್ಯವನ್ನಾಗಿ ಮಾಡಿದನು. ಏಕಾಗ್ರ ಚಿತ್ತದಿಂದ ಧ್ಯಾನಿಸುವ ಬ್ರಹ್ಮಾದಿಗಳೂ ಇವನ ಮಹಿಮೆಯನ್ನು ಸಂಪೂರ್ಣವಾಗಿ ಅರಿಯರು. ಶ್ರೀಕೃಷ್ಣನು ದಾವಾಗ್ನಿಯನ್ನು ಪಾನ ಮಾಡಿ ಗೋಕುಲದ ಜನದನಗಳನ್ನು ಉಳಿಸಿದನು. ಇವನ ತಾಯಿಯು ಇವನನ್ನು ಕಟ್ಟಿ ಹಾಕಬೇಕೆಂದು ಎಷ್ಟು ಹಗ್ಗಗಳನ್ನು ಪೋಣಿಸಿ ಹಾಕಿದರೂ ಸಾಧ್ಯವಾಗಲಿಲ್ಲ. ಇದು ಇವನ ಸಾಮರ್ಥ್ಯವನ್ನು ಯಾರೂ ಅಳೆಯಲಾರರೆಂಬುದನ್ನು ತಿಳಿಸುತ್ತದೆ. ಕೃಷ್ಣನು ಆಕಳಿಸಿದ ಬಾಯಿಯಲ್ಲಿ ಬ್ರಹ್ಮಾಂಡವನ್ನು ಕಂಡ ಯಶೋದೆಯು ಚಕಿತಳಾದಳು. ವರುಣಪಾಶದ ಭಯದಿಂದ ನಂದಗೋಪನನ್ನು, ಮಯನ ಮಗನಿಂದ ಗುಹೆಯಲ್ಲಿ

ತುರಕಲ್ಪಟ್ಟಿದ್ದ ಗೋಪಾಲರನ್ನೂ ಬಿಡಿಸಿದವನಿವನೇ. ಗೋಕುಲದವರು ಮೋಹಿತ ರಾಗಿ ಸಂಸಾರ ದುಃಖಕ್ಕೆ ಸಿಕ್ಕಿ ಹಾಕಿಕೊಂಡಿದ್ದರು. ಅಂತಹವರಿಗೆ ಜ್ಞಾನವನ್ನು ಕೊಟ್ಟು, ಸಾಧನೆ ಮಾಡಿಸಿ ಅವರೆಲ್ಲರೂ ವೈಕುಂಠದಲ್ಲಿ ನೆಲೆಸುವಂತೆ ಮಾಡಿದನು ಶ್ರೀಕೃಷ್ಣನು.

ತನ್ನ ಪೂಜೆಯನ್ನು ತಪ್ಪಿಸಿದನೆಂದು ಇಂದ್ರನು ಕುಪಿತನಾಗಿ ಮಳೆಗರೆದು ಗೋಕುಲವನ್ನು ನಾಶ ಮಾಡಲು ಹೊರಟನು. ಶ್ರೀಕೃಷ್ಣನು ಗೋವರ್ಧನಗಿರಿ ಯನ್ನು ಎತ್ತಿ ಕಿರುಬೆರಳಲ್ಲಿ ಏಳುದಿನ ಧರಿಸಿ ನಿಂತು ಗೋಕುಲದವರನ್ನೆಲ್ಲ ಸಂರಕ್ಷಿಸಿ ದನು.

ಬೆಳದಿಂಗಳಲ್ಲಿ ಗೋಪ ಸ್ತ್ರೀಯರನ್ನು ರಾಸಕ್ರೀಡೆಯಿಂದ ಸಂತೋಷಪಡಿಸಿದನು. ಗೋಪಿಕಾ ಸ್ತ್ರೀಯರನ್ನು ಅಪಹರಿಸಿದ ಶಂಖ ಚೂಡನೆಂಬುವನ ಶಿರದಲ್ಲಿದ್ದ ರತ್ನವನ್ನು ಕಿತ್ತುಕೊಂಡು ಅವನನ್ನು ಶಿಕ್ಷಿಸಿ ಓಡಿಸಿದನು. ಶ್ರೀಕೃಷ್ಣನು ವಿಷ್ಣುವಲ್ಲದಿದ್ದರೆ ಈ ಮಹಿಮಾ ಕಾರ್ಯವನ್ನು ಅವನು ಮಾಡಲಾಗುತ್ತಿರಲಿಲ್ಲ. ಯಾರು ಯಾರು ಕ್ಷತ್ರಿ ಯರು ಕೃಷ್ಣ, ಬಲರಾಮ, ಪಾಂಡವರು ಇವರ ಕೈಯಿಂದ ಹತರಾದರೋ ಅವರೆಲ್ಲರೂ ಅವರವರ ಯೋಗ್ಯತೆಗೆ ತಕ್ಕ ಗತಿಯನ್ನು ಹೊಂದಿದರು.

22. **ವೇದವ್ಯಾಸ** . ಸತ್ಯವತೀದೇವಿಯಲ್ಲಿ ಪರಾಶರರಿಂದ ಅವತರಿಸಿದ ವೇದವ್ಯಾಸ ರೂಪಿ ಭಗವಂತನು, ವೇದ ವಿಭಾಗ ಮಾಡಿ, ಬ್ರಹ್ಮ ಸೂತ್ರವೇ ಮೊದಲಾದ ಗ್ರಂಥಗಳನ್ನು ರಚಿಸಿದನು

23. **ಬುದ್ಧ** : ಬುದ್ಧನಾಗಿ ಅವತರಿಸಿದ ಭಗವಂತನು ಹೇಳಿದ ಮಾತುಗಳು ಅಯೋಗ್ಯರಿಗೆ ಸಲ್ಲುವ ಪಾಷಂಡ ಮತಗಳನ್ನು ವಿವರಿಸಿದಂತಿವೆ. ಆದರೆ ದೇವತೆ ಗಳಿಗೆ ಸಮೀಚೀನವಾದ ತತ್ತ್ವಾರ್ಥವನ್ನು ತಿಳಿಸಲು ಪ್ರಶಾಂತ ಸಂಹಿತೆಯಲ್ಲಿ ಭಗವಂತನೇ ವ್ಯಾಖ್ಯಾನ ಮಾಡಿರುವನು. ಉದಾಹರಣೆಗೆ — "ವೇದೋಽ ಪ್ರಮಾಣಂ" ಎಂಬ ಮಾತನ್ನು ವೇದವು ಪ್ರಮಾಣವಲ್ಲ—ಎಂದು ಅಯೋಗ್ಯರು ತಿಳಿದರು. ದೇವತೆಗಳು 'ಅ' ಕಾರವಾಚ್ಯನಾದ ಶ್ರೀಹರಿಯನ್ನು ತಿಳಿಸುವ ಪ್ರಮಾಣ ವೆಂದು ತಿಳಿದರು.

24. **ಕಲ್ಕಿ** : ಕಲಿಯುಗದ ಕೊನೆಯಲ್ಲಿ ಕಲ್ಕ್ಯವತಾರವನ್ನು ಹರಿಯು ಮಾಡಿದನು.

ಇವೆಲ್ಲ ಸ್ವರೂಪಾವತಾರಗಳು.

ಇದಲ್ಲದೆ ಇತರರಲ್ಲಿರುವ ಶ್ರೇಷ್ಠತೆಯನ್ನು ಜೀವರು ಗುರ್ತಿಸುವುದಕ್ಕಾಗಿ ತನ್ನ ಸಾಮರ್ಥ್ಯವನ್ನು ತೋರಿಸುವ ಶ್ರೀಹರಿಯ ವಿಭೂತಿ ರೂಪಗಳು ಅನಂತ ವಾಗಿವೆ. ಶ್ರೀಹರಿಯ ಶಕ್ತಿಯನ್ನು ಯಾರೂ ಸಂಪೂರ್ಣವಾಗಿ ತಿಳಿಯಲಾರರು. ಶ್ರೀಕೃಷ್ಣನ ಪಾದಧೂಳಿಯಿಂದ ಪವಿತ್ರವಾದ ವೃಂದಾವನದ ಪಶುಪಕ್ಷಿಗಳೇ ಉದ್ಧೃತರಾಗಿಬಿಟ್ಟರು ಅಂದ ಮೇಲೆ ಶಾಸ್ತ್ರಾರ್ಥ ತಿಳಿದ, ಯೋಗ್ಯ ಮಾನವರು ಉದ್ಧೃತರಾಗುವುದಿಲ್ಲವೆ ? ನಾರದ ! ನಿನಗೆ ಶ್ರೀಹರಿಯ ಮಹಿಮೆಯನ್ನು ಸಂಕ್ಷೇಪ ವಾಗಿ ತಿಳಿಸಿರುವೆನು. ಮುಂದೆ ಹರಿಯು ವ್ಯಾಸನಾಗಿ ಅವತರಿಸುವನು. ಆಗ ನೀನು ಅವರಿಗೆ ಇದನ್ನು ವಿಜ್ಞಾಪಿಸಿ. ಭಾಗವತವೆಂಬ ಪುರಾಣವನ್ನು ರಚಿಸುವಂತೆ ಪ್ರಾರ್ಥಿಸು. ಭಾಗವತವು ಸರ್ವಸಜ್ಜನರೂ ಪುರುಷಾರ್ಥಕ್ಕೆ ಕಾರಣವೆಂದು ವಿಜ್ಞಾಪಿಸು. ಆದರಿಂದ ಸಜ್ಜನರು ಸತ್ಸಾಧನೆ ಮಾಡುವಂತಾಗಲಿ.

## ಏಳನೆಯ ಅಧ್ಯಾಯ ಮುಗಿದುದು

**ಪರೀಕ್ಷಿತ್** :— ಬ್ರಹ್ಮಜ್ಞಾನಿಗಳಾದ ಶುಕಾಚಾರ್ಯರೇ ! ನನ್ನ ಮನಸ್ಸು ಶ್ರೀಹರಿಯಲ್ಲಿಯೇ ಸೇರಬೇಕು. ಅವನ ಗುಣಗಳನ್ನು ಮನನ ಮಾಡುತ್ತ ದೇಹ ಬಿಡುವಂತೆ ತಾವು ಹರಿಕಥೆಯನ್ನು ಹೇಳೋಣವಾಗಲಿ. ಮತ್ತು ಈ ಪ್ರಶ್ನೆಗಳಿಗೆ ಉತ್ತರವನ್ನು ದಯಪಾಲಿಸಿರಿ :—

1. ಜೀವನು ಅಪ್ರಾಕೃತ. ಇವನಿಗೆ ಪ್ರಕೃತಿಯ ಸಂಬಂಧವಾಗಲು ಹರೀಚ್ಛೆಯು ಕಾರಣವೇ ಅಥವಾ ಬೇರೆ ಕರ್ಮ ಕಾರಣವೆ ?

2. ಬ್ರಹ್ಮಾಂಡದೊಳಗೆ ಸೃಷ್ಟರಾದ ಬ್ರಹ್ಮದೇವರು ಅಹಂಕಾರಾದಿ ತತ್ತ್ವಗಳನ್ನೂ ತದಭಿಮಾನಿಗಳನ್ನೂ ಯಾರ ಅನುಗ್ರಹದಿಂದ ಸೃಷ್ಟಿಸಿದರು ?

3. ನಾಭಿಪದ್ಮದಿಂದ ಬಂದ ಬ್ರಹ್ಮದೇವರು ಪದ್ಮನಾಭರೂಪವನ್ನು ಯಾವ ಪ್ರಕಾರದಿಂದ ಕಂಡರು.

4. ಪದ್ಮನಾಭನು ತನ್ನ ಅಧೀನವಾದ ಬಂಧಕಶಕ್ತಿಯನ್ನು ಪ್ರವರ್ತಿಸುವಂತೆ ಪ್ರೇರಿಸದೆ ಮುಕ್ತಜೀವರಿಗೆ ಪ್ರವರ್ತಕನಾಗಿ ಯಾವ ಲೋಕದಲ್ಲಿ ವ್ಯಕ್ತನಾಗಿರುವನು?

5. ಬ್ರಹ್ಮಕಲ್ಪ, ದಿನಕಲ್ಪ, ಮನ್ವಂತರ ಮತ್ತು ವರಾಹಕಲ್ಪ ಇವುಗಳ ಪರಿಮಾಣವೆಷ್ಟು ?

6. ಅತ್ಯಲ್ಪಕಾಲದಿಂದ ಆರಂಭಿಸಿ ಅನಂತ ಕಾಲದವರೆಗಿನ ಕಾಲವನ್ನು ತಿಳಿಯುವುದೆಂತು ?

7. ಕರ್ಮ ಫಲಗಳು ಎಷ್ಟು ವಿಧ ? ಅವುಗಳ ಪ್ರಕಾರವೇನು ? ಕರ್ಮಸಂತತಿಯು ಯಾರನ್ನು ಸೇರುವುದು ? ಕರ್ಮಕರ್ತನಾರು ?

8. ಮಹತ್ತತ್ತ್ವ ಮೊದಲಾದ ಗುಣಗಳ ಕಾರ್ಯಗಳಾವುವು ? ಸತ್ವ ಮೊದಲಾದ ಗುಣಗಳ ಅಭಿಮಾನಿ ದೇವತೆಗಳ ಸಾಮರ್ಥ್ಯವೇನು ?

9. ಭೂಮಿ, ಪಾತಾಳ, ದಿಕ್ಕು, ಆಕಾಶ, ಗ್ರಹ, ನಕ್ಷತ್ರ, ಪರ್ವತ, ನದಿ ಸಮುದ್ರ ಮತ್ತು ದ್ವೀಪಗಳ ಪರಿಮಾಣವೇನು ? ಇವುಗಳಲ್ಲಿ ವಾಸಿಸುವ ಪ್ರಾಣಿಗಳ ಉತ್ಪತ್ತಿ ಕ್ರಮವನ್ನು ತಿಳಿಸಿರಿ

10. ಬ್ರಹ್ಮಾಂಡದ ಒಳ ಹೊರಗೆ ವ್ಯಾಪ್ತನಾದ ಶ್ರೀಹರಿಯ ಅಣುರೂಪಗಳ ಮತ್ತು ಮಹತ್ತು ರೂಪಗಳ ಪರಿಮಾಣವನ್ನು ತಿಳಿಸಿರಿ.

11. ಮರೀಚ್ಯಾದಿಪ್ರಾಚೀನರ ಚರಿತ್ರೆ, ವರ್ಣಾಶ್ರಮ ಧರ್ಮಗಳನ್ನು ತಿಳಿಸಿ.

12. ಹರಿಯ ಅವತಾರ ಚರಿತ್ರೆಗಳನ್ನೂ, ಯುಗಗಳ ಪರಿಮಾಣ, ಯುಗಗಳ ಧರ್ಮ, ಮನುಷ್ಯರ ಸಾಧಾರಣ ಮತ್ತು ವಿಶೇಷ ಧರ್ಮ, ಅಂಗರಕ್ಷಕರ ವಿಷಯ, ಪ್ರಿಯವ್ರತಾದಿ ರಾಜರ ಚರಿತ್ರೆ, ಆಪತ್ಕಾಲದ ಧರ್ಮಗಳು, ತತ್ತ್ವಗಳ ಸಂಖ್ಯೆ, ಅವುಗಳ ಲಕ್ಷಣ, ಅವಕ್ಕೆ ಕಾರಣನಾದ ಹರಿಯ ಸ್ವರೂಪ ಮತ್ತು ಅವನನ್ನು ಆರಾಧಿಸಿ ಸಂತೋಷ ಪಡಿಸುವ ಕ್ರಮ ಇವುಗಳನ್ನೆಲ್ಲ ತಿಳಿಸಿ.

13. ಅಣಿಮಾದಿ ಅಷ್ಟಸಿದ್ಧಿಗಳು, ಯೋಗಿಗಳ ಲಿಂಗ ದೇಹನಾಶ, ಋಗಾದಿ ವೇದಗಳು, ಆಯುರ್ವೇದಾದಿ ಉಪವೇದಗಳು ಇವುಗಳ ಮತ್ತು ಇವುಗಳಲ್ಲಿ ಹೇಳಿರುವ ಧರ್ಮಗಳ ಉದ್ಧಾರವನ್ನೂ. ಇತಿಹಾಸ, ಪುರಾಣಗಳ ಉತ್ಪತ್ತಿ ಕ್ರಮಗಳನ್ನೂ, ಇಷ್ಟ, ಪೂರ್ತ, ಕಾಮ್ಯಕರ್ಮಗಳ ವಿಧಿಯನ್ನೂ ತಿಳಿಸಿ.

14. ಸಂಸಾರದಲ್ಲಿರುವವರ ಸೃಷ್ಟಿ, ಧರ್ಮಭ್ರಷ್ಟರ ಸ್ವಭಾವ, ಜೀವರ ಬಂಧ ಮತ್ತು ಮೋಕ್ಷ, ಜೀವರು ತಮ್ಮ ತಮ್ಮ ಸ್ವರೂಪದಿಂದಿರುವುದು ಮತ್ತು ತಾರತಮ್ಯಕ್ಕೆ ತಕ್ಕಂತೆ ಆನಂದಾನುಭವ ಇವೆಲ್ಲವನ್ನೂ ಹೇಳಿರಿ.

15. ಸ್ವತಂತ್ರನಾದ ಶ್ರೀಹರಿಯು ತನ್ನಿಚ್ಛೆಯಿಂದ, ತನ್ನ ಅಧೀನಳಾದ ಚಿತ್ಪ್ರಕೃತಿಯ ಮೂಲಕ ಸೃಷ್ಟ್ಯಾದಿ ಕಾರ್ಯಗಳಿಂದ ಕ್ರೀಡಿಸುವುದನ್ನೂ, ಉದಾಸೀನನಾಗಿರುವುದನ್ನೂ ತಿಳಿಸಿರಿ. ಆಚಾರ್ಯರೇ ! ಇವುಗಳಜ್ಞಾನಕ್ಕಾಗಿ ತಮ್ಮನ್ನೇ ಶರಣು ಹೊಂದಿರುವೆನು. ನಾನು ಪ್ರಶ್ನಿಸಿರುವುದನ್ನೂ, ಕೇಳದೇ ಇರುವ ವಿಷಯಗಳನ್ನೂ ತಮಗೆ ಸರಿಬಂದ ರೀತಿಯಲ್ಲಿ ಸಹಜವಾಗಿ ತಿಳಿಸಿ ಉದ್ಧಾರಮಾಡಬೇಕು. ಬ್ರಹ್ಮದೇವರಂತೆ ತಾವೂ ನಮಗೆ ಆಪ್ತರೂ, ಪ್ರಾಮಾಣಿಕರೂ ಆಗಿರುವಿರಿ. ನಾನು ಊಟ ಮಾಡದೇ

ಇದ್ದರೂ ನೀವು ಹೇಳುತ್ತಿರುವ ಹರಿಯ ಕಥಾಮೃತವನ್ನು ಪಾನಮಾಡುತ್ತಿರುವುದ ರಿಂದ ನನ್ನ ಪ್ರಾಣಗಳು ಶಕ್ತಿ ಗುಂದುತ್ತಿಲ್ಲ.

**ಸೂತ :** ಇದನ್ನು ಕೇಳಿ ಶುಕರಿಗೆ ಅತ್ಯಂತ ಸಂತೋಷವಾಯಿತು. ಕಲ್ಪದ ಮೊದಲಿನಲ್ಲಿ ಶ್ರೀಹರಿಯು ಬ್ರಹ್ಮದೇವರಿಗೆ ಉಪದೇಶಿಸಿದ ಭಾಗವನ್ನೇ ಹೇಳ ತೊಡಗಿ ರಾಜನಿಗೆ ಕ್ರಮವಾಗಿ ಉತ್ತರಿಸಲಾರಂಭಿಸಿದರು.

## ಎಂಟನೆಯ ಅಧ್ಯಾಯ ಮುಗಿದುದು

**ಶುಕ** · ಜೀವನು ಅಪ್ರಾಕೃತ ಸ್ವರೂಪನಾಗಿದ್ದರೂ, ಪ್ರಾಕೃತ ಶರೀರ ಸಂಬಂಧವನ್ನು ಹೊಂದುವುದಕ್ಕೆ ಶ್ರೀ ಹರಿಯ ಇಚ್ಛೆಯೇ ಮುಖ್ಯ ಕಾರಣವಾದರೆ ತ್ರಿಗುಣಾತ್ಮಕ ಪ್ರಕೃತಿಯು ಅಮುಖ್ಯಕಾರಣವು. ಜೀವನು ಪ್ರಾಕೃತ ದೇಹ ಬದ್ಧನಾ ದಾಗ, ವಿಕಾರವನ್ನು ಹೊಂದಿ ಆ ದೇಹದಲ್ಲಿ ಅಭಿಮಾನವಿರುವುದರಿಂದ "ನಾನು ದೇವತೆ, ನಾನು ಮನುಷ್ಯ" ಎಂದು ತಿಳಿಯುವನು. ಅಹಂಕಾರ ಮಮಕಾರಗಳಿಂದ ಪ್ರಾಕೃತ ಪದಾರ್ಥಗಳಲ್ಲಿ 'ನಾನು ನನ್ನದು' ಎಂಬ ಭಾವನೆಯನ್ನು ಹೊಂದುವನು. ಇದರಿಂದಲೇ ಜಡದೇಹಗಳು ಬರುತ್ತಿರುವುವು ಜೀವನು ವೈರಾಗ್ಯಾದಿಗಳನ್ನು ಸಂಪಾದಿಸಿದರೆ ಶ್ರೀಹರಿಯ ಜ್ಞಾನವುಂಟಾಗುತ್ತದೆ. ಆಗ ತನ್ನ ನಿಜಸ್ವರೂಪವನ್ನು ಕಾಣುವನು. ಬಳಿಕ ಸಂಸಾರವನ್ನು ಹೋಗಲಾಡಿಸಿಕೊಂಡು ಸ್ವರೂಪಾನಂದವನ್ನು ಭೋಗಿಸುತ್ತ ಸುಖವಾಗಿ ಬಾಳುವನು. ಈ ವಿಷಯದಲ್ಲಿ ಪ್ರಮಾಣವಾಗಿಯೇ ವೇದವ್ಯಾಸರು ಹೇಳಿರುವ ಭಾಗವತವನ್ನು ಉತ್ತರವಾಗಿ ಹೇಳುವೆನು.

ದೋಷರಹಿತವಾದ ಭಕ್ತಿಯೇ ಶ್ರೀಹರಿಗೆ ಪ್ರಿಯ. ಅದರಿಂದಲೇ ಅವನು ಪ್ರಸನ್ನನಾಗುವನು. ಇದಕ್ಕೆ ಸಾಕ್ಷಿ . ನಾಭಿಕಮಲದಲ್ಲಿ ಹುಟ್ಟಿ ಅಲ್ಲಿಯೇ ಕುಳಿತ ಬ್ರಹ್ಮದೇವರು ಜಗತ್ತನ್ನು ಸೃಷ್ಟಿಸಲು ಆಲೋಚಿಸಿದರು. ಜ್ಞಾನವು ಬರಲಿಲ್ಲ. 'ತಪ, ತಪ' ಎಂದು ಅಶರೀರವಾಣಿಯಾಯಿತು. ಬ್ರಹ್ಮದೇವರು ಈ ಮಾತನ್ನು ಹೇಳಿದವ ರಾರೆಂದು ಎಲ್ಲೆಲ್ಲ ಹುಡುಕಿದರು. ಕಾಣಲಿಲ್ಲ. ಕಮಲದ ಮಧ್ಯೆ ಕುಳಿತು, ಹರಿಯಾಜ್ಞೆ ಇದೆಂದು ತಪಸ್ಸನ್ನು ಸಾವಿರ ವರ್ಷ ಮಾಡಿದರು. ಶ್ರೀಹರಿಯು ಅವರಿಗೆ ಶ್ವೇತ ದ್ವೀಪವನ್ನು ತೋರಿಸಿದನು. ಅಲ್ಲಿ ದುಃಖದುಮ್ಮಾನಗಳ ಸುಳಿವೇ ಇಲ್ಲ. ಲಕ್ಷ್ಮಿಯೇ ಆದ್ವೀಪದ ರೂಪದಿಂದಿರುವಳು. ಮುಕ್ತರುನಾಲ್ಕು ತೋಳುಗಳುಳ್ಳವರಾಗಿ ಕಿರೀಟಾದಿ ಆಭರಣಗಳನ್ನು ಧರಿಸಿ ವಿಮಾನಗಳಲ್ಲಿ ವಿಹರಿಸುತ್ತಿರುವರು. ಶ್ವೇತದ್ವೀಪದ ಮುಕ್ತ ಸ್ಥಾನದಲ್ಲಿ ಮುಕ್ತರಿಂದ ಸೇವಿಸಲ್ಪಡುತ್ತಿರುವ ಶ್ರೀಹರಿಯನ್ನು ಕಂಡು ಬ್ರಹ್ಮದೇವರು ಆನಂದಿಸುತ್ತ ನಮಿಸಿದರು.

**ಹರಿ .** ಬೇಕಾದ ವರಗಳನ್ನು ಕೇಳು ಕೊಡುವೆನು. ತಪಸ್ಸೆಂದರೆ ಜ್ಞಾನ. ಅದೇ ನನಗೆ ಅತ್ಯಂತ ಪ್ರಿಯ. ನಾನು ಜ್ಞಾನ ಸ್ವರೂಪ. ಜಗತ್ತಿನ ಸೃಷ್ಟ್ಯಾದಿಗಳನ್ನು ಜ್ಞಾನದಿಂದಲೇ ಮಾಡುತ್ತಿರುವೆನು. ನನ್ನ ಜ್ಞಾನವೇನೆಂಬುದನ್ನು ಯಾರೂ ಸಂಪೂರ್ಣವಾಗಿ ಅರಿಯುವರು. ಅದೇ ನನ್ನಹಿರಿಮೆ.

**ಬ್ರಹ್ಮ :–** ಸ್ವಾಮಿಯೇ ! ವರವನ್ನು ಕೇಳೆಂಬುದು ವಿಡಂಬನೆ. ನೀನು ಎಲ್ಲರೊಳಗೂ ಇದ್ದು ಅವರವರ ಇಷ್ಟವೇನೆಂಬುದನ್ನು ಬಲ್ಲಿ. ಆದರೂ ವರವನ್ನು ಕೇಳೆಂಬ ನಿನ್ನಾಜ್ಞೆ ಮೀರುವುದಲ್ಲ ಅದಕ್ಕಾಗಿ ಕೇಳುವೆನು.

1. ನಿನ್ನ ಅಪ್ರಾಕೃತ ಚಿದಾನಂದಾತ್ಮಕ ವೈರಾಜ ಎಂಬ ರೂಪವನ್ನೂ, ನಿನ್ನ ಪ್ರತಿಮೆಯೆನಿಸಿದ ಬ್ರಹ್ಮಾಂಡ ರೂಪವನ್ನೂ ನಾನು ಸರಿಯಾಗಿ ತಿಳಿಯುವಂತೆ ಅನುಗ್ರಹಿಸು

2. ನಿನ್ನ ಅನುಗ್ರಹದಿಂದ ಪ್ರಜೆಗಳನ್ನು ಸೃಷ್ಟಿಮಾಡುವುದಕ್ಕೆ ತೊಡಗಿದ್ದರೂ ಬದ್ಧನಾಗದೇ ಇರುವೆನು. ಇಂತಹ ಅನುಗ್ರಹಕ್ಕೆ ಕಾರಣವಾದ ಜ್ಞಾನವನ್ನು ಕರುಣಿಸು.

3. ಸ್ವೇಚ್ಛೆಯಿಂದಲೇ ಅವತಾರಗಳನ್ನು ಮಾಡಿ ಈ ಜಗತ್ತನ್ನು ಸೃಷ್ಟಿಸಿ, ರಕ್ಷಿಸಿ, ಸಂಹರಿಸುತ್ತಿರುವೆ. ಈ ಮಹಿಮೆಯನ್ನು ನನ್ನ ಯೋಗ್ಯತೆಗೆ ತಕ್ಕಂತೆ ತಿಳಿಯುವ ಹಾಗೆ ಅನುಗ್ರಹಿಸು.

4. ನನಗೆ ಸೃಷ್ಟಿಸುವ ಅಧಿಕಾರವನ್ನು ಕೊಟ್ಟು ಅನುಗ್ರಹಿಸುವೆ. ನನ್ನ ಆಯುಷ್ಯ ಪೂರ್ತಿ ನಿನ್ನ ಸೇವೆಯನ್ನೇ ಮಾಡುತ್ತ ಸ್ವಲ್ಪವೂ ದೈನ್ಯ ಪಡದೆ, ರುದ್ರಾದಿ ಜೀವರಿಗೆ "ಇದು ನಿಮ್ಮ ಅಧಿಕಾರ, ಇದು ನಿಮ್ಮ ಭೋಗ" ಎಂಬ ರೀತಿಯಲ್ಲಿ ಅವರವರು ಅನುಭವಿಸಬೇಕಾದ ವಿಷಯಗಳನ್ನು ವಿಭಾಗ ಮಾಡಿ ಕೊಡುವೆನು. ಎಂದೂ ನಾನೇ ಸ್ವತಂತ್ರ ಸೃಷ್ಟಿಕರ್ತನೆಂಬ ಅಹಂಕಾರವನ್ನು ಕೊಡಬೇಡ. ನಿನ್ನಿಷ್ಟದಂತೆಯೇ ಜೀವರಾಶಿಗಳಿಗೆ ಯೋಗ್ಯವಾದ ದೇವ ಮಾನುಷಾದಿ ದೇಹಗಳನ್ನು ಕೊಟ್ಟು ಸೃಷ್ಟಿಸುವೆನು.

(ಹೀಗೆ ಬ್ರಹ್ಮದೇವರು ಪ್ರಾರ್ಥಿಸಲು ಶ್ರೀಹರಿಯು ಸಂಕ್ಷೇಪವಾಗಿ ಭಾಗವತವನ್ನೇ ಉಪದೇಶಿಸಿದನು.)

**ಅವತಾರಿಕೆ**

**ಶ್ರೀ ಭಗವಾನುವಾಚ :–** ಬ್ರಹ್ಮನೇ ! ಬಿಂಬನಾಗಿರುವ ನನ್ನ ಜ್ಞಾನವು

ನಿಯತವಾದ ಮುಕ್ತಿಯನ್ನು ತಂದುಕೊಡುವುದು. ಇದಕ್ಕೆ ವಿಜ್ಞಾನವೆಂದು ಹೆಸರು ಉಪನಿಷತ್ತುಗಳು ಕೇವಲ ನನ್ನ ಸ್ವರೂಪವನ್ನು ತಿಳಿಸುತ್ತವೆ ನನ್ನ ಜ್ಞಾನವು ಅತಿರಹಸ್ಯವಾದುದರಿಂದ ಅವಶ್ಯ ತಿಳಿಯಬೇಕು. ಆದ್ದರಿಂದ ಈ ಬಗೆಯ ಜ್ಞಾನವನ್ನೂ, ಅದರ ಅಂಗಗಳನ್ನೂ ಮತ್ತು ವಿಜ್ಞಾನವನ್ನೂ ನಿನಗೆ ತಿಳಿಸುವೆನು. ಅದನ್ನು ತಿಳಿದುಕೊ.

ನಾನು ಸರ್ವೋತ್ತಮನು ಸಕಲ ದೇಶ ಮತ್ತು ಕಾಲಗಳಲ್ಲಿಯೂ ವ್ಯಾಪ್ತನು. ಆದ್ದರಿಂದಲೇ ನನ್ನ ಪರಿಮಾಣವು ಅನಂತವಾದುದು. ನನ್ನ ಇರುವಿಕೆಗೆ ಯಾವುದೊಂದು ಉಪಾಧಿಯೂ ಕಾರಣವಾಗಿಲ್ಲ. ನನ್ನ ಅವತಾರಗಳೆಲ್ಲ ಅನಂತಗಳು ಮತ್ತು ಸಚ್ಚಿದಾನಂದಾತ್ಮಕಗಳು. ನನ್ನ ಪ್ರತಿಯೊಂದು ಗುಣವೂ ಪರಿಪೂರ್ಣವು ಮತ್ತು ಅನಂತ. ನನ್ನ ಕರ್ಮಗಳಿಂದ ನನಗೆ ಯಾವ ಬಗೆಯ ಪ್ರಯೋಜನವೂ ಇಲ್ಲ. ಇದೇ ಪರಮಾತ್ಮತತ್ತ್ವವೆನಿಸಿದ್ದ ನನ್ನ ವಿಶಿಷ್ಟ ಜ್ಞಾನ ನನ್ನ ಅನುಗ್ರಹದಿಂದ ಈ ಬಗೆಯ ಜ್ಞಾನವು ನಿನಗೆ ಉಂಟಾಗಲಿ.

### ಚತುಃಶ್ಲೋಕೀ ಭಾಗವತ

**ಶ್ಲೋಕ || ಅಹಮೇವಾಸ ಮೇವಾಗ್ರೇ ನಾನ್ಯದ್ಯತ್ ಸದಸತ್ಪರಂ |**
**ಪಶ್ಚಾದಹಂ ತ್ವನೋತಚ್ಚ ಯೋಽವಶಿಷ್ಯೇತ ಸೋಽಸ್ಮ್ಯಹಂ || 39, ಅ. 9 ||**

**ಅರ್ಥ** :- ಸೃಷ್ಟಿಗೆ ಮೊದಲು ನಾನೇ ಸ್ವತಂತ್ರವಾಗಿ ಇದ್ದವನು. ಆ ಪ್ರಳಯ ಕಾಲದಲ್ಲಿ ನನಗಿಂತ ಭಿನ್ನಗಳಾದ ಕಾಲ, ಕರ್ಮ, ಪ್ರಕೃತಿ ಮೊದಲಾದುವು, ಜೀವರು ಇದ್ದರು. ಆದರೆ ಯಾವ ವಸ್ತುವೇ ಆಗಲಿ, ಯಾವ ಚೇತನವೇ ಆಗಲಿ ಸ್ವತಂತ್ರವಾಗಿರಲಿಲ್ಲ. ಸರ್ವವೂ ನನ್ನ ಇಚ್ಛೆಗೆ ಒಳಪಟ್ಟು ನನ್ನ ಅಧೀನವಾಗಿಯೇ ಇದ್ದುವು. ಸೃಷ್ಟಿಯಾದ ಮೇಲೆ ಸ್ಥಿತಿ ಕಾಲದಲ್ಲಿ ನಾನು, ನೀನು ಮತ್ತು ಈ ಸಮಸ್ತ ಜಗತ್ತೂ ಇರುವುವು. ಆ ಕಾಲದಲ್ಲಿಯೂ ನಾನೇ ಸ್ವತಂತ್ರನು. ಅನಂತರ ಪ್ರಳಯ ಕಾಲದಲ್ಲಿಯೂ ಯಾವಾಗಲೂ ನನ್ನ ಅಧೀನಗಳಾದ್ದರಿಂದ ನೀನೇ ಮೊದಲಾದವರೆಲ್ಲರೂ ಅಸ್ವತಂತ್ರರು.

**ಶ್ಲೋಕ || ಋತೇಽರ್ಥಂ ಯತ್ ಪ್ರತೀಯೇತ ನ ಪ್ರತೀಯೇತ ಚಾತ್ಮನಿ |**
**ತದ್ ವಿದ್ಯಾದಾತ್ಮನೋ ಮಾಯಾಂ ಯಥಾ ಭಾಸೋ ಯಥಾ ತಮಃ ||34||**

**ಅರ್ಥ** : ಆಪ್ತ ಕಾಮನಾದ ನನಗೆ ಈ ಪ್ರಕೃತಿ ಮೊದಲಾದ ಈ ಸಕಲ ವಸ್ತುಗಳಿಂದೂ ಯಾವ ಪ್ರಯೋಜನವೂ ಇಲ್ಲ ಮತ್ತು ಅವುಗಳಿಂದ ಯಾವ ಬಾಧೆಯೂ ಇಲ್ಲ. ಹೀಗೆಂದು ವೇದಗಳು ಹೇಳುತ್ತಿವೆ. ಆದ್ದರಿಂದ ಪ್ರಕೃತಿ,

ಚೇತನ ಮೊದಲಾದುವೆಲ್ಲವೂ ನನ್ನ ಶಕ್ತಿಗೆ ಒಳಪಟ್ಟಿವೆ ಎಂದು ತಿಳಿ. ಅವುಗಳಲ್ಲಿ ಜೀವನು ನನ್ನ ಪ್ರತಿಬಿಂಬನಾಗಿರುವನು. ಪ್ರಕೃತಿಯು ಈ ಜೀವನ ಗ್ಲಾನಿಗೆ ಕಾರಣವಾಗಿರುವುದರಿಂದ ತಮಸ್ಸು ಎನಿಸುತ್ತದೆ. ಇವೆಲ್ಲ ಸತ್ಯವಾದುವು ಮಾಯೆ ಯೆಂದೇ ಕರೆಸಿಕೊಳ್ಳುವುವು. ಮಾಯೆಯೆಂದರೆ ಅಸತ್ಯವಲ್ಲ. ಉದಾಹರಣೆ :– ರಾಜನು ರಥದಲ್ಲಿ ಕುಳಿತು ಬರುತ್ತಿರುವನು ಆಗ ಅದೇ ರಥದಲ್ಲಿ ಛತ್ರಚಾಮರ ಗಳನ್ನು ಹಿಡಿದು ಸೇವಿಸುವ ರಾಜಭೃತ್ಯರೂ ಕುಳಿತು ಬರುತ್ತಿರುವರು. "ರಾಜನು ರಥದಲ್ಲಿ ಬರುತ್ತಿರುವನು" ಎಂದೇ ಹೇಳುವರೇ ಹೊರತು ರಾಜಭೃತ್ಯರನ್ನು ರಥಿಕ ರೆಂದು ಹೇಳುವುದಿಲ್ಲ. ಅದರಂತೆಯೇ ಜೀವ, ಪ್ರಕೃತಿ, ಕರ್ಮ ಮತ್ತು ಕಾಲ ಇವು ಸರ್ವದಾ ನನ್ನ ಅಧೀನಗಳಾಗಿದ್ದರೂ ಜೀವರಿಂದ ನನಗೆ ಜೀವನವಾಗಲೀ, ಪ್ರಕೃತಿ ಯಿಂದ ಬಂಧನವಾಗಲೀ, ಕರ್ಮದಿಂದ ಸುಖದುಃಖ ಫಲಾನುಭವವಾಗಲೀ, ಕಾಲ ಪರಿಣಾಮವಾಗಲೀ, ಆಕಾಶಾದಿಗಳಿಂದ ಅವಕಾಶದಾನಾದಿಗಳಾಗಲೀ ಆಗದಿರುವುದ ರಿಂದ ಅವು ನನ್ನಲ್ಲಿರುತ್ತವೆ ಎಂದು ಹೇಳಲ್ಪಡುವುದಿಲ್ಲ. ಇಲ್ಲವೆಂದೇ ಕರೆಯುವರು.

**ಶ್ಲೋಕ ॥ ಯಥಾ ಮಹಾಂತಿ ಭೂತಾನಿ ಭೂತೇಷೂಚ್ಚಾವಚೇಷು ಚ ।**
**ಪ್ರವಿಷ್ಟಾನ್ಯಪ್ರವಿಷ್ಟಾನಿ ತಥಾ ತೇಷು ನ ತೇಷ್ವಹಂ ॥ 35 ॥**

**ಅರ್ಥ :** ಪಂಚಮಹಾಭೂತಗಳು ತಮ್ಮ ಕಾರ್ಯಗಳಾದ ಶರೀರಗಳಲ್ಲಿ ಇರುತ್ತಾ ಪ್ರವಿಷ್ಟಗಳೆಂದೂ, ಆ ಶರೀರಗಳು ಇಲ್ಲದ ಕಾಲದಲ್ಲಿ, ಹೊರಗೆ ಬೇರೆ ಕಡೆ ಹೆಚ್ಚು ವ್ಯಾಪಿಸಿರುವುದರಿಂದ ದೇಹಗಳಲ್ಲಿ ಅಪ್ರವಿಷ್ಟವಾಗಿರುತ್ತಿನೆಯಾದ್ದರಿಂದ ಅಪ್ರವಿಷ್ಟಗಳೆಂದೂ ಕರೆಸಿಕೊಳ್ಳುವುವು. ಅದರಂತೆ ನಾನೂ ಸರ್ವತ್ರವ್ಯಾಪ್ತನಾದ್ದ ರಿಂದ ಪ್ರವಿಷ್ಟನೆಂದೂ, ಭೂತ ಪ್ರಕೃತ್ಯಾದಿಗಳ ಹೊರಗೂ, ಭೂತಗಳಿಲ್ಲದಿರುವ ಕಾಲ ದಲ್ಲಿಯೂ ಇರುವುದರಿಂದ ಅಪ್ರವಿಷ್ಟನೆಂದೂ ಕರೆಯಿಸಿಕೊಳ್ಳುವೆನು. ನನ್ನ ಸ್ವರೂಪವು ಸದಾ ಒಂದೇ ಪ್ರಕಾರವಾಗಿರುವುದು. ಇದೇ ನನ್ನ ಐಂತ.

**ಶ್ಲೋಕ ॥ ಏತಾವದೇವ ಜಿಜ್ಞಾಸ್ಯಂ ತತ್ತ್ವಜಿಜ್ಞಾಸುನಾತ್ಮನಃ ।**
**ಅನ್ವಯವ್ಯತಿರೇಕಾಭ್ಯಾಂ ಯತ್ಸ್ಯಾತ್ಸರ್ವತ್ರ ಸರ್ವದಾ ॥ 36 ॥**

**ಅರ್ಥ :** ಇದನ್ನು ನೀನು ಏಕಾಗ್ರಚಿತ್ತದಿಂದ, ಭಕ್ತಿಪೂರ್ವಕವಾಗಿ ಉಪಾ ಸನೆ ಮಾಡು. ಅಂದರೆ ನನ್ನ ಶಕ್ತಿ, ಜ್ಞಾನ ಮುಂತಾದುವು ಸರ್ವದೇಶ ಕಾಲ ಗಳಲ್ಲಿಯೂ ಸರ್ವವಸ್ತುಗಳನ್ನೂ ವಿಷಯೀಕರಿಸುತ್ತವೆ – ಎಂದು ಉಪಾಸಿಸು. ಇದರಿಂದ ಯಾವ ಸಂದರ್ಭದಲ್ಲಿಯೂ **ಸ್ವತಂತ್ರೋಽಹಂ** ಎಂಬ ಅಹಂಕಾರವು ಬರುವುದಿಲ್ಲ. ನೀನು ಬದ್ಧನೂ ಆಗುವುದಿಲ್ಲ.

**ಶುಕ :** ಪರೀಕ್ಷಿದ್ರಾಜನೇ ! ಬ್ರಹ್ಮದೇವರು ಶ್ರೀಹರಿಗೆ ಕೈಮುಗಿದು ಅವನ ಆಜ್ಞೆಯಂತೆ ಜಗತ್ತಿನ ಸೃಷ್ಟಿ ಮಾಡಲು ತೊಡಗಿದರು. ರಾಜನೇ ! ನೀನು ಕೇಳಿದ

ಪ್ರಶ್ನೆಯನ್ನೇ ನಾರದರು ಬ್ರಹ್ಮದೇವರನ್ನು ಕೇಳಿದರು. ಬ್ರಹ್ಮದೇವರು ಹರಿಯಿಂದ ಉಪದೇಶ ಹೊಂದಿದ ಹತ್ತು ವಿಷಯಗಳನ್ನು ಪ್ರತಿಪಾದಿಸುವ ಭಾಗವತವನ್ನೇ ನಾರದರಿಗೆ ಉಪದೇಶಿಸಿದರು. ಬಳಿಕ ತಂದೆಯಿಂದ ಆಜ್ಞಾಪ್ತರಾದ ನಾರದರು ವೇದ ವ್ಯಾಸರಲ್ಲಿ ವಿಜ್ಞಾಪಿಸಿಕೊಂಡರು. ವ್ಯಾಸರು ನಾರದರ ಕೀರ್ತಿಯನ್ನು ಹರಡುವು ದಕ್ಕಾಗಿಯೂ, ಅಯೋಗ್ಯರನ್ನು ಮೋಹಗೊಳಿಸುವುದಕ್ಕಾಗಿಯೂ ನಾರದರಿಂದ ಭಾಗವತರನ್ನು ತಿಳಿದರೋ ಎಂಬಂತೆ ನಟಿಸಿದರು. ಅದೇ ಭಾಗವತವನ್ನು ನಿನಗೆ ಹೇಳುವೆನು. ಮೊದಲು ವೈರಾಜನೆನಿಸಿದ ಶ್ರೀಹರಿಯು ಈ ಜಗತ್ತನ್ನು ಸೃಷ್ಟಿಸಿದ ಕ್ರಮವನ್ನು ತಿಳಿಸುವೆನು.

### ಒಂಭತ್ತನೆಯ ಅಧ್ಯಾಯ ಮುಗಿದುದು

**ಶುಕ** : ಈ ಭಾಗವತದಲ್ಲಿ ಸರ್ಗ, ವಿಸರ್ಗ, ಸ್ಥಾನ, ಪೋಷಣ, ಊತಿಗಳು, ಮನ್ವಂತರ, ಈಶಾನುಕಥಾ, ನಿರೋಧ, ಮುಕ್ತಿ ಮತ್ತು ಆಶ್ರಯ ಎಂಬ ಹತ್ತು ವಿಷಯಗಳನ್ನು ಪ್ರತಿಪಾದಿಸಲಾಗುವುದು. ಇವೆಲ್ಲವೂ ಹರಿಯ ಮಹಿಮೆಗಳೇ ಇವು ಗಳಲ್ಲಿ ಹತ್ತನೆಯ ಆಶ್ರಯ ಎಂಬ ಮಹಿಮೆಯನ್ನು ಹೇಳುವುದಕ್ಕಾಗಿಯೇ, ಹಿಂದಿನ ಒಂಭತ್ತು ವಿಷಯಗಳನ್ನೂ ವರ್ಣಿಸುವುದು.

1. **ಸರ್ಗ** : ಸೃಷ್ಟಿಕಾಲದಲ್ಲಿ ಮಹತ್ತತ್ತ್ವ, ಅದರಿಂದ ಅಹಂಕಾರತತ್ತ್ವ, ಅದರ ಮೂಲಕ ಆಕಾಶಾದಿ ಪಂಚಭೂತಗಳು, ಶಬ್ದ ಮೊದಲಾದ ತನ್ಮಾತ್ರೆಗಳು, ಶ್ರೋತ್ರಾದಿ ಇಂದ್ರಿಯಗಳು ಮತ್ತು ಬುದ್ಧಿ ಇವುಗಳ ಸೃಷ್ಟಿಯಾದುವು. ಇದಕ್ಕೆ ಸರ್ಗವೆಂದು ಹೆಸರು.

2. **ವಿಸರ್ಗ** . ಬ್ರಹ್ಮಾಂಡದೊಳಗೆ ಪುರುಷನಾಮಕನಾದ ಶ್ರೀಹರಿಯು ಮೇಲೆ ಹೇಳಿದ ತತ್ತ್ವಗಳನ್ನು ಸೃಷ್ಟಿಸಿದನು. ಇದಕ್ಕೆ ವಿಸರ್ಗವೆಂದು ಹೆಸರು.

3. **ಸ್ಥಾನ** : ದುಷ್ಟರನ್ನು ಕೊಂದು ಶಿಷ್ಟರನ್ನು ರಕ್ಷಿಸುವ ಶ್ರೀ ಹರಿಯ ವಿಜಯಕ್ಕೆ ಸ್ಥಿತಿ ಅಥವಾ ಸ್ಥಾನವೆಂದು ಹೆಸರು.

4. **ಪೋಷಣೆ** : ಶ್ರೀಹರಿಯು ಅವರ ಭಕ್ತಿಗೆ ತಕ್ಕಂತೆ ತೋರುವ ವಿಶೇಷ ದಯೆಗೆ ಪೋಷಣೆಯೆಂದು ಹೆಸರು.

5. **ಊತಿಗಳು** : ವಿವಿಧಯೋಗ್ಯತೆಯುಳ್ಳ ವಿವಿಧ ಜೀವರ ಸೃಷ್ಟಿಗೆ ಕಾರಣವಾದ ಅವರವರ ಅನಾದಿ ಕರ್ಮಗಳು ಮತ್ತು ಸಂಸ್ಕಾರಗಳನ್ನು ಊತಿ ಗಳೆನ್ನುತ್ತಾರೆ.

6. **ಮನ್ವಂತರ :** ಆಯಾ ಮನ್ವಂತರಗಳಲ್ಲಿ ಸಜ್ಜನರಿಗೆ ಧಾರಕಗಳಾದ ಧರ್ಮಗಳು ಮನ್ವಂತರ ನಾಮಕಗಳು.

7. **ಈಶಕಥೆ :** ಶ್ರೀಹರಿಯು ಮಾಡಿದ ಮತ್ಸ್ಯಾದಿ ಅವತಾರಗಳ ಚರಿತ್ರೆ ಮತ್ತು ಅವನ ಭಕ್ತರಾದ ಬ್ರಹ್ಮಾದಿಗಳ ಚರಿತ್ರೆ. ಇವು ಅನೇಕ ಇತಿಹಾಸ ಗಳಿಂದ ತುಂಬಿರುವುವು. ಇವೇ ಈಶಕಥೆ.

8. **ನಿರೋಧ :** ಜೀವರೆಲ್ಲರೂ ತಮ್ಮ ಯೋಗ್ಯತೆಯು ವ್ಯಕ್ತವಾಗದೆ ಶ್ರೀಹರಿಯ ಉದರದಲ್ಲಿ ನಿದ್ರಿಸುವುದಕ್ಕೆ ನಿರೋಧ (ಲಯ)ವೆಂದು ಹೆಸರು.

9. **ಮುಕ್ತಿ** · ಪ್ರಾಕೃತರೂಪವನ್ನು ಬಿಟ್ಟು ಕೇವಲ ತಮ್ಮ ತಮ್ಮ ಸ್ವರೂಪಗಳಾದ ಚಿದಾನಂದಾತ್ಮಕ ರೂಪಗಳಿಂದ ಆನಂದಾನುಭವಿಗಳಾಗಿ ವಿಶೇಷ ರೀತಿಯಿಂದ ಇರುವುದನ್ನೇ ಮುಕ್ತಿಯೆನ್ನುವರು.

10. **ಆಶ್ರಯ :** ಈ ಜಗತ್ತಿನ ಮುಖ್ಯ ಮತ್ತು ಅವಾಂತರ ಸೃಷ್ಟಿಗಳು, ಪಾಲನೆ, ಲಯ ಮೊದಲಾದವು ಯಾವನಿಂದಾಗುವುದೋ ಮತ್ತು ಇವೆಲ್ಲವೂ ಯಾವನನ್ನು ಆಶ್ರಯಿಸಿವೆಯೋ ಆ ಜಗದ್ವಿಲಕ್ಷಣನೂ, ಪರಿಪೂರ್ಣನೂ ಆದ ಶ್ರೀ ಹರಿಯು ಆಶ್ರಯ ನೆನಿಸಿರುವನು.

## ಆಧ್ಯಾತ್ಮಿಕ

ಶ್ರೀ ಹರಿಯು ದೇಹದೊಳಗೆ ಕಣ್ಣು ಮೊದಲಾದ ಇಂದ್ರಿಯಗಳಲ್ಲಿ ಪ್ರೇರಕ ನಾದ್ದರಿಂದ ಆಧ್ಯಾತ್ಮಿಕನೆನಿಸಿರುವನು.

## ಆಧಿದೈವಿಕ

ಅವನೇ ತತ್ತ್ವಾಭಿಮಾನಿಗಳಾದ ಸೂರ್ಯಾದಿಗಳಲ್ಲಿದ್ದು ಸಾಮರ್ಥ್ಯ ಪ್ರದನಾಗಿ ಪ್ರೇರಿಸುವುದರಿಂದ ಅಧಿದೈವವೆನಿಸುವನು.

## ಆಧಿಭೌತಿಕ

ತತ್ತ್ವಾಭಿಮಾನಿ ಸಹಿತಗಳಾದ ಇಂದ್ರಿಯಗಳಿಗೆ ವಿಷಯಗಳೆನಿಸುವ ರೂಪ ಮೊದಲಾದ ಭೌತಿಕ ಪದಾರ್ಥಗಳಲ್ಲಿರುವುದರಿಂದ ಶ್ರೀಹರಿಯು ಆಧಿಭೌತಿಕವೆಂದು ಕರೆಯಲ್ಪಡುವನು.

ಅಂಡದೊಳಗೆ ಪುರುಷನಾಮಕನಾದ ಶ್ರೀಹರಿಯು ತನ್ನ ಪೂಜೆಗೆ ಸಾಧನವಾದ ಗರ್ಭೋದಕವೆಂಬ ಜಲವನ್ನು ಸೃಷ್ಟಿಸಿ ಅಲ್ಲಿ ಮಲಗಿದನು ನಾಶವಿಲ್ಲದ್ದರಿಂದ ಹರಿಯು **ನರ** ನೆನಿಸುವನು. ಜಲವು ನರನಿಂದ ಸೃಷ್ಟವಾದ ಪ್ರಯುಕ್ತ **"ನಾರಾ :"**

ಎನಿಸಿತು. ಆವುಗಳಲ್ಲಿ ಸಾವಿರ ವರುಷ ವಾಸಿಸಿದ್ದರಿಂದ **ನಾರಾಯಣ** ಎಂದು ಹೆಸರಾಯಿತು. ಬ್ರಹ್ಮಾಂಡವನ್ನು ಅಧಿದೈವ, ಅಧ್ಯಾತ್ಮ, ಅಧಿಭೂತವೆಂದೂ, ಬ್ರಹ್ಮದೇವರ ದೇಹವನ್ನೂ ಹಾಗೆಯೇ ಮೂರು ಬಗೆಯಾಗಿ ಮಾಡಿದನು ಬಳಿಕ ವಾಯುದೇವರು ಅದನ್ನು ಅನುಸರಿಸಿ ಸೃಷ್ಟಿ ಮಾಡಿದರು ರಾಜನಿದ್ದೆಡೆ ಅವನ ಅನುಚರರಿರುವರು ಅವನು ಹೊರಟರೆ ಅನುಚರರೂ ಅವನ ಜೊತೆಯಲ್ಲಿ ತೆರಳುವರಷ್ಟೆ ? ಅದರಂತೆ ಎಲ್ಲ ಜೀವರ ದೇಹಗಳಲ್ಲಿಯೂ ಚೇಷ್ಟಕರಾದ ವಾಯುದೇವರನ್ನು ಅನುಸರಿಸಿ ಉಳಿದ ಇಂದ್ರಿಯಾಭಿಮಾನಿಗಳು ಊರ್ಧ್ವಾಧೋಮುಖ ಚೇಷ್ಟೆಗಳನ್ನು ಮಾಡುವರು. ಇಂತಹ ಪ್ರಾಣದೇವರು ಬ್ರಹ್ಮದೇವರ ದೇಹದಲ್ಲಿ ಪ್ರಾಣಾಪಾನರೂಪಗಳಿಂದ ಚೇಷ್ಟಿಸಿದರ ಫಲವಾಗಿ ಆ ದೇಹದಲ್ಲಿ ನೀರಡಿಕೆಗಳು ಹುಟ್ಟಿದುವು. ಜೊತೆಯಲ್ಲಿ ಅವುಗಳ ಅಭಿಮಾನಿಗಳೂ ಹುಟ್ಟಿದರು. (ಮುಂದೆಯೂ ಹೀಗೆಯೇ ತಿಳಿಯಬೇಕು) ಬ್ರಹ್ಮನು ಉಣಲು ಬಯಸಿದಾಗ ಬಾಯಿ, ಮಾತನಾಡಬೇಕೆಂದುಬಯಸಿದಾಗ ವಾಗಿಂದ್ರಿಯ ಹೀಗೆ ದೇಹದಲ್ಲಿ ಮಾಡುವ ಆಯಾ ವ್ಯಾಪಾರ, ಗಳಿಗೆ ತಕ್ಕಂತೆ ಇಂದ್ರಿಯ, ಅವಯವ ಮುಂತಾದುವು ಬ್ರಹ್ಮದೇವರ ದೇಹದಲ್ಲಿ ಹುಟ್ಟಿದುವು. ಈ ದೇಹಕ್ಕೆ ವಿರಾಟ್ ಎಂದು ಹೆಸರು. ಈ ದೇಹದಲ್ಲಿ ಶ್ರೀಹರಿಯು ವಾಸವಾಗಿರುವುದರಿಂದ ಇದು ಹರಿಯ ಪ್ರತಿಮೆಯೆನಿಸಿದೆ. ಈ ಪ್ರತಿಮೆಯೊಳಗಿರುವ ಶ್ರೀಹರಿಯ ನಿಜರೂಪ ಇವಕ್ಕಿಂತ ವಿಲಕ್ಷಣ. ಅತ್ಯಂತ ಸೂಕ್ಷ್ಮ. ಅವನ ಅನುಗ್ರಹವಿಲ್ಲದೆ ಗೋಚರವಲ್ಲ. ಅದಕ್ಕಿಂತ ಅತಿಶಯವಾದುದು ಮತ್ತೊಂದಿಲ್ಲ. ಅದಕ್ಕೆ ಆದಿ, ಮಧ್ಯ, ಅಂತಗಳಿಲ್ಲ. ಶಶ್ವದೇಕಪ್ರಕಾರವಾಗಿದೆ. ರುದ್ರ, ಸರಸ್ವತಿ, ವಾಯು ಮತ್ತು ಬ್ರಹ್ಮದೇವರಿಗಿಂತಲೂ ಉತ್ತಮವಾದುದು. ವಾಕ್ಕಿಗೂ, ಮನಸ್ಸಿಗೂ ಸಂಪೂರ್ಣವಾಗಿ ತಿಳಿಯಲಾರದು. ಅವನ ಅನುಗ್ರಹವಾದರೆ ಅವರವರ ಯೋಗ್ಯತೆಗೆ ತಕ್ಕಂತೆ ದರ್ಶನವಾಗುವುದು. ಇದು ಭಗವಂತನ ಜ್ಞಾನಮಯ ರೂಪ. ಇವನು ಸರ್ವೋತ್ತಮ. ಇವನಿಂದ ಸೃಷ್ಟ ಜಗತ್ತು ಸತ್ಯ.

ಶ್ರೀಹರಿಯು ಸುರನರಾದಿ ಪ್ರಾಣಿಗಳನ್ನು ಸೃಷ್ಟಿಸಿದನು. ಇವರಲ್ಲಿ ಗರುಡ, ಶೇಷ, ರುದ್ರರು ಸಾತ್ವಿಕ ಸಾತ್ವಿಕರಲ್ಲಿಯೂ ಉತ್ತಮರು. ಅವರಿಗಿಂತ ಬ್ರಹ್ಮ ವಾಯುಗಳು ಉತ್ತಮರು.

ಸಾತ್ವಿಕ ಸ್ವಭಾವವು ರಾಜಸ-ತಾಮಸ ಸ್ವಭಾವಗಳಿಂದ ತಿರಸ್ಕೃತವಾದಾಗ ಹರಿಯು ಧರ್ಮಸ್ಥಾಪನೆಗಾಗಿ ಮತ್ಸ್ಯಕೂರ್ಮಾದಿ ರೂಪಗಳಿಂದ ಅವತರಿಸುವನು. ಪ್ರಳಯ ಕಾಲದಲ್ಲಿ ಯಮ, ಅಗ್ನಿ, ರುದ್ರರ ಅಂತರ್ಯಾಮಿಯಾದ ಹರಿಯು ಬ್ರಹ್ಮನಲ್ಲಿಗ್ದು ಹಿಂದೆ ತಾನು ಸೃಷ್ಟಿಸಿದ್ದ ಜಗತ್ತನ್ನೆಲ್ಲ ಸಂಹರಿಸುವನು. ಆದ್ದರಿಂದಲೇ ಶ್ರೀಹರಿಯು ಬ್ರಹ್ಮಾದಿ ದೇವತೆಗಳಿಗಿಂತ ಉತ್ತಮನು. ಸರ್ವೈಶ್ವರ್ಯಸಂಪನ್ನ, ನಿಯಾಮಕ, ಸೃಷ್ಟಿ ಸಂಹಾರಕರ್ತನು. ಹೀಗೆಂದೇ ವೇದ ಶಾಸ್ತ್ರಗಳು ಹೇಳುತ್ತಿವೆ.

ಜ್ಞಾನಿಗಳು ಶ್ರೀಹರಿಯನ್ನು ಸರ್ವಜಗದ್ವಿಲಕ್ಷಣನೆಂದು ಉಪಾಸಿಸಿ ಕಾಣುವರು ಪರೀಕ್ಷಿದ್ರಾಜನೇ ! ನಿನಗೀಗ ಪಾದ್ಮಕಲ್ಪದ ವಿಷಯವನ್ನು ಹೇಳುವೆನು ಕೇಳು.

**ಶೌನಕ** – ಸೂತ ! ವಿದುರನು ಬಂಧುಗಳನ್ನು ಬಿಟ್ಟು ತೀರ್ಥಯಾತ್ರೆ ಮಾಡಿದನೆಂದು ಹೇಳಿದೆ. ಅದನ್ನು ವಿಶದವಾಗಿ ತಿಳಿಸು

**ಸೂತ :– ರಾಜ್ಞಾ ಪರೀಕ್ಷಿತಾ ಪೃಷ್ಟೋ ಯದವಾದೀನ್ಮಹಾಮುನಿಃ ।**
**ತದ್ವೋऽಭಿಧಾಸ್ಯೇ ಶೃಣುತ ರಾಜ್ಞಃ ಪ್ರಶ್ನಾನುಸಾರತಃ ॥ 5 ॥**

ಪರೀಕ್ಷಿದ್ರಾಜನು ಮಾಡಿದ ಪ್ರಶ್ನೆಗೆ ಮುನೀಶ್ವರರಾದ ಶುಕಾಚಾರ್ಯರು ಹೇಳಿದ ಉತ್ತರವನ್ನೇ ನಿಮಗೆ ಹೇಳುತ್ತೇನೆ.

**ಹತ್ತನೆಯ ಅಧ್ಯಾಯ ಮುಗಿದುದು**

**ಎರಡನೆಯ ಸ್ಕಂಧ ಸಮಾಪ್ತ**

## ಮೂರನೆಯ ಸ್ಕಂಧಾರಂಭ

**ಶ್ರೀಶುಕ ಉವಾಚ**

**ಏವಮೇತತ್ಪುರಾ ಪೃಷ್ಟೋ ಮೈತ್ರೇಯೋ ಭಗವಾನ್ ಕಿಲ ।**
**ಕ್ಷತ್ರಾ ವನಂ ಪ್ರವಿಷ್ಟೇನ ತ್ಯಕ್ತ್ವಾ ಸ್ವಗೃಹಮೃದ್ಧಿಮತ್ ॥**

**ಶುಕ :** ಪರೀಕ್ಷಿದ್ರಾಜನೇ ! ನೀನು ನನ್ನ ಪ್ರಶ್ನಿಸಿದಂತೆ ಹಿಂದೆ ವಿದುರನು ಇದೇ ಪ್ರಮೇಯವನ್ನೇ ತ್ರಿಕಾಲಜ್ಞಾನಿಗಳಾದ ಮೈತ್ರೇಯರನ್ನು ಕುರಿತು ಪ್ರಶ್ನಿಸಿದನು. ಸಂಪತ್ಸಮೃದ್ಧವಾದ ಮನೆಯನ್ನು ಬಿಟ್ಟು ಅರಣ್ಯವನ್ನು ಸೇರಿದ್ದ ವಿದುರನು ವೈರಾಗ್ಯ ಶಾಲಿಯಾದುದರಿಂದ ಈ ಪ್ರಮೇಯವನ್ನು ತಿಳಿಯಲು ಅಧಿಕಾರಿಯಾಗಿದ್ದನು

ಸಂಧಿ ಕೈಗೂಡದೆ ಶ್ರೀಕೃಷ್ಣನು ಹಸ್ತಿನಾವತಿಯಿಂದ ಪಾಂಡವರಿದ್ದ ಉಪಪ್ಲಾವ್ಯಕ್ಕೆ ಬಂದ ಸಮಯದಲ್ಲಿ ವಿದುರನು ತೀರ್ಥಯಾತ್ರೆಗೆ ಹೊರಟನು.

**ಪರೀಕ್ಷಿತ್ .** ವಿದುರರಿಗೂ ಮೈತ್ರೇಯರಿಗೂ ಯಾವ ತೀರ್ಥದಲ್ಲಿ ಭೇಟಿಯಾಯಿತು ? ಸಂಭಾಷಣೆ ಯಾವಾಗ ನಡೆಯಿತು ? ವಿದುರನು ಹಸ್ತಿನಾವತಿಯನ್ನು ಬಿಟ್ಟು ಹೊರಡಲು ಕಾರಣವೇನು ? ಆ ಪ್ರಶ್ನೆಯಿಂದ ತಿಳಿದು ಬರುವ ತತ್ತ್ವವೇನು

**ಸೂತ :** ರಾಜನು ಕೇಳಿದ ಪ್ರಶ್ನೆಯು ಸಕಾರಣವೆಂದು ತಿಳಿದು ಶುಕರು ಉತ್ತರಿಸಲಾರಂಭಿಸಿದರು.

**ಶುಕ :** ಧೃತರಾಷ್ಟ್ರನಿಗೆ ಇದ್ದ ಅಪರೋಕ್ಷ ಜ್ಞಾನವು ಅವನ ಪ್ರಾರಬ್ಧ ಕರ್ಮದಿಂದ ಮರೆಯಾಗಿತ್ತು. ತನ್ನ ಅಧರ್ಮಿಷ್ಠ ಮಕ್ಕಳನ್ನು ಅನ್ಯಾಯದಿಂದಲೇ ಪೋಷಿಸುತ್ತ ಬಂದಿದ್ದನು. ಅವನು ಪಾಂಡವರನ್ನು ಸುಡಿಸಲು ಏರ್ಪಾಡು ಮಾಡಿದ್ದನು. ದ್ರೌಪದಿಯನ್ನು ಸಭೆಯಲ್ಲಿ ಮಾನಭಂಗ ಮಾಡಲು ಮಕ್ಕಳು ಯತ್ನ ಮಾಡಿದಾಗ ಅವನು ಅವರನ್ನು ತಡೆಯಲೇ ಇಲ್ಲ. ದುರ್ಯೋಧನನು ಮೋಸದ ಜೂಜಾಡಿ ಯುಧಿಷ್ಠಿರನನ್ನು ಸೋಲಿಸಿ ಆ ಧರ್ಮಿಷ್ಠನನ್ನು ಕಾಡಿಗೆ ಅಟ್ಟಿದನು. ಸತ್ಯನಿಷ್ಠನಾದ ಯುಧಿಷ್ಠಿರನು ಅಣುದ್ಯೂತದಲ್ಲಿ ಮಾತು ಕೊಟ್ಟಂತೆ ನಡೆದುಕೊಂಡು ವನವಾಸ, ಅಜ್ಞಾತವಾಸವನ್ನು ಪೂರೈಸಿ ಬಂದು ತನ್ನ ರಾಜ್ಯವನ್ನು ಕೊಡುವಂತೆ ಬೇಡಿದನು. ಧೃತರಾಷ್ಟ್ರನು ಅದನ್ನೂ ಕೊಡಿಸಲಿಲ್ಲ. ನಾಲ್ಕನೆಯದಾಗಿ ಕೃಷ್ಣನು ಸಂಧಾನಕ್ಕೆ ಬಂದಾಗ ಅವನ ಮಾತನ್ನೂ ನಡೆಸದೆ ಅಲ್ಲಗಳೆದನು. ಶ್ರೀಕೃಷ್ಣನು ಆಗ ಕೌರವರ ಸಭೆಯಲ್ಲಿ ಚತುರ್ವಿಧ ಪುರುಷಾರ್ಥ ಪ್ರದಗಳಾದ ಮಾತುಗಳನ್ನು ಹೇಳಿದ್ದನು. ಅದನ್ನೂ ಒಪ್ಪದೇ ಇದ್ದುದರಿಂದ ಧೃತರಾಷ್ಟ್ರನಲ್ಲಿದ್ದ ಅಲ್ಪ ಪುಣ್ಯವೂ ನಷ್ಟವಾಯಿತು.

ಶ್ರೀಕೃಷ್ಣನು ಸಂಧಿಯಾಗದಂತೆಯೇ ಮಾಡಿ ಉಪಪ್ಲಾವ್ಯಕ್ಕೆ ಹಿಂತಿರುಗಿದಾಗ ಧೃತರಾಷ್ಟ್ರನು ವಿದುರನನ್ನು ಬರಮಾಡಿ ತನ್ನ ಕರ್ತವ್ಯವನ್ನು ಕೇಳಿದನು ಆಗ ಮಂತ್ರಿ ಶ್ರೇಷ್ಠನಾದ ವಿದುರನು ಅವನಿಗೆ ನೀತಿಯನ್ನು ಹೇಳಿದನು ಅದು ವಿದುರನೀತಿಯೆಂದೇ ಪ್ರಸಿದ್ಧಿಯಾಗಿದೆ.

**ವಿದುರ ;** ಧೃತರಾಷ್ಟ್ರನೇ ! ಪಾಂಡವರಿಗೆ ರಾಜ್ಯವನ್ನು ಕೊಡಬಾರದೆಂದು ನೀನು ಎಷ್ಟೇ ಹಠಮಾಡಿದರೂ ಶ್ರೀಕೃಷ್ಣನು ಅದನ್ನು ಅವರಿಗೆ ಕೊಡಿಸಿಯೇ ತೀರುವನು. ನಿನ್ನ ಮಗನು ಹರಿದ್ವೇಷಿಯು. ನಿನ್ನ ವಂಶಕ್ಕೆ ಅನುಕೂಲವಾಗಬೇಕಾದರೆ ದುರ್ಯೋಧನನನ್ನು ಈಗಲೇ ತ್ಯಜಿಸಿ ಬಿಡು.

**ದುರ್ಯೋಧನ .** ಈ ವಿದುರನು ಕಪಟಿ. ದಾಸೀಮಗ. ಇವನನ್ನು ಕರೆಸಿದವರಾರು ? ನಮ್ಮ ಮನೆ ಅನ್ನ ತಿಂದು ಬೆಳೆದು ನಮಗೇ ವಿರೋಧಿಯಾಗಿರುವನು. ಇವನು ನಮ್ಮ ಶತ್ರುಗಳಿಗೆ ಹಿತೈಷಿ. ಇವನನ್ನು ಊರಿನಿಂದ ಹೊರಗೆ ದಬ್ಬಿಬಿಡಿ.

(ವಿದುರನು ಕೂಡಲೇ ತನ್ನ ಬಿಲ್ಲನ್ನು ಬಾಗಿಲಲ್ಲಿಟ್ಟು, ಪುಣ್ಯಕರವಾದ ತೀರ್ಥಯಾತ್ರೆಗೆ ಹೊರಟು ಹೋದನು ಅವನು ಪ್ರಭಾಸಕ್ಕೆ ಹೋದಾಗ, ಉದ್ಧವನು ಯಾದವರು ಪರಸ್ಪರ ಹೊಡೆದಾಡಿ ಮರಣ ಹೊಂದುವಂತೆ ಋಷಿಗಳು ಕೊಟ್ಟ ಶಾಪವನ್ನು ಕೇಳಿ ನೊಂದು, ಕೃಷ್ಣನ ಅಪ್ಪಣೆಯಂತೆ ಬದರಿಗೆ ಹೊರಟು, ಯಮುನಾ ತೀರಕ್ಕೆ ಬಂದನು. ಅಲ್ಲಿ ಉದ್ಧವನು ವಿದುರನನ್ನು ಕಂಡನು. ವಿದುರನು ಅವನನ್ನು ಕುರಿತು ವಸುದೇವಾದಿ ಯಾದವರ ಕುಶಲವನ್ನು ಕೇಳಿದನು. ಹಾಗೆಯೇ ಪಾಂಡವರ ಕ್ಷೇಮವನ್ನೂ ವಿಚಾರಿಸಿದ ಮತ್ತು "ಮಕ್ಕಳ ಮೇಲಿನ ಅಭಿಮಾನದಿಂದ ನಮ್ಮಣ್ಣನು ನನ್ನನ್ನು ಹೊರದಬ್ಬಿದನು ನಾನು ನಿವೃತ್ತಿಮಾರ್ಗವನ್ನು ಹಿಡಿದಿರುವೆನು" ಎಂದನು.

**ವಿದುರ :** ಉದ್ಧವಾ ! ಶ್ರೀಕೃಷ್ಣನು ಕಂಸಾದಿಗಳನ್ನು ಕೊಂದಂತೆ ದುರ್ಯೋಧನಾದಿಗಳನ್ನೂ ಬೇಗ ಕೊಲ್ಲಬಹುದಾಗಿತ್ತು. ದೇವತೆಗಳ ದುಃಖಪರಿಹಾರಕ್ಕಾಗಿ ಸೈನ್ಯ ಸಹಿತರಾದ ದುಷ್ಟರಾಜರನ್ನೆಲ್ಲ ಮೊದಲು ಕೊಲ್ಲಬೇಕೆಂದು ನಿಶ್ಚಯಿಸಿ ದುರ್ಯೋಧನಾದಿಗಳ ಅಪರಾಧವನ್ನು ಶ್ರೀಕೃಷ್ಣನು ಉಪೇಕ್ಷಿಸಿರಬಹುದೆಂದು ನನಗೆ ತೋರುತ್ತದೆ. ತಾನು ಜನನರಹಿತನಾದರೂ ಶರಣಾಗತರಾದ ಸರ್ವರನ್ನೂ ರಕ್ಷಿಸಬೇಕೆಂದೇ ಶ್ರೀಕೃಷ್ಣನು ಅವತರಿಸುವನಷ್ಟೆ ? ಅಂತಹ ಪವಿತ್ರ ಕೀರ್ತಿಯುಳ್ಳ ಶ್ರೀಹರಿಯ ಮಹಿಮಾ ವಾರ್ತೆಯನ್ನು ಹೇಳು. ಉದ್ಧವಾ ! ನೀನು ನನ್ನ ಸಖನಲ್ಲವೆ ?

**ಒಂಬನೆಯ ಅಧ್ಯಾಯ ಮುಗಿದುದು**

ವಿದುರನು ಹರಿಕಥೆಯನ್ನು ಹೇಳಿಂದಾಗ ಭಕ್ತನಾದ ಉದ್ಧವನಿಗೆ ಶ್ರೀಕೃಷ್ಣನ ಸ್ಮರಣೆ ಬಂದು ಗಂಟಲುಬ್ಬಿ ಉತ್ತರ ಕೊಡಲಾರದವನಾದನು. ಇವನು ಐದೇ ವರ್ಷದ ಬಾಲಕನಾಗಿರುವಾಗ ಅವನ ತಾಯಿಯು ಬೆಳಗಿನ ಊಟಕ್ಕೆ ಕರೆದಾಗ ಉದ್ಧವನು ಕೃಷ್ಣನ ಮಾನಸ ಪೂಜೆ, ಬಾಹ್ಯ ಪೂಜೆ ಮಾಡುತ್ತಿದ್ದುದರಿಂದ ಭೋಜನ ಮಾಡಲು ಇಚ್ಛಿಸಲಿಲ್ಲ. ಹೀಗೆಯೇ ವಾರ್ಧಿಕ್ಯದವರೆಗೂ ಶ್ರೀಕೃಷ್ಣನ ಸೇವೆಯಲ್ಲೇ ಸದಾ ನಿರತನಾಗಿ, ಅವನ ಪಾದಾರವಿಂದವನ್ನೇ ಎಡಬಿಡದೆ ಸ್ಮರಿಸುತ್ತ ಇರತಕ್ಕವನು ಉದ್ಧವನು. ಇಂತಹವನು ಶ್ರೀಕೃಷ್ಣನು ಪರಂಧಾಮಕ್ಕೆ ತೆರಳುವನೆಂಬುವ ಸಂಗತಿಯನ್ನು ಬಾಯಲ್ಲಿ ಹೇಗೆ ಹೇಳಿಯಾನು ? ಉದ್ಧವನು ಶ್ರೀಕೃಷ್ಣನನ್ನು ಸ್ಮರಿಸಿ ಪರಮಾನಂದವನ್ನು ಹೊಂದುತ್ತ ಒಂದು ಮುಹೂರ್ತ ಸುಮ್ಮನೆ ಕುಳಿತನು. ಇದನ್ನು ನೋಡಿ ವಿದುರನು "ಉದ್ಧವನು ಕೃತಕೃತ್ಯನು" ಎಂದು ತಿಳಿದನು. ಉದ್ಧವನು ತನ್ನ ಸಮಾಧಿಯಿಂದ ಎಚ್ಚೆತ್ತು ಮಾತನಾಡಿದನು.

**ಉದ್ಧವ :** ವಿದುರನೆ ! ಶ್ರೀಕೃಷ್ಣನೆಂಬ ಸೂರ್ಯನು ಅಸ್ತಂಗತನಾಗಲಿರುವನು. ಕಾಂತಿರಹಿತರಾದ ನಮ್ಮ ಯಾದವರ ಕ್ಷೇಮಾವಾರ್ತೆಯನ್ನು ಏನೆಂದು ಹೇಳಲಿ ? ಇಡಿ ಈ ಲೋಕವೇ ನಿರ್ಭಾಗ್ಯವಾಗಿದೆ ಯಾದವರು ಶ್ರೀಕೃಷ್ಣನೊಡನೆ ಸಹವಾಸಾದಿಗಳನ್ನು ಮಾಡುತ್ತಿದ್ದರೂ 'ಸಂಸಾರ ತಾರಕನು ಶ್ರೀಕೃಷ್ಣನು' ಎಂಬ ಮಹಿಮೆಯನ್ನು ತಿಳಿಯದೇ ಹೋಗಿರುವುದರಿಂದ ಅವರು ಅತ್ಯಂತ ಅದೃಷ್ಟ ಹೀನರು. ಹೃದಯವನ್ನು ತಿಳಿದಿದ್ದರೂ ಅವರು ದೇಹಾಭಿಮಾನದಿಂದ ಶ್ರೀಕೃಷ್ಣನು ನಮಗಿಂತ ಸ್ವಲ್ಪ ಶ್ರೇಷ್ಠನು ಎಂದು ತಿಳಿದಿರುವರು. ರಾಜಸೂಯದಲ್ಲಿ ಅಗ್ರಪೂಜೆಗೊಂಡ ಶ್ರೀಕೃಷ್ಣನನ್ನು ನೋಡಿದವರು 'ಇವನು ಅಪ್ರಾಕೃತರೂಪಿಯಾದ ಪರಬ್ರಹ್ಮ'ನೆಂದು ತಿಳಿಯಬೇಕಾಗಿತ್ತು. ಅದು ಬಿಟ್ಟು "ಬ್ರಹ್ಮನು ಈ ಕೃಷ್ಣನ ದೇಹವನ್ನು ಸೃಷ್ಟಿಸಿದುದನ್ನು ನೋಡಿದರೆ ಅವನ ಕೌಶಲವು ಎಂತಹುದೆಂಬುದು ತಿಳಿದು ಬರುವುದು" ಎಂದು ಭಾವಿಸಿದರಲ್ಲ ! ಇದಕ್ಕಿಂತ ಆಶ್ಚರ್ಯವುಂಟೆ ? ಈ ರೂಪವನ್ನು ಬ್ರಹ್ಮನು ಸೃಷ್ಟಿಸಬಲ್ಲನೆ ? ಹುಟ್ಟಿಲ್ಲದ ಕೃಷ್ಣನು ದೇವಕಿಯ ಉದರದಿಂದ ಜನಿಸಿದಂತೆ ತೋರಿದನು. ಕಂಸನಿಗೆ ಹೆದರಿದವನಂತೆ ಗೋಕುಲಕ್ಕೆ ಒಂದು ಅಲ್ಲಿ ಬೆಳೆದಂತೆ ತೋರಿದನು, ಜರಾಸಂಧನಿಗೆ ಹೆದರಿದನೋ ಎಂಬಂತೆ ತೋರಿ ದ್ವಾರಕೆಗೆ ವಾಸವನ್ನು ಬದಲಾಯಿಸಿದನು. ಕಂಸನನ್ನು ಕೊಂದ ಮೇಲೆ ವಸುದೇವ ದೇವಕಿಯರ ಬಳಿಗೆ ಒಂದು ಅವರು ತಮ್ಮ ಕರ್ಮದಿಂದ ಸೆರೆಮನೆಯಲ್ಲಿ ಕೊಳೆಯುತ್ತಿದ್ದರೆ, "ಅಪ್ಪಾ ! ಅಮ್ಮಾ ! ನೀವು ಕಂಸನಿಂದ ಬಹಳವಾಗಿ ನೊಂದಿರಿ. ಇದಕ್ಕೆ ಯಾವ ಪ್ರತೀಕಾರವನ್ನೂ ನಾವು ಮಾಡಲಿಲ್ಲ. ನಮ್ಮಲ್ಲಿ ಅನುಗ್ರಹಿಸಿ" ಎಂದು ಹೇಳಿದ ಮಾತುಗಳು ಮನಸ್ಸಿಗೆ ಮೋಹವನ್ನುಂಟು ಮಾಡುತ್ತವೆ. ಭಕ್ತಿಗೆ ಮಾತ್ರವೇ ಸಿಲುಕುವ ಈತನು, ತನ್ನ ಭಕ್ತನಾದವನು ಅಸುರಾವೇಶದಿಂದ ದ್ವೇಷಿಸಿದರೂ, ದ್ವೇಷಕ್ಕೆ ಫಲವಾದ ತಮಸ್ಸನ್ನು

ಅಸುರನಿಗೆ ಕೊಟ್ಟು ಭಕ್ತನಿಗೆ ಅನುಗ್ರಹಿಸಿ ಮೋಕ್ಷವನ್ನೇ ಕೊಟ್ಟು ಬಿಡುವನು. ಅಂದಮೇಲೆ ಇವನಿಗಿಂತ ಕರುಣಾಳುಗಳಿರುವರೆ ? ಇಂತಹವನನ್ನು ಅಗಲಿ ಬದುಕ ಬಲ್ಲವನು ಯಾರು ?

## ಮತ್ಯತಾಳ ಸುಳಾದಿ

ಶ್ರೀವರ ಪರಾಕು ಚಿತ್ತಾವಧಾನವೆಂದು ನಿನ್ನಾವಾಗ
ವೋಲೈಸುವರಜಭವಾದಿ ಅಧಿಕಾರಿಗಳು
ದೇವದೇವ ಸಾರ್ವಭೌಮ ನೀನುಗ್ರ ಸೇನಂಗೆ
ದೇವ ಜೀಯ ಸಾಸಮುಖ (=ಸಾಹಸ ಶ್ರೇಷ್ಠ) ವೆಂಬುದು ಇ
ದಾವ ಲೀಲೆಯೋ ಭಕ್ತವತ್ಸಲ ಸಿರಿಕೃಷ್ಣ || ೨ ||

ವಿಷಸ್ತನ್ಯಕೊಟ್ಟ ಪೂತನಿಯೊಳಗಿದ್ದ ಉರ್ವಶಿಗೆ ಉತ್ತಮ ಲೋಕವನ್ನು ಕೊಟ್ಟನಲ್ಲವೆ ? ಇಂತಹವನನ್ನು ಬಿಟ್ಟು ಮೋಕ್ಷಕ್ಕಾಗಿ ಇನ್ನಾವನನ್ನು ಭಜಿಸೋಣ ? ವಿದುರಾ ! ದುಷ್ಟನಿಗ್ರಹ, ಶಿಷ್ಟಪರಿಪಾಲನೆಗಾಗಿ ವಸುದೇವ ದೇವಕಿಯರಲ್ಲಿ ಅವತರಿಸಿದವನು. ಗೋಕುಲದಲ್ಲಿ ಹನ್ನೊಂದು ವರುಷವಾಸ ಮಾಡಿದನು. ಗೋವುಗಳನ್ನು ಮೇಯಿಸಿದನು. ಗೋಕುಲದವರನ್ನು ಸಂತೋಷ ಪಡಿಸಿದನು. ಕಂಸನ ಪರಿವಾರದವರಾದ ಶಕಟಾದಿಗಳನ್ನು ಕೊಂದನು. ಕಾಲಿಯನನ್ನು ಓಡಿಸಿ ಮಡುವಿನ ಜಲವನ್ನು ಅಮೃತಮಯ ಮಾಡಿದನು. ಏಳು ದಿನ ಬೆಟ್ಟವೆತ್ತಿ ಹಿಡಿದು ಗೋಕುಲವನ್ನು ಸಲಹಿದನು. ಗೋಪಸ್ತ್ರೀಯರಿಗೆ ರಾಸಕ್ರೀಡೆಯಿಂದ ಪರಮಾನಂದವನ್ನು ಪಡಿಸಿದನು.

## ಎರಡನೆಯ ಅಧ್ಯಾಯ ಮುಗಿದುದು

ಶ್ರೀಕೃಷ್ಣನು ಕಂಸನನ್ನು ಕೊಂದನು. ಗುರುದಕ್ಷಿಣೆಯಾಗಿ ಸಾಂದೀಪನಿಗೆ ಸತ್ತ ಅವನ ಮಗನನ್ನು ಬದುಕಿಸಿ ಕೊಟ್ಟನು. ರಾಜರನ್ನು ತಿರಸ್ಕರಿಸಿ ರುಕ್ಮಿಣಿಯನ್ನು ಮದಿವೆಯಾದನು. ಏಳು ಗೂಳಿಗಳನ್ನು ಮರ್ದಿಸಿ ನೀಲಾದೇವಿಯನ್ನು ಮದಿವೆಯಾದನು. ಆಗ ಯುದ್ಧಕ್ಕೆ ಬಂದ ರಾಜರನ್ನೆಲ್ಲಾ ಜಯಿಸಿದನು. ಸ್ವರ್ಗದಿಂದ ಪಾರಿಜಾತವೃಕ್ಷವನ್ನು ತಂದನು. ಇಂದ್ರನ ಪ್ರಾರ್ಥನೆಯಂತೆ ನರಕಾಸುರನನ್ನು ಕೊಂದು ಅವನ ಮಗನಾದ ಭಗದತ್ತನಿಗೆ ಪಿತೃರಾಜ್ಯ, ಕೋಶಾದಿಗಳನ್ನು ದಾನ ಮಾಡಿದನು. ಸೆರೆಸಿಕ್ಕಿದ್ದ ಹದಿನಾರು ಸಾವಿರ ನೂರು ಮಂದಿ ಕನ್ಯೆಯರನ್ನು ಸೆರೆಯಿಂದ ಬಿಡಿಸಿ ದ್ವಾರಕಿಗೆ ಕರೆತಂದು ಅವರ ಇಷ್ಟದಂತೆ ಒಂದೇ ಕಾಲದಲ್ಲಿ ಹದಿನಾರು ಸಾವಿರ ನೂರು ರೂಪಗಳಿಂದ ಪ್ರತ್ಯೇಕ ಪ್ರತ್ಯೇಕವಾಗಿ ಒಬ್ಬೊಬ್ಬಳನ್ನೂ ಮದಿವೆಯಾದನು. ಅವರಲ್ಲಿ ಒಬ್ಬೊಬ್ಬಳಲ್ಲಿಯೂ ಬಲಿಷ್ಠರಾದ ಹತ್ತು ಹತ್ತು ಮಂದಿ ಗಂಡು ಮಕ್ಕಳನ್ನು ಸೃಷ್ಟಿಸಿದನು. ಸಾಲ್ವಾದಿ

ಗಳನ್ನು ಶ್ರೀಕೃಷ್ಣನೊಬ್ಬನೇ ನಿರಾಯಾಸವಾಗಿ ಸಂಹರಿಸಿದನು. ಕಾಲಯವನನನ್ನು ಮುಚುಕುಂದನಿಂದಲೂ, ಜರಾಸಂಧನನ್ನು ಭೀಮಸೇನನಿಂದಲೂ ಕೊಲ್ಲಿಸಿದನು. ಕುರುಕ್ಷೇತ್ರದಲ್ಲಿ ಯುದ್ಧಕ್ಕೆ ನಿಂದ ಉಭಯ ಪಕ್ಷದ ರಾಜರನ್ನೂ ಅರ್ಜುನ, ಭೀಮಸೇನ, ಭೀಷ್ಮ ಮೊದಲಾದವರಲ್ಲಿದ್ದು ಅವರಿಂದ ಕೊಲ್ಲಿಸಿದನು. ದುರ್ಯೋಧನನನ್ನು ಕೊಂದ ಭೀಮಸೇನನಲ್ಲಿ ಬಹು ಪ್ರೀತನಾದನು. ಸಜ್ಜನರು ಕಲಿಯುಗದಲ್ಲಿಯೂ ಬದುಕಿರುವುದು ಭೂ ಭಾರವಿದ್ದಂತೆ. ಆದ್ದರಿಂದ ಅಜೇಯಿಗಳಾದ ಯಾದವರನ್ನು ವಿಪ್ರಶಾಪನಿಮಿತ್ತ ಮಾಡಿ ಸಂಹರಿಸಿ ಸ್ವರ್ಗಕ್ಕೆ ಕಳುಹಿಸಲು ನಿರ್ಣಯಿಸಿದನು. ಪಾಂಡವರನ್ನು ರಾಜ್ಯದಲ್ಲಿ ಸ್ಥಾಪಿಸಿ, ಸತ್ತ ಪರೀಕ್ಷಿತನನ್ನು ಬದುಕಿಸಿ ಕಾಪಾಡಿದನು. ಪಾಂಡವರು ಐವರಿಂದಲೂ ಅಶ್ವಮೇಧ ಯಾಗಗಳನ್ನು ಮಾಡಿಸಿ ಒಂದಕ್ಕೆ ಮೂರು ಯಾಗದಷ್ಟು ಫಲವನ್ನು ಕೊಟ್ಟನು ದ್ವಾರಕೆಯಲ್ಲಿದ್ದು ಗೃಹಸ್ಥ ಧರ್ಮವನ್ನು ಆಚರಿಸುತ್ತ ಲೋಕವನ್ನು ಶಿಕ್ಷಿಸಿದನು. ವೈರಾಗ್ಯಚಕ್ರವರ್ತಿಯಾದ ಶ್ರೀ ಜಗನ್ನಾಥನು ಸಜ್ಜನರು ವೈರಾಗ್ಯವನ್ನು ಹೊಂದಲಿ ಎಂದು ತಾನು ವೈರಾಗ್ಯವನ್ನು ತೋರಿಸಿದನು ವಿಶ್ವಾಮಿತ್ರಾದಿ ಬ್ರಾಹ್ಮಣರು ತನ್ನ ಮತವನ್ನು ಅರಿತು ಅದರಂತೆ ಯಾದವರಿಗೆ ಅವರು ಶಾಪವನ್ನು ಕೊಡುವಂತೆ ಪ್ರೇರಿಸಿದನು. ಯಾದವರು ಪ್ರಭಾಸಕ್ಕೆ ಬಂದು ಸ್ನಾನಮಾಡಿ ದಾನಾದಿಗಳನ್ನು ಕೊಟ್ಟು ಬ್ರಾಹ್ಮಣರಿಗೆ ಭೋಜನ ಮಾಡಿಸಿ ಅವರಿಗೆ ತಾಂಬೂಲಾದಿಗಳನ್ನು ಕೊಟ್ಟು ನಮಸ್ಕರಿಸಿದರು.

## ಮೂರನೆಯ ಅಧ್ಯಾಯ ಮುಗಿದುದು

ಉದ್ಧವನು ವಿದುರನಿಗೆ ಮುಂದಾಗುವ ಯಾದವರ ನಾಶವನ್ನು ನಡೆದಂತೆ ವರ್ಣಿಸಿದನು. ಶ್ರೀಕೃಷ್ಣನು ಪರಂಧಾಮಕ್ಕೆ ತೆರಳುವ ಮುನ್ನ ಉದ್ಧವನಿಗೆ ಬದರಿಗೆ ಹೋಗೆಂದು ಅಪ್ಪಣೆ ಮಾಡುವನು. ಆಗ ತತ್ತ್ವೋಪದೇಶ ಮಾಡಬೇಕೆಂಬ ಅಭಿಪ್ರಾಯವು ಕೃಷ್ಣನಿಗಿರುವುದನ್ನು ತಿಳಿದ ಉದ್ಧವನು ಕೃಷ್ಣನನ್ನು ಹುಡುಕಿಕೊಂಡು ಹೋಗುವನು. ವಟವೃಕ್ಷದ ಕೆಳಗೆ ಕೃಷ್ಣನು ಕುಳಿತಿರುವನು. ಅವತಾರ ಕಾಲದಲ್ಲಿದ್ದ ರೂಪವನ್ನು ತೋರಿಸುತ್ತಿರುವನು. ಉದ್ಧವನು ನಮಿಸಿ ಕೂಡುವನು. ಆ ವೇಳೆಗೆ ಸರಿಯಾಗಿ ಪರಾಶರರ ಶಿಷ್ಯರಾದ ಮೈತ್ರೇಯರು ಅಲ್ಲಿಗೆ ಒಂದು ಹರಿಗೆ ನಮಿಸಿ ಉದ್ಧವನ ಬಳಿಯಲ್ಲಿ ಕೂಡುವರು.

**ಕೃಷ್ಣ** : ಉದ್ಧವಾ ! ಹಿಂದೆ ದೇವತೆಗಳು ಮಾಡಿದ ಯಾಗದಲ್ಲಿ ಬೃಹಸ್ಪತಿ ರೂಪದಿಂದ ನೀನೂ ಅಲ್ಲಿದ್ದೆ. ಆಗ ಭಗವಂತನೇ ನನಗೆ ಜ್ಞಾನೋಪದೇಶ ಮಾಡಲಿ ಎಂದು ಸಂಕಲ್ಪಿಸಿ ನನ್ನನ್ನು ಪೂಜಿಸಿದೆ, ಆದ್ದರಿಂದ ಅಭಕ್ತರಿಗೆ ದುರ್ಲಭವಾದ ಈ ಜ್ಞಾನವನ್ನು ಉಪದೇಶಿಸುವೆನು. ಬೃಹಸ್ಪತಿ ನಾಮಕ–ಜನ್ಮವೇ ನಿನಗೆ ಕೊನೆಯದು. ಪದ್ಮೋದ್ಭವ ಬ್ರಹ್ಮನಿಗೆ ಉಪದೇಶಿಸಿದ ಭಾಗವತವನ್ನೇ ನಿನಗೆ ಉಪದೇಶಿಸುವೆನು.

**ಉದ್ಧವ :** ಸ್ವಾಮಿಯೇ ! ನಿನ್ನ ಭಕ್ತರಿಗೆ ಪುರುಷಾರ್ಥವು ದುರ್ಲಭವಲ್ಲ. ನಾನು ನಿನ್ನ ಮಹಿಮಾಶ್ರವಣಾದಿಗಳನ್ನು ಮಾಡುತ್ತಿರಬೇಕು ಇದನ್ನು ಅನುಗ್ರಹಿಸು. ಇನ್ನಾವುದನ್ನೂ ಬೇಡುವುದಿಲ್ಲ. ನೀನು ವಿಧಿಬದ್ಧನಲ್ಲ ಆದರೂ ಸ್ನಾನ ಸಂಧ್ಯಾವಂದನೆ ಮೊದಲಾದ ವಿಹಿತ ಕರ್ಮಗಳನ್ನು ಬಿಡದೆ ಮಾಡುತ್ತಿರುವೆ. ನರಸಿಂಹ ನೀನಾದರೂ ಜರಾಸಂಧಾದಿಗಳಿಗೆ ಹೆದರಿ ಓಡಿಹೋದೆ.

**ರೂಪಕತಾಳ ಸುಳಾದಿ**

ರಕ್ಕಸಗಂಜಿ ಮುಚುಕುಂದಗೆ ಮರೆಬಿದ್ದೆ
ರಕ್ಕಸಗಂಜಿ ಸಾಗರದೊಳು ಪುರಬಿಗಿದೆ
ರಕ್ಕಸಗಂಜಿ ವಿಕಾರ ಮೊಗನಾದೆ
ರಕ್ಕಸಗಂಜಿ ಕೋಡಗಬಲ ನೆರಹಿದೆ
ರಕ್ಕಸಾಂತಕ ನಿನ್ನ ಮಕ್ಕಳಾಟಿಕೆ
ದೇವರ್ಕಳ ಮನಸಿಗೆ ಸಿಕ್ಕದೆಂತೆಂಬೋರು
ಮಕ್ಕಳಬೇಡಿ ನೀ ಮುಕ್ಕಣ್ಣನೊಲಿಸಿದೆ
ರಕ್ಕು ಮಾಯಾತನಕಕ್ಕಜ ಗೊಂಬೆನೊ (ಅಕ್ಕಜ – ಆಶ್ಚರ್ಯ)
ಚಿಕ್ಕವನ ಹಿರಿಯನ್ನ ಮಾಡಿ ಪುಣ್ಯವ
ದಕ್ಕಿಸಿಗೊಂಡೆ ಸಿರಿವಿಜಯ ವಿಠಲ ಪುಂಡ ॥ ೩ ॥

**ಆದಿತಾಳ**

ಒದ್ದವನು ಒದ್ದೇಪೋದ ಮೆದ್ದವನು ಮೆದ್ದೇಪೋದ
ಕದ್ದವನು ಕದ್ದೇಪೋದ ಗೆದ್ದವನು ಗೆದ್ದೇಪೋದ
ಇದ್ದವನು ಇದ್ದೇಪೋದ ಎದ್ದವನು ಎದ್ದೇಪೋದ
ಗದ್ದುಗೆ ನೀಡಿಸಿದವ ಹೊದ್ದಿದ್ದ ನಿನ್ನವರೊಳು
ಸಿದ್ಧಿ(ಯ)ದ ವಿಜಯವಿಟ್ಠಲ
ಬಿದ್ದನೊ ನಿನ್ನ ಪಾದಕ್ಕೆ ಪೊದ್ದು ಎನ್ನಕೂಡ, ನಿ
ಷಿದ್ಧ ಎಂದಿಗೂ ಕಾಣೆ ॥ ೭ ॥

ಸರ್ವಜ್ಞ ಚೂಡಾಮಣಿಯಾದರೂ ನನ್ನ ಸಲಹೆಯನ್ನು ಕೇಳುವೆ. ಈ ನಿನ್ನ ವ್ಯಾಪಾರಗಳು ನನ್ನ ಬುದ್ಧಿಯನ್ನು ಭ್ರಮೆಗೊಳಿಸುತ್ತಿವೆ. ನಿನ್ನ ಮಹಿಮೆಯನ್ನು ಪದೇಪದೇ ಕೇಳಿದರೆ ಜ್ಞಾನವು ದೃಢವಾಗುತ್ತದೆ. ನೀನು ಮಾಡಿದ ವ್ಯಾಪಾರಗಳಿಗೆ ಕಾರಣ ಗೊತ್ತಾದಾಗ ಆನಂದವಾಗುತ್ತದೆ. ನಾನು ಬ್ರಹ್ಮದೇವರಷ್ಟು ಜ್ಞಾನಿಯಲ್ಲ, ನನ್ನ ಯೋಗ್ಯತೆಗೆ ತಕ್ಕಂತೆ ಉಪದೇಶಿಸು.

(ಆದರಂತೆ ಶ್ರೀಕೃಷ್ಣನು ಉದ್ಧವನಿಗೆ ತನ್ನ ಮಹಿಮೆಯನ್ನು ಉಪದೇಶಿಸಿದನು. ಬಳಿಕ ಉದ್ಧವನು ಅಪ್ಪಣೆ ಪಡೆದು ಹೊರಟು ಯಮುನೆಗೆ ಬಂದನು.)

**ಉದ್ಧವ :** ವಿದುರಾ ! ನಿನ್ನ ಭೇಟಿ ಸಂತೋಷವುಂಟುಮಾಡಿತು. ಈಗ ನರನಾರಾಯಣರಿರುವ ಬದರಿಗೆ ಹೋಗುವೆನು

(ಆರಾತ್ರಿ ಅವರಿಬ್ಬರೂ ಹರಿಯ ಕಥೆಯಲ್ಲಿಯೇ ಸುಖವಾಗಿ ಕಾಲಕಳೆದರು. ಬೆಳಗ್ಗೆ ಹೊರಟ ಉದ್ಧವನನ್ನು ಕುರಿತು ವಿದುರನು "ಶ್ರೀಕೃಷ್ಣನ ಉಪದೇಶಗಳನ್ನು ನನಗೆ ತಿಳಿಸು" ಎಂದನು ಉದ್ಧವನು ನಿನಗೆ ಮೈತ್ರೇಯರು ಉಪದೇಶಿಸುವಂತೆ ಶ್ರೀಕೃಷ್ಣನಾಜ್ಞೆಯಾಗಿದೆ ಎಂದು ಹೇಳಿ ಬದರಿಗೆ ಹೊರಟು ಹೋದನು.)

**ಪರೀಕ್ಷಿತ್ ,** ಶುಕಾಚಾರ್ಯರೇ ! ಉದ್ಧವನು ಯಾದವನಾಗಿಯೂ ಬಡಿದಾಡಿ ಸಾಯದೇ ಉಳಿದುದು ಹೇಗೆ ?

**ಶುಕ :** ಶ್ರೀಕೃಷ್ಣನು ಪರಾಂಧಾಮಕ್ಕೆ ಹೋದಮೇಲೆ ಅವನು ತನ್ನ ಮಹಿಮೆಯನ್ನು ಪ್ರಚಾರ ಮಾಡಲು ಉದ್ಧವನು ಬದುಕಿರಲಿ ಎಂದು ಸಂಕಲ್ಪ ಮಾಡಿದ್ದರಿಂದ ಉದ್ಧವನು ಬದುಕಿರುವನು. ಉದ್ಧವನೂ ಶ್ರೀಕೃಷ್ಣಾಜ್ಞೆಯನ್ನು ನೆರವೇರಿಸಿದನು. ಅವನು ಹೇಳಿದ್ದನ್ನೆಲ್ಲ ವಿದುರನು ಸ್ಮರಿಸಿಕೊಂಡು ಅತ್ತುಬಿಟ್ಟನು. ಜ್ಞಾನಿಯಾದ್ದರಿಂದ ಅವನು ಸಮಾಧಾನ ಮಾಡಿಕೊಂಡು ಯಮುನೆಯಿಂದ ಹೊರಟು ಮೈತ್ರೇಯರಿದ್ದ ಗಂಗಾದ್ವಾರಕ್ಕೆ ಬಂದನು.

## ನಾಲ್ಕನೆಯ ಅಧ್ಯಾಯ ಮುಗಿದುದು

**ವಿದುರ ;** ಮೈತ್ರೇಯರೇ ! ಜನರು ಸುಖವಾಗಲಿ ಎಂದು ಕರ್ಮವನ್ನು ಮಾಡುತ್ತಾರೆ, ಆದರಿಂದ ಸುಖವಾಗುವುದಿಲ್ಲ. ದುಃಖವು ಹೋಗುವುದಿಲ್ಲ, ಮತ್ತಷ್ಟು ಅನರ್ಥವನ್ನೇ ಹೊಂದುವರು. ಆದ್ದರಿಂದ ದುಃಖವು ಹೋಗಿ ಸುಖವು ಬರಬೇಕಾದರೆ ಏನು ಮಾಡಬೇಕು ಹೇಳಿ. ಶ್ರೀಹರಿಯು ಯಾವುದನ್ನೂ ಬಯಸದೇ ಆದಿಕಾಲದಲ್ಲಿ ಜಗತ್ತನ್ನು ಹೇಗೆ ಸೃಷ್ಟಿಸುವನು ? ಅವನು ಮಾಡುವ ಸ್ಥಿತಿ, ಸಂಹಾರಗಳ ಪ್ರಕಾರಗಳನ್ನೂ ತಿಳಿಸಿ. ಮತ್ಸ್ಯಾದಿ ಅವತಾರಗಳಲ್ಲಿ ಶ್ರೀಹರಿಯು ಮಾಡುವ ಕರ್ಮಗಳಾವುವು ? ದೇಹ, ಸ್ವಭಾವ, ಕರ್ಮ, ಅದೃಷ್ಟ, ಆಕಾರವಿಶೇಷಾದಿಗಳಿಂದ ಭೇದ ಇವೆಲ್ಲವನ್ನೂ ಚತುರ್ಮುಖನ ದ್ವಾರಾ ಹೇಗೆ ಸೃಷ್ಟಿಸುವನು ? ನಾನು ಭಾರತಾದಿಗಳನ್ನು ವ್ಯಾಸರ ಮುಖದಿಂದ ಅನೇಕ ಬಾರಿ ಕೇಳಿರುವೆನು. ಭಾರತಾದಿಗಳ ತಾತ್ಪರ ಜ್ಞಾನವಾದರೇ ಅವು ಕೃಷ್ಣನ ಕಥೆಯೆಂದು ಗೊತ್ತಾಗುತ್ತದೆ. ಭಾಗವತವಾದರೋ ಸಮಾಧಿಭಾಷೆಯಿಂದಲೇ ಸ್ಪಷ್ಟವಾಗಿ ಭಗವಂತನ ಮಹಿಮೆಯನ್ನು ಹೇಳುವಂತೆ

ವ್ಯಾಸರು ರಚಿಸಿರುವರು. ಆದ್ದರಿಂದ ಭಾಗವತಪುರಾಣವನ್ನು ಹೇಳಿ. ಮಂದರೂ ಅದನ್ನು ತಿಳಿದು ಉದ್ಧೃತರಾಗುವರು.

ಹರಿಕಥೆ ಕೇಳುವವರ ಸಕಲ ಪಾಪಗಳನ್ನು ಪರಿಹಾರ ಮಾಡಬಲ್ಲುದು. ಶ್ರೀಹರಿಯು ವಾಸುದೇವಾದಿ ಅವತಾರಗಳಲ್ಲಿ ಮಾಡಿದಕರ್ಮಗಳಾವುವು ಎಂಬುದನ್ನು ಹೇಳಿ.

**ಮೈತ್ರೇಯ :** ವಿದುರನೇ ! ನೀನು ಮಾಡಿದ ಪ್ರಶ್ನೆ ಬಹುಪ್ರಶಸ್ತವಾಗಿದೆ. ನೀನು ಯಮನ ಅವತಾರದವನು. ಮಾಂಡವ್ಯ ಋಷಿಗಳಿಂದ ಶಾಪವನ್ನು ಹೊಂದಿ ವೇದವ್ಯಾಸರಿಂದ ವಿಚಿತ್ರವೀರ್ಯನ ಪತ್ನಿಯ ದಾಸಿಯಲ್ಲಿ ಹುಟ್ಟಿರುವೆ. ಇಂತಹ ನಿನಗೆ ಉಪದೇಶಿಸೆಂದು ಶ್ರೀಕೃಷ್ಣನು ಪರಂಧಾಮಕ್ಕೆ ಹೊರಡುವಾಗ ನನಗೆ ಅಪ್ಪಣೆ ಮಾಡಿರುವನು. ಆದ್ದರಿಂದ ಭಗವಂತನ ಲೀಲೆಗಳನ್ನು ಕ್ರಮಾದಿಂದ ಹೇಳುವೆನು.

### ಐದನೆಯ ಅಧ್ಯಾಯ ಮುಗಿದುದು.

ಶ್ರೀಹರಿಯು ಸರ್ವಜೀವರಿಗೂ ಅಧಿಪತಿ, ಸಮಾಧಿಕರಹಿತ, ಸ್ವತಂತ್ರ, ಪ್ರಳಯಕಾಲದಲ್ಲೂ ಇರತಕ್ಕವನು. ಆಗ ಜೀವರೆಲ್ಲರೂ ಇದ್ದರೂ ಅವರು ಅಶಕ್ತರಾದ ಪ್ರಯುಕ್ತ "ಅಸತ್" ಇಲ್ಲದಿದ್ದವರಂತೆ ತಿಳಿದುಕೊಂಡನು. ಅವನು **ಸುಪ್ತಶಕ್ತಿಯು.** ಇಲ್ಲಿನ ಶಕ್ತಿ ಎಂಬ ಪದಕ್ಕೆ ಚಿತ್ಪ್ರಕೃತಿ, ಜಡಪ್ರಕೃತಿ, ಸಾಮರ್ಥ್ಯ ಎಂದು ಮೂರು ಅರ್ಥಗಳು ಉಕ್ತವಾಗಿವೆ. ಅವು ಸುಪ್ತಿವುಳ್ಳವು ಅಂದರೆ ಶ್ರೀಹರಿಯ ಆಜ್ಞೆಗೆ ಒಳಪಟ್ಟು ಅವನ ಹೆಂಡತಿಯಾದ ಚಿತ್ಪ್ರಕೃತಿದೇವಿ ಲಕ್ಷ್ಮಿಯು ಸುಪ್ತಳು ಅಂದರೆ ಅವಳಿಗೆ ನಿದ್ರೆಯಿಲ್ಲವಾದರೂ ಪರಮಾತ್ಮನಲ್ಲಿ ಅತ್ಯಾಸಕ್ತಿ ಅಂದರೆ ಪ್ರಳಯಕಾಲದಲ್ಲಿ ಜಗತ್ತಿನ ವ್ಯಾಪಾರ ವಿಷಯದಲ್ಲಿ ಆಸಕ್ತಿರಹಿತಳು, ಜಡಪ್ರಕೃತಿಗೆ ಸುಪ್ತಿಯೆಂದರೆ ಕಾರ್ಯರೂಪದಿಂದ ಪರಿಣಾಮವಿಲ್ಲದಿರುವುದು, ಶಕ್ತಿ ಅಂದರೆ ಹರಿಯ ಸಾಮರ್ಥ್ಯ. ಹರಿಯ ಸುಪ್ತಿ ಎಂದರೆ ಕಣ್ಣುಗಳನ್ನು ಮುಚ್ಚಿಕೊಂಡಿರುವುದು. ಈ ಅರ್ಥದಿಂದ ಶ್ರೀಹರಿಯು ಸುಪ್ತಶಕ್ತಿಯು.

ಶ್ರೀಹರಿಯು ಜಡಪ್ರಕೃತಿಯನ್ನೂ, ಅದರ ಅಭಿಮಾನಿನಿ ಚೇತನಪ್ರಕೃತಿಯನ್ನೂ ಉಪಯೋಗಿಸಿಕೊಂಡು ಜಗತ್ತನ್ನು ಸೃಷ್ಟಿಸಿದನು. ಹರಿಯೆ ಪ್ರಧಾನನಾದ್ದರಿಂದ ಮಾಯನೆನಿಸುವನು. ಆತನ ಸಂಬಂಧವುಳ್ಳವಾದ್ದರಿಂದ ಚೇತನ-ಜಡಪ್ರಕೃತಿಗಳೆರಡೂ 'ಮಾಯಾ' ಎನಿಸುವುವು. ಇವೆರಡರಲ್ಲೂ ಹರಿಯು ವೀರ್ಯವನ್ನಿಟ್ಟನು. ಲಕ್ಷ್ಮಿಯಲ್ಲಿ ವೀರ್ಯವನ್ನಿಟ್ಟನೆಂದರೆ ಅವಳಲ್ಲಿದ್ದ ಜಗತ್ಸೃಷ್ಟಿಯ ಶಕ್ತಿಯನ್ನು ಉದ್ರೇಕಗೊಳಿಸಿದನು. ಜಡಪ್ರಕೃತಿಯಲ್ಲಿ ವೀರ್ಯವನ್ನಿಟ್ಟನೆಂದರೆ ಅದು ಮಹದಾದಿ ಕಾರ್ಯರೂಪವಾಗಿ ಪರಿಣಮಿಸುವ ಶಕ್ತಿಯನ್ನು ಉದ್ರೇಕಗೊಳಿಸಿದನು. ಹರಿಯು ಪುರುಷನೆಂದು ಕರೆಸಿಕೊಳ್ಳುವ

ವಾಸುದೇವ ರೂಪವನ್ನು ವ್ಯಕ್ತಗೊಳಿಸಿದನು. ಅವನಿಂದ ಮಹತ್ತತ್ತ್ವವೂ, ಬ್ರಹ್ಮ ದೇವರೂ ಹುಟ್ಟಿದರು. ಮಹತ್ತತ್ತ್ವದಿಂದ ಅಹಂಕಾರತತ್ತ್ವವೂ ಹುಟ್ಟಿತು. ಇದೇ ಶರೀರ, ಇಂದ್ರಿಯಗಳು, ಮನಸ್ಸುಗಳಿಗೆ ಮೂಲ ಕಾರಣ. ಇದರಿಂದಲೇ ಪಂಚಭೂತಗಳು ಹುಟ್ಟಿದುವು. ಬ್ರಹ್ಮದೇವರಿಂದ ಅಹಂಕಾರ ತತ್ತ್ವಾಭಿಮಾನಿ ಗಳಾದ ಗರುಡ, ಶೇಷ, ರುದ್ರರು ಹುಟ್ಟಿದರು. ಮುಂದೆಯೂ ಹೀಗೆಯೇ ಜಡದಿಂದ ಜಡವೂ, ಚೇತನರಿಂದ ತತ್ತ್ವಾಭಿಮಾನಿಗಳಾದ ಚೇತನರೂ ಸೃಷ್ಟರಾದರೆಂದು ತಿಳಿಯಬೇಕು. ಅಹಂಕಾರವು ವೈಕಾರಿಕ, ತೈಜಸ, ತಾಮಸವೆಂದು ಮೂರು ಬಗೆ. ವೈಕಾರಿಕಾಹಂಕಾರದಿಂದ ಮನಸ್ತತ್ತ್ವ, ಅದರ ಅಭಿಮಾನಿ ಇಂದ್ರಕಾಮರು ಹುಟ್ಟಿದರು. ಮತ್ತು ವೈಕಾರಿಕದೇವತೆಗಳೆನಿಸಿದ ಇಂದ್ರಿಯಾಭಿಮಾನಿಗಳು ಹುಟ್ಟಿದರು. ತೈಜಸಾಹಂಕಾರದಿಂದ ಶ್ರೋತ್ರಾದಿಜ್ಞಾನೇಂದ್ರಿಯಗಳೂ, ಕರ್ಮೇಂದ್ರಿಯಗಳೂ ಹುಟ್ಟಿದುವು ತಾಮಸಾಹಂಕಾರದಿಂದ ಸೂಕ್ಷ್ಮಭೂತಗಳೆನಿಸಿದ ಶಬ್ದಾದಿ ತನ್ಮಾತ್ರೆಗಳು ಹುಟ್ಟಿದುವು. ಶಬ್ದತನ್ಮಾತ್ರೆಯಿಂದ ಆಕಾಶವೂ, ಅದ ರಿಂದ ಸ್ಪರ್ಶತನ್ಮಾತ್ರೆಯೂ, ಅದರಿಂದ ವಾಯುವೂ, ಅದರಿಂದ ರೂಪತನ್ಮಾತ್ರೆಯೂ ಅದರಿಂದ ಅಗ್ನಿಯೂ, ಅದರಿಂದ ರಸತನ್ಮಾತ್ರೆಯೂ, ಅದರಿಂದ ಜಲವೂ, ಅದರಿಂದ ಗಂಧತನ್ಮಾತ್ರೆಯೂ, ಅದರಿಂದ ಪೃಥ್ವಿಯೂ ಹುಟ್ಟಿದುವು.

ಬ್ರಹ್ಮಾದಿಗಳು ಪರಸ್ಪರ ಸೇರಿಕೊಂಡು ಬ್ರಹ್ಮಾಂಡವನ್ನು ಸೃಷ್ಟಿಸಲಾರದೇ ಶ್ರೀಹರಿಯನ್ನು ಸ್ತುತಿಸುವರು:-

ಸಂಸಾರ ದುಃಖವನ್ನು ಕಳೆಯುವ ಪಾದಕಮಲವುಳ್ಳವನು ನೀನು ತಾಪತ್ರಯ ಪರಿಹಾರಕಪಾದನು. ಶ್ರವಣಾದಿಗಳಿಂದ ಲಭ್ಯವಾಗುವ ಪಾದ, ಭಕ್ತಾಭಯಪ್ರದ ಪಾದ, ದುರಭಿಮಾನಿಗಳಿಗೆ ದೊರೆಯದ ಪಾದನು. ಯೋಗಾಭ್ಯಾಸಿಗಳು ಕ್ಲೇಶಪಟ್ಟು ಸಾಧಿಸುವ ಪಾದನು. ಶ್ರವಣಾದಿ ಸುಖಸಾಧ್ಯವಾದ ನಿನ್ನ ಪಾದವನ್ನು ಭಜಿಸುವೆವು.

## ಉಗಾಭೋಗ

ಹರಿಪಾದ ಸೇವೆ ಧ್ಯಾನವ ಬಲ್ಲಣ್ಣ । ವರಪುಟವನಿಟ್ಟ ಚಿನ್ನವು ಮುಖನ ಬಣ್ಣ ।
ದುಃರುಚಿಯ ದುರ್ವಿಷಯಾಸಕ್ತನವ ಕಣ್ಣ । ಹರಿ ಗುರುಗಳಿಗಲ್ಲದೆ ಶರಣೆನ್ನ ।
ಪುರಂದರವಿಠಲನ ಪತಿತ ಪಾವನ್ನ । ಚರಣಾಬ್ಜರಸವಿಂಟಿ ಮೊಲೆಪಾಲ ಸುಣ್ಣ ।

**ದೇವತೆಗಳು :-** ಬ್ರಹ್ಮಾಂಡವನ್ನು ಸೃಷ್ಟಿಸಲು ಭಗವಂತನೇ ! ಅನುಕೂಲ ಮಾಡಿ ಕೊಡು. ಜೀವರಲ್ಲಿ ನಿಂತು ಪ್ರೇರಿಸಿ ಅವರು ಮಾಡಿದ ಕರ್ಮಫಲವನ್ನು ನಮ್ಮ ಮೂಲಕ ನಿನಗೆ ಅರ್ಪಿಸುವರು. ಹಾಗೆ ಅವರು ಅರ್ಪಿಸಿ ಉದ್ಧೃತರಾಗು

ವಂತೆ ನಾವು ಮಾಡುವ ಕರ್ಮವನ್ನು ನಿನಗೆ ತಪ್ಪದಂತೆ ಅರ್ಪಿಸುವೆವು. ನೀನೇ ನಮಗೂ, ನಮ್ಮ ಸಂತತಿಗೂ ಜನಕನಾದ್ದರಿಂದ ನಿನ್ನನ್ನೇ ಬೇಡುವೆವು. ಬ್ರಹ್ಮಾಂಡ ನಿರ್ಮಾಣಕ್ಕೆ ಬೇಕಾದ ಜ್ಞಾನವನ್ನು ನೀನೇ ಅನುಗ್ರಹಿಸಬೇಕು.

## ಆರನೆಯ ಅಧ್ಯಾಯ ಮುಗಿದುದು

ತತ್ತ್ವಾಭಿಮಾನಿಗಳು ಮಾಡಿದ ಸ್ತೋತ್ರವನ್ನು ಶ್ರೀಹರಿಯು ಕೇಳಿ, ತನ್ನ ಪತ್ನೀಸಹಿತನಾಗಿ ಮಹತ್ತತ್ತ್ವ ಮೊದಲಾದ ಇಪ್ಪತ್ತುಮೂರು ತತ್ತ್ವಗಳಲ್ಲಿ ಪ್ರವೇಶಿಸಿ ಅವುಗಳ ಶಕ್ತಿಯನ್ನು ವ್ಯಕ್ತಮಾಡಿದನು. ಅಂದರೆ ಕ್ರಿಯಾಶಕ್ತಿ ಅಥವಾ ಅದೃಷ್ಟ ವನ್ನು ಕಾರ್ಯದಲ್ಲಿ ತೊಡಗುವಂತೆ ಮಾಡಿದನು. ಆಗ ಬೇರೆ ಬೇರೆ ಇದ್ದ ತತ್ತ್ವಗಳನ್ನು ಅಂಶಗಳಿಂದ ಒಂದು ಗೂಡಿಸಿದನು. ಅದು ಬ್ರಹ್ಮನ ಶರೀರವಾಗಿರುವುದರಿಂದ **ಪುರುಷ**ನೆಂದು ಕರೆಸಿಕೊಳ್ಳುವ ಬ್ರಹ್ಮಾಂಡವನ್ನು ಸೃಷ್ಟಿಸಿತು. ಅದರೊಳಗೆ ಚೇತನಾಚೇತನ ಜಗತ್ತು ಹುಟ್ಟಿತು. ಶ್ರೀಹರಿಯು ಸರ್ವಜೀವರಿಂದ ಕೂಡಿ ಆ ಬ್ರಹ್ಮಾಂಡವನ್ನು ಪ್ರವೇಶಿಸಿದನು. ಇವನಿಗೆ ಪುರುಷನೆಂದು ಹೆಸರಾಯಿತು. ಇದು ಎರಡನೆಯ ಅವತಾರ. ಬ್ರಹ್ಮಾಂಡದೊಳಗೆ ಘನೋದಕವನ್ನು ಸೃಷ್ಟಿಸಿ ಅಲ್ಲಿ ದೇವ ಮಾನ ಸಾವಿರ ವರುಷಗಳ ಕಾಲ ಶೇಷ ಶಾಯಿಯಾಗಿ ಮಲಗಿದನು ಬಳಿಕ ಅವನೇ ಬ್ರಹ್ಮದೇವರ ವಿರಾಟ್ ಎನಿಸುವ ದೇಹವನ್ನು ಸೃಷ್ಟಿಸಿ, ಅದನ್ನು ಪ್ರೇರಿಸಲು ಅದರೊಳಗೆ ಪ್ರವೇಶಿಸಿದನು. ಇದು ಪುರುಷನಾಮಕ ಮೂರನೆಯ ಅವತಾರ. ವಿಶೇಷ ಪ್ರಕಾಶವುಳ್ಳ ಇವನನ್ನು ವಿರಾಟ್ ಎಂದು ಕರೆಯುವರು. ಮುಖ್ಯ ಚೇಷ್ಟಕ ನಾದ ಇವನಿಗೆ ಪ್ರಾಣನೆಂದೂ ಹೆಸರು. ಬ್ರಹ್ಮನೊಳಗಿರುವ ಶ್ರೀಹರಿಯು ಅಧ್ಯಾತ್ಮ ಅಧಿದೈವ, ಅಧಿಭೂತ ರೂಪಗಳಿಂದ ಕೂಡಿ ಮೂರು ಬಗೆಯವನೆನಿಸಿದನು. ಹತ್ತು ರೂಪಗಳುಳ್ಳವನಾದನು. ಬ್ರಹ್ಮದೇವರ ಹೃದಯದಲ್ಲಿದ್ದು ಏಕರೂಪೀ ಎನಿಸಿದನು. ದೇವತೆಗಳ ಅಭಿವೃದ್ಧಿಗಾಗಿ ಬ್ರಹ್ಮನ ಆ ವಿರಾಟ್ ದೇಹದಲ್ಲಿ ಆ ದೇವತೆಗಳು ಆಶ್ರಯಿಸಲು ಹರಿಯು ಸ್ಥಾನಗಳನ್ನು ಕಲ್ಪಿಸುತ್ತಾ ಬಂದನು. ಆ ಸ್ಥಾನಗಳು ಹೊರಹೊಮ್ಮಿದುವು. ಮೊದಲು ಮುಖವು ಹೊರಹೊಮ್ಮಿತು. ಅಗ್ನಿಯು ತನ್ನ ಅಂಶವಾದ ವಾಗಿಂದ್ರಿಯದೊಂದಿಗೆ ಮುಖವನ್ನು ಆಶ್ರಯಿಸಿದನು. ಅದರಿಂದ ಬ್ರಹ್ಮದೇಹಸ್ಥ ಹರಿಯು ಮಾತಾಡಿದನು.

ಹೊರಹೊಮ್ಮಿದ ಜಿಹ್ವೆಯ ಮೂಲವನ್ನು ವರುಣನು ತನ್ನ ಅಂಶವಾದ ಜಿಹ್ವೇಂದ್ರಿಯದೊಂದಿಗೆ ಪ್ರವೇಶಿಸಿದನು. ಇದರಿಂದ ರಸಗಳನ್ನು ತಿಳಿಯುತ್ತ ಬಂದನು.

ವ್ಯಕ್ತವಾದ ಮೂಗಿನ ಹೊಳ್ಳೆಗಳನ್ನು ಅಶ್ವಿನೀದೇವತೆಗಳು ಸ್ವಾಂಶ

ಘ್ರಾಣೇಂದ್ರಿಯದಿಂದ ಸಹಿತವಾಗಿ ಆಶ್ರಯಿಸಿದರು. ಇದರಿಂದ ಹರಿಯು ಗಂಧವನ್ನು ತಿಳಿದನು. ವ್ಯಕ್ತವಾದ ಕಣ್ಣುಗಳನ್ನು ಸೂರ್ಯನು ಸ್ವಾಂಶವಾದ ಚಕ್ಷುರಿಂದ್ರಿಯ ದೊಂದಿಗೆ ಆಶ್ರಯಿಸಿದನು. ಇದರಿಂದ ರೂಪವನ್ನು ತಿಳಿಯಲಾರಂಭಿಸಿದನು.

ಕೋಣಾಧಿಪತಿಯೂ, ಮುಖ್ಯಪ್ರಾಣನ ಪುತ್ರನಾದ ಪ್ರಾಣನು ಹೊರ ಹೊಮ್ಮಿದ ತ್ವಗಿಂದ್ರಿಯ ಸ್ಥಾನಗಳನ್ನು ತನ್ನಂಶವಾದ ಪ್ರಾಣದಿಂದ ಕೂಡಿ ಪ್ರವೇಶಿಸಿದನು. ಇದರಿಂದ ಸ್ಪರ್ಶಜ್ಞಾನವು ಬಂದಿತು.

ಕಿವಿಗಳು ಮೂಡಿದುವು. ಅಲ್ಲಿ ದಿಗ್ದೇವತೆಗಳು ತಮ್ಮ ಶ್ರೋತ್ರೇಂದ್ರಿಯಾಂಶ ಸಹಿತ ಆಶ್ರಯಿಸಿದರು. ಅದರಿಂದ ಶಬ್ದ ಜ್ಞಾನವಾಯಿತು. ಪಾರಿಜಾತಾದಿ ಓಷಧಿಯ ಅಭಿಮಾನಿ ದೇವತೆಗಳು ಸ್ವಾಂಶಗಳಾದ ರೋಮಗಳೊಂದಿಗೆ ಚರ್ಮವನ್ನು ಪ್ರವೇಶಿಸಿದರು. ಇದರಿಂದ ಶ್ರೀಹರಿಯು ನವೆಯನ್ನು ಹೊಂದಿದನು. ವ್ಯಕ್ತವಾದ ಗುಹ್ಯೇಂದ್ರಿಯದಲ್ಲಿ ಗುಹ್ಯೇಂದ್ರಿಯದೊಂದಿಗೆ ದಕ್ಷನು ಪ್ರವೇಶಿಸಿದನು. ಇದರಿಂದ ಸಂಭೋಗದಿಂದ ಉಂಟಾಗುವ ಸಂತೋಷವನ್ನು ಪಡೆದಂತಾಯಿತು. ವ್ಯಕ್ತವಾದ ಗುದ ಎಂಬ ಇಂದ್ರಿಯವನ್ನು ಲೋಕಪಾಲಕನಾದ ಮಿತ್ರನು ತನ್ನಪಾಯು ಇಂದ್ರಿಯಾಂಶದೊಡನೆ ಪ್ರವೇಶಿಸಿದನು. ಇದರಿಂದ ಮಲವಿಸರ್ಜನೆಗೆ ಮಾರ್ಗವಾಯಿತು. ವ್ಯಕ್ತಗಳಾದ ಕೈಗಳನ್ನು ಸ್ವರ್ಗದ ರಾಜನಾದ ಇಂದ್ರನು ಹಸ್ತೇಂದ್ರಿಯದೊಂದಿಗೆ ಪ್ರವೇಶಿಸಿದನು. ಇದರಿಂದ ಆ ದೇಹಾಂತರ್ಯಾಮಿ ಹರಿಯು ತೆಗೆದುಕೊಳ್ಳುವುದೇ ಮೊದಲಾದ ವ್ಯಾಪಾರವನ್ನು ಆರಂಭಿಸಿದನು. ಪಾದಗಳು ವ್ಯಕ್ತವಾದುವು. ಲೋಕಪಾಲಕವಾದ ವಿಷ್ಣುವು (ಜಯಂತನು) ತನ್ನ ಅಂಶವಾದ ಗಮನ ಸಾಧನ ಪಾದೇಂದ್ರಿಯದೊಂದಿಗೆ ಪ್ರವೇಶಿಸಿದನು. ಇದರಿಂದ ಪುರುಷನಾಮಕ ಶ್ರೀಹರಿಯು ಓಡಾಡಲು ಪ್ರಾರಂಭಿಸಿದನು. ಚಂದ್ರನು ಮನಸ್ಸಿನ ಅಂಶದೊಂದಿಗೆ ಹೃದಯವನ್ನು ಪ್ರವೇಶಿಸಿದನು. ಈ ಮನಸ್ಸಿನಿಂದಲೇ ಸಂಕಲ್ಪ, ವಿಕಲ್ಪಕ್ರಿಯೆ ಮಾಡಲು ಅನುಕೂಲವಾಯಿತು.

ಬ್ರಹ್ಮನಾಡಿಯಲ್ಲಿ ಅಹಂ ನಾಡಿ, ಸತ್ವನಾಡಿ ಎಂದು ಎರಡು ಅವಾಂತರ ಗೋಲಕಗಳಿರುವುವು. ಅಹಂನಾಡಿಯಲ್ಲಿರುವ ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ ಎಂಬ ನಾಲ್ಕು ಬಗೆಯಾಗಿದೆ. ವ್ಯಕ್ತವಾದ ಈ ಮನೋವಾಹಕ ನಾಡಿಯನ್ನು ಬೃಹಸ್ಪತಿಯು ಬುದ್ಧಿಯ ಅಂಶ ಸಹಿತವಾಗಿ ಪ್ರವೇಶಿಸಿದನು. ಇದರಿಂದ ಈ ಬುದ್ಧಿಯ ಮೂಲಕ ನಿಶ್ಚಯಜ್ಞಾನವನ್ನು ಹರಿಯಿಂದ ನಿಯಮಿತರಾದ ಬ್ರಹ್ಮದೇವರು ಪಡೆದರು. ಅಹಂಕಾರವೆಂಬ ನಾಡಿಯನ್ನು ರುದ್ರನು ಅಭಿಮಾನದೊಂದಿಗೆ ಪ್ರವೇಶಿಸಿದನು. ಇದರಿಂದ ಆ ದೇಹನಿಯಾಮಕನಾದ ಹರಿ ಮತ್ತು ಅವನಿಂದ ನಿಯಮಿತರಾದ ಬ್ರಹ್ಮದೇವರು 'ಇದು ನನ್ನ ಕರ್ತವ್ಯ' ಎಂಬ ಭಾವನೆಯನ್ನು ಹೊಂದಿದರು. ಸತ್ವ ಎಂಬ ನಾಡಿಯನ್ನು ಬ್ರಹ್ಮದೇವರು ಚಿತ್ತದ ಅಂಶದೊಂದಿಗೆ ಪ್ರವೇಶಿಸಿದರು. ಇದರಿಂದ ವಿಜ್ಞಾನವನ್ನು ಹೊಂದಿದರು.

ವಿರಾಟ್ ದೇಹದ ತಲೆಯಿಂದ ದ್ಯುಲೋಕವೂ, ನಾಭಿಯಿಂದ ಅಂತರಿಕ್ಷವೂ ಪಾದದಿಂದ ಭೂಮಿಯೂ ಹುಟ್ಟಿದುವು. ಈ ಲೋಕಗಳಲ್ಲಿ ಪ್ರಾಕೃತಗುಣಗಳ ಕಾರ್ಯವಾದ ಸುಖ, ಕರ್ಮ, ಪ್ರಮಾದಗಳು ತೋರುತ್ತಾ ಬಂದುವು. ಈ ಲೋಕಗಳಲ್ಲಿ ಸುರರೂ, ಅಸುರರೂ, ಮನುಷ್ಯರೂ, ರುದ್ರಗಣದವರು ಮೊದಲಾದ ಸಕಲ ಜೀವ ರಾಶಿಗಳು ವಾಸಿಸಿದುವು. ಸತ್ವಗುಣದಿಂದ ದೇವತೆಗಳು ಸ್ವರ್ಗವನ್ನೂ, ರಜೋಗುಣ ದಿಂದ ಮನುಷ್ಯರು ಮತ್ತು ಅವರ ಅನುಯಾಯಿಗಳೂ ಭೂಮಿಯನ್ನೂ, ತಮೋ ಗುಣದಿಂದ ಭೂತಾದಿ ಗಣಗಳು ಅಂತರಿಕ್ಷವನ್ನೂ ಆಶ್ರಯಿಸಿದುವು.

ಮುಖದಿಂದ ಬ್ರಾಹ್ಮಣವರ್ಣವು ತದಭಿಮಾನಿಯೂ, ಬಾಹುಗಳಿಂದ ಕ್ಷತ್ರಿ ಯವರ್ಣವೂ, ತೊಡೆಯಿಂದ ವೈಶ್ಯವರ್ಣವೂ, ಪಾದದಿಂದ ಶೂದ್ರ ವರ್ಣವೂ ಹುಟ್ಟಿದುವು. ಬ್ರಾಹ್ಮಣರು ಎಲ್ಲವರ್ಣದವರಿಗೂ ಗುರುಗಳೆನಿಸಿದರು. ಕ್ಷತ್ರಿಯರು ಪರಾಕ್ರಮದಿಂದ ಪ್ರಜೆಗಳನ್ನು ಶತ್ರುಗಳಿಂದ ಕಾಪಾಡುವರು. ವೈಶ್ಯರು ಜೀವನಾ ವಶ್ಯಕವಾದ ವ್ಯವಸಾಯ, ಪಶುಪಾಲನಾದಿ ಕರ್ಮಗಳಲ್ಲಾಸಕ್ತರು. ಶೂದ್ರರು ಸೇವಾಕರ್ಮವೆಸಗುವರು. ಬ್ರಾಹ್ಮಣ ವರ್ಣಾಭಿಮಾನಿ ಭೃಗು, ಕ್ಷತ್ರಿಯರಿಗೆ ಮನು, ವೈಶ್ಯರಿಗೆ ವಾಸ್ತು ಎಂಬ ದೇವತೆ, ಶೂದ್ರರಿಗೆ ಕೃತಿ ಎಂಬುವರು ಅಭಿಮಾನಿಗಳು.

ವಿದುರ! ಶ್ರೀಹರಿಯೇ ಸರ್ವದೇವತೆಗಳಿಗಿಂತ ಉತ್ತಮನು, ಮೂಲಕಾರಣನು, ಸರ್ವತ್ರ ವ್ಯಾಪ್ತನು. ಆದ್ದರಿಂದ ಅವನನ್ನು ದೈವ, ಕರ್ಮ, ಆತ್ಮನೆಂದು ಹೇಳು ವರು. ಮೂರು ಕಾಲಗಳಲ್ಲಿಯೂ ಬ್ರಹ್ಮಾಂಡವನ್ನು ಸೃಷ್ಟಿಸುವ ಸಮರ್ಥನು ಶ್ರೀಹರಿಯೇ. ಇವನ ಸಾಮರ್ಥ್ಯವನ್ನು ಪೂರ್ಣವಾಗಿ ಹೇಳಿ ಮುಗಿಸಲು ಸಾಧ್ಯವೇ ಇಲ್ಲ. ಹಾಗಿದ್ದರೂ ನಾನು ಕೇಳಿ ತಿಳಿದ ಹಾಗೆಯೇ ಹೇಳುವೆನು. ಹರಿಕೀರ್ತಿ ಯನ್ನು ಹೇಳಿದವನ ವಾಕ್ ಶುದ್ಧಿಯಾಗುವುದು. ಅವನ ಕಥಾಮೃತ ಕೇಳುವ ಕಿವಿಗಳೇ ಸಫಲ. ಬ್ರಹ್ಮದೇವರು ಸಾವಿರ ವರ್ಷಗಳ ಮೇಲೆ ಅವನ ಮಹಿಮೆಯನ್ನು ಅರಿತರು. ಸಂಪೂರ್ಣವಾಗಿ ಯಾವ ಜ್ಞಾನಿಯೂ ತಿಳಿಯಲಾರ. ಸರ್ವರಿಗೂ ಗುರುಗಳಾದ ಬ್ರಹ್ಮದೇವರೇ ಹರಿಯನ್ನು ಪೂರ್ಣವಾಗಿ ತಿಳಿಯದಿರುವಾಗ ಉಳಿದವರ ಪಾಡೇನು ? ಇಂದಿರೆಯೂ ನಿರಂತರ ಹರಿಗುಣಗಳನ್ನು ಎಣಿಸುತ್ತಿದ್ದರೂ ಕೊನೆ ಗಾಣದೆ ಚಿರಪರಿಚಿತ ಗುಣಗಳನ್ನೇ ಹೇಳಿಕೊಳ್ಳುತ್ತಾ ಇರುವಳೆಂದ ಮೇಲೆ ಗರುಡ, ಶೇಷ, ರುದ್ರ ಮತ್ತು ಇತರ ಇಂದ್ರಾದಿ ದೇವತೆಗಳಿಗೆ ಪೂರ್ಣವಾಗಿ ಹೇಳಲು ನಿತರಾಂ ಸಾಧ್ಯವೇ ಇಲ್ಲ. ಅಂತಹ ನಿರವಧಿಕಪೂರ್ಣಮಹಿಮನಾದ ಶ್ರೀಹರಿಗೆ ನಮಸ್ಕಾರ !

**ಏಳನೆಯ ಅಧ್ಯಾಯ ಮುಗಿದುದು**

**ವಿದುರ :–** ಬ್ರಹ್ಮಜ್ಞಾನಿಗಳೇ ! ಶ್ರೀಹರಿಯು ಜ್ಞಾನಸ್ವರೂಪಿ, ತ್ರಿಗುಣ ರಹಿತ, ನಿರ್ವಿಕಾರ.

1) ನಿರ್ವಿಕಾರನಿಗೆ ಜಗತ್ಸೃಷ್ಟಿ ಮೊದಲಾದ ಕರ್ಮವು ಹೇಗೆ ಕೂಡುತ್ತದೆ ?
2) ಹರಿಯು ಯಾವ ಯಾವ ಪ್ರಜೇಶ್ವರರನ್ನು ಸೃಷ್ಟಿಸಿದನು ?
3) ನವವಿಧಸೃಷ್ಟಿ, ಮನ್ವಂತರ, ಮನುಗಳು, ಅವರ ವಂಶಾವಳಿಗಳನ್ನು ವಿವರಿಸಿರಿ.
4) ಭೂಲೋಕದ ಮೇಲೂ, ಕೆಳಗೂ ಇರುವ ಲೋಕಗಳಾವುವು ? ಸಕಲ ಲೋಕಗಳ ಪರಿಮಿತಿ ಮತ್ತು ಅವುಗಳ ವ್ಯವಸ್ಥೆಗಳನ್ನು ತಿಳಿಸಿರಿ.
5) ಪಶು ಮೊದಲಾದ ಪ್ರಾಣಿಗಳ ಸೃಷ್ಟಿ ವಿವರಗಳನ್ನು ತಿಳಿಸಿ.
6) ಎಲ್ಲಕ್ಕಿಂತ ಹೆಚ್ಚಾಗಿ ಶ್ರೀನಿವಾಸನ ಉತ್ಕೃಷ್ಟ ಪರಾಕ್ರಮವನ್ನು ವಿವರಿಸಿ.
7) ಮೋಕ್ಷಸಾಧನ ಶಾಸ್ತ್ರ ಯಾವುದು ? ಅದಕ್ಕೆ ವಿರುದ್ಧವಾದ ದುಷ್ಟ ಶಾಸ್ತ್ರಗಳು ಯಾವುವು ? ಬ್ರಾಹ್ಮಣಾದಿ ಕನ್ಯೆಯರನ್ನು ಕ್ಷತ್ರಿಯಾದಿಗಳು ಮದುವೆಯಾದ ಸಂಗತಿಯನ್ನು ತಿಳಿಸಿ.
8) ಸಾತ್ವಿಕ, ರಾಜಸ, ತಾಮಸ ಕರ್ಮಗಳಿಂದ ಜೀವರಿಗೆ ಆಗುವ ಗತಿಗಳು ಯಾವುವು ?
9) ನಾಲ್ಕು ಪುರುಷಾರ್ಥಗಳಿಗೆ ಪರಸ್ಪರ ವಿರೋಧವಿಲ್ಲದ ಸಾಧನಗಳಾವುವು?
10) ವಾಣಿಜ್ಯಾದಿ ವೃತ್ತಿ, ರಾಜನೀತಿ, ಶ್ರುತ್ಯುಕ್ತ ಕರ್ಮ, ಶ್ರಾದ್ಧವಿಧಾನ, ಪಿತೃದೇವತೆಗಳ ಸೃಷ್ಟಿ, ಗ್ರಹಾದಿಗಳ ಸ್ಥಿತಿ, ಇಷ್ಟಾಪೂರ್ತಗಳ ಫಲ, ಪ್ರವಾಸದಲ್ಲಿ ಪುರುಷನ ಧರ್ಮ ಮತ್ತು ಆಪದ್ಧರ್ಮಗಳನ್ನು ವಿವರಿಸಿ.
11) ಜನಾರ್ದನನು ಏತರಿಂದ ಪ್ರೀತನಾಗುವನು ?
12) ತತ್ತ್ವಗಳ ಪ್ರಳಯ ಎಷ್ಟು ವಿಧಗಳಾಗಿರುವುವು ? ಪ್ರಳಯದಲ್ಲಿ ಶ್ರೀ ಹರಿಯನ್ನು ಸೇವಿಸುತ್ತಿದ್ದವರು ಯಾರು ? ಅವನಲ್ಲಿ ಪ್ರವೇಶಿಸಿದವ ರಾರು ? ಹರಿಯು ವ್ಯಕ್ತರೂಪದಿಂದಿರುವುದನ್ನೂ, ಅಸ್ವತಂತ್ರ ತತ್ತ್ವಗಳ ಸ್ವರೂಪವನ್ನೂ ತಿಳಿಸಿ.
13) ಜ್ಞಾನ ಮತ್ತು ಅದರ ಸಾಧನವನ್ನು ವಿವರಿಸಿ

ಮೋಕ್ಷಸಾಧನ ಜ್ಞಾನಕ್ಕೆ ಅಧ್ಯಯನಾದಿಗಳು ಸಾಟಿಯಲ್ಲವಾದ್ದರಿಂದ, ನಾನು ಈ ಪ್ರಶ್ನೆಗಳನ್ನು ಮಾಡಿರುವೆನು.

ಶುಕ . ಮೈತ್ರೇಯರಿಗೆ ಆನಂದವಾಯಿತು. ಹರಿಕಥೆಯಲ್ಲಿ ತಮ್ಮನ್ನು ತೊಡಗಿಸುತ್ತಿರುವನೆಂದು ಹೊಂಪುಳಿ ಹೋದರು. ನಗುತ್ತ ಉತ್ತರಿಸಲಾರಂಭಿಸಿದರು.

**ಎಂಟನೆಯ ಅಧ್ಯಾಯ ಮುಗಿಯಿತು**

**ಮೈತ್ರೇಯರು :** ವಿದುರನೇ ! ಹರಿಯು ಸರ್ವೋತ್ತಮನೆಂದು ತಿಳಿದಿರುವ ನೀನು ಹುಟ್ಟಿದ ಈ ಪೂರುವಂಶವು ಸೇವನೀಯವು. ಶ್ರೀಕೃಷ್ಣನು ನಿನಗುಪದೇಶಿಸು ವಂತೆ ಆಜ್ಞೆಮಾಡಿರುವನು. ಅದಕ್ಕೆ ತಕ್ಕಂತೆ ಉಪದೇಶಿಸೆಂದು ನೀನೂ ಪ್ರಾರ್ಥಿಸು ತ್ತಿರುವೆ. ಆದ್ದರಿಂದ ನಿನಗೆ ನಿಶ್ಚಯವಾಗಿ ಭಾಗವತವನ್ನೇ ಹೇಳಿಬಿಡುವೆನು. ಇದು ಮಹಾ ದುಃಖ ಪರಿಹಾರಕವು. ಇದನ್ನು ಶೇಷದೇವರು ಸನತ್ಕುಮಾರಾದಿ ಜ್ಞಾನಿ ಗಳಿಗೆ ಉಪದೇಶಿಸಿದ್ದಾರೆ. ಆದ್ದರಿಂದ ಅತ್ಯಂತ ಪ್ರಮಾಣವಿದು. ಹಿಂದೆ ಸನತ್ಕುಮಾರಾದಿ ಜ್ಞಾನಿಗಳು ಹರಿಯ ತತ್ತ್ವವನ್ನು ತಿಳಿಯಬಯಸಿ ಪಾತಾಳಕ್ಕೆ ಬಂದರು. ಅಲ್ಲಿ ಪರಮ ವೈಷ್ಣವರಾಗಿ ಸ್ವತಂತ್ರನೂ, ಸರ್ವಾಧಾರನೂ, ಆನಂದ ಮಯನೂ ಆದ ವಾಸುದೇವನನ್ನು ಉಪಾಸಿಸುತ್ತಿದ್ದ, ನಾಗಕನ್ಯೆಯರಿಂದ ಸೇವ್ಯ ನಾದ ಶೇಷನು ಪ್ರಶ್ನಿಸಿದ ಸನತ್ಕುಮಾರಾದಿಗಳಿಗೆ ಈ ಭಾಗವತವನ್ನು ಹೇಳಿದನು. ಸನತ್ಕುಮಾರರಿಂದ ಸಾಂಖ್ಯಾಯನರೂ, ಅವರಿಂದ ಪರಾಶರರೂ, ಬೃಹಸ್ಪತಿಗಳೂ ಶ್ರವಣ ಮಾಡಿದರು. ನಮ್ಮ ಗುರುಗಳಾದ ಪರಾಶರರಿಂದ ಭಾಗವತವನ್ನು ನಾನು ಕೇಳಿದ ಹಾಗೆಯೇ ನಿನಗೆ ಹೇಳುವೆನು.

## ಪದ್ಮಕಲ್ಪದ ಕಥೆ

ಶ್ರೀಹರಿಯು ವಿರಾಟಕಲ್ಪದ ಪ್ರಳಯೋದಕದಲ್ಲಿ ಮುಕ್ತ ಶೇಷಶಾಯಿಯಾಗಿ ದಿವ್ಯ ಸಾವಿರ ವರ್ಷಗಳು ಮಲಗಿದ್ದನು. ಬಳಿಕ ಸೃಷ್ಟಿಸಲಿಚ್ಛಿಸಿದನು. ಅವನ ನಾಭಿಯಿಂದ ಕಮಲದ ಮೊಗ್ಗು ಹೊರಹೊಮ್ಮಿತು. ಪದ್ಮನಾಭನ ಉದರದೊಳಗಿದ್ದ ಗರ್ಭೋದಕವು ವಾಯುವಿನಿಂದ ಒಣಗಿ ನಿಬಿಡವಾದ ಜಲವು ಈ ಪದ್ಮಾಕಾರವಾಗಿ ಹುಟ್ಟಿತು. 14 ಲೋಕಗಳೂ ಉಂಟಾಗುವಂತೆ ಅದು ಬೆಳೆಯಿತು. ಅದರಿಂದ ಬ್ರಹ್ಮದೇವರು ಹುಟ್ಟಿದರು. ಅವರು ನಾಲ್ಕು ದಿಕ್ಕುಗಳನ್ನೂ ನೋಡಿದಾಗ ನಾಲ್ಕು ಮುಖಗಳಾದುವು. ಪ್ರಳಯವಾಯುವು ಬೀಸಿ ಕಲ್ಲೋದಕದ ತೆರೆಗಳಿಂದ ಪದ್ಮವು ಅಲ್ಲಾಡಿತು. ಬ್ರಹ್ಮದೇವರು ತಮಗೂ, ಪದ್ಮಕ್ಕೂ ಒಬ್ಬ ಕರ್ತನಿರಬೇಕೆಂದು ನಿಶ್ಚಯಿಸಿ ನಾಳದೊಳಗಿಳಿದು ಜಲದಲ್ಲಿ ಹುಡುಕಿ, ಕಾಣದೆ ಮೊದಲಿದ್ದ ಸ್ಥಳಕ್ಕೆ ಬಂದು ಅಲ್ಲಿಯೇ ಕುಳಿತು ತಪಸ್ಸನ್ನು ಮಾಡಿದರು. ಆ ಕಮಲದ ಕರ್ಣಿಕೆಯೇ ಅವರಿಗೆ ಅಜಿನದ ಆಸನವಾಯಿತು. ಅವರು ನೂರುವರ್ಷ ಹುಡುಕಿದರೂ ಕಾಣದಾದ ಹರಿಯು ಅವರ ಹೃದಯದೊಳಗೆ ಶೇಷಶಾಯಿಯೂ, ಪೀತಾಂಬರಧಾರಿಯೂ, ವಿಚಿತ್ರ ದಿವ್ಯಾಭರಣಗಳುಳ್ಳವನಾಗಿಯೂ, ಕೌಸ್ತುಭ ವನಮಾಲಾದಿಗಳಿಂದ ಕೂಡಿದವ ನಾಗಿಯೂ ದರ್ಶನ ಕೊಟ್ಟನು. ಅವನ ಸಮೀಪದಲ್ಲಿಯೇ ಇರುವ ಸೂರ್ಯ, ಚಂದ್ರ, ಅಗ್ನಿ, ಪ್ರವಹವಾಯು ಮೊದಲಾದ ಮುಕ್ತ ದೇವತೆಗಳಿಂದ ಸಹಿತನಾಗಿರುವ ಶ್ರೀವಿಷ್ಣುವನ್ನು ಚತುರ್ಮುಖ ಬ್ರಹ್ಮದೇವರು ನೋಡಿದರು.

ರಜೋಗುಣದ ಕಾರ್ಯವಾದ ಸೃಷ್ಟಿಯಲ್ಲಿ ತೊಡಗಿದ ಬ್ರಹ್ಮದೇವರು ಜೀವರಿಗೆ ಅವರವರ ಕರ್ಮಾನುಸಾರವಾಗಿ ದೇಹವನ್ನು ಕೊಡಲು ಇಚ್ಛಿಸಿದವರಾಗಿ, ಅದಕ್ಕೆ ಬೇಕಾದ ಕೆಲವೇ ಸಾಧನ ಪದಾರ್ಥಗಳನ್ನು ಕಂಡು, ಶ್ರೀಹರಿಯ ಅನುಗ್ರಹವನ್ನು ಪಡೆಯುವುದಕ್ಕಾಗಿ ಅವನನ್ನು ಸ್ತುತಿಸಲಾರಂಭಿಸಿದರು.

## ಒಂಭತ್ತನೆಯ ಅಧ್ಯಾಯ ಮುಗಿದುದು

ಬ್ರಹ್ಮ : ಶ್ರೀಹರೇ ! ಬಹುಕಾಲದ ತಪಸ್ಸಿನ ಫಲವಾಗಿ ನಿನ್ನನ್ನು ಕಂಡೆ. ಅಂದ ಬಳಿಕ ಜೀವರು ನಿನ್ನನ್ನು ತಿಳಿಯಲಾಗುವುದೇ ಇಲ್ಲ ಎಂಬ ಮಾತು ಸರಿಯಲ್ಲ. ಅವರು ಕಾಣದಿರಬೇಕಾದರೆ ಅವರ ಪಾಪವೇ ಕಾರಣವು. ಯಾರಿಗೆ "ಹರಿಯೇ ಶ್ರೇಷ್ಠನು, ನಾನವನದಾಸನು" ಎಂಬ ಜ್ಞಾನವಿಲ್ಲವೋ ಅವರಿಗೆ ನೀನು ಕಾಣಿಸುವುದೇ ಇಲ್ಲ. ನೀನೇ ಪರಬ್ರಹ್ಮ. ನಿನ್ನಿಂದ ಇತರರೆಲ್ಲರೂ ಭಿನ್ನರು, ಅವರೆಲ್ಲ ಅಸ್ವತಂತ್ರರು ಮತ್ತು ದೋಷವುಳ್ಳವರು. ಮಹದಾದಿ ತತ್ತ್ವಗಳಲ್ಲಿರುವ ನಿನ್ನ ರೂಪಗಳಿಗೆ ಸ್ಥಾನ ಭೇದ ನಿಮಿತ್ತ ಭೇದವಿಲ್ಲವೇ ಇಲ್ಲ. ನೀನಿರುವ ಸ್ಥಳದಲ್ಲಿನ ದೋಷದ ಲೇಪ ನಿನಗಿಲ್ಲ. ನೀನೊಬ್ಬನೇ ನಿರ್ದೋಷಿ ಮತ್ತು ನಿತ್ಯಾಪರೋಕ್ಷಿ. ಅಜ್ಞಾನರಹಿತ. ಈ ರೂಪವೇ ಮತ್ಸ್ಯಾದಿ ಅನಂತರೂಪಗಳಿಗೆ ಮೂಲ. ನಿನ್ನ ನಾಭಿಕಮಲದಲ್ಲಿ ನಾನು ಹುಟ್ಟಿದೆ. ನಿನಗೆ ಸ್ವರೂಪ ಭಿನ್ನ ದೇಹವಿಲ್ಲ, ಷಡ್ವಿಕಾರರಹಿತನು. ಜಗತ್ಸೃಷ್ಟಿ ಪಾಲನ ಸಂಹಾರ ಕರ್ತನು. ವಿಷಯಾಸಕ್ತರ ಪೂಜೆ ಒಲ್ಲದವನು. ಭಕ್ತಿ ಪಾಶಕ್ಕೆ ಕಟ್ಟು ಬಿದ್ದು ಭಕ್ತರ ಹೃದಯದಿಂದ ಕದಲದೇ ಇರತಕ್ಕವನು. ಅಂತಹ ಸುಲಭನಾದ ನಿನ್ನನ್ನು ಆರಾಧಿಸಿ ಒಲಿಸದೆ ಕೆಡುವರಲ್ಲ ಎಂದು ವಿಷಾದವುಂಟಾಗಿದೆ. ಭಕ್ತನು ಮಾಡುವ ಪ್ರತಿಯೊಂದು ಕರ್ಮದಲ್ಲಿಯೂ ನೀನೇ ನಿಂತು ಮಾಡಿಸುವೆಯೆಂದು ಅನುಸಂಧಾನ ಮಾಡಿದ ಕೂಡಲೇ ಆ ಜೀವನ ಸಂಸಾರ ನಾಶವಾಗುವುದು. ನಿನ್ನ ಸೇವೆಯಲ್ಲಿ ವಿಮುಖರಾದವರು ಸಂಸಾರದಲ್ಲಿ ತೊಳಲುವರು. ಧ್ಯಾನಿಸುವವರಿಗೆ ತಕ್ಕಂತೆ ನೀನು ರೂಪವನ್ನು ತೋರಿಸುವೆ. ಫಲಾಪೇಕ್ಷೆಯಿಲ್ಲದೆ ಭಗವಂತನಾದ ನಿನ್ನನ್ನು ಆರಾಧಿಸಿದರೇ ಮುಕ್ತಿಯಾಗುವುದು. ಅಷ್ಟೇ ಅಲ್ಲ; ತ್ಯಾಗವನ್ನೂ ಮಾಡಬೇಕು. ನಿನ್ನನ್ನು ಮೋಹರಹಿತನೆಂದೇ ಉಪಾಸಿಸಬೇಕು. ಮರಣ ಕಾಲದಲ್ಲಿ ನಿನ್ನ ನಾಮವನ್ನು ಉಚ್ಚರಿಸುವವರೇ ಮುಕ್ತರಾಗುವರೆಂದಮೇಲೆ ನಿನ್ನನ್ನು ಯಾವಾಗಲೂ ಧ್ಯಾನಿಸುವವರು ಮುಕ್ತರಾಗುವರು ಎಂದು ಹೇಳಬೇಕೇನು? ನೀನು ಬ್ರಹ್ಮನಾದ ನನ್ನಲ್ಲಿದ್ದು ಸೃಷ್ಟಿಯನ್ನು ಮಾಡಿ, ಶಿವನಲ್ಲಿದ್ದು ಸಂಹಾರ ಮಾಡಿ, ಸಾಕ್ಷಾತ್ತಾಗಿ ರಕ್ಷಿಸುವೆ. ನಿಷಿದ್ಧ ಕರ್ಮಾಚರಣೆ ಮಾಡುವವರ ಆಯುಷ್ಯವನ್ನು ವ್ಯರ್ಥ ಮಾಡುವೆ.

ಶ್ರೀಹರಿಯಾದ ನೀನು ನಿತ್ಯಭೂತವಾದ ಜ್ಞಾನದೃಷ್ಟಿಯಿಂದ ನಿತ್ಯದಲ್ಲಿಯೂ ಲವ ಕಾಲವನ್ನೂ, ಲವಕಾಲದಲ್ಲಿರುವ ವಸ್ತುವನ್ನೂ ನೋಡುತ್ತಿರುವೆಯಾದ್ದರಿಂದ ನಿನಗೆ **ಅನಿಮಿಷ** ಎಂದು ಹೆಸರು. ಲವಾದಿಕಾಲವೂ ನಿನ್ನಿಂದ ನೋಡಲ್ಪಡುವುದರಿಂದ ಅದೂ ಅನಿಮಿಷವೆನಿಸುವುದು. ಇಂತಹ ಕಾಲಾಂತರ್ಯಾಮಿಯಾದ ನಿನಗೆ ನಮಸ್ಕಾರ! ನಾನು ಲೋಕಾಧಿಪತಿ. ಹಾಗಿದ್ದರೂ ನಾನು ನಿನ್ನಿಂದ ಮರಣ ಬರುವುದೆಂದು ಭಯ ಪಡುತ್ತಿರುವೆನು. ನೀನು ಅವತಾರಗಳನ್ನು ಮಾಡುವೆಯೇ ಹೊರತು ನಿನಗೆ ಜನನ ಮರಣಗಳಿಲ್ಲ. ನಿನ್ನ ನಿದ್ರೆಯೂ ವಿಲಕ್ಷಣ. ಯೋಗ ನಿದ್ರೆಯ ಕೊನೆಯಲ್ಲಿ ಕಣ್ಣು ಗಳನ್ನು ತೆರೆಯುವ ನಿನಗೆ ನಮಸ್ಕಾರ !

1) ಸೃಷ್ಟಿಯ ಜ್ಞಾನವನ್ನು ಕೊಡು. 2) ಅಂಗಭೂತನಾದ ನನಗೆ ನಿನ್ನ ಜ್ಞಾನವು ಲೋಪವಾಗದಿರಲಿ. 3) ಪಾಪಿಗಳನ್ನೂ ಸೃಷ್ಟಿಬೇಕಾದ್ದರಿಂದ ಅದ ರಿಂದ ಬರುವ ಪಾಪವು ನಾಶವಾಗಲಿ, 4) ವೇದ ವ್ಯಾಖ್ಯಾನಗಳು ಲೋಪವಾಗ ದಿರಲಿ. 5) ನನ್ನ ಸೃಷ್ಟಿಕಾರ್ಯವು ಸುಗಮವಾಗಿ ನಡೆಯುವಂತೆ ಅನುಗ್ರಹಿಸು. 6) ಶೇಷಶಯನದಿಂದೆದ್ದು ಮಂದಸ್ಮಿತ ಬೀರುತ್ತ ಕಣ್ತೆರೆದು ನನ್ನನ್ನು ನೋಡುತ್ತ ಮನ ಮೋಹಕವಾದ ನಿನ್ನ ಮಾತುಗಳಿಂದ ನನಗೆ ಅಭಯವನ್ನು ಕೊಡು.

**ಪದ್ಮನಾಭ :** ವಿಷಾದ ಬೇಡ. ನೀನು ಮಾಡಿದ ಸರ್ವವ್ಯಾಪಾರಗಳಿಗೂ ನಾನೇ ಪ್ರೇರಕನು. ನೀನು ಮಾಡಿದ ಈ ಸ್ತೋತ್ರವನ್ನು ಪಠಿಸುವವರ ವಿಷಯ ದಲ್ಲಿಯೂ ನಾನು ಪ್ರೀತನಾಗುವೆನು. ನನ್ನ ಪ್ರೀತಿಗಾಗಿಯೇ ಕರ್ಮ ಮತ್ತು ಮೋಕ್ಷಾ ಪೇಕ್ಷೆಯು ವಿಹಿತ. ಭಕ್ತಿಯೇ ಮುಖ್ಯ ಸಾಧನೆ. ಭೂರಾದಿ ಲೋಕಗಳನ್ನು ಮೊದಲಿ ನಂತೆಯೇ ಸೃಷ್ಟಿ ಮಾಡು.

**ಮೈತ್ರೇಯ :** ಪದ್ಮನಾಭನು ಜಗತ್ತನ್ನು ಸೃಷ್ಟಿಸಕ್ಕ ಚತುರ್ಮುಖನಿಗೆ ತನ್ನ ರೂಪದಿಂದ ಸೃಜ್ಯವಾದ ಜಗತ್ತನ್ನು ಪ್ರಕಾಶಪಡಿಸಿ ಮರೆಯಾದನು.

### ಹತ್ತನೆಯ ಅಧ್ಯಾಯ ಮುಗಿದುದು

**ಮೈತ್ರೇಯ :–** ಹರಿಯ ಉಪದೇಶದಂತೆ ಬ್ರಹ್ಮದೇವರು ದೇವಮಾನ ನೂರು ವರುಷ ತಪಸ್ಸು ಮಾಡಿದರು. ಅವರು ಕುಳಿತಿದ್ದ ಪದ್ಮವು ಕಂಪಿಸಿತು. ಅಂಡ ದೊಳಗಿನ ನೀರಿನಿಂದ ಕೂಡಿದ ವಾಯುವನ್ನು ಪಾನಮಾಡಿ ಅದೇ ಪದ್ಮವನ್ನು ಭೂಮಿ, ಅಂತರಿಕ್ಷ, ಸ್ವರ್ಗ ಎಂದು ಮೂರು ಪ್ರಕಾರ ಮಾಡಿ ಪುನಃ ಹದಿನಾಲ್ಕು ಲೋಕಗಳನ್ನು ಮಾಡಿದರು.

**ವಿದುರ :-** ಹರಿಯ ಕಾಲ ಎಂಬ ಸ್ವರೂಪವನ್ನು ಸರಿಯಾಗಿ ತಿಳಿಸಿರಿ.

**ಮೈತ್ರೇಯ :-** ಶ್ರೀಹರಿಯು ಚತುರ್ಮುಖನನ್ನು ಸೃಷ್ಟಿಸಿ ತಾನೂ ಚತುರ್ಮುಖನಂತೆ ರೂಪವನ್ನು ತೆಗೆದುಕೊಂಡು ಸೃಷ್ಟಿಗಾಗಿ ರಜೋಗುಣವನ್ನೂ, ಸಾಕ್ಷಾತ್ ವಿಷ್ಣುರೂಪದಿಂದ, ಜಗತ್ತಿನ ರಕ್ಷಣೆಗಾಗಿ ಸತ್ವಗುಣವನ್ನೂ, ಈಶ್ವರನೆಂಬ ಹೆಸರುಳ್ಳ ಶ್ರೀಹರಿಯು ಲಯಕಾರ್ಯವನ್ನು ಮಾಡುವ **ಕಾಲ** ಎಂಬ ರೂಪದಿಂದ ಪಂಚಮುಖಗಳುಳ್ಳ ರುದ್ರನನ್ನು ಸೃಷ್ಟಿಸಿ, ತಾನೂ ಅವನಂತೆ ಪಂಚಮುಖವುಳ್ಳ ರೂಪವನ್ನು ಸ್ವೀಕರಿಸಿ ಆ ಶಿವನೊಳಗೆ ಪ್ರವೇಶಿಸಿ ಜಗತ್ತಿನ ಸಂಹಾರಕ್ಕಾಗಿ ತಮೋಗುಣವನ್ನು ತೆಗೆದುಕೊಳ್ಳುತ್ತಾನೆ.

ಜಗತ್ತಿನ ಪ್ರಾಕೃತ, ವೈಕೃತ ಸೃಷ್ಟಿಗಳು ಒಂಭತ್ತು ಬಗೆ. ೧) ಮಹತ್ತತ್ತ್ವ ಮತ್ತು ಬ್ರಹ್ಮದೇಹ ಇವೆರಡಕ್ಕೂ ಹರಿಯಿಂದ ಆದ ಸೃಷ್ಟಿಯೇ ಮೊದಲನೆಯ ಸೃಷ್ಟಿ. ೨) ಅಹಂಕಾರಸೃಷ್ಟಿ :- ಪಂಚಭೂತಾಭಿಮಾನಿಗಳ ಮತ್ತು ಇಂದ್ರಿಯಾಭಿಮಾನಿಗಳ ಸೃಷ್ಟಿ. ೩) ಆಕಾಶ, ವಾಯು, ತೇಜಸ್ಸು, ಅಪ್, ಪೃಥಿವಿ ಎಂಬ ಭೂತಗಳ ಸೃಷ್ಟಿ. ೪) ಇಂದ್ರಿಯಗಳ ಸೃಷ್ಟಿ. ೫) ವೈಕಾರಿಕಾಹಂಕಾರದಿಂದ ವೈಕಾರಿಕ ಹೆಸರಿನ ಇಂದ್ರಿಯಾಭಿಮಾನಿಗಳ ದೇಹ ಸೃಷ್ಟಿ ಮತ್ತು ಮನಸ್ತತ್ತ್ವಸೃಷ್ಟಿ. ೬) ಅವಿದ್ಯಾ ಸೃಷ್ಟಿ. ಇವು ಪ್ರಾಕೃತ ಸೃಷ್ಟಿ ಎನಿಸುವುವು ಮುಂದೆ ಬ್ರಹ್ಮಾಂಡದೊಳಗಾದ ಸೃಷ್ಟಿ ವೈಕೃತ ಸೃಷ್ಟಿ ಯಾವುದೆಂದರೆ – ೭) ಸ್ಥಾವರ ಸೃಷ್ಟಿ ೮) ತಿರ್ಯಕ್ ಸೃಷ್ಟಿ ೯) ಮನುಷ್ಯರು, ಅಧೋಗತಿಗೆ ಹೋಗುವವರಾದ್ದರಿಂದ ಅರ್ವಾಕ್‌ಸ್ರೋತಸ್ಸೆಂಬ ಅಸುರಾದಿಗಳ ಸೃಷ್ಟಿ. ೧೦) ಇಂದ್ರಿಯಾಭಿಮಾನಿಗಳಾದ ದೇವತೆಗಳು ಬ್ರಹ್ಮಾಂಡದ ಹೊರಗೂ ಒಳಗೂ ಹುಟ್ಟಿರುವುದರಿಂದ ಪ್ರಾಕೃತ ಮತ್ತು ವೈಕೃತವೆಂಬ ಉಭಯ ರೂಪದಿಂದ ಸೃಷ್ಟಿಯು ಹತ್ತನೆಯದು.

ದೇವಜಾತಿಯ ಸೃಷ್ಟಿಯಲ್ಲಿ ವಿಬುಧ ಮೊದಲಾದ ಎಂಟು ಬಗೆಯ ಸೃಷ್ಟಿ :- ೧) ಇಂದ್ರಾದಿ ಸುರರು. ೨) ಪಿತೃದೇವತೆಗಳಲ್ಲಿ ನೂರು ಮಂದಿ. ೩) ಬಲ್ಯಾದಿ ಅಸುರರಲ್ಲಿ ಮೂವತ್ತು ಮಂದಿ. ೪) ಗಂಧರ್ವರಲ್ಲಿ ನೂರು, ಅಪ್ಸರ ಸ್ತ್ರೀಯರಲ್ಲಿ ನೂರು ಒಟ್ಟು ಇನ್ನೂರು ಮಂದಿ. ೫) ಯಕ್ಷರಾಕ್ಷಸರಲ್ಲಿ ಎಪ್ಪತ್ತು ಮಂದಿ. ೬) ಚಾರಣರಲ್ಲಿ ಮೂವತ್ತು ಮಂದಿ. ೭) ಸಿದ್ಧರಲ್ಲಿ ನೂರು ಮಂದಿ. ೮) ಭೂತ ಪ್ರೇತ, ಪಿಶಾಚ, ವಿದ್ಯಾಧರ ಕಿನ್ನರರ ಜಾತಿಗಳಲ್ಲಿ ಎಪ್ಪತ್ತು ಮಂದಿ.

ಈ ಎಲ್ಲ ಬಗೆಯ ಸೃಷ್ಟಿಯಲ್ಲಿಯೂ ಮುಖ್ಯ ಸೃಷ್ಟಿಕರ್ತನು ಶ್ರೀಹರಿಯು. ಅವನಿಂದಾಗುವ ಸೃಷ್ಟಿಗಳಲ್ಲಿ ಇದು ಮೊದಲು, ಅದು ಆಮೇಲೆ ಎಂಬುದಿಲ್ಲ. ನದಿಗಳಲ್ಲಿ ತಿರುಗುತ್ತಿರುವ ಸುಳಿಗೆ ಇದು ಮೊದಲು, ಇದು ಕೊನೆಯೆಂಬುದು ಯಾವುದು ? ಈ ಕಲ್ಪದಲ್ಲಿ ಯಾವ ಹೆಸರು, ರೂಪದ ದೇವತೆಗಳೂ, ಅಸುರರೂ ಸೃಷ್ಟರಾಗಿರುವರೋ

ವರೋ ಮುಂದಿನ ಕಲ್ಪಗಳಲ್ಲಿಯೂ ಅದೇ ಹೆಸರು ಮತ್ತು ಆಕಾರದಿಂದ ಹುಟ್ಟುವರು. ಆಯಾ ಅಧಿಕಾರಗಳಿಗೆ ಬರುವ ಜೀವರು ಮಾತ್ರ ಬೇರೆಯಾಗಿರುವರು. ಹಿಂದಿನ ಜೀವರನ್ನು ಉತ್ತಮಗತಿಯುಳ್ಳವರನ್ನಾಗಿ ಮಾಡಿದ ಶ್ರೀ ಹರಿಯು, ಯೋಗ್ಯರಾದ ಬೇರೆ ಜೀವರನ್ನು ಆಯಾ ಅಧಿಕಾರದಲ್ಲಿ ತೊಡಗಿಸುವನು.

## ಹನ್ನೊಂದನೆಯ ಅಧ್ಯಾಯ ಮುಗಿದುದು

ಶ್ರೀಹರಿಯು ಗುಣದಿಂದಲೂ, ಅನಂತನೆಂಬ ಜ್ಞಾನವು ಮೋಕ್ಷಕ್ಕೆ ಕಾರಣ ವಾಗಿದೆಯಾಗಿ, ಕಾಲ ಲಕ್ಷಣವನ್ನು ಹೇಳುತ್ತಾರೆ. ದೃಷ್ಟಾಂತವಾಗಿ ಪದಾರ್ಥದ ಅತ್ಯಂತ ಸೂಕ್ಷ್ಮವಾದ ಪರಮಾಣುವನ್ನು ವಿವರಿಸುವರು :

ದೇವಲೋಕದಲ್ಲಿ ಸೇರಿರುವ ಮನುಷ್ಯರ ದೃಷ್ಟಿಗೆ ಯಾವ ಪದಾರ್ಥವು ಅಂಶ ಸಹಿತವಾಗಿ ಕಾಣಿಸುವುದಿಲ್ಲವೋ ಅದೇ ಅತ್ಯಂತ ಸೂಕ್ಷ್ಮ ಪದಾರ್ಥವು.

### ಪರಮಾಣು

ಪರಮ ಮಹತ್ಪದಾರ್ಥವು ಯಾವುದೆಂದರೆ ಅಂಡದೊಳಗಿರುವ ಹರಿಯ ರೂಪ ವಲ್ಲ. ಅದಕ್ಕೆ ಆವರಕವಾಗಿರುವ ರೂಪವೂ ಅಲ್ಲ. ಅದರ ಮೇಲಿರುವ ಪುರುಷಾದಿ ರೂಪಗಳೂ ಅಲ್ಲ. ಸರ್ವತ್ರ ವ್ಯಾಪ್ತವಾಗಿದ್ದರೂ ಪ್ರಾದೇಶಾದಿ ಪರಿಮಿತರೂಪ ಗಳಿಂದಿರುವ ಭಗವದ್ರೂಪವಲ್ಲ. ಸರ್ವಗತ (ಅವ್ಯಾಕೃತಾಕಾಶದ ಹೊರಗಿರುವ) ನಾರಾಯಣನೆಂಬ ರೂಪವೇ ಪರಮಮಹತ್. ಹೀಗೆಯೇ ಪರಮಾಣು ಮತ್ತು ಪರಮ ಮಹತ್ತಾಗಿರುವ ಉಭಯ ಕಾಲಗಳಲ್ಲಿಯೂ ಹರಿಯು ಅಂತರ್ಯಾಮಿ ಯಾಗಿದ್ದು ಆಯಾ ಕಾಲದಲ್ಲಿರುವ ಜಗತ್ತಿನ ಸೃಷ್ಟಿ, ಪಾಲನೆ, ಸಂಹಾರಗಳನ್ನು ಮಾಡುತ್ತ ಉಭಯಕಾಲಗಳ ನಾಮಕನಾಗಿರುವನು.

### ಕಾಲದ ಅವಯವಗಳು

2 ಪರಮಾಣುಗಳು - ಅಣು (ದ್ವ್ಯಣುಕ)
3 ಅಣುಗಳು = ತ್ರಸರೇಣು
3 ತ್ರಸರೇಣುಗಳು = ತ್ರುಟಿ
3 ತ್ರುಟಿಗಳು - ವೇಧ
3 ವೇಧಗಳು = ಲವ
3 ಲವಗಳು = ನಿಮೇಷ
3 ನಿಮೇಷಗಳು = ಕಾಷ್ಠಾ

15 ಕಾಷ್ಠಗಳು = ಲಘು
15 ಲಘುಗಳು = ನಾಡಿ (ಘಳಿಗೆ)
3 ನಾಡಿಗಳು = ಮುಹೂರ್ತ
6 ನಾಡಿಗಳು ಅಥವಾ ಘಳಿಗೆಗಳು = ಪ್ರಹರ (ಹಗಲಿನ ಐದನೆಯ ಒಂದು ಭಾಗ)
ಅಥವಾ 7 ಘಳಿಗೆಗಳು = ಯಾಮ (ಹಗಲಿನ ಕಾಲು ಭಾಗ)

## ಘಳಿಗೆ ಬಟ್ಟಲು

ಆರು ಪಲಗಳಷ್ಟು ತೂಕವುಳ್ಳ ಪ್ರಸ್ಥ (ಬಳ್ಳ) ದಷ್ಟು ನೀರು ಹಿಡಿಯುವ ಪಾತ್ರೆಯ ಕೆಳಗೆ ನಾಲ್ಕು ಮಾಷಗಳ ತೂಕದ, ನಾಲ್ಕು ಅಂಗುಲ ಉದ್ದದ ಬಂಗಾರದ ಸಲಾಕೆಗಳು ತೂರುವಷ್ಟು ರಂಧ್ರಗಳಲ್ಲಿ ಶುದ್ಧವಾದ ನೀರು ಬಂದು ಆ ಪಾತ್ರೆಯು ಮುಳುಗುವ ಕಾಲವೇ ಒಂದು ಘಳಿಗೆ ಎನಿಸುವುದು.

4 ಯಾಮ = ಒಂದು ಹಗಲು, 4 ಯಾಮ = ರಾತ್ರಿ, ಹಗಲು ರಾತ್ರಿ = ದಿವಸ. 15 ದಿವಸಗಳು = ಪಕ್ಷ. ಶುಕ್ಲ ಮತ್ತು ಕೃಷ್ಣಪಕ್ಷ = ತಿಂಗಳು. ಪಿತೃಗಳ ಹಗಲು ಶುಕ್ಲ ಪಕ್ಷ. ಪಿತೃಗಳ ರಾತ್ರಿ ಕೃಷ್ಣಪಕ್ಷ. 2 ತಿಂಗಳು = ಒಂದು ಋತು. 3 ಋತುಗಳು = ದಕ್ಷಿಣಾಯನ. ದಕ್ಷಿಣಾಯನ ಕಾಲವು ದೇವತೆಗಳ ರಾತ್ರಿ. 3 ಋತುಗಳು = ಉತ್ತರಾಯಣ. ಇದು ದೇವತೆಗಳ ಹಗಲು. ಮಾನವರ 12 ತಿಂಗಳುಗಳು = ಒಂದು ವರುಷ. ಮಾನವರ ಪರಮಾವಧಿ ಆಯುಷ್ಯ ನೂರು ವರ್ಷಗಳು. ಹರಿಯೇ ಗ್ರಹ ಮೊದಲಾದವುಗಳಲ್ಲಿ ಕಾಲಪ್ರವರ್ತಕನು. ಕ್ಷಣ ಲವಾದಿಗಳ ನಾಮಗಳನ್ನುಳ್ಳವನು, ಸಂವತ್ಸರನಾಮಕ ಮತ್ತು 12 ಸಂಕ್ರಮಣಗಳ ನಾಮವುಳ್ಳವನಾಗಿ ಅವುಗಳಿಗೆ ನಿಯಾಮಕನಾಗಿರುವನು.

**ಪರಿವತ್ಸರ** . ಎಂದರೆ ಬೃಹಸ್ಪತಿ ಗ್ರಹವು ಒಂದು ರಾಶಿಯಲ್ಲಿರುವಷ್ಟು ಕಾಲ. ಅದಕ್ಕೆ ನಿಯಾಮಕನಾದ ಹರಿಯೂ ಪರಿವತ್ಸರನೆನಿಸುವನು.

**ಇಡಾವತ್ಸರ** : 12 ಬಾರಿ 27 ನಕ್ಷತ್ರಗಳು ತಿರುಗುವ ಕಾಲ. ಅದಕ್ಕೂ ಹರಿಯೇ ನಿಯಾಮಕ ಮತ್ತು ಅದೇ ನಾಮವುಳ್ಳವನು.

**ಅನುವತ್ಸರ** 30 ತಿಥಿಗಳು 12 ಬಾರಿ ತಿರುಗುವ ಕಾಲ. ಹರಿಯು ತನ್ನಿಯಾಮಕ, ತನ್ನಾಮಕನು.

**ವತ್ಸರ** : 360 ದಿನಗಳಾಗುವ ಕಾಲ. ಹರಿಯು ತನ್ನಿಯಾಮಕ, ತನ್ನಾಮಕನು.

ಶ್ರೀಹರಿಯು ಹೀಗೆ ತಿರುಗುವುದರಿಂದಲೂ ಸಂಧ್ಯಾದಿ ಕಾಲಗಳೂ, ಯಜ್ಞ ಕಾಲಗಳೂ, ಹಿರಿಯರ ಕಿರಿಯರ ವಯಸ್ಸೂ ಗೊತ್ತಾಗುವುದು.

ಕೃತಯುಗ ದೇವಮಾನ 4 ಸಾವಿರ ವರ್ಷಗಳು. ಸಂಧಿಕಾಲ 800 ಒಟ್ಟು 4800. ತ್ರೇತಾಯುಗ ದೇವಮಾನ 3 ಸಾವಿರ, ಸಂಧಿಕಾಲ 600 ಒಟ್ಟು 3600 ವರ್ಷಗಳು. ದ್ವಾಪರಯುಗ ದೇವಮಾನ 2 ಸಾವಿರ, ಸಂಧಿಕಾಲ 400 ಒಟ್ಟು 2400 ವರ್ಷಗಳು. ಕಲಿಯುಗ ಒಂದು ಸಾವಿರ, ಸಂಧಿಕಾಲ 200 ಒಟ್ಟು 1200 ವರ್ಷಗಳು. ನಾಲ್ಕು ಯುಗಗಳು ಒಟ್ಟು ದೇವಮಾನ ಹನ್ನೆರಡು ಸಾವಿರ ವರ್ಷಗಳು.

ಕೃತಯುಗದಲ್ಲಿ ತಪಸ್ಸು, ಸತ್ಯ. ದಯೆ, ಶೌಚ ಎಂಬ ನಾಲ್ಕು ಪಾದಗಳಿಂದ ಧರ್ಮವು ಪೂರ್ಣವಾಗಿರುತ್ತದೆ. ಉಳಿದ ಮೂರು ಯುಗಗಳಲ್ಲಿ ಕ್ರಮವಾಗಿ ಒಂದೊಂದು ಪಾದ ಲೋಪವಾಗುತ್ತದೆ. ನಾಲ್ಕು ಯುಗಗಳಿಗೆ ಒಂದು ಮಹಾಯುಗ ವೆಂದು ಹೆಸರು. ಸಾವಿರ ಮಹಾಯುಗಗಳು ಬ್ರಹ್ಮದೇವರಿಗೆ ಒಂದು ಹಗಲು. ಅಷ್ಟೇ ಕಾಲ ರಾತ್ರಿ ಬ್ರಹ್ಮದೇವರ ಹಗಲಿನಲ್ಲಿ ಮಾತ್ರವೇ ಭೂ ಮೊದಲಾದ ಲೋಕ ಗಳಲ್ಲಿನ ಜನ ಮೊದಲಾದ ಸೃಷ್ಟಿ ಆಗುತ್ತಲೇ ಇರುವುದು. ಆ ಹಗಲಿನಲ್ಲಿ 14 ಮಂದಿ ಮನುಗಳು ಆಳುತ್ತಾರೆ. ಒಂದೊಂದು ಮನ್ವಂತರದ ಕಾಲವು 71 ಮಹಾಯುಗ ಮತ್ತು 18 ಲಕ್ಷ 50 ಸಾವಿರ ವರ್ಷಗಳು.

ಒಂದೊಂದು ಮನ್ವಂತರದಲ್ಲಿಯೂ ಆ ಮನುವಿನ ವಂಶದ ರಾಜರು ಆಳುವರು. ಸಪ್ತಋಷಿಗಳು, ದೇವತೆಗಳು, ಇಂದ್ರ, ಗಂಧರ್ವರು ಬೇರೆಬೇರೆ ಬರುವರು. ಹೀಗೆ ಒಂದಾದ ಮೇಲೆ ಒಂದು ಮನ್ವಂತರವು ಒಂದು ಹೋಗುತ್ತಿರುವುದು. ಮೊದಲನೆಯ ಮನ್ವಂತರದ ಕೊನೆಯಲ್ಲಿ ಮಾನವಮಾನ ಎರಡು ಸಾವಿರ ವರ್ಷಗಳು ಪ್ರಳಯಕಾಲ. ಎರಡರಿಂದ ಏಳು ಮನ್ವಂತರಗಳಲ್ಲಿ ಕೊನೆಯ ಭಾಗದಲ್ಲಿ ಒಂದು ಸಾವಿರದ ಐನೂರು ವರ್ಷಗಳು ಪ್ರಳಯಕಾಲ. 8ನೆ ಮನ್ವಂತರದಿಂದ 14ನೆ ಮನ್ವಂತರ ಪೂರ್ತಿ ಒಂದು ಸಾವಿರದ ನಾನ್ನೂರು ವರ್ಷಗಳು ಪ್ರಳಯಕಾಲ. ಒಂದೊಂದು ಮನ್ವಂತರದಲ್ಲಿಯೂ ಶ್ರೀಹರಿಯು ಅವತರಿಸಿ, ತನ್ನ ಶಕ್ತಿಯನ್ನು ಪ್ರಕಟಿಸಿ ಮನುಗಳೊಂದಿಗೆ ಜಗತ್ತನ್ನು ಪಾಲಿಸುವನು. ಬ್ರಹ್ಮದೇವನ ರಾತ್ರಿ ಬಂದಾಗ ಸಂಕರ್ಷಣಮುಖಾಗ್ನಿಯಿಂದ ಭೂರಾದಿ ಮೂರು ಲೋಕಗಳೂ ಸುಟ್ಟುಹೋಗುವುವು. ಅದರ ಕಾವಿನಿಂದ ಸ್ವರ್ಗದ ಮೇಲಿರುವ ಮಹರ್ಲೋಕದಲ್ಲಿರುವ ಜನರು ಜನೋಲೋಕಕ್ಕೆ ಹೋಗುವರು. ಸುಟ್ಟುಹೋದ ಲೋಕಗಳು ಹರಿಯ ಮುಖದಿಂದ ಹೊರಡುವ ಸಪ್ತ ಸಮುದ್ರ ಜಲದಲ್ಲಿ ಮುಳುಗಿ ಹೋಗುತ್ತವೆ. ಆಗ ಬ್ರಹ್ಮದೇವರು ಜೀವರನ್ನೆಲ್ಲ ಹೊಟ್ಟೆಯಲ್ಲಿ ಇಟ್ಟುಕೊಂಡು ಹರಿಯನ್ನು ಪ್ರವೇಶಿಸುವರು. ಇವರಿಂದ ಸಹಿತವಾಗಿ ಮಹರ್ಲೋಕ ಮುಂತಾದ ಲೋಕದ ಜನರಿಂದ ಸ್ತುತ್ಯನಾದ ಶ್ರೀಹರಿಯು ದಿನಕಲ್ಪೋದಕದಲ್ಲಿ ಶೇಷನ ಮೇಲೆ ಮಲಗುವನು. ಇಂಥ ದಿನಗಳು ಮಾಸಗಳಾಗಿ ವರ್ಷಗಳಾಗಿ ನೂರು ವರ್ಷಗಳು ಬ್ರಹ್ಮದೇವರಿಗೆ ಪರಮಾಯುಷ್ಯ. ಅದರಲ್ಲಿ ಅರ್ಧಕ್ಕೆ ಪರಾರ್ಧವೆಂದು ಹೆಸರು. ಈಗ ಮೊದಲನೆಯ ಪರಾರ್ಧವು ಕಳೆದಿದೆ. ಮೊದಲನೆಯ ಪರಾರ್ಧದ

ಕೊನೆಯ ದಿನವೇ ಬ್ರಹ್ಮಾಂಡ ಸೃಷ್ಟಿಯಾದ ವಿರಾಟಕಲ್ಪ. ಎರಡನೆಯ ಪರಾರ್ಧದ ಮೊದಲನೆಯ ದಿವಸವೇ ಪದ್ಮಕಲ್ಪ ಮತ್ತು ಎರಡನೆಯ ದಿನವೇ ಶ್ವೇತವರಾಹಕಲ್ಪ. ನಿರ್ವಿಕಾರನೂ, ದೇಶ, ಕಾಲ, ಗುಣಪೂರ್ಣನೂ, ಅನಾದಿಯೂ ಆದ ಶ್ರೀಹರಿಗೆ ಈ ಪರಕಾಲವು ರೆಪ್ಪೆಹಾಕುವ ಕಾಲವೆಂದು ಔಪಚಾರಿಕವಾಗಿ ಹೇಳುತ್ತಾರೆ. ಬ್ರಹ್ಮಾಂಡವು 50 ಕೋಟಿ ಯೋಜನ ವಿಸ್ತಾರವಾಗಿದೆ. ಅದರ ಹೊರಗಡೆ ಪೃಥ್ವಿ, ಅಪ್ಪು, ತೇಜಸ್ಸು, ವಾಯು ಮತ್ತು ಆಕಾಶ, ಅದರಮೇಲೆ ಅಹಂಕಾರ, ಮಹತ್ ಮತ್ತು ಪ್ರಕೃತಿ ತತ್ತ್ವಗಳು ಒಂದರಮೇಲೊಂದರಂತೆ ಆವರಿಸಿಕೊಂಡಿವೆ. ಇವುಗಳಲ್ಲಿ ಭೂತತ್ತ್ವವು ಬ್ರಹ್ಮಾಂಡದ ಎರಡರಷ್ಟು ಅಂದರೆ 100 ಕೋಟಿ ಯೋಜನಗಳು ಇದ್ದು ಉಳಿದ ತತ್ತ್ವಗಳು ಕ್ರಮವಾಗಿ ಹತ್ತು ಹತ್ತು ಕೋಟಿ ಯೋಜನಗಳು ಅಧಿಕ ಪರಿಮಾಣಗಳಾಗಿವೆ. ಈ ಆವರಣಗಳಿಂದ ಕೂಡಿದ ಬ್ರಹ್ಮಾಂಡವು ಶ್ರೀಹರಿಯ ದೇಹದಲ್ಲಿ ಅತ್ಯಂತ ಸೂಕ್ಷ್ಮ ಪದಾರ್ಥದಂತೆ ಕಾಣಿಸುವುದು ಶ್ರೀಹರಿಯ ರೂಪಗಳು ಅನಂತವಿರುವುದರಿಂದ ಅವುಗಳಲ್ಲಿ ಪ್ರವೇಶಿಸಿದ ಬ್ರಹ್ಮಾಂಡವೂ ಅನಂತವಾಗಿ ಕಾಣಿಸುವುದು. ಹೀಗೆ ಬ್ರಹ್ಮಾಂಡಕ್ಕೆ ಆಶ್ರಯನಾದ ಶ್ರೀಹರಿಯೇ ಅತ್ಯಂತ ದೊಡ್ಡವನೂ, ಅತ್ಯಂತ ಸೂಕ್ಷ್ಮನೂ ಆಗಿರುವನು. ಈ ಬ್ರಹ್ಮಾಂಡವು ಶ್ರೀಹರಿಯ ವಾಸಸ್ಥಾನ. ಇವನಲ್ಲಿ ಭಕ್ತಿಮಾಡಿ ಇವನ ಅನುಗ್ರಹದಿಂದ ಮೋಕ್ಷವನ್ನು ಹೊಂದಬೇಕು.

> ಒಂದು ರೂಪದೊಳೊಂದವಯವ ದೊ
> ಳೊಂದು ರೋಮದೊಳೊಂದು ದೇಶದಿ
> ಪೊಂದಿಯಿಪ್ಪವಜಾಂಡನಂತಾನಂತ ಕೋಟಿಗಳು ॥
> ಹಿಂದೆ ಮಾರ್ಕಂಡೇಯ ಕಾಣನೆ
> ಒಂದು ರೂಪದಿ ಸೃಷ್ಟಿ ಪ್ರಳಯಗ
> ಳಿಂದಿರೇಶನೊಳೇನಿದಚ್ಚರಿಯಪ್ರಮೇಯ ಸದಾ ॥ 24 ॥
> — ಹರಿಕಥಾಮೃತ ಸಾರ, ಸಂಧಿ 7

## ಹನ್ನೆರಡನೆಯ ಅಧ್ಯಾಯ ಮುಗಿದುದು

ಬ್ರಹ್ಮದೇವರು ವೈಕಾರಿಕ ಸೃಷ್ಟಿಗಿಂತ ಮೊದಲು ಅಜ್ಞಾನದ ಐದು ವೃತ್ತಿಗಳನ್ನು ಸೃಷ್ಟಿಸಿದರು. ಅಜ್ಞಾನದ ಐದು ವೃತ್ತಿಗಳಾವುವು ಎಂದರೆ .—

1) ತಮಸ್ಸು (ಕತ್ತಲು) ಅಂದರೆ ಅಜ್ಞಾನ
2) ಮಿಥ್ಯಾಜ್ಞಾನ (ಮೋಹ)
3) ಮಹಾಮೋಹ ಅಂದರೆ ವಿಪರೀತ ಜ್ಞಾನದಲ್ಲಿ ಆಗ್ರಹ

4) ತಾಮಿಸ್ರ ಅಂದರೆ ಕ್ರೋಧ

5) ಅಂಧಂತಾಮಿಸ್ರ ಅಂದರೆ ಮರಣ ಕಾಲದ ದುಃಖದಿಂದ ಮೂರ್ಛೆ (ವಿಪರೀತ ಜ್ಞಾನದಲ್ಲಿ ಅತ್ಯಧಿಕ ಆಗ್ರಹವೆಂದು ಹರಿವಂಶವು ಹೇಳುತ್ತದೆ.)

ಒಳಿಕ ಸನಕ, ಸನಂದನ, ಸನತ್ಸುಜಾತ, ಸನತ್ಕುಮಾರರನ್ನು ಸೃಷ್ಟಿಸಿ "ನೀವೂ ಸೃಷ್ಟಿ ಮಾಡಿರಿ" ಎಂದು ಹೇಳಿದರು. ಅವರು ನಿವೃತ್ತಿ ಧರ್ಮರತರಾದ್ದರಿಂದ ಒಪ್ಪಲಿಲ್ಲ. ಬ್ರಹ್ಮದೇವರು ಕುಪಿತರಾದರು. ಅವರ ಹುಬ್ಬುಗಳ ಮಧ್ಯದಿಂದ ಕಪ್ಪು ಮತ್ತು ಕೆಂಪುಬಣ್ಣದ ಬಾಲಕನು ಜನಿಸಿದನು. ಆದ್ದರಿಂದ ಅವನನ್ನು **"ಸದ್ಯೋಜಾತ"** **"ನೀಲಲೋಹಿತ"**ನೆಂದು ಕರೆದರು. ಇಂದ್ರಾದಿಗಳಿಗಿಂತ ಮೊದಲು ಹುಟ್ಟಿದ ಈ ಬಾಲಕನು "ನನಗೆ ಹೆಸರಿಡಿ, ಸ್ಥಾನಗಳನ್ನು ಕಲ್ಪಿಸಿಕೊಡಿ" ಎಂದು ಕೇಳಿದನು. ಬ್ರಹ್ಮದೇವರು "ಮಗು! ಉದ್ವೇಗಗೊಂಡವನಂತೆ ಅತ್ತೆಯಾದ್ದರಿಂದ (ರೋದನಾದ್ರುದ್ರಃ) ರುದ್ರನೆಂದು ಜನರು ಕರೆಯುವರು. ಹೃದಯ, ಇಂದ್ರಿಯಗಳು, ಪ್ರಾಣ, ಆಕಾಶ, ವಾಯು, ಅಗ್ನಿ, ನೀರು, ಭೂಮಿ. ಸೂರ್ಯ, ಚಂದ್ರ ಮತ್ತು ತಪಸ್ಸುಗಳು ಸ್ಥಾನಗಳು. ಮನ್ಯು, ಮನು, ಮಹಾನಸ, ಮಹಾಶಿವ, ಋತಧ್ವಜ, ಅಗ್ನಿವೀರ್ಯ, ಭವ, ಕಾಲ, ವಾಮದೇವ ಮತ್ತು ಧೃಡವ್ರತನೆಂದು ನಿನ್ನ ಹೆಸರುಗಳು. ಧೀ, ವೃತ್ತಿ, ಅಶಲೋಮಾ, ನಿಯುತ್ಸರ್ಪಿ, ಇಲಾ, ಅಂಬಿಕಾ, ಇರಾವತೀ, ಸುಧಾ ಮತ್ತು ದೀಕ್ಷಾ ಎಂಬ ಹೆಂಗಸರನ್ನು ನಿನಗೆ ಕೊಟ್ಟಿರುವೆನು. ಪ್ರಜೆಗಳನ್ನು ಸೃಷ್ಟಿಸೆಂದರು. ರುದ್ರದೇವರು ಸೃಷ್ಟಿಸಿದರು. ಹುಟ್ಟಿದ ರುದ್ರಗಣಗಳು ಜಗತ್ತನ್ನೇ ನುಂಗುತ್ತ ಬಂದುವು. ಸೃಷ್ಟಿಯನ್ನು ಸಾಕುಮಾಡೆಂದು ಬ್ರಹ್ಮದೇವರು ಹೇಳಿ ಹರಿಯನ್ನು ಕುರಿತು ತಪಸ್ಸನ್ನು ಮಾಡೆಂದರು. ರುದ್ರದೇವರು ತಪಸ್ಸಿಗಾಗಿ ಸಮುದ್ರದ ನೀರೊಳಗೆ ಹೊಕ್ಕರು.

ಬ್ರಹ್ಮದೇವರು ತಮ್ಮ ಅವಯವಗಳಿಂದ ಪ್ರಜೇಶ್ವರರನ್ನು ಸೃಷ್ಟಿಸಿದರು. ಅದರ ವಿವರವು ಹೀಗಿದೆ :– ತೊಡೆಯಿಂದ ನಾರದರು. ಅಂಗುಷ್ಠದಿಂದ ದಕ್ಷ. ಪ್ರಾಣದಿಂದ ವಸಿಷ್ಠರು. ಚರ್ಮದಿಂದ ಭೃಗು. ಕೈಯಿಂದ ಕ್ರತು. ನಾಭಿಯಿಂದ ಪುಲಹ. ಕಿವಿಗಳಿಂದ ಪುಲಸ್ತ್ಯ. ಮುಖದಿಂದ ಅಂಗಿರಾಋಷಿ. ಕಣ್ಣುಗಳಿಂದ ಅತ್ರಿ. ಮನಸ್ಸಿನಿಂದ ಮರೀಚಿ. ಬಲಸ್ತನದಿಂದ ಧರ್ಮ. ಬೆನ್ನಿನಿಂದ ಅಧರ್ಮ. ಹೃದಯದಿಂದ ಕಾಮ ಹುಬ್ಬುಗಳಿಂದ ಕ್ರೋಧ. ಕೆಳತುಟಿಯಿಂದ ಲೋಭ. ಹೀಗೆ ಕಾಮಾದಿ ಅಭಿಮಾನಿಗಳು ಹುಟ್ಟಿದರು. ಗುಹ್ಯೇಂದ್ರಿಯದಿಂದ ಸಮುದ್ರ. ವಾಯುವಿನಿಂದ ನಿರ್ಋತಿ, ಛಾಯೆಯಿಂದ ಕರ್ದಮರು ಹುಟ್ಟಿದರು. ಮುಖದಿಂದ ಹುಟ್ಟಿದ ಮನುಷ್ಯರ ಸಂಬಂಧವಾದ ವಾಕ್ಕಿಗೆ ಅಭಿಮಾನಿನಿಯಾದ ತರುಣಿಯನ್ನು ಬ್ರಹ್ಮದೇವರು ಕಾಮಿಸಿದರೆಂದು ನಾವು ವಾರ್ತೆ ಕೇಳುತ್ತೇವೆ. ಬ್ರಹ್ಮದೇವರು ಅಸುರಜನ ಮೋಹಕ್ಕಾಗಿಯೇ ಹಾಗೆ ನಟಿಸಿದರು. ಆಗ ಅವರ ಪುತ್ರರಾದ

ಮರೀಚ್ಯಾದಿಗಳು "ಮಗಳನ್ನು ಹೊಂದುವವನು ಅಧಮನು. ನಿಮಗೆ ಕೈಮುಗಿಯು ವೆವು. ಈ ಕೆಲಸವು ಜಗದ್ಗುರುವಾದ ನಿಮಗೆ ತರವಲ್ಲ" ಎಂದು ಸ್ತೋತ್ರ ಮಾಡುತ್ತ ಪ್ರತಿಷೇಧಿಸಿದರು. ಬ್ರಹ್ಮದೇವರು ನಾಚಿಕೆಯನ್ನು ತೋರಿಸುತ್ತ ಅವಳನ್ನು ಬಿಟ್ಟು ಬಿಟ್ಟರು. ದಿಕ್ಕುಗಳಲ್ಲಿ ವ್ಯಾಪಿಸಿದ್ದ ಜನರು ಅವಳನ್ನು ಪರಿಗ್ರಹಿಸಿದರು. ಈ ವಾಗ್ದೇವಿಯಿಂದ ಶ್ರೀಹರಿಯ ಜ್ಞಾನವು ಬರುವುದಿಲ್ಲ. ಅನರ್ಥವೇ ಆಗುವುದು.

ಬ್ರಹ್ಮದೇವರು ತಮ್ಮ ಪೂರ್ವಾದಿ ನಾಲ್ಕು ದಿಕ್ಕಿನ ಮುಖಗಳಿಂದ ಋಗಾದಿ ನಾಲ್ಕು ವೇದಗಳನ್ನು ವ್ಯಕ್ತಪಡಿಸಿದರು. ಋಗ್ವೇದದ ಶಸ್ತ್ರ (ಶಾಸನ) ಮಂತ್ರ, ಯಜುರ್ವೇದದ 'ಇಜ್ಯಾ', ಸಾಮವೇದದ ಸ್ತುತಿ, ಸ್ತೋಮ, ಅಥರ್ವಣವೇದದ ಪ್ರಾಯಶ್ಚಿತ್ತ ಮಂತ್ರಗಳನ್ನು ವಿಂಗಡಿಸಿ ಉದ್ಧರಿಸಿದರು. ಆಯುರ್ವೇದ, ಭರತ ನಾಟ್ಯಶಾಸ್ತ್ರ, ಶಿಲ್ಪಶಾಸ್ತ್ರಗಳನ್ನು ಸೃಷ್ಟಿಸಿದರು. ಪೂರ್ವಾದಿ ಮುಖಗಳಿಂದ ಷೋಡಶೀ ಮುಂತಾದ ಯಜ್ಞಗಳನ್ನೂ, ಧರ್ಮದ ಪಾದಗಳನ್ನೂ, ನಾಲ್ಕು ಆಶ್ರಮ ಧರ್ಮಗಳನ್ನೂ ಸೃಷ್ಟಿಸಿದರು. ಹಾಗೆಯೇ ವರ್ಣ (ಅಕ್ಷರ)ಗಳೂ, ಸಪ್ತಸ್ವರಗಳೂ ವ್ಯಕ್ತವಾದುವು. ಇಷ್ಟಾದರೂ ಪ್ರಜೆಗಳು ಪುಂಖಾನುಪುಂಖವಾಗಿ ಬೆಳೆಯುತ್ತಿಲ್ಲ ವೆಂದು ಯೋಚಿಸುತ್ತಿದ್ದ ಬ್ರಹ್ಮದೇವರ ರೂಪವು ಹರಿಯ ಅನುಗ್ರಹದಿಂದ ಎರಡು ಭಾಗವಾಯಿತು. ಆಗ ಸ್ವಾಯಂಭುವನೆಂಬ ಗಂಡು, ಶತರೂಪಾದೇವಿಯೆಂಬ ಹೆಣ್ಣು ಹುಟ್ಟಿದರು. ಮೈಥುನದಿಂದ ಆ ದಂಪತಿಗಳಲ್ಲಿ ಪ್ರಿಯವ್ರತ ಮತ್ತು ಉತ್ತಾನಪಾದ ರೆಂಬ ಇಬ್ಬರು ಗಂಡುಮಕ್ಕಳಾದರು ಮತ್ತು ಆಕೂತಿ, ದೇವಹೂತಿ, ಪ್ರಸೂತಿ ಎಂಬ ಮೂವರು ಹೆಣ್ಣುಮಕ್ಕಳೂ ಹುಟ್ಟಿದರು. ರುಚಿ ಎಂಬ ಪ್ರಜೇಶ್ವರನಿಗೆ ಆ ಕೂತಿಯನ್ನು, ಕರ್ದಮ ಪ್ರಜೇಶ್ವರನಿಗೆ ದೇವಹೂತಿಯನ್ನೂ, ದಕ್ಷ ಪ್ರಜೇಶ್ವರನಿಗೆ ಪ್ರಸೂತಿಯನ್ನೂ ಕೊಟ್ಟು ಮದಿವೆ ಮಾಡಿದರು. ಈ ಹೆಣ್ಣುಮಕ್ಕಳ ಪ್ರಜೆಗಳಿಂದ ಜಗತ್ತು ತುಂಬಿತು.

**ಹದಿಮೂರನೆಯ ಅಧ್ಯಾಯ ಮುಗಿದುದು**

**ಮೈತ್ರೇಯ :** ಸ್ವಾಯಂಭುವನು ಬ್ರಹ್ಮದೇವರಿಗೆ ನಮಿಸಿ "ನಾವು ನಿಮ್ಮ ಮಕ್ಕಳಾದ ಮೇಲೆ ನಿಮಗೆ ನಮಿಸಿ. ನಿಮ್ಮನ್ನು ಸೇವಿಸಲೇ ಬೇಕು, ಶ್ರೀಹರಿಪೂಜೆಯೆ ನಿಸುವ ಯಾವ ಕರ್ಮವನ್ನು ಮಾಡಬೇಕು ಅಪ್ಪಣೆ ಕೊಡಿ, ನಿಮಗೆ ನಮಸ್ಕಾರ" ಎಂದು ಪ್ರಾರ್ಥಿಸಿದರು.

**ಬ್ರಹ್ಮ :** ಮಗು ! ನಿನ್ನ ವಿನಯದಿಂದ ಅತ್ಯಂತ ಸಂತೋಷವಾಯಿತು. ನೀವಿಬ್ಬರೂ ಸುಕ್ಷೇಮವಾಗಿ ಬಾಳಿರಿ, ನೀವು ನಿರ್ವ್ಯಾಜವಾದ ಮನಸ್ಸಿನಿಂದ ನಿಮ್ಮನ್ನೇ ನನಗೊಪ್ಪಿಸಿರುವಿರಿ. ಇದೇ ಪಿತೃಸೇವೆ. ಮಾತ್ಸರ್ಯವಿಲ್ಲದೆ ಅಪ್ಪನ ಅಪ್ಪಣೆ ಯಂತೆ ನಡೆಯಬೇಕು. ನೀನು ಈಕೆಯಲ್ಲಿ ಗುಣವಂತರಾದ ಮಕ್ಕಳನ್ನು ಪಡಿ. ಧರ್ಮ

ದಿಂದ ಪ್ರಜೆಗಳನ್ನು ರಕ್ಷಿಸು. ಯಜ್ಞಗಳನ್ನು ಮಾಡಿ ಶ್ರೀ ಹರಿಯನ್ನು ಪೂಜಿಸು. ಅವನನ್ನು ತಿರಸ್ಕರಿಸಿದರೆ ಶ್ರೇಯಸ್ಸೆಲ್ಲಿಂದ ಬಂದೀತು ?

**ಸ್ವಾಯಂಭುವ** : ಅಪ್ಪಣೆಯಂತೆ ನಡೆಯುವೆನು. ಪ್ರಜೆಗಳ ವಾಸಕ್ಕೆ ಸ್ಥಳ ಮಾಡಿಕೊಡಿ. ಭೂಮಿಯು ದಿನಪ್ರಳಯದ ನೀರಿನಲ್ಲಿ ಮುಳುಗಿ ಹೋಗಿದೆ. ಅದನ್ನು ಮೇಲಕ್ಕೆ ತರುವ ಪ್ರಯತ್ನ ಮಾಡಿ.

ಬ್ರಹ್ಮದೇವರು ಇದನ್ನು ಕೇಳಿ, ಯೋಚಿಸಿ "ಆ ನಾರಾಯಣನೇ ಭೂಮಿಯನ್ನು ಮೇಲಕ್ಕೆ ತರಬೇಕು" ಎಂದು ನಿಶ್ಚಯಿಸಿ ಅವನನ್ನು ಧ್ಯಾನಿಸಿದರು ಆಗ ಅವರ ಮೂಗಿನ ಹೊಳ್ಳೆಯಿಂದ ಅಂಗುಷ್ಠ ಗಾತ್ರದ ವರಾಹವು ಹೊರಗೆ ಬಂದು ಕೂಡಲೇ ಆನೆಯಷ್ಟು ದೊಡ್ಡದಾಯಿತು. ಪುತ್ರಸಹಿತರಾದ ಬ್ರಹ್ಮದೇವರು ಇದನ್ನು ಕಂಡು "ಇವನು ವಿಷ್ಣುವೇ ಸರಿ" ಎಂದು ಊಹಿಸುತ್ತಿರಲು ವರಾಹರೂಪೀ ಹರಿಯು ಗರ್ಜಿಸಿ ತನ್ನವರಿಗೆ ಸಂತೋಷಪಡಿಸಿದನು. ಭಕ್ತರೆಲ್ಲರೂ ಅವನನ್ನು ವೇದಗಳಿಂದ ಸ್ತುತಿಸಿದರು. ವರಾಹದೇವನು ಗರ್ಜಿಸಿ, ತಾನು ಪ್ರಸನ್ನನಾದೆನೆಂದು ಪ್ರಕಟಿಸಿ, ಸಮುದ್ರವನ್ನು ಹೊಕ್ಕು, ಬಾಲವನ್ನು ಮೇಲಕ್ಕೆತ್ತಿ, ನೀರೊಳಗೆ ಹೋಗಿ ರಸಾತಳ ದಲ್ಲಿ ಸೆರೆಸಿಕ್ಕಿದ್ದ ಭೂಮಿಯನ್ನು ದಾಡೆಯ ಕೊನೆಯಿಂದ ಮೇಲಕ್ಕೆತ್ತಿ ತರುತ್ತಿದ್ದನು. ಆಗ ಬ್ರಹ್ಮದೇವರಿಂದ ಹುಟ್ಟಿದ್ದ ಆದಿ ಹಿರಣ್ಯಾಕ್ಷನೆಂಬ ದೈತ್ಯನು ಗದಾಪಾಣಿಯಾಗಿ ವರಾಹನನ್ನು ಇದಿರಿಸಿದನು. ವರಾಹದೇವನು ಅವನನ್ನು ದಾಡೆಯಿಂದ ಕೊಂದು ಭೂಮಿಯೊಡನೆ ಮೇಲಕ್ಕೆ ಬಂದನು.

## ಇಬ್ಬರು ಹಿರಣ್ಯಾಕ್ಷರು

ಮೊದಲನೆಯವನು ಆದಿಯಲ್ಲಿ ಬ್ರಹ್ಮದೇವರಿಂದ ಹುಟ್ಟಿದ್ದನು. ಇವನು ಭೂಮಿ ಯನ್ನು ಅಪಹರಿಸಲಿಲ್ಲ. ಭೂಮಿ ತಾನಾಗಿ ಮುಳುಗಿತ್ತು. ಶ್ವೇತವರಾಹ ರೂಪದಿಂದ ಹರಿಯು ಆ ದೈತ್ಯನನ್ನು ದಾಡೆಯಿಂದ ಕೊಂದನು. ಎರಡನೆ ಹಿರಣ್ಯಾಕ್ಷನು ಮೊದಲನೆಯ ಹಿರಣ್ಯಾಕ್ಷದೈತ್ಯನ ಆವೇಶದಿಂದ ಕೂಡಿ ಏಳನೆಯ ಮನ್ವಂತರದಲ್ಲಿ ಕಶ್ಯಪ ದಿತಿಯರಲ್ಲಿ ಹುಟ್ಟಿದವನು. ಅವನು ಭೂಮಿಯನ್ನು ಕದ್ದು ನೀರೊಳಗೆ ಮುಳುಗಿದ್ದನು. ಆಗ ಹರಿಯು ನೀಲವರಾಹನಾಗಿ ಅವನ ಕಿವಿಯ ಬುಡದಲ್ಲಿ ಹಸ್ತ ದಿಂದ ಹೊಡೆದು ಕೊಂದನು.

ಪ್ರಶ್ನೆ : ಸ್ಪಷ್ಟವಾಗಿ ಇಲ್ಲಿ ಈ ವಿಷಯವನ್ನು ಏಕೆ ಹೇಳಿಲ್ಲ ?

ಉತ್ತರ : ಶ್ಲೋಕ ॥ **ವ್ಯತ್ಯಾಸೇನಾಪಿ ಚೋಚ್ಯಂತೇ ಅವಿವೇಕೇನ ಕುತ್ರಚಿತ್ । ದುಷ್ಟಾನಾಂ ಮೋಹನಾರ್ಥಾಯ ತತ್ರ ತತ್ರ ಕಥಾ ಕ್ವಚಿತ್॥ ಇತಿ ಸ್ಕಾಂದೇ**

**ಅರ್ಥ :** ಕೆಲವು ಗ್ರಂಥಗಳಲ್ಲಿ, ಆಯಾ ಭಾಗಗಳಲ್ಲಿನ ಕಥೆಗಳ ವ್ಯತ್ಯಾಸ, ಕಾಲ ವ್ಯತ್ಯಾಸ, ಪುರುಷ ವ್ಯತ್ಯಾಸಗಳನ್ನೂ, ಕೆಲವು ಸಂದರ್ಭಗಳಲ್ಲಿ, ಅವಿವೇಕೀಸ ಅಂದರೆ ಸ್ಪಷ್ಟಪಡಿಸದೆ ದುಷ್ಟರನ್ನು ಮೋಹಗೊಳಿಸುವುದಕ್ಕಾಗಿ ಹೇಳಿದೆ ಎಂದು ವೇದವ್ಯಾಸರು ಸ್ಕಾಂದ ಪುರಾಣದಲ್ಲಿ ಹೇಳಿದ್ದಾರೆ.

ದೇವತೆಗಳು ಯಜ್ಞವರಾಹ ದೇವರನ್ನು ಸುತ್ತಿಸುವರು–: "ಅಜಿತನೇ ! ನೀನು ಸದಾ ಜಯಶೀಲನು. ಯಜ್ಞಕ್ಕೆ ಉಪಯೋಗವಾಗತಕ್ಕ ಕುಶಾದಿ ಸಾಮಗ್ರಿಗಳನ್ನು ಉತ್ಪಾದನೆ ಮಾಡಿದ ನಿನಗೆ ನಮಸ್ಕಾರ ! ಈ ರೂಪವು ಪಾಪಿಗಳಿಗೆ ಗೋಚರವಲ್ಲ. ಭೂಮಿಯು ನಮ್ಮ ತಾಯಿ. ನೀನೆ ತಂದೆ. ಭೂಮ್ಯುದ್ಧರಣ ಕಾರ್ಯವು ನಿನಗೇನೂ ಆಶ್ಚರ್ಯವಲ್ಲ. ನಿನ್ನ ಸ್ಮರಣೆಯಿಂದ ನಮ್ಮ ಮನಸ್ಸೂ, ಕೀರ್ತನದಿಂದ ನಾಲಗೆ, ರೋಮಗತ ಜಲಬಿಂದುವಿನ ಸೇಚನೆಯಿಂದ ನಮ್ಮ ದೇಹ ಪವಿತ್ರವಾಯಿತು. ನಿನ್ನ ಈ ಕರ್ಮವು ಪರಿಮಿತವೆಂದು ಯೋಚಿಸುವವನು ಅವಿವೇಕಿ. ನಮಗೆ ಇಂಥ ಅಜ್ಞಾನವನ್ನು ಕೊಡದೆ, ಸಮೀಚೀನ ಜ್ಞಾನದಿಂದ ದೊರೆಯುವ ಲೋಕವನ್ನು ಕೊಡು.

ಹೀಗೆ ಪ್ರಾರ್ಥಿತನಾದ ವರಾಹದೇವನು ಭೂಮಿಯನ್ನು ನೀರಿನ ಮೇಲೆ ಸ್ಥಾಪಿಸಿ ಹೊರಟು ಹೋದನು.

## ಫಲಶ್ರುತಿ

ಭಕ್ತಿಯಿಂದ ಈ ವರಾಹಚರಿತ್ರೆಯನ್ನು ಹೇಳಿ ಕೇಳುವವರ ಹೃದಯದಲ್ಲಿ ಬೇಗ ಹರಿಯು ಪ್ರಸನ್ನನಾಗುವನು. ಅದರಿಂದ ದೊರೆಯದಿರುವುದೇನಿದೆ ? ಆದರೂ ತುಚ್ಛವಾದುದನ್ನು ಬೇಡಬಾರದು. ಅನನ್ಯ ಭಕ್ತಿಯಿಂದ ಬೇಡುವವರಿಗೆ ತಾನಾಗಿ ತನ್ನ ಲೋಕವನ್ನೇ ಕೊಟ್ಟುಬಿಡುವನು. ಹರಿಕಥಾಮೃತವು ಸಾರವಾದುದು. ಸಾರಜ್ಞನಾದ ಯಾವನು ತಾನೇ ಅದನ್ನು ಕೇಳದೆ ಬಿಡುವನು ? ಕೇಳದೆ ಬಿಡುವವನು ಪಶುವೇ ಸರಿ.

## ಹದಿನಾಲ್ಕನೆಯ ಅಧ್ಯಾಯ ಮುಗಿದುದು

**ವಿದುರ :–** ದಿತಿಪುತ್ರನಾದ ಎರಡನೆಯ ಹಿರಣ್ಯಾಕ್ಷನ ಯಾವ ಅಪರಾಧಕ್ಕಾಗಿ ಶ್ರೀಹರಿಯು ಅವನನ್ನಿದಿರಿಸಿ ಯುದ್ಧ ಮಾಡಿದನು ?

**ಮೈತ್ರೇಯರು ;** ಹಿಂದೆ ಬ್ರಹ್ಮದೇವರು ದೇವತೆಗಳಿಗೆ ಹೇಳಿದ ಕಥೆಯನ್ನೇ ನಿನಗೆ ಹೇಳುವೆನು ಕೇಳು. ವಿದುರಾ ! ಅಂದು ಸಂಧ್ಯಾ ಕಾಲ. ಕಶ್ಯಪರು ಅಗ್ನಿ

ಹೋತ್ರ ಶಾಲೆಯಲ್ಲಿ ಅಗಿನ ಹೋಮವನ್ನು ಮುಗಿಸಿ ಹರಿಯ ಧ್ಯಾನದಲ್ಲಿದ್ದರು. ಆಗ ದಿತಿಯು ಅಲ್ಲಿಗೆ ಬಂದು ಮಾತಾಡುವಳು :–

**ದಿತಿ :–** ಸವತಿಯರಿಗೆ ಮಕ್ಕಳಿವೆ. ನನಗಿಲ್ಲ. ಕರುಣಿಸಬೇಕು. ಪತಿಯಿಂದ ಪುತ್ರರನ್ನು ಪಡೆದವರೇ ಯಶಸ್ವಿನಿಯರು. ನಾವು ಮೆಚ್ಚಿ ನಿಮ್ಮನ್ನು ಮದಿವೆಯಾಗಿದ್ದೇವೆ. ನಿಮ್ಮಲ್ಲಿ ಮರೆಹೊಕ್ಕ ನನ್ನನ್ನು ಕರುಣಿಸಿ.

**ಕಶ್ಯಪ :** ಸುತರಿಲ್ಲವೆಂದು ಭಯಪಡದಿರು. ಕರುಣಿಸುವೆನು. ಗಂಡಂದಿರಿಗೆ ಪತ್ನಿಯರಿಂದಲೇ ಧರ್ಮಾರ್ಥಕಾಮಗಳ ಸಿದ್ಧಿ. ಪತ್ನಿಯು ಬೇರೆಯಲ್ಲ. ಅರ್ಧಾಂಗಿ. ಅವಳಿಂದಲೇ ಇಂದ್ರಿಯ ಜಯ. ನಿನ್ನಿಚ್ಛೆ ಪೂರ್ಣಮಾಡುವೆನು. ಆದರೆ ಒಂದು ಮುಹೂರ್ತಕಾಲ ಸುಮ್ಮನಿರು. ರುದ್ರಪರಿವಾರವು ಸಂಚರಿಸುವ ಕಾಲವಿದು. ರುದ್ರನೂ ತಿರುಗುತ್ತಿರುವನು ಅವನು ನಿನ್ನ ತಂಗಿಯ ಗಂಡ. ಅವನು ಮೂರು ಕಣ್ಣುಗಳಿಂದಲೂ ನೋಡುತ್ತಿರುವನು. ಗರ್ಭಿಣಿಯಾಗುವವರ ಗರ್ಭವನ್ನು ಹೋಗಲಾಡಿಸಲು ಸಿದ್ಧನಾಗಿರುವನು. ಅವನ ಈ ವ್ಯಾಪಾರಕ್ಕೆ ಶ್ರೀಹರಿಯ ಅಪ್ಪಣೆಯೇ ಕಾರಣ. ಶ್ರೀಹರಿಯ ಸಮರು ಯಾರೂ ಇಲ್ಲ. ಇನ್ನು ಅಧಿಕರೆಲ್ಲಿ ಬರುವರು ? ಅವನೇ ಕಟ್ಟರಸನು.

**ಮೈತ್ರೇಯ :–** ದಿತಿಯು ಕಾಮಪೀಡಿತಳಾಗಿ ನಾಚಿಕೆ ಬಿಟ್ಟು ಗಂಡನ ಉತ್ತರೀಯವನ್ನೆಳೆದಳು. ಇದನ್ನು ನೋಡಿ ಕಶ್ಯಪರು ಕರ್ಮಸಾಕ್ಷಿಯಾದ ಶ್ರೀಹರಿಗೆ ವಂದಿಸಿ, ದಿತಿಯಲ್ಲಿ ಗರ್ಭವನ್ನಿಟ್ಟರು. ಬಳಿಕ ಶುದ್ಧರಾದರು. ದಿತಿಗೆ ನಾಚಿಕೆಯಾಯಿತು. ತಲೆಬಗ್ಗಿಸಿಕೊಂಡು "ನಾಥ ! ರುದ್ರದೇವರಿಗೆ ನಾಂ ಅಪರಾಧಿನಿ. ಅವರು ನನ್ನ ಗರ್ಭವನ್ನು ಕೊಲ್ಲದಿರಲಿ. ಸಜ್ಜನರಕ್ಷಕನೂ, ದುರ್ಜನ ಶಿಕ್ಷಕನೂ ಆದ ಶಿವನಿಗೆ ನಮಸ್ಕಾರ ! ವ್ಯಾಧನೇ ಸ್ತ್ರೀಯಳಲ್ಲಿ ಕನಿಕರವನ್ನು ತೋರಿಸುವನೆಂದ ಬಳಿಕ ನನ್ನ ತಂಗಿಯ ಗಂಡನಾದ ಶಿವನು ದಯೆಯನ್ನು ತೋರದಿರುವನೇ ? ಭಯರಹಿತನಾದ ಅವನು ನನ್ನ ಭಯಪರಿಹರಿಸಿ ಅನುಗ್ರಹಿಸಲಿ" ಎಂದು ಬೇಡಿದಳು.

ಮಧ್ಯಮಾವತಿ ರಾಗ ಝಾಪುತಾಳ

ಧವಳಗಂಗೆಯ ಗಂಗಾಧರ ಮಹಾಲಿಂಗ–ಮಾಧವನ ತೋರಿಸಯ್ಯ ಗುರು ಕುಲೋತ್ತುಂಗ ॥ ಪ ॥

ಅರ್ಚಿಸಿದವರಿಗಭೀಷ್ಟವ ಕೊಡುವ । ಹೆಚ್ಚಿದ ಅಘಗಳ ಬೇಗನೆ ತರಿವ ॥
ದುಶ್ಚರಿತರ ಕಂಡು ದೂರದಲ್ಲಿಡುವ, ನಮ್ಮಚ್ಯುತಗಲ್ಲದ ಅಸುರರ ಬಡಿವ ॥ ೧ ॥
ಮಾರನ್ನ ಗೆದ್ದ ಮನೋಹರ ಮೂರ್ತಿ । ಸಾರ ಸಜ್ಜನರಿಗೆ ಸುರಚಕ್ರವರ್ತಿ ।
ಧಾರುಣಿಯೊಳ್ತುಂಬಿತು ನಿನ್ನಯ ಕೀರ್ತಿ, ಮು। ರಾರಿಯ ತೋರಯ್ಯ ನಿನಗೆ ಶರಣಾರ್ಥಿ ॥ ೨ ॥

ಚೆನ್ನ ಪ್ರಸನ್ನ ಶ್ರೀ ಹಯವದನನ್ನ । ಅನುದಿನ ನೆನೆವಂತೆ ಮಾಡೊ ನೀ ಎನ್ನ ॥
ಅನ್ಯರ ನಂಬೆನು ಗುರುವೆಂಬೆ ನಿನ್ನ! ಇನ್ನಾದರು ತೋರೊ ಹರಿಯ ಮುಕ್ಕಣ್ಣ॥ ೩ ॥

**ಕಶ್ಯಪ .** ಅಮಂಗಳೆ ! ಮನಸ್ಸನ್ನು ಬಿಗಿ ಹಿಡಿಯದೆ ಹೋದೆ. ನನ್ನ ಅಪ್ಪಣೆ ಮೀರಿದ್ದರಿಂದಲೂ, ಸಂಧ್ಯಾಕಾಲದ ದೋಷದಿಂದಲೂ. ರುದ್ರಾದಿಗಳಿಗೆ ಅಪಮಾನ ಮಾಡಿದ್ದರಿಂದಲೂ ನಿನ್ನಲ್ಲಿ ಅಮಂಗಳರಾದ ಇಬ್ಬರು ಪುತ್ರಾಧಮರು ಹುಟ್ಟುವರು. ಅವರು ಸ್ತ್ರೀಯರನ್ನೂ ಹಿಂಸಿಸುವರು. ಭಗವಂತನು ಅವರಿಬ್ಬರನ್ನೂ ಕೊಲ್ಲುವನು.

**ದಿತಿ .** ಪತಿದೇವ ! ಚಕ್ರಧಾರಿಯಾದ ಶ್ರೀಹರಿಯು ಸಾಕ್ಷಾತ್ತಾಗಿ ನನ್ನ ಮಕ್ಕಳನ್ನು ಕೊಲ್ಲಲಿ. ಆದರೆ ಬ್ರಾಹ್ಮಣರ ಶಾಪದಿಂದ ಮಾತ್ರ ಅವರು ಸಾಯಬೇಡ. ನರಕವಾಸಿಗಳೂ ಕೂಡ ಬ್ರಾಹ್ಮಣಶಾಪದಗ್ಧನಿಗೂ, ಭೂತಭಯಂಕರನಿಗೂ ಕನಿಕರ ತೋರುವುದಿಲ್ಲ.

**ಕಶ್ಯಪ :** ದಿತಿ ! ನೀನು ಮಾಡಿದ ಕರ್ಮಕ್ಕೆ ಪಶ್ಚಾತ್ತಾಪ ಪಡುತ್ತಿರುವೆ. ದೋಷವನ್ನು ವಿಮರ್ಶಿಸಿ ತಿಳಿದೆ. ಹರಿಯಲ್ಲಿ, ರುದ್ರದೇವರಲ್ಲಿ, ಪತಿಯಾದ ನನ್ನಲ್ಲಿ ಯಥಾಯೋಗ್ಯ ಭಕ್ತಿಯನ್ನು ತೋರಿಸಿರುವೆಯಾದ್ದರಿಂದ ನಿನ್ನ ಮಗನ ಮಕ್ಕಳಲ್ಲಿ ಒಬ್ಬನು ಮಾತ್ರ ಸಜ್ಜನ ಸಮ್ಮತನಾದವನು ಹುಟ್ಟುವನು. ಶ್ರೀಹರಿಯ ಕೀರ್ತಿಯೊಂದಿಗೆ ಅವನ ಕೀರ್ತಿಯನ್ನೂ ಸಜ್ಜನರು ಗಾನ ಮಾಡುವರು. ನಿನ್ನ ಮಗನಾಗಿ ಹುಟ್ಟುವವನು ಸುಜೀವಿ. ಆದರೂ ದುರ್ಜೀವಿಯ ಸಹವಾಸದಿಂದ ಬಣ್ಣಗೆಟ್ಟ ಚಿನ್ನದಂತೆ ದುಷ್ಟನಾಗುವನು. ಆದರೂ ಸ್ವರೂಪದಿಂದ ಯೋಗ್ಯನಾದ ಆ ಜೀವಿಯು ಆ ನಿನ್ನ ಮೊಮ್ಮಗನ ಪ್ರಭಾವದಿಂದ ಸದ್ಗತಿಯನ್ನು ಹೊಂದುವನು. ಅಯೋಗ್ಯ ಜೀವನು ನಿತ್ಯ ನರಕದಲ್ಲಿ ಬಿದ್ದು ನರಳುವನು. ನಿನ್ನ ಮೊಮ್ಮಗನು ಭಗವದ್ಭಕ್ತರಲ್ಲಿ ವೈರವಿಲ್ಲದಿರುವುದೇ ಮೊದಲಾದ ಸದ್ಗುಣಗಳನ್ನು ಹೊಂದಿರುವನು. ಸಜ್ಜನರು ಅವನಂತೆ ತಾವೂ ಬಾಳಬೇಕೆಂದೂ, ಅವನಲ್ಲಿರುವ ಭಾಗವತ ಧರ್ಮಗಳನ್ನು ಹೊಂದಬೇಕೆಂದೂ ಬಯಸುವರು. ಆ ನಿನ್ನ ಮೊಮ್ಮಗನು ಹರಿಯು ಸರ್ವೋತ್ತಮ (ವಾಯು ಜೀವೋತ್ತಮ)ನೆಂದು ದೃಢವಾಗಿ ತಿಳಿದವನೂ– ಮಹನೀಯರಲ್ಲಿ ಉತ್ತಮ ಮಹನೀಯನೂ ಆಗಿ ದಿನದಿನಕ್ಕೆ ಹೆಚ್ಚಿದ ಭಕುತಿಯಿಂದ ತನ್ನ ಮನಸ್ಸಿನಲ್ಲಿ ಶ್ರೀಹರಿಯನ್ನೇ ಧ್ಯಾನಿಸುತ್ತ ಶ್ರೀಹರಿಯಿಂದ ಭಿನ್ನವೂ- ಅಸಾರವೂ, ಅನಿತ್ಯವೂ ಆಗಿರುವ ಜಗತ್ತಿನಲ್ಲಿ ಅಭಿಮಾನವನ್ನು ಬಿಟ್ಟುಬಿಡುವನು. ಅವನು ಈ ಬಗೆಯ ವೈರಾಗ್ಯದಿಂದ ವಿಷಯಾಸಕ್ತಿಯಿಲ್ಲದವನೂ, ಶೀಲವಂತನೂ, ಗುಣಸಮುದ್ರನೂ, ಸಜ್ಜನರ ಸುಖದಲ್ಲಿ ಸಂತುಷ್ಟನೂ, ಅವರ ದುಃಖದಲ್ಲಿ ದುಃಖಿಯೂ, ಅಜಾತ ಶತ್ರುವೂ ಆಗಿ ಚಂದ್ರನು ಬಿಸಿಲಿನ ತಾಪವನ್ನು ಪರಿಹರಿಸುವಂತೆ ಸಜ್ಜನರ ಶೋಕವನ್ನು ಪರಿಹರಿಸುವನು. ಅಂದರೆ

ಬಿಂಬಭೂತನಾಗಿರುವನು. ದಿತಿಯೆ! ನಿನ್ನ ಮೊಮ್ಮಗನು ಶ್ರೀಹರಿಯನ್ನು ಅಪರೋಕ್ಷ ದಿಂದ ಕಾಣುವನು. ಹೀಗೆ ನಿರ್ದೋಷಗುಣಪೂರ್ಣನಾದ ಶ್ರೀಹರಿಯನ್ನು ಸಾಕ್ಷಾತ್ಕರಿಸುವ ನಿನ್ನ ಮೊಮ್ಮಗನೇ ಧನ್ಯನು.

ದಿತಿಯು ಕೇಳಿ, ಮೊಮ್ಮಗನು ಹರಿಭಕ್ತನೆಂದೂ, ತನ್ನ ಮಕ್ಕಳು ಹರಿಯ ಕೈಯಿಂದಲೇ ಮರಣ ಹೊಂದುವರೆಂದೂ, ಆದರಿಂದ ಅವರಿಗೆ ಸದ್ಗತಿಯಾಗುವುದೆಂದೂ ತಿಳಿದು ಸಂತೋಷಗೊಂಡಳು.

## ಹದಿನೈದನೆಯ ಅಧ್ಯಾಯ ಮುಗಿಸುದು

ದಿತಿಯು ತಾನು ಹೆತ್ತರೆ ತನ್ನ ಮಕ್ಕಳು ಹರಿಯಿಂದ ಬೇಗ ಸಾಯುವರೆಂದು ಭಾವಿಸಿ ಕಶ್ಯಪರ ವೀರ್ಯವನ್ನು ಗರ್ಭದಲ್ಲೇ ಧರಿಸಿದಳು.

**ವಿಶೇಷ :–** ಹಿರಣ್ಯಕಶಿಪುವು ತಾಯಿಯ ಉದರಕ್ಕೆ ಬಂದ ಮೇಲೆ ಹುಟ್ಟುವುದಕ್ಕೆ ನೂರು ವರ್ಷ ಕಳೆಯಿತು. ಹುಟ್ಟಿದ ಮೇಲೆ ಬ್ರಹ್ಮದೇವರನ್ನು ಕುರಿತು ಅವನು ತಪಸ್ಸಿನಲ್ಲಿ ನೂರು ವರ್ಷಗಳನ್ನು ಕಳೆದನು. ಕಶ್ಯಪರು ಪ್ರಹ್ಲಾದನು ಹುಟ್ಟುವುದಕ್ಕೆ ಮುಂಚೆ ಅಂದರೆ ಸುಮಾರು 200 ವರ್ಷಗಳ ಮುಂಚೆ ಪ್ರಹ್ಲಾದ ರಾಜನ ಮಹಿಮೆಯನ್ನು ಹೇಳಿದರು. ಪ್ರಹ್ಲಾದನು ಹುಟ್ಟುವುದಕ್ಕೆ ಮುಂಚೆ ಶ್ರೀಹರಿಯು "ನಿರ್ವೈರ, ಪ್ರಶಾಂತ, ಮಹಾತ್ಮನಾದವನು ಹುಟ್ಟುವನು. ಅವನ ಹೆಸರು ಪ್ರಹ್ಲಾದನೆಂದು" ಎಂಬುದಾಗಿ ಹೇಳಿದನು. ಪ್ರಹ್ಲಾದನು ಎಳೆಯ ಮಗುವಾಗಿದ್ದಾಗಲೇ ಧ್ಯಾನಯೋಗಿಯೆಂದೂ, ಐದು ವರ್ಷದ ಬಾಲಕನು ಬ್ರಹ್ಮಜ್ಞಾನಿಯೆಂದೂ ಜ್ಞಾನಿಗಳಾದ ನಾರದರು ಹೊಗಳಿರುವರು. ಜಗತ್ತಿನಲ್ಲಿ ಹೀಗೆ ಪ್ರಸಿದ್ಧನಾದವನು ಪ್ರಹ್ಲಾದನೊಬ್ಬನೇ ಇನ್ನಾರೂ ಇಲ್ಲ. ಆದ್ದರಿಂದಲೇ ನರಸಿಂಹದೇವರು ಪ್ರಹ್ಲಾದನನ್ನು "ನೀನು ಪ್ರತಿರೂಪಧೃಕ್" ಅಂದರೆ ಬಿಂಬಭೂತನು ಎಂದು ಹೇಳಿದುದು ಉತ್ಪ್ರೇಕ್ಷೆಯಲ್ಲ. ಇವನೇ ಶ್ರೀರಾಘವೇಂದ್ರಸ್ವಾಮಿಗಳಾಗಿ ಈಗಲೂ ಪ್ರಸಿದ್ಧರಾಗಿರುವರೆಂಬುದು ರಹಸ್ಯವೇನೂ ಅಲ್ಲ. ದೇವರು, ದೊಡ್ಡವರಿಂದ ಹೀಗೆ ಸ್ತುತ್ಯರಾದವರನ್ನು ಕುರಿತು ತುಚ್ಛವಾಗಿ ಮಾತಾಡುವವನು ವೈಷ್ಣವನೇ ಅಲ್ಲ. ಅಂತಹವನಿಗೆ ನಿತ್ಯನರಕ ತಪ್ಪಿದ್ದಲ್ಲ.

ದಿತಿಯು ಹೆರದೇ ಹೋದುದರಿಂದ ಜಗತ್ತಿನಲ್ಲಿ ಅಂಧಕಾರವು ವ್ಯಾಪಿಸಿತು. ದೇವತೆಗಳು ಬ್ರಹ್ಮದೇವರಲ್ಲಿ ಮೊರೆಯಿಟ್ಟರು.

**ಬ್ರಹ್ಮ :–** ದೇವತೆಗಳಿರಾ ! ನಿಮ್ಮೆಲ್ಲರಿಗೂ ಪೂರ್ವಜರಾದ ಸನಕಾದಿಗಳು ಒಂದು ದಿನ ವೈಕುಂಠಕ್ಕೆ ಹೋಗಿ ಶ್ರೀರಮಣನ ಅರಮನೆಯ ಆರು ಬಾಗಿಲುಗಳನ್ನು ದಾಟಿ ಜಯ ವಿಜಯರೆಂಬ ದ್ವಾರಪಾಲಕರಿದ್ದ ಏಳನೆಯ ಬಾಗಿಲಿನೊಳಗೆ ಪ್ರವೇಶಿ

ಸಿದರು. ಆ ದ್ವಾರಪಾಲಕರು ನಿಲ್ಲಿರೆಂದು ಹೇಳಿ ದಂಡದಿಂದ ತಡೆದರು. ಆಗ ಆ ಜಯ ವಿಜಯರಿಬ್ಬರೂ ಹರಿಗೆ ವಿರುದ್ಧವಾದ ನಡತೆಯುಳ್ಳವರಾಗಿದ್ದರು.

**ಸನಕಾದಿಗಳು** :- ನೀವಿಬ್ಬರೂ ಭೂಲೋಕದಲ್ಲಿ ಸಾಧನೆ ಮಾಡಿ, ಈ ಪದವಿಗೆ ಬಂದು ಬ್ರಹ್ಮಣ್ಯನಿಗೆ ವಿರುದ್ಧವಾದ ವ್ಯಾಪಾರ ಮಾಡಿದುದು ಅಯೋಗ್ಯವು. ಹರಿಭಕ್ತರಲ್ಲಿ ಇವರು ಬೇಕು, ಅವರು ಬೇಡವೆಂದು ವ್ಯತ್ಯಾಸಮಾಡುವಂತಿಲ್ಲ. ನಾವು ಹರಿಗೆ ಆಗದವರೆಂದು ತಡೆದಿರಾ ? ಅಥವಾ ನಮ್ಮಿಂದ ಹರಿಗೆ ತೊಂದರೆ ಯಾದೀತೆಂದೆ ? ಎರಡೂ ತಪ್ಪು. ಶಾಂತನೂ, ಆನಂದ ಸ್ವರೂಪಿಯೂ ಆದ ಹರಿಗೆ ಯಾರಲ್ಲೂ ವೈರವಿಲ್ಲ. ಶಕ್ತಿಪೂರ್ಣನಾದ ಅವನಿಗೆ ಪ್ರತಿದ್ವಂದ್ವಿಗಳಿಲ್ಲ. ಅಪ್ರಾಕೃತ ನಾದ ಆ ಪ್ರಭುವಿಗೆ ತೊಂದರೆ ಕೊಡುವವರಾರು ? ನಾವೇನೂ ಹರಿದ್ವೇಷಿಗಳಲ್ಲ. ನಮ್ಮೊಳಗಿರುವ ದೇವರು ವೈಕುಂಠದೊಳಗಿರುವ ದೇವರಿಗೆ ಭಯವುಂಟುಮಾಡಿಯಾ ನೆಂದು ನಮ್ಮನ್ನು ತಡೆದಿರಾ ? ಈ ಭೇದಜ್ಞಾನ ನಿಮಗೆ ಬಂದಿರುವುದರಿಂದ ನಿಮಗೆ ಅನರ್ಥ ತಪ್ಪುವುದಿಲ್ಲ. ಹೀಗೆ ನಮ್ಮೊಳಗಿರುವ ದೇವರು ಬೇರೆ. ಈ ಲೋಕ ದೊಳಗಿರುವ ದೇವರೇ ಬೇರೆ ಎಂದು ತಿಳಿದುದರಿಂದ ಬಂದ ಪಾಪದ ಫಲವಾಗಿ ನೀವಿಬ್ಬರೂ ಮೂರು ಬಾರಿ ಹುಟ್ಟುವ ಇಬ್ಬರು ಅಸುರರ ದೇಹದೊಳಿದ್ದು ಹುಟ್ಟಿರಿ.

**ಮೈತ್ರೇಯ** :- ಜಯವಿಜಯರು ನಮಿಸಿ "ನಮ್ಮ ಅಲ್ಪಾಪರಾಧಕ್ಕೆ ತಾವು ವಿಧಿಸಿದ ಮಹಾಶಿಕ್ಷೆ ಯುಕ್ತವಾಗಿದೆ. ಹಿಂದೆ ರಮಾಬ್ರಹ್ಮಾದಿಗಳನ್ನು ಹೀಗೆಯೇ ತಿರಸ್ಕರಿಸಿದ್ದೆವು. ಆ ಎಲ್ಲ ಪಾಪಗಳಿಗೂ ಇದು ಪ್ರಾಯಶ್ಚಿತ್ತವಾಗಲಿ ಎಂದು ತಾವು ಅನುಗ್ರಹಿಸಿರಿ. ಮೂಲ ರೂಪಿಗಳಾದ ನಮಗೆ ಈಗ ಬಂದಿದ್ದಂತೆ ಮಿಥ್ಯಾಜ್ಞಾನವು ಇನ್ನು ಮುಂದೆ ಬರದಿರುವಂತೆ ಅನುಗ್ರಹಿಸಿರಿ" ಎಂದು ಬೇಡಿದರು. ಇದನ್ನೆಲ್ಲ ಕೇಳಿದ ನಾರಾಯಣನು ಲಕ್ಷ್ಮಿಯೊಡನೆ ಮುಕ್ತಸ್ಥಾನದಿಂದ ಹೊರಟು ಈ ಏಳನೇ ಬಾಗಿಲಿಗೆ ನಡೆದು ಕೊಂಡೇ ಬಂದನು. ಶ್ರೀಹರಿಯ ಪ್ರಸನ್ನ ಮುಖ ವನ್ನು ನೋಡಿ ಸನಕಾದಿಗಳು ಆನಂದದಿಂದ ನಮಿಸಿದರು. ಹರಿಪಾದದಲಿದ್ದ ತುಳಸೀ ಗಂಧವನ್ನು ಆಘ್ರಾಣಿಸಿ ಹರ್ಷಹೊಂದಿ ರೋಮಾಂಚನ ಗಾತ್ರರಾದರು.

**ಸನಕಾದಿಗಳು** : ಅನಂತ ! ಮುಕುಂದ ! ನಿನ್ನಾಳುಗಳನ್ನು ಶಪಿಸಿದೆವು. ಅದರಿಂದ ಪಾಪವು ಬಂದಿದ್ದರೆ ಅದಕ್ಕೆ ನರಕ ಸದೃಶವಾದ ದುಃಖವು ನಮಗೆ ಬರುವುದು. ಇಂತಹ ದುಃಖವನ್ನು ನೀನು ನಮಗೆ ಕೊಡುವುದಾದರೆ ಅದನ್ನು ಅನು ಭವಿಸುವುದಕ್ಕೆ ನಾವು ಸಿದ್ಧರಿದ್ದೇವೆ. ಆದರೆ ಆಗಲೂ ನಿನ್ನ ನಾಮವು ನಮ್ಮ ನಾಲಗೆ ಯಲ್ಲಿ ಬರುತ್ತಿರಲಿ. ಕಿವಿಗಳು ನಿನ್ನ ಕಥೆಗಳನ್ನು ಕೇಳುತ್ತಿರಲಿ. ಮನಸ್ಸು ನಿನ್ನ ಪಾದ ವನ್ನು ಸ್ಮರಿಸುತ್ತಿರಲಿ. ಹೀಗಿದ್ದರೆ ಯಾವ ದುಃಖವನ್ನಾದರೂ ಅನುಭವಿಸಲು ಸಿದ್ಧ

ರಾಗಿರುವೆವು. (ಅಂದರೆ ದುಃಖಕ್ಕೆ ಭಾಗಿಯಾದಾಗಲೂ ಭಕ್ತಿಯು ಲೋಪವಾಗದೇ ಇದ್ದರೆ ಆನಂದೋದ್ರೇಕವೆಂಬ ಫಲವು ಬರುವುದು ಎಂದು ತಾತ್ಪರ್ಯ.)

ಪುರು ಹೂತನೇ! (ಬಹು ಯಶಸ್ವಿಯಾದ ಶ್ರೀಶನೇ !) ನೀನೀಗ ಪ್ರಕಟಿಸಿರುವ ಈ ರೂಪದರ್ಶನದಿಂದ ನೇತ್ರಗಳಿಗೆ ಪರಮಾನಂದವುಂಟಾಯಿತು. ಉತ್ಕೃಷ್ಟದರ್ಶನ ಕೊಟ್ಟ ನಿನ್ನ ಉಪಕಾರಕ್ಕೆ ಪ್ರತ್ಯುಪಕಾರವೆಂದರೆ ನಮಸ್ಕಾರ. ಅದನ್ನು ಸಲ್ಲಿಸುವೆವು. ನೀನೀರೂಪವನ್ನು ದುಷ್ಟರಿಗೆಂದೂ ಪ್ರಕಾಶಪಡಿಸುವುದಿಲ್ಲ.

## ಹದಿನಾರನೆಯ ಅಧ್ಯಾಯ ಮುಗಿದುದು

**ಹರಿ :** ಜಯವಿಜಯರು ನಿಮ್ಮನ್ನು ತಡೆದು ಅಪರಾಧ ಮಾಡಿದರು. ಪರಿವಾರದವರು ಮಾಡಿದ ಅಪರಾಧವನ್ನು ಯಜಮಾನನೇ ಮಾಡಿದಂತೆ. ಅದು ಕೀರ್ತಿನಾಶಕ. ನಾನು ಬ್ರಹ್ಮಣ್ಯ ದೇವನು. ಬ್ರಾಹ್ಮಣರಿಗೆ ಇವರು ಮಾಡಿದ ಅಪರಾಧವು ನನಗೆ ಮಾಡಿದಂತೆಯೇ ಆಯಿತು. ಬ್ರಾಹ್ಮಣರು ಸರ್ವದೇವತೆಗಳ ಸನ್ನಿಧಾನವುಳ್ಳವರಾದುದರಿಂದ ಬ್ರಹ್ಮಾದಿ ದೇವತೆಗಳಿಗೂ ಇವರು ಅಪರಾಧಿಗಳಾದರು. ಬ್ರಾಹ್ಮಣರ ಕುಲವು ಸರ್ವರಿಗೂ ಪೂಜ್ಯ. ಸೇವಕರ ಅಯೋಗ್ಯ ನಡತೆಯು ಅವರ ಸ್ವಾಮಿಯ ಕೀರ್ತಿಯನ್ನು ನಾಶ ಮಾಡುತ್ತದೆ. ಆದ್ದರಿಂದ ನಿಮ್ಮನ್ನು ಬೇಡುವೆನು. ಹರಿಕಥಾಶ್ರವಣ ಮಾಡುವವರನ್ನೆಲ್ಲ ಪಾವನ ಮಾಡಬಲ್ಲವನು ನಾರಾಯಣನು ಎಂಬ ಕೀರ್ತಿಗೆ ಬ್ರಾಹ್ಮಣರೇ ಕಾರಣರು. ಆದ್ದರಿಂದಲೇ ನಾನು ಬ್ರಹ್ಮಜ್ಞಾನಿಗಳಿಗೆ ಎಂದೂ ಪ್ರತಿಕೂಲ ವ್ಯಾಪಾರವನ್ನು ಮಾಡುವುದೇ ಇಲ್ಲ. ಹಾಗೇನಾದರೂ ನನ್ನ ಬಾಹುಗಳು (ಬಾಹುಗಳಿಂದ ಉತ್ಪನ್ನರಾದ ಕ್ಷತ್ರಿಯ ವರ್ಣದವರು) ಮಾಡಿದರೆ ನಾನು ಅವುಗಳನ್ನು ಕತ್ತರಿಸಲು ಸಿದ್ಧನಿರುವೆನು. ನಾನು ವಿಪ್ರರ ಪಾದ ಸೇವೆಯಿಂದ ಪಾಪರಹಿತನಾಗಿ ಐಶ್ವರ್ಯವಂತನಾದೆನು. ನಾನು ವಿರಕ್ತನಾದರೂ (ಸ್ವರಮಣನಾದರೂ) ಲಕ್ಷ್ಮಿಯು ನನ್ನ ಬಿಟ್ಟಿರದಂತಾಯಿತು. ವಿಪ್ರನಿಗೆ ಭೋಜನವನ್ನು ಮಾಡಿಸಿದರೆ ನಾನು ತೃಪ್ತನಾಗುವ ಹಾಗೆ ಯಜ್ಞದಲ್ಲಿ ಹವಿರ್ದಾನದಿಂದ ತೃಪ್ತನಾಗುವುದಿಲ್ಲ. ನಾನು ಪಾವನತಮನಾದರೂ ವಿಪ್ರಪಾದಧೂಳಿಯನ್ನು ಕಿರೀಟಗಳ ಮೇಲೆ ಧರಿಸುವೆನೆಂದ ಬಳಿಕ ಯಾವನು ತಾನೇ ವಿಪ್ರರನ್ನು ವಹಿಸಿಕೊಳ್ಳದೆ, ಪೂಜಿಸದೇ ಅಪರಾಧವನ್ನು ಸಹಿಸದೇ ಇದ್ದಾನು ?

**ವಿಶೇಷ :** ಶ್ರೀಹರಿಯು ಗುಣಪರಿಪೂರ್ಣನು. ಅವನಿಗೆ ಎಂದೂ ವಿಪ್ರರ ಸೇವೆಯಿಂದ ಯಾವ ಲಾಭವೂ ಆಗಬೇಕಾದ್ದಿಲ್ಲ. ಅಜ್ಞಜನರಿಗೆ ಭ್ರಾಂತಿಯನ್ನುಂಟು ಮಾಡಲು ಹೀಗೆ ಮಾತಾಡಿರುವನೆಂದು ತಿಳಿಯಬೇಕು. ಇತರರು ವಿಪ್ರರ ಸೇವೆಯನ್ನು

ಮಾಡಿದರೆ ಹರಿಯು ಅನುಗ್ರಹಿಸುವನೆಂಬುದನ್ನು ಸಜ್ಜನರು ತಿಳಿಯಲಿ ಎಂಬುದ ಕ್ಕಾಗಿ ಶ್ರೀಹರಿಯು ಹೀಗೆ ವಿಡಂಬನೆ ಮಾಡಿರುವನೆಂದು ತಿಳಿಯುವುದೇ ಯಥಾರ್ಥ ಜ್ಞಾನವೆನಿಸುವುದು.

**ಶ್ರೀಹರಿ :** ವಿಪ್ರರ ಹಿಂಸಕನನ್ನು ಯಮಲೋಕದ ಹದ್ದುಗಳು ತಿಂದು ತೇಗುವುವು. ನನ್ನ ಹಾಗೆ ಪ್ರೇಮದಿಂದ ಬ್ರಾಹ್ಮಣರನ್ನು ಪೂಜಿಸುವವರಿಗೆ ನಾನು ವಶನಾಗುವೆನು. ಬ್ರಾಹ್ಮಣ ವಿರೋಧಿಗಳೇ ನನ್ನ ವಿರೋಧಿಗಳು. ಆದ್ದರಿಂದ ನಿಮ್ಮಲ್ಲಿ ಅಪರಾಧ ಮಾಡಿದ ಜಯವಿಜಯರು ಈಗಲೇ ಅಸುರರಾಗಿ ಹುಟ್ಟಲಿ. ಆದರೆ ಅವರು ಬೇಗ ನನ್ನ ಬಳಿಗೆ ಬರಲಿ. ಇದು ನಿಮಗೂ ಒಪ್ಪಿಗೆಯೆಂದೇ ಭಾವಿಸುವೆನು.

**ಸನಕಾದಿಗಳು :** (ಹರಿಯ ಮಾತುಗಳನ್ನು ಕೇಳಿ ಶಾಂತರಾದರು. ಆನಂದಿ ಸಿದರು. ಆದರೆ ಹರಿಯ ಮಾತುಗಳ ಆಳವಾದ ಅಭಿಪ್ರಾಯವನ್ನು ತಿಳಿಯದಾದರು.) ದೇವಾ ! ವಿಪ್ರರಿಗೆ ನೀನೇ ಕುಲಸ್ವಾಮಿಯು, ಅವರಿಂದ ಅರ್ಚಿತನಾದ ನಿನಗೆ ಅವರು ಪರದೇವತೆಯೆ ? ಅವರ ಅನುಗ್ರಹವನ್ನು ಪಡೆಯಬೇಕೆ ? ಇತರರು ಬ್ರಾಹ್ಮಣರನ್ನು ಪೂಜಿಸಬೇಕೆಂದೇ ಅವರನ್ನು ಪ್ರಶಂಸಿಸಿದಿ. ವಿಪ್ರರು ಮಾಡುವ ಧರ್ಮಗಳನ್ನು ಕಪಿ ಲಾದ್ಯವತಾರಗಳಲ್ಲಿ ರಕ್ಷಿಸುವೆ ನಿನ್ನ ಅನುಗ್ರಹದಿಂದಲೇ ಜ್ಞಾನಿಗಳು ಸಂಸಾರವನ್ನು ದಾಟುವರು ಹೀಗಿರುವಾಗ ವಿಪ್ರರಿಂದ ನೀನು ಪಡೆಯುವ ಅನುಗ್ರಹವು ಎಂತಹುದು? ಲಕ್ಷ್ಮೀದೇವಿಯು ನಿನ್ನ ಭಕ್ತರಲ್ಲಿ ಸರ್ವೋತ್ತಮಳು. ಇಂತಹವಳು ಬ್ರಾಹ್ಮಣರ ಪಾದಸ್ಪರ್ಶದಿಂದ ನಿನ್ನನ್ನು ಅಗಲದೇ ಇರುವಳೆ? ನೀನು ಮಹಾಭಾಗ್ಯವಂತ ನಾದೆಯಾ? ಇತರರು ವಿಪ್ರರನ್ನು ಭಕ್ತಿಯಿಂದ ಪೂಜಿಸಿ ಉದ್ಧೃತರಾಗಲಿ ಎಂದೇ ಹೀಗೆ ನಡೆದು ತೋರಿಸುತ್ತಿರುವೆ. ನಾವು ಇವರಿಗೆ ಕೊಟ್ಟ ಶಾಪವನ್ನು ಬೇಕಾದರೆ ರದ್ದುಮಾಡಿ ಇವರನ್ನು ಇಲ್ಲಿಯೇ ಇಟ್ಟುಕೋ. ನೀನು ಮಾಡಿದ್ದೇ ನಮಗೂ ಸಮ್ಮತ. ನಿರಪರಾಧಿಗಳಾದ ದ್ವಾರಪಾಲಕರನ್ನು ದೋಷಿಗಳೆಂದು ಭಾವಿಸಿದ ನಮ್ಮನ್ನು ಶಿಕ್ಷಿಸು.

**ನಾರಾಯಣ :** ವಿಪ್ರರೇ! ಜಯವಿಜಯರು ತಡವಿಲ್ಲದೆ ಅಸುರರ ದೇಹ ವನ್ನು ಸೇರಲಿ. ಆದರೆ ಅಲ್ಲಿ ದ್ವೇಷಿಸುವ ದೈತ್ಯಜೀವರ ಸಂಗಡವಿದ್ದರೂ ನನ್ನಲ್ಲಿ ಏಕಾಗ್ರತೆಯಿಂದ ಸಹಿತವಾದ ಭಕ್ತಿಯನ್ನ ಹೊಂದಿ ನನ್ನ ಬಳಿಗೆ ಬರುವರು. ನೀವು ಕೊಟ್ಟ ಶಾಪವನ್ನು ನಾನು ಕೊಟ್ಟಂತೆಯೇ ಸರಿ.

**ಬ್ರಹ್ಮ .** ಸನಕಾದಿಗಳು ಹರಿಯ ದರ್ಶನದಿಂದ ಆನಂದಿಸಿ, ನಮಿಸಿ, ಅವನನ್ನೇ ಕೊಂಡಾಡುತ್ತ ಹೊರಟು ಹೋದರು. ಜಯವಿಜಯರಿಗೆ ಆಗಲೇ ಕಾಂತಿ

ಹೋಯಿತು. ಗರ್ವ ಅಡಗಿತು. ವೈಕುಂಠದಿಂದ ಜಾರಿದರು. ಆ ಜಯವಿಜಯರೇ ಈಗ ದಿತಿಯ ಉದರದಲ್ಲಿ ಕಶ್ಯಪರ ವೀರ್ಯವನ್ನಾಶ್ರಯಿಸಿ ಪ್ರವೇಶಿಸಿರುವರು. ಅಸುರ ದೇಹಗತರಾದ ಆ ಇಬ್ಬರ ತೇಜಸ್ಸಿನಿಂದ (ಬಲದಿಂದ) ದೇವತೆಗಳಿರಾ! ನಿಮ್ಮ ಶಕ್ತಿಯೆಲ್ಲ ಕುಗ್ಗಿದೆ, ಇದಕ್ಕೆ ಹರಿಯು ಪ್ರತಿಕಾರವನ್ನು ಮಾಡುವನು. ಅವನೇ ಜಗತ್ತಿನ ರಕ್ಷಣೆ, ನಾಶ, ಸೃಷ್ಟಿಗಳಿಗೆ ಮುಖ್ಯ ಕಾರಣನು. ಅವನು ಮುಂದೆ ಏನು ಮಾಡುವನೆಂಬುದನ್ನು ನಾವು ಯಾರೂ ತಿಳಿಯಲಾರೆವು. ನಮ್ಮ ಪದವಿಗಳೆಲ್ಲ ಅವನ ಅಧೀನಗಳು. ನಮಗೆಲ್ಲ ಕ್ಷೇಮವನ್ನುಂಟು ಮಾಡಿಯೇ ಮಾಡುವನು, ಅವನು ಹಾಗೆ ಹೀಗೆ ಎಂಬ ನಮ್ಮ ವಿಮರ್ಶೆಗಳಿಂದ ಯಾವ ಪ್ರಯೋಜನವೂ ಆಗಲಾರದು. "ಚಿತ್ತ ಹರಿ ಚಿತ್ತ ನರಚಿತ್ತವಿದ್ದಂತೆ ನಡೆಯದು ಲವಲೇಶ."

### ಹದಿನೇಳನೆಯ ಅಧ್ಯಾಯ ಮುಗಿದುದು

ದೇವತೆಗಳು ಅಂಧಕಾರಕ್ಕೆ ಕಾರಣ ಮತ್ತು ಅದರ ಪರಿಹಾರವನ್ನು ಬ್ರಹ್ಮದೇವರಿಂದ ಕೇಳಿ ಸ್ವರ್ಗಕ್ಕೆ ಹೋದರು. ದಿತಿಯು ಅವಳಿ ಮಕ್ಕಳನ್ನು ಹೆತ್ತಳು. ಆಗ ತ್ರಿಲೋಕಗಳಿಗೂ ಭಯವುಂಟಾಗುವ ಉತ್ಪಾತಗಳುಂಟಾದುವು. ಆ ದೈತ್ಯರು ಹುಟ್ಟಿದ ಕೂಡಲೇ ವಜ್ರಶರೀರಿಗಳಾಗಿ ಬೆಟ್ಟದಂತೆ ಬೆಳೆದು ನಿಂತರು. ಅವರಿಗೆ ಕಶ್ಯಪರು ಹಿರಣ್ಯಕಶಿಪು, ಹಿರಣ್ಯಾಕ್ಷನೆಂದು ಹೆಸರಿಟ್ಟರು. ಹಿರಣ್ಯ ಕಶಿಪುವು ಬ್ರಹ್ಮದೇವರಿಂದ ವರಪಡೆದು ಅವಧ್ಯನಾಗಿ ಮೂರು ಲೋಕಗಳನ್ನೂ ವಶಮಾಡಿಕೊಂಡನು.

ಹಿರಣ್ಯಾಕ್ಷನು ಅಣ್ಣನಿಗೆ ಹಿತ ಮಾಡಬೇಕೆಂದು ಯುದ್ಧ ಮಾಡಲು ಬಯಸಿ, ಗದೆಯನ್ನು ಹಿಡಿದು ವೀರರನ್ನು ಹುಡುಕುತ್ತ ದೇವಲೋಕಕ್ಕೆ ಹೋದನು. ಇದನ್ನು ಕಂಡ ದೇವತೆಗಳು ನಡುಗಿ ಅವಿತುಕೊಂಡರು. ಹಿರಣ್ಯಾಕ್ಷನು ನಕ್ಕು ಸಮುದ್ರದಲ್ಲಿ ವಿಹರಿಸಿ ವಿಭಾವರೀ ಎಂಬ ವರುಣನ ರಾಜಧಾನಿಗೆ ಹೋಗಿ ವರುಣನನ್ನು ಯುದ್ಧಕ್ಕೆ ಕರೆದನು.

**ವರುಣ ;** ನಾನೀಗ ಯುದ್ಧದ ಸುದ್ದಿಗೇ ಹೋಗದಷ್ಟು ಶಕ್ತಿಗುಂದಿ ಉಪಶಾಂತನಾಗಿದ್ದೇನೆ. ವರಾಹನು ನಿನಗೆ ಭೇಟಿಯಾಗುವನು. ನೀನು ಅವನನ್ನು ಇದಿರಿಸಿ, ಅವನಿಂದ ಸಂಹೃತನಾಗಿ ನಾಯಿಗಳ ಪಾಲಾಗುವೆ.

### ಹದಿನೆಂಟನೆಯ ಅಧ್ಯಾಯ ಮುಗಿದುದು

ಹಿರಣ್ಯಾಕ್ಷನು ವರುಣನ ಮಾತನ್ನು ಲೆಕ್ಕಿಸದೆ, ಹರಿಯು ರಸಾತಳಕ್ಕೆ ಹೋಗಿರುವನೆಂದು ನಾರದರಿಂದ ತಿಳಿದು ಅಲ್ಲಿಗೆ ಹೋದನು. ಅಲ್ಲಿ ದಾಡೆಯಿಂದ ಭೂಮಿಯನ್ನು ಎತ್ತುತ್ತಿದ್ದ ವರಾಹದೇವರನ್ನು ನೋಡಿ 'ಇದು ಕಾಡುಹಂದಿ. ನಾರದರು ನಿನಗೆ ಪ್ರತಿವೀರ ಇದು' ಎಂದು ಹೇಗೆ ಹೇಳಿದರು ? ಎಂದು ಹಾಸ್ಯ ಮಾಡಿ ನಕ್ಕನು.

**ಹಿರಣ್ಯಾಕ್ಷ** :- ಮೂಢ ! ಭೂಮಿಯನ್ನಿಳಿಸಿ ಬಾ ಯುದ್ಧಕ್ಕೆ. ಬ್ರಹ್ಮನು ಈ ಭೂಮಿಯನ್ನು ರಸಾತಳವಾಸಿಗಳಾದ ನಮಗೆ ಕೊಟ್ಟಿರುವನು. ನಮ್ಮ ದಾಯಾದಿಗಳಾದ ದೇವತೆಗಳು ನಿನ್ನಲ್ಲಿ ಮರೆಬಿದ್ದಿರುವರೋ ಹೇಗೆ ? ನಮ್ಮನ್ನು ಕೊಲ್ಲಲು ನಾರಾಯಣನಾದ ನೀನು ಹಂದಿಯ ವೇಷವನ್ನು ಹಾಕಿರುವೆ. ನೀನಿಂದು ಬದುಕುವಂತಿಲ್ಲ. ಗದೆಯಿಂದ ನಿನ್ನನ್ನು ಕೊಲ್ಲುವೆನು. ನಿನ್ನನ್ನು ಪೂಜಿಸುವ ಋಷಿಗಳೂ, ದೇವತೆಗಳೂ ದಿಕ್ಕಿಲ್ಲದೆ ಸಾಯುವರು.

(ಹರಿಯು ಇದನ್ನು ಕೇಳಿಯೂ ಸಿಟ್ಟಾಗದೆ ಭೂಮಿಯನ್ನು ತೆಗೆದುಕೊಂಡು ಮೇಲಕ್ಕೆ ಹೊರಟನು. ಹಿರಣ್ಯಾಕ್ಷನು ಅವನ ಬೆನ್ನು ಹತ್ತಿ ಬಂದು "ಎಲಾ ! ಹೀಗೆ ಹೆದರಿ ಯುದ್ಧದಲ್ಲಿ ಓಡುವುದು ಯೋಗ್ಯವಲ್ಲ" ಎಂದನು. ಹರಿಯು ಇವನ ಮಾತಿಗೆ ಸೊಪ್ಪು ಹಾಕದೆ ತನ್ನ ಕಾರ್ಯದಲ್ಲೇ ಆಸಕ್ತನಾಗಿ ಭೂಮಿಯನ್ನು ತಂದು ನೀರಿನಲ್ಲಿ ಸರಿಯಾದ ಸ್ಥಳದಲ್ಲಿ ಸ್ಥಾಪಿಸಿ, ಅದು ಸ್ಥಿರವಾಗಿ ನಿಲ್ಲಲು ಅದರಲ್ಲಿ ತನ್ನ ಶಕ್ತಿಯನ್ನು ಸ್ಥಾಪಿಸಿದನು. ಬಳಿಕ ಮುಗುಳು ನಗೆ ನಗುತ್ತ ಮಾತಾಡುವನು.)

**ವರಾಹ** ;- ಎಲಾ ! ಅಭದ್ರನೇ ! ನಾವು ವನಗೋಚರ ಮೃಗಗಳು, ನಿಮ್ಮಂಥ ನಾಯಿಗಳನ್ನೇ ಹುಡುಕುವೆವು. ನೀನು ನಿನ್ನ ಹೆಗ್ಗಳಿಕೆಯನ್ನು ಹೊಗಳಿಕೊಂಡುದನ್ನು ವೀರರು ಮೆಚ್ಚುವುದಿಲ್ಲ. ಬ್ರಹ್ಮದತ್ತವೆಂದು ನೀನು ಹೇಳಿದ ನಿಕ್ಷೇಪವನ್ನು ನಾವು ಅಪಹರಿಸತಕ್ಕವರೇ ಸರಿ, ನಮಗೆ ನಾಚಿಕೆಯಿಲ್ಲ. ನಿನ್ನ ಗದೆಯಿಂದ ಓಡಿಸಲ್ಪಡುವವರು. ನಿನ್ನೊಡನೆ ವೈರ ಬೆಳಸಿ ನಾವೆಲ್ಲಿಗೆ ಹೋದರೆ ತಾನೆ ಬದುಕುವೆವು ? ನಾವೋ ಅಲ್ಪ ಬಲರು. ಹೋಗಲು ಬೇರೆ ಸ್ಥಳವಿಲ್ಲ. ಕೈಲಾದಮಟ್ಟಿಗೆ ಹೆಣಗಾಡಬೇಕೆಂದು ನಿನ್ನಿದಿರಿಗೆ ನಿಂತಿರುವೆವು. ನಮಗೆ ನೀನು ದ್ರೋಹ ಮಾಡಿರುವೆ. ಬೇಗ ನಿಲ್ಲು ಯುದ್ಧಕ್ಕೆ. ಆಡಿದಂತೆ ನಡೆಸದವನು ಅಯೋಗ್ಯನಾದ್ದರಿಂದ ನೀನು ನಮ್ಮನ್ನು ಕೊಂದು ನಿಮ್ಮವರ ಶೋಕವನ್ನು ಪರಿಹರಿಸು.

**ಬ್ರಹ್ಮ** :- ಇದನ್ನು ಕೇಳಿ ಹಿರಣ್ಯಾಕ್ಷನು ಯುದ್ಧಕ್ಕೆ ನಿಂತನು. ಭಯಂಕರ ಯುದ್ಧವಾಯಿತು. ನಾನು ಅಲ್ಲಿಗೆ ಹೋಗಿ ಹರಿಯನ್ನು ಹೀಗೆ ಪ್ರಾರ್ಥಿಸಿದೆ :—

ದೇವ ! ಈ ಅಸುರನು ನಮ್ಮಿಂದ ಅವಧ್ಯತ್ವವರವನ್ನು ಪಡೆದು ಸುರ, ವಿಪ್ರ, ಗೋವು, ನಿರಪರಾಧಿ ಪ್ರಾಣಿಗಳು ಇವರ ದ್ರವ್ಯಾದಿಗಳನ್ನು ಅಪಹರಿಸಿರುವನು. ಯಜ್ಞವಿನಾಶಕನು. ಭಯಂಕರನು. ಧರ್ಮ ಕಂಟಕನು. ಇಂಥ ಪಾಪಿಯೊಡನೆ ಹುಡುಗಾಟ ಸಾಕು. ಇವನಿಗೆ ಅನುಕೂಲಿಸುವ ಕಾಲ ಸಮೀಪಿಸುತ್ತಿರುವುದು. ಆ ಕಾಲ ಬಂದರೆ ಈ ದುಷ್ಟನು ಮತ್ತಷ್ಟು ಬಲಶಾಲಿಯಾಗುವನು. ಈಗ ನಡುಹಗಲಾದ್ದರಿಂದ ಅಭಿಜಿತ್ತೆಂಬ ಯೋಗ ಸಹಿತವಾದ ಮುಹೂರ್ತವಿದು. ಇವನನ್ನು ಈಗಲೇ ಕೊಂದು ಸಜ್ಜನರಿಗೆ ಸುಖವನ್ನುಂಟು ಮಾಡು.

**ಹತ್ತೊಂಭತ್ತನೆಯ ಅಧ್ಯಾಯ ಮುಗಿದುದು**

ಯುದ್ಧಾರಂಭವಾಯಿತು. ಹರಿಯು ಎಸೆದ ಗದೆಯನ್ನು ದೈತ್ಯನು ತನ್ನ ಗದೆಯಿಂದ ಹೊಡೆದು ನೆಲಕ್ಕುರುಳಿಸಿದನು. ಹರಿಯು ಆಗ ನಿರಾಯುಧನೆಂದು ದೈತ್ಯನು ಅವನ ಮೇಲೆ ಕೈಮಾಡಲಿಲ್ಲ. ಹರಿಯು ಚಕ್ರವನ್ನು ಸ್ಮರಿಸಿದನು. ಅದು ಕೂಡಲೇ ಬಂದಿತು. ದೈತ್ಯನು ಗದೆಯನ್ನು ಎಸೆದನು. ಹರಿಯು ಅದನ್ನು ಹಿಡಿದನು ದೈತ್ಯನ ಮುಖವು ಸಪ್ಪೆಯಾಯಿತು. ಅವನು ಶೂಲವನ್ನೆಸೆದನು. ಹರಿಯು ಅದನ್ನು ಚಕ್ರದಿಂದ ಪುಡಿಪುಡಿ ಮಾಡಿದನು. ದೈತ್ಯನು ವರಾಹನ ಎದೆಗೆ ಗುದ್ದಿ ಕಣ್ಮರೆಯಾದನು ಮತ್ತು ರಾಕ್ಷಸಮಾಯೆಗಳನ್ನು ಸೃಷ್ಟಿಸಿದನು. ಹರಿಯು ಚಕ್ರವನ್ನು ಬಿಟ್ಟನು. ಅದರಿಂದ ಮಾಯೆಗಳೆಲ್ಲವೂ ಹೋದುವು. ಆ ಕಡೆ ದಿತಿಯ ಎದೆ ನಡುಗಿತು. ಕಶ್ಯಪರು ಹೇಳಿದ್ದ ಮಾತು ನೆನಪಿಗೆ ಬಂತು. ಅವಳ ಸ್ತನದಿಂದ ರಕ್ತವು ಸುರಿಯಲಾರಂಭಿಸಿತು ಈ ಕಡೆ ದೈತ್ಯನು ಹತ್ತಿರ ಬಂದು ಹರಿಯನ್ನು ತನ್ನ ತೋಳುಗಳ ಮಧ್ಯೆ ಸಿಕ್ಕಿಸಿಕೊಂಡು ನಿಂತನು. ಆದರೆ ಬ್ರಹ್ಮಾದಿಗಳಿಗೆ ನಿಯಾಮಕನಾದ ಹರಿಯು ಅವನ ತೋಳುಗಳಿಂದ ಹೊರಗೆ ನಿಂತುದನ್ನು ಅಸುರನು ಕಂಡು ಗುದ್ದಿದನು. ವರಾಹದೇವನು ಆಗ ತನ್ನ ಕೈಯಿಂದ ದೈತ್ಯನ ಕಿವಿಯ ಬುಡದಲ್ಲಿ ಹೊಡೆದನು. ಈ ಪೆಟ್ಟನ್ನು ತಡೆಯಲಾರದೆ ಹಿರಣ್ಯಾಕ್ಷನು ನಡುಗಿ, ಕಣ್ಣುಗುಡ್ಡೆಗಳು ಹೊರಬಂದು, ಬುಡಕಡಿದ ಮರದಂತೆ ದೊಪ್ಪನೆ ಕೆಳಗೆ ಬಿದ್ದು ಸತ್ತನು. ಆಗ ಬ್ರಹ್ಮಾದಿ ದೇವತೆಗಳು "ಆಹಾ ! ಎಂಥ ಸಾವು ? ಹರಿಯನ್ನು ನೋಡುತ್ತ ದೇಹ ಬಿಟ್ಟನಲ್ಲ ! ಜಯ ವಿಜಯರು ದ್ವಾರಪಾಲಕರು; ವಿಪ್ರರ ಶಾಪದಿಂದ ದೈತ್ಯರ ದೇಹ ಸೇರಿರುವರು. ಕೆಲವು ಜನ್ಮವೆತ್ತಿ ಸಾಧನೆ ಮಾಡಿ ವೈಕುಂಠದಲ್ಲಿ ಮುಕ್ತಸ್ಥಾನವನ್ನು ಹೊಂದಲಿ" ಎಂದು ಹರಸಿದರು. ಆ ದೇವತೆಗಳು "ಶ್ರೀಹರೇ ! ಲೋಕಕಂಟಕನನ್ನು ಕೊಂದು ನಮ್ಮನ್ನು ಸಂರಕ್ಷಿಸಿದೆ" ಎಂದು ಸ್ತುತಿಸಿದರು.

**ಮೈತ್ರೇಯ :** ವಿದುರ ! ವರಾಹ ಚರಿತ್ರೆಯನ್ನು ನಾನು ಕೇಳಿದ್ದಂತೆ ನಿನಗೆ ಹೇಳಿರುವೆನು.

**ಶುಕ :** ಪರೀಕ್ಷಿದ್ರಾಜನೇ! ಇದನ್ನು ಕೇಳಿದ ವಿದುರನು ಪರಮಾನಂದವನ್ನು ಹೊಂದಿದನು. ಈ ಕಥೆಯನ್ನು ಭಕ್ತಿಯಿಂದ ಕೇಳುವವರು ಮುಕ್ತರಾಗುವರು.

**ಇಪ್ಪತ್ತನೆಯ ಅಧ್ಯಾಯ ಮುಗಿದುದು**

**ವಿದುರ :** ಬ್ರಹ್ಮದೇವರು ಪ್ರಜೇಶ್ವರರನ್ನು ಸೃಷ್ಟಿಸಿದ ಬಳಿಕ ಮತ್ತೆ ಯಾವುದನ್ನು ಸೃಷ್ಟಿಸಿದರು ?

**ಮೈತ್ರೇಯ :** ಬ್ರಹ್ಮದೇವರು ಆ ಕಮಲದಿಂದ 14 ಲೋಕಗಳನ್ನು ಸೃಷ್ಟಿಸಿದರು. ತಾವು ಸೃಷ್ಟಿಸುವ ಪದಾರ್ಥಗಳ ಸ್ವಭಾವಗಳನ್ನು ವ್ಯಕ್ತಮಾಡಲು

ಅವುಗಳನ್ನು ಸೃಷ್ಟಿಸುವಾಗ ಅವುಗಳಿಗೆ ತಕ್ಕ ಬಾಹ್ಯದೇಹಗಳನ್ನು ಪಡೆದು ಅವುಗಳನ್ನು ಬಿಟ್ಟು ಅವರವರಿಗೇ ಕೊಟ್ಟರು. ಅವರು ಛಾಯೆಯೆಂಬ ದೇಹವನ್ನು ಪಡೆದರು. ಅದರಿಂದ ತಾಮಿಸ್ರ ಮೊದಲಾದ ಐದು ಭಾಗಗಳುಳ್ಳ ಅವಿದ್ಯೆಯನ್ನು ಸೃಷ್ಟಿಸಿದರು. ಆ ಛಾಯಾದೇಹವು ಕೇವಲ ಕತ್ತಲೆಯಾಗಿತ್ತು. ಅದಕ್ಕೆ ರಾತ್ರಿಯೆಂದೂ ಹೆಸರು. ಈ ಛಾಯಾ ದೇಹದಿಂದ ರಾಕ್ಷಸರನ್ನು ಸೃಷ್ಟಿಸಿ ಆ ದೇಹವನ್ನು ಬಿಟ್ಟುಬಿಟ್ಟರು. ಅದು ಹಸಿವು, ನೀರಡಿಕೆಗಳಿಗೆ ಕಾರಣವಾಗಿತ್ತು. ಸೃಷ್ಟರಾಗಿದ್ದ ಯಕ್ಷರಾಕ್ಷಸರು ರಾತ್ರಿಯನ್ನು ತಮಗಾಗಿ ತೆಗೆದುಕೊಂಡರು. ಅವರನ್ನು ಹಸಿವು, ಬಾಯಾರಿಕೆಗಳು ಕಾಡಿದುವು. 'ಇವನನ್ನು ಉಳಿಸಬೇಡಿ, ತಿಂದುಬಿಡಿ' ಎಂದು ಕೂಗುತ್ತ ಬ್ರಹ್ಮದೇವರನ್ನು ತಿನ್ನಲು ಓಡಿಬಂದರು. ಬ್ರಹ್ಮದೇವರಿಗೆ ಯಾವ ಬಗೆಯ ಖೇದವು ಇಲ್ಲವಾದರೂ ಮೋಹಗೊಳಿಸಲು ಖಿನ್ನರಂತೆ ಕಾಣಿಸಿಕೊಂಡರು. 'ತಿನ್ನಿರಿ' ಎಂದವರು ರಾಕ್ಷಸರಾಗಿ, 'ರಕ್ಷಿಸಿರಿ' ಎಂದವರು ಯಕ್ಷರಾಗಿ ನನ್ನ ಮಕ್ಕಳಾಗುವಿರಿ—ಎಂದು ಹೇಳಿ ಸಮಾಧಾನ ಮಾಡಿದರು.

ಬಳಿಕ ಬ್ರಹ್ಮದೇವರು ಪ್ರಭೆಯೆಂಬ ಪ್ರಕಾಶಮಾನವಾದ ದೇಹವನ್ನು ತೆಗೆದುಕೊಂಡು ಅದರಿಂದ ದೇವತೆಗಳನ್ನು ಸೃಷ್ಟಿಸಿದರು. ವಿದ್ಯೆಯೆಂಬ ಮತ್ತೊಂದು ಹೆಸರುಳ್ಳ ಈ ದೇಹವನ್ನು ಬಿಟ್ಟರು. ದೇವತೆಗಳು ಅದನ್ನು ತಮ್ಮದಾಗಿ ಮಾಡಿಕೊಂಡರು. ಅದಕ್ಕೆ ಹಗಲು ಎಂದು ಹೆಸರಾಯಿತು. ಆದ್ದರಿಂದ ಹಗಲಿನಲ್ಲಿ ದೇವತಾ ಕಾರ್ಯಗಳೂ, ರಾತ್ರಿಯಲ್ಲಿ ರಾಕ್ಷಸ ಕಾರ್ಯಗಳೂ ನಡೆಯುವಂತಾಯಿತು.

ಬ್ರಹ್ಮದೇವರು ಸಾಧನೆಗೆ ವಿರುದ್ಧವಾದ ಜಘನವೆಂಬ ಸ್ತ್ರೀದೇವತೆಯನ್ನು ಪಡೆದರು. ಅದರಿಂದ ವಿಷಯಾಸಕ್ತ ಅಸುರರನ್ನು ಪಡೆದರು. ಅವರು ಬ್ರಹ್ಮದೇವರನ್ನೇ ಮೈಥುನಕಾರ್ಯಕ್ಕಾಗಿ ಅಪೇಕ್ಷಿಸಿದರು ಮತ್ತು ಅಟ್ಟಿಸಿಕೊಂಡೂ ಹೊರಟರು. ಹರಿಸಂಕಲ್ಪದಂತೆ ಬ್ರಹ್ಮದೇವರು ನಾರಾಯಣನಲ್ಲಿ ಮರೆಬಿದ್ದು ಪಾಹಿ ಎಂದು ಪ್ರಾರ್ಥಿಸಿದರು. ಆ ದೇಹ ಬಿಡುವಂತೆ ಹರಿಯು ಹೇಳಿದನು. ಅದರಂತೆ ಬ್ರಹ್ಮದೇವರು ಸಂಧ್ಯೆಯೆನಿಸುವ ಆ ಜಘನದೇಹವನ್ನು ಬಿಟ್ಟುಬಿಟ್ಟರು. ಹರಿಯು ಅದನ್ನು ಒಬ್ಬ ಸುಂದರಿಯನ್ನಾಗಿ ಮಾಡಿದನು. ಅಸುರರು ಅವಳ ಲಾವಣ್ಯವನ್ನು ನೋಡಿ ಮೋಹಿತರಾಗಿ, ಆ ಸಾಯಂಸಂಧ್ಯೆಯನ್ನು ಸ್ತ್ರೀಯೆಂದೇ ತಿಳಿದು ಆ ಶರೀರವನ್ನು ಗ್ರಹಿಸಿದರು.

ಬಳಿಕ ಬ್ರಹ್ಮದೇವರು ಶೃಂಗಾರ ಚೇಷ್ಟೆಗಳಿಂದ ತುಂಬಿದ ನಗುವನ್ನು ನಕ್ಕು ಕಾಂತಿಯೆಂಬ ಮತ್ತೊಂದು ದೇಹವನ್ನು ಪಡೆದರು. ತನ್ನನ್ನು ತಾನೇ ನೋಡಿ ಮೂಸಿ ನೋಡುತ್ತಿದ್ದ ಆ ದೇಹದಿಂದ ಗಂಧರ್ವರನ್ನೂ, ಅಪ್ಸರಸ್ತ್ರೀಯರನ್ನೂ ಸೃಷ್ಟಿಸಿದರು. ಕಾಂತಿಯುಕ್ತವಾದ ಆ ದೇಹವನ್ನು ಜ್ಯೋತ್ಸ್ನೆಯೆಂದು ಕರೆದರು.

ಅವರು ಬೆಳದಿಂಗಳಂತಿದ್ದ ಆ ದೇಹವನ್ನು ಬಿಟ್ಟಕೂಡಲೆ ವಿಶ್ವಾವಸು ಮೊದಲಾದ ಗಂಧರ್ವರು ಪ್ರೀತಿಯಿಂದ ಆ ದೇಹವನ್ನು ತಮ್ಮದನ್ನಾಗಿ ಮಾಡಿಕೊಂಡರು.

ಬಳಿಕ ಬ್ರಹ್ಮದೇವರು ಜೃಂಭಣವೆಂಬ ಅಂದರೆ ಆಕಳಿಕೆ, ತೂಕಡಿಕೆ, ಅಲಸಿಕೆ, ಹುಚ್ಚು ಇವನ್ನು ವ್ಯಕ್ತಪಡಿಸುವ ದೇಹವನ್ನು ಹೊಂದಿ ಭೂತ, ಪಿಶಾಚಾದಿಗಳನ್ನು ಸೃಷ್ಟಿಸಿದರು. ಅವರು ಬಿಟ್ಟ ಆ ದೇಹವನ್ನು ಭೂತ ಪಿಶಾಚಾದಿಗಳು ತಮ್ಮದನ್ನಾಗಿ ಮಾಡಿಕೊಂಡರು.

ಹೀಗೆಯೇ ಸಾರಭೂತ ಅನ್ನವುಳ್ಳದ್ದೆಂದು ತಿಳಿಯುತ್ತ 'ಪರೋಕ್ಷ'ವೆಂಬ ದೇಹದಿಂದ ಸಾಧ್ಯ ಮತ್ತು ಪಿತೃಗಣಗಳನ್ನು ಬ್ರಹ್ಮದೇವರು ಸೃಷ್ಟಿಸಿಬಿಟ್ಟ ಆ ದೇಹ ವನ್ನು ಸಾಧ್ಯರು ಮತ್ತು ಪಿತೃಗಳು ತಮ್ಮ ದೇಹವನ್ನಾಗಿ ಮಾಡಿಕೊಂಡರು. ತಿರೋಧಾನ (ಅಂತರ್ಧಾನ)ವೆಂಬ ದೇಹದಿಂದ ಸಿದ್ಧರನ್ನೂ ವಿದ್ಯಾಧರರನ್ನೂ ಸೃಷ್ಟಿಸಿದರು. ರೂಪ ಎಂಬ ದೇಹದಿಂದ ಬ್ರಹ್ಮದೇವರು ಕಿನ್ನರ, ಕಿಂಪುರುಷರನ್ನು ಸೃಷ್ಟಿಸಿದರು. ಸೃಷ್ಟಿಯು ಪೂರ್ಣವಾಗಲಿಲ್ಲವೆಂದು ಕುಪಿತರಾಗಿ ಹಾವಿನ ದೇಹದಿಂದ ಮಲಗಿ ನಾನಾ ಸರ್ಪಗಳನ್ನು ಸೃಷ್ಟಿಸಿದರು ಮತ್ತು ಪ್ರಜೆಗಳನ್ನು ವಿಪುಲವಾಗಿ ಬೆಳೆಸುವ ಮನುಗಳನ್ನು ಸೃಷ್ಟಿಸಿದರು. ಹಿಂದೆ ಯೋಗವೆಂಬ ದೇಹದಿಂದ ಋಷಿ ಗಳನ್ನು ಸೃಷ್ಟಿಸಿ ತಪಸ್ಸು, ವಿದ್ಯೆ, ವೈರಾಗ್ಯ, ಏಕಾಗ್ರತೆ ಮುಂತಾದುವನ್ನು ಕೊಟ್ಟು ಆ ಋಷಿಗಳನ್ನು ಅನುಗ್ರಹಿಸಿದರು.

ಈ ಎಲ್ಲ ಸೃಷ್ಟಿಗೂ ಬ್ರಹ್ಮಾಂತರ್ಯಾಮಿ ಶ್ರೀಹರಿಯೇ ಮುಖ್ಯ ಕರ್ತನೆಂದು ತಿಳಿಯಬೇಕು.

### ಇಪ್ಪತ್ತೊಂದನೆಯ ಅಧ್ಯಾಯ ಮುಗಿದುದು

**ವಿದುರ :** ಸ್ವಾಯಂಭುವಮನುರಾಜರ ಮಕ್ಕಳಾದ ಪ್ರಿಯವ್ರತ ಮತ್ತು ಉತ್ತಾನಪಾದರಾಜರು ಭೂರಕ್ಷಣೆ ಮಾಡಿದ ಪ್ರಕಾರವನ್ನು ತಿಳಿಸಿ. ಮನುಪುತ್ರಿ ದೇವಹೂತಿಯಲ್ಲಿ ಕರ್ದಮರು ಎಷ್ಟು ಮಕ್ಕಳನ್ನು ಸೃಷ್ಟಿಸಿದರು ? ಬ್ರಹ್ಮನಪುತ್ರ ರುಚಿಪ್ರಜೇಶ್ವರನು ತನ್ನ ಪತ್ನಿಯಾದ ಆಕೂತಿಯಲ್ಲೂ, ದಕ್ಷಪ್ರಜೇಶ್ವರನು ತನ್ನ ಪತ್ನಿಯಾದ ಪ್ರಸೂತಿಯಲ್ಲೂ ಮಕ್ಕಳನ್ನು ಹೇಗೆ ಸೃಷ್ಟಿಸಿದರು ?

**ಮೈತ್ರೇಯ :** ಪ್ರಜಾಸೃಷ್ಟಿಗೆ ಬ್ರಹ್ಮದೇವರಿಂದ ಆಜ್ಞಪ್ತರಾದ ಕರ್ದಮರು ಸರಸ್ವತೀನದೀ ತೀರದಲ್ಲಿ ಹತ್ತು ಸಾವಿರ ವರುಷ ಹರಿಯನ್ನು ಧ್ಯಾನಿಸುತ್ತ ತಪಸ್ಸನ್ನು ಮಾಡಿದರು. ಸರಸ್ವತೀನದಿಯಿಂದ ಸುತ್ತುವರಿಯಲ್ಪಟ್ಟ ಬಿಂದು ಸರೋವರದ ತೀರದಲ್ಲಿಯೇ ಕರ್ದಮರ ಆಶ್ರಮ. ಶ್ರೀಹರಿಯು ಕರ್ದಮರಿಗೆ ದರ್ಶನ ಕೊಟ್ಟನು. ಕರ್ದಮರು ಪರಮಾತ್ಮನಿಗೆ ನಮಿಸಿ ಸ್ತುತಿಸಿದರು. ಆಗ ಶ್ರೀಹರಿಗೆ, ಸಂಸಾರ ದುಃಖ ವನ್ನು ನೀಗಿ ಸುಖಪ್ರದನಾದ್ದರಿಂದ ಶುಕ್ಲ ಎಂದು ಹೆಸರು.

**ಕರ್ದಮ :** ವೇದಗಳಿಂದ ಸ್ತುತ್ಯನಾಗುವ ಶ್ರೀಹರಿಯೆ ! ನಿನ್ನ ದರ್ಶನವು ಯೋಗಿಗಳಿಗೆ ಬಹುಕಾಲದ ಮೇಲೆ ಆಗುವುದು. ಆದರೆ ನನಗೆ ಅಲ್ಪ ಕಾಲದಲ್ಲಿಯೇ ಆಯಿತು. ಇದು ನಿನ್ನ ದಯೆ. ಮರೀಚ್ಯಾದಿಗಳೂ, ನಾನೂ ಸಂತಾನವನ್ನು ಅಭಿವೃದ್ಧಿಪಡಿಸಬೇಕೆಂದು ಹಿರಿಯರ ಅಪ್ಪಣೆಯಾಗಿದೆ. ಆದ್ದರಿಂದ ನನಗೆ ಯೋಗ್ಯಳಾದ ಭಾರ್ಯೆಯನ್ನು ಕರುಣಿಸು. ತುಚ್ಛವಾದ ಕಾಮಿತವನ್ನು ಬಯಸಿದೆನೆಂದು ಕೋಪಿಸಬೇಡ. ನಿಷ್ಕಾಮರಾಗಿ ನಿನ್ನನ್ನು ಭಜಿಸುವವರಿಗೆ ಎಂದಿಗೂ ಕೇಡಿಲ್ಲ. ಕಾಮುಕರಿಗೆ ಕೇಡು ತಪ್ಪಿದ್ದಲ್ಲ. ಮದುವೆಯಾದ ಮೇಲೆ ಸಂಸಾರದಿಂದ ಮುಕ್ತನಾಗಲು ಬಯಸಿ ನಿವೃತ್ತಿ ಮಾರ್ಗವನ್ನು ಹಿಡಿಯುವೆನು. ನೀನು ಅಲ್ಪಭಕ್ತನಿಗೂ ದಯೆಮಾಡದೇ ಇರುವುದಿಲ್ಲ. ಅದಕ್ಕೆ ನಾನೇ ಸಾಕ್ಷಿ.

**ಹರಿ .** ನನ್ನ ಪ್ರೇರಣೆಯಿಂದ ಸ್ವಾಯಂಭುವನು ನಿನ್ನನ್ನು ನೋಡಲು ನಾಡಿದ್ದು ಬರುವನು ಅವನು ತನ್ನ ಮಗಳಾದ ದೇವಹೂತಿಯನ್ನು ನಿನಗೆ ಕೊಟ್ಟು ಮದಿವೆ ಮಾಡುವನು. ಅವಳು ನಿನ್ನಿಂದ ಒಂಭತ್ತು ಹೆಣ್ಣು ಮಕ್ಕಳನ್ನು ಪಡೆಯುವಳು. ಬಳಿಕ ನಾನು ಒಂದಂಶದಿಂದ ನಿನ್ನ ವೀರ್ಯವನ್ನು ಪ್ರವೇಶಿಸಿ ದೇವಹೂತಿಯ ಉದರ ಸೇರಿ ಅಲ್ಲಿಂದ ಅವತರಿಸಿ ತತ್ತ್ವಸಂಖ್ಯಾನವೆಂಬ ಶಾಸ್ತ್ರವನ್ನು ರಚಿಸುವೆನು.

(ಹೀಗೆ ಹೇಳಿ ಅಂತರ್ಧಾನ ಹೊಂದಿದನು. ಶುಕ್ಲನು ಹೇಳಿದಂತೆ ಸ್ವಾಯಂಭುವನು ಪತ್ನಿ, ಪುತ್ರಿ, ಪರಿವಾರದೊಡನೆ ಆ ಬಿಂದು ಸರೋವರದ ಆಶ್ರಮಕ್ಕೆ ಬಂದು, ಕರ್ದಮರಿಗೆ ನಮಿಸಿದನು. ಕರ್ದಮರು ಅವನನ್ನು ಸತ್ಕರಿಸಿದರು. ಮತ್ತು ಆ ಮನುವಿನಲ್ಲಿರುವ ರಾಜರಾಜೇಶ್ವರ ರೂಪಿಯಾದ ಭಗವಂತನು ಮಾಡಿಸುತ್ತಿರುವ ವ್ಯಾಪಾರವನ್ನು ಕೊಂಡಾಡಿ ಶ್ರೀಹರಿಯ ಪ್ರತಿಮೆಯೆನಿಸಿದ ರಾಜನಿಗೆ ನಮಿಸಿದರು.

**ಕರ್ದಮ :** ರಾಜನೇ ! ದುಷ್ಟನಿಗ್ರಹ ಮತ್ತು ಸಜ್ಜನರ ರಕ್ಷಣೆಯೇ ನಿನ್ನ ಸಂಚಾರದ ಮುಖ್ಯ ಉದ್ದೇಶ. ನೀನು ಸಂಚರಿಸದಿದ್ದರೆ ದುಷ್ಟರು ಹೆಚ್ಚಿ ಧರ್ಮದ ಕಟ್ಟು ಸಡಿಲವಾಗುವುದು. ಆದ್ದರಿಂದ ನೀನು ಧರ್ಮರಕ್ಷಣೆಗಾಗಿ ಸರ್ವತ್ರ ಸಂಚರಿಸುತ್ತಿರುವೆ. ಆದರೂ ನೀನಿಲ್ಲಿಗೆ ಬಂದುದಕ್ಕೆ ಕಾರಣವನ್ನು ತಿಳಿಯಲಿಚ್ಛಿಸುವೆನು. ನೀನು ಯೋಚಿಸಬೇಕಾದ್ದೇ ಇಲ್ಲ. ನಿನ್ನ ಇಷ್ಟಾರ್ಥವನ್ನು ಸ್ವಲ್ಪವೂ ಕಪಟವಿಲ್ಲದೆ ನಡೆಸಿಕೊಡುವೆನು.

**ಇಪ್ಪತ್ತೆರಡನೆಯ ಅಧ್ಯಾಯ ಮುಗಿದುದು**

**ಸ್ವಾಯಂಭುವ :** ವಿರಾಡ್ರೂಪೀ ಭಗವಂತನು ಕ್ಷತ್ರಿಯರನ್ನು ರಕ್ಷಿಸಲು ವಿಪ್ರರನ್ನು ತನ್ನ ಮುಖದಿಂದ ಸೃಷ್ಟಿಸಿದನು. ವಿಪ್ರರ ರಕ್ಷಣೆಗಾಗಿ ಕ್ಷತ್ರಿಯರನ್ನು

ಸೃಷ್ಟಿಸಿದನು. ಅವನಿಗೆ ವಿಪ್ರಜಾತಿಯು ಅತಿ ಪ್ರಿಯ. ತಾವು ರಾಜಧರ್ಮಗಳನ್ನು ಉಪದೇಶಿಸಿದುದರಿಂದ ಸಂಶಯಗಳೆಲ್ಲ ದೂರವಾದುವು. ತಮ್ಮ ದರ್ಶನದಿಂದ ನಾನು ಧನ್ಯನಾದೆನು. ನನ್ನ ವಿಜ್ಞಾಪನೆಯನ್ನು ಲಾಲಿಸಬೇಕು. ಈ ನನ್ನ ಮಗಳು ಪ್ರಿಯವ್ರತ, ಉತ್ತಾನಪಾದರ ತಂಗಿ. ಅನುರೂಪನಾದ ಪತಿಯನ್ನು ಇಚ್ಛಿಸುತ್ತಿರುವಳು. ನಾರದರಿಂದ ನಿಮ್ಮ ಗುಣಗಳನ್ನು ಕೇಳಿದ ಕೂಡಲೆ ತಮ್ಮನ್ನೇ ಮದಿವೆಯಾಗಲು ನಿಶ್ಚಯಿಸಿರುವಳು. ನಾನೂ ಶ್ರದ್ಧೆಯಿಂದ ದಾನಮಾಡಲು ಸಿದ್ಧನಾಗಿರುವೆನು. ಗೃಹಸ್ಥನಾಗಬೇಕೆನ್ನುವವನು ಕನ್ಯೆಯನ್ನ ಕೊಡುವೆನೆಂದು ಬಂದವನನ್ನು ತಿರಸ್ಕರಿಸುವುದು ಶಾಸ್ತ್ರ ನಿಷಿದ್ಧ. ತಾವು ವಿವಾಹ ಕಾಮರಾಗಿರುವರೆಂದು ಕೇಳಿ ಇಲ್ಲಿಗೆ ಬಂದಿರುವೆನು. ದಯೆಮಾಡಿ ಕನ್ಯೆಯನ್ನು ಸ್ವೀಕರಿಸಬೇಕು.

**ಕರ್ದಮ :** ನೀನು ಹೇಳಿದ್ದು ನಿಜ. ನೀನು ಹೇಳಿದಂತೆ ನಿನ್ನ ಮಗಳು ಸ್ವೀಕಾರಾರ್ಹಳಾಗಿರುವಳು. ಇಂದೆ ಮದಿವೆ ಮಾಡಿಬಿಡು. ಆದರೆ ನಾನು ಶುಕ್ಲನ ಅಪ್ಪಣೆಯಂತೆ ನಿನ್ನ ಮಗಳು ಪುತ್ರವತಿಯಾಗುವವರೆಗೆ ಅವಳನ್ನು ರಕ್ಷಿಸಿ ಮುಂದೆ ಸಂನ್ಯಾಸಿಯಾಗುವೆನು. ಇದಕ್ಕೆ ನೀನೊಪ್ಪಿದರೆ ಮದುವೆ ನಡೆಯಲಿ.

(ರಾಜನು ಪತ್ನೀ ಪುತ್ರಿಯರನ್ನು ವಿಚಾರಿಸಿದ. ಕರ್ದಮರು ಮುಂದೆ ಸಂನ್ಯಾಸಿಗಳಾಗುವುದನ್ನು ಅವರು ಒಪ್ಪಿದರು. ಆ ದಿನವೇ ಶುಭ ಮುಹೂರ್ತದಲ್ಲಿ ಕನ್ಯಾದಾನ ಮಾಡಿದನು. ಮಗಳು ಮತ್ತು ಅಳಿಯನಿಗೆ ಕೊಡಬೇಕಾದ್ದನ್ನೆಲ್ಲ ಕೊಟ್ಟು ಆ ಮುನಿಯ ಅನುಮತಿ ಪಡೆದು ಹೊರಟ ರಾಜನು ಸರಸ್ವತೀ ನದಿಯ ತೀರದ ಉದ್ದಕ್ಕೂ ಇರುವ ಋಷಿಗಳ ವೈಭವ ಸಂಪತ್ತನ್ನು ನೋಡುತ್ತ ಸಂತೋಷಿಸಿ, ಬ್ರಹ್ಮಾವರ್ತಕ್ಕೆ ಬಂದನು. ರಾಜನು ಬಂದುದನ್ನು ನೋಡಿದ ಪ್ರಜೆಗಳು ಹರ್ಷದಿಂದ ಇದಿರುಗೊಂಡರು. ರಾಜನು ತನ್ನ ರಾಜಧಾನಿಯಿಂದ ಬರ್ಹಿಷ್ಮತೀ ಪಟ್ಟಣಕ್ಕೆ ಬಂದನು.

ಹಿಂದೆ ಯಜ್ಞವರಾಹನು ತನ್ನ ದೇಹವನ್ನು ಕೊಡವಿ, ಸಚ್ಚಿದಾನಂದಾತ್ಮಕಗಳಾದ ಅನೇಕ ರೋಮಗಳನ್ನು ಉದರಿಸಿದ್ದನು. ಅಂದರೆ ಅನೇಕ ರೋಮ ರೂಪದ ಅವತಾರಗಳನ್ನು ಅಭಿವ್ಯಕ್ತ ಮಾಡಿದ್ದನು ಆ ರೋಮಗಳಿಂದ ಹಸುರು ಧರ್ಭೆಗಳು ಸೃಷ್ಟಿಸಲ್ಪಟ್ಟುವು. ಆದ್ದರಿಂದಲೇ ಆ ದರ್ಭೆಗಳು ದೈತ್ಯರನ್ನು ದೂರ ಓಡಿಸುವ ಶಕ್ತಿಯನ್ನು ಪಡೆದಿದ್ದುವು. ಋಷಿಗಳು ಆ ದರ್ಭೆಗಳನ್ನು ಉಪಯೋಗಿಸಿ ಯಜ್ಞ ವಿಘ್ನಕಾರಿಗಳಾದ ದೈತ್ಯರನ್ನು ಸೋಲಿಸಿ ಯಜ್ಞಮಾಡಿ ಶ್ರೀಹರಿಯನ್ನು ಸೇವಿಸಿದರು. ಸ್ವಾಯಂಭುವರಾಜನೂ ಕೂಡ ಆ ದರ್ಭೆಗಳಿಂದ ಮಾಡಿದ ಬರ್ಹಿಯಿಂದ ಶ್ರೀ ಹರಿಯ ಸೇವಾ ರೂಪದ ಯಜ್ಞಗಳನ್ನು ಮಾಡಿದ್ದನು. ಆದ್ದರಿಂದಲೇ ಆ ನಗರಕ್ಕೆ ಬರ್ಹಿಷ್ಮತೀ ಎಂಬ ಹೆಸರು ಅನ್ವರ್ಥವಾಯಿತು. ಆ ರಾಜನೂ ಧರ್ಮಾರ್ಥಕಾಮ

ಮೋಕ್ಷಗಳಿಗೆ ಅವಿರುದ್ಧವಾದ ಭೋಗಗಳನ್ನು ಅನುಭವಿಸುತ್ತ ವಾಸ ಮಾಡಿದನು. ಅವನು ಪ್ರತಿದಿನ ಉಷಃಕಾಲದಲ್ಲಿ ಗಂಧರ್ವರಿಂದ ಹರಿಕಥೆಗಳನ್ನು ಕೇಳುತ್ತ ಕೀರ್ತಿ ಪಡೆದನು ಮತ್ತು ಹರಿಯ ಸೇವೆಯಲ್ಲಿಯೇ ಕಾಲವನ್ನು ಕಳೆಯುತ್ತ ಆ ಮನ್ವಂತರದ ಒಂದು ಕ್ಷಣವನ್ನೂ ವ್ಯರ್ಥಮಾಡಲಿಲ್ಲ. ಅವನಿಗೆ ಮಾನವ ದೇಹವು ಬಂದಿದ್ದರೂ ಹರಿಭಕ್ತನಾದ್ದರಿಂದ ಕ್ಲೇಶಗಳು ಬರಲಿಲ್ಲ. ಅವನು ತನ್ನನ್ನು ಪ್ರಶ್ನಿಸುತ್ತಿದ್ದ ಮುನಿಗಳಿಗೆ ವರ್ಣಾಶ್ರಮಧರ್ಮಗಳನ್ನು ಪ್ರಮಾಣಪೂರ್ವಕವಾಗಿ ಹೇಳುತ್ತಿದ್ದನು ಮತ್ತು ಸರ್ವದಾ ಸರ್ವಪ್ರಾಣಿಗಳಿಗೂ ಹಿತವನ್ನುಂಟುಮಾಡುತ್ತಿದ್ದನು.

## ಇಪ್ಪತ್ತಮೂರನೆಯ ಅಧ್ಯಾಯ ಮುಗಿದುದು

ದೇವಹೂತಿಯು ತನ್ನ ತಂದೆ ತಾಯಿಗಳು ಊರಿಗೆ ಹೊರಟು ಹೋದ ಮೇಲೆ ತನ್ನ ಪತಿಯ ಇಂಗಿತದಂತೆ ಶ್ರದ್ಧೆಯಿಂದ ಅವನನ್ನು ಸೇವಿಸುತ್ತ ಬಂದಳು. ಬಹು ಕಾಲದ ಸೇವೆಯಿಂದ ಅವಳ ದೇಹವು ಸವೆದು ಬಡಕಲಾಯಿತು. ಇದನ್ನು ಕಂಡ ಕರ್ದಮರು ಅವಳ ಬಯಕೆಯನ್ನು ತಮ್ಮ ಜ್ಞಾನಬಲದಿಂದ ತಿಳಿದರು. ತಮ್ಮ ಅಣಿಮಾದಿ ಸಿದ್ಧಿಯಿಂದ ಅವಳ ಬಯಕೆಯನ್ನು ಪೂರ್ಣ ಮಾಡಬೇಕೆಂದು ನಿಶ್ಚಯಿಸಿ ಅವಳಿಗೆ ಇದನ್ನು ತಿಳಿಸಿದರು. ಇದನ್ನು ಕೇಳಿ ಅವಳು ತನ್ನ ದೇಹವು ಭೋಗಕ್ಕೆ ಯೋಗ್ಯವಾಗುವಂತೆ ಪುಷ್ಟವಾಗಬೇಕೆಂದೂ, ರಾಜಕುಮಾರಿಗೆ ಅರ್ಹವಾದ ಅರಮನೆಯ ಅಂತಃಪುರವಾಗಬೇಕೆಂದೂ ಬೇಡಿದಳು. ಕೂಡಲೇ ಕರ್ದಮರು ಹರಿಯನ್ನು ಧ್ಯಾನಿಸುತ್ತ ಕುಳಿತರು. ಭಗವಂತನು ಅನುಗ್ರಹಿಸಿದನು. ಆಗ ಸರ್ವತ್ರ ಸಂಚರಿಸಬಲ್ಲ, ಕೋರಿದ್ದನ್ನು ಕೊಡಬಲ್ಲ, ಸಕಲ ಭೋಗ ಸಾಮಗ್ರಿಗಳನ್ನುಳ್ಳ ವಿಮಾನವೊಂದು ಇದಿರಿಗೆ ಬಂದು ನಿಂತಿತು. ಆಗ ದೇವಹೂತಿಯು ಪತಿಯ ಅಪ್ಪಣೆ ಪ್ರಕಾರ ಬಿಂದು ಸರೋವರದಲ್ಲಿ ಮುಳುಗಿದಳು. ಅಲ್ಲಿ ಒಂದು ಮಂದಿರವು ಕಾಣಿಸಿತು. ಪದ್ಮಿನೀ ಜಾತಿಯ ಸಾವಿರ ಮಂದಿ ಕನ್ಯೆಯರು ಅವಳ ಬಳಿಗೆ ಬಂದು ಪ್ರಾರ್ಥಿಸಿ, ಆ ಮಂದಿರಕ್ಕೆ ಕರೆದುಕೊಂಡು ಹೋಗಿ ಎಣ್ಣೆ ಹಚ್ಚಿ ಎರೆದು. ದಿವ್ಯ ಭೋಜನ ಮಾಡಿಸಿ, ವಸ್ತ್ರಾಭರಣಗಳಿಂದ ಅಲಂಕರಿಸಿದರು. ಇದಿರಿಗಿಟ್ಟಿದ್ದ ನಿಲವುಗನ್ನಡಿಯಲ್ಲಿ ದೇವಹೂತಿಯು ತನ್ನ ದೇಹವನ್ನು ನೋಡಿಕೊಂಡಳು. ಸರ್ವಾಂಗಸುಂದರಿಯಾಗಿದ್ದ ತಾನು ಆಗ ಪತಿಯ ಬಳಿಯಿದ್ದರೆ ಅಲಂಕಾರ ಸಾರ್ಥಕವೆಂದು ಮನಸ್ಸಿನಲ್ಲಿ ಸ್ಮರಿಸಿದ ಕೂಡಲೆ ದಾಸಿಯರಿಂದ ಪರಿವೃತಳಾದ ಅವಳು ಕರ್ದಮರ ಇದಿರಿಗೆ ನಿಂತಳು. ಕರ್ದಮರು ಅವಳನ್ನು ವಿಮಾನದಲ್ಲಿ ಕೂಡಿಸಿಕೊಂಡು ಅವಳೊಡನೆ ಆನಂದಿಸುತ್ತ, ಆದ ಸುಖವನ್ನು ಶ್ರೀಹರಿಗೆ ಸಮರ್ಪಿಸುತ್ತ ನಂದನವನ ಮೊದಲಾದ ದೇವಶ್ರೇಷ್ಠರ ಉದ್ಯಾನಗಳ ರಮ್ಯ ಸ್ಥಳಗಳಲ್ಲಿ ಸಂಚರಿಸುತ್ತ ಇದ್ದರು. ಇದರಲ್ಲಿಯೇ ಬಹುಕಾಲ ಕಳೆದು ಕರ್ದಮರು ತಮ್ಮ ತಪಸ್ಸಿದ್ಧಿಯ ಬಲದಿಂದ ಭೂ ಮಂಡಲವನ್ನು

ತಿರುಗಿ ತಮ್ಮ ಪತ್ನಿಗೆ ಆ ಭಾಗಗಳನ್ನು ತೋರಿಸುತ್ತ ಕೊನೆಗೆ ತಮ್ಮಾಶ್ರಮಕ್ಕೆ ಬಂದರು. ತಾವೂ, ತಮ್ಮ ಪತ್ನಿಯೂ ಒಂಭತ್ತು ಶರೀರಗಳನ್ನು ಮಾಡಿಕೊಂಡು ಕ್ರೀಡಿಸುತ್ತ ನೂರು ವರ್ಷಗಳ ಕಾಲ ಕಳೆದರು. ಕೊನೆಗೆ ದೇವಹೂತಿಯು ಗರ್ಭಿಣಿ ಯಾಗಿ, ನವಮಾಸವನ್ನು ಕಳೆಯದೆ ಕೂಡಲೆ ಒಂದೊಂದು ದೇಹದಿಂದ ಒಂದೊಂದು ಹೆಣ್ಣು ಕೂಸಿನಂತೆ ಒಂಭತ್ತು ಹೆಣ್ಣು ಮಕ್ಕಳನ್ನು ಪಡೆದಳು. ಬಳಿಕ ಪುತ್ರನನ್ನು ಕರುಣಿಸಬೇಕೆಂದು ತನ್ನ ಕಾಂತನನ್ನು ಬೇಡಿದಳು.

**ದೇವಹೂತಿ :** ಇದುವರೆಗೆ ದೇವರನ್ನು ಮರೆತು ಕಾಲ ಕಳೆದಿದ್ದೇ ಸಾಕು. ತಮ್ಮ ಸಂಗದಿಂದ ಮೋಕ್ಷವನ್ನು ಹೊಂದುವಂತೆ ಅನುಗ್ರಹಿಸಿರಿ. ಆಹಾ ! ಮೋಕ್ಷ ಪ್ರದವಾದ ತಮ್ಮ ಸಹವಾಸವನ್ನು ಮಾಡಿದವಳಾದರೂ, ಇದುವರೆಗೆ ಸಂಸಾರದಿಂದ ಬಿಡುಗಡೆಯನ್ನು ಬಯಸದೇ ಹೋದೆನಲ್ಲ ! ಇದು ಶ್ರೀಹರಿಯ ಬಂಧಕಶಕ್ತಿಯ ಮಹಿಮೆಯೇ ಸರಿ. ತಾವು ಮೋಕ್ಷಕ್ಕೆ ಕಾರಣನಾದ ಪುತ್ರನನ್ನು ಕರುಣಿಸಿ ಅನುಗ್ರಹಿಸ ಬೇಕು.

**ಇಪ್ಪತ್ತನಾಲ್ಕನೆಯ ಅಧ್ಯಾಯ ಮುಗಿದುದು**

**ಕರ್ದಮ :** ದೇವಿ ! ಸ್ವಲ್ಪ ಕಾಲದಲ್ಲೇ ಶ್ರೀಹರಿಯು ನಿನಗೆ ಮಗನಾಗಿ ಅವತರಿಸುವನು. ನೀನು ಜಿತೇಂದ್ರಿಯಳಾಗಿ ಶೌಚ, ತಪಸ್ಸು ಮತ್ತು ದಾನಾದಿ ಗಳಿಂದ ವ್ರತವನ್ನು ಮಾಡುತ್ತ ಶ್ರದ್ಧೆಯಿಂದ ಶ್ರೀಹರಿಯನ್ನು ಸೇವಿಸು. ಸ್ವಾಮಿಯು ಅವತರಿಸಿ ನನಗೆ ಕೀರ್ತಿ ಕೊಟ್ಟು, ನಿನಗೆ ಉಪದೇಶಿಸಿ, ನಿನ್ನ ಸಂಸಾರ ಬೀಜವನ್ನು ನಾಶಮಾಡಿಬಿಡುವನು.

(ದೇವಹೂತೀ ದೇವಿಯು ಅದರಂತೆ ನಿಯಮಗಳನ್ನು ಹಿಡಿದು. ಭಕ್ತಿಯಿಂದ ಶ್ರೀಹರಿಯನ್ನು ಸೇವಿಸಿದಳು. ಕಟ್ಟಿಗೆಯಲ್ಲಿ ಬೆಂಕಿಯು ವ್ಯಕ್ತವಾಗುವಂತೆ ಶ್ರೀ ಹರಿಯು ಅವಳಲ್ಲಿ ಅವತರಿಸಿದನು. ಆಗ ದುಂದುಭಿಗಳು ಮೊಳಗಿದುವು. ಗಂಧರ್ವರು ಗಾನ ಮಾಡಿದರು. ಅಪ್ಸರೆಯರು ನರ್ತಿಸಿದರು. ಸುರರು ಹರಿಯ ಮೇಲೆ ಸುಮ ವರ್ಷ ಕರೆದರು. ಸರ್ವರ ಮನಸ್ಸೂ ಪ್ರಸನ್ನವಾಯಿತು. ಬ್ರಹ್ಮದೇವರು ತಮ್ಮ ಮಕ್ಕಳೊಡನೆ ಅಲ್ಲಿಗೆ ಬಂದು)

**ಬ್ರಹ್ಮ :** ಕುಮಾರ ಕರ್ದಮ ! ನನ್ನ ಮಾತಿನಂತೆ ನಡೆದುದರಿಂದ ನನಗೆ ಬಹಳ ಸಂತೋಷವಾಯಿತು. ನಿನ್ನ ಕುಮಾರಿಯರು ಉಳಿದ ಪ್ರಜಾಸೃಷ್ಟಿಯನ್ನು ಅನೇಕ ವಿಧವಾಗಿ ವೃದ್ಧಿ ಮಾಡುತ್ತಾರೆ. ಅವರನ್ನು ಮರೀಚಿ ಮೊದಲಾದ ಅನುರೂಪ ವರರಿಗೆ ಕೊಟ್ಟು ಮದಿವೆ ಮಾಡು. ಈ ಸ್ವಾಮಿಯ ಹೆಸರು ಕಪಿಲ ಎಂದು. ಕ = ಸುಖವನ್ನು ಸದಾ, ಪಿ = ಅನುಭವಿಸುತ್ತ, ಲ = ಭಕ್ತರಿಗೆ ಶಾಶ್ವತವಾದ

ಸುಖವನ್ನು ಕೊಡುವವನು ಎಂದು ಅನ್ವರ್ಥವಾಗಿದೆ. ಇವನನ್ನು ತತ್ತ್ವೋಪ ದೇಶಕ್ಕಾಗಿ ಅವತರಿಸಿರುವ ಪರಬ್ರಹ್ಮನೆಂದು ತಿಳಿ.

ಅಮ್ಮಾ ಮನುಪುತ್ರಿ ! ಸಂಸಾರಕ್ಕೆ ಕಾರಣಗಳಾದ ಕರ್ಮಗಳನ್ನು ನಾಶಪಡಿಸು ವುದಕ್ಕಾಗಿ ಪುಂಡರೀಕಾಕ್ಷನೇ ನಿನ್ನ ಮಗನಾಗಿ ಪ್ರಕಟನಾಗಿರುವನು. ನಿನ್ನ ಜಡಾಂತಃ ಕರಣವನ್ನು ನಾಶಪಡಿಸಿ ಸಂಸಾರವನ್ನು ನಾಶಪಡಿಸುವುದಕ್ಕಾಗಿ ಈ ಪ್ರಭು ಅವತರಿಸಿ ರುವನೆಂದೇ ತಿಳಿ. ಸಾಂಖ್ಯಶಾಸ್ತ್ರ ಅಂದರೆ ಜ್ಞಾನಸಾಧನಕ್ಕೆ ಇವನೇ ಮೂಲ ಕರ್ತೃ. ಅದರ ಪ್ರಚಾರಕರಿಗೆ ಇವನೇ ಮೂಲ ಗುರುವಾಗಿರುವನು.

(ಹೀಗೆ ಹೇಳಿ ಬ್ರಹ್ಮದೇವರು ತಮ್ಮ ಲೋಕಕ್ಕೆ ತೆರಳಿದರು. ಕರ್ದಮರು ತಮ್ಮ ಮಗಳಾದ ಕಲಾದೇವಿಯನ್ನು ಮರೀಚಿಗೂ, ಅನಸೂಯೆಯನ್ನು ಅತ್ರಿಗೂ, ಶ್ರದ್ಧೆಯನ್ನು ಅಂಗೀರಸರಿಗೂ, ಹವಿರ್ಭೂವಳನ್ನು ಪುಲಸ್ತ್ಯರಿಗೂ, ಗತಿಯನ್ನು ಪುಲಹರಿಗೂ, ಕ್ರಿಯೆಯನ್ನು ಕ್ರತುಗಳಿಗೂ, ಖ್ಯಾತಿಯನ್ನು ಭೃಗುಗಳಿಗೂ, ಅರುಂಧತಿಯನ್ನು ವಸಿಷ್ಠರಿಗೂ, ಶಾಂತಿಯನ್ನು ಅಥರ್ವಣರಿಗೂ ಕೊಟ್ಟು ಮದಿವೆ ಮಾಡಿದರು. ಅವರೆಲ್ಲರನ್ನೂ ಉಪಚರಿಸಿ ಅವರವರ ಸ್ಥಾನಗಳಿಗೆ ಕಳುಹಿಸಿಕೊಟ್ಟರು ಬಳಿಕ ಏಕಾಂತದಲ್ಲಿ ಕುಳಿತಿದ್ದ ಕಪಿಲದೇವರ ಬಳಿಗೆ ಒಂದು ನಮಸ್ಕರಿಸಿ ಹೀಗೆ ಪ್ರಾರ್ಥಿಸುತ್ತಾರೆ :–)

**ಕರ್ದಮ –:** ಸ್ವಾಮಿಯೇ ! ನಿನ್ನನ್ನು ಧ್ಯಾನದಿಂದ ನೋಡಬೇಕಾದರೆ ತತ್ತ್ವಾಭಿ ಮಾನಿ ದೇವತೆಗಳ ಪ್ರಸಾದಕ್ಕೆ ಪಾತ್ರರಾಗಬೇಕು. ಅಂತಹ ಸ್ವಾಮಿಯಾದ ನೀನು ನಮ್ಮಂತಹವರು ಮಾಡುವ ಅಗೌರವವನ್ನು ಲೆಕ್ಕಿಸದೆ ದಯೆಮಾಡಿ ನಮ್ಮ ಗುಡಿಸ ಲಲ್ಲಿ ಅವತರಿಸಿದೆಯಲ್ಲ ! ಹಿಂದೆ ನನಗೆ ಹೇಳಿದ್ದ ಮಾತನ್ನು ಸತ್ಯಮಾಡುವುದಕ್ಕಾ ಗಿಯೂ, ಬ್ರಹ್ಮಾದಿಗಳು "ಕರ್ದಮನಲ್ಲಿ ಅವತರಿಸು" ಎಂದು ಬಯಸಿದುದನ್ನು ಪೂರ್ಣಮಾಡುವುದಕ್ಕಾಗಿಯೂ ನೀನಿಲ್ಲಿ ಅವತರಿಸಿರುವೆ. ಜ್ಞಾನಿಸೇವ್ಯನೂ, ಐಶ್ವರ್ಯಪೂರ್ಣನೂ, ಸರ್ವಾಧಿಪತಿಯೂ ಆದ ನಿನ್ನ ಚರಣಾರವಿಂದದಲ್ಲಿ ಶರಣಾಗತ ನಾಗಿರುವೆನು. ಸ್ವಾಮಿಯೇ ! ಸಂನ್ಯಾಸಕ್ಕೆ ಅಪ್ಪಣೆ ಕೊಡು.

**ಕಪಿಲ :–** ಮುನಿಯೆ ! ಕೊಟ್ಟ ಮಾತಿನಂತೆ ಅವತರಿಸಿರುವೆನಾದ್ದರಿಂದ ನಾನು ನಿನಗೆ ಆಪ್ತತಮನೆಂಬುದು ಗೊತ್ತಾಯಿತಲ್ಲವೆ ? ಸಜ್ಜನರಿಗೆ ತತ್ತ್ವಜ್ಞಾನ ವನ್ನುಂಟುಮಾಡುವುದಕ್ಕೂ, ಬ್ರಹ್ಮಜ್ಞಾನಿಗಳಿಗೆ ವಿಶೇಷಜ್ಞಾನವುಂಟು ಮಾಡುವು ದಕ್ಕೂ ನಾನು ಅವತರಿಸಿರುವೆನು. ಉಪದೇಶಕರಿಲ್ಲದೆ ಪರಮಾತ್ಮ ತತ್ತ್ವಮಾರ್ಗವು ಈ ಲೋಕದಲ್ಲಿ ಕಣ್ಮರೆಯಾಗಿತ್ತು. ಸಾಂಖ್ಯಶಾಸ್ತ್ರ ರಚನೆಯಿಂದ ಆ ಮಾರ್ಗವನ್ನು ಪ್ರಚಾರಮಾಡುವೆನು. ನಿನಗೆ ಅನುಜ್ಞೆಯನ್ನು ಕೊಟ್ಟಿರುವೆನು. ಇಂದ್ರಿಯ ಗಳನ್ನು ಜಯಿಸಿ, ಸರ್ವರ ಹೃದ್ಗುಹಾವಾಸಿಯಾದವನೂ, ಸ್ವಯಂ ಜ್ಯೋತಿಯೂ,

ಆದಾನಾದಿಕರ್ತೃನೂ ಆಗಿರುವ ನನ್ನನ್ನು ಧ್ಯಾನಮಾಡಿ, ನಿನ್ನ ಸ್ವರೂಪದ ಚಿದ್ದೇಹದಲ್ಲಿ, ಸ್ವರೂಪೇಂದ್ರಿಯಗಳಿಂದ ನನ್ನ ಸ್ವರೂಪವನ್ನು ಕಾಣುವೆ. ಬಳಿಕ ಮುಕ್ತನಾಗಿ ಬಿಡುವೆ. ನಾನು ನನ್ನ ತಾಯಿಗೆ ಉಪದೇಶಿಸಿ ಅವಳ ಸಂಸಾರವನ್ನು ತಪ್ಪಿಸುವೆನು.

(ಹೀಗೆ ದೇವರು ಹೇಳಲು. ಕರ್ದಮರು ಬಲವಂದು ನಮಿಸಿ, ವನಕ್ಕೆ ಹೋಗಿ, ಸಂನ್ಯಾಸಿಯಾಗಿ, ಶ್ರೀಹರಿಯನ್ನೇ ಧ್ಯಾನಿಸುತ್ತ ಭೂಮಂಡಲದಲ್ಲಿ ಸಂಚರಿಸ ತೊಡಗಿದರು. ವೈರಾಗ್ಯಭಾಗ್ಯವನ್ನು ಸಂಪಾದಿಸಿ, ಬಿಂಬಾಪರೋಕ್ಷಿಗಳಾದರು. ನಿಷಿದ್ಧವಾದ ಇಚ್ಛೆ ಮತ್ತು ವೈಷ್ಣವದ್ವೇಷಗಳನ್ನು ತ್ಯಜಿಸಿ, ಸರ್ವಾಂತರ್ಯಾಮಿಯ ಮಹಿಮೆಗಳನ್ನು ಚೆನ್ನಾಗಿ ತಿಳಿದು ಭಕ್ತಿಯಿಂದ ಭಜಿಸಿ ಮುಕ್ತಿಯನ್ನು ಹೊಂದಿದರು.

## ಇಪ್ಪತ್ತೈದನೆಯ ಅಧ್ಯಾಯ ಮುಗಿದುದು

ಕರ್ದಮರು ಕಾಡಿಗೆ ಹೋದ ಮೇಲೆ ಕಪಿಲ ದೇವರು ತನ್ನ ತಾಯಿಯನ್ನು ಉದ್ಧರಿಸಲು ಆ ಆಶ್ರಮದಲ್ಲಿಯೇ ಇದ್ದನು. ದೇವಹೂತಿಯು ಬ್ರಹ್ಮದೇವರ ಮಾತನ್ನು ಸ್ಮರಿಸಿಕೊಂಡು ಸ್ವಾಮಿಯ ಬಳಿಗೆ ಬಂದು ವಿಜ್ಞಾಪಿಸುವಳು :

**ದೇವಹೂತಿ :** ದೇವಾ ! ಇಂದ್ರಿಯಗಳನ್ನು ತೃಪ್ತಿಪಡಿಸುವುದರಲ್ಲಿಯೇ ಇದುವರೆಗೆ ಕಾಲಕಳೆದೆನಾದ್ದರಿಂದ ಅಜ್ಞಾನದಲ್ಲಿ ಮುಳುಗಿರುವೆನು. ವಿಷಯಗಳ ಸೇವನೆಯಿಂದ ಇಂದ್ರಿಯಗಳು ತೃಪ್ತವಾಗಿವೆ. ಅದರಿಂದ ವಿಷಯಗಳಲ್ಲಿ ವಿರಕ್ತಿ ಹುಟ್ಟಿದೆ, ಬಹು ಜನ್ಮಗಳನ್ನೆತ್ತಿ ತೊಳಲಿ ಈ ಕೊನೆಯ ಜನ್ಮದಲ್ಲಿ ಅಜ್ಞಾನ ತಾರಕನು ನೀನೇ ಎಂಬ ಜ್ಞಾನ ಬಂದಿದೆ. ಪರಬ್ರಹ್ಮನೇ ನೀನು. ಸಜ್ಜನರ ಅಜ್ಞಾನವನ್ನು ಪರಿಹರಿಸುವುದಕ್ಕಾಗಿಯೇ ಅವತರಿಸಿರುವ ನೀನು ಸಮೀಪದಲ್ಲಿ ದೊರೆತಿರುವಾಗಲೂ ನಿನ್ನಿಂದ ಉಪದೇಶವನ್ನು ಹೊಂದದೇ ಹೋದರೆ ನಾನು ತಮಸ್ಸಿಗೆ ಗುರಿಯಾಗುವೆನು. ತತ್ತ್ವೋಪದೇಶಮಾಡಿ ನನ್ನ ಮಿಥ್ಯಾಜ್ಞಾನವನ್ನು ಕಳೆದು ಉದ್ಧರಿಸು. ನಿನ್ನಲ್ಲಿ ಶರಣಾಗತಳಾಗಿರುವೆನು. ನಾರಾಯಣಾದಿ ಪುರುಷರ, ಲಕ್ಷ್ಮ್ಯಾದಿ ಪ್ರಕೃತಿಗಳ ಲಕ್ಷಣ ಮತ್ತು ತಾರತಮ್ಯಗಳನ್ನು ತಿಳಿಸೆಂದು ವಂದಿಸುವೆನು.

**ಕಪಿಲ –.** ಪರಮಾತ್ಮಾದಿ ತತ್ತ್ವಜ್ಞಾನದಿಂದ ಮೋಕ್ಷವು ಲಭಿಸುವುದು. ಮೋಕ್ಷದಲ್ಲಿ ವಿಷಯ ಸುಖ ಮತ್ತು ಸರ್ವದುಃಖಗಳೂ ನಾಶವಾಗುವುವು. ಮೋಕ್ಷಕ್ಕೆ ಕಾರಣವಾದ ಯೋಗವನ್ನು ಹಿಂದೆ ನಾನೇ ಬ್ರಹ್ಮಾದಿಗಳಿಗೂ ಉಪದೇಶಿಸಿದ್ದೆನು. ಅಮ್ಮಾ ! ಈ ಯೋಗವು ಸಫಲವಾಗುವುದಕ್ಕೆ ಮನೋವಶೀಕರಣವೇ ಪ್ರಥಮ ಸಾಧನೆ. ಮನಸ್ಸು ವಿಷಯಗಳಲ್ಲಿ ಪ್ರವರ್ತಿಸಿದರೆ ಜೀವನ ಬಂಧಕ್ಕೂ, ದುಃಖಕ್ಕೂ ಕಾರಣವಾಗುವುದು. ಅದೇ ಮನಸ್ಸು ಪರಮಾತ್ಮನಲ್ಲೇ ಆಸಕ್ತವಾದರೆ ಮೋಕ್ಷಕ್ಕೆ

ಕಾರಣವಾಗುವುದು. ಆದ್ದರಿಂದ ಮನಸ್ಸು ವಿಷಯಗಳಲ್ಲಿ ಆಸಕ್ತವಾಗದಂತೆ ಅದನ್ನು ಜಯಿಸಿ, ಅಭಿಮಾನವನ್ನು ಬಿಟ್ಟು, ವೈರಾಗ್ಯವನ್ನು ಸಂಪಾದಿಸಿ, ಪರೋಕ್ಷಜ್ಞಾನ ವನ್ನು ಹೊಂದಿ, ಭಕ್ತಿ, ಜ್ಞಾನ ಮತ್ತು ಹರಿಪ್ರಸಾದ ಇವುಗಳಿಂದ ಬಿಂಬದರ್ಶನ ಮಾಡಬೇಕು. ಆಗ ಬಂಧನ ಶಕ್ತಿಯು ಹರಿಯ ಶಕ್ತಿಯಿಂದ ಆ ಜೀವನಿಗೆ ಉಪದ್ರವ ಕೊಡಲು ಅಸಮರ್ಥವಾಗುವುದು. ಮೋಕ್ಷಕ್ಕೆ ಅಂತರಂಗ ಸಾಧನ ಅಂತರ್ಯಾಮಿಯಲ್ಲಿ ಮಾಡುವ ಭಕ್ತಿಯೊಂದೇ. ಸತಿಸುತಾದಿಗಳಲ್ಲಿ ಸ್ನೇಹ ಮಾಡುವುದೇ ಬೇಡಿ. ಅದೇ ಸ್ನೇಹವನ್ನು ಸಜ್ಜನರಾದ ವೈಷ್ಣವರಲ್ಲಿ ಮಾಡಿದರೆ ಮುಕ್ತಿ. ಸಜ್ಜನರ ಲಕ್ಷಣವನ್ನು ಹೇಳುವೆನು ಕೇಳು :- ಸಜ್ಜನರು ಸ್ವೋತ್ತಮರ ಅಪರಾಧಗಳನ್ನು ಸಹಿಸುವರು. ಕಿರಿಯರಲ್ಲಿ ಕಾರುಣ್ಯವನ್ನೂ, ಸಮಾನರಲ್ಲಿ ಮೈತ್ರಿಯನ್ನೂ ತೋರುವರು. ಸಜ್ಜನರು ಅಜಾತಶತ್ರುಗಳು. ಅಂದರೆ ಅಜ = ಶರೀರ, ಅತ = ಅದರ ಜೊತೆಯಲ್ಲಿಯೇ ಇರುವ ಕಾಮಕ್ರೋಧಾದಿಗಳು, ಅವಕ್ಕೆ ಶತ್ರುಗಳು ಎಂದರ್ಥ. ಅವರು ಶಾಂತರು, ಭಕ್ತಿಯೇ ಆಭರಣವಾಗಿ ಉಳ್ಳವರು. ಅವರು ನನ್ನಲ್ಲಿ ಮಾಡುವಂತಹ ಭಕ್ತಿಯನ್ನು ಮತ್ತಾ ರಲ್ಲೂ ಮಾಡುವರಲ್ಲ. ಹರಿಭಕ್ತರನ್ನು ಬಿಡುವವರಲ್ಲ. ಬಂಧುಗಳಾಗಿದ್ದರೂ ಅವರು ಅಭಕ್ತರಾಗಿದ್ದರೆ ಅವರನ್ನು ಬಿಡುತ್ತಾರೆ. ನನ್ನ ಕಥೆಯನ್ನು ಹೇಳುತ್ತಾ ಇಲ್ಲವೆ ಕೇಳುತ್ತ ಸಂತೋಷಪಡುವರು. ಅವರು ತಪಸ್ವಿಗಳು ಅವರಲ್ಲಿ "ಹರಿಯೊಬ್ಬನೇ ಪೂರ್ಣನು. ಉಳಿದವರೆಲ್ಲ ಅವನ ಅಧೀನರು" ಎಂಬ ಈ ಜ್ಞಾನವು ಸ್ಥಿರವಾಗಿರು ವುದು. ಅಮ್ಮ ! ಇಂತಹವರ ಸಹವಾಸವನ್ನು ನೀನು ಬಯಸಬೇಕು. ಅದರಿಂದ ಆ ವೈಷ್ಣವರು ವಿಷಯಾಸಕ್ತಿಜನ್ಯ ದೋಷವನ್ನು ಪರಿಹರಿಸುವರು. ಅವರ ಸಹವಾಸ ಮಾಡುವವರಿಗೇ ಹರಿಕಥಾ ಶ್ರವಣ ಮಾಡಲು ಅವಕಾಶ ದೊರೆಯುವುದು. ಅದ ರಿಂದ ಹರಿಯಲ್ಲಿ ಭಕ್ತಿ ಹುಟ್ಟುವುದು. ಈ ಭಕ್ತಿಯುಂಟಾಗುವುದರಿಂದ ಆಬ್ರಹ್ಮ ಸ್ತಂಬ ಪರ್ಯಂತವಾದ ವಸ್ತುಗಳೆಲ್ಲ ಅಸಾರ ಮತ್ತು ಅನಿತ್ಯಗಳೆಂಬ ಜ್ಞಾನವಾಗು ವುದು. ಹಾಗೆಯೇ ಶ್ರೀಹರಿಯು ಸಾರನು, ನಿತ್ಯನು, ನಿರ್ದುಃಖಾನಂದ ಭರಿತನು ಎಂಬ ಜ್ಞಾನಪೂರ್ವಕ ಸ್ನೇಹವುಂಟಾಗುವುದು. ಬಳಿಕ ಯಮ, ನಿಯಮ ಮೊದ ಲಾದ ಸಾಧನಗಳಿಂದ ಬ್ರಹ್ಮಸಾಕ್ಷಾತ್ಕಾರಕ್ಕೆ ಯತ್ನಿಸಬೇಕೆಂಬ ಬುದ್ಧಿ ಹುಟ್ಟುವುದು. ಹಾಗೆ ಧ್ಯಾನಿಸಿದರೆ ಆಜನ್ಮವು ಸಾಧನ ಪೂರ್ಣವಾಗಿದ್ದರೆ ಆಗಲೇ ಬ್ರಹ್ಮ ದರ್ಶನವಾಗುವುದು.

**ದೇವ ಹೂತಿ :-** ಮೋಕ್ಷವನ್ನೂ ಬಯಸದೆ ಮಾಡುವ ಭಕ್ತಿ ಉತ್ತಮವೆ ? ಅಥವಾ ಮೋಕ್ಷಕ್ಕಾಗಿ ಮಾಡುವ ಭಕ್ತಿ ಉತ್ತಮವೇ ? ಉತ್ತಮ ಭಕ್ತಿಯ ಲಕ್ಷಣ ವೇನು ? ಅದನ್ನು ನಾನು ಅನುಷ್ಠಿಸಲು ಶಕ್ಯವೆ ? ನಿನ್ನ ಸ್ಥಾನವನ್ನು ಹೊಂದಲು ಎಂತಹ ಭಕ್ತಿ ಮಾಡಬೇಕು ?

**ಕಪಿಲ :-** ಉತ್ತಮಾಧಿಕಾರಿಗಳಾದ ತಾತ್ತ್ವಿಕ ದೇವತೆಗಳು ಮೋಕ್ಷವನ್ನೂ ಬಯಸದೆ ಭಕ್ತಿಮಾಡುವರು. ಅದೇ ಉತ್ತಮ. ಉತ್ತಮ ಭಕ್ತಿಯ ಲಕ್ಷಣ ವನ್ನು ಹೇಳುವೆನು ಕೇಳು :- ಭಗವಂತನಲ್ಲಿ ಏಕಾಗ್ರವಾಗಿ ಅನ್ಯವ್ಯಾಪಾರರಹಿತ ವಾಗಿ, ಗಂಗಾ ಪ್ರವಾಹದಂತೆ ಸ್ವಾಭಾವಿಕವಾಗಿರುವ ಅಂತಃಕರಣದ ಸ್ಥಿತಿಯೇ ಉತ್ತಮ ಭಕ್ತಿ. ಅಧಮಾಧಿಕಾರಿಗಳ ಭಕ್ತಿಗೆ ದೊರೆಯುವ ಮುಕ್ತಿಯ ಸುಖಕ್ಕಿಂತಲೂ ಮುಕ್ತರಾಗದೇ ಇರುವ ಉತ್ತಮಾಧಿಕಾರಿಗಳಿಗೆ ಅಧಿಕವಾದ ಸುಖವನ್ನುಂಟು ಮಾಡುವ ಭಕ್ತಿಯೇ ಉತ್ತಮವು. ಇಂಥ ಭಕ್ತರು ಬೇಡದಿದ್ದರೂ ನಾನು ಕೊಡುವ ಸಾಯುಜ್ಯ ಮುಕ್ತಿಯನ್ನು ಅವರು ನನ್ನಾಜ್ಞೆಯನ್ನು ಮೀರಬಾರದೆಂದು ಸ್ವೀಕರಿಸು ವರು. ಅವರು ಸರ್ವದಾ ನನ್ನ ಪಾದಸೇವೆಯಲ್ಲಿಯೇ ನಿರತರಾಗಿರುವರು. ಯಾವ ಕರ್ಮವನ್ನು ಮಾಡಿದರೂ ತಪ್ಪದೇ ಅದನ್ನು ನನಗೆ ಅರ್ಪಿಸಿಬಿಡುವರು. ಉತ್ತಮ ಭಕ್ತರು ನನ್ನ ರೂಪಗಳನ್ನು ನೋಡಿಬಿಟ್ಟರೆ ಅವುಗಳಿಂದ ಆಕರ್ಷಿತರಾಗಿ ಅನ್ಯ ವ್ಯಾಪಾರಗಳನ್ನೆಲ್ಲ ಬಿಟ್ಟು ಬಿಡುವರು. ಸಾಯುಜ್ಯ ಮುಕ್ತಿಯನ್ನು ಅವರು ಅನು ಭವಿಸುತ್ತಿರುವಾಗ ಅವರ ಭಕ್ತಿಗೆ ಫಲವಾಗಿ ಛತ್ರ, ಚಾಮರ, ಯಾನ, ವಾಹನಾದಿ ಮಹದೈಶ್ವರ್ಯವನ್ನು ಅವರು ಭೋಗಿಸುವಂತೆ ಮಾಡುವೆನು. ಆ ಭೋಗವನ್ನು ಅವರಿಗೆ ಎಂದಿಗೂ ತಪ್ಪಿಸುವುದೇ ಇಲ್ಲ. ಉತ್ತಮ ಭಕ್ತರಿಗೆ ನಾನೊಬ್ಬನೇ ಪ್ರಿಯನೂ, ಆದಾನಾದಿ ಕರ್ತನೂ, ಪುತ್ರನೂ, ಗೆಳೆಯನೂ, ತಂದೆಯೂ, ಗುರುವೂ ಅನಿಮಿತ್ತ ಬಂಧುವೂ ಆಗಿರುವುದರಿಂದ ಕಾಲ ನಾಮಕ ಆಯುಧವನ್ನು ಪ್ರಯೋಗಿಸಿ ಅವರನ್ನು ನಾಶಮಾಡುವುದೇ ಇಲ್ಲ. ಹೀಗೆ ಸಕಲಾಭಿಮಾನವನ್ನೂ ಬಿಟ್ಟು ನನ್ನಲ್ಲಿ ಭಕ್ತಿ ಮಾಡತಕ್ಕವನ ಸಂಸಾರವನ್ನು ನಾಶಮಾಡಿ ಮುಕ್ತಿಯನ್ನು ಕೊಡುವೆನು. ಮೋಕ್ಷ ಪ್ರದಾತನು ನನ್ನ ಹೊರತು ಮತ್ತಾವನೂ ಇಲ್ಲ. ದೇವತೆಗಳೂ ಅವರವರ ಅಧಿಕಾರದಲ್ಲಿ ಪ್ರವೃತ್ತರಾಗಿರುವುದೂ ನನ್ನಿಂದಲೇ. ನನ್ನ ಭಯದಿಂದಲೇ ವಾಯು ಬೀಸುವನು. ಸೂರ್ಯನು ತಪಿಸುವನು. ಇಂದ್ರನು ಮಳೆಗರೆಯುವನು. ಅಗ್ನಿಯು ಸುಡುವನು. ಮೃತ್ಯುವು ಪ್ರಾಣಿಗಳನ್ನು ಸಂಹರಿಸುವನು. ಭಕ್ತಿಯಿಂದಲೇ ಮುಕ್ತಿ. ಇದೇ ಮುಖ್ಯ ಸಾಧನೆ.

## ಇಪ್ಪತ್ತಾರನೆಯ ಅಧ್ಯಾಯ ಮುಗಿದುದು

**ಕಪಿಲ :** ಸ್ವತಂತ್ರ, ಅಸ್ವತಂತ್ರ ಎಂದು ತತ್ತ್ವಗಳಲ್ಲಿ ಎರಡು ಬಗೆಯು. ಅವುಗಳಲ್ಲಿ ಸ್ವತಂತ್ರ ತತ್ತ್ವದ ಮಹಿಮೆಯನ್ನು ಹೇಳುವೆನು ಕೇಳು :-

ಸ್ವತಂತ್ರನಾದವನು ಪರಮಾತ್ಮನು, ಅವನು ಅನಾದಿ ಅಂದರೆ ಜನನ ಮರಣ ರಹಿತನು. ಪುರುಷನು ಅಂದರೆ ಅಭೀಷ್ಟದಾಯಕನು. ಪುರುಷೋತ್ತಮನು.

ಅಸ್ವತಂತ್ರನಾದ ಜೀವನೇ ಅನಾದಿಯಾದವನು ಅಂದಮೇಲೆ ಸ್ವತಂತ್ರನಾದ ಹರಿಯು ಅನಾದಿ ನಿತ್ಯನೆಂದು ಹೇಳತಕ್ಕುದೇನು ? ಸೃಷ್ಟಿ ಚರಿತ್ರೆಯೇ ಇದಕ್ಕೆ ಸಾಕ್ಷಿ.

ಶ್ರೀ ಹರಿಯು ಜಡಪ್ರಕೃತಿ, ತದಭಿಮಾನಿಗಳನ್ನು ಸೃಷ್ಟ್ಯಾದಿಗಳಲ್ಲಿ ತೊಡಗುವಂತೆ ಮಾಡಿದನು. ಜಡಪ್ರಕೃತಿಯು ಮಹತ್ತತ್ತ್ವವಾಗಿ ಪರಿಣಾಮ ಹೊಂದುತ್ತ ಕೊನೆಯಲ್ಲಿ ದೇಹವಾಗಿ ಪರಿಣಮಿಸಿತು ಹರಿಯು ಜೀವರಿಗೆ ಆ ದೇಹಗಳನ್ನು ತೊಡಿಸಿ, ಅವರಿಗೆ ಅವುಗಳು ತನ್ನವೆಂದೂ, ತಾನೇ ಕರ್ತನೆಂದೂ ಅಭಿಮಾನವನ್ನು ಹುಟ್ಟಿಸಿದನು. ಆದರಿಂದ ಪ್ರಕೃತಿಯು, ಜೀವರನ್ನು ಸಾತ್ವಿಕಾದಿ ಕರ್ಮಗಳಲ್ಲಿ ಆಸಕ್ತರನ್ನಾಗಿ ಮಾಡಿತು. ಜೀವನು "ನಾನೇ ಮಾಡಿದೆನು" ಎಂದು ಭ್ರಾಂತನಾದನು. ಇದರಿಂದ ಜನ್ಮಮರಣವೆಂಬ ಸಂಸಾರ, ಸುಖ ದುಃಖ ಭೋಗವೆಂಬ ಬಂಧನ, ಅಸ್ವಾಭಾವಿಕ ನೀಚರ ಅಧೀನತೆ ಉಂಟಾಗುವುದು. ಇದೆಲ್ಲವೂ ಅನ್ಯಕರ್ತರಹಿತನೂ, ಸಾಕ್ಷಿಯೂ ಆದ ಪರಮಾತ್ಮನಿಂದಲೇ ಜೀವನಿಗೆ ಬರುವುದು. ಹರಿಯ ಅಧೀನಳಾದ ಲಕ್ಷ್ಮೀದೇವಿಯ ಪ್ರೇರಣೆಯಂತೆ ಬ್ರಹ್ಮಾದಿಗಳು ಜೀವರಿಗೆ ಕರ್ಮಗಳಲ್ಲಿ ಪ್ರೇರಕರಾಗಿರುವರು. ಜೀವನ ಸುಖ ದುಃಖಭೋಗಕ್ಕೆ ಹರಿಯೇ ಕಾರಣನು.

**ದೇವಹೂತಿ :** ಪ್ರಕೃತಿ ಪುರುಷರು ಇಬ್ಬರೂ ಜಗತ್ಕಾರಣದಲ್ಲಿ ಸಮವೇ ಅಲ್ಲವೆ ? ವಿವರಿಸು.

**ಕಪಿಲ :** ಸಮವಲ್ಲ. ಪ್ರಕೃತಿಯು ಪುರುಷನ ಅಧೀನಳು, ಚೇತನ ಪ್ರಕೃತಿಯಾದ ಲಕ್ಷ್ಮಿಯು ಅವ್ಯಕ್ತ, ವ್ಯಕ್ತ ಮತ್ತು ವ್ಯಕ್ತಾವ್ಯಕ್ತ ಎಂಬ ಮೂರು ರೂಪಗಳುಳ್ಳವಳು. ಜನನರಹಿತಳು. ಹರಿಗೆ ಮಾತ್ರ ಅಧೀನಳು. ಬ್ರಹ್ಮಾದಿಗಳಿಗೆ ಪ್ರಧಾನಳು. ಅವರಿಗಿಂತ ಶ್ರೇಷ್ಠಳಾದ ಕರ್ತಳಾದ್ದರಿಂದ **ಪ್ರಕೃತಿ** ಎನಿಸುವಳು. ಜಡಪ್ರಕೃತಿಯು ಉಪಾದಾನ ಕಾರಣವು. ಅದು ಹರಿಯಿಂದ ಪ್ರೇರಿತವಾಗಿ ಇಪ್ಪತ್ತುನಾಲ್ಕು ತತ್ತ್ವಗಳಾಗಿ ಪರಿಣಾಮ ಹೊಂದುವುದು. ಸ್ವತಂತ್ರನಾದ ಕಾಲನಾಮಕ ಹರಿಯು ಇಪ್ಪತ್ತೈದನೆಯ ತತ್ತ್ವ. ಚೇತನರ ಹೃದಯದಲ್ಲಿ ಅಂತರ್ಯಾಮಿಯಾಗಿರುವ ಹರಿಯೇ ಹೊರಗಡೆ ಸರ್ವತ್ರ ವ್ಯಾಪಿಸಿರುವನು. ಆ ವ್ಯಾಪ್ತರೂಪಕ್ಕೆ ಕಾಲ ಎಂದು ಹೆಸರು. ಇವನೇ ರುದ್ರಾಂತರ್ಗತನಾಗಿ ಜೀವರು ಹುಟ್ಟಿ ಸಾಯುವಂತೆ ಮಾಡುವವನು. ಎರಡು ಬಗೆಯ ಪ್ರಕೃತಿಗಳೂ ಮಾಡುವ ಜಗತ್ಸೃಷ್ಟ್ಯಾದಿಗಳಿಗೆ ಇವನೇ ಪ್ರೇರಕನು, ಅಂತರ್ಯಾಮಿ. ಪುರುಷರೂಪದಿಂದ ಅಭಿನ್ನನು.

ಈ ವಿಷಯುವನ್ನು ವಿಮರ್ಶಿಸಿದರೆ ಜೀವನು ಅಸ್ವತಂತ್ರನೂ, ಪ್ರಕೃತಿಬದ್ಧನೂ ಆಗಿರುವನು ಮತ್ತು ಪ್ರಕೃತಿ ಪುರುಷರ ಅಧೀನನಾಗಿರುವನು. ಅವನಿಗೆ ನಿಯಾಮಕ ಪುರುಷನು ಸ್ವತಂತ್ರನೂ, ಸರ್ವೋತ್ತಮನೂ ಆಗಿರುವನು. ಅವನು ಪ್ರಕೃತಿಯ

ವ್ಯಾಪ್ತಿಗಿಂತ ವಿಲಕ್ಷಣವಾದ ವ್ಯಾಪ್ತಿಯುಳ್ಳವನಾದಕಾರಣ ಅವನು ಪ್ರಕೃತಿಗೆ ಸಮನಲ್ಲ. ಪ್ರಕೃತಿಗಿಂತ ಆ ಶ್ರೀಹರಿಯು ವಿಲಕ್ಷಣನಾಗಿ ಜಗತ್ಕಾರಣನಾಗಿರುವನು. ಅದನ್ನು ವಿಶದವಾಗಿ ಹೇಳುವೆನು ಕೇಳು :-

ಶೂನ್ಯ ನಾಮಕ ನಾರಾಯಣನು ಚೇತನ ಪ್ರಕೃತಿಗೆ ಪ್ರೇರಿಸಿದನು. ಆಗ ಆ ಪ್ರಕೃತಿದೇವಿಯು ಸೃಷ್ಟಿಸಬೇಕೆಂಬ ಇಚ್ಛೆ ಉಳ್ಳವಳಾದಳ . ಆಗ ಅವಳಿಂದ ಸೃಷ್ಟಿಗೆ ಕಾರಣವಾದ ಶ್ರೀರೂಪವು ವ್ಯಕ್ತವಾಯಿತು. ನಾರಾಯಣರೂಪದಿಂದ ವ್ಯಕ್ತನಾದ ಪುರುಷೋತ್ತಮನಾಮಕ ಶ್ರೀಹರಿಯು ಶ್ರೀದೇವಿಯಲ್ಲಿ ತನ್ನ ವೀರ್ಯವನ್ನಿಟ್ಟನು. ಅಂದರೆ ಸೃಷ್ಟಿಸುವ ಶಕ್ತಿಯನ್ನು ಕೊಟ್ಟನು. ಅವಳು ಮಹತತ್ತ್ವವನ್ನು ತದಭಿಮಾನಿ ಬ್ರಹ್ಮದೇವರನ್ನೂ ಪ್ರಸವಿಸಿದಳು. ಮಹತ್ತತ್ತ್ವನಿಯಾಮಕನಾದ ವಾಸದೇವರೂಪದಿಂದ ಪ್ರಾಣಿಗಳ ಚಿತ್ತವು ಹುಟ್ಟುವುದು. ಶ್ರೀಹರೀಚ್ಛೆಯಂತೆ ಮಹತ್ತತ್ತ್ವವು ವಿಕಾರಹೊಂದಿ ಮೂರು ಬಗೆಯ ಅಹಂಕಾರ ತತ್ತ್ವವು ಹುಟ್ಟಿತು. ವೈಕಾರಿಕಾಹಂಕಾರದಿಂದ ಮನಸ್ಸೂ, ಇಂದ್ರಿಯಾಭಿಮಾನಿಗಳೂ, ಅವರ ದೇಹಗಳೂ ಉತ್ಪನ್ನವಾದುವು. ತೈಜಸಾಹಂಕಾರದಿಂದ ಬುದ್ಧಿ, ತದಭಿಮಾನಿ ಉಮೆ, ಆಹಂಕಾರಿಕ ಪ್ರಾಣ ಮತ್ತು ಹತ್ತು ಇಂದ್ರಿಯಗಳೂ ಹುಟ್ಟಿದುವು. ತಾಮಸಾಹಂಕಾರದಿಂದ ಶಬ್ದಾದಿ ತನ್ಮಾತ್ರೆಗಳೂ, ಪಂಚಭೂತಗಳೂ ಹುಟ್ಟಿದುವು.

ತ್ರಿಗುಣಾತ್ಮಕ ಅಹಂಕಾರವು ಶಾಂತ, ಘೋರ ಮತ್ತು ಮೂಢ ಭಾವಗಳಿಗೆ ವ್ಯಂಜಕವು, ಅಹಂಕಾರವು ಮೂರು ಭಾಗವಾಗದಿರುವಾಗ ಅದನ್ನು ಸೂಕ್ಷ್ಮಾಹಂಕಾರವೆನ್ನುವರು. ಅದಕ್ಕೆ ಸಂಕರ್ಷಣನು ನಿಯಾಮಕನು. ಶೇಷನು ಅಭಿಮಾನಿ. ಮೂರು ಭಾಗವಾಗಿ ಪರಿಣಿತವಾದ ಅಹಂಕಾರ ತತ್ತ್ವಕ್ಕೆ ಸ್ಥೂಲಾಹಂಕಾರವೆನ್ನುವರು ಮನಸ್ತತ್ತ್ವಕ್ಕೆ ಕಾರಣವಾದ ವೈಕಾರಿಕಾಹಂಕಾರವು ಜೀವರಿಗೆ "ನಾನು, ನನ್ನದು" ಎಂಬ ಅಭಿಮಾನವನ್ನು ಹುಟ್ಟಿಸುವುದರಿಂದ ಕರ್ತೃವೆನಿಸಿದೆ. ಇಂದ್ರಿಯಗಳಿಗೆ ಕಾರಣವಾದ ತೈಜಸಾಹಂಕಾರವು ಕ್ರಿಯೆ ಮತ್ತು ಜ್ಞಾನಗಳಿಗೆ ಕಾರಣವೆನಿಸಿದೆ. ಪಂಚಭೂತಗಳಿಗೂ, ಭೌತಿಕ ಪದಾರ್ಥಗಳಿಗೂ ಕಾರಣವಾದ ತಾಮಸಾಹಂಕಾರವು ತನ್ನಿಂದ ಹುಟ್ಟಿದ ದೇಹವು ಪುನಃ ಪುನಃ ಹುಟ್ಟುವುದರಿಂದ ಕಾರ್ಯವೆನಿಸಿದೆ.

ವೈಕಾರಿಕಾಹಂಕಾರವು ಶ್ರೀಹರಿಯಲ್ಲಿ ನಿಷ್ಠೆಯನ್ನುಂಟುಮಾಡುವುದರಿಂದ ಶಾಂತವೆನಿಸಿದೆ. ತೈಜಸಾಹಂಕಾರವು ಇಂದ್ರಿಯಗಳಿಂದ ಘೋರಪದಾರ್ಥಗಳ ಜ್ಞಾನ ಮತ್ತು ಘೋರ ಕರ್ಮಗಳಿಗೆ ಕಾರಣವಾದ್ದರಿಂದ ಘೋರವೆನಿಸಿದೆ. ತಾಮಸಾಹಂಕಾರವು ಪಂಚಭೂತಗಳಿಗೆ ಕಾರಣವಾಗಿ ಅಷ್ಟು ಜ್ಞಾನ ಪ್ರಕಾಶಕ್ಕೆ ಅವಕಾಶ ಕೊಡದಿರುವುದರಿಂದ ಮೂಢವೆನಿಸಿದೆ.

## ಮನಸ್ಸಿನ ಲಕ್ಷಣ

ಮನಸ್ಸು ಸಂಕಲ್ಪ ವಿಕಲ್ಪವೃತ್ತಿವುಳ್ಳದ್ದು. ಪ್ರತ್ಯಾಹಾರದಿಂದ ಮಾತ್ರ ವಶ ವಾಗುವುದು. ಇದಕ್ಕೆ ಅಭಿಮಾನಿಯು ಅನಿರುದ್ಧನು (ಮನ್ಮಥನ ಮಗನು), ನಿಯಾ ಮಕನು ಅನಿರುದ್ಧ ಪರಮಾತ್ಮನು.

## ಬುದ್ಧಿಯ ಲಕ್ಷಣ

ಮನಸ್ಸಿನಿಂದ ಸಾಮಾನ್ಯವಾಗಿ ಜ್ಞಾತವಾದ ವಸ್ತುವನ್ನು ನಿರ್ದೋಷಗಳಾದ ಇಂದ್ರಿಯಗಳಿಂದ ವಿಶೇಷವಾಗಿ ತಿಳಿಸಿಕೊಡುವುದು. ತೈಜಸಾಹಂಕಾರದ ವಿಕಾರವೇ ಬುದ್ಧಿತತ್ತ್ವವು. ಸಂಶಯ, ಭ್ರಾಂತಿ, ನಿಶ್ಚಯ, ಸ್ಮರಣೆ ಮತ್ತು ಅಜ್ಞಾನ ಇವು ಬುದ್ಧಿತತ್ತ್ವದ ಸ್ವಾಭಾವಿಕ ಲಕ್ಷಣ.

**ಇಂದ್ರಿಯಗಳು :–** ಇವು ತೈಜಸಾಹಂಕಾರದ ವಿಕಾರಗಳು. ಕರ್ಮೇಂದ್ರಿಯ ಗಳಿಗೆ ಅಹಂಕಾರಿಕ ಪ್ರಾಣನೂ. ಜ್ಞಾನೇಂದ್ರಿಯಗಳಿಗೆ ಉಮಾದೇವಿಯೂ ಅಭಿ ಮಾನಿಗಳು.

**ಆಕಾಶ .–** ತಾಮಸಾಹಂಕಾರದಿಂದ ಹುಟ್ಟಿದ ಶಬ್ದತನ್ಮಾತ್ರೆಯಿಂದ ಆಕಾಶಭೂತವು ಉತ್ಪತ್ತಿಯಾಗಿದೆ, ಮತ್ತು ಕಿವಿಯ ಗೋಲಕವೂ ಹುಟ್ಟಿದೆ. ಪದಾರ್ಥಗಳನ್ನು ತಿಳಿಸಿಕೊಂಡುವುದು, ಹರಿಯನ್ನು ತಿಳಿಸುವುದು ಆಕಾಶಗುಣ. ಇವು ಶಬ್ದದ ಲಕ್ಷಣಗಳಾಗಿವೆ. ಆಕಾಶದ ಸ್ವಾಭಾವಿಕ ಲಕ್ಷಣಗಳಾವುವೆಂದರೆ ಪ್ರಾಣಿ ಗಳಿಗೆ ಅವಕಾಶ ಕೊಡುವುದು, ಒಳ ಹೊರಗೆ ದಿಗ್ರೂಪವಾಗಿರುವುದು, ಪ್ರಾಣಾದಿ ಪಂಚ ವಾಯುಗಳೂ, ಇಂದ್ರಿಯಗಳೂ, ಜೀವರೂ ವಾಸ ಮಾಡುವುದಕ್ಕೆ ಅರ್ಹ ವಾಗಿರುವುದು.

**ವಾಯು –** ಆಕಾಶದ ವಿಕಾರವೇ ಸ್ಪರ್ಶತನ್ಮಾತ್ರೆ. ಅದರಿಂದ ಭೂತ ವಾಯುವು ಮತ್ತು ಸ್ಪರ್ಶಜ್ಞಾನಕ್ಕೆ ಕಾರಣವಾದ ಸ್ಪರ್ಶೇಂದ್ರಿಯವೂ ಹುಟ್ಟಿದುವು. ಮಾರ್ದವ, ಕಾಠಿಣ್ಯ, ಶೈತ್ಯ, ಔಷ್ಣ್ಯ ಇವು ವಾಯುವಿನ ವಿಶೇಷಗುಣಗಳು.

**ತೇಜಸ್ಸು :–** ವಾಯುಭೂತದಿಂದ ಹುಟ್ಟಿದ ರೂಪ ತನ್ಮಾತ್ರೆಯಿಂದ ತೇಜಸ್ತತ್ತ್ವವೂ, ರೂಪಜ್ಞಾನಕ್ಕೆ ಕಾರಣವಾದ ಚಕ್ಷುರಿಂದ್ರಿಯವೂ ಹುಟ್ಟಿದುವು. ಪದಾರ್ಥಗಳಿರುವವರೆಗೂ ಇರುವುದು, ಪ್ರಕಾಶಮಾನವಾಗಿರುವುದು. ವ್ಯಕ್ತಿಯಾಗಿರು ವಿಕೆ, ಉಗ್ರವಾಗಿರುವಿಕೆ ಇವು ರೂಪತನ್ಮಾತ್ರೆಯ ಸ್ವಾಭಾವಿಕ ಲಕ್ಷಣಗಳು. ಬೆಳಗಿಸು ವುದು, ಪಚನಮಾಡುವುದು, ಹಸಿವು ನೀರಡಿಕೆಗಳನ್ನುಂಟುಮಾಡುವುದು ಅಗ್ನಿಯ ಸ್ವಭಾವವು.

**ಜಲ :–** ತೇಜಸ್ಸಿನಿಂದ ರಸತನ್ಮಾತ್ರೆಯೂ, ಅದರಿಂದ ನೀರು ಮತ್ತು ರಸ ಜ್ಞಾನಜನಕವಾದ ರಸನೇಂದ್ರಿಯ ಹುಟ್ಟಿದುವು. ರಸವು ಒಂದೇ ಆದರೂ ಭೌತಿಕ ಪದಾರ್ಥಗಳ ವಿಕಾರದಿಂದ ಒಗರು, ಸಿಹಿ, ಕಹಿ, ಖಾರ, ಹುಳಿ ಮತ್ತು ಉಪ್ಪು ಎಂದು ಅನೇಕ ಬಗೆಯಾಗಿದೆ. ತೋಯಿಸುವುದು, ಮುದ್ದೆ ಮಾಡುವುದು, ತೃಪ್ತಿ ಪಡಿಸುವುದು, ಪ್ರಾಣಕ್ಕೆ (ಚೇಷ್ಟೆಗೆ) ಕಾರಣವಾಗುವುದು. ಸಂತೋಷಕ್ಕೆ ಕಾರಣ ವಾಗುವುದು, ಬಿಂದುಗಳಾಗುವುದು, ಸಂತಾಪ ಪರಿಹರಿಸುವುದು, ಕಾರ್ಯಗಳಲ್ಲಿ ಹೆಚ್ಚಿಗೆ ಇರುವುದು ಇವು ನೀರಿನ ಸ್ವಭಾವಗಳು.

**ಭೂಮಿ :–** ನೀರಿನ ವಿಕಾರವು ಗಂಧತನ್ಮಾತ್ರೆ. ಅದರಿಂದ ಭೂಮಿ, ಗಂಧ ಜ್ಞಾನವನ್ನುಂಟುಮಾಡುವ ಘ್ರಾಣೇಂದ್ರಿಯಗಳು ಹುಟ್ಟಿದುವು. ಗಂಧವು ಒಂದೇ ಆದರೂ ದ್ರವ್ಯಗಳ ಮತ್ತು ಅವಯವಗಳ ವ್ಯತ್ಯಾಸಗಳಿಂದ ಸುಟ್ಟವಾಸನೆ, ಕೊಳೆತ ವಾಸನೆ, ಸುವಾಸನೆ, ಮಿಶ್ರವಾಸನೆ, ಘಾಟು ಮತ್ತು ಹುಳಿ ಇವೇ ಮೊದಲಾದ ಅನೇಕ ವಿಧವಾಗಿ ಕರೆಸಿಕೊಳ್ಳುವುದು. ಗಿಡಮರ ಬಳ್ಳಿಗಳನ್ನು ಚಿಗುರಿಸುವುದು, ಪರಬ್ರಹ್ಮ ನಿಗೆ ದೇಹದಲ್ಲಿ ಸ್ಥಾನವಾಗಿರುವುದು. ಗುರುಪದಾರ್ಥಗಳನ್ನು ಹೊರುವುದು. ಅಪ್ಪು ಮತ್ತು ತೇಜಸ್ಸುಗಳಿಗಿಂತ ಸ್ಪಷ್ಟವಾಗಿ ಚೆನ್ನಾಗಿ ಗೋಚರಿಸುವುದು, ಜೀವರಿಗೆ ಸಂಸಾರಾವಸ್ಥೆಯಲ್ಲಿ ಜ್ಞಾನ, ಭಕ್ತಿಗಳು ವ್ಯಕ್ತವಾಗುವ ಸ್ಥಾನವಾಗಿರುವುದು ಭೂಮಿಯ ಸ್ವಾಭಾವಿಕ ಲಕ್ಷಣಗಳು.

ಶ್ರೋತ್ರಾದಿ ಇಂದ್ರಿಯಗಳ ಲಕ್ಷಣ ಯಾವುದೆಂದರೆ ಶಬ್ದಾದಿ ವಿಷಯಗಳನ್ನು ಗ್ರಹಿಸುವುದು.

### ಅಂಡ ನಿರ್ಮಾಣ

ಹೀಗೆ ಉತ್ಪನ್ನಗಳಾದ ತತ್ತ್ವಗಳು ಪರಸ್ಪರ ಹೊಂದಿಕೊಂಡು ಬ್ರಹ್ಮಾಂಡ ವನ್ನು ಸೃಷ್ಟಿಸಲು ಶಕ್ತಿಯಿಲ್ಲದೇ ಹೋದುವು. ಶ್ರೀ ಹರಿಯು ಅವುಗಳಲ್ಲಿ ಪ್ರವೇಶಿಸಿ ಅವುಗಳಲ್ಲಿದ್ದ ಶಕ್ತಿಯನ್ನು ಉದ್ಬೋಧನೆ ಮಾಡಿದನು. ಆಗ ಅವುಗಳಿಂದ ಬ್ರಹ್ಮಾಂಡವು ಹುಟ್ಟಿತು. ಅದರೊಳಗೆ ಬ್ರಹ್ಮನು ಹುಟ್ಟಿದ್ದರಿಂದ ಅದು ಬ್ರಹ್ಮಾಂಡ ವೆಂದು ಹೆಸರಾಯಿತು.

ಬ್ರಹ್ಮಾಂಡಕ್ಕೆ ವಿಶೇಷವೆಂದು ಹೆಸರು, ಕಾರಣವೇನೆಂದರೆ :– 1. ವಿಶೇಷ ವೆಂದು ಕರೆಯಲ್ಪಡುವ ಭೂಮಿಯು ಅಂಡಕ್ಕೆ ಚಿಪ್ಪಿನಂತೆ ಸೇರಿ ವ್ಯಾಪಿಸಿದೆ. 2. ಅಂಡದ ಮೇಲೆ ಹತ್ತು ಆವರಣಗಳಿವೆ. 3. ಅಂಡದ ಒಳಗೆ 14 ಲೋಕ ಗಳಿದ್ದು ಹರಿಯ ಪ್ರತಿಮೆಯಾಗಿದೆ.

ಶ್ರೀ ಹರಿಯು ನೀರಿನಿಂದ ಬ್ರಹ್ಮಾಂಡವನ್ನೆತ್ತಿ ಅದರೊಳಗೆ ಪ್ರವೇಶಿಸಿದನು. ಅಂಡದೊಳಗಿದ್ದು ಬ್ರಹ್ಮದೇವರ ವಿರಾಟ್ ಎಂಬ ಹೆಸರಿನ ದೇಹದೊಳಗೆ ಪ್ರವೇಶಿಸಿದನು. ಆ ದೇಹಕ್ಕೆ ಮುಖ ಮೊದಲಾದ ನವದ್ವಾರಗಳನ್ನು ಮಾಡಿದನು. ಮೊದಲು ಮುಖ, ಅದರಲ್ಲಿ ವಾಗಿಂದ್ರಿಯ, ಅದಕ್ಕೆ ಅಭಿಮಾನಿಯು ಅಗ್ನಿಯು ಪ್ರಕಟರಾದರು ಹೀಗೆಯೇ ವಿರಾಟ್ ದೇಹದಲ್ಲಿ ನಾಸಿಕ ಮೊದಲಾದ ಗೋಳಕಗಳೂ, ಅವುಗಳಲ್ಲಿ ಘ್ರಾಣ ಮೊದಲಾದ ಇಂದ್ರಿಯಗಳೂ ಮತ್ತು ಅವುಗಳ ಅಭಿಮಾನಿ ದೇವತೆಗಳಾದ ನಾಸಿಕ ವಾಯು ಮೊದಲಾದವರೂ ಹುಟ್ಟಿದರು.

## ವಾಯು ಜೀವೋತ್ತಮನು

ಹುಟ್ಟಿದ ಅಗ್ನ್ಯಾದಿ ತತ್ತ್ವ ಪತಿಗಳಿಗೆ "ನಾನು ದೊಡ್ಡವನು, ತಾನು ದೊಡ್ಡವನು" ಎಂದು ಕಲಹವುಂಟಾಯಿತು. ಆಗ ಯಾರೊಬ್ಬರು ದೇಹವನ್ನು ಬಿಟ್ಟು ಹೋಗುವುದರಿಂದ ಅದು ಕೆಳಕ್ಕೆ ಬೀಳುವುದೋ ಅಂದರೆ ಹೆಣವೆನಿಸುವುದೋ ಮತ್ತು ಪ್ರವೇಶಿಸುವುದರಿಂದ ಬದುಕಿ ಎದ್ದು ನಿಲ್ಲುವುದೋ ಅವರೇ ದೊಡ್ಡವರೆಂದು ನಿರ್ಣಯಿಸಿದರು. ವಿರಾಟ್ ದೇಹದಿಂದ ಅಗ್ನ್ಯಾದಿ ತತ್ತ್ವ ದೇವತೆಗಳು ಹೊರಗೆ ಹೋದರು. ದೇಹವು ಬೀಳಲಿಲ್ಲ. ಏಕೆಂದರೆ ಬ್ರಹ್ಮದೇವರು (ವಾಯುದೇವರು) ಒಂದಂಶದಿಂದ ವ್ಯಾಪಾರವಿಲ್ಲದಂತೆ ಆ ದೇಹದೊಳಗಿದ್ದರೂ, ಮತ್ತೊಂದು ರೂಪದಿಂದ ಹೊರಗೆ ಬಂದ ಕೂಡಲೇ ಅದು ಕೆಳಗೆ ಬಿದ್ದಿತು.

ಪದ ॥ ಕರಣಾಭಿಮಾನಿಗಳು ಸುರರು ದೇಹವ ಬಿಡಲು ।
ಕುರುಡ ಕಿವುಡಾ ಮೂಕನೆಂದೆನಿಸುವ ॥
ಪರಮ ಮುಖ್ಯ ಪ್ರಾಣ ತೊಲಗಲಾ ದೇಹವನು ।
ಅರಿತು ಹೆಣನೆಂದು ಪೇಳುವರು ಬುಧಜನ ॥

ಶ್ರೀಪಾದರಾಜರ ಕವನ

ಒಂದು ವರುಷ ಕಳೆದ ನಂತರ ಅಗ್ನ್ಯಾದಿಗಳು ಕ್ರಮವಾಗಿ ಆದೇಹದೊಳಗೆ ಪ್ರವೇಶಿಸಿದರು.

ಎಲ್ಲರೂ ಒಟ್ಟಾಗಿ ಪ್ರೇರಿಸಿದರೂ ಆ ದೇಹವು ಮೇಲಕ್ಕೇಳಲೇ ಇಲ್ಲ. ಬ್ರಹ್ಮಾಂಡವ್ಯಾಪಿಯೂ, ಕ್ಷೇತ್ರಜ್ಞ ನಾಮಕನೂ ಆದ ಶ್ರೀಹರಿಯು ಬ್ರಹ್ಮ ವಾಯುಗಳೊಡನೆ ಆ ದೇಹವನ್ನು ಪ್ರವೇಶಿಸಿದ ಕೂಡಲೇ ಆ ಬ್ರಹ್ಮದೇಹವು ಚೈತನ್ಯವನ್ನು ಹೊಂದಿ ನೀರಿನಿಂದ ಮೇಲಕ್ಕೆದ್ದಿತು. ಹರಿಯ ಪ್ರಭಾವದಿಂದಲೇ ಅದಕ್ಕೆ ಮತ್ತೆ ಚೈತನ್ಯವು ಬಂದಿತು ಶ್ರೀ ವಾಯುದೇವರು ಪ್ರವೇಶಿಸಿರುವುದರಿಂದ ಮಾತ್ರವಲ್ಲ, ಶ್ರೀ ಹರಿಯ ಪ್ರವೇಶದಿಂದಲೇ ಆ ದೇಹ ಚೈತನ್ಯ ಯುಕ್ತವಾಯಿತು. ಒಂದಂಶದಿಂದ

ದೇಹದಲ್ಲಿ ಸುಪ್ತರಂತಿದ್ದ ಬ್ರಹ್ಮದೇವರು ಯಾರಿಂದಲೂ ಎಚ್ಚರಗೊಳ್ಳಲಿಲ್ಲ. ಈ ಸತ್ಯಾಂಶವನ್ನು ಅರಿತು ಶರೀರಾಂತರ್ಯಾಮಿ ಶ್ರೀಹರಿಯನ್ನೇ ವೈರಾಗ್ಯ, ಭಕ್ತಿ ಸಹಿತ ವಾದ ನಿಶ್ಚಯಾತ್ಮಕ ಜ್ಞಾನದಿಂದ ವಿವೇಕಯುಕ್ತನಾಗಿ ಉಪಾಸಕನು ಹೃದಯದಲ್ಲಿ ಧ್ಯಾನಿಸಬೇಕು.

## ಇಪ್ಪತ್ತೇಳನೆಯ ಅಧ್ಯಾಯ ಮುಗಿದುದು

**ಕಪಿಲ :-** ಹರಿಯು ನಿರ್ಗುಣನು, ಆದ್ದರಿಂದ ತ್ರಿಗುಣಮಯವಾದ ದೇಹ ದಲ್ಲಿದ್ದರೂ ಆ ನಿಮಿತ್ತ ಅವನಿಗೆ ಸುಖದುಃಖಾದಿಗಳಿಲ್ಲ. ಜೀವನು ಹಾಗಲ್ಲ, ಅವನು ಶರೀರವನ್ನು ಹೊಂದಿದಾಗ ಅವನಿಗೆ ಮೂರು ಗುಣಗಳು ಸಂಪರ್ಕವಾಗುವುದರಿಂದ ಅಹಂಮಮತೆಗಳಿಂದ ಮೂಢನಾಗಿ, ಹರಿಯ ಸ್ವರೂಪವನ್ನು ಮರೆತು ತಾನೇ ಸ್ವತಂತ್ರ ಕರ್ತನೆಂದು ತಿಳಿಯುವನು. ಈ ಅಭಿಮಾನದಿಂದ ವಿಷಯಗಳಲ್ಲಿ ಆಸಕ್ತ ನಾಗಿ ಪುಣ್ಯ ಪಾಪಕರ್ಮಗಳನ್ನು ಮಾಡುವುದರಿಂದ ದೇವಮಾನವಾದಿ ಜನ್ಮಗಳನ್ನು ಹೊಂದಿ ಸುಖ ದುಃಖವೆಂಬ ಸಂಸಾರಕ್ಕೆ ಸಿಕ್ಕಿಬೀಳುವನು. ಹೀಗೆ ಪ್ರತಿಯೊಂದು ಜನ್ಮದಲ್ಲಿಯೂ ವಿಷಯ ಚಿಂತನೆ ಮಾಡಿಮಾಡಿ ಸಂಸಾರ ನಿವೃತ್ತಿಯನ್ನು ಹೊಂದು ವುದೇ ಇಲ್ಲ. ಜೀವನು ಮಿಥ್ಯಾಜ್ಞಾನ ಮತ್ತು ಅಜ್ಞಾನಗಳಿಂದ ವಿಷಯಗಳನ್ನು ಅನುಭವಿಸುತ್ತಲೇ ಇರುವನು. ಆದ್ದರಿಂದ ಸಂಸಾರವು ತನಗೆ ತಾನೇ ನಾಶ ಹೊಂದುವುದಿಲ್ಲವೆಂದೂ, ಶಾಸ್ತ್ರದಿಂದ ತಿಳಿದು, ವಿಷಯ ಸುಖವು ನಿಸ್ಸಾರ, ಹೇಯ ವೆಂದು ಚಿಂತಿಸಿ ವಿಷಯ ಧ್ಯಾನವನ್ನು ತ್ಯಜಿಸಬೇಕು. ಭಕ್ತಿ ಮತ್ತು ವೈರಾಗ್ಯಗಳಿಂದ ಮನಸ್ಸನ್ನು ಗೆದ್ದು, ಯಮನಿಯಮಗಳನ್ನು ಅನುಸರಿಸಿ, ನನ್ನಲ್ಲಿ ಮನಸ್ಸನ್ನು ನಿಲ್ಲಿಸಿ, ಧ್ಯಾನಿಸಿ ಬ್ರಹ್ಮದರ್ಶನ ಮಾಡಬೇಕು. ಪ್ರಾರಬ್ಧ ಕರ್ಮವನ್ನು ಭೋಗಿಸಿ ಕಳೆದುಕೊಂಡು ಬ್ರಹ್ಮಲೋಕಕ್ಕೆ ಹೋಗಿ ಮಹಾಪ್ರಳಯದಲ್ಲಿ ಪರಬ್ರಹ್ಮನನ್ನು ಹೊಂದುವನು.

ಇಂದ್ರಾದಿಗಳಿಗೆ ಶೇಷನು ಬಿಂಬನು. ಅವನಿಗೆ ಬ್ರಹ್ಮದೇವರೂ. ಅವರಿಗೆ ಶ್ರೀಹರಿಯೂ ಬಿಂಬರು. ಹರಿಗೆ ಬಿಂಬರು ಯಾರೂ ಇಲ್ಲ. ಆದ್ದರಿಂದ ಜೀವರಿಗೆ ಬಿಂಬಾಪರೋಕ್ಷಜ್ಞಾನವು ಸ್ವಬಿಂಬ ಮೂಲಕವಾಗಿಯೇ ಆಗುವುದು.

ಪರಮಾತ್ಮನು ಪ್ರಳಯದಲ್ಲೂ ನಿದ್ರೆಯಿಲ್ಲದೆ ನಿತ್ಯಜ್ಞಾನಿಯಾಗಿರುವನು. ಜೀವನ ಸ್ವರೂಪನಾಶರಹಿತವಾದರೂ, ಪ್ರಳಯದಲ್ಲಿ ಹರಿಯ ಉದರ ಸೇರುವನು. ಸ್ಥೂಲಶರೀರವನ್ನು ಹರಿಯು ಕೊಟ್ಟಾಗ "ಇದುವರೆಗೂ ನಾನೇನೂ ತಿಳಿಯಲಿಲ್ಲ" ಎಂದು ಭಾವಿಸುತ್ತ ದುಃಖಿಯಾಗಿ, ಪರಾಧೀನನಾಗಿಯೇ ಇರುವನು. ಜೀವ

ಪರಮಾತ್ಮರಿಗೆ ಭೇದವಿದೆ ಎಂಬ ಜ್ಞಾನದಿಂದ ಉಪಾಸನೆ ಮಾಡಿಯೇ ಹರಿಯನ್ನು ಅಪರೋಕ್ಷೀಕರಿಸಬೇಕು.

**ದೇವಹೂತಿ :–** ಭೂಮಿಯು ಗಂಧವನ್ನು ಹೇಗೆ ಬಿಟ್ಟಿರಲಾರದೋ ಹಾಗೆಯೇ ಜೀವನು ಪ್ರಕೃತಿಯನ್ನು ಬಿಟ್ಟಿರಲಾರ. ಹೀಗಿರುವಾಗ ಜೀವನಿಗೆ ಮುಕ್ತಿಯು ಹೇಗಾಗುವುದು ?

**ಕಪಿಲ –** ನಿಷ್ಕಾಮ ಕರ್ಮ ಮಾಡಿ, ಜ್ಞಾನ ಭಕ್ತಿ ವೈರಾಗ್ಯಗಳಿಂದ ಧ್ಯಾನಿಸಿದರೆ ಬ್ರಹ್ಮಜ್ಞಾನವಾಗುವುದು. ಆಗ ಬಂಧಸ್ವರೂಪವಾದ ಪ್ರಕೃತಿಯು ಜೀವನನ್ನು ಬಿಡುವುದು. ತಿರುಗಿ ಅವನಿಗೆ ಸಂಸಾರ ಬಂಧವಿಲ್ಲ. ಸತ್ಸಾಧನಗಳಿಂದ ಪುನರಾವೃತ್ತಿಯಿಲ್ಲದೆ ನನ್ನ ಲೋಕಕ್ಕೆ ಬರುವನು. ಅವನಿಗೆ ಅಣಿಮಾದಿ ಸಿದ್ಧಿಗಳು ಕರಗತವಾಗುವುವು. ಅವುಗಳನ್ನು ಸ್ವಂತಕ್ಕೆ ಉಪಯೋಗಿಸಿಕೊಂಡರೆ ಮುಕ್ತಿಗೆ ವಿಳಂಬವಾಗುವುದು. ಅವುಗಳನ್ನು ಸ್ವಾರ್ಥಕ್ಕೆ ಉಪಯೋಗಿಸಿಕೊಳ್ಳದೆ ಹರಿಯಲ್ಲಿಯೇ ನಿರತನಾದರೆ ಪುನರಾವೃತ್ತಿಯಿಲ್ಲದ ನನ್ನ ಸ್ಥಾನವನ್ನು ಬೇಗ ಹೊಂದುವನು. ಇದೇ ಮೋಕ್ಷ.

### ಇಪ್ಪತ್ತೆಂಟನೆಯ ಅಧ್ಯಾಯ ಮುಗಿದುದು

**ಕಪಿಲ :–** ಜಗತ್ತಿಗೆ ನಿಮಿತ್ತಕಾರಣನಾದ್ದರಿಂದ ಶ್ರೀ ಹರಿಯು ಬೀಜನೆನಿಸುತ್ತಾನೆ. ಅವನನ್ನು ಪಡೆಯಲು ಚರಿಸುವ ಯೋಗವು ಸಬೀಜವೆನಿಸುವುದು ಇದರ ಲಕ್ಷಣವನ್ನು ಕೇಳು :– ಇದು 8 ಬಗೆ. ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ (ಖಂಡಸ್ಮೃತಿ), ಧ್ಯಾನ (ಪ್ರಯತ್ನದಿಂದ ಭಗವಂತನಲ್ಲಿ ಮನಸ್ಸನ್ನಿಟ್ಟು ಚಿಂತಿಸುವುದು), ಸಮಾಧಿ (ಪ್ರಯತ್ನವಿಲ್ಲದೆ ಮನಸ್ಸು ಹರಿಯನ್ನು ಚಿಂತಿಸುತ್ತಿರುವುದು) ಇವು ಯೋಗವು. ಇದರಿಂದ ಬ್ರಹ್ಮಜ್ಞಾನವಾಗುವುದು. ಧ್ಯಾನ ಕ್ರಮವೇನೆಂದರೆ ಭಗವಂತನ ಮುಖಪ್ರಸನ್ನ, ನೀಲವರ್ಣ ವಿಶಿಷ್ಟ, ಶಂಖಚಕ್ರಗದಾಧಾರಿ, ಪೀತಾಂಬರಧಾರಿ, 12 ವರ್ಷದವನಂತೆ ತೋರುತ್ತಿರುವನು. ಹೀಗೆ ಧ್ಯಾನಿಸಬೇಕು. ಸಂಪೂರ್ಣವಾಗಿ ಅವನ ಅವಯವಗಳನ್ನು ಧ್ಯಾನಿಸಲು ಶಕ್ತಿಯಿಲ್ಲದಿದ್ದರೆ ವಜ್ರಾಂಕುಶಾದಿ ಚಿಹ್ನೆಗಳಿಂದ ಅಲಂಕೃತ ಅಂಗಾಲುಗಳಿಂದ ಕ್ರಮವಾಗಿ ಒಂದೊಂದು ಅವಯವವನ್ನು ಧ್ಯಾನಿಸಬೇಕು. ಅದರಿಂದ ಸಮಾಧಿ, ಬಳಿಕ ದೇಹಾಭಿಮಾನ ನಾಶ. ಆಗ ಸ್ವಬಿಂಬ ದರ್ಶನ. ಆದರಿಂದ ಅಭಿಮಾನ ತೊಲಗುವುದು. ಜೀವನ್ಮುಕ್ತನು ಹರಿದರ್ಶನ ಸುಧಾಸಮುದ್ರದಲ್ಲಿ ಮುಳುಗಿರುವ ಪ್ರಯುಃಕ್ತ ತನ್ನ ಸಂರಕ್ಷಣೆಗೆ ಯತ್ನ ಮಾಡುವುದಿಲ್ಲ. ಪ್ರಾರಬ್ಧಕರ್ಮವು ಮುಗಿದ ಕೂಡಲೇ ದೇಹವು ಹೋಗುವುದು. ತಿರುಗಿ ಬರುವುದೇ ಇಲ್ಲ.

ಪರಮಾತ್ಮನು ಸರ್ವಜ್ಞನೂ, ಪೂರ್ಣನೂ ಆಗಿರುವುದರಿಂದ ಜೀವರಿಂದ ಭಿನ್ನ, ಸರ್ವಾಂತರ್ಯಾಮಿ, ಸರ್ವಕ್ಕೂ ಆಧಾರ, ಅಂತರ್ಯಾಮಿ, ಅವನ ರೂಪ ಗಳಿಗೆ ಭೇದವಿಲ್ಲ, ಆದಾನಾದಿ ಕರ್ತ, ಹೀಗೆಂದು ಅವನನ್ನು ಚಿಂತಿಸಬೇಕು. ಅನ್ವಯ – ಮತ್ತೊಂದು ವಸ್ತುವು ಇರುವ ದೇಶದಲ್ಲಿಯೂ, ಕಾಲದಲ್ಲಿಯೂ ಇರು ವವನು, ಸರ್ವಸಾಕ್ಷಿ, ಸರ್ವವ್ಯಾಪಿ, ಸರ್ವ ವಸ್ತುಗಳ ಆಗುಹೋಗುಗಳಿಗೆ ಕಾರಣ, ಸ್ವಭಿನ್ನಪ್ರಪಂಚದಿಂದ ಯಾವ ಫಲವೂ ಇಲ್ಲದವನು. ಹೀಗೆ ನಿತ್ಯ ಬ್ರಾಹ್ಮೀ ಮುಹೂರ್ತದಲ್ಲಿ ಉಪಾಸಿಸಬೇಕು. ಆಗ ಶ್ರೀಹರಿಯ ಅನುಗ್ರಹಕ್ಕೆ ಪಾತ್ರನಾಗುವನು.

ಇಪ್ಪತ್ತೊಂಭತ್ತನೆಯ ಅಧ್ಯಾಯ ಮುಗಿದುದು

**ದೇವಹೂತಿ :–** ಭಕ್ತಿಯೋಗದ ಪ್ರಕಾರ, ಕಾಲಸ್ವರೂಪ, ವೈರಾಗ್ಯವನ್ನು ಉಂಟುಮಾಡುವ ಗರ್ಭವಾಸಾದಿ ಸಂಸಾರ ಚರಿತ್ರೆಗಳನ್ನು ತಿಳಿಸು.

**ಕಪಿಲ :-** ಭಕ್ತರಲ್ಲಿ ಸಾತ್ವಿಕ, ರಾಜಸ, ತಾಮಸ ಭಕ್ತರೆಂದೂ, ನಿರ್ಗುಣ ಭಕ್ತರೆಂದೂ ನಾಲ್ಕು ಬಗೆ. ಸಮೀಚೀನವಾದ ಭಕ್ತಿಯು, ನಿಷ್ಕಾಮವಾಗಿ ಮಾಡುವ ಶ್ರೀಹರಿಯ ಆರಾಧನೆಗಳಿಂದ ಅಭಿವೃದ್ಧಿಯಾಗುವುದು. ಭಕ್ತಿಯಿಂದ ಬ್ರಹ್ಮಜ್ಞಾನ, ಮೋಕ್ಷ ದೊರೆಯುತ್ತವೆ. ನನ್ನನ್ನು ಸರ್ವಾಂತರ್ಯಾಮಿಯೆಂದು ಭಕ್ತಿಯಿಂದ ಧ್ಯಾನಿಸಬೇಕು. ತಾಮಸ ರಾಜಸ ಜನರು ಹೀಗೆ ನನ್ನನ್ನು ತಿಳಿಯದೆ ಪ್ರತಿಮೆಗಳನ್ನು ಇಟ್ಟುಕೊಂಡು ಪೂಜೆಯ ನಾಟಕವಾಡುವರು. ಜೀವರನ್ನು ಭಗವಂತನ ಪ್ರತಿಮೆ ಗಳೆಂದು ಪೂಜಿಸಬೇಕು. ಬ್ರಹ್ಮಜ್ಞಾನವಾಗುವವರೆಗೂ ಭಗವತ್ಪೂಜೆ ಮಾಡದಿದ್ದರೆ ದೋಷ ಬರುವುದು. ಜ್ಞಾನಾನಂತರ ಪ್ರತಿಮಾರ್ಚನೆ ಮಾಡದಿದ್ದರೆ ದೋಷವಿಲ್ಲ ದಿದ್ದರೂ ಆ ಪೂಜೆ ಆನಂದವೃದ್ಧಿಗೆ ಕಾರಣವಾಗುವುದು. ಅಂತರ್ಯಾಮಿ ರೂಪಗಳು ಭಿನ್ನಗಳೆಂದು ತಿಳಿಯುವುದು ಅನರ್ಥಕರ. ಅಂತಹವರನ್ನು ನರಸಿಂಹನು ನಿತ್ಯನರಕ ದಲ್ಲೊಗೆದು ದುಃಖ ಕೊಡುವನು. ಆದ್ದರಿಂದ ಸಕಲ ಜೀವರ ಹೃದ್ಗುಹೆಯನ್ನು ಮನೆಮಾಡಿ ವಾಸಿಸುವ ನನ್ನ ರೂಪಗಳಿಗೆ ಭೇದವಿಲ್ಲೆಂದೂ, ಜೀವರಿಗೂ ನನಗೂ ಭೇದವಿದೆಯೆಂದೂ ತಿಳಿದು ಜೀವರನ್ನು ಪೂಜಿಸಬೇಕು. ಸಮರೆಂದು ಪೂಜಿಸದೆ ತಾರತಮ್ಯಾನುಸಾರವಾಗಿ ಪೂಜಿಸಬೇಕು. ತಾರತಮ್ಯವೇನೆಂದರೆ :- ಮುಕ್ತರಾದ ಸ್ಥಾವರ ಜೀವರಿಗಿಂತ ಮುಕ್ತ ಜಂಗಮರು ಉತ್ತಮರು. ಅವರಲ್ಲಿಯೂ ಮನೋ ವ್ಯಾಪಾರ ಮಾತ್ರ ಮಾಡುವ ಮುಕ್ತ ಜೀವರಿಗಿಂತ ಇಂದ್ರಿಯ ವ್ಯಾಪಾರ ಮಾಡುವ ಮುಕ್ತ ಜೀವರು ಶ್ರೇಷ್ಠರು. ಹೀಗೆಯೇ ಮುಕ್ತ ಜೀವರಲ್ಲಿ ಸ್ಪರ್ಶಜ್ಞರು, ರಸಜ್ಞರು (ಮತ್ಸ್ಯಾದಿಗಳು), ಭ್ರಮರಾದಿಗಳು, ಸರ್ಪಾದಿಗಳೂ, ಶುಕ್ಲಾದಿ ರೂಪ ವಿಶೇಷ ಗಳನ್ನು ತಿಳಿಯುವವರು, ಮೇಲೆಕೆಳಗೆ ಹಲ್ಲುಗಳನ್ನುಳ್ಳವರು, ಶರಭಾದಿಗಳು, ಗೋವು, ವರ್ಣಹೀನ ಮಾನವ, ಚತುರ್ವರ್ಣದವರು, ಅವರಲ್ಲಿ ವಿಪ್ರರು, ವಿಪ್ರರಲ್ಲಿ ವೇದ

ವನ್ನೋದದೆ ಗುರೂಪದಿಷ್ಟ ವೈದಿಕ ಮಂತ್ರಾರ್ಥವನ್ನುಪಾಸಿಸಿ. ಬ್ರಹ್ಮಜ್ಞಾನದಿಂದ ಮುಕ್ತರಾದವರು, ಅಧ್ಯಯನ ಮಾಡಿದವರು, ಋಷಿಗಳು, ಬೃಹಸ್ಪತ್ಯಾದಿ ದೇವತೆಗಳೂ, ಇಂದ್ರ, ಗರುಡ, ಬ್ರಹ್ಮದೇವರು ಒಬ್ಬರಿಗಿಂತ ಒಬ್ಬರು ಉತ್ತಮರು. ಜೀವರಲ್ಲಿ ಬ್ರಹ್ಮದೇವರಿಗಿಂತ ಉತ್ತಮರು ಯಾರೂ ಇಲ್ಲ. ಈ ಜ್ಞಾನದಿಂದ ಬ್ರಹ್ಮದೇವರಲ್ಲಿರುವ ಹರಿಗೆ ವಂದಿಸಬೇಕು. ಜ್ಞಾನ ಭಕ್ತಿ ಎರಡೂ ಸೇರಿ ಭಕ್ತಿಯೋಗವೆನಿಸುವುದು. ಇದರಿಂದಲೇ ಮುಕ್ತಿ.

## ಕಾಲ ಸ್ವರೂಪ

ಕಾಲನು ಪೂರ್ಣನಾಗಿರುವನು. ಸರ್ವಾಂತರ್ಯಾಮಿ. ಪುರುಷೋತ್ತಮನು. ಸರ್ವಕರ್ಮ ಪ್ರೇರಕ, ಅತೀತವರ್ತಮಾನಾದಿ ಕಾಲರೂಪದಲ್ಲಿರುವವನು. ಬ್ರಹ್ಮಾದಿ ಜೀವರಿಗೆ ಮಾರಕನು. ಯೋಗ್ಯತೆ ಮೀರಿದ ದ್ವೇಷಿಯೂ ಇಲ್ಲ, ಪ್ರಿಯನೂ ಇಲ್ಲ. ಸರ್ವನಿಯಾಮಕ. ಇವನಿಂದಲೇ ವಾಯುವು ಬೀಸುವನು. ಸೂರ್ಯನು ಬೆಳಗುವನು. ಇಂದ್ರನು ಮಳೆಗರೆಯುವನು. ವೃಕ್ಷಾದಿಗಳು ಫಲಪುಷ್ಪಗಳನ್ನು ಕೊಡುವುವು. ನದಿಗಳು ಹರಿಯುತ್ತಿರುವುವು. ಸಮುದ್ರವು ಮೇರೆ ತಪ್ಪದಿರುವುದು, ಅಗ್ನಿಯು ಜ್ವಲಿಸುವನು. ಪರ್ವತ ಸಹಿತವಾದ ಭೂಮಿಯು ನೀರಿನಲ್ಲಿ ಮುಳುಗದೆ ಇರುವುದು. ಆಕಾಶವು ಪ್ರಾಣಿಗಳ ಸಂಚಾರಕ್ಕೆ ಮಾರ್ಗವನ್ನು ಕೊಡುತ್ತಿರುವುದು. ಬ್ರಹ್ಮದೇವರು ಪ್ರಾಣಿಗಳನ್ನು ಸೃಷ್ಟಿಸುತ್ತಿರುವರು. ಅಹಂಕಾರ ಮೊದಲಾದ ತತ್ತ್ವದೇವತೆಗಳು ಕಲ್ಪಕಲ್ಪಗಳಲ್ಲಿಯೂ ಸೃಷ್ಟ್ಯಾದಿಗಳಲ್ಲಿ ಆಸಕ್ತರಾಗಿರುವರು ಇಂತಹ ಮಹಿಮೆಯುಳ್ಳ ಹರಿಯೇ ಕಾಲನು ಅಂದರೆ ಜ್ಞಾನಸ್ವರೂಪ ಅನಂತ, ಅಂತಕನು. ಅನಾದಿ ಸರ್ವೋತ್ಪಾದಕನು. ಬೇಡಿದವರ ಇಷ್ಟಾರ್ಥಗಳನ್ನು ಕೊಡುವ ಮಹಾಮಹಿಮನು. ಆಜ್ಞಾವರ್ತಿಗಳಾದ ಬ್ರಹ್ಮಾದಿಗಳಿಂದ ಸೃಷ್ಟಿ ಮಾಡಿಸುವವನೂ, ದುರ್ಗಾರುದ್ರಾದಿಗಳಿಂದ ಸಂಹಾರ ಮಾಡಿಸುವವನೂ ಆಗಿ ಮುಮುಕ್ಷುಗಳಿಂದ ಉಪಾಸ್ಯನಾಗಿರುವನು.

## ಮೂವತ್ತನೆಯ ಅಧ್ಯಾಯ ಮುಗಿದುದು

**ಕಪಿಲ :–** ಕಾಲನನ್ನು ಯಾರೂ ಜಯಿಸಲಾರರು. ದೇಹಿಯಾದವನು ಈ ಕಾಲನಿಂದ ಪ್ರೇರಿತನಾಗಿ ಮೃತ್ಯುವಿನ ಬಾಯಿಯ ಕಡೆಗೆ ಓಡುತ್ತಿರುವನು. ಮೋಡಗಳು ಓಡುತ್ತಿದ್ದರೂ ಓಡಿಸುವ ವಾಯುವನ್ನರಿಯದಂತೆ ಜನರಾರೂ ಕಾಲರೂಪಿಯನ್ನು ಅರಿಯುತ್ತಿಲ್ಲ. ಜೀವರು ಅಜ್ಞಾನದಿಂದ ಸಂಸಾರಕ್ಕೆ ಸಿಕ್ಕಿ ದುಃಖಿಸುತ್ತಿರುವರು. ಇದೆಲ್ಲ ಸ್ಥಿರವೆಂಬ ಭ್ರಾಂತಿ, ವೈರಾಗ್ಯದ ಅಭಾವ, ಬಂಧಕ ಶಕ್ತಿ, ಅಹಂಕಾರ ಮಮಕಾರ, ಪಾಪಕರ್ಮ ಇವೇ ಜೀವನ ಸಂಸಾರಕ್ಕೆ ಕಾರಣಗಳು. ಜೀವನು ಯೌವನ ಬಂದಾಗ ತನುಮೂಲವನ್ನು ಮರೆತು, ತರುಣಿಯರನ್ನು ಬಯಸಿ, ಮರುಳಾಗಿ ಅವರಿಗಾಗಿ ದುಡಿಯುತ್ತ, ಮಧ್ಯೆ ದುಃಖವಿಲ್ಲದಿದ್ದರೆ

ಅದೇ ಪರಮ ಸುಖವೆಂದು ಭ್ರಮಿಸುವನು. ಅತಿವೃಷ್ಟಿ, ಅನಾವೃಷ್ಟಿ, ರೋಗ, ದನಗಳ ನಾಶ ಮುಂತಾದುವುಗಳಿಂದ ನಷ್ಟವಾದಾಗ ಕಂಡವರ ಗಂಟನ್ನು ಕದಿಯ ಬೇಕೆಂದು ಯೋಚಿಸುವನು. ಅದಕ್ಕೂ ಶಕ್ತಿಯಿಲ್ಲದೆ, ಏನೂ ಮಾಡಿದರೂ ಕುಟುಂಬ ಭರಣವು ಸಾಗದೆ ಹೋದರೆ ಅಯ್ಯೋ ! ಎಂದು ನಿಟ್ಟುಸಿರು ಬಿಡುವನು. ಮುದುಕ ನಾದಾಗ ಹಿಂದೆ ಇವನಿಂದ ಪಾಲಿತರಾಗಿದ್ದವರು ಆದರಿಸದೆ ಕಸದಂತೆ ನೋಡುವರು. ಮೂದಲಿಸಿ ಹಾಕಿದ ಅನ್ನವನ್ನು ನಾಯಿಯಂತೆ ತಿಂದು, ಅಜೀರ್ಣರೋಗದಿಂದ ನರಳುತ್ತ, ಹಾಸಿಗೆ ಮೇಲೆ ಕದಲದ ಹಾಗೆ ಬಿದ್ದಿರುವನು. ಸಾವು ಬಂದಾಗ ಯಮ ಭಟರನ್ನು ನೋಡಿ ಭಯದಿಂದ ಜಲಮಲವನ್ನು ವಿಸರ್ಜಿಸಿ, ಕೊನೆಗೆ ಮಹಾ ವ್ಯಥೆ ಯಿಂದ ಸಾಯುವನು. ಆಗ ಯಮಭಟರು ಯಾತನಾ ದೇಹದೊಳಗೆ ಇವನನ್ನು ಸೇರಿಸಿ, ಕೊರಳಿಗೆ ಪಾಶವನ್ನು ಬಿಗಿದು, ದುಃಖಕರ ಮಾರ್ಗದಲ್ಲಿ ದರದರನೆ ಎಳೆದು ಕೊಂಡು ಹೋಗುತ್ತ, ಹೊಡೆದು, ಜಬರಿಸಿ, ಹಿಂಸಿಸುತ್ತ ನರಕದಲ್ಲಿ ಒಗೆಯುವರು. ಅಲ್ಲಿ ನಾನಾ ಹಿಂಸೆ ಪಡುವನು. ಭೂಲೋಕದಲ್ಲಿ ಸುಖ ದುಃಖಗಳಿರುವಂತೆ ನರಕ ಸ್ವರ್ಗಗಳೂ ಇವೆ. ಸಾಯುವವನು ಮನೆಮಠ ಮಕ್ಕಳು ಮಡದಿಯರನ್ನು ಇಲ್ಲೇ ಬಿಟ್ಟು ಹೋಗುವಂತೆ ಪಾಪಗಳನ್ನು ಇಲ್ಲೇ ಬಿಟ್ಟು ಹೋಗಲಾರನು. ಪುಣ್ಯಪಾಪಗಳ ನಿಯಾಮಕನಾದ ಶ್ರೀಹರಿಯು ಅವರವರ ಕರ್ಮಗಳನ್ನು ಅವರವರ ಸೆರಗಿನಲ್ಲಿ ಗಂಟು ಹಾಕಿರುವುದರಿಂದ ಅವುಗಳಿಂದ ಜೀವನು ತಪ್ಪಿಸಿಕೊಳ್ಳಲಾರ. ಭಗವಂತನಲ್ಲಿಯೂ, ಅವನ ಭಕ್ತರಲ್ಲಿಯೂ ದ್ವೇಷಿಸುವವರು ನಿತ್ಯನರಕದಲ್ಲಿ ಬೀಳುವರು ಅವರಿಗೆ ಅದರಿಂದ. ಎಂದೂ ಬಿಡುಗಡೆ ಇಲ್ಲವೇ ಇಲ್ಲ. ಇತರ ಪಾಪಗಳನ್ನು ಮಾಡಿರುವವರು ತಕ್ಕ ದುಃಖಗಳನ್ನು ನರಕದಲ್ಲಿ ಅನುಭವಿಸಿ ಪುನಃ ಈ ಲೋಕಕ್ಕೇ ಬರುವರು. ಪುಣ್ಯ ಮಾಡಿದರೆ ಸ್ವರ್ಗಕ್ಕೂ, ಪಾಪ ಮಾಡಿದರೆ ನರಕಕ್ಕೂ, ಹೋಗುತ್ತಾರೆ. ಹೀಗೆ ಸ್ವರ್ಗ ಭೂಮಿ, ನರಕಗಳಲ್ಲೇ ಸುತ್ತುತ್ತಾ ಇರುವರು.

## ಮೂವತ್ತೊಂದನೆಯ ಅಧ್ಯಾಯ ಮುಗಿದುದು

ಹಿಂದೆ ಹೇಳಿದಂತೆ ಜೀವನು ನರಕದಲ್ಲಿ ಕರ್ಮಫಲವನ್ನು ಅನುಭವಿಸಿದ ಮೇಲೆ, ಮಳೆ ಹನಿಯಲ್ಲಿ ಸೇರಿ, ಧಾನ್ಯಾದಿಗಳ ದ್ವಾರಾ ತಂದೆಯ ಉದರಕ್ಕೆ ಬಂದು, ಬಳಿಕ ತಾಯಿಯ ಉದರವನ್ನು ಸೇರುವನು. ಜೀವನು ಬಂದು ಸೇರಿರುವ ವೀರ್ಯದ ಬಿಂದುವು ಒಂದು ರಾತ್ರಿಯಲ್ಲಿ ಶೋಣಿತಮಿಶ್ರವಾಗುವುದು. ಐದು ರಾತ್ರಿಗಳಲ್ಲಿ ಅದೇ ಗುಳ್ಳೆ ಯಂತೆ ಉಂಡೆಯಾಗಿ, ಹತ್ತು ದಿನಗಳಲ್ಲಿ ಬೋರೆ ಹಣ್ಣಿನಷ್ಟು ದಪ್ಪವಾಗಿ ಗಟ್ಟಿ ಯಾಗುವುದು. ತಿಂಗಳಿಗೆ ತಲೆ, ಎರಡನೆಯ ತಿಂಗಳಲ್ಲಿ ಕರಚರಣಾದ್ಯವಯವಗಳು, ಮೂರನೆಯ ತಿಂಗಳಲ್ಲಿ ಉಗುರು, ಮೂಳೆ, ರೋಮರಂಧ್ರಗಳು, ನಾಲ್ಕನೆಯ ತಿಂಗಳಲ್ಲಿ ಚರ್ಮ, ಮಾಂಸ ಮೊದಲಾದ ಏಳುಧಾತುಗಳು, ಐದನೆಯ ತಿಂಗಳಲ್ಲಿ ಹಸಿವೆ ಬಾಯಾರಿಕೆಗಳು, ಆರನೆಯ ತಿಂಗಳಲ್ಲಿ ಜರಾಯುವಿನಿಂದ ಬಿಗಿಯಲ್ಪಟ್ಟು ಉದರದ

ಬಲಭಾಗಕ್ಕೆ ತಿರುಗುವುದು. ಏಳನೆಯ ತಿಂಗಳಲ್ಲಿ ಪೂರ್ವಜನ್ಮಗಳ ಕರ್ಮದ ಜ್ಞಾನವಾಗುವುದು. ತಾಯಿಯು ಉಂಡ ಅನ್ನ, ಕುಡಿದ ನೀರು ಇವುಗಳ ಸಾರವು ಆಪ್ಯಾಯನೀ ನಾಡಿಯ ದ್ವಾರಾ ಶಿಶುವಿಗೆ ತೃಪ್ತಿಯನ್ನುಂಟು ಮಾಡುವುದು. ಆಗ ಜೀವನು ಮಲಮೂತ್ರದ ಗುಳಿಯಲ್ಲಿ ಬಿದ್ದು ನರಳುತ್ತಿರುವನು. ಕ್ರಿಮಿಗಳು ಕಚ್ಚುವುದರಿಂದಲೂ, ತಾಯಿಯು ತಿಂದ ಆಹಾರದಲ್ಲಿರುವ ಖಾರ ಮೊದಲಾದವುಗಳಿಂದಲೂ ಬಾಧೆ ಪಡುತ್ತ ತಲೆಯನ್ನು ಬಗ್ಗಿಸಿಕೊಂಡು, ಇಕ್ಕಟ್ಟಿನ ಆ ಸ್ಥಳದಲ್ಲಿ ಉಡುಗಿಕೊಂಡಿರುವನು. ಹಿಂದಿನ ಕರ್ಮಗಳಿಗಾಗಿ ನಿಟ್ಟುಸಿರು ಬಿಡುವನು. ಏಳನೆಯ ತಿಂಗಳಲ್ಲಿ ಅಲ್ಲಿ ವಾಸ ಮಾಡುವುದರಿಂದಾಗುವ ದುಃಖವನ್ನರಿತು ಸೂತಿವಾತದಿಂದ ಚಲಿಸಲ್ಪಡುತ್ತಿರುವನು. ಆ ಜೀವನು ದೇವತೆ ಅಥವಾ ಉತ್ತಮ ಋಷಿಯಾಗಿದ್ದರೆ ತತ್ತ್ವಜ್ಞಾನ ಬರುವುದು. ಆದರಿಂದ ಈ ದುಃಖವನ್ನು ತಪ್ಪಿಸುವಂತೆ ಭಗವಂತನನ್ನು ಹೀಗೆ ಸ್ತುತಿಸುವನು :–

"ದೇವ ! ಶರಣಾಗತ ರಕ್ಷಕನೂ, ರಾಮಕೃಷ್ಣಾದ್ಯವತಾರಗಳನ್ನೂ ಎತ್ತುವ ನೀನೇ ನನ್ನ ದುಷ್ಕರ್ಮಕ್ಕೆ ಫಲವಾಗಿ ಈ ಗರ್ಭವಾಸದ ದುಃಖವನ್ನು ಕೊಟ್ಟಿರುವೆ. ಸ್ಮೃತಿಯನ್ನು ದಾನಮಾಡಿರುವ ನಿನ್ನಲ್ಲಿ ಮರೆ ಹೊಕ್ಕಿರುವೆನು. ಪ್ರಕೃತಿಯ ವಿಕಾರಗಳಿಂದ ದೇಹಾದಿಗಳಲ್ಲಿ ನೀನು ಲೇಪವಿಲ್ಲದಂತಿರುವೆ. ನಾನಾದರೋ ಇದರಿಂದ ಬದ್ಧನಾಗಿರುವೆನು. ಆದ್ದರಿಂದ ಜೀವಭಿನ್ನನಾದ ನಿನ್ನನ್ನು ಶರಣು ಹೊಂದುವೆನು. ಬಂಧಕನಾದ ನೀನು ಪ್ರೇರಿಸದೇ ಹೋದರೆ ಜನರು ಇನ್ನಾವ ಉಪಾಯದಿಂದಲೂ ನಿನ್ನಲ್ಲಿ ಶರಣಾಗತರಾಗಲಾರರು. ನೀನು ಪರಮೋಪಕಾರಿಯಾದ್ದರಿಂದ ಈ ತಾಪವನ್ನು ಪರಿಹರಿಸೆಂದು ನಿನ್ನನ್ನೇ ಭಜಿಸುವೆವು. ಎಂದಿಗೆ ಈ ಮಲಕೂಪದಿಂದ ಬಿಡಗಡೆ ಮಾಡುವೆಯೋ ಕಾಣೆ ಸ್ವಾಮೀ ! ನೀನು ಗೈದ ಉಪಕಾರಕ್ಕೆ ಇದೋ ! ನಮಸ್ಕಾರ ಮಾಡುವೆನು. ಇದೊಂದೇ ನಮ್ಮಿಂದ ಸಾಧ್ಯವಾದ ಸೇವೆ. ನೀನು ಕೊಟ್ಟ ಜ್ಞಾನದಿಂದಲೇ ಜೀವ ಜಡಭಿನ್ನನಾದ ನಿನ್ನನ್ನು ನೋಡುತ್ತಿರುವೆನು. ಈಗ ನಾನು ಹುಟ್ಟಿದರೆ ಕೂಡಲೇ ಈ ಜ್ಞಾನವು ಹೋಗಿ, ಅಜ್ಞಾನವು ಬಂದು ಆವರಿಸಿ ಸಂಸಾರ ಬೆಳೆಯುವುದು. ಆದ ಕಾರಣ ಈ ಗರ್ಭದಲ್ಲಿಯೇ ಇರುವೆನು. ಹೊರಗೆ ಹೋಗಲು ಇಷ್ಟವಿಲ್ಲ. ಇಲ್ಲಿಯೇ ಇದ್ದು ನಿನ್ನನ್ನು ಧ್ಯಾನಿಸಿ ಸಂಸಾರ ದುಃಖವನ್ನು ಕಳೆದುಕೊಳ್ಳುವೆನು."

ಹೀಗೆ ಭಗವಂತನನ್ನು ಬೇಡುತ್ತಿರುವಾಗಲೇ ಹತ್ತು ತಿಂಗಳಿನವನಾದ ಅವನನ್ನು ಪ್ರಸೂತಿ ವಾಯುವು ಹೊರಕ್ಕೆ ತಳ್ಳುವುದು. ಆಗ ಇದ್ದ ಜ್ಞಾನವು ಹೋಗುವುದು. ತಲೆಕೆಳಗಾಗಿ ಮೃತನಂತೆ ಹುಟ್ಟುವನು. ಮತ್ತೆ ಅಳುವನು. ಮುಂದೆ ನೊಣ ಮುಸುಕಿದರೆ ಅಳುವನು. ತಾಯಿಯು ಮಗುವು ಹಸಿವಿನಿಂದ ಅಳುವನೆಂದು ಊಹಿಸಿ ಸ್ತನ್ಯವನ್ನು ಕೊಡುವಳು. ಮಗುವು ಹಸಿವಿನಿಂದ ಅತ್ತಾಗ ಹೊಟ್ಟೆನೋವಿನಿಂದ

ಅಳುವುದೆಂದು ಊಹಿಸಿ ಔಷಧಿ ಸುರಿಯುವಳು. ಹೀಗೆ ಪಶುವಿನಂತೆ ಶಿಶುತನವನ್ನು ಕಳೆಯುವನು. ಬಳಿಕ ಅಳುತ್ತಾ ವಿದ್ಯೆಯನ್ನು ಕಲಿಯುವನು. ಆಮೇಲೆ ಯೌವನ ಬಂದಾಗ ಸ್ತ್ರೀಯನ್ನು ಬಯಸಿ ಕಾಮಕ್ರೋಧಗಳಿಗೆ ವಶನಾಗುವನು. ಶಿಶ್ನೋದರ ಪರಾಯಣನಾಗಿ ದುಷ್ಕರ್ಮಗಳನ್ನು ಮಾಡುತ್ತ, ದುಷ್ಟರ ಸಂಗಮಾಡುವನು. ಹೀಗೆಯೇ ಕಾಲವನ್ನು ಕಳೆದು ಸಾಯುವನು. ಪುನಃ ಹುಟ್ಟಿ ಸಂಸಾರದಲ್ಲಿ ತೊಳಲುವನು. ಇವನು ಸತ್ಯ ಮೊದಲಾದ ಸದ್ಗುಣವುಳ್ಳವನಾದರೂ ತಮಸ್ಸಿಗೆ ಕಾರಣರಾದ ಸ್ತ್ರೀಸಂಗಿಯ ಸಂಗವನ್ನು ಮಾಡಲೇಬಾರದು. ಸ್ತ್ರೀಸಂಗವೂ ಮೋಹಕವೇ ಆಗಿದೆ. ಹೀಗೆ ಕರ್ಮ ಪರಂಪರೆಯಿಂದ ಸಂಸಾರ ಪರಂಪರೆಯು ಗಂಟುಬೀಳುವುದು.

ಜೀವನು ಜ್ಞಾನ ಸ್ವರೂಪನು. ದೇಹಯೋಗ ವಿಯೋಗವೇ ಅವನಿಗೆ ಜನನ ಮರಣ. ಅಷ್ಟೇ ಹೊರತು ಅವನ ಸ್ವರೂಪಕ್ಕೆ ಹುಟ್ಟೂ ಇಲ್ಲ, ಸಾವೂ ಇಲ್ಲ. ಹಾಗೆಂದಮಾತ್ರಕ್ಕೆ ಭಗವಂತನಿಂದ ಅಭಿನ್ನನಲ್ಲ. ಚಕ್ಷುರಾದಿ ಇಂದ್ರಿಯಗಳು ಪರಸ್ಪರ ಭಿನ್ನಗಳಾಗಿ ಇರುವಂತೆ ಜೀವ ಮತ್ತು ಭಗವಂತ ಜೀವ ಜೀವರೂ ಭಿನ್ನರಾಗಿರುವರು. ಹಾಗಾದರೆ ಸ್ವರೂಪವು ಜ್ಞಾನ ಮತ್ತು ಆನಂದಮಯವಾಗಿರುವಾಗ ಜೀವನಿಗೆ ಸಂಸಾರವು ಹೇಗೆ ಬಂದಿತೆಂದರೆ :-

ದೇಹಾದಿಗಳಲ್ಲಿ ಜೀವನು ಅಹಂಮಮತೆ ಎಂಬ ಅಭಿಮಾನ ಮಾಡುವುದರಿಂದಲೇ ಸಂಸಾರವು ಅವನಿಗೆ ಗಂಟುಬೀಳಲು ಕಾರಣವಾಗಿದೆ. ಜೀವ ಮತ್ತು ಭಗವಂತನ ಸ್ವರೂಪದ ಜ್ಞಾನವಿಲ್ಲದಿರುವುದರಿಂದಲೇ ಅಭಿಮಾನವು ಬರುವುದು. ಆದ್ದರಿಂದ ಪರಮಾತ್ಮನ ಮತ್ತು ಜೀವರ ಸ್ವರೂಪದ ಜ್ಞಾನವನ್ನು ಸಂಪಾದಿಸಿ, ಅಭಿಮಾನವನ್ನು ಬಿಟ್ಟು ಸಂಸಾರ ದುಃಖವನ್ನು ತಪ್ಪಿಸಿಕೊಳ್ಳಬೇಕು.

ಜ್ಞಾನಿಯಾದರೋ ಜ್ಞಾನ, ಭಕ್ತಿ, ವೈರಾಗ್ಯವನ್ನು ಸಂಪಾದಿಸಿ, ಸರ್ವಾಧಾರನಾದ ಶ್ರೀಹರಿಯನ್ನು ನಿರಂತರ ಸೇವಿಸುತ್ತಿರುವನು.

**ಮೂವತ್ತೆರಡನೆಯ ಅಧ್ಯಾಯ ಮುಗಿದುದು**

ಗೃಹಸ್ಥನು ಸ್ವರ್ಗಾದಿಗಳ ಅಪೇಕ್ಷೆಯಿಂದ ದೇವತೆಗಳನ್ನೂ, ಪಿತೃಗಳನ್ನೂ ಆರಾಧಿಸಿದರೆ ಮುಂದೆ ಸ್ವರ್ಗವೇನೋ ದೊರೆಯುವುದು. ಆದರೆ ಆ ಕರ್ಮವು ಅಧಮ ಪ್ರಸಾದಜನಕವಾದ ಭಕ್ತಿಯನ್ನುಂಟುಮಾಡುವುದು. ಅದರಿಂದ ಅವನು ಸತ್ತು, ಧೂಮಾದಿ ಮಾರ್ಗದಿಂದ ಸ್ವರ್ಗಕ್ಕೆ ಹೋಗಿ ಅಲ್ಲಿ ಭೋಗಗಳನ್ನು ಅನುಭವಿಸಿ ಬಳಿಕ ತನ್ನ ವಂಶದಲ್ಲಿಯೇ ತಿರುಗಿ ಹುಟ್ಟುವನು. ಅವನು ಸೋಮಯಾಜಿಯಾಗಿದ್ದರೂ ಹರಿಯಲ್ಲಿ ಭಕ್ತಿಯಿಲ್ಲದಿದ್ದರೆ ನರಕವನ್ನು ಸಂದೇಹವೇ ಇಲ್ಲದೆ ಹೊಂದುವನು. ಒಟ್ಟಿನಲ್ಲಿ ಕಾಮ್ಯ ಕರ್ಮ ಮಾಡಿದವರಿಗೆ ದೊರೆಯುವ ಲೋಕ

ಗಳೆಲ್ಲ ಬ್ರಹ್ಮದೇವರ ದಿನಪ್ರಳಯದಲ್ಲಿ ನಾಶವಾಗುವುವು. ಆದ್ದರಿಂದ ಮೋಕ್ಷವನ್ನು ಬಯಸುವವನು ಎಂದೂ ಕಾಮ್ಯ ಕರ್ಮವನ್ನು ಮಾಡಬಾರದು.

ನಿಷ್ಕಾಮ ಕರ್ಮಗಳನ್ನು ಮಾಡುತ್ತ ಜ್ಞಾನ, ಭಕ್ತಿ, ವೈರಾಗ್ಯ ಸಂಪನ್ನ ರಾದವರು ಮಹರಾದಿ ಲೋಕಗಳಲ್ಲಿರುವ ಪರಬ್ರಹ್ಮನನ್ನು ಹೊಂದುವರು. ಬ್ರಹ ದೇವರು ನೂರುವರ್ಷ ತುಂಬಿ ಮೋಕ್ಷಕ್ಕೆ ಹೋಗುವವರೆಗೂ ಈ ಮಹರಾದಿ ಲೋಕ ಗಳಲ್ಲಿದ್ದು ಅವರು ಮುಕ್ತರಂತೆ ವಾಸಮಾಡುವರು. ಮಹಾಪ್ರಳಯವಾದಾಗ ಸ್ವಬಿಂಬ ದ್ವಾರಾ ಗರುಡ-ಶೇಷ ಮಾರ್ಗದಿಂದ ಬ್ರಹ್ಮದೇವರನ್ನು ಸೇರುವರು. ದೇವತೆ ಗಳ ಮತ್ತು ಈ ಜೀವರ ಸಹಿತವಾಗಿ ಬ್ರಹ್ಮದೇವರು ಲಕ್ಷ್ಮಿಯ ದ್ವಾರಾ ಪರಬ್ರಹ್ಮ ನನ್ನು ಸೇರುವರು. ಆಗಲೂ ಜ್ಞಾನಿಗಳಾದ ಜೀವರೆಲ್ಲರೂ ತಮ್ಮ ಜೀವಭಾವವನ್ನು ಬಿಡದೆ ಪರಬ್ರಹ್ಮನನ್ನು ಹೊಂದಿರುವರು. ತಿರುಗಿ ಸೃಷ್ಟಿಕಾಲವು ಬಂದಾಗ ಅಪ್ರಾಕೃತ ವಾದ ಶ್ವೇತ ದ್ವೀಪವು ಪರಮಾತ್ಮನ ಉದರದಿಂದ ಆವಿರ್ಭವಿಸುವುದು. ವಾಸುದೇವ ನೊಳಗೆ ಪ್ರವೇಶಿಸಿದ್ದ, ಮುಕ್ತರಾದ ಬ್ರಹ್ಮಾದಿ ಜೀವರಾಶಿ ಶ್ವೇತದ್ವೀಪಕ್ಕೆ ಹೋಗಿ ತಮ್ಮ ತಮ್ಮ ಸ್ವರೂಪದ ಆನಂದಾವಿರ್ಭಾವವನ್ನು ಹೊಂದಿ ವಾಸಮಾಡುತ್ತಾರೆ. ಆಗ ಅವರು ಅಪೇಕ್ಷಿತ ನಾನಾ ವಿಷಯಾಧಿಪತ್ಯವನ್ನು ಭೋಗಿಸುತ್ತಾರೆ.

ಪ್ರಳಯಕಾಲದಲ್ಲಿ ಅವರೆಲ್ಲರೂ ಪರಮೇಶ್ವರನ ಉದರವನ್ನು ಸೇರಿ ಅಲ್ಲಿಯೂ ಸ್ವರೂಪಾನಂದವನ್ನು ಮಾತ್ರ ಅನುಭವಿಸುತ್ತಾರೆ.

ಅಮ್ಮಾ ! ಹೀಗೆ ಭಗವದುಪಾಸಕರಿಗೆ ಮಾತ್ರವೇ ನಿತ್ಯಾನಂದವೆಂಬ ಮುಕ್ತಿ ಯಾಗುವುದರಿಂದ ನೀನೂ ಕೂಡ ಮುಕ್ತಿಯನ್ನು ಹೊಂದಲು "ಭಗವಂತನೇ ನನ್ನ ಸ್ವಾಮಿಯು, ನಾನು ಅವನ ಕಿಂಕರಳು" ಎಂದು ಭಕ್ತಿಯಿಂದ ನಾರಾಯಣನನ್ನು ಧ್ಯಾನಿಸುತ್ತ, ಅವನನ್ನೇ ಶರಣು ಹೊಂದು.

ಜೀವರು ಮುಕ್ತಿಗೆ ಅರ್ಹರಾಗಿದ್ದರೂ, ಫಲಾಪೇಕ್ಷೆಯಿಂದ ಕರ್ಮವನ್ನು ಮಾಡಿ ಪಿತೃಗಳನ್ನೂ, ದೇವತೆಗಳನ್ನೂ ಆರಾಧಿಸಿದರೆ, ಸತ್ತ ಬಳಿಕ ಧೂಮಾದಿ ಮಾರ್ಗದಿಂದ ಪಿತೃಲೋಕ, ಚಂದ್ರಲೋಕಗಳಿಗೆ ಹೋಗಿ ಪುಣ್ಯದ ಫಲವನ್ನು ಭೋಗಿಸಿ, ಪುಣ್ಯವು ತೀರಿದ ಕೂಡಲೇ ಹಿಂತಿರುಗಿ ಭೂಮಿಯಲ್ಲಿ ತಮ್ಮ ವಂಶದಲ್ಲಿ ಹುಟ್ಟುತ್ತಾರೆ.

ನಿತ್ಯ ಸಂಸಾರಿಗಳು ಹರಿಭಕ್ತಿಯಿಲ್ಲದಿದ್ದರೆ ನರಕಭಾಗಿಗಳಾಗುವರು. ಅತ್ಯಲ್ಪ ಭಕ್ತಿಯುಳ್ಳವರು ಪಿತೃಲೋಕಕ್ಕೆ ಹೋಗುವರು.

ಅಚ್ಯುತನ ಕಥಾಮೃತವನ್ನು ಬಿಟ್ಟು ಅಸತ್ಕಥಾಶ್ರವಣದಲ್ಲೇ ಆಸಕ್ತರಾದ ಅಸುರಜೀವರು ನಿತ್ಯನರಕದಲ್ಲಿ ಬೀಳುವರು.

ಆದ್ದರಿಂದ ಇತರ ಪುರುಷಾರ್ಥಗಳನ್ನು ಬಯಸದೆ, ಮೋಕ್ಷಕ್ಕಾಗಿ ಭಗವಂತ ನನ್ನೇ ಆರಾಧಿಸಬೇಕು. ಭಕ್ತಿಯು ವೈರಾಗ್ಯವನ್ನು ದೃಢಪಡಿಸಿ ಧ್ಯಾನವನ್ನು ಹುಟ್ಟಿಸುತ್ತದೆ. ಶಬ್ದಾದಿ ವಿಷಯಗಳೆಲ್ಲ ಅಧಿಕಾರಿಗೆ ಬಂಧಕಗಳಾದ್ದರಿಂದ ಅವು ಅಪ್ರಿಯಗಳೇ ಸರಿ. ಭಗವಂತನೊಬ್ಬನೇ ಪರಮಪ್ರಿಯನೆಂಬ ಬುದ್ಧಿ ಉಂಟಾದಾಗಲೇ ಬಿಂಬ ರೂಪಿಯ ದರ್ಶನವಾಗುವುದು.

ಅಮ್ಮಾ! ಮತ್ಸ್ಯಾದ್ಯವತಾರಗಳೂ, ಪರಬ್ರಹ್ಮನ ರೂಪವೂ ಅಪ್ರಾಕೃತಗಳೆಂದೇ ತಿಳಿಯಬೇಕು. ಇದಕ್ಕೆ ವಿರುದ್ಧವಾಗಿ ತಿಳಿದವರು ತಪ್ಪದೇ ನಿತ್ಯನರಕದಲ್ಲಿ ಬೀಳುತ್ತಾರೆ. ನಿನಗೆ ಪರಬ್ರಹ್ಮನ ಮಹಿಮೆಯನ್ನು ತಿಳಿಸಿರುವೆನು. ಈ ಮಹಿಮೆಗಳ ಜ್ಞಾನವಾಗದೇ ಭಕ್ತಿ ಹುಟ್ಟುವುದಿಲ್ಲ. ಭಕ್ತಿಯನ್ನು ಬಿಟ್ಟು ಜ್ಞಾನವಿಲ್ಲ. ಆದ್ದರಿಂದ ಮಾಹಾತ್ಮ್ಯಜ್ಞಾನ ಮತ್ತು ಸುದೃಢ ಸರ್ವತೋಧಿಕ ಸ್ನೇಹವನ್ನು ವಾಸುದೇವನಲ್ಲಿ ಮಾಡುವುದೇ ಮುಕ್ತಿಗೆ ಅಂತರಂಗ ಸಾಧನೆ. ಸಂಧ್ಯಾವಂದನಾದಿ ನಿತ್ಯನೈಮಿತ್ತಿಕ ಕರ್ಮಗಳು ಭಕ್ತಿಸಹಿತವಾದ ಜ್ಞಾನ ದ್ವಾರಾ ಮುಕ್ತಿಗೆ ಸಾಧನಗಳು.

ಅಮ್ಮಾ! ನೀನು ಕೇಳಿದಂತೆ ಭಕ್ತಿಯ ನಾಲ್ಕು ಬಗೆಗಳು, ಕಾಲಸ್ವರೂಪ, ವೈರಾಗ್ಯಕ್ಕೆ ಕಾರಣವಾಗಲು ಜೀವನ ಸಂಸಾರ ಸ್ವರೂಪ ಇವುಗಳನ್ನು ನಿನಗೆ ತಿಳಿಸಿದೆನು. ಈ ತತ್ತ್ವಜ್ಞಾನಕ್ಕೆ ಇಂದ್ರಿಯ ಲೋಲುಪರೂ, ಹಿಂಸಕರೇ ಮೊದಲಾದವರೂ ಅನಧಿಕಾರಿಗಳು. ನಿನಗೆ ತಿಳಿಸಿದ ತತ್ತ್ವವನ್ನು ಶ್ರದ್ಧೆಯಿಂದ ಹೇಳುವವರು ಮತ್ತು ಕೇಳುವವರೇ ನನ್ನನ್ನು ಹೊಂದುವರೆಂದಮೇಲೆ, ಅನುಷ್ಠಾತೃಗಳು ನನ್ನನ್ನು ಹೊಂದೇ ಹೊಂದುವರೆಂದು ಹೇಳಬೇಕೇನು ?

## ಮೂವತ್ತಮೂರನೆಯ ಅಧ್ಯಾಯ ಮುಗಿದುದು

ಕಪಿಲದೇವರ ಉಪದೇಶದಿಂದ ದೇವಹೂತಿಯ ಅಜ್ಞಾನ. ಅನ್ಯಥಾಜ್ಞಾನಗಳು ನಾಶಹೊಂದಿದುವು. ಆಗ ಬ್ರಹ್ಮಾದಿಗಳಿಗೆ ಆಶ್ರಯನಾದ ಕಪಿಲ ಭಗವಂತನಿಗೆ ನಮಿಸಿ ಸ್ತುತಿಸಿದಳು .–

"ದೇವ! ನೀನು ಮಂಗಳ ಸ್ವರೂಪಿಯು. ಭೂತೇಂದ್ರಿಯಮನೋಭಿಮಾನಿಗಳಿಗಿಂತ ಉತ್ತಮನು. ಜ್ಞಾನಾದಿ ಪರಿಪೂರ್ಣನು. ಜಗದ್ವ್ಯಂಜಕ. ಬ್ರಹ್ಮದೇವರಿಂದ ಧ್ಯಾನಿಸಲ್ಪಟ್ಟ ಶರೀರಿ. ನಿನ್ನ ದೇಹಕ್ಕೂ ನಿನಗೂ ಭೇದವಿಲ್ಲ. ಜಗತ್ತಿನ ಸೃಷ್ಟ್ಯಾದಿ ಕರ್ತ. ಅಚಿಂತ್ಯಾದ್ಭುತ ಮಹಿಮನು. ವಟಪತ್ರದಲ್ಲಿ ನಿನ್ನ ಇಚ್ಛೆಯಿಂದಲೇ ಶಿಶು ರೂಪವನ್ನು ತಾಳಿದಂತೆ ನನ್ನ ಉದರದಲ್ಲೂ ನಿನ್ನ ಇಚ್ಛೆಯಂತೆ ಶಿಶುವಾಗಿ ಕುಳಿತು ನನ್ನನ್ನೂ ಧರಿಸಿದೆ. ಆದ್ದರಿಂದ ನೀನು ನನ್ನ ಮಗನಲ್ಲ. ಸಚ್ಚಿದಾನಂದಾತ್ಮಕವಾದ

ನಿನ್ನ ಈ ದೇಹವನ್ನು ಜನರು ನೋಡುವಂತೆ ಮಾಡುವುದೇ ನಿನ್ನ ಅವತಾರ. ನಿನಗೆ ಯಾವಾಗಲೂ ಪ್ರಾಕೃತ ದೇಹವಿಲ್ಲ. ದುಷ್ಟರನ್ನು ಸದೆಬಡಿದು ಬ್ರಹ್ಮಾದಿಗಳನ್ನು ರಕ್ಷಿಸುವುದಕ್ಕಾಗಿಯೇ ವರಾಹಾದಿ ಅವತಾರಗಳನ್ನು ನೀನು ಮಾಡುವೆ. ಅದರಂತೆ ಲೋಪವಾಗಿದ್ದ ಜ್ಞಾನ ಮಾರ್ಗ ಪ್ರದರ್ಶನೆಗಾಗಿ ಈ ಕಪಿಲಾವತಾರ ಮಾಡಿರುವೆ. ಹೆಂಗುಸಾಗಲಿ, ಗಂಡಸಾಗಲಿ, ನೀಚ ಕುಲದವನಾಗಲಿ, ಭಕ್ತಿಯಿಂದ ನಿನ್ನ ನಾಮ ವನ್ನು ನಾಲಿಗೆಯಲ್ಲಿ ಉಚ್ಚರಿಸಿದ ಕೂಡಲೆ ಅವನು ಕೃತಾರ್ಥನಾಗುವನು. ಅಂದ ಬಳಿಕ ಹೆಂಗುಸಾದ ನಾನು ಕೃತಾರ್ಥಳಾದೆನೆಂದು ಹೇಳಬೇಕಾಗಿಯೇ ಇಲ್ಲ. ಪರಬ್ರಹ್ಮ ನಾದ ನಿನಗೆ ನಮೋ ನಮೋ ನಮಃ !

ಕಪಿಲ : ಅಮ್ಮಾ ! ನಾನು ಹೇಳಿದಂತೆ ಅನುಷ್ಠಾನ ಮಾಡು. ನಿನಗೆ ಮುಕ್ತಿಯಾಗುವುದು. ಹೀಗೆ ಹೇಳಿ ತಾಯಿಯ ಅನುಮತಿಯನ್ನು ಪಡೆದು ಅಲ್ಲಿಂದ ಹೊರಟು ಹೋದನು. ದೇವಹೂತಿಯು ತ್ರಿಕಾಲಗಳಲ್ಲಿಯೂ ಸ್ನಾನ ಮಾಡುತ್ತ, ಗಡ್ಡೆಗೆಣಸುಗಳನ್ನೂ ತಿನ್ನದೆ ಕೇವಲ ನಿರಾಹಾರದಿಂದ ಪರಮಾತ್ಮನನ್ನು ಧ್ಯಾನಿಸ ತೊಡಗಿದಳು. ಸ್ವರ್ಗಾದಿ ಸುಖಗಳು ತುಚ್ಛಗಳೆಂಬ ನಿಶ್ಚಯ ಹುಟ್ಟಿತು. ಜಗತ್ತೇ ಅಸಾರವೆಂಬ ಭಾವನೆ ಬಲವಾಯಿತು. ಅಖಂಡವಾಗಿ ಹರಿಯನ್ನು ಧ್ಯಾನ ಮಾಡಿ ದಳು. ಅದರಿಂದ ಅವಳಿಗೆ ಬಿಂಬಾಪರೋಕ್ಷವಾಯಿತು. ಕೂಡಲೇ ಭ್ರಮೆ ಪರಿಹಾರವಾಯಿತು. ಶರೀರದ ಅಭಿಮಾನ ಹೋಯಿತು. ಅವಳ ಪ್ರಾರಬ್ಧ ಕರ್ಮವು ಮುಗಿದುದರಿಂದ ಉತ್ಕ್ರಾಂತಳಾಗಿ, ಕಾಲಕ್ರಮದಲ್ಲಿ ಪರಬ್ರಹ್ಮನನ್ನು ಹೊಂದಿದಳು. ಅವಳ ಮೃತದೇಹವು (ಕಪಿಲಾ) ನದಿಯಾಗಿಹರಿಯಿತು. ಅನೇಕ ಸಿದ್ಧರು ಸ್ನಾನಪಾನಾದಿಗಳಿಂದ ಅದನ್ನು ಸೇವಿಸಿದರು. ಆ ಉತ್ತಮವಾದ ನದಿಯು ತನ್ನನ್ನು ಸೇವಿಸುವ ತಪಸ್ವಿಗಳಿಗೆ ಸಿದ್ಧಿಯನ್ನು ಕೊಡುವುದು.

ಇತ್ತ ಕಪಿಲ ದೇವರು ಈಶಾನ್ಯ ದಿಕ್ಕಿಗೆ ಹೊರಟರು. ಸಿದ್ಧಚಾರಣಾದಿಗಳು ಆ ಸ್ವಾಮಿಯನ್ನು ಸ್ತುತಿಸುತ್ತ ಹಿಂಬಾಲಿಸಿದರು. ಸಮುದ್ರದಬಳಿಗೆ ಸ್ವಾಮಿಯು ಬಂದಾಗ ವರುಣನು ಪ್ರಭುವನ್ನು ಪೂಜಿಸಿ ವಾಸಸ್ಥಳವನ್ನು ಅವನಿಗೆ ಸಮರ್ಪಿಸಿದನು. ಕಪಿಲದೇವರು ಆ ಸ್ಥಳದಲ್ಲಿ ಕುಳಿತು ಲೋಕಮಂಗಳಕ್ಕಾಗಿ ತನ್ನನ್ನೇ ತಾನು ಧ್ಯಾನಿ ಸುತ್ತಿರುವನು.

ಮೈತ್ರೇಯ :– ವಿಷ್ಣುಭಕ್ತನಾದ ವಿದುರನೇ ! ಹೇಳೆಂದು ನೀನು ಕೇಳಿದ ಕಪಿಲ–ದೇವಹೂತಿಯರ ಸಂವಾದವನ್ನು ನಿನಗೆ ವಿಶದವಾಗಿ ಹೇಳಿದ್ದೇನೆ.

ಫಲಶ್ರುತಿ

**ಶ್ಲೋಕ ॥ ಇದಮನು ಶೃಣೋತಿ ಯೋಽಭಿಧತ್ತೇ**
**ಕಪಿಲ ಮುನೇರ್ಮತ ಮಾತ್ಮಯೋಗ ಗುಹ್ಯಂ ।**

ಭಗವತಿ ಕೃತಧೀಃ ಸುಪರ್ಣಕೇತಾ—
ವುಪಲಭತೇ ಭಗವತ್ಪದಾರವಿಂದಂ ‖ 37 ‖

ಅರ್ಥ :- ಇದು ಪವಿತ್ರವಾದುದು. ಸಕಲಮೋಕ್ಷಾಪೇಕ್ಷಿಗಳಿಗೂ ಅವಶ್ಯಕವಾದುದು. ಪರಮಾತ್ಮನನ್ನೇ ಹೊಂದುವ ಜ್ಞಾನೋಪಾಯಗಳಲ್ಲಿ ಇದು ರಹಸ್ಯವಾದುದು. ಇದನ್ನು ಉಪದೇಶ ಮಾಡಿರುವವನು ಶ್ರೀಹರಿಯೇ. ಅವನಲ್ಲಿ ಮನಸ್ಸನ್ನಿಟ್ಟಿರುವವನು ಹೇಳಿದರೂ, ಕೇಳಿದರೂ, ಅನುಷ್ಠಿಸಿದರೂ ಶ್ರೀಹರಿಯನ್ನೊಳಗೆ ನೋಡುವುದರಲ್ಲಿ ಸಂಶಯವೇ ಇಲ್ಲ.

## ಮೂವತ್ತನಾಲ್ಕನೆಯ ಅಧ್ಯಾಯ ಮುಗಿದುದು

## ಮೂರನೆಯ ಸ್ಕಂಧ ಸಮಾಪ್ತ

ಶ್ರೀ ಕಪಿಲ ದೇವತ ಮಹಿಮೆಯನ್ನು ನಾನಾ ಕಡೆ ಹೇಳಿರುವುದನ್ನೆಲ್ಲ ಏಕತ್ರ ಸಂಗ್ರಹಿಸಿ, ಶ್ರೀ ವಿಜಯದಾಸರು ಸುಳಾದಿಯನ್ನು ರಚಿಸಿರುವರು. ನಿತ್ಯ ಪಾರಾಯಣಕ್ಕೆ ಅನುಕೂಲವಾಗಲೆಂದು ಅದನ್ನು ಇಲ್ಲಿ ಕೊಡಲಾಗಿದೆ.

### ಧ್ರುವತಾಳ

ಸಿದ್ಧಿದಾಯಕ ಶಿಷ್ಟಜನ ಪರಿಪಾಲ, ಪರಮ
ಶುದ್ಧಾತ್ಮ ಸುಗುಣಸಾಂದ್ರ ಸುಖವಾರಿಧಿ
ನಿದ್ರಾರಹಿತ ಭದ್ರಾರಮಣ ನಿರ್ವಿಕಾರ
ಚಿದ್ದೇಹ ಸರ್ವಕಾಲ ಸುಂದರಸಾರ
ಪದ್ಮಸಂಭವ ಬಲಿಪ್ರಕ್ಷಾಳಿತಪಾದ
ಹೃದ್ರೋಗನಾಶ ವೈಕುಂಠವಾಸ
ವಿದ್ಯಾತೀತ ವಿಶ್ವನಾಟಕ (=ಜಗತ್ತಿನ ನರರಂತೆ ನಟಿಸುವವನು) ನಾರಾಯಣ
ವಿದ್ಯಾಉದ್ಧಾರಕ ಉದಧಿಸದನ
ಅದ್ವೈತಕಾಯ ಮಾಯಾ (=ಲಕ್ಷ್ಮೀ) ರಮಣ ರಾಜೀವನೇತ್ರ
ಅದ್ವಯ ಅನಾದಿ ಪುರುಷ ಚಿತ್ರ
ಸಿದ್ಧಾದಿ ವಿನುತ ಸಂತತ ಪಾತಾಳವಾಸಿ
ಬುದ್ಧಿವಿಶಾಲಮಹಿಮ ಪಾಪಹಾರಿ
ಖದ್ಯೋತ-(ಸೂರ್ಯ) ವರ್ಣ ಸಕಲವ್ಯಾಪ್ತ, ಆಕಾಶ (ಚೆನ್ನಾಗಿಪ್ರಕಾಶಿಸುವವನು) ಅಮಿತ
ಬದ್ಧವಿಚ್ಛೇದನ ನಾನಾರೂಪಾತ್ಮಕ

ಕರ್ದಮಮುನಿ ಸೂನು ವಿಜಯವಿಠಲ ಕಪಿಲ
ನಿರ್ದೋಷ ಕರುಣಾಬ್ಧಿ ಸಂತರೋದ್ಧಾರಿ.

**ಕಪಿಲ ಶಬ್ದಾರ್ಥಗಳು :-**

1) ಕಂ ಸುಖಂ ಪಿಬತಿ ಲಾತಿ ದುಃಖಮಿತಿ ಕಪಿಲಃ - ಸುಖಿಸುತ್ತ ದುಃಖ ಓಡಿಸುವವನು.

2) ಕಪಿಂ ಸಂಸಾರಕಂಪನ ಲಯ ಹೇತುತ್ವಾತ್ಕಪಿಲಃ = ಸಂಸಾರಕಂಪನ ನಾಶಕನು.

3) ಕಂ ಬ್ರಹ್ಮಾಣಂ, ಪಿಂ ಪಿನಾಕಿನಂ ಲಾಲಯತೀತಿ ಕಪಿಲಃ - ಬ್ರಹ್ಮಶಿವರನ್ನು ಲಾಲಿಸುವವನು.

4) ಕಂ ಸುಖಂ ಪಿಬತೀತ್ಯಾನಂದಾನುಭವಾತ್, ಲಾ ಆದಾನೇ ಸರ್ವಾದಾನಾಚ್ಚ ಕಪಿಲಃ - ಸುಖಾನುಭವಸ್ವರೂಪನೂ, ಸರ್ವವನ್ನೂ ತನ್ನ ಅಧೀನವಾಗಿ ಸ್ವೀಕರಿಸುವವನು.

5) ಭಕ್ತೇಭ್ಯೋ ಗವಾಶ್ವಾದಿ ಕರೋತೀತಿ ಕಃ, ಸೌರಾದಿಪ್ರಕಾಶಃ ಪಃ ದಾತವ್ಯತ್ವೇನೆ ಅಸ್ತೀತಿ ಪಿಃ ಜಗತ್ಪ್ರವರ್ತಯತೀತಿ ಲಃ ಕಶ್ಚಾಸೌ ಪಿಶ್ಚಾಸೌ ಲಶ್ಚಾಸೌ ಕಪಿಲಃ - ಭಕ್ತರಿಗೆ ಗೋವು ಕುದುರೆ ಮೊದಲಾದ ಸಂಪತ್ತನ್ನುಂಟು ಮಾಡುವುದರಿಂದ ಕಃ, ಸೂರ್ಯಾದಿ ಪ್ರಕಾಶವು ಪಃ ಎನಿಸುವುದು, ಅದನ್ನು ಕೊಡುವುದಕ್ಕಾಗಿ ತನ್ನಲ್ಲಿಟ್ಟಿರುವುದರಿಂದ ಪಿಃ ಎನಿಸುವನು. ಜಗತ್ತು ವಿವಿಧ ಗತಿಗಳಿಂದ ನಡೆಯುವಂತೆ ಪ್ರೇರಿಸುವುದರಿಂದ ಲ ಎನಿಸುವವನು.

### ಮತ್ಯತಾಳ

ಆದಿಮನ್ವಂತರದಿ ಉದಿಸಿದ ಮಹಾದೇವ
ಆದಿಪರಬೊಮ್ಮ ಬೊಮ್ಮನಯ್ಯ ಜೀಯ (ಪ್ರಭು)
ಸಾಧುಜನರಪ್ರಿಯ ಸಂತತ ಮುನಿತಿಲಕ
ಬೋಧಶರೀರ ಭಕುತಮನೋಹರ
ಮಾಧವ ಸಿರಿ ವಿಜಯ ವಿಟ್ಠಲ ವಿಮಲೇಶ
ಮೋದಮತಿಯ ಕೊಡುವ ಕಪಿಲ ಭಗವನ್ಮೂರ್ತಿ

### ತ್ರಿಪುಟ ತಾಳ

ಘನಮಹಿಮ ಗೌಣಾಂಡ (ಗುಣಮಯವಾದ ಬ್ರಹ್ಮಾಂಡ) ದೊಳಗೆ ಲೀಲೆ
ಯಿಂದ ಜನಿಸಿ ಮೆರೆದೆ ಬಿಂದು ಸರೋವರದಲ್ಲಿ

ಮಿನುಗುವ ದ್ವಯಹಸ್ತ ಅಪ್ರಾಕೃತಕಾಯ
ಇನನಂತೆ ಒಪ್ಪುವ ಶಿರೋರುಹವು (ತಲೆ ಕೂದಲು)
ಕನಕಪುತ್ಥಳಿಯಂತೆ ಕಾಂತಿ ತ್ರಿಭುವನಕ್ಕೆ
ಅನವರತ ತುಂಬಿ ಸೂಸುತಲಿದೆಕೊ (ತುಳುಕುತ್ತಿರುವುದು)
ಜನನಿ ದೇವಹೂತಿಗೆ ಉಪದೇಶವನೆ ಮಾಡಿ
ಗುಣ ಮೊದಲಾದ ತತ್ವಾಧಾರ ತಿಳುಪಿದೆ, ನಿತ್ಯದಲಿ
ಜನರನ್ನು ಪಾಲಿಸುವೆ ಕಪಿಲಾಖ್ಯನೆ
ಅನುದಿನ ನಿನ್ನ ಧ್ಯಾನವ ಮಾಡಿ ಮಣಿಯಿಂದ
ಎಣಿಸಿದ ಸುಜನಕ್ಕೆ ಜ್ಞಾನವ ಕೊಡುವೆ
ಎಣೆಗಾಣೆ ನಿನ್ನ ಲೋಚನದ ಶಕ್ತಿಗೆ, ಸಗರ
ಜನಪನಂದನರನ್ನು ಭಂಜಿಸಿದೆ
ಅನುಮಾನವಿದಕಿಲ್ಲ ನಿನ್ನ ನಂಬಿದ ದೃಢ
ಮನುಜರಿಗೆ ಮಹಾಪದವಿ ಬರುವುದಯ್ಯ
ಮುನಿಕುಲೋತ್ತಮ ಕಪಿಲ ವಿಜಯವಿಠಲರೇಯ
ಎನಗೆ ಯೋಗ (ಧ್ಯಾನ) ಮಾರ್ಗ ತೋರೊ ತವಕದಿಂದ (ಬೇಗ) ೩

**ಅಟತಾಳ**

ಕಪಿಲ ಕಪಿಲ ಎಂದು ಪ್ರಾತಃಕಾಲದಲೆದ್ದು
ಸಪುತಸಾರಿ ನಾಲಗೆಯಲ್ಲಿ ನುಡಿದ ಮಾನವನಿಗೆ
ಅಪಜಯ ಮೊದಲಾದ ಕ್ಲೇಶಗಳೊಂದೂ ಇಲ್ಲ
ಅಪರಿಮಿತ ಸೌಖ್ಯ ಅವನ ಕುಲಕೋಟಿಗೆ
ಗುಪಿತ ನಾಮವಿದು ಮನದೊಳಗಿಡುವುದು
ಕಪಟ ಮಾನವರು ಈತನು ಒಬ್ಬ ಋಷಿಯೆಂದು
ತಪಿಸುವರು ಕಾಣೊ ನಿತ್ಯನರಕದಲಿ
ಕೃಪಣವತ್ಸಲ ನಮ್ಮ ವಿಜಯ ವಿಠಲರೇಯ
ಕಪಿಲಾವತಾರನು ಬಲ್ಲವಗೆ ಬಹು ಸುಲಭ ೪

**ಆದಿತಾಳ**

ಬಲ ಹಸ್ತದಲಿ ಯಜ್ಞಶಾಲೆಯಲಿ ಕಂ
ಗಳ ಕಪ್ಪಿನಲಿ ಹೃದಯದಲಿ ನಾಭಿಯಲಿ
ಜಲಧಿ ಗಂಗೆ ಸಂಗಮದಲಿ ಗಮನಾಗಮನದಲಿ
ತುಲಸಿ ಪತ್ರದಲಿ ತುರಗ ತುರುವಿನಲಿ

ಮಲಗುವ ಮನೆಯಲಿ ನೈವೇದ್ಯದ ಸಮಯದಲಿ
ಬಲು ಕರ್ಮಬಂಧಗಳು ಮೋಚಕವಾಗುವಲ್ಲಿ
ಚೆಲುವನಾದವನಲಿ ವಿದ್ಯಾಪೇಳುವನಲಿ
ಫಲದಲಿ ಪ್ರತಿಕೂಲವಿಲ್ಲದ ಸ್ಥಳದಲಿ
ಬೆಳೆದ ದರ್ಭೆಗಳಲಿ ಅಗ್ನಿಯಲಿ ಹರಿವ
ಜಲದಲಿ ಜಾಂಬೂನದ ನದಿಯಲಿ ಶ್ಲೋಕದಲಿ
ಬಲಿಮುಖ ಬಳಗದಲಿ ಆಚಾರಶೀಲನಲಿ
ಘಳಿಗೆ ಆರಂಭದಲಿ ಪಶ್ಚಿಮ ಭಾಗದಲಿ
ಪೊಳೆವ ಮಿಂಚಿನಲಿ ಬಂಗಾರದಲಿ ಇನಿತು
ಕಲಕಾಲ (ಯಾವಾಗಲೂ) ಬಿಡದ ಸ್ಮರಿಸು ಕಪಿಲ ಪರಮಾತ್ಮನ
ಗೆಲುವುಂಟು ನಿನಗೆಲವೊ ಸಂಸಾರದಿಂದ ವೇಗ
ಕಲಿಯುಗದೊಳಗಿದೆ ಕೊಂಡಾಡೊ ನರರಿಗೆ
ಖಳರ ಅಂಜಿಕೆಯಿಲ್ಲ ನಿಂದಲ್ಲಿ ಶುಭಯೋಗ
ಬಲವೈರಿನುತ ನಮ್ಮ ವಿಜಯ ವಿಟ್ಠಲರೇಯ
ಇಳೆಯೊಳಗೆ ಕಪಿಲನಾಗಿ ನಮ್ಮ ಭಾರ ವಹಿಸುವ ೫

ಜತೆ

ತಮ ಪರಿಚ್ಛೇದ ಈತನ ಸ್ಮರಣೆ ಮಾಡೆ ಹೃ
ತ್ಕಮಲದೊಳಗೆ ಕಪಿಲ ವಿಜಯವಿಠಲ ಪೊಳೆವ ೬



# ಚತುರ್ಥಸ್ಕಂಧಾರಂಭ

**ಮೈತ್ರೇಯ ಉವಾಚ**

**ಮನೋಸ್ತು ಶತರೂಪಾಯಾಂ ತಿಸ್ರಃ ಕನ್ಯಾಶ್ಚ ಜಜ್ಞಿರೇ ।**
**ಆಕೂತಿರ್ದೇವಹೂತಿಶ್ಚ ಪ್ರಸೂತಿರಿತಿ ವಿಶ್ರುತಾಃ ॥೧॥**

**ಮೈತ್ರೇಯ :-** ಸ್ವಾಯಂಭುವಮನುರಾಜನಿಗೆ ಅವನ ಪತ್ನಿಯಾದ ಶತರೂಪಾದೇವಿಯಲ್ಲಿ ಆಕೂತಿ, ದೇವಹೂತಿ ಮತ್ತು ಪ್ರಸೂತಿ ಎಂಬ ಮೂವರು ಹೆಣ್ಣುಮಕ್ಕಳು ಹುಟ್ಟಿದರು.

ಮನುವು ಆಕೂತಿಯನ್ನು ರುಚಿಯೆಂಬ ಪ್ರಜೇಶ್ವರನಿಗೆ ಪುತ್ರಿಕಾಧರ್ಮವನ್ನು ಆಶ್ರಯಿಸಿ ಅಂದರೆ ಮಗಳಲ್ಲಿ ಹುಟ್ಟುವ ಮಗನನ್ನು ತನಗೆ ಕೊಡಬೇಕೆಂದು ಒಪ್ಪಂದ ಮಾಡಿಕೊಂಡು ಮದುವೆಮಾಡಿದನು. ಈ ದಂಪತಿಗಳಲ್ಲಿ ಶ್ರೀಹರಿಯು ಯಜ್ಞನಾಮಕನಾಗಿಯೂ, ಲಕ್ಷ್ಮೀದೇವಿಯು ದಕ್ಷಿಣಾ ನಾಮಕಳಾಗಿಯೂ ಅವತರಿಸಿದರು. ಮನುವು ಸ್ವಾಮಿಯನ್ನು ತನ್ನ ಮನೆಗೆ ಕರೆದುಕೊಂಡು ಬಂದನು. ಯಜ್ಞನು ಅನಾದಿ ಪತ್ನಿಯಾಗಿರುವ ದಕ್ಷಿಣಾದೇವಿಯನ್ನು ಮದುವೆ ಮಾಡಿಕೊಂಡನು. ಇವರಲ್ಲಿ 12 ಮಂದಿಮಕ್ಕಳಾದರು. ಇವರೆಲ್ಲರಿಗೂ ತುಷಿತರು ಎಂದು ಹೆಸರು.

ಪ್ರಥಮಮನ್ವಂತರಕ್ಕೆ ಸ್ವಾಯಂಭುವನು ಮನು. ತುಷಿತರೇ ದೇವತೆಗಳು. ಯಜ್ಞನೇ ಇಂದ್ರನು. ಮರೀಚ್ಯಾದಿಗಳು ಸಪ್ತರ್ಷಿಗಳು. ಆಮನ್ವಂತರ ಪೂರ್ತಿ ಪ್ರಿಯವ್ರತ ಮತ್ತು ಉತ್ತಾನಪಾದರವಂಶದವರೇ ರಾಜ್ಯವಾಳುತ್ತ ಬಂದರು.

ಸ್ವಾಯಂಭುವಮನುವಿನ ಮತ್ತೊಬ್ಬ ಮಗಳಾದ ಪ್ರಸೂತಿಯನ್ನು ದಕ್ಷ ಪ್ರಜೇಶ್ವರನು ಮದಿವೆಯಾದನು. ಇವರ ಸಂತಾನವೇ ಮೂರು ಲೋಕದಲ್ಲಿ ತುಂಬಿತು. ಕರ್ದಮರು ದೇವಹೂತಿಯನ್ನು ಮದಿವೆಯಾಗಿ ಅವರಲ್ಲಿ ಹುಟ್ಟಿದ ಒಂಭತ್ತು ಮಂದಿ ಹೆಣ್ಣುಮಕ್ಕಳನ್ನು ಮರೀಚಿ ಮೊದಲಾದವರು ಮದಿವೆಯಾದರಷ್ಟೆ? ಅವರ ವಂಶಾವಳಿ ಹೀಗಿದೆ :-

(1) ಕಲಾದೇವಿಯು ಮರೀಚರಿಂದ ಕಶ್ಯಪ ಮತ್ತು ಪೂರ್ಣಿಮನೆಂಬ ಗಂಡು ಮಕ್ಕಳನ್ನು ಪಡೆದಳು. ಪೂರ್ಣಿಮನಿಗೆ ವಿರಜನೆಂಬ ಗಂಡು ಮತ್ತು ವಿಶ್ವಗೆ ಎಂಬ ಹೆಣ್ಣು ಮಕ್ಕಳಾದರು. ಈ ವಿಶ್ವಗೆಯೇ ಶ್ರೀ ಹರಿಪಾದದಿಂದ ಗಂಗಾ ನಾಮಕಳಾಗಿ ಹುಟ್ಟಿದಳು.

(2) ಅನಸೂಯೆಯು ಅತ್ರಿಪ್ರಜೇಶ್ವರನ ಪತ್ನಿ. ಈ ದಂಪತಿಗಳು ಸಂತಾನವನ್ನು ಪಡೆಯಲು ಬ್ರಹ್ಮದೇವರಿಂದ ಪ್ರೇರಿತರಾಗಿ ಋಕ್ಷಪರ್ವತದಲ್ಲಿ ಹರಿಯತ್ತಿರುವ ನಿರ್ವಿಂಧ್ಯೆಯೆಂಬ ನದೀತೀರದಲ್ಲಿ ಹರಿ, ಬ್ರಹ್ಮ ಮತ್ತು ಶಿವನಿಗೆ ಸದೃಶರಾದ ಸುತರನ್ನು ಪಡೆಯಬೇಕೆಂದು ಬ್ರಹ್ಮ ದೇವರಲ್ಲಿಯೂ, ಶಿವನಲ್ಲಿಯೂ ಇದ್ದು, ಪ್ರತ್ಯೇಕವಾಗಿ ಇರತಕ್ಕ ಶ್ರೀಹರಿಯನ್ನು ಕುರಿತು ತಪಸ್ಸನ್ನು ಮಾಡಿದರು. ತ್ರಿಮೂರ್ತಿಗಳು ಪ್ರತ್ಯಕ್ಷವಾಗಿ ಅಲ್ಲಿಗೆ ಬಂದರು. ಅತ್ರಿಮಹರ್ಷಿಯು ದುರ್ಜನರ ಮೋಹನಾರ್ಥವಾಗಿ " ನಾನು ಕರೆದದ್ದು ವಿಷ್ಣುಒಬ್ಬನನ್ನು. ನೀವು ಮೂವರೂ ಬಂದು ಬಿಟ್ಟಿರಲ್ಲ ಇದೇನು " ಎಂದು ಕೇಳಿದರು. ತ್ರಿಮೂರ್ತಿಗಳು ಹೀಗೆ ಹೇಳಿದರು :– ನಿನ್ನ ಸಂಕಲ್ಪದಂತೆಯೇ ಕಾರ್ಯವಾಗಿದೆಯೇಹೊರತು ಬೇರೆ ರೀತಿಯಾಗಿ ನಡೆದಿಲ್ಲ. ನೀನು ಸಾಕ್ಷಾತ್ ವಿಷ್ಣುವನ್ನೂ ಬ್ರಹ್ಮನಲ್ಲಿರುವ ಬ್ರಹ್ಮನಾಮಕ ಹರಿಯನ್ನೂ, ಶಿವನಲ್ಲಿರುವ ಶಿವನಾಮಕ ಹರಿಯನ್ನೂ ಇಲ್ಲಿಗೆ ಬರಬೇಕೆಂದು ಸಂಕಲ್ಪಿಸಿ ಪ್ರಾರ್ಥಿಸಿದೆ. ಬ್ರಹ್ಮ ಮತ್ತು ಶಿವನಲ್ಲಿರುವ ಹರಿಯರೂಪಗಳು ವಿಷ್ಣುವಿನಂತೆ ಪ್ರತ್ಯೇಕವಾಗಿರದೆ ಅವರ ಜೊತೆಯಲ್ಲಿಯೇ ಇರುತ್ತವೆ. ಅವು ಬರಬೇಕಾದರೆ ಬ್ರಹ್ಮ ಮತ್ತು ಶಿವರೊಡನೆಯೇ ಬರಬೇಕು. ಆದ್ದರಿಂದ ತ್ರಿಮೂರ್ತಿಗಳೂ ಬಂದೆವು. ಬ್ರಹ್ಮ ಮತ್ತು ಶಿವರಿಗೂ ಮತ್ತು ಸಾಕ್ಷಾತ್ತಾಗಿರುವ ವಿಷ್ಣುವಿಗೂ ಸಮಾನರಾದ ಪುತ್ರರನ್ನು ಬಯಸಿರುವೆಯಾದ್ದರಿಂದಲೂ ಬ್ರಹ್ಮ ಮತ್ತು ಶಿವರೊಡನೆ ವಿಷ್ಣುವಾದ ನಾನೂ ಬಂದಿರುವೆನು. ನಿನ್ನಿಷ್ಟದಂತೆ ನಾವು ಮೂವರೂ ನಿನಗೆ ಮಕ್ಕಳಾಗುವೆವು, ಎಂದು ಹೇಳಿ ಹೊರಟುಹೋದರು.

ಮುಂದೆ ಹರಿಯು ದತ್ತ ನಾಮಕನಾಗಿಯೂ, ಚಂದ್ರನು ಬ್ರಹ್ಮ ದೇವರ ಆವೇಶಯುಕ್ತನಾಗಿ (ಬ್ರಹ್ಮ ದೇವರಿಗೆ ಭೂಲೋಕದಲ್ಲಿ ಅವತಾರವಿಲ್ಲವಾದ್ದರಿಂದ ಚಂದ್ರನಲ್ಲಿ ಆವೇಶ ಅವತಾರಮಾಡಿರುವರೆಂದು ತಿಳಿಯಬೇಕು) ಸೋಮ ನಾಮಕನಾಗಿಯೂ, ಶಿವನು ದುರ್ವಾಸ ನಾಮಕನಾಗಿಯೂ ಅತ್ರಿದಂಪತಿಗಳಲ್ಲಿ ಅವತರಿಸಿದರು. ದತ್ತನು ಯೋಗಶಾಸ್ತ್ರವನ್ನು ರಚಿಸಿದನು.

3) ಕರ್ದಮ ಪುತ್ರಿ ಶ್ರದ್ಧೆಯಲ್ಲಿ ಅಂಗಿರಾಋಷಿಗಳಿಂದ ಕೃಷ್ಣಪಕ್ಷ ಚತುರ್ದಶೀ ತಿಥಿಗೆ ಅಭಿಮಾನಿನಿ ಸಿನೀವಾಲೀ, ಅಮಾವಾಸ್ಯೆಗೆ ಅಭಿಮಾನಿನಿ ಕುಹೂ, ಶುಕ್ಲಪಕ್ಷದ ಚತುರ್ದಶೀ ತಿಥಿಗೆ ಅಭಿಮಾನಿನಿ ಅನುಮತಿ ಮತ್ತು ಹುಣ್ಣಿಮೆಗೆ ಅಭಿಮಾನಿನೀ ರಾಕಾ ಎಂಬುವ ನಾಲ್ವರು ಹೆಣ್ಣುಮಕ್ಕಳೂ, ಸ್ವಾರೋಚಿಷ ಮನ್ವಂತರದಲ್ಲಿ ಉಚಥ್ಯ ಮತ್ತು ಬೃಹಸ್ಪತಿ ಎಂಬ ಗಂಡು ಮಕ್ಕಳೂ ಹುಟ್ಟಿದರು.

4) ಹವಿರ್ಭುವಿಯಲ್ಲಿ ಪುಲಸ್ತ್ಯರಿಗೆ ದಭ್ರನಾಮಕ ಅಗ್ನಿಯೆಂಬುವನು ಅಗಸ್ತ್ಯ ನಾಮಕನಾಗಿಯೂ, ವಿಶ್ರವಸ್ಸೆಂಬುವನೂ ಇಬ್ಬರು ಗಂಡುಮಕ್ಕಳು ಹುಟ್ಟಿದರು. ವಿಶ್ರವಸ್ಸಿಗೆ ಇಡಬಿಲೆ ಎಂಬ ಹೆಂಡತಿಯಲ್ಲಿ ಕುಬೇರನೂ, ವಿಶ್ರವಸ್ಸಿನ ಮತ್ತೊಬ್ಬಳು

ಹೆಂಡತಿ ಕೇಶಿನಿಯೆಂಬುವಳಲ್ಲಿ ರಾವಣ, ಕುಂಭಕರ್ಣ ಮತ್ತು ವಿಭೀಷಣನೆಂಬ ಮೂವರು ಗಂಡುಮಕ್ಕಳು ಹುಟ್ಟಿದರು.

5) ಗತೀದೇವಿಯಲ್ಲಿ ಪುಲಹಮಹರ್ಷಿಗಳಿಗೆ ಕರ್ಮಶ್ರೇಷ್ಠ, ವರೀಯಸ್ಸು ಮತ್ತು ಸಹಿಷ್ಣು ಎಂಬ ಮೂವರು ಪುತ್ರರಾದರು.

6) ಕ್ರಿಯಾದೇವಿಯೆಂಬುವಳಲ್ಲಿ ಕ್ರತುವೆಂಬ ಪ್ರಜೇಶ್ವರನಿಂದ ಅರವತ್ತು, ಸಾವಿರ ಮಂದಿ ವಾಲಖಿಲ್ಯರೆಂಬುವರು ಸುತರಾದರು.

7) ಊರ್ಜಾದೇವಿಯಲ್ಲಿ ವಶಿಷ್ಠರಿಂದ ಚಿತ್ರಕೇತು ಮೊದಲಾದ ಏಳುಮಂದಿ ಪುತ್ರರಾದರು.

8) ಶಾಂತಿಯಲ್ಲಿ ಅಥರ್ವಣರಿಗೆ ಧೃತವ್ರತ, ದಧ್ಯಂಚ ಮತ್ತು ಅಶ್ವಶಿರಸ್ಸು, ಎಂಬ ಮೂವರು ಪುತ್ರರಾದರು.

9) ಖ್ಯಾತಿಯಲ್ಲಿ ಭೃಗು ಮುನಿಗೆ ಧಾತೃ ಮತ್ತು ವಿಧಾತೃ ಎಂಬಿಬ್ಬರು ಗಂಡು ಮಕ್ಕಳೂ, ಲಕ್ಷ್ಮಿಯು ಭಾರ್ಗವೀ ನಾಮಕ ಹೆಣ್ಣುಮಗಳಾಗಿಯೂ ಹುಟ್ಟಿದರು.

ಧಾತೃವಿಗೆ ಆಯತಿ ಎಂಬ ಪತ್ನಿಯಲ್ಲಿ ಮೃಕಂಡು ಮಗನಾದನು. ಅವನ ಮಗನೇ ಮಾರ್ಕಂಡೇಯನು. ವಿಧಾತೃವಿಗೆ, ನಿಯತಿ ಎಂಬ ಪತ್ನಿಯಲ್ಲಿ ಪ್ರಾಣನು ಮಗನು. ಅವನಿಗೆ ವೇದಶಿರಸ್ಸು, ಕವಿ ಎಂಬ ಇಬ್ಬರು ಪುತ್ರರು. ಕವಿಯ ಮಗನೇ ಉಶನಸ್ಸು.

ಫಲಶ್ರುತಿ :– ಕರ್ದಮ ಪುತ್ರಿಯರ ಸಂತಾನ ಕಥಾಶ್ರವಣವು ಪಾಪ ಪರಿಹಾರಕವು.

ಸ್ವಾಯಂಭುವ ಮನುವಿನ ಕೊನೆಯ ಮಗಳು ಪ್ರಸೂತಿಯಲ್ಲಿ ದಕ್ಷ ಪ್ರಜೇಶ್ವರನಿಂದ 16 ಮಂದಿ ಪುತ್ರಿಯರು ಹುಟ್ಟಿದರು. ಅವರಲ್ಲಿ ಶ್ರದ್ಧೆ ಮೊದಲಾದ 13 ಮಂದಿ ದಕ್ಷಪುತ್ರಿಯರನ್ನು ಧರ್ಮರಾಜನು ಮದಿವೆಯಾದನು. ಅವರಲ್ಲಿ ಕೊನೆಯವಳಾದ **ಮೂರ್ತಿ** ದೇವಿಯಲ್ಲಿ ನರನಾರಾಯಣರು ಅವತರಿಸಿದರು. ಆಗ ಸುರರು ಹೂಮಳೆ ಸುರಿಸಿದರು. ಬ್ರಹ್ಮಾದಿಗಳು ನರನಲ್ಲಿರುವ ವಿಷ್ಣುವನ್ನೂ, ಅವನ ಅವತಾರನಾದ ನಾರಾಯಣನನ್ನೂ ಹೀಗೆ ಸ್ತುತಿಸಿದರು :

"ದೇವಾ ! ನೀನು ಜಗತ್ತನ್ನು ಧರಿಸಿರುವೆಯಾದ್ದರಿಂದ ಜಗತ್ತು ನಿನ್ನನ್ನೇ ಆಶ್ರಯಿಸಿದೆ ಎಂಬ ಜ್ಞಾನೋಪದೇಶಕ್ಕಾಗಿ ಋಷಿರೂಪದಿಂದ ನೀನು ಅವತರಿಸಿರುವೆ. ಭಕ್ತಚಿಂತಾಮಣಿಯು ನೀನು. ಜ್ಞಾನಸ್ವರೂಪಿ, ಜಗತ್ತಿಗೆ ಬರುವ ವಿಘ್ನ ಪರಿಹಾರಕ್ಕಾಗಿ ಸತ್ವಗುಣದಿಂದ ದೇವತೆಗಳನ್ನು ಸೃಷ್ಟಿಸಿರುವೆ. ಪೂರ್ಣಕರುಣಾ ಕಟಾಕ್ಷದಿಂದ ನಮ್ಮನ್ನು ನೋಡು".

ನರನಾರಾಯಣರು ಗಂಧಮಾದನ ಪರ್ವತಕ್ಕೆ ಹೋಗಿ ಅಲ್ಲಿರುವ ದೊಡ್ಡ ಬದರಿಯಲ್ಲಿ ನೆಲೆಸಿದರು ಈ ನಾರಾಯಣನೇ ಕೃಷ್ಣನು. ಅವನ ಆವೇಶವುಳ್ಳ ನರನ ಸನ್ನಿಧಾನವುಳ್ಳ ದೇವೇಂದ್ರನೇ ಅರ್ಜುನನು.

ದಕ್ಷಪುತ್ರಿ ಸ್ವಾಹಾದೇವಿಯನ್ನು ಪ್ರಧಾನಾಗ್ನಿಯು ಮದುವೆಯಾದನು. ಅವರಲ್ಲಿ ಪಾವಕ, ಪಾವಮಾನ ಮತ್ತು ಶುಚಿಯೆಂಬ ಮೂವರು ಪುತ್ರರಾದರು. ಈ ಮೂವರು ಅಗ್ನಿಗಳಿಂದ 45 ಮಂದಿ ಅಗ್ನಿಗಳು ಹುಟ್ಟಿದರು. ಒಟ್ಟು 49 ಅಗ್ನಿಗಳಿಂದಲೇ ವೈದಿಕ ಯಜ್ಞಕರ್ಮಗಳಲ್ಲಿ ಇಷ್ಟಿಗಳು ನಡೆಸಲ್ಪಡುತ್ತವೆ.

ಅಗ್ನಿಷ್ವಾತ್ತಾ ಮತ್ತು ಬರ್ಹಿಷದರು ಎಂಬ ಪಿತೃದೇವತೆಗಳಿಗೆ ದಕ್ಷಪುತ್ರಿ ಸ್ವಧಾದೇವಿ ಪತ್ನಿಯು. ಇವಳಲ್ಲಿ ಮೇನೆ ಮತ್ತು ವೈತರಣಿ ಎಂಬ ಇಬ್ಬರು ಹೆಣ್ಣು ಮಕ್ಕಳು ಹುಟ್ಟಿದರು. ಸತಿಯೆಂಬ ದಕ್ಷಪುತ್ರಿಯು ಶಿವನನ್ನು ಮದುವೆಯಾದಳು. ಪತಿವ್ರತಾ ಶಿರೋಮಣಿಯಾದ ಇವಳಿಗೆ ಸಂತಾನವಾಗಲಿಲ್ಲ. ದಕ್ಷನು ನಿಷ್ಕಾರಣವಾಗಿ ಶಿವನನ್ನು ವಿರೋಧಿಸಿದನು. ಇದನ್ನು ನೋಡಿದ ಸತೀದೇವಿಯು ಯೋಗ ನಿರತಳಾಗಿ ಹರಿಧ್ಯಾನ ಮಾಡುತ್ತ ದೇಹವನ್ನು ಬಿಟ್ಟುಬಿಟ್ಟಳು.

**ಮೊದಲನೆಯ ಅಧ್ಯಾಯ ಮುಗಿದುದು**

**ವಿದುರ :–** ದಕ್ಷನು ಶಿವನನ್ನು ದ್ವೇಷಿಸಲು ಕಾರಣವೇನು ?

**ಮೈತ್ರೇಯ :–** ಹಿಂದೆ ಪ್ರಜೇಶ್ವರರೆಲ್ಲರೂ ಸತ್ರಯಾಗವನ್ನು ಆರಂಭಿಸಿದರು. ಅಲ್ಲಿ ದೇವತೆಗಳು, ಮಹರ್ಷಿಗಳು, ಮುನಿಗಳು ಸೇರಿದ್ದರು. ಆಗ ದಕ್ಷ ಪ್ರಜೇಶ್ವರನು ಅಲ್ಲಿ ಬರಲು ಬ್ರಹ್ಮ ಶಿವರನ್ನುಳಿದು ಸರ್ವರೂ ಎದ್ದು ನಮಿಸಿ ದಕ್ಷನನ್ನು ಸತ್ಕರಿಸಿದರು. ದಕ್ಷನು ತನ್ನ ತಂದೆಯಾದ ಬ್ರಹ್ಮದೇವರಿಗೆ ನಮಿಸಿ ಅವರ ಅನುಮತಿ ಪಡೆದು ಉಚಿತಾಸನದಲ್ಲಿ ಕುಳಿತನು. ಅವನ ಇದಿರಿಗೆ ಆಸನದಲ್ಲಿ ಕುಳಿತಿದ್ದ ಶಿವನು ಎದ್ದು ತನಗೆ ನಮಿಸಲಿಲ್ಲವೆಂದು ದಕ್ಷನು ಕುಪಿತನಾಗಿ ಮಾತಾಡಿದನು.

"ಸಭಿಕರೇ ! ನಾಚಿಕೆಯಿಲ್ಲದ ಈ ರುದ್ರನು ವಿಹಿತ ಕರ್ಮಭ್ರಷ್ಟನು. ವೈದಿಕ ಆಚಾರವನ್ನು ಹಾಳುಮಾಡಿದನು. ಇವನಿಗೆ ಅರ್ಹಳಲ್ಲದ ನನ್ನ ಮಗಳನ್ನು ಕೊಟ್ಟೆನಲ್ಲ ! ಇವನು ಅಳಿಯನಾಗಿ ಮಾವನಾದ ನನಗೆ ಮರ್ಯಾದೆ ಕೊಡಲಿಲ್ಲವಲ್ಲ ! ಇವನು ಭೂತಗಳನ್ನು ಕಟ್ಟಿಕೊಂಡು ಸ್ಮಶಾನದಲ್ಲಿ ವಾಸಮಾಡುತ್ತಾನಾದ್ದರಿಂದ ಹಡಿ ಮೈಲಿಗೆಯವನು. ಚಿತಾಭಸ್ಮವನ್ನು ಬಳಿದುಕೊಂಡು, ಎಲುಬಿನ ಸರವನ್ನು ಹಾಕಿಕೊಂಡು, ದಿಗಂಬರನಾಗಿ ಒಮ್ಮೆ ಅಳುತ್ತ ಒಮ್ಮೆ ನಗುತ್ತ ಸಂಚರಿಸುತ್ತಿರುವನಾದ್ದರಿಂದ ಇವನು ಹುಚ್ಚನೇ ಸರಿ. ಹೆಸರಿಗೆ ಮಾತ್ರ ಶಿವನು. ಅಷ್ಟೇ ಹೊರತು ಸಹಜ

ವಾಗಿ ಅಮಂಗಳ ಸ್ವರೂಪನೇ. ಇಂಥ ಹುಚ್ಚನ ಕೈಹಿಡಿಯಬೇಕಾದರೆ ನನ್ನ ಮಗಳ ಹಣೆಯಲ್ಲಿ ಬರೆದ ವಿಧಿಬರಹವೇ ಕಾರಣ".

ಹೀಗೆ ನಿಂದಿಸಿ "ಈ ಅಯೋಗ್ಯನಿಗೆ ಯಜ್ಞದಲ್ಲಿ ಹವಿರ್ಭಾಗವು ಸಲ್ಲದೇ ಹೋಗಲಿ" ಎಂದು ಶಪಿಸಿ ಕೂಡಲೇ ಅಲ್ಲಿಂದ ಎದ್ದು ಹೊರಟುಹೋದನು. ಆಗ ಶಿವನ ಸೇವಕಾಗ್ರಣಿಯಾದ ನಂದಿಯು ದಕ್ಷನಿಗೂ, ಅವನು ಮಾಡಿದ ಶಿವನಿಂದನೆಯನ್ನು ಕೇಳಿ ಆನಂದಪಟ್ಟ ವಿಪ್ರರಿಗೂ ಶಾಪವನ್ನು ಹೀಗೆ ಕೊಟ್ಟನು :

"ಶಿವದ್ರೋಹಿಯಾದ ದಕ್ಷನು ಯಥಾರ್ಥ ಜ್ಞಾನಹೀನನಾಗಲಿ. ಕಾಮ್ಯ ಕರ್ಮವಶನಾಗಲಿ. ಸ್ತ್ರೀಯರಲ್ಲಿ ಆಸಕ್ತನಾಗಿ ಆಡಿನ ಮುಖವನ್ನು ಹೊಂದಲಿ. ಅವಿದ್ಯೆಯನ್ನೇ ತತ್ತ್ವವಿದ್ಯೆಯೆಂದು ಭ್ರಮಿಸಲಿ. ಇವನ ಅನುಯಾಯಿಗಳೆಲ್ಲರೂ ಕೊಂಚಕಾಲ ಸಂಸಾರ ದುಃಖವನ್ನು ಅನುಭವಿಸಲಿ. ಅವರೆಲ್ಲರೂ ವೇದತಾತ್ಪರ್ಯವನ್ನು ತಿಳಿಯದೇ ಮೇಲ್ನೋಟದ ಕರ್ಮಗಳಲ್ಲಿಯೇ ಆಸಕ್ತವಾಗಿರಲಿ. ತಿನ್ನಬಾರದುದನ್ನು ತಿಂದು, ಕುಟುಂಬ ಪೋಷಣೆಗಾಗಿಯೇ ವಿದ್ಯೆಯನ್ನು ಕಲಿತು, ಹಣವೆಂದರೆ ಹಲ್ಲುಗಿಂಜಿ ಭಿಕ್ಷುಕರಾಗಿ ಸಂಚರಿಸಲಿ".

ನಂದಿಯು ಶಾಪ ಕೊಟ್ಟುದನ್ನು ನೋಡಿ ಭೃಗುಋಷಿಯು ಪ್ರತಿ ಶಾಪವನ್ನು ಹೀಗೆ ಕೊಟ್ಟರು :- "ಶಿವವ್ರತಧಾರಿಗಳೂ ಅವರ ಅನುಯಾಯಿಗಳೂ ಪಾಷಂಡಿಗಳೆನಿಸಲಿ, ಆಚಾರಹೀನರಾಗಿ, ಮೂಢರೆನಿಸಿ, ಜಟಾಭಸ್ಮ ಎಲುಬಿನ ಸರಗಳನ್ನು ಧರಿಸಿ ಹೆಂಡದ ಗಡಿಗೆಗಳನ್ನು ಪೂಜಿಸುವ ಶಿವದೀಕ್ಷೆಯನ್ನು ಹಿಡಿಯಲಿ. ವೇದನಿಂದಕರಾಗಿ ಸದಾ ಭೈರವನೇ ದೇವರೆಂದು ಭಜಿಸಲಿ".

ಹೀಗೆ ಭೃಗುಮುನಿಯು ಹೇಳಿದುದನ್ನು ಕೇಳಿದ ಶಿವನು ಸ್ವಲ್ಪ ಅನುತಾಪಗೊಂಡಂತವನಾಗಿ, ಅನುಚರರೊಡನೆ ಆ ಸಭೆಯಿಂದ ಎದ್ದು ಹೊರಟುಹೋದನು. ಬಳಿಕ ಆ ಸತ್ರವು ಸಾವಿರ ವರ್ಷಗಳವರೆಗೂ ನಡೆಯಿತು. ಮರೀಚ್ಯಾದಿ ಪ್ರಜೇಶ್ವರರು ಪ್ರಯಾಗದಲ್ಲಿ ಅವಭೃತ ಸ್ನಾನಮಾಡಿ ಶುದ್ಧಮನಸ್ಕರಾಗಿ ತಮ್ಮ ತಮ್ಮ ವಾಸಸ್ಥಳಕ್ಕೆ ತೆರಳಿದರು.

## ಎರಡನೆಯ ಅಧ್ಯಾಯ ಮುಗಿದುದು

ಹೀಗೆ ದಕ್ಷ ಶಿವರಿಗೆ ಬಹುಕಾಲ ದ್ವೇಷ ಬೆಳೆಯಿತು. ಮುಂದೆ ಬ್ರಹ್ಮದೇವರು ದಕ್ಷನನ್ನು ಪ್ರಜೇಶ್ವರರಿಗೆ ಪ್ರಧಾನನನ್ನಾಗಿ ಮಾಡಿದ್ದರಿಂದ ಅವನಿಗೆ ಗರ್ವವುಂಟಾಯಿತು. ಅವನು ಕರ್ಮದಲ್ಲಿಯೇ ನಿರತನಾಗಿ, ರುದ್ರಭಾಗವಿಲ್ಲದ **ಬೃಹಸ್ಪತಿಸವ** ಎಂಬ ಕ್ರತುವನ್ನಾರಂಭಿಸಿದನು. ಅದಕ್ಕೆ ಸಕಲ ಋಷಿಗಳೂ, ದೇವತೆಗಳೂ ಬಂದು ಸೇರಿದರು,

ಯಾಗಕ್ಕಾಗಿ ಗಗನದಲ್ಲಿ ಹೋಗುತ್ತ ಮಾತಾಡುತ್ತಿದ್ದ ದಕ್ಷಯಜ್ಞದ ಸಂಗತಿ ಕೈಲಾಸದಲ್ಲಿದ್ದ ಸತಿಯ ಕಿವಿಗೆ ಬಿದ್ದಿತು ಹೊರಗೆ ಬಂದು ಆ ಜನರನ್ನು ನೋಡಿ, ತಾನೂ ಆ ಉತ್ಸವವನ್ನು ನೋಡುವ ಕುತೂಹಲವುಳ್ಳವಳಾಗಿ ಪತಿಯ ಬಳಿಗೆ ಬಂದು ಪ್ರಾರ್ಥಿಸುತ್ತಾಳೆ :

**ಸತಿ :** ಪರಮ ಮಂಗಳನೆ! ನಿಮ್ಮ ಮಾವ ಒಂದು ಯಜ್ಞಮಾಡಲಾರಂಭಿಸಿರುವನಂತೆ. ದೇವತೆಗಳೆಲ್ಲರೂ ಹೋಗುತ್ತಿರುವುದನ್ನು ನೋಡು! ನಿನಗೂ ಇಚ್ಛೆ ಇದ್ದರೆ ನಾವೂ ಅಲ್ಲಿಗೆ ಹೋಗೋಣ. ಈಗ ಅಲ್ಲಿಗೆ ನನ್ನ ಅಕ್ಕ ಭಾವಂದಿರೆಲ್ಲರೂ ಬಂದಿರುವರು. ಅವರಂತೆ ನಾವಿಬ್ಬರೂ ಹೋದರೆ ದಂಪತಿಗಳಿಗೆ ಮಾತಾಪಿತೃಗಳು ಕೊಡುವ ಉಡುಗೊರೆ, ಮರ್ಯಾದೆಗಳನ್ನು ಹೊಂದಬಹುದು. ನನಗಾದರೋ ಅಕ್ಕ ಭಾವ, ತಾಯಿ ತಂದೆ ಮತ್ತು ಯಜ್ಞ ಎಲ್ಲವನ್ನೂ ನೋಡಬಹುದು ಅದೇ ಕುತೂಹಲ ಜಾಸ್ತಿಯಾಗಿದೆ. ನನ್ನ ಧಣಿಯಾದ ತಾವು ಸಾಮಾನ್ಯರೆ? ಮಹಾನುಭಾವರು. ಜಗತ್, ಅಂತರ್ಯಾಮಿ ಶ್ರೀಹರಿಯನ್ನು ನಿತ್ಯವೂ ಪ್ರತ್ಯಕ್ಷೀಕರಿಸಿ ಕೊಂಡಿರತಕ್ಕವರು ಇಂಥ ತಮ್ಮನ್ನು ನೋಡುತ್ತಿದ್ದ ಮೇಲೆ ನೋಡಬೇಕಾದುದು ಯಾವುದೂ ಇಲ್ಲ. ಆದರೆ ನಾನೆಷ್ಟೇ ಆಗಲಿ ಹೆಂಗಸು. ನಿಮ್ಮ ಮಹಿಮೆ ನನಗೆ ಹೇಗೆ ತಿಳಿದೀತು ತವರುಮನೆಗೆ ಹೋಗಲು ಆತುರಪಡುತ್ತಿರುವೆನು. ಯಾವ ಸಂಬಂಧವೂ ಇಲ್ಲದವರೇ ಆ ಉತ್ಸವಕ್ಕೆ ಹೋಗುತ್ತಿರುವಾಗ ಅವರ ಮಗಳಾಗಿ ಹೋಗದೆ ಹೇಗೆ ಇರುವುದು ? ಇದರ ಮೇಲೆ ತಂದೆ, ಗುರು, ಸ್ವಾಮಿ, ಮಿತ್ರರು ಕರೆಯದೇ ಇದ್ದರೂ ಉತ್ಸವಕ್ಕೆ ಹೋಗಬಹುದು. ಅವರೀಗ ಕರೆದಿಲ್ಲವೆಂದು ನಿಲ್ಲುವುದಲ್ಲ. ನನ್ನನ್ನು ತಾವು ಅರ್ಧದೇಹದಲ್ಲಿ ಧರಿಸಿರುವಿರಿ. ಆಹ! ಎಂಥ ಕಾರುಣ್ಯ ತಮ್ಮದು. ಪ್ರಸನ್ನರಾಗಿರಿ. ದಯೆಮಾಡಿ ನನ್ನನ್ನು ಕರೆದುಕೊಂಡು ಹೊರಡಿ.

**ಶಿವ :-** ಮಂಗಳೇ! ಬಂಧುಗಳು ಕರೆಯದೇ ಇದ್ದರೂ ಹೋಗುವುದು ಧರ್ಮವೇ ಸರಿ. ಯಾವಾಗ ಎಂದರೆ ಬಂಧುಗಳಿಗೆ ದುರಭಿಮಾನ, ಕೋಪ, ದೋಷ ದೃಷ್ಟಿ ಇರಬಾರದು. ವಿದ್ಯೆ, ತಪಸ್ಸು, ಧನ, ರೂಪ, ವಯಸ್ಸು ಮತ್ತು ಕುಲ ಈ ಆರೂ ಸಜ್ಜನರಿಗೆ ಹಿತಕಾರಿಗಳು. ಇವೇ ಅಯೋಗ್ಯರಿಗೆ ಮದ ಬರುವಂತೆ ಮಾಡುವುವು. ಅದರಿಂದ ಮಿಥ್ಯಾಜ್ಞಾನ ಬಂದು ಬೆಂದುಹೋಗುವರು. ಮನೆಗೆ ಬಂದವರನ್ನು ನೋಡಿ ಸಹಿಸದವ ಬಂಧುವೆ ? ಅಂತಹವರಲ್ಲಿಗೆ ಹೋಗಲೇಬಾರದು. ಎಂತಹ ಕಷ್ಟವಾದರೂ ಸಹಿಸಬಹುದು. ಬಂಧುವಿನ ತಿರಸ್ಕಾರ ಸಾಧ್ಯವಿಲ್ಲ. ನಿಮ್ಮಪ್ಪನಿಗೆ ನೀನು ಕಿರಿಯ ಮಗಳೆಂದು ಪ್ರೇಮವಿರಬಹುದು. ಆದರೆ ನೀನು ನನ್ನ ಪತ್ನಿ. ಖಂಡಿತ ಗೌರವಿಸುವುದಿಲ್ಲ. ನಾವು ಮನೋಭಿಮಾನಿಗಳಾದ್ದರಿಂದ ನಿಮ್ಮಪ್ಪನಿಗೆ ಸಹನೆಯಿಲ್ಲ. ಅಸುರಾವೇಶ ಬಡಿದುಕೊಂಡಿದೆ. ನಮ್ಮ ಪದವಿಗೆ ಅರ್ಹನಲ್ಲವಾದ್ದರಿಂದ ಅವನು ಕೊರಗಿ ದ್ವೇಷಿಸುತ್ತಿರುವನು. ನಾನು ನಮಸ್ಕರಿಸಲಿಲ್ಲವೆಂದು

ನಿಮ್ಮಪ್ಪನಿಗೆ ಕೋಪ. ತಾರತಮ್ಯದಲ್ಲಿ ಕಿರಿಯನಿಗೆ ಹಿರಿಯನು ನಮಸ್ಕರಿಸಬಾರದು. ಮರ್ಯಾದೆ ಮಾಡಬೇಕಾದಾಗ ಅವನ ಅಂತರ್ಯಾಮಿ ಪುರುಷೋತ್ತಮನಿಗೆ ಮನಸ್ಸಿನಿಂದಲೇ ನಮಿಸಬೇಕು. ದಕ್ಷನು ಸಭೆಗೆ ಬಂದಾಗ ನಾನು ಹೀಗೆಯೇ ಮಾಡಿದೆ. ಅವನು ಬಂದಾಗ ನನ್ನೆದುರಿಗಿದ್ದ ಬ್ರಹ್ಮದೇವರಲ್ಲಿ ಪ್ರಕಾಶಿಸುತ್ತಿದ್ದ ಶ್ರೀಹರಿಯನ್ನು ಧ್ಯಾನಿಸುತ್ತಿದ್ದೆನು. ಆಗ ಮತ್ತೇನನ್ನೂ ಮಾಡುವಂತಿಲ್ಲ. ಬಂದ ದಕ್ಷನೊಳಗಿದ್ದ ಹರಿಯ ಸ್ಮರಣೆ ಮಾಡಿದೆ. ಅದೇ ವಿಹಿತ ಸತ್ಕಾರ. ಮೂರ್ಖನಾದ ಅವನು ಅದನ್ನು ತಿಳಿಯದೇಹೋದ. ನನ್ನಲ್ಲಿ ದ್ವೇಷಿಸಲು ಕಾರಣವೇ ಇಲ್ಲ. ಗುರುದ್ರೋಹಿಯಾದ ಅವನನ್ನು ನೋಡಿದರೆ ಪಾಪ. ಇಷ್ಟು ಹೇಳಿದರೂ ನನ್ನ ಮಾತು ಮೀರಿ ಹೋದರೆ ನಿನಗೆ ಮಂಗಳವಾಗುವುದಿಲ್ಲ. ಮಾನಿಷ್ಠರಿಗೆ ಸ್ವಜನರಿಂದಾಗುವ ಅಪಮಾನ ಮರಣಕ್ಕೆ ಸಮಾನ.

## ಮೂರನೆಯ ಅಧ್ಯಾಯ ಮುಗಿದುದು

ಭವಾನಿಯು ಗಂಡನೊಪ್ಪಲಿಯೆಂದು ಅತ್ತಳು. ಕೋಪದಿಂದ ಹೊರಗೆ ಹೋಗಿ ಮತ್ತೆ ಬಂದಳು. ಶಿವನು ಸುಮ್ಮನಿದ್ದನು. ತವರುಮನೆ ಸೆಳೆತ ಜಾಸ್ತಿಯಾಗಿ ಸತೀದೇವಿಯು ಹೊರಟೇ ಹೋದಳು. ಶಿವನು ವ್ಯಥೆಪಟ್ಟನು. ಅದನ್ನು ಕಂಡ ಮಣಿಮಂತಾದಿ ರುದ್ರಾನುಚರರು ಓಡಿಹೋಗಿ ಆಕೆಯನ್ನು ನಂದಿಯಮೇಲೆ ಕೂಡಿಸಿಕೊಂಡು ಮರ್ಯಾದೆಯಿಂದ ಕರೆದುಕೊಂಡು ಹೋದರು. ಯಜ್ಞಶಾಲೆಗೆ ಬಂದ ಮಗಳನ್ನು ದಕ್ಷನು ಕಣ್ಣೆತ್ತಿಯೂ ನೋಡಲಿಲ್ಲ. ಸತಿಯು ಅರುದ್ರಭಾಗ ಯಜ್ಞವನ್ನೂ, ತನ್ನ ತಿರಸ್ಕಾರವನ್ನೂ ಕಂಡು ಸಹಿಸದೆ ಕುಪಿತಳಾದಳು. ಅನುಚರರು ದಕ್ಷನನ್ನು ಕೊಲ್ಲಲು ಹೋದರು. ಅವರನ್ನು ತಡೆದಳು.

**ಸತಿ :–** ಇಂದ್ರಾದಿಗಳಿಗೆ ಸ್ವಾಮಿಯಾದ ರುದ್ರನನ್ನು ನೀನೊಬ್ಬ ಮಾತ್ರ ದ್ವೇಷಿಸುತ್ತಿರುವೆ. ಸಜ್ಜನರು ಗುಣಗಳನ್ನು ಹುಡುಕಿದರೆ ದುರ್ಜನರು ದೋಷಗಳನ್ನೇ ಬೆದಕುವರು. ನೀನೀ ಕೆಲಸಮಾಡಿ ಪಾಪಗಳನ್ನು ಗಳಿಸಿಬಿಟಿ. ಒಂದು ಬಾರಿ ಶಿವನಾಮೋಚ್ಚಾರಣೆಯಿಂದ ಸರ್ವದುಃಖ ನಾಶವಾಗಿ ಆಕ್ಷಣ ಶುಚಿಯಾಗುವನು. ಇಂಥ ಪಾವನಮೂರ್ತಿ ಶಿವನನ್ನು ಕರ್ಮಭ್ರಷ್ಟ, ಅಶುಚಿ, ದುರಭಿಮಾನಿಯೆಂದು ಬೊಗಳುತ್ತಿರುವೆಯಲ್ಲ ! ನೀನೇ ಅಮಂಗಳ ಮುದ್ದೆ. ನಿನ್ನ ಮಾತಿನಂತೆ ಶಿವನು ಅಮಂಗಳನಾಗಿದ್ದಿದ್ದರೆ ಸ್ಮಶಾನದಲ್ಲಿರುವ ಅವನ ಬಳಿಗೆ ಯತಿಗಳಾದ ಸನಕಾದಿಗಳು ಬಂದು ಅವನ ಪಾದಧೂಳಿಯನ್ನು ತಲೆಯಮೇಲೆ ಧರಿಸುತ್ತಿದ್ದರೇನು ? (ಸ್ಮಶಾನವಾಸ, ಭಸ್ಮಧಾರಣೆ ಮುಂತಾದುವನ್ನು ಶಿವನು ಹರಿಯ ಅಪ್ಪಣೆಯಂತೆ ಮಾಡುತ್ತಿರುವುದರಿಂದ ಅವನು ಶುದ್ಧನಾಗಿಯೇ ಇರುವನೆಂದು ಭಾವ).

ಧಣಿಯ ಭಕ್ತರು, ಸೇವಕರು ತಮ್ಮ ಸ್ವಾಮಿಯನ್ನು ನಿಂದಿಸಿದವರನ್ನು ಸಮರ್ಥರಾದರೆ ಕೊಲ್ಲಬೇಕು. ದುರ್ಬಲರಾದರೆ ಧಣಿಯ ನಿಂದೆಯನ್ನು ಕೇಳದೆ ಕಿವಿ ಮುಚ್ಚಿಕೊಂಡು ಹೋಗಬೇಕು. ಇವೆರಡಕ್ಕೂ ಅವಕಾಶವಿಲ್ಲದವರು ಪ್ರಾಣ ಬಿಡಬೇಕು. ನನಗೆ ಇದೇ ಸಾಧ್ಯವಾದ ಮಾರ್ಗ. ಆದ್ದರಿಂದ ದುಷ್ಟ ಅನ್ನ ತಿಂದವನು ಅದನ್ನೆಲ್ಲ ಕಕ್ಕಿ ಶುದ್ಧನಾಗುವಂತೆ, ಶಿವನಿಂದಕನಾದ ನಿನ್ನಿಂದ ಉತ್ಪನ್ನವಾದ ಈ ಅಪವಿತ್ರವಾದ ದೇಹವನ್ನು ಬಿಟ್ಟು ಶುದ್ಧಳಾಗುವೆನು.

ಶಿವನು ನಿನಗೆ ನಮಿಸಲಿಲ್ಲವೆಂದು ದ್ವೇಷಮಾಡುತ್ತಿರುವೆ. ಅವನು ದೇವ ಶ್ರೇಷ್ಠನು. ಸಾಮಾನ್ಯ ಜನರಂತೆ ವಿಧಿ ನಿಷೇಧ ಬದ್ಧನಲ್ಲ. ಪ್ರವೃತ್ತ ನಿವೃತ್ತ ಕರ್ಮಗಳೆರಡೂ ಅವನಲ್ಲಿಲ್ಲ. **ಮಹಾನಿಯಮ** ಅಂದರೆ ಹರಿನಿಯಮಿತ ಆಧಿಕಾರಿಕವೆಂಬ ಕರ್ಮನಿರತನು. ಇಂತಹವನನ್ನು ಕರ್ಮಭ್ರಷ್ಟನೆಂದು ನೀನು ನಿಂದಿಸಿದೆಯಾಗಿ ಅಜ್ಞಾನಿ ನೀನೆಂಬುದು ಸ್ಪಷ್ಟವಾಯಿತು. ಇಂತಹ ಪಾಪಿಯಿಂದ ಹುಟ್ಟಿದ ಈ ದೇಹವು ಸಾಕಪ್ಪ ಸಾಕು ! ನಿನ್ನ ಮಗಳೆನಿಸಲು ನಾಚಿಕೆಯಾಗುತ್ತಿದೆ. ಬದುಕಿ ಪತಿಯ ಮನೆಗೆ ಹೋದಾಗ ಮಾತನಾಡುತ್ತ ನನ್ನ ಪತಿಯು 'ದಕ್ಷಪುತ್ರಿ' ಎಂದು ಕರೆದರೆ ಆಭಾಸವಾಗುತ್ತದೆಯಾಗಿ ಈ ದೇಹವನ್ನು ಬಿಡುವೆನು.

**ನಾಲ್ಕನೆಯ ಅಧ್ಯಾಯ ಮುಗಿದುದು**

ಸತೀದೇವಿಯು ಯಜ್ಞಶಾಲೆಯಲ್ಲಿಯೇ ಅಸಂಪ್ರಜ್ಞಾತ ಸಮಾಧಿಯನ್ನು ಹೊಂದಿದಳು. ಜ್ಞಾನಿಯಾದ್ದರಿಂದ ಇಚ್ಛಾಮರಣವನ್ನು ಹೊಂದುವ ಯೋಗ್ಯತೆ ಉಳ್ಳವಳು ! ದೇಹ ಬಿಟ್ಟಾಗ ಅದನ್ನು ಸುಡುವ ಹಂಗೂ ತಂದೆಗಿರಬಾರದೆಂದು ದೇಹದೊಳಗಿರುವ ವಾಯ್ವಗ್ನಿಗಳಲ್ಲಿರುವ ಶ್ರೀಹರಿಯನ್ನು ಧ್ಯಾನಿಸಿದಳು. ಜಗದ್ಗುರುವಾದ ತನ್ನ ಪತಿಯ ಪಾದವನ್ನು ಧ್ಯಾನಿಸಿ, ಆನಂದವನ್ನು ಹೊಂದಿ, ವಿಷ್ಣ್ವಾದಿಗಳನ್ನು ಚಿಂತಿಸಿ, ದೇಹದೊಳಗೆ ಅವರ ದರ್ಶನವನ್ನು ಮಾಡಿ, ಪತಿನಿಂದಾ ಶ್ರವಣ ಜನಿತ ಪಾಪವನ್ನು ಕಳೆದುಕೊಂಡು, ದೇಹವನ್ನು ಯೋಗದಿಂದ ಬಿಟ್ಟಳು. ಇವಳು ಸುಷುಮ್ನಾ ನಾಡಿದ್ವಾರಾ ದೇಹದಿಂದ ಹೊರಗೆಹೋದ ಕೂಡಲೇ, ಧ್ಯಾನದಿಂದ ಹುಟ್ಟಿದ ಅಗ್ನಿಯು ಆ ದೇಹವನ್ನು ಸುಟ್ಟು ಬೂದಿ ಮಾಡಿದನು. ಇದನ್ನು ನೋಡಿ ಕೆಲವರು ಹಾಹಾಕಾರ ಮಾಡಿದರು. ಕೆಲವರು ದಕ್ಷನನ್ನು ನಿಂದಿಸಿದರು. ದಕ್ಷನೂ "ನಾನು ಅನ್ಯಾಯ ಮಾಡಿದೆ, ಅಸ್ಥಿರ ದೇಹದಲ್ಲಿ ಬಂದು ಶಿವನಲ್ಲಿ ಅಪರಾಧ ಮಾಡಿದೆ, ನನಗೆ ಧಿಕ್ಕಾರ" ಎಂದು ಕೊರಗಿದನು. ರುದ್ರಾನುಚರರು ಅವನನ್ನು ಕೊಂದೇಬಿಡಬೇಕೆಂದು ಮುಂದೆ ನುಗ್ಗಿದರು. ಆಗ ಭೃಗುಋಷಿಗಳು ಯಜ್ಞನಾಶಕರನ್ನು ಶಿಕ್ಷಿಸತಕ್ಕ "ಯೇನೋರಸಿ" ಇತ್ಯಾದಿ ಯಜುರ್ವೇದ ಮಂತ್ರವನ್ನು ಪಠಿಸುತ್ತ

ದಕ್ಷಿಣಾಗ್ನಿಯಲ್ಲಿ ಹೋಮ ಮಾಡಿದರು. ಕೂಡಲೇ ಅಗ್ನಿಕುಂಡದಿಂದ ಸಾವಿರಾರು ಮಂದಿ ಋಭುನಾಮಕ ದೇವತೆಗಳು ಹೊರಬಂದು ಪ್ರಮಥಗಣದವರ ಮುಖಕ್ಕೆ ಉರಿಯುವ ಕೊಳ್ಳಿಗಳನ್ನಿಟ್ಟರು. ಇದರಿಂದ ಶಿವನ ಆಳುಗಳು ಬೆಂದು, ಅಲ್ಲಿ ನಿಲ್ಲದೆ ದಿಕ್ಕಾಪಾಲಾಗಿ ಓಡಿಹೋದರು.

ಐದನೆಯ ಅಧ್ಯಾಯ ಮುಗಿದುದು.

ಇತ್ತ ರುದ್ರದೇವರು ನಾರದರಿಂದ ಯಜ್ಞಶಾಲೆಯಲ್ಲಿ ನಡೆದ ಸಂಗತಿಗಳನ್ನು ಕೇಳಿ ಕುಪಿತರಾಗಿ. ತಮ್ಮ ಜಟೆಯಲ್ಲಿನ ಒಂದು ತಿರಿಯನ್ನು ಕಿತ್ತು ನೆಲಕ್ಕೆ ಬಡಿದರು. ಅದರಿಂದ ರುದ್ರಾಂಶನೇ ಆದ ವೀರಭದ್ರನು ಅವತರಿಸಿ ಶಿವನ ಅಪ್ಪಣೆಯಂತೆ, ದಕ್ಷನ ಸಂಹಾರಕ್ಕಾಗಿ ಪ್ರಮಥಗಣದೊಡನೆ ಹೊರಟನು. ಈ ಗುಂಪಿನ ಪಾದ ಹಲೆಯಿಂದ ಎದ್ದ ಧೂಳಿಯನ್ನು ಯಜ್ಞಮಂಟಪದಲ್ಲಿದ್ದ ಸರ್ವರೂ ನೋಡಿ "ಇದು ವಿಪತ್ತು ಬರುವುದನ್ನು ಸೂಚಿಸುತ್ತದೆ" ಎಂದು ಭಯದಿಂದ ನಡುಗುತ್ತಿದ್ದರು. ರುದ್ರಭಟರು ಯಜ್ಞಶಾಲೆಗೆ ನುಗ್ಗಿ ಅಲ್ಲಿನ ಸಕಲ ಭಾಗಗಳನ್ನೂ ನಾಶಮಾಡಿದರು. ಮತ್ತು ಅಲ್ಲಿದ್ದವರನ್ನು ಹೊಡೆದು ಬಡಿದು ಹಿಂಸಿಸಿದರು. ಮಣಿಮಂತನು ಭೃಗು ಮುನಿಯನ್ನು ಕಟ್ಟಿಹಾಕಿದನು. ವೀರಭದ್ರನು ಭೃಗುವಿನ ಗಡ್ಡವನ್ನು ಕತ್ತರಿಸಿ, ಭಗನ ಕಣ್ಣುಗಳನ್ನು ಕಳಚಿ ತೆಗೆದನು. ಬಳಿಕ ಪೂಷನ ಹಲ್ಲುಗಳನ್ನು ದುರಿಸಿದನು. ಕೊನೆಗೆ ದಕ್ಷನನ್ನು ಫಕ್ಕನೆ ಹಿಡಿದು ಕೆಳಕ್ಕೆ ಕೆಡವಿ ಎದೆಯನ್ನು ಪಾದದಿಂದ ಮೆಟ್ಟಿ ಕತ್ತಿಯಿಂದ ಅವನ ಕತ್ತನ್ನು ಕುಯ್ದನು. ಆದರೇನು ? ಎಷ್ಟು ಯತ್ನ ಮಾಡಿದರೂ ದಕ್ಷನ ಚರ್ಮವನ್ನೂ ಛೇದಿಸಲಾಗಲಿಲ್ಲ. ಆಶ್ಚರ್ಯವನ್ನು ಹೊಂದಿದ ವೀರಭದ್ರನು ತನ್ನ ಮೂಲರೂಪವನ್ನು ಚಿಂತಿಸಿದನು. ಆಗ ರುದ್ರನು ಅಲ್ಲಿಗೆ ಬಂದು ಆ ದಕ್ಷನ ಸಂಹಾರವೇ ಯಜ್ಞವೆಂದು ಅನುಸಂಧಾನ ಮಾಡಿ, ಯಜ್ಞಪಶುವನ್ನು ಹಿಂಸಿಸುವ ಉಪಾಯವನ್ನು ತಿಳಿದು, ಮಂತ್ರದಿಂದ ದಕ್ಷನನ್ನು ಪಶುವನ್ನಾಗಿ ಚಿಂತಿಸಿ ಅವನ ಮುಂಡದಿಂದ ರುಂಡವನ್ನು ಕತ್ತರಿಸಿ ಅದನ್ನು ದಕ್ಷಿಣಾಗ್ನಿಯಲ್ಲಿ ಹೋಮಮಾಡಿ, ಬಳಿಕ ಅಲ್ಲಿದ್ದವರನ್ನೆಲ್ಲಾ ಜಯಿಸಿ ಕೈಲಾಸಗಿರಿಗೆ ಹೊರಟುಹೋದನು.

ಆರನೆಯ ಅಧ್ಯಾಯ ಮುಗಿದುದು

ದಕ್ಷಯಾಗದಲ್ಲಿ ಹೀಗೆ ಅನಾಹುತವಾಗುವುದೆಂದು ಮೊದಲೇ ತಿಳಿದಿದ್ದ ಬ್ರಹ್ಮ ದೇವರೂ, ವಿಶ್ವವ್ಯಾಪಿ ನಾರಾಯಣನೂ ಅಲ್ಲಿಗೆ ಹೋಗಿರಲಿಲ್ಲ. ದೇವತೆಗಳೆಲ್ಲರೂ ಬ್ರಹ್ಮದೇವರ ಬಳಿಗೆ ಹೋಗಿ ಈ ಸಂಗತಿಯೆಲ್ಲವನ್ನೂ ವಿಜ್ಞಾಪಿಸಿಕೊಂಡರು.

**ಬ್ರಹ್ಮ :-** ದೇವತೆಗಳಿರಾ ! ಶ್ರೇಷ್ಠಪುರುಷನಿಗೆ ಅಪರಾಧ ಮಾಡಿ ಪಾಪ ಗಳಿಸಿದ ಪ್ರಾಣಿಗಳಿಗೆ ಕ್ಷೇಮವಾಗುವುದಿಲ್ಲ, ನೀವು ಶಿವನಿಗೆ ಯಜ್ಞಭಾಗವನ್ನು

ಕೊಡದೆ ಮಹಾಪರಾಧ ಮಾಡಿರುವಿರಿ. ಆದರೂ ಶರಣಾಗತರಿಗೆ ಬೇಗ ಪ್ರಸನ್ನನಾಗುವುದು ಶಿವನ ಸ್ವಭಾವ. ಆದ್ದರಿಂದ ನೀವೆಲ್ಲ ಅವನ ಪಾದ ಹಿಡಿದು ಅಪರಾಧವನ್ನು ಕ್ಷಮಿಸಿ ಅನುಗ್ರಹಿಸಬೇಕೆಂಡು ಪ್ರಾರ್ಥಿಸಿರಿ. ಕೋಪಗೊಂಡರೆ ಲೋಕವನ್ನೇ ತಲೆಕೆಳಗು ಮಾಡಬಲ್ಲ, ಧೀರನಾದ ಶಿವನನ್ನು ದಕ್ಷನು ನಿಂದಿಸಿದ ಕಾರಣ, ಪತ್ನಿವಿಯೋಗ ಕಾರಣ, ಅವನು ಕುಪಿತನಾಗಿರುವನು. ಯಜ್ಞವು ಪೂರ್ಣವಾಗಬೇಕೆಂದು ಬಯಸಿ ನೀವು ಶಿವನನ್ನು ಪ್ರಸನ್ನೀಕರಿಸಿಕೊಳ್ಳಿರಿ. ಶಿವನು ಶ್ರೀಹರಿಯ ಮನಸ್ಸಿನಂತೆ ನಡೆಯುವವನು. ನನ್ನ ಮತ್ತು ವಾಯುದೇವನ ಅಧೀನನು. ಅವನು ಮತ್ತಾರ ಅಧೀನನೂ ಆಗದಿರುವವನು. ಅಂತಹ ರುದ್ರದೇವನಿಗೆ ಮುಮುಕ್ಷುವು ಯಾವನೂ ಅಪರಾಧವನ್ನೆಸಗಲಾರನು.

(ಹೀಗೆ ಹೇಳಿ ಬ್ರಹ್ಮದೇವರು ಸಕಲರೊಡನೆ ಹೊರಟು ಕೈಲಾಸಕ್ಕೆ ಬಂದರು. ದೇವತೆಗಳು ಕೈಲಾಸದ ವನಗಳ ಸೊಬಗನ್ನು ನೋಡುತ್ತಾ ಬಂದರು. ಅಲ್ಲಿ ನಂದೆಯೆಂಬ ಗಂಗಾ ನದಿಯ ಶಾಖೆಯು ಪರ್ವತದ ಸುತ್ತಲೂ ಪ್ರವಹಿಸುತ್ತಾ ಇದೆ. ಭವಾನಿಯು ಈ ನದಿಯಲ್ಲಿ ನಿತ್ಯವೂ ಸ್ನಾನ ಮಾಡುತ್ತಿದ್ದಳು. ಪರ್ವತದ ಈ ಸುಂದರ ಸನ್ನಿವೇಶಗಳನ್ನು ನೋಡುತ್ತ ದೇವತೆಗಳು ಮುಂದೆ ಬಂದರು. ಒಂದು ವಟವೃಕ್ಷ. ಅದರ ಕೆಳಗೆ ಶಿವನು ಶಾಂತನಾಗಿ ಕುಳಿತಿರುವನು. ಸಿದ್ಧರು, ಸನಕಾದಿಗಳು, ಕುಬೇರ ಇವರೆಲ್ಲರೂ ಶಿವನನ್ನು ಸೇವಿಸುತ್ತಿದ್ದರು. ವಿದ್ಯೆ, ತಪಸ್ಸು, ಯೋಗಮಾರ್ಗವನ್ನು ಅವಲಂಬಿಸಿ ಶಿವನು ಶ್ರೀಹರಿಯನ್ನು ಧ್ಯಾನಿಸುತ್ತಿರುವನು. ಇವನನ್ನು ನೋಡಿದ ಕೂಡಲೇ ಇಂದ್ರಾದಿಗಳೆಲ್ಲರೂ ನಮಸ್ಕರಿಸಿದರು. ಬ್ರಹ್ಮದೇವರು ಬಂದುದನ್ನು ನೋಡಿ, ಶಿವನು ಎದ್ದು ನಮಸ್ಕರಿಸಿದನು. ಹಾಗೇಯೇ ಶಿವನ ಸುತ್ತಮುತ್ತ ಕುಳಿತಿದ್ದ ಸಿದ್ಧಸಮೂಹವೆಲ್ಲ ಎದ್ದು ಬ್ರಹ್ಮದೇವರಿಗೆ ನಮಿಸಿತು.

ಬ್ರಹ್ಮ :- (ರುದ್ರನೊಳಗೆ ಅಂತರ್ಯಾಮಿಯಾಗಿರುವ ಶ್ರೀಹರಿಯನ್ನು ಕುರಿತು)

**ಸಾವೇರಿ ಅಟತಾಳ**

**ರುದ್ರಾಂತರ್ಗತ ನಾರಸಿಂಹ–ಪಾಹಿ – ಭದ್ರ ಮೂರುತಿ ನಿರ್ಗತಾಂಹ**
**ಹೃದ್ರೋಗ ಕಳೆದು ಜ್ಞಾನಾರ್ದ್ರ ಸ್ವಾಂತನ ಮಾಡು ಅ**
**ಪದ್ರ ಸಾಮಗಘ ಸಮುದ್ರ ದಾಟಿಸಿ ಬೇಗ**
**ಏಸೇಸು ಕಲ್ಪಗಳಲ್ಲಿ - ನಿನ್ನ ದಾಸನೆಂಬುದ ಬಲ್ಲಿ। ಈತ ನೀನೆಂಬುದು**
**ಲೇಶವರಿಯೇ, ಕ್ಲೇಶ । ನಾಶನ ಪ್ರಭುವೆ ವಾರಾಶಿಜೆ ವಲ್ಲಭ ॥**
**ವಾಸವಾನುಜ ವನಧಿಶಯನ ಮಹೇಶವಂದಿತ ಹೇ ಕರುಣಾ ಸಮುದ್ರ**
**ಕರಾಳವದನನೆ ನೀ ಸಲಹದಿರೆ ಕಾಣೆ ಕಾವರ**
**ಹೇಮ ಕಶ್ಯಪು ತನ್ನ - ಸುತನ ಬಾಧಿಸೆ**

**ಶ್ರೀಮನೋಹರ ಅನಾಥನ । ವ್ಯೋಮ ಪರ್ವತಾಂಬುಧಿ ಧಾವು ದೊಳುಳು ಹಿದ । ಭೂಮ, ಸನ್ಮುನಿಗಣ ಸ್ತೋತ್ರವುವಂದಿತ ಪಾದ ॥ ಸಾಮಜೇಂದ್ರನ ಸರಸಿಯೊಳು ಸು। ತ್ರಾಮನಂದನನಾ ರಣದಿ ಕುರು ಭೂಮಿಪತಿ ಸಭೆಯೊಳಗೆ ದ್ರೌಪದಿ । ಯಾ ಮಹಾತ್ಮರ ಕಾಯ್ದ ಕರುಣಿ । ವೇದಗಮ್ಯ ವೇದವ್ಯಾಸ–ಕಪಿಲ । ಯಾದವೇಶ ಮಹಿದಾಸ ಶ್ರೀದಶ್ರೀಶ ಅನ್ನದ ವಿಶ್ವ ಧನ್ವಂತ್ರಿ । ಮೇಧಾಪತಿ ಏವಮಾದಿ ರೂಪಕ ವಿಷ್ಣು ॥**

**ಕಾದುಕೋ ನಿನ್ನವರ ಮನದ ವಿ । ಷಾದ ರೋಗಂಗಳ ನಳಿದು ಮಹ ದಾದಿ ದೇವ ಜಗನ್ನಾಥವಿಠಲ । ಆದರದಿ ಪ್ರಹ್ಲಾದವರದ**

ರುದ್ರಾಂತರ್ಗತ ನಾರಸಿಂಹನೇ ! ನೀನು ಉಮಾ ಶಿವರಿಗಿಂತ ಉತ್ತಮನು· ನಿನ್ನನ್ನು ಪ್ರಮಾಣಗಳಿಂದಲೂ, ಅಪರೋಕ್ಷದಿಂದಲೂ ತಿಳಿದಿರುವೆನು. ನೀನು ಸ್ಥಾನಭೇದದಿಂದ ಭೇದರಹಿತ ರೂಪವುಳ್ಳವನು. ಸಕಲರಿಗೂ ಬಿಂಬನು. ಶಿವ ಮತ್ತು ಶಕ್ತಿಯರಲ್ಲಿದ್ದು ಅವರದ್ವಾರಾ ಜಗತ್ಸೃಷ್ಟಿ, ಪಾಲನೆ, ಸಂಹಾರ ಮಾಡುವೆ. ದಕ್ಷನು ರುದ್ರಭಾಗವನ್ನು ಕೊಡಲಿಲ್ಲ. ಆ ದೋಷ ಪರಿಹಾರಕ್ಕಾಗಿಯೇ ಶಿವನಲ್ಲಿದ್ದು ದಕ್ಷಯಜ್ಞ ಧ್ವಂಸವನ್ನು ನೀನು ಮಾಡಿರುವೆ. ನೀನೇ ಸರ್ವರಿಂದ ಕರ್ಮವನ್ನು ಮಾಡಿಸು ವವನೂ, ಫಲದಾತೃವೂ ಆಗಿರುವೆ. ಕೋಪದಿಂದ ದಕ್ಷನನ್ನು ನೀನು ಕೊಂದವನಲ್ಲ ಅಜ್ಞಾನಿಗಳಿಗೆ ಕೋಪ ಬಂದಂತೆ ಜ್ಞಾನಿಗಳಿಗೇ ಬರುವುದಿಲ್ಲವೆಂದ ಮೇಲೆ, ಸರ್ವ ದೋಷ ದೂರನಾದ ನಿನಗೆ ಕೋಪವೆಲ್ಲಿಂದ ಬಂದೀತು ? ದೋಷಿಗಳು ಇತರರನ್ನು ಹಿಂಸಿಸುವರು. ಅಂತಹವರಲ್ಲಿ ಕೋಪಿಸಬೇಕಾದ್ದೇ ಇಲ್ಲ. ಅವರ ದೋಷವೇ ಅವರನ್ನು ಕೊಲ್ಲುವುದು.

(ಶಿವನನ್ನು ಕುರಿತು ಬ್ರಹ್ಮದೇವರು ಮಾತಾಡುತ್ತಾರೆ :-) ಚಂದ್ರಶೇಖರಾ ! ಶ್ರೀಹರಿಯ ಬಂಧಕಶಕ್ತಿಯಿಂದ ಆವೃತರಾದ ದಕ್ಷನಂತಹ ಸಜ್ಜನರೂ ಅಜ್ಞಾನಿ ಗಳಂತೆ ಉತ್ತಮರಲ್ಲಿ ದ್ವೇಷ ಮಾಡುವರು. ಅವರಲ್ಲಿ ಕನಿಕರಗೊಂಡ ಸಜ್ಜನರು, ಹರಿಪ್ರೇರಣೆಯಿಂದ ಅಂತಹವರಲ್ಲಿ ಕ್ಷಮೆಯನ್ನು ತೋರದಿರುವರೆ ? ತೋರಿಯೇ ತೋರುವರು. ಯೋಗ್ಯತಾನುಸಾರ ಸರ್ವಜ್ಞನಾದ ನೀನು ಸರ್ವೋತ್ತಮ ಹರಿಯ ಅಧೀನವೂ, ಅಲಂಘ್ಯವೂ ಆದ ಬಂಧಕಶಕ್ತಿಯಿಂದ ಕದಡಿದ ಮನಸ್ಕರಾಗಿ, ಯಜ್ಞಾದಿ ಪ್ರವೃತ್ತಿ ಕರ್ಮದಲ್ಲಿಯೇ ನಿರತರಾಗಿರುವ ದಕ್ಷನಂತಹ ಸಜ್ಜನರಲ್ಲಿ ಅನು ಗ್ರಹ ಮಾಡಲು ಸಮರ್ಥನು. ಕೀಳು ಮಟ್ಟದ, ಯಜ್ಞವನ್ನು ಮೇಲಿನ ಮಟ್ಟಕ್ಕೆ ಒಯ್ದು ಅದು ಸಫಲವಾಗುವಂತೆ ಮಾಡುವ ಸಾಮರ್ಥ್ಯ ನಿನಗಿದೆ. ಇಂತಹ

ಮಹಿಮಾನ್ವಿತನಾದ ನೀನು ಯಜ್ಞದ ಹವಿರ್ಭಾಗಕ್ಕೆ ಅರ್ಹನೇ ಸರಿ. ಆದರೆ ಕುತ್ಸಿತರಾದ ಋತ್ವಿಜರೂ, ದೇವತೆಗಳೂ ನಿನಗೆ ಹವಿಸ್ಸನ್ನು ಕೊಡದೇ ಹೋದರು. ಆದ್ದರಿಂದಲೇ ನೀನು ಯಜ್ಞಕ್ಕೆ ವಿಘ್ನವುಂಟು ಮಾಡಿದೆ. ಹೀಗಾಗಿಯೇ ಯಜ್ಞವು ಅವಭೃತಸ್ನಾನಾದಿಗಳಿಲ್ಲದೆ ಅಸಮಾಪ್ತವಾಗಿಯೇ ಉಳಿಯಿತು. ಈಗ ದಕ್ಷನ ಈ ಯಜ್ಞವನ್ನು ನೀನೇ ಸಮಾಪ್ತಿಗೊಳಿಸು. ದಕ್ಷನು ಬದುಕಲಿ. ಭಗನು ಕಣ್ಣುಗಳನ್ನು ಹೊಂದಲಿ ಭೃಗುವಿಗೆ ಗಡ್ಡವು ಬೆಳೆಯಲಿ, ಪೂಷನಿಗೆ ಹಲ್ಲುಗಳು ಹುಟ್ಟಲಿ. ಮೈ ಮುರಿದು ಬಿದ್ದಿರುವ ದೇವತೆಗಳೂ, ಋತ್ವಿಜರೂ ಬೇಗ ಆರೋಗ್ಯ ಹೊಂದಲಿ. ಯಜ್ಞದಲ್ಲಿ ಕೊನೆಗೆ ಉಳಿದ ವಸ್ತುಗಳೆಲ್ಲವೂ, "ಸ್ವಿಷ್ಟಕೃತ್" ಎಂಬ ಹೋಮವೇ ನಿನ್ನ ಭಾಗವಾಗಲಿ. ನಿನಗೂ ಈ ಹವಿರ್ಭಾಗವನ್ನು ಕೊಡುವುದರ ಮೂಲಕವೇ ಈ ಯಜ್ಞವು ನಡೆಯಲಿ.

## ಏಳನೆಯ ಅಧ್ಯಾಯ ಮುಗಿದುದು

ಬ್ರಹ್ಮದೇವರ ಅನುನಯದಿಂದ ಶಿವಾಂತರ್ಯಾಮಿ ನರಸಿಂಹನು ತುಷ್ಟನಾದನು. ಆಗಲೇ ಶಿವನೂ ತುಷ್ಟನಾಗಿ ಮಾತಾಡುತ್ತಾನೆ :—

**ಶಿವ :-** ಜೀವೋತ್ತಮನೇ ! ಹರಿಯ ಮಾಯಾ ಬಂಧಕಶಕ್ತಿಯಿಂದ ಬುದ್ಧಿಗೆಟ್ಟು ಮಾಡಿದ ಅಜ್ಞರ ಅಪರಾಧಕ್ಕೆ ತಕ್ಕ ಶಿಕ್ಷೆ ಮಾಡಿದೆನು. ಅದರಿಂದ ನನ್ನ ಕರ್ತವ್ಯವು ನೆರವೇರಿತು. ಅವರ ಅಪರಾಧಗಳು ಬಹಳವಿದ್ದರೂ ಶಿಕ್ಷಿಸಿದ ಮೇಲೆ ಅವುಗಳನ್ನೆತ್ತಿ ಆಡುವುದರಿಂದ ಏನು ಫಲ ? ಆದಕಾರಣ ಅವುಗಳನ್ನು ಹೇಳುವುದಾಗಲಿ, ಸ್ಮರಿಸುವುದಾಗಲಿ ಮಾಡುವುದೇ ಇಲ್ಲ. ಅಪರಾಧಕ್ಕೆ ತಕ್ಕಂತೆ ಶಿಕ್ಷಿಸದೇ ಹೋಗಿದ್ದಿದ್ದರೆ ಕರ್ತವ್ಯವನ್ನು ಬಿಟ್ಟಿದಕ್ಕೆ ಪಶ್ಚಾತ್ತಾಪ ಪಡಬೇಕಾಗಿದ್ದಿತು. ಈಗ ಅಂತಹುದೇನೂ ಇಲ್ಲ.

ದಕ್ಷನು ಅಜಮುಖನಾಗಲಿ. ಭಗನು ಮಿತ್ರನ ಕಣ್ಣುಗಳಿಂದ ನೋಡಲಿ. ಪೂಷನು ಹಿಟ್ಟನ್ನೇ ಹರಿರ್ಭಾಗವಾಗಿ ಹೊಂದಿ ಯಜಮಾನನ ಹಲ್ಲುಗಳಿಂದ ಅಗಿಯಲಿ. ನನಗೆ ಹವಿರ್ಭಾಗ ಕೊಟ್ಟ ದೇವತೆಗಳ ಅವಯವಗಳು ಮೊದಲಿನಂತೆ ಸರಿಹೋಗಲಿ. ಯಜ್ಞದಲ್ಲಿ ಕೊನೆಗೆ ಉಳಿಯುವುದೆಲ್ಲವನ್ನೂ ನನ್ನ ಭಾಗವಾಗಿ ದೇವತೆಗಳು ಸಮರ್ಪಿಸಲಿ. ಋತ್ವಿಜರಲ್ಲಿ ತೋಳುಗಳನ್ನು ಕಳೆದುಕೊಂಡಿರುವವರು ಅಶ್ವಿನೀ ದೇವತೆಗಳ ತೋಳುಗಳಿಂದಲೂ, ಹಸ್ತಗಳಿಲ್ಲದವರು ಪೂಷನ ಹಸ್ತಗಳಿಂದಲೂ ಕಾರ್ಯನಿರ್ವಾಹ ಮಾಡಲಿ. ಭೃಗುವಿಗೆ ಹೋತನ ಗಡ್ಡವಾಗಲಿ.

ಹೀಗೆ ಶಿವನು ಬ್ರಹ್ಮದೇವರ ಮಾತನ್ನು ಮಾನ್ಯ ಮಾಡಿ ದೇವತೆಗಳಲ್ಲಿ ವಿಶೇಷ ವಾದ ಅನುಗ್ರಹವನ್ನು ಮಾಡಿದನು. ಎಲ್ಲರೂ ಯಜ್ಞದ ಸಭೆಗೆ ಬಂದರು. ಯಾಗ ದಲ್ಲಿನ ಹೋತನ ತಲೆಯನ್ನು ದಕ್ಷನಿಗಿಟ್ಟರು. ಶಿವನು ಕರುಣೆಯಿಂದ ದಕ್ಷನನ್ನು ನೋಡಿದನು. ಕೂಡಲೇ ಅವನು ಬದುಕಿ ನಿದ್ರೆಯಿಂದ ಎದ್ದವನಂತೆ ಮೇಲಕ್ಕೆದ್ದು ಶಿವನ ದಯಾದೃಷ್ಟಿಯಿಂದ ಶುದ್ಧನಾದನು. ಅವನಿಗೆ ಮಗಳ ಮರಣವು ನೆನಪಿಗೆ ಬಂದು ಕಂಗಳಲ್ಲಿ ಧಾರೆಧಾರೆಯಾಗಿ ನೀರು ಸುರಿಯಿತು, ಪ್ರಯತ್ನ ಮಾಡಿ ಮನಸ್ಸನ್ನು ಸಮಾಧಾನಮಾಡಿಕೊಂಡು ನಿಷ್ಕಪಟ ಪ್ರೇಮದಿಂದ ಶಿವನನ್ನು ಸ್ತುತಿಸಲಾರಂಭಿಸಿದನು.

**ದಕ್ಷ :** ದೇವಾ ! ಅಪರಾಧಸಹಿಷ್ಣುವಾದ ನೀನು ನನ್ನನ್ನು ಶಿಕ್ಷಿಸದೇ ಹೋಗಿದ್ದರೆ ಶಿವದ್ವೇಷದಿಂದ ತಮಸ್ಸಾಗುತ್ತಿತ್ತು. ಶಿಕ್ಷಿಸಿದುದರಿಂದ ಪರಮಾನು ಗ್ರಹವನ್ನು ಮಾಡಿದಂತಾಯಿತು. ಹರಿಯಾಗಲೀ, ಹರನಾಗಲೀ ದೀಕ್ಷೆ ವಹಿಸಿದವರನ್ನು ಉಪೇಕ್ಷಿಸುವವರಲ್ಲ. ಏಕೆಂದರೆ ಹರಿಭಕ್ತಿ ಪ್ರವರ್ತಕರಿಗೆ ವಿಪತ್ತು ಬಂದರೆ ಅವರನ್ನು ನೀನು ಪಾಲಿಸುವೆ ಅಜ್ಞಾನಿಯಾದ ನಾನು ನಿನ್ನನ್ನು ನಿಂದಿಸಿ ನರಕದಲ್ಲಿ ಬೀಳುತ್ತಿದ್ದೆ. ಕರುಣಾಳುವಾದ ನೀನು ನನ್ನನ್ನು ಉದ್ಧರಿಸಿದೆ. ಈ ಮಹೋಪಕಾರಕ್ಕೆ ಪ್ರತ್ಯುಪ ಕಾರವನ್ನು ಏನೂ ಮಾಡಲಾರೆ. ನೀನಾಗಿ ಮಾಡುತ್ತಿರುವ ಅನುಗ್ರಹದಿಂದಲೇ ತುಷ್ಟ ನಾಗಬೇಕು.

(ಹೀಗೆ ದಕ್ಷನು ಕ್ಷಮೆ ಬೇಡಿ, ಬ್ರಹ್ಮದೇವರಿಂದ ಆಜ್ಞಪ್ತನಾಗಿ ಋತ್ವಿಜರೇ ಮೊದಲಾದವರಿಂದ ಕೂಡಿ ಯಜ್ಞವನ್ನು ಮುಂದುವರೆಸಿದನು. ಯಜ್ಞಧ್ವಂಸದ ದೋಷ ಪರಿಹಾರಕ್ಕಾಗಿಯೂ, ನಿರ್ವಿಘ್ನವಾಗಿ ಅದು ಮುಗಿಯುವುದಕ್ಕಾಗಿಯೂ ವಿಷ್ಣುದೇವತಾಕವಾದ ಪುರೋಡಾಶವನ್ನು ಮಂತ್ರವನ್ನು ಹೇಳುತ್ತ ಹೋಮಮಾಡಿ ಶುದ್ಧ ಮನಸ್ಸಿನಿಂದ ಶ್ರೀಹರಿಯನ್ನು ಧ್ಯಾನಿಸಿದನು. ಕೂಡಲೇ ಜಗದೇಕ ಸುಂದರ ನಾದ ಶ್ರೀಹರಿಯು ಗರುಡಾರೂಢನಾಗಿ ಅಲ್ಲಿಗೆ ಬಂದನು. ಬ್ರಹ್ಮ ಶಿವಾದಿ ಸರ್ವರೂ ಅವನಿಗೆ ವಂದಿಸಿ ತಮ್ಮ ತಮ್ಮ ಯೋಗ್ಯತಾನುಸಾರವಾಗಿ ಹೀಗೆ ಸ್ತುತಿಸುವರು :–)

**ದಕ್ಷ :** ದೇವ ! ನಾರಾಯಣ ! ನೀನು ಅವಸ್ಥಾತ್ರಯ ಶೂನ್ಯನಾದ್ದರಿಂದ ನಿರ್ದೋಷನೂ, ಜ್ಞಾನಪೂರ್ಣನೂ, ಸರ್ವೋತ್ತಮನೂ, ಸಮರಹಿತನೂ ಪ್ರಕೃತಿ ವಿದೂರನೂ ಆಗಿ ಪ್ರಕೃತಿಯಿಂದ ದೇಹಗಳನ್ನು ಸೃಷ್ಟಿಸಿ, ಅವುಗಳಒಳಗಿರುವುದರಿಂದ ಪುರುಷ ನಾಯಕನಾಗಿ, ಶರೀರವನ್ನು ನಿಯಮಿಸುತ್ತಿರುವೆ. ಇಂತಹ ನಿನ್ನನ್ನು ದುರಾಗಮಗಳು ಪ್ರಕೃತಿಬದ್ಧ ಜೀವನೆಂದು ಹೇಳುತ್ತಿರುವುವು. ಮಹಾ ಮಾಯೋ ಪೇತನಾದ (ಸಮರ್ಥನಾದ) ನಿನಗೆ ನಮಸ್ಕಾರ !

**ಋತ್ವಿಜರು :** ಶ್ರೀಹರೇ ! ನೀನು ಯಜ್ಞಭೋಕ್ತೃಗಳಿಂದ ದೇವತೆಗಳಲ್ಲಿದ್ದು ಫಲಸಾರ ಭೋಕ್ತೃವೆಂದು ಜ್ಞಾನಿಗಳು ತಿಳಿದಿರುವರು ನಾವು ನಂದಿಯ ಶಾಪದಿಂದ ಕರ್ಮಮಾರ್ಗದಲ್ಲಿ ತೊಳಲುತ್ತ ನಿನ್ನ ಸ್ವರೂಪವನ್ನು ತಿಳಿಯದೇ ಹೋದೆವು.

**ಸದಸ್ಯರು :** ಸಂಸಾರದಲ್ಲಿ ಬೇಯುತ್ತಿರುವ ಅಜ್ಞಾನಿಗಳು ನಿನ್ನ ಪಾದವನ್ನು ಹೊಂದುವುದೇ ಇಲ್ಲ.

**ಶಿವ :** ನಾರಾಯಣ ! ನೀನು ನನ್ನನ್ನು ಭಕ್ತನೆಂದು ತಿಳಿಯುವೆಯಾದರೆ ಆಗ ನಾನು ನಿನ್ನ ಅನುಗ್ರಹಕ್ಕೆ ಪಾತ್ರನಾಗುವೆನು. ಅದರಿಂದ ಲೋಕದಲ್ಲಿ ಅಧಮನಾದ ಯಾವ ಪುರುಷನನ್ನೂ ಪ್ರಾರ್ಥಿಸುವುದೇ ಇಲ್ಲ. ಲೆಕ್ಕಿಸುವುದೂ ಇಲ್ಲ.

**ಭೃಗು ,** ನಿನ್ನ ಮಾಯೆಗೆ ಸಿಕ್ಕಿದವರು ತಮ್ಮ ಸ್ವರೂಪವನ್ನೂ, ನಿನ್ನನ್ನೂ ಅರಿಯದೇ ಹೋಗುವರು. ಮಹಾಮಹಿಮನೇ ! ನಮಿಸುವವರ ಬಂಧುವಾದ ನೀನು ಪ್ರಸನ್ನನಾಗು. ನಿನ್ನ ದೇಹವು ಚಿದಾನಂದಾತ್ಮಕವು. ಇದನ್ನು ನಿನ್ನ ಅನುಗ್ರಹವಿಲ್ಲದೆ ಜ್ಞಾನಿಗಳೂ ತಿಳಿಯಲಾರರು.

ರಾಗ ಆಹೇರಿ — ಆದಿತಾಳ

ಬಿನ್ನಪವ ಕೇಳು ಜೀಯ ! ಬನ್ನ ಬಡಿಸುವ ಮಾಯಾ
ಬೆನ್ನು ಬೀಳದಂತೆ ಮಾಡು ಎನ್ನ ಕೊಡಾಡು — ಪ

ಹತ್ತದ ಜನಕೆ ನೀನು ಹತ್ತಿರ ಇದ್ದರೆ ಏನು
ಉತ್ತರ ಲಾಲಿಸದಿಪ್ಪ ಉತ್ತಮ ಶ್ಲೋಕ
ತತ್ತ್ವ ಬಲ್ಲವರಿಗೆ ದೂರತ್ತಲಿದ್ದರೇನು ಅವನಾ
ಪತ್ತಿಗೆ ಬಂದೊದಗುವ ಚಿತ್ತಜನಯ್ಯ — ೧

ಇಂದೆ ಕೈವಲ್ಯವ ಕೊಡುವೆ ಒಂದು ಕ್ಷಣ ಮಾಯಿಗಳ
ಮಂದಿರದಲ್ಲಿ ಜನಿಸು ಎಂದು ನುಡಿದಡೆ
ಮಂದರಧರನೆ ಕೇಳು ಎಂದಿಗೆಂದಿಗೆ ಎನ್ನ ನರಕ
ಬಂಧನದಲ್ಲಿಡು ಅಲ್ಲಿ ಪೊಂದುವರಾರೊ — ೨

ಶ್ವಾನಸೂಕರ ಗಾರ್ದಭ ನಾನಾ ಕೆಟ್ಟ ಜಾತಿಯವರ
ಯೋನಿಯೊಳು ಕಟ್ಟಿಹಾಕಿ ಹೀನಾಯ ಉಣಿಸಿ
ಅನಂತ ಕಲ್ಪಕೆ ಪವಮಾನ ಮತ ಪೊಂದಿಸಿ ನಿ
ರ್ವಾಣವೀವೆ ನೆಂದ ರಾಗೆ ನಾನಿದೆ ಬಯಿಪೆ — ೩

ಗುರುಪ್ರಸಾದದಿಂದಲಿ ಪರಮ ಸದ್ಗತಿ ಎನ
ಗರಿದಲ್ಲಿ ಯಾವಾಗಲಾದರು ಸ್ಥಿರವೆ ಸಿದ್ಧ
ಮರುತ ಮತ ಸಾರಲು ನಿರಯ ದುರಾತ್ಮಗಿಲ್ಲ
ಕರವ ಮುಗಿದು ಒಂದು ವರವ ಬೇಡುವೆ ೪

ಭಾಗವತರ ಸಹವಾಸ ಭಾಗವತರ, ಕಥಾ, ಗುಣ
ಭಾಗ ಗುಣಿಸುವ ಮತಿ ಭಾಗೀರಥೀಯಾತ್ರೆ
ಭಾಗ್ಯವ ಪಾಲಿಸು ದುಷ್ಟ ಭಾಗಾದಿಯರೋಡಿಸಿ ಕಡೆ
ಭಾಗಕ್ಕೆ ಎನ್ನೆಡ ಬಲ ಭಾಗದಲಿ ಸುಳಿಯೊ ೫

ಕಾಣೆಕಾಣೆ ಜ್ಞಾನವಿಲ್ಲ ತುತಿಪುದಕ್ಕೆ ಧ್ಯಾನವರಿಯೆ ನಿನ್ನನೆ ನಿ
ದಾನಿಸಲ್ಕೆ ನಾನಾ ಪರಾಧವ ಮಾಡಿದ ಮಾನವನು ದೀನ ಬಂಧೋ
ನೀನೊಲಿದು ಎನ್ನ ಮನಕೆ ಆನಂದ ತೋರೊ ೬

ರಜತ ಪೀಠ ಪುರವಾಸ ರಜನೀಪತಿ ಸಂಕಾಶ
ರಜನೀಚರ ವಿನಾಶ ಸುಜನ ಮಾನಸ ಹಂಸ
ರಜದೂರ ಮಂದಹಾಸ ವಿಜಯವಿಟ್ಠಲ ಶ್ರೀಶ
ಭಜಿಪೆ ಲೇಶ ೭

**ಇಂದ್ರ :** ನಮ್ಮೆದುರಿಗಿರುವ ಈ ನಿನ್ನ ಶರೀರವೇ ಪರಬ್ರಹ್ಮ. ಸಂಶಯವಿಲ್ಲ.

**ಯಜ್ಞಪತ್ನಿಯರು :** ದೇವಾ ! ನೀನು ಕೃಪಾಕಟಾಕ್ಷದಿಂದ ನೋಡಿದರೆ ಆ ಕರ್ಮಕ್ಕೆ ಎಷ್ಟು ವಿಘ್ನ ಬಂದರೂ ಪೂರ್ಣ ಫಲವು ದೊರೆಯುವುದು.

**ಋಷಿಗಳು :** ನಿನ್ನ ರೂಪವು ಮಾಯಾಮಯವಲ್ಲ. ಅದು ಉಪನಿಷತ್ತಿನಿಂದ ಮಾತ್ರವೇ ವೇದ್ಯ.

**ಸಿದ್ಧರು :** ಕ್ಲೇಶ ಹೊಂದಿದ ಮನಸ್ಸು ನಿನ್ನ ಕಥಾಮೃತನದಿಯಲ್ಲಿ ಮುಳುಗಿದರೆ ಸಂಸಾರಕ್ಲೇಶಗಳೆಲ್ಲ ಪರಿಹಾರವಾಗುವುದು.

**ದಕ್ಷಪತ್ನಿ ;** ದೇವಾ ! ನಿನಗೆ ಸುಖಾಗಮನ, ಪ್ರಸನ್ನನಾಗು. ರುಂಡವಿಲ್ಲದ ಮುಂಡವು ಹೇಗೆ ಶೋಭಿಸುವುದಿಲ್ಲವೋ ಹಾಗೆ ನೀನಿಲ್ಲದ ಯಜ್ಞವು ಶೋಭಿಸು ವುದಿಲ್ಲ. ಶ್ರೀಸಹಿತನಾದ ನೀನು ನಮ್ಮನ್ನು ರಕ್ಷಿಸು.

**ಲೋಕಪಾಲಕರು :–** ಅಮಂಗಳ ವಿಷಯಗಳನ್ನೇ ಹೊಂದುವ ಹವ್ಯಾಸ ವುಳ್ಳ ನಮ್ಮ ಈ ಇಂದ್ರಿಯಗಳಿಗೆ ನೀನು ಗೋಚರನಾದುದು ಹೇಗೆ ? ಇದು ನಿನ್ನ ಅನುಗ್ರಹವೇ.

**ಯೋಗೇಶ್ವರರು :–** ನೀನು ಜ್ಞಾನಿಪ್ರಿಯ, ಅಧಿಕ ಸುಖಕ್ಕಾಗಿ ನಾವು ಪ್ರಾರ್ಥಿಸುತ್ತೇವೆ. ವಿಶ್ವಾಂತರ್ಯಾಮಿಯೂ, ವಿಶ್ವಸ್ವಾಮಿಯೂ ನೀನೇ. ನಿನಗೆ ನಮಸ್ಕಾರ !

**ಬ್ರಹ್ಮ :–** ಅನಂತನೇ ! ನೀನು ಅಪರಿಮಿತಸ್ವರೂಪನು. ನಿನ್ನ ಸ್ವರೂಪವು ಆರೋಪಿತವಲ್ಲ. ನಮ್ಮೆಲ್ಲರನ್ನೂ ಸೃಷ್ಟಿಸಿದವನು ನೀನೇ. ತ್ರಿಗುಣಬದ್ಧನಲ್ಲ. ನಿನ್ನ ಮಹಿಮೆಯನ್ನು ಪೂರ್ಣವಾಗಿ ನಾವಾಗಲಿ, ನಮ್ಮ ಪೂರ್ವಿಕರಾಗಲಿ ಯಾರೂ ತಿಳಿದಿಲ್ಲ. ಅಪಾರಮಹಿಮನಾದ ನಿನಗೆ ನಮಸ್ಕಾರ !

**ಅಗ್ನಿ :** ನಾನು ನಿನ್ನಾಧೀನನಾಗಿ ನಿನ್ನ ಅನುಗ್ರಹದಿಂದಲೇ ಹವಿಸ್ಸನ್ನು ದೇವತೆಗಳಿಗೆ ತಲುಪಿಸುತ್ತಿರುವೆನು. ಮಂತ್ರಪ್ರತಿಪಾದ್ಯನೂ, ಯಜ್ಞಪ್ರವರ್ತಕನೂ ಆದ ನಿನಗೆ ನಮಸ್ಕಾರ !

**ದೇವತೆಗಳು :-** ಪ್ರಳಯ ಜಲದಲ್ಲಿ ಜಗತ್ತನ್ನು ಉದರದಲ್ಲಿಟ್ಟು ನೀನು ಪವಳಿಸಿದ್ದೆಯೆಂದು ಮುಕ್ತರು ವಿಚಾರ ಮಾಡುವರು. ಆ ನಾರಾಯಣನೇ ಈಗ ದರ್ಶನ ಕೊಟ್ಟು ಸೇವಕರನ್ನು ಪಾಲಿಸುತ್ತಿರುವೆ.

**ಗಂಧರ್ವರು :–** ಬ್ರಹ್ಮಾದಿ ಜಗತ್ತು ನಿನಗೆ ಆಟದ ಬೊಂಬೆ "ಬ್ರಹ್ಮಾಂಡ ಕಟ್ಟುವೆ ಪುಟಚೆಂಡು । ರಾಯರ ರಾಯ ಪುರಂದರ ವಿಠಲ" ನಿನಗೆ ನಮಸ್ಕಾರ !

**ವಿದ್ಯಾಧರರು :–** ಪ್ರಕೃತಿಬದ್ಧರು ದುಃಖ ಪಡುವರು. ನಿನ್ನ ಕಥಾಮೃತ ಪಾನ ಮಾಡಿದರೆ ಮಿಥ್ಯಾಜ್ಞಾನವು ಹೋಗಿ ಸುಖಿಸುವರು. ಆದ್ದರಿಂದ ಶ್ರೀಶಾ ! ನಿನ್ನ ಕಥೆಯನ್ನು ಸದಾ ಹೇಳಿ ಕೇಳುತ್ತಿರುವಂತೆ ಅನುಗ್ರಹಿಸು.

**ಬ್ರಾಹ್ಮಣರು :** ವರಾಹರೂಪವನ್ನು ತಾಳಿ ಆ ನಿನ್ನ ಅವಯವಗಳಿಂದ ಯಜ್ಞದ ಸಕಲ ಸಾಮಗ್ರಿಗಳನ್ನೂ ಸೃಷ್ಟಿಸಿರುವೆ. ಆ ಸಾಮಗ್ರಿಗಳ ನಾಮದಿಂದಲೇ ಅವಕ್ಕೆ ನಿಯಾಮಕನಾಗಿರುವೆ.

**ಸಾಮಗರು :** ನಿನ್ನ ಮಹಿಮೆಯನ್ನು ತಿಳಿಸುವ ಸಾಮವೇದದ ಗಾಯನ ಧ್ವನಿಯು ಕಿವಿಗೆ ಬಿದ್ದ ಮಾತ್ರಕ್ಕೆ ಯಜ್ಞವಿಘ್ನಕಾರಿಗಳು ನಾಶಹೊಂದುವವು. ಈ ಯಜ್ಞವು ನಿಂತು ಕರ್ಮಭ್ರಷ್ಟರಾಗಿದ್ದೇವೆ. ಅದು ಪರಿಸಮಾಪ್ತಿಯನ್ನು ಹೊಂದಲಿ ಎಂದೇ ನಿನ್ನ ದರ್ಶನವನ್ನು ಬಯಸಿದೆವು. ಪ್ರಸನ್ನನಾಗು ! ನಿನಗೆ ನಮಸ್ಕಾರ !

(ದಕ್ಷನು ಯಾಗವನ್ನು ಪೂರ್ಣಗೊಳಿಸಿದನು. ಅಲ್ಲಿ ಅರ್ಪಿಸಿದ ಹವಿಯಿಂದ ಪ್ರೀತನಾದ ಹರಿಯು ಉಪದೇಶಿಸುವನು ;–)

"ನಾನು ವಿಷ್ಣು. ಬ್ರಹ್ಮನೊಳಗೆ ಬ್ರಹ್ಮನಾಮಕ ಮತ್ತು ಶಿವನೊಳಗೆ ಶಿವನಾಮಕನಾಗಿ ಜಗತ್ತಿನ ಸೃಷ್ಟ್ಯಾದಿಗಳಿಗೆ ಸರ್ವೋತ್ತಮಕಾರಣನಾಗಿರುವೆನು. ಅಂತರ್ಯಾಮಿಯೂ, ಸ್ವಾಮಿಯೂ, ಉತ್ತಮ ಸಾಕ್ಷಿಯೂ, ಸರ್ವೋತ್ತಮನೂ ನಾನೇ ಹೊರತು ಮತ್ತೊಬ್ಬನಿಲ್ಲ. ಜೀವ ಮತ್ತು ಪರಮಾತ್ಮನ ಜ್ಞಾನವಿಲ್ಲದೆ, ತಾನೇ ಕರ್ತನೆಂದು ಭ್ರಾಂತನಾದವನು ನನ್ನನ್ನು ಆಶ್ರಯಿಸಿರುವ ಬ್ರಹ್ಮ ಶಿವಾದಿಗಳೇ ಸೃಷ್ಟಿಕರ್ತರು, ನಿಯಾಮಕರು–ಎಂದು ತಿಳಿಯುವನು. ಜ್ಞಾನಿಗಳಾದವರು, ಬ್ರಹ್ಮಾದಿ ಸರ್ವರೂ ನನ್ನ ಅಧೀನರೆಂದೇ ತಿಳಿಯುವರು. ಸ್ವತಂತ್ರನಾದ ನನಗೂ, ಬ್ರಹ್ಮಶಿವರಲ್ಲಿರುವ ಬ್ರಹ್ಮಶಿವನಾಮಕ ನನ್ನ ರೂಪಗಳಿಗೂ, ವಿಷ್ಣು ರೂಪಕ್ಕೂ, ಸೂರ್ಯಾಂತರ್ಗತ ನಾರಾಯಣನೆಂಬ ರೂಪಕ್ಕೂ ಸಾಸುವೆಯಷ್ಟು ಭೇದವಿಲ್ಲವೆಂದು ತಿಳಿಯುವವನೇ ಮುಕ್ತನಾಗುವನು".

ಹೀಗೆ ಶ್ರೀಹರಿಯು ತನ್ನ ಸ್ವರೂಪವನ್ನು ದಕ್ಷನಿಗೆ ಉಪದೇಶಿಸಿದನು. ಬಳಿಕ ದಕ್ಷನು ಶ್ರೀಹರಿಯನ್ನೂ, ದೇವತೆಗಳನ್ನೂ ಪೂಜಿಸಿದನು. ಆ ಯಜ್ಞದ ಕೊನೆಯಲ್ಲಿ ಶಿವನಿಗೆ ಸಲ್ಲಬೇಕಾದ "ಸ್ವಿಷ್ಟಕೃತ್" ಎಂಬ ಹವಿರ್ಭಾಗವನ್ನು ಮನಃ ಪೂರ್ವಕವಾಗಿ ಕೊಟ್ಟು ಪೂಜಿಸಿದನು. ಬಳಿಕ ಋತ್ವಿಜರೊಡನೆ ಅವಭೃಥ ಸ್ನಾನ ಮಾಡಿದನು. ದೇವತೆಗಳೆಲ್ಲರೂ 'ಧರ್ಮವಂತನಾಗಿರು' ಎಂದು ದಕ್ಷನನ್ನು ಅನುಗ್ರಹಿಸಿ ಹೊರಟು ಹೋದರು.

ಅತ್ತ ದೇಹಬಿಟ್ಟ ಸತೀದೇವಿಯು ಹಿಮವಂತನ ಮಗಳಾಗಿ ಹುಟ್ಟಿ ಗಿರಿಜಾ ನಾಮದಿಂದ ಶಿವನನ್ನು ಮದಿವೆಯಾದಳು.

ವಿದುರಾ ! ಈ ಚರಿತ್ರೆಯನ್ನು ಉದ್ಧವನಿಂದ ಕೇಳಿದೆನು. ಶ್ರೇಷ್ಠವಾದ ಈ ಕಥೆಯನ್ನು ಕೇಳುವವರು ಶುದ್ಧೀಕರಿಸುವ ಭಕ್ತಿಯನ್ನು ಹೊಂದಿ ಪಾಪಗಳಿಂದ ಮುಕ್ತರಾಗುವರು.

ಶಿವನು ಪಾರ್ವತಿಯೊಡನೆ ಬಹುಕಾಲ ಕ್ರೀಡೆಯಲ್ಲಿದ್ದು, ತನ್ನ ವೀರ್ಯವನ್ನು ಗಿರಿಜೆಯು ಧರಿಸಲು ಶಕ್ತಳಲ್ಲವೆಂದು ನಿಶ್ಚಯಿಸಿ ಅದನ್ನು ಆಕಾಶದಲ್ಲಿ ವಿಸರ್ಜಿಸಿದನು. ಅದು ಗಂಗಾಜಲದಲ್ಲಿ ಬಿತ್ತು ಅದನ್ನು ಶಿವನು ಪುನಃ ಸ್ವೀಕರಿಸಿ ಅಗ್ನಿಮುಖದಲ್ಲಿಟ್ಟನು. ಅಗ್ನಿಯು ನೊದೆಹುಲ್ಲಿನ ವನದಲ್ಲಿ ಅದನ್ನು ವಿಸರ್ಜಿಸಿದನು. ಅದರಿಂದ ಕುಮಾರನು ಹುಟ್ಟಿದನು. ಆರುಮಂದಿ ಕೃತ್ತಿಕೆಯರು ಆ ಮಗುವಿಗೆ ಸ್ತನ್ಯ ಊಡಿಸಿದರು. ಆ ಮಗುವು ಆರು ಮುಖಗಳಿಂದ ಸ್ತನ್ಯವನ್ನು ಪಾನ ಮಾಡಿತು. ಅದರಿಂದ ಅವನು ಷಣ್ಮುಖನೆನಿಸಿದನು. ಬಳಿಕ ದೇವತೆಗಳು ತಾರಕಾದಿ ದೈತ್ಯರನ್ನು ಕೊಲ್ಲಬಲ್ಲ ಅವನಿಗೆ ದೇವಸೇನಾಧಿಪತ್ಯದಲ್ಲಿ ಪಟ್ಟಗಟ್ಟಿದರು.

**ಎಂಟನೆಯ ಅಧ್ಯಾಯ ಮುಗಿದುದು**

**ಮೈತ್ರೇಯ :** ಸ್ವಾಯಂಭುವಿನ ಹೆಣ್ಣುಮಕ್ಕಳ ಸಂತಾನವನ್ನು ನಿರೂಪಿಸಿದೆನು. ಅದರಿಂದ ಬ್ರಹ್ಮಮಾನಸಪುತ್ರರಾದ ಮರೀಚಿ ಮುಂತಾದವರ ಸಂತಾನವನ್ನೂ ಹೇಳಿದಂತಾಯಿತು. ಸನಕಾದಿಗಳು, ನಾರದ, ಋಭು, ಹಂಸ, ಅರುಣಿ,ಯತಿ ಎಂಬುವರು ಯತಿಗಳಾಗಿದ್ದುಬಿಟ್ಟರು. ಆದ್ದರಿಂದ ಅವರಿಂದ ಸಂತಾನವಿಲ್ಲ.

ಬ್ರಹ್ಮಪುತ್ರ ಅಧರ್ಮನ ಸಂತಾನವನ್ನು ತಿಳಿಸುವೆನು ಅಧರ್ಮನು ಮೃಷೆಯೆಂಬ ಪತ್ನಿಯಲ್ಲಿ ದಂಭನೆಂಬ ಪುತ್ರನನ್ನೂ ಮಾಯೆ ಎಂಬ ಹೆಣ್ಣು ಮಗಳನ್ನೂ ಪಡೆದನು. ಅವರಿಬ್ಬರೂ ಮದಿವೆಯಾಗಿ ಲೋಭನೆಂಬ ಪುತ್ರನನ್ನೂ, ನಿಕೃತಿಯೆಂಬ ಪುತ್ರಿಯನ್ನೂ ಪಡೆದರು. ಆವರಿಬ್ಬರೂ ದಂಪತಿಗಳಾದರು. ಅವರಲ್ಲಿ ಹುಟ್ಟಿದ ಕ್ರೋಧನು ಮತ್ತು ಹಿಂಸೆ ಎಂಬುವಳೂ ಮದಿವೆಯಾಗಿ ಕಲಿಯೆಂಬ ಮಗನನ್ನೂ, ದುರುಕ್ತಿ ಎಂಬ ಮಗಳನ್ನೂ ಪಡೆದರು. ಕಲಿ ಮತ್ತು ದುರುಕ್ತಿ ಈ ದಂಪತಿಗಳಲ್ಲಿ ಮೃತ್ಯು ಎಂಬ ಮಗನೂ, ಭೀತಿಯೆಂಬ ಮಗಳೂ ಹುಟ್ಟಿದರು. ಅವರಿಬ್ಬರೂ ಮದಿವೆಯಾದರು. ಆ ದಂಪತಿಗಳಲ್ಲಿ ನಿರಯನೂ, ಯಾತನೆಯೂ ಹುಟ್ಟಿದರು ಇದೇ ಅಧರ್ಮ ವೃಕ್ಷದ ಶಾಖೆಗಳು. ಈ ವಂಶದವರಿಂದ ಅಭಿಮನ್ಯ ಮಾನವಾದ ಅಧರ್ಮ, ಮೃಷೆ ಇತ್ಯಾದಿಗಳನ್ನು ಮೋಕ್ಷಬಯಸುವವರು ಸಂಪಾದಿಸಬಾರದು.

## ಧ್ರುವ ಚರಿತ್ರೆ

ಉತ್ತಾನ ಪಾದನಿಗೆ ಸುನೀತಿ ಮತ್ತು ಸುರುಚಿ–ಎಂಬ ಇಬ್ಬರು ಪತ್ನಿಯರು. ಸುನೀತಿಯ ಮಗನು ಧ್ರುವರಾಯನು. ಸುರುಚಿಯ ಮಗನಿಗೆ ಉತ್ತಮ-ಎಂದು ಹೆಸರು. ಒಂದು ದಿನ ಉತ್ತಾನಪಾದರಾಜನು ಸುರುಚಿಯ ಪುತ್ರನನ್ನು ತೊಡೆಯ ಮೇಲೆ ಕೂಡಿಸಿಕೊಂಡು ಸುರುಚಿಯೊಡನೆ ಸರಸಸಲ್ಲಾಪಗಳನ್ನಾಡುತ್ತಿರಲು, ಧ್ರುವನು ಬಂದು ತಂದೆಯ ತೊಡೆಯನ್ನೇರಲು ಹೋದನು. ತಂದೆಯು ಅದಕ್ಕೆ ಅವಕಾಶ ಕೊಡಲಿಲ್ಲ. ಆ ಮಗನನ್ನು ಕಣ್ಣೆತ್ತಿಯೂ ನೋಡಲಿಲ್ಲ. ಇಷ್ಟಾದರೂ ಧ್ರುವನು ತನ್ನ ಯತ್ನವನ್ನು ಬಿಡದೆ ಇರುವುದನ್ನು ಕಂಡು

**ಸುರುಚಿ :** (ಅಸೂಯೆಯಿಂದ) ಪೋರ ! ಹೋಗು ಹೋಗು ! ನೀನು ನನ್ನ ಹೊಟ್ಟೆಯಲ್ಲಿ ಹುಟ್ಟಿ ಬಂದವನಲ್ಲ. ಬೇರೆಯವಳ ಮಗನೆಂದು ನೀನು ಅರಿಯಲಿಲ್ಲ. ಹೀಗಿರುವಾಗ ನಿನಗೆ ಸಿಂಹಾಸನವೇರಲು ಅಧಿಕಾರವಿಲ್ಲ. ಅದನ್ನು ಸಂಪಾದಿಸಬೇಕೆಂದು ನಿನಗೆ ಇಚ್ಛೆ ಇದ್ದರೆ ತಪಸ್ಸಿನಿಂದ ಶ್ರೀಹರಿಯನ್ನು ಆರಾಧಿಸಿ ಅವನ ಅನುಗ್ರಹದಿಂದ ನನ್ನ ಹೊಟ್ಟೆಯಲ್ಲಿ ಹುಟ್ಟುವಂತೆ ವರವನ್ನು ಸಂಪಾದಿಸು. ಆಗ ನನ್ನ ಮಗನಾಗಿ ರಾಜನಾಗುವೆ.

ಹೀಗೆ ಸುರುಚಿಯು ಗರ್ವೋಕ್ತಿಯಿಂದ ಧಿಃಕರಿಸುತ್ತಿದ್ದರೂ, ಉತ್ತಾನಪಾದ ರಾಜನು ಬಾಯತ್ತದೆ ಸುಮ್ಮನಿದ್ದನು. ಧ್ರುವನು ಸಂಕಟಪಡುತ್ತಾ, ಅಳುತ್ತಾ ತನ್ನ ತಾಯಿಯ ಬಳಿಗೆ ಬಂದನು. ಒಬ್ಬ ಪ್ರಜೆಯಿಂದ ತನ್ನ ಮಗನನ್ನು ಸವತಿಯು ತಿರಸ್ಕರಿಸಿದುದನ್ನು ತಿಳಿದ ಸುನೀತಿಯು ಮಗನನ್ನು ತೊಡೆಯ ಮೇಲೆ ಕೂಡಿಸಿ ಕೊಂಡು ಅವನ ಬಾಯಿಂದಲೂ ಸುರುಚಿಯ ಗರ್ವೋಕ್ತಿಯನ್ನು ಕೇಳಿ ದುಃಖಿಸಿದಳು. ಮುಖ್ಯವಾಗಿ ಗಂಡನೇ ತಿರಸ್ಕರಿಸಿರುವಾಗ ಇನ್ನು ದುಃಖಕ್ಕೆ ಕೊನೆಯುಂಟೆ ? ಎಂದು ನಿಶ್ಚಯಿಸಿ ವಿವೇಕವನ್ನು ತಂದುಕೊಂಡು

**ಸುನೀತಿ :–** ಕಂದ ! ದುಃಖಿಸಿ ಫಲವಿಲ್ಲ. ನಮ್ಮ ದುರದೃಷ್ಟಕ್ಕೆ ಮತ್ತೊಬ್ಬರನ್ನು ನಿಂದಿಸಬಾರದು. ಆದರಿಂದ ನಾವೇ ಮುಂದೆ ದುಃಖವನ್ನು ಅನುಭವಿಸಬೇಕಾಗುತ್ತೆ. ಮುಖ್ಯವಾಗಿ ಮಂದಭಾಗ್ಯಳಾದ ನನ್ನ ಹೊಟ್ಟೆಯಲ್ಲಿ ಹುಟ್ಟಿದ್ದರಿಂದ ನಿನಗೀ ದುಃಖಬಂದಿತು. ಇದನ್ನೆ ಸುರುಚಿಯು ಹೇಳಿದಳು. ತಪ್ಪೇನು ? ಎಷ್ಟೇ ಆಗಲಿ ಸುರುಚಿಯು ನಿನಗೆ ಪೂಜ್ಯಳಾದ ತಾಯಿ. ಮಾತೃವಿನ ಅಪ್ಪಣೆಯನ್ನು ನಡೆಸಬೇಕಾದುದು ನಿನ್ನ ಕರ್ತವ್ಯ. ಆದ್ದರಿಂದ ನೀನು ಶ್ರೀಹರಿ ಯನ್ನು ಕುರಿತು ತಪಸ್ಸನ್ನು ಮಾಡು. ಮುಮುಕ್ಷುಗಳು ಯಾರನ್ನು ಸೇವಿಸುವರೋ, ಯಾವನು ಭಕ್ತವತ್ಸಲನೋ ಮತ್ತು ನಮ್ಮ ಕುಲಸ್ವಾಮಿಯೋ, ನಿಮ್ಮ ಹಿರಿಯ ರೆಲ್ಲರೂ ಯಾವನನ್ನೇ ಭಜಿಸಿ ಉದ್ಧೃತರಾಗಿರುವರೋ ಆ ಲಕ್ಷ್ಮೀಕಾಂತನೇ ಈ ನಿನ್ನ ದುಃಖವನ್ನು ಕಳೆಯತಕ್ಕವನು ಮತ್ತಾರೂ ಇಲ್ಲ. ಆದ್ದರಿಂದ ಅವನನ್ನೇ ಭಜಿಸು.

(ಧ್ರುವನು ಈ ಉಪದೇಶವನ್ನು ಕೇಳಿ ತಕ್ಷಣ ಪಟ್ಟಣವನ್ನು ಬಿಟ್ಟು ಹೊರಟು ಬಿಟ್ಟನು. ಮಧ್ಯದಲ್ಲಿ ನಾರದರ ಭೇಟಿಯಾಯಿತು. ಅವನು ಕಾಡಿಗೆ ಬರಲು ಕಾರಣ ವೇನೆಂಬುಧನ್ನು ತಿಳಿದು)

**ನಾರದ :** ಸುರುಚಿಯು ಇದಕ್ಕೆ ಸ್ವತಂತ್ರ ಕಾರಣಳಲ್ಲ. ಅದೃಷ್ಟನಿಯಾ ಮಕನಾದ ಈಶ್ವರನು ಅವಳಿಂದ ಈ ದುರ್ವಚನವನ್ನಾಡಿಸಿರುವನು. ಆದ್ದರಿಂದ ಈಶ್ವರನು ಸ್ವತಂತ್ರನು–ಎಂಬುದನ್ನು ವಿಚಾರ ಮಾಡಿದರೆ ಖೇದವು ಪರಿಹಾರವಾಗು ವುದು. ದೇವರು ಕೊಟ್ಟುದರಲ್ಲಿ ತೃಪ್ತನಾಗಬೇಕು. ಅತ್ಯಾಶೆ ಮಾಡಕೂಡದು. ನೀನು ಯಾವನನ್ನು ಆರಾಧಿಸಲು ಹೊರಟಿರುವೆಯೋ ಅವನನ್ನು ನಮ್ಮಂತಹವರೇ ಆರಾಧಿಸಲು ಶಕ್ತರಲ್ಲ. ಇನ್ನು ಅವನ ಪ್ರಸಾದವು ಹೇಗೆ ದೊರಕೀತು ? (ಇದನ್ನು ಧ್ರುವನು ಹರಿಯನ್ನು ಮೆಚ್ಚಿಸಲೇಬೇಕೆಂದು ದೃಢಸಂಕಲ್ಪಮಾಡಲಿ ಎಂಬುದಕ್ಕಾಗಿ ಹೇಳಿದರು.) ಈ ಯತ್ನವನ್ನು ಬಿಟ್ಟು ಹಿಂತಿರುಗು. ಇಷ್ಟಕ್ಕೂ ತಪಸ್ಸಿಗೆ ಇದು ಕಾಲವಲ್ಲ. ಮುದುಕನಾದಾಗ ಯತ್ನಿಸು. ಅದುವರೆಗೂ ದುಃಖ ಬಂದಾಗ ಕುಗ್ಗದೆ,

ಸುಖ ಬಂದಾಗ ಹಿಗ್ಗದೆ. ದೊಡ್ಡವರಲ್ಲಿ ಅಸೂಯೆ ಪಡದ ಭಕ್ತಿಮಾಡು. ಸಮಾನರಲ್ಲಿ ಸ್ಪರ್ಧೆ ಮಾಡದೆ ಮೈತ್ರಿಯನ್ನು ಮಾಡು. ಕಿರಿಯರನ್ನು ತಿರಸ್ಕರಿಸದೆ ದಯೆಯನ್ನು ತೋರಿಸು. ಹರಿಯಲ್ಲಿ ಭಕ್ತಿ ಮಾಡು. ಕೊರಗುವುದನ್ನು ಬಿಡು.

**ಧ್ರುವ :–** ನಾನು ಕ್ಷತ್ರಿಯನು. ಆದ್ದರಿಂದ ನನ್ನ ರಕ್ತವು ಕುದಿಯುತ್ತಿದೆಯಾಗಿ ತಮ್ಮ ಉಪದೇಶವು ನನ್ನ ಮನಸ್ಸಿಗೆ ಹತ್ತುತ್ತಿಲ್ಲ. ನಮ್ಮ ಪೂರ್ವಿಕರಾರೂ ಪಡೆಯದಿರುವ ಉತ್ತಮ ಪದವಿಯನ್ನು ಹೊಂದಬೇಕೆಂದು ಮನಸ್ಸಿನಲ್ಲಿ ಬಯಕೆ ಬಲವಾಗಿ ಊರಿದೆ. ಈ ಬಯಕೆ ಪೂರ್ಣವಾಗಬೇಕಾದರೆ ನನಗೆ ಸರಿಯಾದ ಮಾರ್ಗವು ಯಾವುದೆಂಬುದನ್ನು ತಿಳಿಸಿಕೊಟ್ಟು ಅನುಗ್ರಹಿಸಿರಿ.

**ನಾರದ :–** (ಕನಿಕರದಿಂದ) ಮಗು ! ಇದಕ್ಕೆ ನಿಮ್ಮ ತಾಯಿಯು ಹೇಳಿದ 'ಹರಿಯನ್ನು ಭಜಿಸು' ಎಂಬ ಉಪಾಯವೊಂದೇ ಮಾರ್ಗ. ನೀನು ವಾಸುದೇವ ರೂಪವನ್ನು ಧ್ಯಾನಿಸು. ಏನು ಬೇಕಾದರೂ ಅವನ ಪಾದಸೇವೆಯನ್ನು ಬಿಟ್ಟು ಬೇರೆಯಾವ ದಾರಿಯೂ ಇಲ್ಲ. ಯಮುನಾ ತೀರದ ಮಧುವನಕ್ಕೆ ಹೋಗಿ ತ್ರಿಕಾಲ ಸ್ನಾನ ಮಾಡುತ್ತ, ಕುಶಾಸನದ ಮೇಲೆ ಕುಳಿತು ಪ್ರಾಣಾಯಾಮದಿಂದ ಪ್ರಾಣಗಳನ್ನು ವಶಮಾಡಿಕೊಂಡು, ಇಂದ್ರಿಯಗಳನ್ನು ನಿಗ್ರಹಿಸಿ, ಮನಸ್ಸನ್ನು ಧೃಢಮಾಡಿ, ಹರಿಯು ಕಿರೀಟಕೇಯೂರಾದ್ಯಾಭರಣಾಲಂಕೃತನೆಂದೇ ಅವನನ್ನು ಧ್ಯಾನಿಸು. "ಓಂ ನಮೋ ವಾಸುದೇವಾಯ" ಎಂಬ ಮಂತ್ರವನ್ನು ಉಪದೇಶ ಹೊಂದು. ನಿಯತಾಹಾರನಾಗಿ, ಹರಿಯ ಮೂಲರೂಪ ಮತ್ತು ಅವತಾರಗಳ ಮಹಿಮೆಯನ್ನು ಚಿಂತಿಸು. ಇದರಿಂದ ದೇವರು ಮೆಚ್ಚಿ, ನಿನ್ನ ಭಕ್ತಿಯನ್ನು ಮತ್ತಷ್ಟು ಹೆಚ್ಚು ಮಾಡಿ ನಿನ್ನ ಇಷ್ಟವನ್ನೆಲ್ಲಾ ಪೂರೈಸುವನು.

(ಹೀಗೆ ಉಪದೇಶಿಸಿದ ನಾರದರಿಗೆ ಬಲವಂದು ನಮಸ್ಕರಿಸಿ ಧ್ರುವನು ಮಧುವನಕ್ಕೆ ಹೋದನು. ನಾರದರು ಮಗನ ಅಗಲಿಕೆಯಿಂದ ದುಃಖಿಸುತ್ತಿದ್ದ ಉತ್ತಾನಪಾದರಾಜನ ಬಳಿಗೆ ಬಂದು "ರಾಜಾ ! ದುಃಖಿಸಬೇಡ. ನಿನ್ನ ಮಗನಿಗೆ ಯಾವ ಭಯವೂ ಇಲ್ಲ. ಸರ್ವತ್ರ ಇರುವ ದೇವನು ಅವನನ್ನು ರಕ್ಷಿಸಿಯೇ ತೀರುವನು. ನಿನ್ನ ಮಗನು ಅಸಾಧ್ಯ ವ್ಯಾಪಾರ ಮಾಡಿ ನಿನಗೆ ಕೀರ್ತಿಯನ್ನುಂಟು ಮಾಡಿ, ಬೇಗ ಹಿಂತಿರುಗಿ ಬರುವನು" ಎಂದು ಸಮಾಧಾನ ಮಾಡಿ ಹೊರಟು ಹೋದರು.

ಇತ್ತ ಧ್ರುವರಾಜನು ಗುರುಗಳು ಹೇಳಿದಂತೆ ಮಾಡುತ್ತ ಕ್ರಮವಾಗಿ ಆಹಾರವನ್ನು ಬಿಟ್ಟು ಐದನೆಯ ತಿಂಗಳಲ್ಲಿ ಸಂಪೂರ್ಣವಾಗಿ ವಾಸುದೇವನನ್ನು ಧ್ಯಾನಿಸುವುದಕ್ಕೆ ಆರಂಭಿಸಿದನು. ಒಂದೇ ಪಾದದಲ್ಲಿ ನಿಂತು ತಪಸ್ಸನ್ನು ಮಾಡುತ್ತಿರುವನು. ದೇವತೆಗಳು ಅವನ ತಪೋಭಂಗವನ್ನು ಮಾಡಬೇಕೆಂದು ಅನೇಕ ವಿಘ್ನಗಳನ್ನುಂಟು

ಮಾಡಿದರು. ಧ್ರುವನು ಜಗ್ಗಲಿಲ್ಲ. ಇದಕ್ಕೆ ದೇವತೆಗಳೇ ಕಾರಣರು. ಧ್ರುವನು ದೃಢತಪಸ್ವಿ ಎಂದು ದೇವತೆಗಳೇ ಪ್ರಸಿದ್ಧಿಪಡಿಸಿದರು. ಧ್ರುವನ ಕಾಮ್ಯ ತಪಸ್ಸಾದ್ದರಿಂದ ಮೂರು ಲೋಕವೂ ನಡುಗಿತು ದೇವತೆಗಳು ಹರಿಯಲ್ಲಿ ಮೊರೆಯಿಟ್ಟರು. ಧ್ರುವನಿಗೆ ವರವನ್ನು ಕೊಟ್ಟು ತಪಸ್ಸಿನಿಂದ ಬಿಡಿಸುವುದಾಗಿ ಶ್ರೀಹರಿಯು ದೇವತೆಗಳಿಗೆ ಅಭಯಕೊಟ್ಟನು.

## ಒಂಭತ್ತನೆಯ ಅಧ್ಯಾಯ ಮುಗಿದುದು

ವಾಸುದೇವನು ಧ್ರುವನಿಗೆ ದರ್ಶನ ಕೊಟ್ಟನು. ಧ್ರುವನಿಗೆ ಸ್ತುತಿಸಲು ತೋಚಲೇ ಇಲ್ಲ. ಸ್ವಾಮಿಯು ಧ್ರುವನು ಜ್ಞಾನ ಪೂರ್ವಕ ಸ್ತೋತ್ರ ಮಾಡಲೆಂದು ಶಂಖವನ್ನು ಅವನ ಕೆನ್ನೆಗೆ ಸ್ಪರ್ಶಮಾಡಿಸಿದನು. ಕೂಡಲೇ ಯೋಗ್ಯತಾನುಸಾರ ಸ್ತುತಿಸಲು ತಕ್ಕ ವಿಷಯವು ಸ್ಫುರಿಸಿತು.

### ಶ್ಲೋಕ

**ಧ್ರುವ : ಯೋಽಂತಃಪ್ರವಿಶ್ಯ ಮಮ ವಾಚಮಿಮಾಂ ಪ್ರಸುಪ್ತಾಂ ಸಂಜೀವಯತ್ಯಖಿಳಶಕ್ತಿಸ್ವಧಾಮ್ನಾ । ಅನ್ಯಾಂಶ್ಚ ಹಸ್ತಚರಣಶ್ರವಣತ್ವಗಾದೀನ್ ಪ್ರಾಣಾನ್ನಮೋ ಭಗವತೇ ಪುರುಷಾಯ ತುಭ್ಯಂ ॥6/10॥**

ಶ್ರೀಹರೇ ! ನೀನು ಸ್ವಸಾಮರ್ಥ್ಯದಿಂದಲೇ ಇಂದ್ರಿಯಗಳ ಮತ್ತು ಅವುಗಳ ಅಭಿಮಾನಿಗಳ ಶಕ್ತಿಗಳನ್ನು ಪ್ರೇರಿಸುತ್ತಿರುವೆ. ನೀನು ಒಳಗೆ ಹೊಕ್ಕು ತೆಪ್ಪಗೆ ಬಿದ್ದಿರತಕ್ಕ ನನ್ನ ವಾಗಿಂದ್ರಿಯ ಮತ್ತು ವೈಖರಿ ಎಂಬ ಮಾತನ್ನು ಜಾಗ್ರತಗೊಳಿಸಿದೆ. ಕೈ, ಕಾಲು, ಕಿವಿ, ತ್ವಗಾದಿಇಂದ್ರಿಯಗಳು ತಮ್ಮ ತಮ್ಮ ವಿಷಯಗಳ ಕಡೆಗೆ ಹರಿಯುವಂತೆ ಮಾಡುವೆ. ಮತ್ತು ಪ್ರಾರ್ಥಿತನಾಗಿ- ಇಂದ್ರಿಯಗಳೆಲ್ಲವೂ ನಿನ್ನ ಕಡೆಗೇ ಪ್ರವಹಿಸುವಂತೆ ಮಾಡುವ, ಸರ್ವಸಿರಿಸಂಪನ್ನನೂ, ನಿಯಾಮಕನೂ ಆದ ನಿನಗೆ ನಮಸ್ಕಾರ !

ಚೇತನರೂ, ದೇಹಗಳೂ ಅನಂತವಾಗಿದ್ದರೂ ಅವುಗಳಿಗೆ ಇರುವ ನಿಯಾಮಕನು ನೀನೊಬ್ಬನೇ. ನಿನ್ನ ರೂಪಗಳಿಗೆ ಭೇದವಿಲ್ಲ. ಸಂಸಾರದಲ್ಲಿ ಬೆಂದವರಿಗೆ ನೀನೇ ಬಂಧು. ಜೀವನು ನೀನು ಕೊಟ್ಟ ಜ್ಞಾನದಿಂದಲೇ ಎಲ್ಲವನ್ನೂ ತಿಳಿಯುವನು. ಅಂತಹವನು ಜ್ಞಾನದಾತೃವಾದ ನಿನ್ನನ್ನು ಮರೆಯಲಾರನು. ವಿಷಯ ಸುಖವು ದುರ್ಲಭವಲ್ಲ. ಆದ್ದರಿಂದ ಮೋಕ್ಷಕ್ಕಾಗಿಯೇ ನಿನ್ನ ಸೇವಿಸುವುದು ಯೋಗ್ಯ. ನಿನ್ನ ಪಾದ ಧ್ಯಾನ, ನಿನ್ನ ಭಕ್ತರ ಕಥಾಶ್ರವಣಗಳಿಂದುಂಟಾಗುವ ಆನಂದವು ಅಲ್ಪ ಮುಕ್ತನಿಗಿಲ್ಲ. ಸ್ವರ್ಗ ಸುಖ ಭೋಗಿಸುವವರಿಗಂತೂ ಇಲ್ಲವೇ ಇಲ್ಲ, ಶ್ರೀಹರಿಯಾದ

ನಿನ್ನನ್ನು ಸ್ಮರಿಸದವರು ಭಕ್ತರೇ ಅಲ್ಲ. ನಿನ್ನನ್ನು ಸ್ಮರಿಸುವ ಭಕ್ತರಾದರೂ ಸ್ವರೂಪವನ್ನು ಪೂರ್ಣವಾಗಿ ಯಾರೂ ಹೇಳಲಾರರು. ಬ್ರಹ್ಮಶಿವಾದಿಗಳಾದರೂ ಸ್ವತಂತ್ರಸೃಷ್ಟ್ಯಾದಿಕರ್ತರಲ್ಲ. ಹರಿಯೊಬ್ಬನೇ ನಿತ್ಯಮುಕ್ತಸ್ವರೂಪನು, ನಿತ್ಯ ಶುದ್ಧನು, ದುಃಖರಹಿತನು, ಅಘಟಿತಘಟನಾ ಸಮರ್ಥನು. ಇಂತಹ ಶ್ರೀಹರಿಯಾದ ನಿನ್ನಲ್ಲಿ ಶರಣು ಹೋಗುವೆನು. ಸ್ವಪ್ರಯೋಜನರಹಿತನೇ ! ನಿನ್ನ ಅನುಗ್ರಹವೇ ಅಭೀಷ್ಟಪ್ರದವು.

**ವಾಸುದೇವ :** ಕಂದ ! ನಿನಗೆ ಧ್ರುವಪದವಿಯನ್ನೂ, ಧರೆಯ ಸಿಂಹಾಸ ನಾಧಿಪತ್ಯವನ್ನೂ ಕೊಟ್ಟಿರುವೆನು. ಮೂವತ್ತುಸಾವಿರ ವರುಷ ರಾಜ್ಯವಾಳು. ಉತ್ತಮನು ಕಾಡಿನಲ್ಲಿ ಸಾಯುವನು. ಸುರಚಿಯೂ ಕಾಡುಗಿಚ್ಚಿನಲ್ಲಿ ಬೆಂದು ಬೂದಿ ಯಾಗುವಳು. ನೀನು ಮರಣಕಾಲದಲ್ಲಿ ನನ್ನ ವಿಶೇಷಸ್ಮರಣೆಯನ್ನು ಮಾಡಿ ಸಪ್ತರ್ಷಿ ಮಂಡಲದ ಮೇಲಿರುವ, ನನ್ನಿಂದ ಅಧಿಷ್ಠಿತವಾದ ಧ್ರುವಲೋಕಕ್ಕೆ ಬರುವೆ.

ಹೀಗೆ ಹೇಳಿ ಹೊರಟುಹೋದನು. ಧ್ರುವನು ಲೋಕಶಿಕ್ಷೆಗಾಗಿ 'ಮುಕ್ತಿ ಯನ್ನು ಕೊಡೆಂದು ಬೇಡಲಿಲ್ಲವಲ್ಲ'. ಎಂದು ಮರುಗಿ ಊರಿಗೆ ಬಂದನು. ಅವನನ್ನು ಉತ್ತಾನಪಾದನು ಮಠದಿಂದ ಇದಿರುಗೊಂಡು ಉತ್ಸವದಿಂದ ಊರಿಗೆ ಕರೆದುಕೊಂಡು ಬಂದನು. ಎಲ್ಲರೂ ಆನಂದವನ್ನು ಹೊಂದಿದರು. ಮುಂದೆ ಉತ್ತಾನಪಾದನು ಧ್ರುವನಿಗೆ ಪಟ್ಟಗಟ್ಟಿ ತಪೋವನಕ್ಕೆ ಹೋದನು.

## ಹತ್ತನೆಯ ಅಧ್ಯಾಯ ಮುಗಿದುದು

ಧ್ರುವರಾಜನು ಭ್ರಮಿಯೆಂಬುವಳನ್ನು ಮದಿವೆಯಾಗಿ ಕಲ್ಪ ಮತ್ತು ವತ್ಸರ ಎಂಬ ಇಬ್ಬರುಮಕ್ಕಳನ್ನೂ, ಇಳೆಯೆಂಬುವಳನ್ನು ಮದಿವೆಯಾಗಿ ಉತ್ಕಲನೆಂಬ ಪುತ್ರನನ್ನೂ ಪಡೆದನು.

ತಮ್ಮನಾದ ಉತ್ತಮನು ಬೇಟೆಗಾಗಿ ಕಾಡಿಗೆ ಹೋಗಿದ್ದಾಗ ಯಕ್ಷನೊಬ್ಬನು ಅವನನ್ನು ಕೊಂದುಬಿಟ್ಟನು. ಸುರುಚಿಯು ಮಗನನ್ನು ಹುಡುಕುತ್ತ ಹೋಗಿ ಕಾಡಿ ನಲ್ಲಿ ಕಾಡ್ಗಿಚ್ಚಿಗೆ ಬಲಿಯಾದಳು. ಧ್ರುವನು ಯಕ್ಷರ ಮೇಲೆ ಕುಪಿತನಾಗಿ ಅಲಕಾ ನಗರಿಯ ಬಳಿಗೆ ಬಂದು ಅವರನ್ನು ಯುದ್ಧಕ್ಕೆ ಕರೆದನು. ಯಕ್ಷರು ಯುದ್ಧಕ್ಕೆ ಬಂದು ಧ್ರುವರಾಜನನ್ನಿದಿರಿಸಿ ಹೋರಾಡಿ ಹತರಾದರು. ಹತಶೇಷರು ಶಂಬರ ಮಾಯೆಯಿಂದ ಶಿಲಾವರ್ಷಾದಿಗಳನ್ನು ಸೃಷ್ಟಿಸಿದರು. ಧ್ರುವರಾಜನು ಗಗನದಲ್ಲಿ ಋಷಿಗಳು ಹೇಳಿದ ಮಾತನ್ನು ಕೇಳಿ ನಾರಾಯಣಾಸ್ತ್ರವನ್ನು ಹೂಡಿದನು. ಕೂಡಲೇ ಆ ಮಾಯೆಗಳೆಲ್ಲ ನಾಶಹೊಂದಿದುವು. ನಾರಾಯಣಾಸ್ತ್ರದಿಂದ ಅಪಾರ ಬಾಣಗಳು

ಹೊರಟು ಯಕ್ಷರನ್ನು ಕೊಲೆ ಮಾಡತೊಡಗಿದುವು ಇದನ್ನು ಕಂಡು ಸ್ವಾಯಂಭುವ ಮನವು ಬಂದು ಧ್ರುವನನ್ನು ಕುರಿತು ಮಾತಾಡುತ್ತಾನೆ.

**ಸ್ವಾಯಂಭುವ :** ಅಪ್ಪ ಧ್ರುವ ! ನರಕದ್ವಾರವೆನಿಸಿದ ಕೋಪವನ್ನು ಬಿಡು. ಒಬ್ಬ ಯಕ್ಷನು ಮಾಡಿದ ಅಪರಾಧಕ್ಕೆ ಬಹುಮಂದಿ ಯಕ್ಷರು ಸತ್ತರು. ಹರಿಯ ನ್ನೊಲಿಸಿಕೊಂಡ ನಿನಗೆ ಇದು ಯುಕ್ತವಲ್ಲ. ಸರ್ವರನ್ನು ರಕ್ಷಿಸುವವನೂ, ಸಂಹರಿ ಸುವವನೂ ಸ್ವತಂತ್ರನಾದ ಶ್ರೀಹರಿಯೊಬ್ಬನೇ. ಆದ್ದರಿಂದ ಉತ್ತಮನನ್ನು ಕೊಂದ ಯಕ್ಷನು ನಿಮಿತ್ತ ಮಾತ್ರದವನು. ನಿರ್ದೋಷಿಯಾದ ಶ್ರೀಹರಿಯಿಂದ ನಿಯತರಾದ ಪ್ರಾಣಿಗಳಿಗೆ ದ್ರೋಹವೆಸಗುವುದು ಯುಕ್ತವಲ್ಲ ಈ ದ್ರೋಹಕ್ಕೆ ಕಾರಣವಾದ ಅಹಂಕಾರವನ್ನು ಹುಟ್ಟಿಸತಕ್ಕದ್ದು ಅವಿದ್ಯೆ. ಅದನ್ನು ಹರಿಯ ಉಪಾಸನೆಯಿಂದ ಕಳೆದುಕೋ. ಈಗ ನೀನು ಮಾಡಿದ ವ್ಯಾಪಾರದಿಂದ ಕುಬೇರ ನಿಗೂ, ಅವನ ಮಿತ್ರನಾದ ಶಿವನಿಗೂ ಅವಮಾನ ಮಾಡಿದಂತಾಯಿತು. ಅದರಿಂದ ಹರಿಯ ಚಾಪ್ಲವುಂಟಾಗಲಿಲ್ಲ. ಮೊದಲು ನೀನು ಕುಬೇರನನ್ನು ಪ್ರಸನ್ನೀಕರಿಸಿಕೋ.

**ಧ್ರುವ :** ಅಜ್ಜ ! ನನ್ನ ತಪ್ಪನ್ನು ಕ್ಷಮಿಸು. ನಿನ್ನಪ್ಪಣೆಯಂತೆ ನಡೆಯು ವೆನು.

(ಸ್ವಾಯಂಭುವ ಮನುವು ಸ್ವಸ್ಥಾನಕ್ಕೆ ತೆರಳಿದನು.)

**ಹನ್ನೊಂದನೆಯ ಅಧ್ಯಾಯ ಮುಗಿದುದು.**

"ಹರಿಯೇ ಸ್ವತಂತ್ರನು" ಎಂದು ಕುಬೇರನು ಧ್ರುವನಿಗೆ ಹೇಳಿ ವರವನ್ನು ಕೇಳೆಂದನು. ಧ್ರುವನು ಹರಿಯ ಸ್ಮರಣೆಯು ಮರೆತು ಹೋಗದೆ ಮನಸ್ಸಿನಲ್ಲಿ ದೃಢ ವಾಗಿರುವಂತೆ ಕೇಳಿಕೊಂಡನು. ಬಳಿಕ ತನ್ನ ಪಟ್ಟಣಕ್ಕೆ ಬಂದು ಅನೇಕ ಯಜ್ಞ ಗಳನ್ನು ಮಾಡಿದನು. 36 ಸಾವಿರ ವರುಷಗಳು ಧರ್ಮದಿಂದ ರಾಜ್ಯವಾಳಿ, ಪ್ರಾರಬ್ಧ ಕರ್ಮವನ್ನು ಕಳೆದುಕೊಂಡು, ತನ್ನ ಪುತ್ರನಿಗೆ ರಾಜ್ಯವನ್ನೊಪ್ಪಿಸಿ, ಬದರಿಗೆ ಹೋಗಿ ಅಲ್ಲಿ ಹರಿಯುವ ಅಲಕನಂದಾನದಿಯಲ್ಲಿ ಪ್ರತಿದಿನವೂ ಸ್ನಾನಮಾಡುತ್ತ ಹರಿಯನ್ನು ಧ್ಯಾನಿಸಿ, ಬಿಂಬಾಪರೋಕ್ಷವನ್ನು ಹೊಂದಿದನು. ವಿಷ್ಣುದೂತರು ವಿಮಾನವನ್ನು ತಂದರು. ಧ್ರುವನು ದೇಹವನ್ನು ಬಿಟ್ಟು, ತೇಜೋದೇಹದಿಂದ ವಿಮಾನದಲ್ಲಿ ಕುಳಿತನು. ವಿಮಾನವು ಹೋಗುತ್ತಿರುವಾಗ, ವಿಷ್ಣು ದೂತರು ಧ್ರುವನಿಗೆ ಅವನ ತಾಯಿಯಾದ ಸುನೀತಿಯು ದೇವಯಾನದಿಂದ ಮುಂದೆ ಹೋಗು ತ್ತಿರುವುದನ್ನು ತೋರಿಸಿದರು. ಧ್ರುವನು ಸ್ವರ್ಗಕ್ಕೆ ಹೋಗಿ ಅಲ್ಲಿ ಬಂದು ಸೇರಿರುವ ತನ್ನ ತಾಯಿಯನ್ನು ನೋಡಿ, ನಮಸ್ಕರಿಸಿ ಅಲ್ಲಿಂದ ಹಿಂತಿರುಗಿ ಸ್ವರ್ಗದ ಕೆಳಗಿರುವ ಧ್ರುವಲೋಕಕ್ಕೆ ಬಂದು ಅಲ್ಲಿ ವಾಸ ಮಾಡಿದನು.

ಧ್ರುವನ ವಂಶದಲ್ಲಿ ಬಂದ ಪ್ರಚೇತಸರು ಸತ್ರಯಾಗ ಮಾಡಿದಾಗ ನಾರದರು ಅಲ್ಲಿಗೆ ಬಂದು ಧ್ರುವನ ಮಹಿಮೆಯನ್ನು ಕೊಂಡಾಡಿದರು.

ಈ ಚರಿತ್ರೆಯನ್ನು ಆದರದಿಂದ ಕೇಳುವವನಿಗೆ ಶ್ರೀಹರಿಯಲ್ಲಿ ಭಕ್ತಿಯು ಉಂಟಾಗುತ್ತದೆ.

**ಹನ್ನೆರಡನೆಯ ಅಧ್ಯಾಯ ಮುಗಿದುದು**

**ವಿದುರ :** ಪ್ರಚೇತಸರು ಎಂಬುವರು ಯಾರು ? ಅದನ್ನು ತಿಳಿಸಿರಿ.

**ಮೈತ್ರೇಯ :** ಧ್ರುವನ ಮಗ ಉತ್ಕಲನು ಬ್ರಹ್ಮಜ್ಞಾನಿ. ವಿರಕ್ತ. ಆದ್ದರಿಂದ ಮಂತ್ರಿಗಳೂ, ಕುಲವೃದ್ಧರೂ ಉತ್ಕಲನ ಯೋಗ್ಯತೆಯನ್ನು ತಿಳಿಯಲಾರಾದೆ ಹುಚ್ಚನೂ, ಮೂರ್ಖನೂ ಆಗಿರುವನೆಂದು ಭಾವಿಸಿದರು. ಧ್ರುವರಾಜನ ಭುತ್ತೊಬ್ಬ ಮಗನಾದ ಕಲ್ಪನು ದಿನಕಲ್ಪಾಭಿಮಾನಿಯಾದ್ದರಿಂದ, ಶಿಂಶುಮಾರ ಮೂರ್ತಿಯು ಇವನನ್ನು ಮಗನಂತೆ ಸ್ವೀಕರಿಸಿದನು. ಅವನು ಶಿಂಶುಮಾರ ಲೋಕವನ್ನೇ ಸೇರಿದನು. ಆಗ ಕಿರಿಯವನಾದ ವತ್ಸರನಿಗೆ ರಾಜ್ಯವು ದೊರೆಯಿತು. ಅವನ ವಂಶದಲ್ಲಿ ಬಂದ ಉಲ್ಮುಕನಿಂದ ಅವನ ಪತ್ನಿಯಾದ ಪುಷ್ಕರಿಣಿಯೆಂಬುವಳಲ್ಲಿ ಅಂಗ, ಸುನಾಸ, ಆಖ್ಯಾತಿ, ಕ್ರತು, ಆಂಗಿರಸ ಮತ್ತು ಗಯ ಎಂಬ ಆರುಮಂದಿ ಮಕ್ಕಳಾದರು. ಅವರಲ್ಲಿ ಜ್ಯೇಷ್ಠನಾದ ಅಂಗರಾಜನಿಗೆ ಸುನೀಥೆಯೆಂಬುವಳು ಪತ್ನಿಯಾದಳು. ಇವಳು ಅಸುರ ಜಾತಿಯ ಹೆಣ್ಣುಮಗಳು. ಅಂಗರಾಜನು ಯಾಗ ಮಾಡಿದನು. ದೇವತೆಗಳು ಹವಿಸ್ಸನ್ನು ಸ್ವೀಕರಿಸಲಿಲ್ಲ. ಏಕೆಂದರೆ ಅಂಗರಾಜನಿಗೆ ಮುಮ್ಮಗನಾದ ಪೃಥುರಾಜನೆಂಬ ಮಹಾನುಭಾವನು ಹುಟ್ಟಬೇಕಾಗಿದೆ. ಅದಕ್ಕಾಗಿ ಅಂಗರಾಜನು ಪುತ್ರಕಾಮೇಷ್ಟಿಯಜ್ಞವನ್ನು ಮಾಡಲಿ ಎಂಬುವುದಕ್ಕಾಗಿ ದೇವತೆಗಳು ಹವಿಸ್ಸನ್ನು ಸ್ವೀಕರಿಸಲಿಲ್ಲ. ಋತ್ವಿಜರ ಅನುಮತಿಯಂತೆ ಅಂಗರಾಜನು ಪುತ್ರಕಾಮೇಷ್ಟಿಯನ್ನು ಮಾಡಿದನು. ಆದರೆ ಅವನು ಪೂರ್ವಜನ್ಮದಲ್ಲಿ ಒಬ್ಬ ಬಾಲಕನನ್ನು ಕೊಂದಿದ್ದನಾದ್ದರಿಂದ ಅದರ ಫಲವಾಗಿ ಅಸುರ ಸ್ವಭಾವದ ವೇನನೆಂಬ ಮಗನಾದನು. ಆ ವೇನನು ತನ್ನ ಮಾತಾಮಹನಾದ ಅಧರ್ಮಾಭಿಮಾನಿ ಅಸುರ ಮೃತ್ಯು ಎಂಬುವನ ಮನೆಯಲ್ಲಿಯೇ ಬೆಳೆದನು. ತಾತನ ಸಹವಾಸದಿಂದ ವೇನನು ನಿರಪರಾಧಿಪ್ರಾಣಿಗಳನ್ನು ಹಿಂಸಿಸುತ್ತ ಬಂದನು. ಅಂಗರಾಜನು ಇದನ್ನು ಕಂಡು "ಸಾಕಪ್ಪ ಈ ದುಷ್ಟ ಪುತ್ರನ ಸಹವಾಸ. ಇದಕ್ಕಿಂತ ಅಪುತ್ರನಾಗಿರುವುದೇ ಸುಖ" ಎಂದು ಕೊರಗಿ, ಒಂದು ದಿನ ಅರ್ಧರಾತ್ರಿಯಲ್ಲಿ ಯಾರಿಗೂ ತಿಳಿಯದಂತೆ ಅರಮನೆಯಿಂದ ಹೊರಬಿದ್ದು ಅಡವಿಗೆ ಹೊರಟುಹೋದನು. ಬೆಳಗಾಗ ರಾಜನು ಕಾಣದಿರಲು ಪ್ರಜೆಗಳೂ, ಮಂತ್ರಿಗಳೂ ಭೂಮಿಯಲ್ಲೆಲ್ಲ ಹುಡುಕಿ ನಿರಾಶರಾದರು.

**ಹದಿಮೂರನೆಯ ಅಧ್ಯಾಯ ಮುಗಿದುದು**

ಭೃಗು ಮೊದಲಾದ ಮಹರ್ಷಿಗಳು ಬಂದಾಗ ಮಂತ್ರಿ ಮೊದಲಾದವರು ಅಂಗರಾಜನಾಶವನ್ನು ಅವರಿಗೆ ವಿಜ್ಞಾಪಿಸಿಕೊಂಡರು. ಆ ಮಹರ್ಷಿಗಳು ರಾಜ್ಯದಲ್ಲಿ ರಾಜನಿಲ್ಲವಾದರೆ ಜನರಲ್ಲಿ ಸಾಂಕರ್ಯವುಂಟಾಗಿ ಅವರೆಲ್ಲರೂ ಪಶುಪ್ರಾಯರಾಗವರು ಎಂದು ವಿಚಾರಮಾಡಿದರು. ಸುನೀಥೆಯನ್ನು ಕರೆದು ಅವಳ ಮಗನು ದುಷ್ಟನೆಂದೂ, ಯಾರಿಗೂ ಸಮ್ಮತನಲ್ಲವೆಂದೂ ಆದರೂ ಯತ್ನವಿಲ್ಲದೆ ಅವನನ್ನೇ ರಾಜನನ್ನಾಗಿ ಮಾಡುತ್ತಿದ್ದೇವೆ–ಎಂದು ಅವಳಿಗೆ ತಿಳಿಸಿ ವೇನನಿಗೆ ಪಟ್ಟಗಟ್ಟಿದರು. ದುರ್ಬುದ್ಧಿಯುಳ್ಳ ಆ ವೇನನು ಸಜ್ಜನರನ್ನು ಹಿಂಸಿಸುತ್ತ, ಯಾರೂ ಯಾಗ ಮಾಡಬಾರದು, ಹೋಮಗಳನ್ನು ಮಾಡಬಾರದೆಂದು ಘೋಷಿಸುತ್ತ ಎಲ್ಲೆಲ್ಲೂ ಧರ್ಮಾಚರಣೆಯನ್ನು ತಡೆಯುತ್ತ ಬಂದನು. ಇದನ್ನು ಕಂಡ ಮಹರ್ಷಿಗಳು ವೇನನ್ನು ಕುರಿತು ಧರ್ಮ ಮಾಡುವುದು ರಾಜ ಮತ್ತುಪ್ರಜೆಗಳಿಗಿಬ್ಬರಿಗೂ ಶ್ರೇಯಸ್ಕರವೆಂದೂ, ಅದನ್ನು ನಿಲ್ಲಿಸುವುದರಿಂದ ದೇವರ, ದೇವತೆಗಳ ಆಗ್ರಹಕ್ಕೆ ಗುರಿಯಾಗಬೇಕಾಗುವುದೆಂದೂ ಬುದ್ಧಿವಾದವನ್ನು ಹೇಳಿದರು. ವೇನನು "ನನ್ನನ್ನು ಬಿಟ್ಟು ಬೇರೆ ದೇವರು ಎಲ್ಲಿರುವನು ? ನೀವೆಲ್ಲರೂ ಯಜ್ಞಾದಿ ಸಕಲ ಕರ್ಮಗಳಿಂದಲೂ ನನ್ನನ್ನೇ ಪೂಜಿಸಿರಿ" ಎಂದನು. ಜ್ಞಾನಿಗಳ ಮಾತನ್ನು ವೇನನು ಗರ್ವದಿಂದ ತಿರಸ್ಕರಿಸಿದುದನ್ನು ನೋಡಿದ ಮಹರ್ಷಿಗಳು ಹೂಂಕರಿಸಿದರು. ಅದರಿಂದ ವೇನನು ಸತ್ತುಬಿದ್ದನು. ತಿರುಗಿ ರಾಜ್ಯವು ಅನಾಯಕವಾಗಿ ಕಳ್ಳಕಾಕರರು ಹೆಚ್ಚಿ ಪ್ರಜೆಗಳನ್ನು ಬಹಳವಾಗಿ ಹಿಂಸಿಸಿದರು. ಇದನ್ನು ನೋಡಿ ಆ ಮಹರ್ಷಿಗಳು ವೇನನ ಮೃತದೇಹವನ್ನು ತರಿಸಿ ಅವನ ತೊಡೆಯನ್ನು ಮಥಿಸಿದರು. ಆಗ ಪಾಪದ ಅಭಿಮಾನಿಯಾದ ಒಬ್ಬ ತಾಮಸ ಜೀವನು ನಿಷಾದ ರೂಪದಿಂದ ಹುಟ್ಟಿದನು. ಕುರೂಪಿಯಾದ ಅವನು ವಿಧೇಯನಾಗಿ "ನಾನು ಏನನ್ನು ಮಾಡಲಿ" ಎಂದು ಕೇಳಿದನು. ಋಷಿಗಳು 'ನಿಷೀದ' (ಕುಳಿತುಕೋ) ಎಂದು ಹೇಳಿದರು. ಅದರಿಂದ ಅವನು ನಿಷಾದನೆನಿಸಿದನು. ವೇನನ ದೇಹದಲ್ಲಿ ಈ ತಾಮಸ ಜೀವನ ಜೊತೆಯಲ್ಲಿದ್ದ ರಾಜಸ ಜೀವಿಯ ಪಾಪವನ್ನು ಹೊತ್ತು ಈ ತಾಮಸ ಜೀವಿಯು ಪಾಪಮೂರ್ತಿಯಾಗಿ ಹುಟ್ಟಿದ್ದನು. ಇವನ ವಂಶದಲ್ಲಿ ಬಂದವರೇ ಬೆಟ್ಟಗುಡ್ಡ ಕಾಡುಗಳಲ್ಲಿ ಕಂಡುಬರುವ ಕಿರಾತರು. ವೇನನ ದೇಹದಲ್ಲಿ ಒಬ್ಬ ಸಾತ್ವಿಕ ಜೀವನೂ ಇದ್ದನು. ಅವನೇ ಮುಂದೆ ಹುಟ್ಟತಕ್ಕ ಪೃಥುರಾಜನು. ವೇನನ ದೇಹದಲ್ಲಿ ರಾಜಸ ಜೀವನೊಬ್ಬನಿದ್ದನು. ಅವನ ಪಾಪವೆಲ್ಲವನ್ನೂ ತಾಮಸ ಜೀವನು ಹೊಂದಿದ್ದರಿಂದ ಪಾಪವನ್ನು ಕಳೆದುಕೊಂಡ ಆ ರಾಜಸಜೀವನು ಪುತ್ರನಾದ ಪೃಥುವಿನ ಗುಣ ಮಹಿಮೆಯಿಂದ ಸ್ವರ್ಗವನ್ನು ಸೇರಿದನು. ವೇನನ ದೇಹಾಭಿಮಾನಿಯಾದ ತಾಮಸ ಜೀವನು ನಿತ್ಯನರಕದಲ್ಲಿ ಬಿದ್ದನು. ಹೀಗೆ ವೇನನ ದೇಹವು ನಾಲ್ಕು ಬಗೆಯ ಜೀವರಿಗೆ ಆಶ್ರಯವಾಗಿತ್ತೆಂದು ಗರುಡ ಪುರಾಣದ ವಾಕ್ಯಗಳಿವೆ. ಮಹರ್ಷಿಗಳು ವೇನನ ಎರಡು ತೋಳುಗಳನ್ನು ಮಥಿಸಲು ಒಂದು ಗಂಡು ಮತ್ತು ಒಂದು ಹೆಣ್ಣು ಅವುಗಳಿಂದ ಹುಟ್ಟಿದರು. ಅವರನ್ನು ನೋಡಿದ

ಋಷಿಗಳು ಸಂತೋಷಪಟ್ಟು "ಈ ಪುರುಷನು ಪೃಥುರಾಜನು. ಇವನಲ್ಲಿ ಶ್ರೀಹರಿಯು ರಾಜರಾಜೇಶ್ವರ ನಾಮದಿಂದ, ಆವೇಶರೂಪವುಳ್ಳವನಾಗಿ, ಸಂನಿಹಿತನಾಗಿರುವನು. ಈ ಸ್ತ್ರೀಯು ಅರ್ಚಿ ಎಂಬ ಇವನ ನಿಯತ ಪತ್ನಿ. ಇವಳಲ್ಲಿ ಲಕ್ಷ್ಮೀದೇವಿಯು ಸನ್ನಿಹಿತಳಾಗಿರುವಳು'' ಎಂದು ಹೇಳಿದರು.

## ಹದಿನಾಲ್ಕನೆಯ ಅಧ್ಯಾಯ ಮುಗಿದುದು

ಪೃಥುರಾಜನು ಅರ್ಚಿಯನ್ನು ಮದಿವೆಯಾದನು. ಅವನಿಗೆ ಮಹರ್ಷಿಗಳು ಪಟ್ಟಗಟ್ಟಿದರು. ಆಗ ಬ್ರಹ್ಮಾದಿ ದೇವತೆಗಳು ಬಂದು, ಒಬ್ಬೊಬ್ಬರು ಒಂದೊಂದು ವಸ್ತುವನ್ನು ಅವನಿಗೆ ಕೊಟ್ಟರು. ಬಂದಿ, ಮಾಗಧ, ಸೂತರು ಆ ರಾಜನನ್ನು ಸ್ತುತಿಸಲು ಸಿದ್ಧರಾದರು. ಆಗ

**ಪೃಥು :** ನಾನು ಈಗತಾನೇ ರಾಜನಾಗಿರುವೆನು. ಆದ್ದರಿಂದ ಯಾವ ವ್ಯಾಪಾರವನ್ನೂ ಮಾಡಿಲ್ಲ. ನೀವೀಗ ನನ್ನನ್ನು ಏನೆಂದು ಸ್ತುತಿಸುವಿರಿ ? ಇಲ್ಲದ ಮಹಿಮೆಯನ್ನು ಸ್ತುತಿಸುವುದೂ, ಅದನ್ನು ಕೇಳುವುದೂ ಎರಡೂ ದೋಷಕರ. ಒಂದು ವೇಳೆ ಗುಣವಿದ್ದರೂ ಆತ್ಮಶ್ಲಾಘನೆಯನ್ನು ಮಹಾತ್ಮರು ಕೇಳುವುದಿಲ್ಲ. ಆದ ಕಾರಣ ಈಗ ನಿಮ್ಮಿಂದ ಹೇಗೆ ಸ್ತುತಿಮಾಡಿಸಿಕೊಳ್ಳಲಿ ?

## ಹದಿನೈದನೆಯ ಅಧ್ಯಾಯ ಮುಗಿದುದು

ಪೃಥುರಾಜನಲ್ಲಿ ಆವೇಶ ರೂಪದಿಂದಿರುವ ರಾಜರಾಜ ನಾಮಕ ಶ್ರೀಹರಿಯು ಮುಂದೆ ತಾನು ಮಾಡಿ ರಾಜನಿಂದ ಮಾಡಿಸುವ ವ್ಯಾಪಾರಗಳನ್ನು ಜ್ಞಾನಿಗಳಾದ ಮಹರ್ಷಿಗಳು ತಿಳಿದು ಅದನ್ನು ಸ್ತುತಿಸಿದರೆ ಹರಿ ಭಕ್ತಿಯು ಉಂಟಾಗುವುದೆಂದು ನಿಶ್ಚಯಿಸಿ, ಮುಂದೆ ಮಾಡುವ ವ್ಯಾಪಾರಗಳನ್ನು ಬಂದಿ ಮಾಗಧರಿಗೆ ಹೇಳಿದರು. ಅವರು ಹೀಗೆ ಸ್ತುತಿಸಲಾರಂಭಿಸಿದರು.

'ಶ್ರೀ ಹರಿಯೆ ! ಪೃಥುರಾಜನಲ್ಲಿ ಸಂನಿಹಿತನಾಗಿರುವ ನಿನ್ನ ಪರಾಕ್ರಮವನ್ನು ಸಂಪೂರ್ಣವಾಗಿ ಸ್ತುತಿಸಲು ಯಾರಿಗೂ ಸಾಧ್ಯವಿಲ್ಲ. ಹಾಗಿದ್ದರೂ ನಿನ್ನ ಕಥಾಮೃತದಲ್ಲಿ ಆದರವು ನಮಗಿರುವುದರಿಂದ, ಮುನಿಗಳು ನಿನ್ನ ಮಹಿಮೆಯನ್ನು ಉಪದೇಶಿಸಿರುವಷ್ಟನ್ನು ಮಾತ್ರ ನಮ್ಮ ಯೋಗ್ಯತಾನುಸಾರವಾಗಿ ಸ್ತುತಿಸುವೆವು. ನೀನು ಧರ್ಮವಂತರಲ್ಲಿ ಶ್ರೇಷ್ಠನು. ಧರ್ಮ ಪ್ರವರ್ತಕನು. ಧರ್ಮರಕ್ಷಕನು. ಧರ್ಮವಿರೋಧಿನಾಶಕನು. ಇಂದ್ರಾದಿಗಳ ಶಕ್ತಿಗೆ ಪ್ರೇರಕನಾಗಿ ಅವರು ಜಗತ್ತಿಗೆ ಮಾಡುವ ಉಪ

ಕಾರಗಳನ್ನು ಅವರಲ್ಲಿದ್ದು ನೀನೇ ಮಾಡುವೆ. ಇಂದ್ರನಲ್ಲಿದ್ದು ಅಜೇಯಿಯೆನಿಸಿರುವೆ. ಸೂರ್ಯನಲ್ಲಿದ್ದು ಮಳೆಯನ್ನು ಕೊಡುವೆ. ಚಂದ್ರನಲ್ಲಿದ್ದು ಸಂತೋಷಗೊಳಿಸುವೆ. ಗೋರೂಪವನ್ನು ಧರಿಸುವ ಭೂದೇವಿಯಿಂದ ಸಕಲ ಔಷಧಿಗಳನ್ನೂ ಕ್ಷೀರ ರೂಪ ದಿಂದ ಸಂಪಾದಿಸಿ ಕೊಡುವೆ. ಬಿಲ್ಲಿನ ಕೊನೆಯಿಂದ ಭೂಮಿಯನ್ನು ಸಮ ಮಾಡುವೆ.

ನೀನೇ ಇಂದ್ರಾದಿಗಳಿಗೆ ಸ್ವಾಮಿಯು. ಚೇತನಾಚೇತನ ವಸ್ತುಗಳಲ್ಲಿ ನೀನು ನೆಲೆ ಸಿರುವೆ. ನೀನೇ ಆದಾನಾದಿ ಕರ್ತನು. ನಿನ್ನ ಗುಣಗಳಿಗೂ, ಕ್ರಿಯಾದಿಗಳಿಗೂ ಭೇದ ವಿಲ್ಲ. ಉದಯ ಪರ್ವತದವರೆಗೂ ಇರುವ ಭೂಮಿಯನ್ನು ನೀನು ಏಕಾಧಿಪತಿಯಾಗಿ ರಕ್ಷಿಸುವೆ. ವಿಜಯ ರಥವೇರಿ ಭೂಪ್ರದಕ್ಷಿಣೆ ಮಾಡುವೆ. ಆಗ ಇಂದ್ರಾದಿ ಸರ್ವರೂ ನಿನಗೆ ಕಪ್ಪವನ್ನೊಪ್ಪಿಸುವರು. ಅವರ ಪತ್ನಿಯರು ನಿನ್ನ ಕೀರ್ತಿಯನ್ನು ಗಾನ ಮಾಡುವರು.

**ಹದಿನಾರನೆಯ ಅಧ್ಯಾಯ ಮುಗಿದುದು**

ಪೃಥುಚಕ್ರವರ್ತಿಯು ತನ್ನಲ್ಲಿ ಶ್ರೀಹರಿಯು ಇದ್ದು ನಡೆಸುವ ವ್ಯಾಪಾರ ಗಳನ್ನು ಕೊಂಡಾಡಿದ ಸೂತರಿಗೆ ವಸ್ತ್ರಾಭರಣಗಳನ್ನು ಕೊಟ್ಟನು. ಪ್ರಜೆಗಳೆಲ್ಲರನ್ನೂ, ಧರ್ಮದಿಂದ ರಕ್ಷಿಸುತ್ತ ಬಂದನು. ಆದರೆ ಪ್ರಜೆಗಳಿಗೆ ಅನ್ನವು ದೊರೆಯದೆ ವ್ಯಥೆಯು ಬಂದು ಅವರು ಬಂದು ಪೃಥುವಿನಲ್ಲಿ ಮೊರೆಬಿದ್ದರು.

ಭೂದೇವಿಯು ಪೃಥು ಮತ್ತು ಪ್ರಜೆಗಳಿಗೆ ಅನುಕೂಲ ಮಾಡುಲು ಮತ್ತು ದುಷ್ಟರಿಗೆ ಸಿಗದಂತೆ ಮಾಡಲು ಓಷಧಿಗಳನ್ನು ಹೊರಕ್ಕೆ ಬಿಡದೆ ನೆಟ್ಟ ಬೀಜಗಳನ್ನು ನುಂಗುತ್ತ ಬಂದಳು. ಇದನ್ನು ತಿಳಿದ ಪೃಥು ರಾಜನು ಬಿಲ್ಲನ್ನು ಹಿಡಿದು ಭೂದೇವಿಯನ್ನು ನಿಗ್ರಹಿಸಲು ಹೊರಟನು. ಅವಳು ಗೋರೂಪವನ್ನು ಧರಿಸಿ ಓಡಿದಳು. ರಾಜನು ಅವಳು ಓಡಿದ ಕಡೆ ಬೆನ್ನು ಹತ್ತಿ ಹೋದನು. ಇದನ್ನು ಕಂಡು ಭೂದೇವಿಯು "ರಾಜನೇ! ಕರುಣಾಳುವಾದ ನೀನು ನಿರಪರಾಧಿನಿಯೂ, ಮೇಲಾಗಿ ಹೆಂಗುಸಾಗಿರುವ ನನ್ನನ್ನು ಕೊಲ್ಲುವುದು ಉಚಿತವೆ ? ಪ್ರಜೆಗಳನ್ನು ಧರಿಸುತ್ತಿರುವ ನನ್ನನ್ನು ಕೊಂದರೆ ಮುಂದೆ ಪ್ರಜೆಗಳನ್ನು ನೀನು ಹೇಗೆ ಧರಿಸುವೆ ?" ಎಂದಳು.

**ಪೃಥು :** ವಸುಧೆ ! ನೀನು ರಾಜಾಜ್ಞೆಯನ್ನು ಮೀರಿರುವೆ, ಜನಗಳು ಯಜ್ಞ ದಲ್ಲಿ 'ಭೂ ಸ್ವಾಹಾ' ಎಂದು ಹೆಸರು ಹೇಳಿ ಕೊಡುವ ಹವಿ ರ್ಭಾಗವನ್ನು ನೀನು ಹೊಂದಿಯೂ, ಧಾನ್ಯಾದಿಗಳನ್ನು ಅವರಿಗೆ ಕೊಡದೆ ಕೃತಘ್ನಳಾಗಿರುವೆ. ಈ ಎರಡು ಅಪರಾಧಗಳನ್ನು ಮಾಡಿರುವ ನಿನ್ನನ್ನು ಶಿಕ್ಷಿಸುವೆನು. ಯಜಮಾನನು ಹಾಕಿದ ಹೊರೆ ಹುಲ್ಲನ್ನು ತಿಂದು ಹಾಲನ್ನೂ ಕೊಡದೆ ಕರೆಯಲು ಹೋದಾಗ ಕಾಲಿನಿಂದ ಒದೆಯುವ ತುಂಟ ಹಸುವನ್ನು ದಂಡಿಸುವುದು ದೋಷವಲ್ಲ. ಹಾಗೆ ವಿಪ್ರದತ್ತ ಹವಿಸ್ಸನ್ನು ತಿಂದು

ದವಸಧಾನ್ಯಗಳನ್ನು ಕೊಡದಿರುವ ನೀನು ಗೋರೂಪಿಯಾದರೂ ನಿನ್ನ ವಧ ಉಚಿತವೇ ಸರಿ. ಬ್ರಹ್ಮದೇವರಿಂದ ಸೃಷ್ಟವಾದ ಬೀಜಗಳನ್ನು ನೀನೇ ಅಡಗಿಸಿ ಕೊಂಡಿರುವೆಯಾಗಿ ನಿನಗೆ ಕಳ್ಳತನದ ದೋಷವೂ, ರಾಜನಾದ ನನಗೆ ಮಾಡಿದ ಅವಮಾನ ದೋಷವೂ ನಿನಗೆ ಬಂದಿದೆ. ನಿನ್ನನ್ನು ಕೊಂದು ಪ್ರಜೆಗಳ ಹಸಿವನ್ನು ಅಡಗಿಸಿ ಅವರೆಲ್ಲರನ್ನೂ ನನ್ನ ಸ್ವರೂಪ ಶಕ್ತಿಯಿಂದಲೇ ಧರಿಸುವೆನು,

**ಧರಣಿ :** ಪೃಥುವಿನ ಅಂತರ್ಯಾಮಿಯಾದ ಪುರುಷೋತ್ತಮನಿಗೆ ನಮಸ್ಕಾರ ! ಬ್ರಹ್ಮಾದಿ ಜೀವರ ದೇಹಗಳನ್ನು ಸೃಷ್ಟಿಸುವ ಕರ್ತನೂ ನೀನು. ನೀನೇ ಸತ್ವರಜಸ್ತ ಮೋಗುಣ ರಹಿತನು ಜ್ಞಾನಾನಂದಾದಿ ದೇಹವುಳ್ಳವನು. ರಾಗದ್ವೇಷರಹಿತನು. ಸರ್ವಕ್ಕೂ ಆಶ್ರಯನಾದ ಶ್ರೀಹರಿಯೇ ನನ್ನನ್ನು ಕೊಲ್ಲಲು ನಿಂತರೆ ನಾನಾರಿಗೆ ಹೇಳಿ ಕೊಳ್ಳಲಿ ? ಸರ್ವೋತ್ತಮ ಪುರುಷನು ನೀನೇ. ರಸಾತಳದಿಂದ ಉದ್ಧರಿಸಿದ ನೀನೇ ನನ್ನನ್ನು ಕೊಲ್ಲುವುದು ಉಚಿತವೆ ? ನಿನ್ನ ಅನುಗ್ರಹಕ್ಕೆ ಪಾತ್ರರಾದ ಪೃಥುಮೊದಲಾದ ಮಹಾತ್ಮರ ವ್ಯಾಪಾರವನ್ನು, ಈಶ್ವರೇಚ್ಛೆಯಿಂದ ಮೋಹಿತರಾದ ನಮ್ಮಂಥವರು ಏನು ಬಲ್ಲರು ? ಹರಿಗೂ, ಅವನ ಭಕ್ತರಿಗೂ ನಮಸ್ಕಾರ !

## ಹದಿನೇಳನೆಯ ಅಧ್ಯಾಯ ಮುಗಿದುದು

**ಭೂದೇವಿ :** ಮಹಾರಾಜನೇ ! ಕೋಪವನ್ನು ಬಿಟ್ಟು ನನ್ನ ವಿಜ್ಞಾಪನೆ ಯನ್ನು ಲಾಲಿಸು. ರಾಜರಿಲ್ಲದೆ ದುಷ್ಟರು ಹೆಚ್ಚಿಕೊಂಡು ಔಷಧಿಗಳನ್ನು ದುರ್ವಿನಿ ಯೋಗ ಮಾಡುತ್ತ, ತಾವೇ ತಿನ್ನುತ್ತ ಬಂದುದರಿಂದ ಮುಂದೆ ಸಜ್ಜನರಾದ ರಾಜರು ಹುಟ್ಟಿದಾಗ ಯಜ್ಞಗಳು ನಡೆಯಲು ತಕ್ಕ ಸಾಮಗ್ರಿಗಳು ದೊರೆಯಲೆಂದೇ ನಾನು ಓಷಧಿಗಳನ್ನು ಅಡಗಿಸಿರುವೆನು. ಅವೆಲ್ಲವೂ ಕ್ಷೀರವಾಗಿವೆ. ನನಗೆ ತಕ್ಕ ಕರು, ಕರೆಯುವ ಪಾತ್ರೆ, ಕರೆಯುವವರು ಇವೆಲ್ಲವನ್ನೂ ಏರ್ಪಡಿಸು. ಆಗ ನಾನು ಕರುವಿನ ಮೇಲಿನ ಪ್ರೇಮದಿಂದ ಕರೆಯುವವರಿಗೆ ಇಷ್ಟವಾದ ವಸ್ತುಗಳನ್ನು ನಿನಗಾಗಿ ಕ್ಷೀರರೂಪದಿಂದ ಕೊಡುವೆನು. ಮತ್ತು ಮಳೆಯ ನೀರು ಭೂಮಿಯಲ್ಲಿ ಸಮನಾಗಿ ಹರಿಯಲು ಭೂಮಿ ಯಲ್ಲಿರುವ ಹಳ್ಳತಿಟ್ಟುಗಳನ್ನು ಸಮ ಮಾಡು.

(ಹೀಗೆ ಹೇಳಲು ಪೃಥುವು ಮೊದಲು ಸ್ವಾಯಂಭುವ ಮನುವನ್ನು ಕರುಮಾಡಿ ತನ್ನ ಹಸ್ತವನ್ನೇ ಪಾತ್ರೆ ಮಾಡಿ ಸಕಲ ಸಸ್ಯವರ್ಗಗಳನ್ನೂ ಕ್ಷೀರರೂಪದಿಂದ ಕರೆದನು.

| ಕರೆದವರು | ಕರು | ಪಾತ್ರೆ | ಇಷ್ಟವಾದ ಪದಾರ್ಥ |
|---|---|---|---|
| ವಸಿಷ್ಠಾದಿಗಳು | ಬೃಹಸ್ಪತಿ | ವಾಗಿಂದ್ರಿಯ | ವೇದವಾಕ್ಯ |

| | | | |
|---|---|---|---|
| ದೇವತೆಗಳು | ಇಂದ್ರ | ಚಿನ್ನದ ಪಾತ್ರೆ | ಸೋಮಲತೆರಸ, ತಜ್ಜ ಶಕ್ತಿ, ಅವಷ್ಟಂಭನ ಶಕ್ತಿ ಮತ್ತು ಬಲ |
| ದೈತ್ಯದಾನವರು | ಪ್ರಹ್ಲಾದ | ಉಕ್ಕಿನಪಾತ್ರೆ | ಸುರೆ |
| ಗಂಧರ್ವರು, ಅಪ್ಸರ ಸ್ತ್ರೀಯರು | ವಿಶ್ವಾವಸು | ಕಮಲ | ಗಾನಮಾಧುರ್ಯ, ಸೌಂದರ್ಯ. |
| ಪಿತೃದೇವತೆಗಳು | ಅರ್ಯಮ | ಆಮಪಾತ್ರೆ | ಕವ್ಯ |
| ಸಿದ್ಧರು | ಕಪಿಲ | ಆಮಪಾತ್ರೆ | ಅಣಿಮಾದಿ ಅಷ್ಟ ಸಿದ್ಧಿಗಳು |
| ವಿದ್ಯಾಧರರು | ಕಪಿಲ | ಆಮಪಾತ್ರೆ | ಗಗನಸಂಚಾರ ವಿದ್ಯೆ |
| ಮಾಯಾವಿಗಳು | ಮಯ | ಆಮಪಾತ್ರೆ | ಮಾಯಾಸೃಷ್ಟಿ |
| ಯಕ್ಷರಾಕ್ಷಸ ಪಿಶಾಚಿಗಳು | ಭೈರವ | ಕಪಾಲ | ರಕ್ತ |
| ನಾಗಗಳು | ತಕ್ಷಕ | ಮುಖ | ವಿಷ |
| ಪಶುಗಳು | ನಂದಿ | ಅಡವಿ | ಗರಿಕೆ |
| ಹುಲಿ ಮೊದಲಾದುವು | ಸಿಂಹ | ಶರೀರ | ಮಾಂಸ |
| ಪಕ್ಷಿಗಳು | ಗರುಡ | ಶರೀರ | ಕ್ರಿಮಿಕೀಟ, ಹಣ್ಣುಕಾಯಿ |
| ವೃಕ್ಷಗಳು | ಆಲದಮರ | ಶರೀರ | ಷಡ್ರಸ |
| ಪರ್ವತಗಳು | ಹಿಮವಂತ | ತಪ್ಪಲು | ಸುವರ್ಣಾದಿ ಧಾತುಗಳು |

ಬಳಿಕ ಪೃಥುರಾಜನು ಭೂದೇವಿಯನ್ನು ಪ್ರೇಮದಿಂದ ತನ್ನ ಪುತ್ರಿಯನ್ನಾಗಿ ಮಾಡಿಕೊಂಡನು. ನೆಲವನ್ನು ತನ್ನ ಬಿಲ್ಲಿನ ಕೊಪ್ಪಿನಿಂದ ಸವರಿ ಹಳ್ಳತಿಟ್ಟುಗಳನ್ನು ಸಮ ಮಾಡಿದನು. ಪ್ರಜೆಗಳಿಗೆ ಜೀವನೋಪಾಯವನ್ನು ಕಲ್ಪಿಸಿದನು. ಗ್ರಾಮ, ಪುರ ಮುಂತಾದುವುಗಳನ್ನು ವಾಸಕ್ಕೆ ಏರ್ಪಾಡು ಮಾಡಿದನು. ಇವನ ಕಾಲದಲ್ಲಿಯೇ ಜನರು ಅನುಕೂಲವಾದ ಸ್ಥಳಗಳನ್ನು ಸೇರಿ, ನಿರ್ಭಯರಾಗಿ, ಸುಖದಿಂದ ವಾಸ ಮಾಡಿದರು.

**ಹದಿನೆಂಟನೆಯ ಅಧ್ಯಾಯ ಮುಗಿದುದು**

ಬಳಿಕ ಪೃಥುರಾಜನು ಬ್ರಹ್ಮಾವರ್ತದಲ್ಲಿ ನೂರು ಅಶ್ವಮೇಧಗಳನ್ನು ಮಾಡಲು ಸಂಕಲ್ಪಿಸಿದನು. ಆ ಯಜ್ಞಗಳು ಬಹಳ ಸಮೃದ್ಧಿಯಿಂದ ಕೂಡಿದ್ದುವು. 99 ಯಜ್ಞಗಳು ನಡೆದುವು. ಪೃಥುರಾಜನ ಯೋಗ್ಯತೆಯೂ ಅಷ್ಟೇ ಇತ್ತು. ಪೃಥುರಾಜನು ತನ್ನ ಯೋಗ್ಯತೆಗೆ ಮೀರಿದ ನೂರನೆಯ ಯಜ್ಞವನ್ನು ಆರಂಭಿಸಿದಾಗ ಹರಿಯ ಆಜ್ಞಾನುಸಾರ ದೇವೇಂದ್ರನು ಬಂದು ಯಾಗದ ಕುದುರೆಯನ್ನು ಅಪಹರಿಸಿದನು ಮತ್ತು ಪಾಖಂಡವೇಷವನ್ನು ಧರಿಸಿದ್ದನು. ಪಾಖಂಡ=ಪಾ ಅಂದರೆ ಪಾಪ, ಖಂಡ ಅಂದರೆ ಸೂಚಕ. ಒಟ್ಟಿನಲ್ಲಿ ಅಧರ್ಮವನ್ನೇ ಧರ್ಮವೆಂದು ಭ್ರಾಂತಿಗೊಂಡಿರುವ ವೇಷ ಅಂದರೆ ಜಟಾಭಸ್ಮಧಾರಣೆ. ಈ ವೇಷವನ್ನು ಧರಿಸಿ ದೇವೇಂದ್ರನು ಆಕಾಶಮಾರ್ಗದಿಂದ ಯಜ್ಞಾಶ್ವದೊಡನೆ ಓಡುತ್ತಿರುವ ಅವನನ್ನು ಅತ್ರಿಮಹರ್ಷಿಗಳು ಕಂಡು ಮಹಾರಥನಾದ ಪೃಥುರಾಜನ ಕುಮಾರನನ್ನು ಕರೆದು ಇಂದ್ರನನ್ನು ಕೊಲ್ಲುವಂತೆ ಪ್ರಚೋದಿಸಿದರು. ಕುಪಿತನಾದ ಆ ಕುಮಾರನು ಇಂದ್ರನನ್ನೇ ಹಿಂಬಾಲಿಸುತ್ತ "ನಿಲ್ಲು ನಿಲ್ಲು" ಎಂದು ಕೂಗಿದನು. ಪಾಖಂಡಧಾರಿಯಾಗಿದ್ದ ಅವನನ್ನು ನೋಡಿ, ಪಾಪಶರೀರಿ ಎಂದು ಬಗೆದು ಬಾಣ ಪ್ರಯೋಗಿಸದೆ ನಿಂತುಬಿಟ್ಟನು. ಪಾಖಂಡಿಯನ್ನು ಕೊಲ್ಲುವುದು ಪಾಪವೆಂದು ಬಗೆದು ಅವನನ್ನು ಕೊಲ್ಲದೆ ಹಿಂತಿರುಗಿದನು. ಮತ್ತೆ ಅತ್ರಿಋಷಿಗಳು "ಕುಮಾರ ! ಯಜ್ಞವನ್ನು ಹಾಳು ಮಾಡುತ್ತಿರುವ ಇಂದ್ರನನ್ನು ಸಂಹರಿಸು. ನಿನಗೆ ಪಾಪ ಬರುವುದಿಲ್ಲ" ಎಂದು ಆಶ್ವಾಸನವಿತ್ತರು, ದೊಡ್ಡವರ ಮಾತು ಗ್ರಾಹ್ಯವೆಂದು ಆ ಪೃಥುಸುತನು ಆ ಇಂದ್ರನ ಹಿಂದೆಯೇ ಕೋಪಗೊಂಡು ಓಡಿದನು. ಇಂದ್ರನು ಕುದುರೆಯನ್ನೂ, ತಾನು ಹಾಕಿದ್ದ ವೇಷವನ್ನೂ ಅಲ್ಲಿಯೇ ಬಿಟ್ಟು ಕಣ್ಮರೆಯಾಗಿ ನಿಂತನು. ಧೀರನಾದ ಆ ಕುಮಾರನು ಅಶ್ವವನ್ನು ತಂದು ತಂದೆಗೆ ಒಪ್ಪಿಸಿದನು. ಅವನ ಅದ್ಭುತ ಸಾಹಸವನ್ನು ನೋಡಿ ಮಹರ್ಷಿಗಳೆಲ್ಲರೂ ಅವನನ್ನು "ವಿಜಿತಾಶ್ವ"ನೆಂದು ಕರೆದರು. ಇಂದ್ರನು ತಿರುಗಿ ಕಾರ್ಗತ್ತಲೆಯನ್ನು ಸೃಷ್ಟಿಸಿ ಯಾಗದ ಕುದುರೆಯನ್ನು ಅಪಹರಿಸಿದನು. ಆಗಲೂ ಅತ್ರಿಋಷಿಗಳು ಕಪಾಲ, ಡಮರುಗಪಾಣಿಯಾಗಿ, ಕಾಪಾಲಿ ವೇಷದಿಂದ ಕುದುರೆಯನ್ನು ತೆಗೆದುಕೊಂಡು ಗಗನದಲ್ಲಿ ಓಡುತ್ತಿರುವ ಇಂದ್ರನನ್ನು ವಿಜಿತಾಶ್ವನಿಗೆ ತೋರಿಸಿದರು. ವಿಜಿತಾಶ್ವನಿಗೆ ಕಾಣಿಸಲಿಲ್ಲ. ಆದರೂ ಬಿಲ್ಲಿಗೆ ಬಾಣವನ್ನು ಹೂಡಿ ನಿಂತನು. ಇಂದ್ರನು ಕಾಪಾಲಿ ವೇಷವನ್ನೂ, ಕುದುರೆಯನ್ನೂ ಬಿಟ್ಟು ಕಣ್ಮರೆಯಾದನು. ವಿಜಿತಾಶ್ವನು ಕುದುರೆಯನ್ನು ಹಿಂದಕ್ಕೆ ತಂದನು. ಮೂಢರು ಅನ್ಯಥಾ ಜ್ಞಾನಿಗಳಾದ್ದರಿಂದ ಇಂದ್ರನು ತ್ಯಜಿಸಿದ ದೋಷಯುಕ್ತವಾದ ಆ ವೇಷವನ್ನು ತಮಗೆ ತಕ್ಕುದಾಗಿದೆಯೆಂದು ಗ್ರಹಿಸಿದರು. ಇಂದ್ರನು ಆಗ ಧರಿಸಿದ್ದ ಆ ವೇಷಗಳೆಲ್ಲ ಪಾಖಂಡ ವೇಷಗಳು. ಪೃಥುರಾಜನಿಗೆ ಇಂದ್ರನ ಮೇಲೆ ಬಹಳ ಕೋಪ ಬಂದು ಅವನನ್ನು ತೀರಿಸಿಯೇ ಬಿಡಬೇಕೆಂದು ನಿಶ್ಚಯಿಸಿದನು. ಇದನ್ನು

ತಿಳಿದ ಮಹರ್ಷಿಗಳು "ಮಹಾರಾಜ ! ಯಜ್ಞಕಾಲದಲ್ಲಿ ಇತರ ಹಿಂಸೆಯು ನಿಂದ್ಯವು. ಮಂತ್ರದಿಂದ ಮಹೇಂದ್ರನನ್ನು ಆಕರ್ಷಿಸಿ ಹೋಮಮಾಡಿ ಬಿಡುವೆವು" ಎಂದರು. ಋತ್ವಿಜರು ಅದರಂತೆ ಹೋಮದ ಸೌಟಿನಲ್ಲಿ ಇಂದ್ರನನ್ನು ಆಕರ್ಷಿಸಿ ಇನ್ನೇನು ಹೋಮ ಮಾಡಬೇಕೆಂದಾಗ ಬ್ರಹ್ಮದೇವರು ಬಂದು ತಡೆದು

**ಬ್ರಹ್ಮ :** ಯಜ್ಞವು ಇಂದ್ರನಿಗೆ ಶರೀರ. ಹೀಗಿರುವಾಗ ಯಜ್ಞದಲ್ಲಿ ಅವನನ್ನು ಕೊಲ್ಲಬಹುದೆ ? ಪೃಥುವಿನ ಈ ಯಜ್ಞವನ್ನು ನಿಲ್ಲಿಸಬೇಕೆಂದೇ ಇಂದ್ರನು ಹೀಗೆ ಮಾಡಿರುವನು. ಈಗ ಅವನೊಡನೆ ಸ್ನೇಹವನ್ನು ಬೆಳಸಬೇಕು. ಇಲ್ಲವಾದರೆ ತಿರುಗಿ ಪಾಖಂಡಗಳನ್ನು ಸೃಷ್ಟಿಸುವನು. ಅದರಿಂದ ಜನರು ದಿಗಂಬರರು, ಕಾಪಾಲಿಗಳೂ ಆಗಿ ಧರ್ಮವು ಕೆಡುವುದು. ಪೃಥರಾಜನೇ ! ನೀನು 99 ಅಶ್ವಮೇಧ ಮಾಡಿದವನೆಂದೇ ಕೀರ್ತಿಪಡಿ, ಇಷ್ಟರಿಂದಲೇ ನಿನ್ನ ಸ್ವರೂಪವು ಪೂರ್ಣವಾಗುವುದು. ಇಂದ್ರನೂ ಮತ್ತು ನೀನೂ ಶ್ರೀಹರಿಯ ವಿಶೇಷ ಆವೇಶವುಳ್ಳವರಾದ ಕಾರಣ ಅವನಲ್ಲಿ ದ್ವೇಷವನ್ನು ಬಿಡು. ನಿನಗೆ ಮಂಗಳವಾಗುವುದು. ಕೊನೆಯ ಯಜ್ಞವು ಕೊನೆಗಾಣಲಿಲ್ಲವೆಂದು ಕೊರಗಬೇಡ. ನನ್ನ ಮಾತನ್ನು ನೆರವೇರಿಸು.

(ಹೀಗೆ ಹೇಳಲು ಪೃಥು ರಾಜನು ಇಂದ್ರನೊಡನೆ ಸ್ನೇಹ ಬೆಳೆಸಿದನು. ಒಳಿಕ ಅವಭೃತಸ್ನಾನ ಮಾಡಿದನು. ದೇವತೆಗಳೆಲ್ಲರೂ ಅವನಿಗೆ ವರವನ್ನು ಕೊಟ್ಟರು. ತೃಪ್ತರಾದ ಬ್ರಾಹ್ಮಣರು ದೀರ್ಘಾಯುಷ್ಮಂತನಾಗೆಂದು ಹರಸಿದರು.)

## ಹತ್ತೊಂಭತ್ತನೆಯ ಅಧ್ಯಾಯ ಮುಗಿಯಿತು

ಶ್ರೀಹರಿಯು ದೇವೇಂದ್ರನೊಡನೆ ಪೃಥರಾಜನ ಬಳಿಗೆ ಬಂದನು.

**ಹರಿ :** ರಾಜನೇ ! ನಿನ್ನ ಯಾಗಕ್ಕೆ ವಿಘ್ನಮಾಡಿದ ಇಂದ್ರನ ಅಪರಾಧವನ್ನು ಕ್ಷಮಿಸು. ಸಜ್ಜನರು ಉಪಕಾರಶೀಲರು. ದೇಹಾಭಿಮಾನದಿಂದ ಎಂದೂ ಭೂತ ದ್ರೋಹ ಮಾಡಲು ಬಯಸುವುದಿಲ್ಲ. ಶಾಸ್ತ್ರಜ್ಞರಾದ ನಿನ್ನಂತಹವರೂ ದೇಹಾಭಿಮಾನವುಳ್ಳವರಾಗಿ ಪ್ರತಿಕೂಲರಿಗೆ ದ್ರೋಹವೆಣಿಸುವುದಾದರೆ ದೊಡ್ಡವರನ್ನು ಸೇವಿಸಿ ಸಂಪಾದಿಸಿದ ಜ್ಞಾನಕ್ಕೆ ಫಲವೇ ಇಲ್ಲದೆ ಕೇವಲ ಶ್ರಮವೇ ಫಲವಾಗುವುದು. ಆದ್ದರಿಂದ ಪಂಡಿತನು ಪ್ರಾಣಿದ್ರೋಹವೆಸಗುವ ಅಭಿಮಾನಮಾಡುವುದಿಲ್ಲ. ದೇಹದಲ್ಲಿ ಆತ್ಯಾಸಕ್ತಿ ಇಡದ ಯಾವ ಜ್ಞಾನಿಯು ತಾನೇ ಮನೆ, ಮಕ್ಕಳು, ಧನ, ಮಡದಿಯರಲ್ಲಿ ಮಮತೆ ಮಾಡಿಯಾನು ? ಶ್ರೀಹರಿಯು ಸರ್ವಗುಣ ಪರಿಪೂರ್ಣ ಸ್ವತಂತ್ರ, ಸರ್ವೋತ್ತಮ, ಜಡದೇಹರಹಿತ, ಸಾಕ್ಷಿ, ಸಮರಹಿತ, ನಿರ್ದುಃಖಿ, ನಿರ್ಗುಣ, ಸರ್ವತ್ರವ್ಯಾಪ್ತ, ಜಗದ್ಭಿನ್ನ, ಸಮಾಭ್ಯಧಿಕಶೂನ್ಯ, ಸರ್ವಜಗತ್ಸ್ವಾಮಿ, ಅಸದೃಶ, ದುಃಖರಹಿತನು. ಇಂತಹ ಮಹಾಮಹಿಮನನ್ನು ಜ್ಞಾನಿಯು ತಿಳಿದಾ

ಗಲೇ ದೇಹಾಭಿಮಾನವು ಹೋಗುವುದು. ನಿಷ್ಕಾಮವಾಗಿ, ವಿಹಿತ ಧರ್ಮಗಳಿಂದ ನನ್ನನ್ನು ಆರಾಧಿಸುತ್ತಿದ್ದರೆ, ಅವನ ಮನಸ್ಸು ಕ್ರಮವಾಗಿ ಶುದ್ಧವಾಗುವುದು. ಬಳಿಕ ನನ್ನ ಅಪರೋಕ್ಷವಾಗುವುದು, ಹಾಗೆ ನನ್ನ ಕಂಡವನು ನನ್ನ ಅನುಗ್ರಹ ದಿಂದ ಮೋಕ್ಷವನ್ನು ಹೊಂದುವನು. ಚೇತನ ಮತ್ತು ಜಡ ಈ ಎರಡು ಬಗೆಯಾದ ಮನಸ್ಸೇ ಸಂಸಾರಕ್ಕೆ ಕಾರಣವು. ಅದರ ನಿವೃತ್ತಿಗಾಗಿ ಜ್ಞಾನ ಭಕ್ತಿಯನ್ನು ಸಂಪಾದಿಸಬೇಕು.

ರಾಜನೇ ! ದ್ವಂದ್ವ ಸಹಿಷ್ಣುವಾಗಿ, ಸಮಬುದ್ಧಿ ಉಳ್ಳವನಾಗಿ, ಜಿತಮನಸ್ಕ ನಾಗಿ, ನನ್ನಿಂದ ಸೃಷ್ಟರಾದ ಬ್ರಾಹ್ಮಣಾದಿಗಳ ಸಹಾಯದಿಂದ ನಿನ್ನ ಧರ್ಮವಾದ ಪ್ರಜಾ ರಕ್ಷಣೆ ಮಾಡಿಕೊಂಡಿರು. ಹೀಗೆ ಮಾಡಿದರೇ ನಿನಗೆ ಮುಕ್ತಿ. ಸನಕಾದಿಗಳು ತಾವಾಗಿಯೇ ನಿನ್ನ ಮನೆಗೆ ಬರುವವರಿದ್ದಾರೆ. ಇದಕ್ಕೆ ನಿನ್ನ ಧರ್ಮಾಚಾರಣೆಯೇ ಕಾರಣ. ನಿನಗೆ ಒಲಿದಿರುವ ನನ್ನಿಂದ ಏನಾದರೂ ವರವನ್ನು ಪಡೆದುಕೋ.

(ಹೀಗೆ ಶ್ರೀಹರಿಯು ಹೇಳಲು ಪೃಥು ರಾಜನು ಇಂದ್ರನನ್ನು ಆಲಿಂಗಿಸಿ ಅವನಲ್ಲಿ ದ್ವೇಷವನ್ನು ಬಿಟ್ಟುಬಿಟ್ಟನು. ಶ್ರೀಹರಿಯನ್ನು ಪೂಜಿಸಿದನು. ಅವನ ಪಾದವನ್ನು ಗಟ್ಟಿಯಾಗಿ ಹಿಡಿದನು. ಗೋವಿಂದನ ದರ್ಶನವನ್ನು ಮಾಡುತ್ತಿರು ವಾಗ ಅವನ ಕಣ್ಣುಗಳಲ್ಲಿ ನೀರು ಸುರಿಯಿತು. ಕೊರಳ ಸೆರೆ ಉಬ್ಬಿತು. ಮಾತು ಹೊರಡದಂತಾಯಿತು. ಮನಸ್ಸಿನಿಂದಲೇ ಹರಿಯನ್ನು ಧ್ಯಾನಿಸಿ ಕಣ್ಣೀರನ್ನು ಒರೆಸಿ ಕೊಂಡು ಹೀಗೆ ಪ್ರಾರ್ಥಿಸುವನು :–)

**ಪೃಥು :** ಪ್ರಭೋ ! ಸ್ರಕ್ಚಂದನವನಿತಾದಿ ಭೋಗವು ತಾನಾಗಿಯೇ ದೊರೆಯುವುದು. ಇಂತಹುದನ್ನು ಮುಕ್ತಿಸಾಧನನಾದ ನಿನ್ನಿಂದ ಬೇಡುವುದು ಕುಬೇರನನ್ನು ಹುರುಳಿ ಹೊಟ್ಟುಕೊಡೆಂದು ಬೇಡಿದಂತಾಗುತ್ತದೆ. ನನಗೆ ಕೈವಲ್ಯವೇ ಬೇಡವಾಗಿರುವಾಗ ಸ್ವರ್ಗಾದಿಗಳು ಬೇಡವಾಗಿಲ್ಲವೆಂದು ಹೇಳಬೇಕೇನು ? ತತ್ತ್ವ ಜ್ಞಾನವನ್ನು ವೃದ್ಧಿ ಮಾಡತಕ್ಕ ನಿನ್ನ ಕಥಾಮೃತವನ್ನು ಕೇಳುವಂತೆ ಅನುಗ್ರಹಿಸು. ಮತ್ತೊಂದು ವರವು ನನಗೆ ಅಪೇಕ್ಷಿತವಾಗಿಲ್ಲ. ಸ್ವಾಮಿಯೇ ! ನೀನು ಮಂಗಳಕರ ವಾದ ಕೀರ್ತಿಉಳ್ಳವನು. ನಿನ್ನ ಕೀರ್ತಿಯನ್ನು ಆವೃತ್ತಿಮಾಡುವ ಇಚ್ಛೆಯಿಂದಲೂ ನಿನ್ನ ಗುಣಗಳ ಉಪದೇಶವನ್ನು ಹೊಂದಬೇಕೆಂಬ ಇಚ್ಛೆಯಿಂದಲೂ, ಲಕ್ಷ್ಮೀ ದೇವಿಯೇ ನಿನ್ನ ಕೀರ್ತಿಶ್ರವಣವನ್ನು ಅಪೇಕ್ಷಿಸುವಳು. ನಿನ್ನ ಕೀರ್ತಿಶ್ರವಣವು ಮಹಾಫಲದಾಯಕವಾಗಿರುವ ಕಾರಣ ಪುರುಷೋತ್ತಮನೂ, ಸರ್ವಗುಣಾಶ್ರಯನೂ ಆದ ನಿನ್ನನ್ನು ಆಸಕ್ತಿಯಿಂದ ಲಕ್ಷ್ಮೀದೇವಿಯಂತೆ ನಿನ್ನನ್ನು ಸೇವಿಸುವೆನು. ನಮ್ಮಿರ್ವರಿಗೂ ನಿನ್ನ ಪಾದಗಳೇ ಆಶ್ರಯಗಳು. ನಾವಿಬ್ಬರೂ ಸ್ವಾಮಿಯಾದ ನಿನ್ನನ್ನೇ ಸೇವಿಸುತ್ತಿರುವೆವು. ಇಂದ್ರನಿಗೂ, ನನಗೂ ವೈಮನಸ್ಯ ಬಂದಂತೆ

ಲಕ್ಷ್ಮಿಗೂ, ನನಗೂ ಎಂದೂ ಬರುವುದಿಲ್ಲ. ಒಬ್ಬನೇ ಸ್ವಾಮಿಯನ್ನು ಸೇವಿಸತಕ್ಕವರಿಗೆ ಪರಸ್ಪರ ಕಲಹವೂ, ವಿರೋಧವೂ ಬರುವುದು ಸಹಜ. ಆದರೂ ನಾವಿಬ್ಬರೂ ಮಾಡುತ್ತಿರುವ ಹರಿಸೇವೆಯೆಂಬ ಕರ್ಮದಲ್ಲಿ, ನೀನು ಅಲ್ಪಕರ್ಮಕ್ಕೂ ಮಹತ್ತಾದ ಫಲ ಬರುವಂತೆ ಮಾಡುವೆಯಾಗಿ ವಿರೋಧಕ್ಕೆ ನಿಮಿತ್ತವೇ ಇಲ್ಲ. ಲಕ್ಷ್ಮಿಯ ಭಕ್ತಿ ಯಾರಿಗೂ ಇಲ್ಲ. ಆದ್ದರಿಂದ ಅವಳಲ್ಲಿ ನಿನಗೆ ಹೆಚ್ಚಿಗೆ ವಾತ್ಸಲ್ಯ. ನಿನ್ನ ಬಂಧಕಶಕ್ತಿಯಿಂದ ಮೋಹಿತನಾಗಿ, ಸ್ವರ್ಗಾದಿಗಳನ್ನು ಬಯಸಿ, ಜೀವನು ಹಾಳಾಗುತ್ತಿರುವಾಗ ನೀನು ವರವನ್ನು ಕೇಳೆಂದರೆ ಅವನು ಇನ್ನೂ ಕೆಡುವನು. ಪ್ರಾರ್ಥನೆಯಿಲ್ಲದೆ ತಂದೆಯು ಮಗನಿಗೆ ಹಿತವನ್ನು ಮಾಡುವಂತೆ ನಮಗೆ ಹಿತವಾದ ಕಾರ್ಯವನ್ನು ಮಾಡು.

**ಭಗವಂತ :** ರಾಜನೇ ! ಭಗವಂತನೇ ಮುಕ್ತಿಯಲ್ಲಿ ಪ್ರಾಪ್ಯ ಪುರುಷನು. ಅವನನ್ನು ಬಿಟ್ಟು ಉಳಿದುದೆಲ್ಲವೂ ಹೇಯವು. ನೀನು ಬೇಡುತ್ತಿರುವ ಬಗೆಯು ಉಚಿತವಾಗಿದೆ. ನನಗೆ ಬಹು ಪ್ರೀತಿಯಾಯಿತು. ನನ್ನ ಮಾತಿನಂತೆ ದುಸ್ತ್ಯಜವಾದ ಕೋಪವನ್ನು ಬಿಟ್ಟುದೇ ನನ್ನ ಶ್ರೇಷ್ಠವಾದ ಆರಾಧನೆ.

(ಪೃಥುರಾಜನು ಶ್ರೀಹರಿಯನ್ನೂ, ಅಲ್ಲಿದ್ದ ದೇವಾದಿ ಸರ್ವರನ್ನೂ ಪೂಜಿಸಿದನು. ಹೊರಟ ಹರಿಯನ್ನು ಅವರೆಲ್ಲರೂ ಹಿಂಬಾಲಿಸಿದರು. ರಾಜನು ವಾಸುದೇವನಿಗೆ ನಮಸ್ಕರಿಸಿ ತನ್ನ ಪಟ್ಟಣಕ್ಕೆ ಬಂದು ಸೇರಿದನು.)

### ಇಪ್ಪತ್ತನೆಯ ಅಧ್ಯಾಯ ಮುಗಿದುದು

**ಮೈತ್ರೇಯ :** ಪೃಥುರಾಜನು ಒಮ್ಮೆ ಯಜ್ಞವನ್ನು ಆರಂಭಿಸಿ ಆ ಸಭೆಯಲ್ಲಿದ್ದವರನ್ನು ಕುರಿತು ಹೀಗೆ ಹೇಳುತ್ತಾನೆ.

ಪ್ರಜೆಗಳಿರಾ ! ಹರಿಯು ಪ್ರೀತನಾಗಲಿ ಎಂದು ರಾಜನು ಪ್ರಜೆಗಳನ್ನು ರಕ್ಷಿಸಿದರೆ, ಉತ್ತಮ ಲೋಕವನ್ನು ಹೊಂದುವನು. ಹಾಗಿಲ್ಲದೆ ವಿಪರೀತ ತೆರಿಗೆ ಹಾಕಿ ವಸೂಲಿ ಮಾಡಿ ಹಿಂಸಿಸಿದರೆ ಪಾಪಿಯಾಗಿ ಪ್ರಜೆಗಳಿಂದ ಬರುವ ಆರನೆಯ ಒಂದು ಭಾಗದ ಪುಣ್ಯವನ್ನು ಕಳೆದುಕೊಳ್ಳುವನು. ನಮ್ಮಪ್ಪನು ದೇವರೇ ಇಲ್ಲವೆಂದು ಹೇಳುತ್ತಿದ್ದನು. ಸ್ವರ್ಗಾದಿ ಲೋಕಗಳಲ್ಲಿ ದೇವತೆಗಳೂ, ಸಜ್ಜನ ಮಾನವರೂ ಪ್ರಕಾಶಮಾನರಾಗಿ, ಯೋಗ್ಯತಾನುಸಾರ ಪೂರ್ಣರಾಗಿರುವರು. ಇದು ಶಾಸ್ತ್ರದಿಂದಲೂ, ಪ್ರತ್ಯಕ್ಷವಾಗಿಯೂ ಕಾಣುವುದು. ಅಂತಹವರು ಇರುವುದೇ ಫಲಕೊಡುವ ಈಶ್ವರನು

ಇದ್ದಾನೆಂಬುದಕ್ಕೆ ಪ್ರಮಾಣ. ರಾಜ್ಯ ಸ್ವರ್ಗ, ಮುಕ್ತಿ ಇವು ಶ್ರೀಹರಿಯಿಂದಲೇ ಈಶ್ವರನು ಇದ್ದಾನೆಂಬುದಕ್ಕೆ ಪ್ರಮಾಣ. ರಾಜ್ಯ ಸ್ವರ್ಗ, ಮುಕ್ತಿ ಇವು ಶ್ರೀ ಹರಿಯಿಂದಲೇ ದೊರೆಯತಕ್ಕವು. ಆದ್ದರಿಂದ ಸರ್ವೋತ್ತಮನಾದ ವಾಸುದೇವನನ್ನು ಎಲ್ಲರೂ ಭಜಿಸಿರಿ. ಕ್ಷತ್ರಿಯ ಬಂಧುಗಳೇ ! ನೀವೆಲ್ಲ ಬ್ರಾಹ್ಮಣರನ್ನು ಪೂಜಿಸಿರಿ. ಆದರಿಂದ ಹರಿಯು ಪ್ರೀತನಾಗುವನು. ಬ್ರಾಹ್ಮಣ, ಗೋವು (ವೇದ), ಶ್ರೀ ಹರಿ ಇವರು ನನ್ನಲ್ಲಿ ಪ್ರಸನ್ನರಾಗಿ ಅನುಗ್ರಹಿಸುತ್ತಿರಲಿ.

**ದೇವಾದಿಗಳು :** "ಸುತನಿಂದ ಯೋಗ್ಯ ಚೇತನನು ಉತ್ತಮಲೋಕವನ್ನು ಹೊಂದುತ್ತಾನೆ"ಎಂಬ ಶ್ರುತಿಯು ಸತ್ಯವು. ಸತ್ಪುತ್ರನಾದ ನಿನ್ನಿಂದ ರಾಜಸರವೇನನು ಸ್ವರ್ಗವನ್ನು ಹೊಂದಿದನು. ಪ್ರಹ್ಲಾದನಿಂದ ಜಯನೂ ತಮಸ್ಸಿಗೆ ಬೀಳದೆ ಊರ್ಧ್ವಲೋಕವನ್ನೇ ಸೇರಿದನು. ಅಪ್ಪಾ ಪೃಥುರಾಜನೇ ! ನೀನು ಸದ್ಭಕ್ತನು. ಬಹುಕಾಲ ಬದುಕಪ್ಪ ! ಮುಕುಂದನ ಮಹಿಮೆಯನ್ನು ಹೇಳಿದಿ. ನಾವು ಧನ್ಯರು. ನಿನ್ನ ಹಿತೋಪದೇಶವು ನರಕ ದುಃಖವನ್ನೂ, ಅಜ್ಞಾನವನ್ನೂ ತಪ್ಪಿಸುವುದು. (ರಾಜಾಂತರ್ಯಾಮಿ ರಾಜರಾಜೇಶ್ವರನನ್ನು ಕುರಿತು) ಸ್ವಾಮಿಯೇ ! ಈ ರಾಜನಲ್ಲಿದ್ದು, ವಿಪ್ರಕುಲ ರಕ್ಷಕನಾಗಿ, ಪೂರ್ಣಗುಣನೂ, ಪೂರ್ಣಶಕ್ತನೂ ಆಗಿರುವ ಶ್ರೀನಾರಾಯಣನಿಗೆ ನಮಸ್ಕಾರ !

**ಜತೆ**

ಹರಿಕರ್ತೃತ್ವ ತಿಳಿದು ತಾರತಮ್ಯ ಪಂಚಭೇದ
ಅರಿತವರಿಗೆ ಒಲಿವ ಗೋಪಾಲ ವಿಠಲ ॥8॥

**ಇಪ್ಪತ್ತೊಂದನೆಯ ಅಧ್ಯಾಯ ಮುಗಿದುದು**

ಆಗ ಸನಕಾದಿಗಳು ಬಂದರು. ಪೃಥುರಾಜನು ಅವರನ್ನು ಪೂಜಿಸಿದನು.

**ಪೃಥು :** ತಮ್ಮ ದರ್ಶನವು ಪುಣ್ಯವಿಲ್ಲದೆ ಲಭಿಸದು. ಹಿಂದಿನ ಜನ್ಮದ ಹರಿಪೂಜಾ ಫಲದಿಂದಲೇ ತಮ್ಮ ದರ್ಶನವಾಯಿತು. ತಮ್ಮ ಸೇವೆಯು ಯಾರಿಗೆ ದೊರೆಯುವುದೋ ಅವರು ಕಡುಬಡವರಾದರೂ ಭಾಗ್ಯವಂತರೇ ಸರಿ. ವಿಷಯಾಸಕ್ತರಾದ ನಮಗೆ ಕ್ಷಣ ಗಂಡ, ದಿನಗಂಡಗಳಿರುವಾಗ ಕ್ಷೇಮವು ನಮಗೆಲ್ಲಿಂದ ಬರಬೇಕು ? ಪ್ರಿಯಾಪ್ರಿಯಗಳಲ್ಲಿ ಸಮಚಿತ್ತರಾಗಿ ಹರಿಯಲ್ಲೇ ನೆಟ್ಟ ಮನಸ್ಸುಳ್ಳ ತಮಗೆ ದುಃಖ ಸಂಭವವೇ ಇಲ್ಲ. ಆದ್ದರಿಂದ ಕುಶಲವೆ ? ಎಂದು ತಮ್ಮನ್ನು ಕೇಳಬೇಕಾಗಿಯೇ ಇಲ್ಲ. ಅಮಂಗಳ ಸಮುದ್ರದಲ್ಲಿ ಮುಳುಗಿರುವ ನಮ್ಮಂತಹವರಿಗೆ ಕುಶಲವು ಅಂದರೆ ಮುಕ್ತಿಯು ಆಗುವ ಪ್ರಕಾರವು ಯಾವುದು?

**ಸನತ್ಕುಮಾರ :** ಶ್ರವಣಭಕ್ತಿಯು ಪಾಪ ಮತ್ತು ವಿಷಯಾಸಕ್ತಿಯೆಂಬ ಮನಸ್ಸಿನ ಮಲವನ್ನು ಪರಿಹರಿಸುತ್ತದೆ. ಅದರಿಂದ ದೇವರನ್ನು ಬಿಟ್ಟು ಉಳಿದ ವಸ್ತುಗಳಲ್ಲೆಲ್ಲಾ ವೈರಾಗ್ಯ ಬರುತ್ತದೆ. ಅದರಿಂದ ಶ್ರೀಹರಿಯಲ್ಲಿ ದೃಢವಾದ ಭಕ್ತಿಯುಂಟಾಗುತ್ತದೆ. ಈ ವೈರಾಗ್ಯ ಭಕ್ತಿಗಳೆರಡೂ ಮುಕ್ತಿಗೆ ಮುಖ್ಯ ಸಾಧನಗಳು. ಇವು ಶ್ರೀಹರಿಯಲ್ಲಿ ಶ್ರದ್ಧೆ, ವಿಹಿತಾಚರಣೆ, ಜಿಜ್ಞಾಸೆ ಇತ್ಯಾದಿಗಳಿಂದ ಉಂಟಾಗುವುವು. ದೃಢವಾದ ಹರಿಭಕ್ತಿಯು ಜೀವರ ಬಾಹ್ಯೋಪಾಧಿಯಾದ ಲಿಂಗ ಶರೀರವನ್ನು ದಹಿಸುವುದು. ಜೀವನ ಸ್ವರೂಪವಾದರೋ ನಾಶರಹಿತವಾಗಿಯೇ ಇದೆ. ಅದರಿಂದಲೇ ಆನಂದವನ್ನು ಮುಕ್ತಿಯಲ್ಲಿ ಅನುಭವಿಸಲಿಕ್ಕೆ ಬರುವುದು. ವಿಷಯ ಚಿಂತನೆ ಅನರ್ಥಕರ. ಪಂಡಿತನಾಗಿದ್ದರೂ ದುಷ್ಟರ ಸಹವಾಸವನ್ನು ಮಾಡಬಾರದು. ನಾಲ್ಕು ಬಗೆಯ ಪುರುಷಾರ್ಥಗಳಲ್ಲಿ ಮುಕ್ತಿಯೇ ಶ್ರೇಷ್ಠ. ಈ ಮುಕ್ತಿಯು ದೊರೆಯಬೇಕಾದರೆ ಶ್ರೀಹರಿಯೇ ಸೃಷ್ಟ್ಯಾದಿ ಅಷ್ಟಕರ್ತನು ಎಂಬ ಜ್ಞಾನವು ಆವಶ್ಯಕ ಮತ್ತು ಜೀವ ಪರಮಾತ್ಮರು ಭಿನ್ನರು ಎಂಬ ಜ್ಞಾನವು ಅಗತ್ಯವಾಗಿ ಬೇಕು. ಹಿಂದೆ ಮುಕ್ತಿಯನ್ನು ಹೊಂದಿದವರೆಲ್ಲರೂ ಭಕ್ತಿಯನ್ನು ಹೊಂದಿರುವುದರಿಂದ ನೀನೂ ಅಂತಹ ಭಕ್ತಿಯಿಂದ ಶ್ರೀಹರಿಯನ್ನು ಭಜಿಸು.

**ಪೃಥು :** ಈ ಸಕಲ ಆಸ್ತಿಯೂ ತಮ್ಮದೇ ಆಗಿದೆ. ನನ್ನದಾಗಿ ಯಾವುದೂ ಇಲ್ಲ. ತಮಗೆ ಗುರುದಕ್ಷಿಣೆ ಯಾವುದನ್ನು ಕೊಡಲಿ? ಇದೋ! ಕೈ ಮುಗಿಯುವೆನು. ಇದಕ್ಕಿಂತ ಮೇಲಾದ ಪ್ರತಿ ಉಪಕಾರವು ಯಾವುದೂ ಇಲ್ಲ.

(ಹೀಗೆ ರಾಜನು ಹೇಳಲು ಪ್ರೀತರಾದ ಸನಕಾದಿಗಳು ರಾಜನನ್ನು ಹರಸಿ ಹೊರಟುಹೋದರು. ಪೃಥುರಾಜನು ಇಂದ್ರಾದಿಗಳಂತೆ ಶತ್ರುದುರ್ಜಯನಾಗಿರುವುದೇ ಮೊದಲಾದ ಸದ್ಗುಣಗಳಿಂದ ಸಹಿತವಾಗಿ ಪ್ರಜೆಗಳನ್ನು ರಕ್ಷಿಸಿದನು.

**ಇಪ್ಪತ್ತೆರಡನೆಯ ಅಧ್ಯಾಯ ಮುಗಿದುದು**

ಪೃಥುರಾಜನು ತಾನು ಬಂದ ಕಾರ್ಯವು ಮುಗಿದ ಮೇಲೆ ಮಕ್ಕಳಿಗೆ ರಾಜ್ಯವನ್ನು ವಹಿಸಿ, ಪತ್ನಿಯ ಸಹಿತನಾಗಿ ವನಕ್ಕೆ ಹೋಗಿ, ತಪಸ್ಸನ್ನು ಮಾಡಿ, ಮರೆಯಾಗಿದ್ದ ಬಿಂಬಾಪರೋಕ್ಷವನ್ನು ಹೊಂದಿ, ಪ್ರಾರಬ್ಧಕರ್ಮವು ನಾಶವಾದಾಗ, ಸ್ಥೂಲ ದೇಹವನ್ನು ಬಿಟ್ಟು ಸದ್ಗತಿಯನ್ನು ಹೊಂದಿದನು. ಅವನ ಪತ್ನಿಯೂ ಸಹಗಮನದಿಂದ ಪತಿಸಾಲೋಕವನ್ನು ಪಡೆದಳು. ದೇವತಾಸ್ತ್ರೀಯರು ಅವಳ ವ್ಯಾಪಾರವನ್ನು ನೋಡಿ ಸ್ತುತಿಸಿದರು.

ಈ ಪೃಥುರಾಜನ ಚರಿತ್ರೆಯನ್ನು ಪ್ರತಿದಿನವೂ ಶ್ರದ್ಧೆಯಿಂದ ಹೇಳಿ ಕೇಳುವವರಿಗೆ ಹರಿಭಕ್ತಿಯು ದೃಢವಾಗುವುದು.

**ಇಪ್ಪತ್ತಮೂರನೆಯ ಅಧ್ಯಾಯ ಮುಗಿದುದು**

ಪೃಥುರಾಜನ ವಂಶದಲ್ಲಿ ಹುಟ್ಟಿದ್ದ ಹವಿರ್ಧಾನನೆಂಬ ರಾಜನ ಪುತ್ರನಾದ **ಬರ್ಹಿಷ್ಮಂತ**ನೆಂಬ ರಾಜನು ಎಡಬಿಡದೆ ಯಜ್ಞಕರ್ಮಗಳಲ್ಲಿಯೇ ಆಸಕ್ತನಾಗಿ ದರ್ಭೆ ಗಳನ್ನು ಪೂರ್ವಾಗ್ರವಾಗಿ ನೆಲದಮೇಲೆ ಹಾಕುತ್ತಾ ಬಂದುದರಿಂದ ಅವನಿಗೆ **ಪ್ರಾಚೀನ ಬರ್ಹಿ** ಎಂಬ ಹೆಸರು ಪ್ರಸಿದ್ಧವಾಯಿತು. ಅವನಿಗೆ **ಶತದ್ರುತಿ** ಎಂಬ ಪತ್ನಿಯಲ್ಲಿ ಪ್ರಚೇತಸರು ಎಂಬ ಹೆಸರುಳ್ಳ, ವ್ರತಾಚಾರಗಳಲ್ಲಿ ಒಂದೇ ವಿಧವಾಗಿ ನಡೆಯುವ ಹತ್ತು ಮಂದಿ ಪುತ್ರರು ಹುಟ್ಟಿದರು. ತಂದೆಯು ಇವರಿಗೆ ಪುತ್ರರನ್ನು ಸೃಷ್ಟಿಸಿರಿ ಯೆಂದು ಅಪ್ಪಣೆ ಮಾಡಿದನು. ಅವರು ಹರಿಯನ್ನು ಆರಾಧಿಸಿ ಪ್ರಜಾಸೃಷ್ಟಿಗೆ ತಕ್ಕ ಸಿದ್ಧಿಯನ್ನು ಪಡೆದು ಬರಬೇಕೆಂದು ಉತ್ತರ ಸಮುದ್ರದ ಬಳಿಗೆ ಬಂದರು. ಅಲ್ಲಿದ್ದ ಸರೋವರದಿಂದ ಶಿವನು ಪರಿವಾರದೊಡಗೂಡಿ ಹೊರಗೆದ್ದು ಬಂದನು. ಪ್ರಚೇತಸರು ಅವನಿಗೆ ನಮಸ್ಕರಿಸಿದರು.

**ಶಿವ :** (ಪ್ರಸನ್ನನಾಗಿ) ನೀವು ಯಾರು ? ಏಕೆ ಬಂದಿರಿ ? ಎಂಬುದು ನನಗೆ ಗೊತ್ತು. ನಿಮ್ಮನ್ನು ಅನುಗ್ರಹಿಸಬೇಕೆಂದೇ ದರ್ಶನವನ್ನು ಕೊಟ್ಟಿರುವೆನು. ಹರಿಭಕ್ತನು ನನಗೆ ಪ್ರಿಯನಾದ್ದರಿಂದ ನೀವು ನನ್ನ ಅನುಗ್ರಹಕ್ಕೆ ಪಾತ್ರರು. ಋಜು ಜೀವನಂತೆ ನಾನೂ ಹರಿಭಕ್ತನಾದ್ದರಿಂದ ಭಕ್ತರಾದ ನೀವೂ ಭಗವಂತನಂತೆ ನನಗೆ ಪ್ರಿಯರಾಗಿರುವಿರಿ. ನಿಮಗೆ ಮೋಕ್ಷವನ್ನು ಸಂಪಾದಿಸಿಕೊಡುವ ಜಪದ ಮಂತ್ರವನ್ನು ಉಪದೇಶಿಸುವೆನು ಕೇಳಿ :—

## ರುದ್ರಗೀತೆ

"ಪದ್ಮನಾಭನಿಗೆ ನಮಸ್ಕಾರ ! ಪಂಚಭೂತಾದಿ ಸರ್ವತ್ರ ವ್ಯಾಪ್ತನಾದ ವಾಸುದೇವ, ಅನಿರುದ್ಧ, ಪರಮಶುದ್ಧ, ಗುಣಪೂರ್ಣ, ಸ್ವರ್ಗಾಪವರ್ಗಪ್ರದ, ಸರ್ವೋತ್ತಮ, ಅಂತರ್ಬಹಿರ್ವ್ಯಾಪ್ತ, ನಿರ್ವಿಕಾರ, ಪರಂಜ್ಯೋತಿ, ಸಂಕರ್ಷಣ, ಸೂಕ್ಷ್ಮ, ಅಂತತ್ರಯರಹಿತ, ಜ್ಞಾನಪೂರ್ಣ, ಪ್ರದ್ಯುಮ್ನ, ಅಂತರ್ನಿಯಾಮಕ, ಹೃಷೀಕೇಶ, ಅಕ್ರೂರ, ನಿರ್ವಿಕಾರ, ಅನಿರುದ್ಧ, ಸರ್ವೋತ್ತಮ ಕೃಷ್ಣ, ಜ್ಞಾನ ಮತ್ತು ಅಷ್ಟಾಂಗ ಯೋಗೇಶ್ವರ, ರುದ್ರಾಂತರ್ಗತ ! ನಿನಗೆ ನಮಸ್ಕಾರ ! ನಿನ್ನ ಸುಂದರ ರೂಪವನ್ನು ನನಗೆ ತೋರಿಸು. ನೀನು ಅಭಕ್ತರಿಗೆ ದೂರನು. ಭಕ್ತರಿಗೇ ದೊರೆಯತಕ್ಕವನು. ಏಕಾಂತ ಭಕ್ತಿಯಿಂದ ಜ್ಞಾನಿಗಳು ನಿನ್ನ ಪಾದವನ್ನೇ ಅಪೇಕ್ಷಿ ಸುವರು. ತುಚ್ಛಸುಖವನ್ನು ಬಯಸುವುದಿಲ್ಲ. ಸಾಧು ಸಂಗವಾಗಲಿ. ಅದು ದೊರೆತರೆ ನೀನು ಅನುಗ್ರಹಿಸಿದಂತೆಯೇ ಎಂದರ್ಥ. ಸರ್ವ ಕರ್ಮಗಳೂ ನಿನ್ನ ಪೂಜೆ ಗಾಗಿಯೇ ಇವೆಯೆಂದು ಶಾಸ್ತ್ರದಲ್ಲಿ ಹೇಳಿದೆ. ನೀನೇ ಸೃಷ್ಟಿ, ಸ್ಥಿತಿ, ಲಯಕರ್ತನು. ಬ್ರಹ್ಮಾದಿಗಳೆಲ್ಲರೂ ನಿನ್ನನ್ನೇ ಅರ್ಚಿಸುವರು. ನಿನ್ನನ್ನು ಆಶ್ರಯಿಸದೇ ಹೋದವನೇ ಅಸುರನು. ನಿನ್ನ ಜ್ಞಾನವು ದುರ್ಲಭ. ಜ್ಞಾನಿಗಳಾದ ನಮಗೆ ನೀನೇ ಗಮ್ಯನು".

ಪ್ರಚೇತಸರೇ ! **ಯೋಗೋಪದೇಶ** ಎಂಬ ಈ ಸ್ತೋತ್ರವನ್ನು ಪ್ರಜಾ ಸೃಷ್ಟಿ ಶಕ್ತಿಗಾಗಿ ಬ್ರಹ್ಮದೇವರು ಭೃಗ್ವಾದಿಗಳಿಗೂ, ನಮಗೂ ಉಪದೇಶಿಸಿದರು. ಇದನ್ನು ನೀವು ಜಪ ಮಾಡಿರಿ. ನಿಮ್ಮ ಇಷ್ಟಗಳೆಲ್ಲ ಕೈಗೂಡುತ್ತವೆ. ಉಷಃ ಕಾಲದಲ್ಲಿ ಈ ಸ್ತುತಿಯನ್ನು ಮಾಡುವವನು ಕರ್ಮಬಂಧದಿಂದ ಮುಕ್ತನಾಗುವನು.

**ಇಪ್ಪತ್ತನಾಲ್ಕನೆಯ ಅಧ್ಯಾಯ ಮುಗಿದುದು**

ಹೀಗೆ ಶಿವನು ಉಪದೇಶಿಸಿ ಅಂತರ್ಧಾನವನ್ನು ಹೊಂದಿದನು. ಪ್ರಚೇತಸರು ಆ ಸಮುದ್ರದಲ್ಲಿ ಮುಳುಗಿ ರುದ್ರಗೀತೆಯನ್ನು ಜಪಿಸುತ್ತ ಬಹುಕಾಲ ತಪಸ್ಸನ್ನು ಮಾಡಿದರು.

ಇತ್ತ ಪ್ರಾಚೀನಬರ್ಹಿಯ ಬಳಿಗೆ ನಾರದರು ಬಂದು "ಕಾಮ್ಯಕರ್ಮದಿಂದ ಶ್ರೇಯಸ್ಸಾಗುವುದಿಲ್ಲ , ಪರಮಾತ್ಮನ ಜ್ಞಾನವನ್ನೇ ಸಂಪಾದಿಸಬೇಕು'' ಎಂದು ಹೇಳಿದರು. ಪ್ರಾಚೀನಬರ್ಹಿಯು ತತ್ತ್ವೋಪದೇಶವನ್ನು ಮಾಡಬೇಕೆಂದು ಪ್ರಾರ್ಥಿಸಿದನು.

**ನಾರದ :** ಕರ್ಮದಿಂದ ಸ್ವರ್ಗಾದಿ ತುಚ್ಛಫಲವು ಬರುವುದು. ಜ್ಞಾನದಿಂದ ಶ್ರೇಷವಾದ ಮೋಕ್ಷವೆಂಬ ಫಲವು ಬರುವುದು. ಆದ್ದರಿಂದ ದೇಹ, ಗೇಹಾದಿ ಸರ್ವ ವಿಷಯದಲ್ಲಿಯೂ ಆಸಕ್ತಿಯನ್ನು ಬಿಟ್ಟು ಶ್ರೀಹರಿಯನ್ನು ಭಜಿಸಬೇಕು. ಅದನ್ನು ಬಿಟ್ಟು ಸಂಸಾರದಲ್ಲಿಯೇ ಆಸಕ್ತನಾದವನಿಗೆ ತನ್ನ ಮತ್ತು ಭಗವಂತನ ಜ್ಞಾನವು ಇರುವುದೇ ಇಲ್ಲ. ಅದಕ್ಕೆ ದೃಷ್ಟಾಂತವಾಗಿ ಅಧ್ಯಾತ್ಮವನ್ನು ನಿರೂಪಿಸುವ ಪುರಂಜನ ಚರಿತ್ರೆಯನ್ನು ಹೇಳುವೆನು ಕೇಳು :–

**ಪುರಂಜನೋಪಾಖ್ಯಾನ**

ಕ್ಷತ್ರಿಯನಾದ ಪುರಂಜನನೆಂಬ ರಾಜನಿದ್ದನು. (ಈ ಪುರಂಜನನು ಮುಕ್ತಿ ಯೋಗ್ಯ ಚೇತನನು. ನಿತ್ಯ ಸಂಸಾರಿ ಜೀವರ ಅಭಿಮಾನಿಯು.) ಆವನಿಗೆ **ಅವಿಜ್ಞಾತ** ನೆಂಬ ಮಿತ್ರನಿದ್ದನು. ಆ ಮಿತ್ರನು ಮಾಡುವ ವ್ಯಾಪಾರವು ಯಾರಿಗೂ ತಿಳಿಯುತ್ತಿರಲಿಲ್ಲ. ರಾಜನು ವಾಸಕ್ಕೆ ಯೋಗ್ಯವಾದ ಪಟ್ಟಣವನ್ನು ಹುಡುಕುತ್ತ ಹೊರಟನು. ದೊರೆಯದಿದ್ದುದರಿಂದ ದುಃಖಿಸಿ, ಕೊನೆಗ ಹಿಮವತ್ಪರ್ವತಕ್ಕೆ ದಕ್ಷಿಣ ದಲ್ಲಿರುವ ಭಾರತ ಭೂಮಿಯಲ್ಲಿ ಒಂದು ಪಟ್ಟಣವನ್ನು ಕಂಡನು. ಆ ಪಟ್ಟಣಕ್ಕೆ ಒಂಭತ್ತು ಬಾಗಿಲುಗಳು ಇದ್ದುವು. ಅದರ ಹೊರಗಡೆ ಸುತ್ತಲೂ ಕೋಟೆ, ಕಂದುಕ ಉಪವನಗಳಿದ್ದುವು. ಆ ಪಟ್ಟಣದ ಒಳಗೆ ದಿವ್ಯ ಗೃಹಗಳು ಇದ್ದು, ಭೋಗವತಿ ಯಂತೆ ಅದು ಕಂಗೊಳಿಸುತ್ತಿತ್ತು. ಪುರಂಜನನು ಆ ಪಟ್ಟಣದ ಬಹಿರೋದ್ಯಾನದಲ್ಲಿ

ಸುತ್ತುತ್ತಿರುವಾಗ ಒಬ್ಬ ಸುಂದರಿಯು ಗೋಚರಿಸಿದಳು. ಹತ್ತು ಮಂದಿ ಭೃತ್ಯರು ಆವಳನ್ನು ಉಪಚರಿಸುತ್ತಿದ್ದರು. ಆ ಒಬ್ಬೊಬ್ಬ ಭೃತ್ಯನಿಗೂ ಬೇರೆ ಬೇರೆ ಬಹುಜನ ಪತ್ನಿಯರಿದ್ದರು. ಆ ಸುಂದರಿಗೆ ಮಿತ್ರನಾಗಿದ್ದವನು ಸ್ತ್ರೀಸಹಿತರಾದ ಹತ್ತು ಮಂದಿ ಭೃತ್ಯರಿಗೂ ಆಹಾರವನ್ನು ಕೊಟ್ಟು ರಕ್ಷಿಸುತ್ತಿದ್ದನು. ಅವನು ಮುಂದೆ ಬರುತ್ತಿದ್ದನು. ಐದು ಹೆಡೆಯುಳ್ಳ ಸರ್ಪವೊಂದು ಆ ಸುಂದರಿಯನ್ನು ಸರ್ವತ್ರ ರಕ್ಷಿಸುತ್ತಿತ್ತು. ಅವಳು ವರಾನ್ವೇಷಣ ಮಾಡುತ್ತಿದ್ದಳು. ರಾಜನು ಅವಳನ್ನು ನೋಡಿ "ನೀನಾರು ? ಇಲ್ಲೇಕೆ ಸಂಚರಿಸುತ್ತಿರುವೆ ? ನನಗೆ ಪತ್ನಿಯಾಗಲು ಅರ್ಹಳಾಗಿರುವೆ ನನಗೆ ಅನುಗ್ರಹ ಮಾಡು" ಎಂದನು. ಆ ರಮಣಿಯು "ನನ್ನನ್ನೂ, ನಮ್ಮ ತಂದೆ ತಾಯಿ ಮುಂತಾದವರನ್ನೂ ಸೃಷ್ಟಿಸಿ ಪೋಷಿಸಿದವನು ಯಾರೆಂಬುದನ್ನು ಚೆನ್ನಾಗಿ ಅರಿಯೆನು. ಆದ ಕಾರಣ ನಮ್ಮ ಕುಲವಾಗಲಿ, ನನ್ನ ಹೆಸರಾಗಲಿ ತಿಳಿಯದು. ಇವರೆಲ್ಲರೂ ನನ್ನ ಸ್ನೇಹಿತರು. ನೀನು ನನ್ನನ್ನು ಮದಿವೆಯಾಗಿ ಈ ಪಟ್ಟಣದಲ್ಲಿ ಸುಖವಾಗಿ ನೂರು ವರ್ಷಗಳ ಕಾಲ ವಾಸಮಾಡು. ನಿನ್ನಂತಹ ಗಂಡು ತಾನಾಗಿ ವರಿಸಲು ಬಂದಾಗ ಯಾವಳು ತಾನೇ ಸಂಮತಿಸದೇ ಹೋದಾಳು ?" ಎಂದಳು. ಮುಂದೆ ಇವರಿಬ್ಬರೂ ಒಪ್ಪಂದವನ್ನು ಮಾಡಿಕೊಂಡು ಮದಿವೆಯಾಗಿ ಸಂತೋಷದಿಂದ ವಿಹರಿಸುತ್ತಿದ್ದರು.

ಆ ಪಟ್ಟಣಕ್ಕೆ ಮೇಲುಗಡೆ ಏಳು ಬಾಗಿಲುಗಳೂ, ಕೆಳಗಡೆ ಎರಡು ಬಾಗಿಲುಗಳೂ ಇದ್ದುವು. ಮೇಲಿನ ಬಾಗಿಲುಗಳಲ್ಲಿ ಐದು ಪೂರ್ವಾಭಿಮುಖವಾಗಿಯೂ, ಒಂದು ದಕ್ಷಿಣಾಭಿಮುಖವಾಗಿಯೂ, ಮತ್ತೊಂದು ಉತ್ತರಾಭಿಮುಖವಾಗಿಯೂ ಇದ್ದುವು. ಕೆಳಭಾಗದ ಎರಡು ಬಾಗಿಲುಗಳು ಪಶ್ಚಿಮಾಭಿಮುಖವಾಗಿದ್ದುವು. ಪೂರ್ವದ್ವಾರಗಳಲ್ಲಿ ಖದ್ಯೋತ, ಆವಿರ್ಮುಖಿ ಎಂಬ ಹೆಸರಿನ ಎರಡು ಬಾಗಿಲುಗಳು ಒಂದೇ ಸಾಲಿನಲ್ಲಿದ್ದುವು. ರಾಜನು ದ್ಯುಮಂತನೆಂಬ ಸ್ನೇಹಿತನೊಡನೆ ಆ ಎರಡು ಬಾಗಿಲುಗಳಿಂದ ವಿಭ್ರಾಜಿತವೆಂಬ ದೇಶಕ್ಕೆ ಹೋಗಿ ಬರುತ್ತಿದ್ದನು. ಪೂರ್ವದ್ವಾರಗಳ ಪೈಕಿ **ನಲಿನಿ, ನಾಲಿನಿ** ಎಂಬ ಮತ್ತೆರಡು ದ್ವಾರಗಳು ಒಂದೇ ಕಡೆ ಇದ್ದುವು. ರಾಜನು ಅವಧೂತನೆಂಬ ಮಿತ್ರನೊಡನೆ ಆ ದ್ವಾರಗಳಿಂದ ಸೌರಭ ದೇಶಕ್ಕೆ ಹೋಗಿ ಬರುತ್ತಿದ್ದನು. ಪೂರ್ವದ್ವಾರಗಳಲ್ಲಿ **ಮುಖ್ಯಾ** (ಮುಖದ ಬಾಯಿ) ಎಂಬ ಐದನೆಯ ದ್ವಾರದಿಂದ ರಸಜ್ಞ ಮತ್ತು ವಿಪಣರೆಂಬ ಇಬ್ಬರು ಸ್ನೇಹಿತರೊಡನೆ ಆಪಣ, ಬಹೂದನಗಳೆಂಬ ದೇಶಗಳಿಗೆ ಹೋಗಿ ಬರುತ್ತಿದ್ದನು ದಕ್ಷಿಣದ **'ಪಿತೃಭೂಃ'** ಎಂಬ ಬಾಗಿಲಿನಿಂದ ಶ್ರುತಧರನೆಂಬ ಮಿತ್ರಸಹಿತನಾಗಿ ದಕ್ಷಿಣ ಪಾಂಚಾಲಕ್ಕೂ, **'ದೇವಭೂಃ'** ಎಂಬ ಉತ್ತರದ ಬಾಗಿಲಿನಿಂದ ಉತ್ತರ ಪಾಂಚಾಲಕ್ಕೂ ಹೋಗಿ ಬರುತ್ತಿದ್ದನು.

ಇದರ ಗೂಢವಾದ ಅರ್ಥ :– ಪಾಲಕರಾದ್ದರಿಂದ ಪಿತೃಗಳೆನಿಸುವ ದೇವತೆ

ಗಳು ಮಂತ್ರೋಪದೇಶಾದಿಗಳಿಂದ ಒಲಿಯುವ ಪ್ರಯುಕ್ತ ಬಲಗಿವಿಗೆ 'ಪಿತೃಭೂ' ಎಂದು ಹೆಸರು. ಜೀವನು ತತ್ತ್ವಜ್ಞಾನಿಯಾಗಿದ್ದಲ್ಲಿ ತತ್ತ್ವವನ್ನು ತಿಳಿಸುವ ಪಂಚಮ ವೇದವಾದ ಭಾರತಾದಿ ನಿವೃತ್ತ ಶಾಸ್ತ್ರವನ್ನೂ, ಮಧ್ಯಮ ಜೀವನಾಗಿದ್ದಲ್ಲಿ ಸುಖವನ್ನು ಕೊಡುವ ಶಬ್ದ ಮೊದಲಾದ ಐದು ವಿಷಯಗಳನ್ನು ಹೊಂದುವುದೇ ದಕ್ಷಿಣ ಪಾಂಚಾಲ ದೇಶ. ಮಕ್ಕಳು ಮೊದಲಾದ ರೂಪದಿಂದ ಕ್ರೀಡಿಸುವ ಪಿತೃಗಳು ದೇವತೆಗಳೆನಿಸುವರು. ಇವರು ಒಲಿಯುವ ಸ್ಥಾನವಾದ್ದರಿಂದ ಎಡಗಿವಿಗೆ 'ದೇವಭೂ' ಎಂದು ಹೆಸರು. ಇದರ ಮೂಲಕ ಸಂಸಾರಿ ಜೀವನು ಕಾಮ್ಯ ಶಾಸ್ತ್ರವನ್ನು ಅರಿಯುವುದೇ ಉತ್ತರ ಪಾಂಚಾಲ ದೇಶ.

ಆಸುರೀ ಎಂಬ ಬಾಗಿಲಿನಿಂದ ದುರ್ಮದನೆಂಬ ಸಖನೊಡನೆ ಗ್ರಾಮ್ಯಕ ದೇಶಕ್ಕೆ ಹೋಗಿಬರುತ್ತಿದ್ದನು. ಅಂದರೆ ಜನನೇಂದ್ರಿಯದಿಂದ ಮೈಥುನವನ್ನು ಅನುಭವಿ ಸುವನೆಂದು ಗೂಢಾರ್ಥ.

ನಿರ್ಋತಿ ಎಂಬ ಪಶ್ಚಿಮದ ಮತ್ತೊಂದು ಬಾಗಿಲಿನಿಂದ, ಲುಬ್ಧಕನೆಂಬ ಗೆಳೆಯನೊಡನೆ ವೈಶಸ ಎಂಬ ದೇಶಕ್ಕೆ ಹೋಗಿ ಬರುತ್ತಿದ್ದನು. ಅಂದರೆ ಪಾಯು ಎಂಬ ಇಂದ್ರಿಯ ಸಹಾಯದಿಂದ ಗುದದ ಮೂಲಕ ಮಲವಿಸರ್ಜನೆ ಮಾಡುವನು ಎಂದು ಗೂಢಾರ್ಥ.

ಈ ಬಾಗಿಲುಗಳ ಜೊತೆಗೆ ಮತ್ತೆರಡು ಭಾಗಿಲುಗಳಿದ್ದುವು. ಅವು ಮುಚ್ಚಿ ಹೋಗಿದ್ದುವು. ಒಂದಕ್ಕೆ ನಿರ್ವಾಕ್ಯವೆಂದೂ, ಇನ್ನೊಂದಕ್ಕೆ ಉಪಸ್ಕರವೆಂದೂ ಹೆಸರು. (ಕೈಕಾಲುಗಳು ಎಂದು ಅರ್ಥ) ಪುರಂಜನನು ನಿರ್ವಾಕ್ಯದಿಂದ ನಡೆಯುವನು. ಉಪಸ್ಕರದಿಂದ ಕೆಲಸ ಮಾಡುವನು ಅವನು ವಿಷೂಚಿ ಸಹಿತನಾಗಿ ಅಂದರೆ ನಪುಂಸಕನಾದ ಸ್ನೇಹಿತನಿಂದ ಸಹಿತನಾಗಿ ಅಂತಃಪುರಕ್ಕೆ ಹೋಗಿ ಅಲ್ಲಿದ್ದು ಪತ್ನೀ ಪುತ್ರರ ಸಂಗದಿಂದ ಆದ ಮೋಹ ಪ್ರಸನ್ನತೆ ಅಥವಾ ಹರ್ಷಗಳನ್ನು ಹೊಂದಿದನು. ಕೇವಲ ವಿಷಯ ಭೋಗಗಳಲ್ಲಿಯೇ ಮುಳುಗಿಹೋಗಿ, ತನ್ನ ಹೆಂಡತಿಯು ಹೇಳಿದಂತೆ ನಡೆಯುತ್ತ ಅವಳ ಕೈಗೊಂಬೆಯಾಗಿ ಹೋದನು.

**ಇಪ್ಪತ್ತೈದನೆಯ ಅಧ್ಯಾಯ ಮುಗಿದುದು.**

ಪುರಂಜನ ರಾಜನು ಒಮ್ಮೆ ಬೇಟೆಗೆಂದು ರಥ ಹತ್ತಿ ಹೊರಟನು. ಆ ರಥಕ್ಕೆ ಐದು ಕುದುರೆಗಳನ್ನು ಕಟ್ಟಿರುವರು. ಚಕ್ರಗಳು ಎರಡು, ಅಚ್ಚು ಒಂದು, ಧ್ವಜಗಳು ಮೂರು, ತಗ್ಗು ಎತ್ತರ ಪ್ರದೇಶಗಳು ಐದು, ಲಗಾಮ ಒಂದು, ಸಾರಥಿ ಓಬ್ಬನು, ಆಸನ ಒಂದು, ನೊಗಗಳು ಎರಡು. ಅದರಲ್ಲಿ ಐದು ಆಯುಧಗಳೂ, ಐದು ಪ್ರಭಾವ

ಗಳೂ ಇದ್ದುವು. ಅಂದರೆ ಜೀವನು ಸ್ವಪ್ನಾವಸ್ಥೆಯನ್ನು ಮುಗಿಸಿದ ಮೇಲೆ ಜಾಗ್ರದವಸ್ಥೆಗೆ ಬರುವನು ಎಂದು ಗೂಢಾರ್ಥ.

ರಾಜನು ಇಂತಹ ಬಂಗಾರದ ತೇರನ್ನು ಹತ್ತಿ, ಬಂಗಾರದ ಕವಚವನ್ನು ತೊಟ್ಟು ಬಿಲ್ಲು ಬಾಣಗಳನ್ನು ಹಿಡಿದು ಹನ್ನೊಂದು ಸೈನಿಕರನ್ನು ಕರೆದುಕೊಂಡು ಐದು ಬಗೆ ಭಾಗವಾಗಿರುವ ಅರಣ್ಯಕ್ಕೆ ಹೋಗಿ ಬೇಟೆಯಾಡಿದನು. ಕ್ಷಣವೂ ಬಿಟ್ಟಿರದ ಹೆಂಡತಿಯನ್ನು ಬಿಟ್ಟು, ಮೃಗಗಳನ್ನು ಕೊಲ್ಲುವುದರಲ್ಲಿ ಆಸಕ್ತನಾಗಿ ಕಾಡಿನಲ್ಲೆಲ್ಲ ಸುತ್ತಾಡಿದನು. ಪುಣ್ಯಪ್ರದವಲ್ಲದ ಮೃಗಗಳನ್ನು ಕೊಂದು ಬಹುವಾಗಿ ದಣಿದು ಊರಿಗೆ ಬಂದನು.

ಗೂಢಾರ್ಥ :– ಜಾಗ್ರದವಸ್ಥೆಯಲ್ಲಿ ರಾಗಾದಿಗಳಿಗೆ ಜೀವನು ವಶನಾಗಿ, ವಿವೇಕವನ್ನು ಬಿಟ್ಟು, ವಿಷಯವನ್ನು ಅನುಭವಿಸಬೇಕೆಂದು ಬಯಸುವ ಜೀವನು ಸದ್ಬುದ್ಧಿಯನ್ನು ಬಿಟ್ಟು ಅಸದ್ಬುದ್ಧಿಯೊಡನೆ ವಿಷಯಗಳನ್ನು ಅನುಭವಿಸುವನು.

ರಾಜನು ಊಟಮಾಡಿ ತನ್ನ ಪತ್ನಿಯು ಸ್ಮರಣೆಗೆ ಬಂದುದರಿಂದ ಅಂತಃಪುರಕ್ಕೆ ಬಂದು ಅವಳನ್ನು ಕಾಣದೆ, ಸಖಿಯರಿಂದ ಅವಳಿಗೆ ಕೋಪ ಬಂದಿದೆಯೆಂದು ತಿಳಿದು ನೆಲದ ಮೇಲೆ ಬಿದ್ದಿದ್ದ ತನ್ನ ಪತ್ನಿಯ ಬಳಿಗೆ ಬಂದು ಸಮಾಧಾನ ಮಾಡಿದನು.

## ಇಪ್ಪತ್ತಾರನೆಯ ಅಧ್ಯಾಯ ಮುಗಿದುದು

ಪುರಂಜನನು ಪತ್ನಿಯೊಡನೆ ಸದಾ ಕ್ರೀಡಿಸುತ್ತ ಆಯುಷ್ಯವನ್ನು ವ್ಯರ್ಥವಾಗಿ ಕಳೆದನು. ಅಜ್ಞಾನದಲ್ಲಿ ಮುಳುಗಿ ಪತ್ನಿಯೇ ಪುರುಷಾರ್ಥವೆಂದು ತಿಳಿದನು. ದೇವರನ್ನು ಮರೆತನು. ಅವನ ಯೌವನ ಕಾಲವೆಲ್ಲ ಕ್ಷಣದಂತೆ ಕಳೆದುಹೋಯಿತು. ಅವನಿಗೆ ಹನ್ನೊಂದು ಸಾವಿರ ಗಂಡು ಮಕ್ಕಳು. ಅಂದರೆ ಹನ್ನೊಂದು ಇಂದ್ರಿಯಗಳ ಅಪಾರ ಪರಿಣಾಮದ ವ್ಯಾಪಾರಗಳು. ನೂರಹತ್ತು ಹೆಣ್ಣು ಮಕ್ಕಳೂ ಆದುವು. ಅಂದರೆ ದೇಹೋತ್ಪತ್ತಿಗೆ ಕಾರಣಗಳಾದ ಪರಿಣಾಮಾನಂತರದ ಅನೇಕ ಬುದ್ಧಿ ವ್ಯಾಪಾರಗಳು ನಡೆದುವು ಎಂದರ್ಥ. ಅಲ್ಲಿಗೆ ಅವನಿಗೆ ಅರ್ಧ ಆಯುಷ್ಯವು ಕಳೆಯಿತು. ತನ್ನ ಮಕ್ಕಳಿಗೆಲ್ಲ ಮದಿವೆಮಾಡಿದನು. ಪ್ರತಿಯೊಬ್ಬ ಗಂಡು ಮಗನಿಗೂ ನೂರು ನೂರು ಮಂದಿ ಮಕ್ಕಳಾದರು. ಇದರಿಂದ ಪುರಂಜನನ ವಂಶವು ಪಾಂಚಾಲ ದೇಶದಲ್ಲಿ ಬೆಳೆಯಿತು. ಅಂದರೆ ಬುದ್ಧಿಯ ಒಂದೊಂದು ವ್ಯಾಪಾರಕ್ಕೂ ಅನೇಕ ವ್ಯಾಪಾರಗಳುಂಟಾದುವು ಎಂದರ್ಥ.

ಸಂಸಾರದಲ್ಲಿ ಮಮತೆ ಹೆಚ್ಚಾಗಿ ಆ ರಾಜನಿಗೆ ತಾನಾರೆಂಬುದೂ, ಪರಮಾತ್ಮ ನಾರೆಂಬುದೂ ತಿಳಿಯಲೇ ಇಲ್ಲ. ಪಶುಗಳನ್ನು ಕೊಂದು ಅನೇಕ ಕಾಮ್ಯಯಾಗಗಳನ್ನು

ಮಾಡಿ, ಕಾಮ್ಯ ಫಲಕೊಡುವ ದೇವತೆಗಳು, ಪಿತೃಗಳು, ಭೈರವ ಮುಂತಾದವರನ್ನು ಆರಾಧಿಸಿದನು. ಹೀಗೆ ಕುಟುಂಬ ಪೋಷಣೆಯಲ್ಲಿ ಆಸಕ್ತನಾಗಿ ಮೈಮರೆತಿದ್ದ ರಾಜನಿಗೆ ಪ್ರಸಿದ್ಧ ಸಂಹಾರಕನಾದ ಚಂಡವೇಗನೆಂಬ ಗಂಧರ್ವರಾಜನು ಶತ್ರುವಾಗಿ ಬಂದನು. ಅವನಿಗೆ 360 ಗಂಧರ್ವ ಸೇವಕರು ಅಂದರೆ ಹಗಲುಗಳು, 360 ಗಂಧರ್ವಸ್ತ್ರೀಯರು (ರಾತ್ರಿಗಳು) ಸೇವಕಿಯರು. ಅವರೆಲ್ಲರೂ ಒಬ್ಬರಾದ ಮೇಲೆ ಒಬ್ಬರು ತಿರುಗುತ್ತ ಪ್ರಾಣಿಗಳ ಮನೆಯಲ್ಲಿರುವ ಸಮಸ್ತವನ್ನೂ ಲೂಟಿ ಮಾಡ ತಕ್ಕವರು. ಅಂದರೆ ಜೀವರ ಹಗಲು ರಾತ್ರಿಗಳು ಕಳೆದ ಹಾಗೆಲ್ಲ ಸುಖ ವಿಷಯಗಳ ನಾಶವಾಗುತ್ತದೆಂದು ಅರ್ಥ. ಅವರು ಪುರಂಜನನ ಪಟ್ಟಣ (ದೇಹ)ವನ್ನು ಕೊಳ್ಳೆ ಹೊಡೆಯಲಾರಂಭಿಸಿದರು. ಪುರರಕ್ಷಕನಾದ ಪ್ರಜಾಗರನು ಅಂದರೆ ಪ್ರಾಣವಾಯು ಇವರೆಲ್ಲರನ್ನೂ ತಡೆದು ನೂರುವರ್ಷ ಅಷ್ಟು ಜನರೊಡನೆ ಹೋರಾಡುತ್ತ ಬಂದನು. ಇದರಿಂದ ರಾಜನ ಶಕ್ತಿಯು ಕುಂದುತ್ತ ಬಂದಿತು. ಆದರೂ ಲೋಲಾಪ್ತಿಯಲ್ಲಿದ್ದ ನಾದ್ದರಿಂದ ತನ್ನ ಪಟ್ಟಣಕ್ಕೆ ಬಂದ ವಿಪತ್ತನ್ನು ಅರಿಯದೆ ಹೋದನು.

ಗಂಧರ್ವ ರಾಜನಿಗೆ ಜರೆಯೆಂಬ ಒಬ್ಬ ಮಗಳಿದ್ದಳು. ಇವಳು ತನಗೆ ಗಂಡನು ಬೇಕೆಂದು ತಿರುಗುತ್ತಾ ಇದ್ದಳು. ಸುಂದರಳಲ್ಲದ ಇವಳನ್ನು ಯಾರೂ ಒಲ್ಲರು. ಕೊನೆಗೆ ನಾರದರನ್ನು ಸಂಧಿಸಿ ತನ್ನನ್ನು ಲಗ್ನವಾಗೆಂದಳು. ಅವರು ನಿರಾಕರಿಸಿದರು. ಅವಳು "ನೀನು ನೆಲೆಯಾಗಿ ಒಂದು ಕಡೆ ಇರದೆ ಅಲೆಯುತ್ತಿರು" ಎಂದು ಶಪಿಸಿದಳು. ಇದರಿಂದ ನಾರದರಿಗೆ ಮುಪ್ಪಿಲ್ಲ. ತ್ರಿಲೋಕ ಸಂಚಾರಿಗಳಾಗಿ ರುವರು ಎಂಬ ಭಾವವನ್ನು ತಿಳಿಯಬೇಕು. ಬಳಿಕ ನಾರದರ ಮಾತಿನಂತೆ ಮೃತ್ಯು ವಿಗೆ ಅಭಿಮಾನಿಯಾದ ಭಯನ ಬಳಿಗೆ ಹೋಗಿ ತನ್ನನ್ನು ಮದಿವೆಯಾಗೆಂದು ಬೇಡಿ ದಳು. ಅವನು ವಿಧಿಯಾಣತಿಯಂತೆ ತನ್ನ ಭಗಿನಿಯಾಗಿ ಸ್ವೀಕರಿಸಿ, ಜ್ವರನೆಂಬು ವನಿಗೆ ಅವಳನ್ನು ಪತ್ನಿಯನ್ನಾಗಿ ಮಾಡಿದನು. ಅವರೆಲ್ಲರೊಡನೆ ಭಯನು ಯಾರಿಗೂ ತಿಳಿಯದಂತೆ ಸಂಚರಿಸುತ್ತಿದ್ದನು.

## ಇಪ್ಪತ್ತೇಳನೆಯ ಅಧ್ಯಾಯ ಮುಗಿದುದು

ಮೃತ್ಯುವಿನ ಅಪ್ಪಣೆಯಂತೆ ನಡೆಯುವ ವಾತಮುಂತಾದ ರೋಗಗಳು, ಜ್ವರ, ಜರೆ ಇವರೆಲ್ಲರೂ ಪುರಂಜನನ ಪಟ್ಟಣವನ್ನು ಪ್ರವೇಶಿಸಿ ಅದನ್ನು ಸೂರೆಮಾಡುತ್ತ ಬಂದರು. ಜರೆಯು ರಾಜನನ್ನು ಬಲವಾಗಿ ಅಪ್ಪಿಕೊಂಡು ಅವನನ್ನು ನಿಸ್ಸಾರನನ್ನಾಗಿ ಮಾಡಿಬಿಟ್ಟಳು. ಉಳಿದವರಿಂದ ಪಟ್ಟಣವು ಶಿಥಿಲವಾಯಿತು. ರಾಜನ ಪತ್ನಿ, ಪುತ್ರರು, ಮಂತ್ರಿಗಳು ಮತ್ತು ಪರಿವಾರ ಇವರೆಲ್ಲರೂ ರಾಜನನ್ನು ಉದಾಸೀನ ಮಾಡಿದರಲ್ಲದೆ ಅವನಿಗೆ ಪ್ರತಿಕೂಲರಾದರು. ಇಷ್ಟಾದರೂ ರಾಜನು ನಿಸ್ಸಾರ ಕಾಮಗಳನ್ನು ಬಯಸಿ, ಹೆಂಡತಿ ಮಕ್ಕಳನ್ನು ಲಾಲಿಸುತ್ತ ಇದ್ದನು. ಅವನಿಗೆ

ಭಗವಂತನ ಜ್ಞಾನವಾಗಲೀ ಭಕ್ತಿಯಾಗಲೀ ಬರಲೇ ಇಲ್ಲ. ಶತ್ರುಗಳ ಬಾಧೆಯಿಂದ ಕೊನೆಗೆ ಯತ್ನವಿಲ್ಲದೆ ಆ ಪಟ್ಟಣವನ್ನು ಅವನು ಬಿಟ್ಟು ಹೋಗಬೇಕಾಯಿತು. ಅಷ್ಟರಲ್ಲಿ **ಪ್ರಜ್ವಾಲನು** ತನ್ನ ತಮ್ಮನಾದ ಭಯನ ಇಷ್ಟವನ್ನು ನಡೆಸಿ ಕೊಡ ಬೇಕೆಂದು ಆ ಪಟ್ಟಣವನ್ನು ಸುಟ್ಟುಬಿಟ್ಟನು. ಪಟ್ಟಣವು ಕಾಲಕನ್ಯೆಯ ವಶ ವಾಗಿತ್ತು. ಯವನರು ಅರಮನೆಯನ್ನೇ ಮುತ್ತಿದರು. ಪ್ರಜ್ವಾಲನು ರಾಜನನ್ನೇ ಹಿಡಿದುಬಿಟ್ಟನು. ರಾಜನು ಹೊರಗೆ ಹೋಗಲು ಅವಕಾಶವಿಲ್ಲದೆ, ಒಳಗೆ ಬೆಂಕಿ ಯಿಂದ ಬೇಯುತ್ತ, ತನ್ನ ಹೆಂಡತಿ ಮಕ್ಕಳ ಗತಿಯೇನೆಂದು ಹಂಬಲಿಸಿ ಅಳುತ್ತಿರಲು ಮೃತ್ಯುವು ಸಿದ್ಧನಾದನು. ಪುರರಕ್ಷಕನಾದ ಭುಜಂಗಮನು ಪಟ್ಟಣವನ್ನು ಬಿಟ್ಟು ಹೊರಟು ಹೋದನು. ಕೂಡಲೇ ಪಟ್ಟಣವು ಉರಿದು ಬೂದಿಯಾಗಿ ಪಂಚ ಭೂತಗಳಲ್ಲಿ ಲೀನವಾಯಿತು. ಪುರಂಜನನು ಸತ್ತನು. ಹಿಂದೆ ಇವನಿಂದ ಯಾಗ ದಲ್ಲಿ ಹಿಂಸಿಸಲ್ಪಟ್ಟಿದ್ದ ಪಶುಗಳು ಇವನನ್ನು ತಮ್ಮ ಕೊಂಬುಗಳಿಂದ ತಿವಿದು ಹಿಂಸಿ ಸಿದುವು. ಪಾಪಗಳಿಸಿದ್ದ ಅವನು ನರಕದಲ್ಲಿ ಬಿದ್ದು ಬಹು ವರ್ಷಗಳ ಕಾಲ ದುಃಖ ವನ್ನು ಅನುಭವಿಸಿದನು. ಬಳಿಕ ವಿದರ್ಭರಾಜನ ಮಗಳಾಗಿ ಹುಟ್ಟಿದನು. ಹಿಂದೆ ಇವನು ಕೊನೆಗಾಲದಲ್ಲಿ ಪತ್ನಿಯನ್ನೇ ಸ್ಮರಿಸಿ ಸತ್ತದ್ದರಿಂದ ಹೆಣ್ಣಾಗಿ ಹುಟ್ಟಿದನು. ಅವನ ಹೆಂಡತಿಯು ಮಲಯಧ್ವಜನೆಂಬ ಹೆಸರಿನಿಂದ ಗಂಡಾಗಿ ಹುಟ್ಟಿದಳು. (ಇಲ್ಲಿ ತಿಳಿಯಬೇಕಾದ ವಿಶೇಷಾಂಶವೇನೆಂದರೆ :– ಹಿಂದೆ ಪುರಂಜನನಿಗೆ ಹೆಂಡತಿಯಾಗಿದ್ದ ಪುರಂಜನಿಯು ಪುರುಷಜೀವ. ಪಾಪದಿಂದ ಸ್ತ್ರೀದೇಹ ಬಂದಿತ್ತು. ಆ ದೇಹವನ್ನು ಬಿಟ್ಟ ಮೇಲೆ ಪುರುಷ ದೇಹವು ಬಂದಿತು.) ಪುರಂಜನನು ಹೆಣ್ಣಾಗಿ ಹುಟ್ಟಿದಾಗ **ವೈದರ್ಭೀ** ಎಂದು ಹೆಸರಾಯಿತು.

ವೈದರ್ಭಿಯು ಮಲಯಧ್ವಜನನ್ನು ಮದುವೆಯಾಗಿ ಒಂದು ಹೆಣ್ಣನ್ನೂ, ಏಳು ಮಂದಿ ಪುತ್ರರನ್ನೂ ಹಡೆದಳು. ಹುಟ್ಟಿದ ಆ ಏಳು ಮಂದಿ ಪುತ್ರರೂ ದ್ರವಿಡ ರಾಜ್ಯ ಗಳಿಗೆ ದೊರೆಗಳಾದರು. ಅವರಲ್ಲಿ ಒಬ್ಬೊಬ್ಬನಿಗೂ ಹತ್ತು ಹತ್ತು ಕೋಟಿ ಮಕ್ಕ ಳಾದರು. ಈ ವಂಶದಲ್ಲಿ ಬಂದವರಿಂದಲೇ ಈ ಮನ್ವಂತರ ಪೂರ್ತಿಭೂಮಿಯು ಅನು ಭವಿಸಲ್ಪಡುವುದು. ಮಲಯಧ್ವಜನ ಮಗಳನ್ನು ಅಗಸ್ತ್ಯರು ಮದುವೆಯಾಗಿ ದೃಢಚ್ಯುತ ಎಂಬ ಮಗನನ್ನು ಪಡೆದರು.

ಮಲಯಧ್ವಜನು ರಾಜ್ಯವನ್ನು ಮಕ್ಕಳಿಗೆ ಹಂಚಿ-ಕೊಟ್ಟು, ಮಲಯ ಪರ್ವತಕ್ಕೆ ಪತ್ನಿಯ ಸಹಿತವಾಗಿ ಹೋಗಿ, ಅಲ್ಲಿ ತಪಸ್ಸು ಮಾಡಿ, ಜ್ಞಾನಿಯಾಗಿ, ಲಯ ಚಿಂತನೆ ಮಾಡಿ ದೇಹಬಿಟ್ಟನು. ವೈದರ್ಭಿಯು ಪತಿಯು ಸತ್ತದ್ದನ್ನು ನೋಡಿ, ಚಿತೆಯಲ್ಲಿ ಪತಿಯ ಮೃತದೇಹವನ್ನಿಟ್ಟು ತಾನೂ ಸಹಗಮನವನ್ನು ಮಾಡ ಬೇಕೆಂದು ಯೋಚಿಸಿದಳು. ಅಷ್ಟರಲ್ಲಿ ಅನಾದಿಯಿಂದಲೂ ಅನಿಮಿತ್ತಬಂಧುವಾದ ಪರಮಾತ್ಮನು ವಿಪ್ರವೇಷದಿಂದ ಬಂದು ಅವಳನ್ನು ಹೀಗೆ ಸಮಾಧಾನ ಮಾಡುತ್ತಾನೆ.

**ಹರಿ :** ನಿನಗೆ ನಾಮ, ಗೋತ್ರಗಳಿಲ್ಲ. ನೀನು ಯಾರಿಗೂ ಪುತ್ರಿಯಲ್ಲ. ಇಲ್ಲಿ ಸತ್ತು ಬಿದ್ದಿರುವವನಿಗೂ ನಿನಗೂ ಯಾವ ಸಂಬಂಧವೂ ಇಲ್ಲ. ಹಿಂದೆ ನೀನು ನನ್ನಿಂದ ವೇದಾಂತವಿಚಾರ ಮಾಡಿ ನನ್ನನ್ನು ತಿಳಿದೆ. ನಿನ್ನ ಜೊತೆಯಲ್ಲಿಯೇ ಯಾವಾಗಲೂ ಇರುವ ನನ್ನ ಜ್ಞಾಪಕವಿದೆಯೆ ? ನಾನು ಅವಿಜ್ಞಾತನೆಂಬ ನಿನ್ನ ಮಿತ್ರನು. ನನ್ನನ್ನು ಮರೆತು ಗ್ರಾಮ್ಯಭೋಗಗಳಲ್ಲಿ ಆಸಕ್ತನಾಗಿ ಬೇಟೆಗೆ ಹೋದೆಯಲ್ಲವೆ ? ಪ್ರಾಜ್ಞನೇ! ನೀನು, ನಾನೂ ಗೆಳೆಯರಾದ ಎರಡು ಹಂಸಗಳು. ಬಹುಕಾಲ ಮಾನಸಸರೋವರ ದಲ್ಲಿ ಆನಂದವಾಗಿ ಕಾಲವನ್ನು ಕಳೆದೆವು. ಹಿಂದಿನ ಪುಣ್ಯಬಲದಿಂದ ನಮಗೆ ಜಾತಿ ಸ್ಮೃತಿಯು ಇರುವುದು. ಆಗಲೂ ನೀನು ಗ್ರಾಮ್ಯಭೋಗಾಕಾಂಕ್ಷಿಯಾಗಿ ಗೆಳೆಯ ನಾದ ನನ್ನನ್ನು ಬಿಟ್ಟು ಈ ಭೂಮಿಗೆ ಬಂದು ಭೋಗಸ್ಥಾನವಾದ ನವದ್ವಾರಗಳುಳ್ಳ ಪಟ್ಟಣವನ್ನು ನೋಡಿದಿ. ಶರೀರವೇ ಪಟ್ಟಣ, ಅದರ ಉದ್ಯಾನಗಳೇ ಶಬ್ದಾದಿ ಪಂಚ ವಿಷಯಗಳು. ಇಂದ್ರಿಯ ಛಿದ್ರಗಳೇ ನವದ್ವಾರಗಳು. ಪೃಥಿವಿ, ಅಪ್ಪು, ತೇಜಸ್ಸುಗಳೇ ಮೂರು ಬೊಕ್ಕಸ ಸ್ಥಾನಗಳು. ಪ್ರಾಣವಾಯುವೇ ಪುರರಕ್ಷಕನು. ಗೋಳಕರೂಪ ವಾದ ಇಂದ್ರಿಯಗಳೇ ಹೊರಗಿನ ಪದಾರ್ಥಜ್ಞಾನಕ್ಕಾಗಿ ನಿರ್ಮಿತ ಸ್ಥಾನಗಳು. ವ್ಯಾಪಾರವೇ ಕರ್ಮೇಂದ್ರಿಯ ಸಮೂಹ ಶಕ್ತಿ. ನಿತ್ಯವಾದ ಪ್ರಕೃತಿಯೇ ಪಂಚಪ್ರಕೃತಿ. ಜೀವನು ಶರೀರದೊಳಗೆ ಬಂದಿದ್ದರೂ ಕೂಡ ಬುದ್ಧಿಗೆ ಅಧೀನವಾಗುವುದರಿಂದ ದೇಹಕ್ಕೆ ತಾನು ಸ್ವಾಮಿಯೆಂದು ತಿಳಿಯುವುದಿಲ್ಲ. ಬುದ್ಧಿಯೇ ಈ ದೇಹಕ್ಕೆ ಸ್ವಾಮಿ ಯೆಂದು ತಿಳಿಯುವನು. ನೀನು ಆ ಪಟ್ಟಣದೊಳಗೆ ಆ ಸುಂದರಿಯ ವಶನಾಗಿ ಶಾಸ್ತ್ರ ಜ್ಞಾನವಿಲ್ಲದೆ ಕ್ರೀಡಾಸಕ್ತನಾದೆ. ಅವಳ ಸಹವಾಸದಿಂದ ಪಾಪಿಷ್ಠವಾದ ಈ ಸ್ತ್ರೀ ಜನ್ಮವು ನಿನಗೆ ಬಂದಿತು. ಮಲಯಧ್ವಜನಿಗೆ ನೀನು ಸ್ವರೂಪತಃ ಪತ್ನಿಯಲ್ಲ. ಹಿಂದೆ ಪತ್ನಿಯಾಗಿದ್ದ ಪುರಂಜನೀ ಎಂಬುವಳಿಗೆ ನೀನು ಸ್ವರೂಪತಃ ಪತಿಯೂ ಅಲ್ಲ. ಹಿಂದಿನ ಜನ್ಮದಲ್ಲಿ ಪುರುಷನೆಂದೂ, ಈ ಜನ್ಮದಲ್ಲಿ ಸ್ತ್ರೀಯೆಂದೂ ನೀನು ತಿಳಿದಿರುವು ದಕ್ಕೆ ಪ್ರಾರಬ್ಧಕರ್ಮವೂ, ಅದರ ಫಲವನ್ನು ಅನುಭವಿಸಬೇಕೆಂಬ ಹರೀಚ್ಛೆಯೂ ಕಾರಣವು. ನೀನು ನಿರ್ಮಲ ಚೇತನನೆಂದೂ, ಶ್ರೀ ಹರಿಯು ಸಕಲ ಪದಾರ್ಥಗಳ ಸತ್ತಾ ನಿಯಾಮಕನೆಂದೂ ತಿಳಿ. ಜೀವನು ಅಸ್ವತಂತ್ರ ಪ್ರತಿಬಿಂಬನು. ಅಜ್ಞನು. ಪರ ಮಾತ್ಮನು ಜೀವಭಿನ್ನನು. ಸ್ವತಂತ್ರನು. ಬಿಂಬನು. ಸರ್ವಜ್ಞನು. ಸಕಲ ದೋಷ ದೂರನು. ಭಕ್ತವತ್ಸಲನು ಇತ್ಯಾದಿ ಮಹಾಮಹಿಮನೆಂದು ತಿಳಿ.

(ಹೀಗೆ ನಿರ್ದೋಷನಾದ ಭಗವಂತನು ಮಾನಸಸರೋವರದ ಹಂಸನಂತಿದ್ದ ಪುರಂಜನನಿಗೆ ಜ್ಞಾನೋಪದೇಶವನ್ನು ಮಾಡಲು, ದೇವರನ್ನು ಮರೆತು ವಿಷಯ ಬುದ್ಧಿ ಪ್ರಸಂಗಾತಿಶಯದಿಂದ ಮರೆಯಾಗಿದ್ದ ಶಾಸ್ತ್ರಾರ್ಥವನ್ನು ಸ್ಮರಣೆಗೆ ತಂದು ಕೊಂಡು ಅವನು ಸ್ವಸ್ಥಚಿತ್ತನಾದನು.

**ನಾರದ :–** ಪ್ರಾಚೀನಬರ್ಹಿಯೇ ! ಗೂಢಾರ್ಥವಾಗಿ ಅಸ್ಪಷ್ಟವಾಣಿಯಿಂದ ಮಾಡುವ ಉಪದೇಶವೇ ಭಗವಂತನಿಗೆ ಇಷ್ಟವಾಮದು. ಸ್ಪಷ್ಟೋಪದೇಶದಿಂದ ಅಸುರರಿಗೂ ಜ್ಞಾನವಾಗುವ ಪ್ರಯುಕ್ತ ಅದು ದೇವರಿಗೂ ಪ್ರಿಯವಲ್ಲ. ಈ ಕಾರಣ ದಿಂದಲೇ ಜೀವನ ವಿಷಯವಾದ ಸಂಸಾರದ ಸ್ವರೂಪವನ್ನೂ, ನಡೆದಿರುವ ಪುರಂಜನನ ಕಥೆಯ ವ್ಯಾಜದಿಂದ ನಿನಗೆ ವಿವರಿಸಿರುವೆ.

## ಇಪ್ಪತ್ತೆಂಟನೆಯ ಅಧ್ಯಾಯ ಮುಗಿದುದು

**ಪ್ರಾಚೀನಬರ್ಹಿ .–** ನಾರದರೇ ! ಪುರಂಜನನ ಕಥೆಯಿಂದ ಜೀವನ ಸಂಸಾರ ವಿಷಯವನ್ನು ಸ್ಪಷ್ಟವಾಗಿ ತಿಳಿಯುವ ರೀತಿಯನ್ನು ದಯೆಯಿಟ್ಟು ತಿಳಿಸಿ.

**ನಾರದ .–** "ಪುರಸ್ಯ–ದೇಹಸ್ಯ, ಅಂಜನಂ ಯಸ್ಮಾತ್ಸಃ ಪುರಂಜನಃ" ತನ್ನ ಸೂಕ್ಷ್ಮ ದೇಹವನ್ನು ಕರ್ಮಕ್ಕೆ ವಶವಾಗಿಸುವುದರಿಂದ ಸ್ಥೂಲವಾಗಿ ಮಾಡುವವನು ಎಂದು ಪುರಂಜನ ಶಬ್ದಾರ್ಥ. ಅಂದರೆ ಮಾನುಷ ಜೀವನೆಂದರ್ಥ. ಈ ಜೀವನಿಗೆ ಅವಿಜ್ಞಾತ ನಾಮಕ ಪರಮಾತ್ಮನು ಮಿತ್ರನು. ಜೀವನು ವಿಷಯಭೋಗವನ್ನಿಚ್ಛಿಸಿ ದಾಗ ಒಂಭತ್ತು ಬಾಗಿಲುಗಳು, ಎರಡು ಕೈಗಳು, ಎರಡು ಕಾಲುಗಳುಳ್ಳ ಮನುಷ್ಯ ಶರೀರವೇ ತನ್ನ ಇಚ್ಛೆಯನ್ನು ಪೂರ್ಣ ಮಾಡಿಕೊಳ್ಳುವುದಕ್ಕೆ ತಕ್ಕ ಸಾಧನವೆಂದು ತಿಳಿ ಯುವವನು. ಭೋಗಕ್ಕೆ ಕಾರಣವಾದ ಬುದ್ಧಿಯನ್ನು ಜೀವನು ಆಶ್ರಯಿಸಿ ಇಂದ್ರಿಯ ಗಳಿಂದ ವಿಷಯಗಳನ್ನು ಅನುಭವಿಸುವನು, ಇಂದ್ರಿಯಗಳು ವಿಷಯಗಳ ಜ್ಞಾನ ವನ್ನುಂಟುಮಾಡಿ, ಕರ್ಮಗಳನ್ನು ಮಾಡಿಸುವುದರಿಂದ ಹತ್ತು ಇಂದ್ರಿಯಗಳೂ ಬುದ್ಧಿಗೆ ಮಿತ್ರರು. ಅವುಗಳ ಕಾರ್ಯಗಳೂ ಸಖಿಗಳು. ವಿಸ್ತಾರ ವ್ಯಾಪಾರವುಳ್ಳ ಪ್ರಾಣನು ದೇಹವನ್ನು ರಕ್ಷಿಸುವನು. ಮನಸ್ಸು ಇಂದ್ರಿಯ್ಯಗಳಿಗೆ ಬಲವನ್ನು ಕೊಡುವುದು. ಅದು ಇಂದ್ರಿಯಗಳನ್ನು ವಿಷಯದ ಕಡೆಗೆ ಸೆಳೆಯುವುದರಿಂದ ದಶೇಂದ್ರಿಯಗಳಿಗೂ ಮನಸ್ಸು ಯಜಮಾನ. ಶಬ್ದಾದಿ ಪಂಚವಿಷಯಗಳ ಮಧ್ಯೆ ನವದ್ವಾರವುಳ್ಳ ಶರೀರವಿ ರುವುದು. ಈ ಶರೀರಕ್ಕೆ ಎರಡು ಕಣ್ಣುಗಳು, ಎರಡು ಮೂಗಿನ ಹೊಳ್ಳೆಗಳು ಮತ್ತು ಮುಖ ಈ ಐದು ಮುಂಭಾಗದಲ್ಲಿಯೂ, ಬಲದ ಕಿವಿ ದಕ್ಷಿಣಕ್ಕೂ, ಎಡದ ಕಿವಿ ಉತ್ತ ರಕ್ಕೂ ಇವೆ. ಜೀವನು ಚಕ್ಷುರಿಂದ್ರಿಯದಿಂದ ರೂಪವನ್ನೂ, ಘ್ರಾಣೇಂದ್ರಿಯದಿಂದ ಗಂಧವನ್ನೂ, ವಾಗಿಂದ್ರಿಯದಿಂದ ವ್ಯವಹಾರವನ್ನೂ, ರಸನೇಂದ್ರಿಯದಿಂದ ರಸವನ್ನೂಗ್ರಹಿಸುವನು. ಬಲಗಿವಿಯಲ್ಲಿನ ಶ್ರೋತ್ರೇಂದ್ರಿಯದಿಂದ ದೇವಯಾನ ದಲ್ಲಿಯೂ, ಎಡಗಿವಿಯಲ್ಲಿನ ಶ್ರೋತ್ರೇಂದ್ರಿಯದಿಂದ ಪಿತೃಯಾನದಲ್ಲಿಯೂ ಜೀವನು ಹೋಗುವನು. ಮೂತ್ರದ್ವಾರದಿಂದ ಪಿತೃಯಾನದಲ್ಲಿಯೂ ಜೀವನು ಹೋಗುವನು. ಮೂತ್ರ ದ್ವಾರದಿಂದ ಮೂತ್ರವಿಸರ್ಜನೆ, ಗುಹ್ಯೇಂದ್ರಿಯದಿಂದ ದಾಂಪತ್ಯ

ಸುಖವನ್ನೂ, ಅನುಭವಿಸುವನು. ಗುದದ್ವಾರದಲ್ಲಿನ ಪಾಯುರಿಂದ್ರಿಯದಿಂದ ಮಲ ವಿಸರ್ಜನೆ ಮಾಡುವನು. ಕೈಗಳಿಂದ ಕೆಲಸ ಮಾಡುವನು. ಕಾಲುಗಳಿಂದ ನಡೆದಾಡು ವನು. ಜೀವನು ಹೃದಯದಲ್ಲಿ ಮನಸ್ಸಿನ ಗುಣಗಳಾದ ಅಜ್ಞಾನ ಮುಂತಾದುವುಗ ಳಿಂದ ಮೋಹ, ಪ್ರಸಾದ, ಅಥವಾ ಸಂತೋಷವನ್ನು ಹೊಂದುವನು. ಬುದ್ಧಿಯು ಶ್ರೋತ್ರಾದಿ ಇಂದ್ರಿಯಗಳಿಗೆ ಸಹಕಾರಿಯಾದಾಗಲೇ ಆ ಇಂದ್ರಿಯಗಳು ಶ್ರವಣಾದಿ ವ್ಯಾಪಾರಗಳನ್ನು ಮಾಡುತ್ತವೆ. ಹಾಗೆಯೇ ಬುದ್ಧಿಯು ವಾಗಾದಿ ಕರ್ಮೇಂದ್ರಿಯ ಗಳಿಗೆ ಸಹಕಾರಿಯಾದಾಗಲೇ ಅವು ಮಾತಾಡುವುದು ಮೊದಲಾದ ಕರ್ಮಗಳನ್ನು ಮಾಡುತ್ತವೆ. ಜೀವನು ಬುದ್ಧಿಯ ಸಮೀಪದಲ್ಲಿದ್ದು ಅದರ ಕಾರ್ಯವನ್ನೆಲ್ಲ ನೋಡು ತ್ತಿರುವುದರಿಂದಲೇ ಅವನು ಬುದ್ಧಿಯ ಸಹಕಾರದಿಂದ ಇಂದ್ರಿಯ ವ್ಯಾಪಾರ ಗಳಿಗೆಲ್ಲ ಕರ್ತನೆನಿಸುವನು.

ಜೀವನ ದೇಹವೇ ರಥ. ಜ್ಞಾನೇಂದ್ರಿಯಗಳೇ ಕುದುರೆಗಳು. ಹಗಲು, ರಾತ್ರಿ, ಪಕ್ಷ, ಮಾಸ, ಸಂವತ್ಸರವೆಂಬ ಆಯುಷ್ಯವೇ ರಥದ ಸಂಚಾರ. ಅಹಂಮಮತೆಗಳೇ ದಂಡಗಳು. ಪುಣ್ಯಪಾಪ ಕರ್ಮಗಳೇ ಎರಡು ಚಕ್ರಗಳು. ವಾಯುದೇವರೇ ಅಚ್ಚು. ಸತ್ವರಜಸ್ತಮೋಗುಣತ್ರಯವೇ ಧ್ವಜತ್ರಯ. ಪಂಚಪ್ರಾಣಗಳೇ ಬಂಧನಗಳು. ಮನಸ್ಸೇ ಲಗಾಮು. ಬುದ್ಧಿಯೋ ಸಾರಥಿ. ಹೃದಯವೇ ಆಸನ. ಸುಖದುಃಖಾದಿ ದ್ವಂದ್ವಗಳೇ ನೊಗವನ್ನು ಕಟ್ಟಿದ ಮಣಿಕಗಳು. ಪಂಚೇಂದ್ರಿಯಗಳಿಗೆ ಶಬ್ದಾದಿ ವಿಷಯಗಳಲ್ಲಿ ಸಂನಿಕರ್ಷವೇ ಆಯುಧಗಳು. ತ್ವಗಾದಿ ಸಪ್ತ ಧಾತುಗಳೇ ಹೊದ್ದಿಕೆ ಗಳು. ಪಂಚ ವಿಷಯಗಳಲ್ಲಿರುವ ಇಚ್ಛೆಯೇ ಪ್ರಭಾವಗಳು.

ಜೀವನು ಬಹಿರ್ವಿದ್ಯಮಾನ ಪಂಚವಿಷಯಗಳನ್ನು ಭೋಗಿಸುವುದಕ್ಕಾಗಿ ಮರುಮರೀಚಿಕಾ ಜಲವನ್ನು ಕುರಿತು ಓಡುವಂತೆ ಐದು ವಿಧವಾಗಿ ವಿಭಾಗವಾದ ವಿಷಯಾರಣ್ಯವನ್ನು ಕುರಿತು ಧಾವಿಸುವನು. ಇವನ ಜೊತೆಯಲ್ಲಿ ಹನ್ನೊಂದು ಇಂದ್ರಿಯಗಳೂ ಸೈನಿಕರಂತೆ ಬರುವುವು. ವಿಷಯ ಭೋಗಕ್ಕಾಗಿ ಕತ್ತರಿಸುವುದು, ಒಡೆಯುವುದು ಮುಂತಾದುವುಗಳೆಂಬ ಐದು ಪಾಪಗಳನ್ನು ವಿನೋದದಿಂದ ಮಾಡುವನು.

ಜೀವನಿಗೆ ಶತ್ರುವಾಗಿರುವ ಸಂವತ್ಸರವು ದ್ವಿಪರಾರ್ಧ ಆಯುಷ್ಯವೆಂಬ ಕಾಲಕ್ಕೆ ಜ್ಞಾಪಕವು. ಸಂವತ್ಸರದ ಅವಯವಗಳಾದ ಹಗಲು ರಾತ್ರಿಗಳು ಪುನಃ ಪುನಃ ತಿರುಗುವುದರಿಂದ 360 ದಿನಗಳ ಪರಿಮಿತವಾದ ಮನುಷ್ಯನ ಆಯುಷ್ಯವನ್ನು ಅಪಹರಿಸುವುವು. ಅರ್ಧವಯಸ್ಸಿಗೆ ಮುಪ್ಪು ಬರುವುದು. ಮುದುಕನಾಗಲು ಅವನನ್ನು ಯಾರೂ ಇಷ್ಟಪಡುವುದಿಲ್ಲ. ಈ ಮುಪ್ಪಿನ ಅಭಿಮಾನಿಯನ್ನು ಸಕಲ

ರೋಗಗಳಿಗೂ ರಾಜನಾದ ಮೃತ್ಯುವು ಪ್ರಾಣಿಗಳ ಸಂಹಾರಕ್ಕಾಗಿ ಸೋದರಿಯನ್ನಾಗಿ ಸ್ವೀಕರಿಸಿದನು. ಮೃತ್ಯುವಿಗೆ ಆಧಿ (ಚಿಂತೆ) ವ್ಯಾಧಿಗಳು ಪರಿವಾರಗಳು. ಇವು ಉಪದ್ರವಕಾರಿಗಳಾದ್ದರಿಂದ ಜೀವರಿಗೆ ಶತ್ರುಗಳೆನಿಸಿವೆ. ಜ್ವರವು ಮೃತ್ಯುವಿಗೆ ಸಹಕಾರಿಯು.

ಹೀಗೆ ಜೀವನು ಕರ್ಮದಿಂದ ದೇಹವನ್ನು ಗಳಿಸಿ ಆಧ್ಯಾತ್ಮಿಕಾದಿಗಳಿಂದ ಉತ್ಪನ್ನವಾದ ದುಃಖದಿಂದ ಬೇಯುತ್ತ ಅಜ್ಞಾನದಲ್ಲಿ ಮುಳುಗಿ ಅದರ ಪರಿಹಾರ ಮಾರ್ಗವನ್ನು ತಿಳಿಯದೆ, ಚೇತನನಾದರೂ ಗುಣ ಸಂಬಂಧವಿಲ್ಲದೆ, ಸ್ವತಂತ್ರ ಕರ್ತನಾಗಿಲ್ಲದಿದ್ದರೂ ಶ್ವಾಸಾದಿಗಳು, ಜ್ಞಾನ ಕರ್ಮಗಳು, ಸುಖದುಃಖಾದಿಗಳು ಇವುಗಳಿಗೆ ತಾನೇ ಕರ್ತನೆಂದು ಭ್ರಾಂತಿಯನ್ನು ಹೊಂದಿ, ಅಲ್ಪ ವಿಷಯಸುಖಗಳನ್ನು ನೆನೆಯುತ್ತ, ಅದಕ್ಕಾಗಿ ಕಾಮ್ಯಕರ್ಮಗಳನ್ನೇ ಮಾಡುತ್ತಾ ಆ ದೇಹದಲ್ಲಿ ನೂರು ವರ್ಷಗಳ ಕಾಲ ಸೆರೆಸಿಕ್ಕಿ ಕಷ್ಟಪಡುವನು. ಆ ದೇಹವು ಹೋದ ಮೇಲೆ, ಅಲ್ಲಿದ್ದಾಗ ಮಾಡಿದ ಕರ್ಮಗಳಿಗೆ ಅನುಸಾರವಾಗಿ ಒಮ್ಮೆ ಪುರುಷನಾಗಿ, ಒಮ್ಮೆ ಹೆಂಗುಸಾಗಿ, ಒಮ್ಮೆ ನಪುಂಸಕನಾಗಿ ಹುಟ್ಟುವನು. ಅಷ್ಟೇ ಅಲ್ಲದೆ ಪಶು ಪಕ್ಷಿ ಕ್ರಿಮಿ ಮೊದಲಾದ ದೇಹಗಳನ್ನು ಹೊಂದುವನು. ಜೀವನಿಗೆ ಯಾವಾಗಲೂ ಆಧ್ಯಾತ್ಮಿಕಾದಿ ಮೂರು ದುಃಖಗಳಲ್ಲಿ ಯಾವುದಾದರೂ ಒಂದು ದುಃಖವು ಗಂಟುಬಿದ್ದೇ ಇರುವುದು. ಅಜ್ಞಾನದಿಂದ ಗೈದ ಕರ್ಮದ ಫಲವಾದ ದುಃಖವನ್ನು ತಪ್ಪಿಸಿಕೊಳ್ಳುವುದಕ್ಕೆ ಅಜ್ಞಾನದಿಂದ ಮತ್ತೊಂದು ಕರ್ಮ ಮಾಡಿದರೆ ತಿರುಗಿ ದುಃಖವೇ ಬರುವುದು. ಅನಾದಿಯಿಂದ ಬಂದ ಲಿಂಗಶರೀರದೊಳಗಿರುವ ಜಡ ಮನಸ್ಸು ಈ ದುಃಖಕ್ಕೆ ಕಾರಣವಾಗಿರುವುದರಿಂದ "ದೇಹವೇ ಜೀವನೆಂದೂ, ತಾನೇ ಕರ್ತನೆಂದೂ, ಇಂದ್ರಿಯಗಳೆಲ್ಲವೂ ತನ್ನವು ಎಂದೂ" ಭ್ರಮೆ ಉಂಟಾಗುವುದು. ಇದು ಹೋಗುವವರೆಗೂ ಈ ಸಂಸಾರವು ತಪ್ಪುವುದೇ ಇಲ್ಲ.

ಶ್ರೀಹರಿಯ ಅಪರೋಕ್ಷವಾದಾಗ ಈ ಸಂಸಾರವು ತೊಲಗುವುದು. ಅಪರೋಕ್ಷ ಜ್ಞಾನ ಮತ್ತು ವೈರಾಗ್ಯವುಂಟಾಗಲು ಶ್ರೀಹರಿಯಲ್ಲಿ ಭಕ್ತಿಯನ್ನು ಮಾಡಬೇಕು. ಭಕ್ತಿ ಉಂಟಾಗಲು ಯಾವಾಗಲೂ ಶ್ರದ್ಧೆಯಿಂದ ಹರಿಯ ಕಥೆಗಳನ್ನು ಕೇಳುತ್ತ, ಹೇಳುತ್ತ, ಮನನಮಾಡುತ್ತಲೇ ಇರಬೇಕು. ಹರಿಕಥೆಯು ಕಿವಿಗೆ ಬೀಳಬೇಕಾದರೆ ಸದಾ ಹರಿಯ ಕೀರ್ತನೆ ಮಾಡುತ್ತ ಇರುವ ಹರಿದಾಸರ ಸಹವಾಸ ಮಾಡಬೇಕು. ಹೀಗೆ ಸಾಧನೆ ಮಾಡತಕ್ಕವನಿಗೆ ದರ್ಶನ ಕೊಡುವ ಶ್ರೀಹರಿಯ ಮಹಿಮೆಯನ್ನು ಬ್ರಹ್ಮಾದಿಗಳಾರೂ ಸಂಪೂರ್ಣವಾಗಿ ಅರಿಯರು. ಹಾಗೆಂದ ಮಾತ್ರಕ್ಕೆ ಪರಮಾತ್ಮನ ವಿಷಯವು ಪರಮಾತ್ಮನ ಮಹಿಮೆಯು ಸುತರಾಂ ಯಾರಿಗೂ ತಿಳಿಯಲಾರದೆಂದಲ್ಲ. ಅವರವರ ಯೋಗ್ಯತಾನುಸಾರವಾಗಿ ಶ್ರೀಹರಿಯನ್ನು ತಿಳಿಯುವರು. ಭಗವಂತನ ಜ್ಞಾನವೇತಕ್ಕೆ ಬೇಕು ? ಎಂದು ಅದಕ್ಕೆ ಯತ್ನವನ್ನು ಮಾಡದೆ ಯಾವಾಗಲೂ

ದೇಹ ಪೋಷಣೆಯಲ್ಲಿಯೇ ಕಾಲಕಳೆದರೆ ಅಂತಹವನಿಗೂ ಪಶುವಿಗೂ ವ್ಯತ್ಯಾಸವೇ ಇಲ್ಲ. ಆದ್ದರಿಂದ ತನ್ನ ಯೋಗ್ಯತೆ ಇದ್ದಷ್ಟು ಶ್ರೀಹರಿಯ ಜ್ಞಾನಕ್ಕಾಗಿ ಪ್ರಯತ್ನ ಮಾಡಬೇಕು. ಬ್ರಹ್ಮಜ್ಞಾನಿಯಾದವನು ತ್ಯಕ್ತವೇದನು. ಅಂದರೆ ಪ್ರತಿಭೆಯಿಂದ ವೇದೋಕ್ತನಾದ ಬ್ರಹ್ಮನನ್ನು ನೋಡುವನು.

ಜ್ಞಾನಪೂರ್ವಕ ಪರಮೇಶ್ವರನಿಗೆ ಪ್ರೀತಿಯಾಗಲೆಂದು ಮಾಡದಿರುವ ಕರ್ಮವು ಬ್ರಹ್ಮಜ್ಞಾನವನ್ನುಂಟುಮಾಡಲಾರದು. ಆದ್ದರಿಂದ ನಿಷ್ಕಾಮನಾಗಿ ಹರಿಯನ್ನು ಆರಾಧಿಸಬೇಕು. ಹರಿಯೇ ಮೋಕ್ಷದಾತ. ಹೆಂಡತಿ ಮಕ್ಕಳು ಯಾರೂ ಸಂಸಾರವನ್ನು ತಪ್ಪಿಸಲಾರರು. ಆದ್ದರಿಂದ ಶ್ರೀಹರಿಯೇ ನಮಗೆಲ್ಲರಿಗೂ ಪ್ರಿಯತಮನು, ಗುರುವು.

ಜಿಂಕೆಯು ಹೂತೋಟದಲ್ಲಿ ಅಲ್ಪಸುಖಕ್ಕಾಗಿ ಅಲೆಯುತ್ತಿರುವಾಗ, ಹಿಂದಿನಿಂದ ಬೇಡನು ಬಿಡುವ ಬಾಣದಿಂದ ಹತವಾಗುವುದು. ಅದರಂತೆ ಜೀವನು ಕ್ರೀಡಿಸುತ್ತ ರಾತ್ರಿ ಹಗಲುಗಳು ಕಳೆದು ಹೋಗುತ್ತಿರುವುದನ್ನು ಗಮನಿಸದೆ ವಿಷಯ ಸುಖವನ್ನು ಮತ್ತೂ ಮತ್ತೂ ಬಯಸಿ ಅದಕ್ಕೆ ಯತ್ನಮಾಡುತ್ತಿರುವಾಗ ಹಿಂದಿನಿಂದ ಮೃತ್ಯುವು ಒಂದು ಬಡಿಯುವುದು. ಇದೇ ಕಾಮ್ಯಕರ್ಮಗಳ ಫಲವು. ಇದನ್ನು ತಿಳಿದು ಶ್ರೀಹರಿಯಲ್ಲಿ ಚಿತ್ತವನ್ನಿಟ್ಟು, ಹರಿಗುಣ ನಿರ್ಣಯದಲ್ಲಿ ಬುದ್ಧಿಯನ್ನಿಟ್ಟು, ಅಂಗನೆಯರ ವಿಲಾಸವೇ ಪುರುಷಾರ್ಥವೆಂಬ ಭ್ರಾಂತಿಯನ್ನು ಬಿಟ್ಟು, ವಿಷಯಾಸಕ್ತಿಯನ್ನು ತೊರೆದುಬಿಡಬೇಕು. ನಿರ್ದೋಷನಾದ ಪರಮಾತ್ಮನಲ್ಲಿ ಮರೆಹೊಕ್ಕು ಸಂಸಾರದಲ್ಲಿ ವಿರಕ್ತನಾಗುವುದೇ ಜೀವನಿಗೆ ಶ್ರೇಯಸ್ಕರವು.

**ಪ್ರಾಚೀನಬರ್ಹಿ** :- ನಾರದರೇ ! ತಾವು ಅಪ್ಪಣೆ ಕೊಡಿಸಿದ ಆತ್ಮಯೋಗ ಜ್ಞಾನವು ನನಗೆ ಚೆನ್ನಾಗಿ ಉಂಟಾಯಿತು. ಇನ್ನೆರಡು ಸಂದೇಹಗಳನ್ನು ಪರಿಹರಿಸಿರಿ :

1) ಒಂದು ದೇಹದಲ್ಲಿ ಮಾಡಿದ ಕರ್ಮಕ್ಕೆ ಫಲವನ್ನು ಮತ್ತೊಂದು ದೇಹದಲ್ಲಿ ಅನುಭವಿಸುವುದು ಹೇಗೆ ? ಕರ್ಮವನ್ನು ಮಾಡಿದ ದೇಹಕ್ಕೆ ಫಲವಿಲ್ಲ. ಮಾಡದೇ ಇದ್ದುದಕ್ಕೆ ಫಲವೆ ?

2) ವೇದೋಕ್ತ ಕರ್ಮಗಳನ್ನು ಫಲಾಪೇಕ್ಷಿಗಳು ಮಾಡುತ್ತಾರೆ. ಆದರೆ ಅವು ಮರುಕ್ಷಣದಲ್ಲೇ ನಷ್ಟವಾಗುವುದರಿಂದ ಅವು ಮುಂದೆ ಕಂಡು ಬರುವುದಿಲ್ಲ. ಇವುಗಳಿಂದ ಫಲವುಂಟಾಗುವುದು ಹೇಗೆ ?

**ನಾರದ** .- ಬಿಡುವ ಸ್ಥೂಲದೇಹವು ಜೀವನಿಗೆ ಕಾಣಿಸುತ್ತದೆ. ಈ ಸ್ಥೂಲ ದೇಹಕ್ಕಿಂತ ಬೇರೆಯಾದ ಲಿಂಗದೇಹವೆಂಬುದು ಒಂದಿದೆ. ಅದು ಸೂಕ್ಷ್ಮವಾಗಿದೆ.

ಆ ಲಿಂಗ ಶರೀರವಾದರೋ ಪ್ರತಿಯೊಂದು ಜನ್ಮದಲ್ಲಿಯೂ ಅನುಸರಿಸಿ ಬರುತ್ತದೆ. ಅದರೊಳಗೆ ಪ್ರಧಾನವಾದ ಮನಸ್ಸಿದೆ. ಈ ಲಿಂಗದೇಹದಿಂದಲೇ ಜೀವನು ಕರ್ಮ ಮಾಡುವನು. ಇದರಿಂದಲೇ ಜೀವನು ಪರಲೋಕದಲ್ಲಿ ತನ್ನ ಕರ್ಮಫಲವನ್ನು ಅನುಭವಿಸುವನು. ಹೀಗೆ ಶಾಸ್ತ್ರಗಳು ತಿಳಿಸುವುವು. ಆದ್ದರಿಂದ ಮೊದಲನೆಯ ಸಂದೇಹಕ್ಕೆ ಅವಕಾಶವಿಲ್ಲ.

ಜೀವನೇ ಸಾಕ್ಷಾತ್ ಕರ್ಮವನ್ನು ಮಾಡುವವನೂ, ಅದರ ಫಲವನ್ನು ಅನುಭವಿಸುವವನೂ ಆಗಿದ್ದಾನೆ. ಅದರಲ್ಲಿ ಮನಸ್ಸು ಅಂತರಂಗ ಸಾಧನ. ಈ ಜನ್ಮದಲ್ಲಿ ಮಾಡಿದ ಕರ್ಮ ಈಗಲೇ ನಷ್ಟವಾದರೂ ಅದು ಹೋಗುವಾಗ ಕರ್ತೃವಿನ ಮನಸ್ಸಿನಲ್ಲಿ ಫಲವನ್ನು ಕೊಡುವ ಅದೃಷ್ಟವನ್ನು (ಸಂಸ್ಕಾರವನ್ನು) ಆಧಾನಮಾಡಿಯೇ ನಷ್ಟವಾಗುವುದು. ಅದೃಷ್ಟವು ಕರ್ತನಿಗೆ ಫಲವು ದೊರೆಯುವವರೆಗೂ ಜೀವನ ಜೊತೆಯಲ್ಲಿಯೇ ಬರುವುದು (ನೌಕರನು ವರ್ಗವಾದ ಕಡೆಗೆ ಹೋಗುವಾಗ ಅವನ ಜೊತೆಯಲ್ಲಿಯೇ ಸರ್ವಿಸ್ ರಿಜಿಸ್ಟರು ಇರುವುದಷ್ಟೆ ?) ಆದ್ದರಿಂದ ಕರ್ಮವು ನಷ್ಟವಾದರೂ ಅದರ ಫಲವು (ಸಂಸ್ಕಾರ-ಗುರುತು) ಅನುಭವಿಸುವವರೆಗೂ ಜೊತೆಯಲ್ಲಿಯೇ ಬರುವುದು (ಇದು ಎರಡನೆಯ ಸಂದೇಹಕ್ಕೆ ಪರಿಹಾರ).

ಇದರಿಂದ ಲಿಂಗ ಮತ್ತು ಮನಸ್ಸು ಅನಾದಿಯಿಂದ ಒಂದೇ ರೂಪಗಳಲ್ಲಿವೆ. ಸ್ಥೂಲ ದೇಹಗಳಾದರೋ ಭಿನ್ನಭಿನ್ನಗಳಾಗಿವೆ. ಬರುವ ಸಕಲ ದೇಹಗಳಲ್ಲಿ ಕರ್ತೃವೂ, ಭೋಕ್ತೃವೂ, ಜೀವನೊಬ್ಬನೇ ಆಗಿರುವನು. ಅವನು ಮಾಡುವ ಕರ್ಮಗಳ ಸಂಸ್ಕಾರವು ಪ್ರತಿ ಜನ್ಮದಲ್ಲಿಯೂ ಜೀವನನ್ನು ಹಿಂಬಾಲಿಸುವ ಮನಸ್ಸಿನಲ್ಲಿ ನಿಂತಿರುವುವು. ಹೀಗೆ ಬಹುಜನ್ಮಗಳಲ್ಲಿ ವಿಷಯಾಸಕ್ತನಾಗಿದ್ದು, ಅದರ ವಾಸನೆಯಿಂದ ಪುನಃ ಪುನಃ ವಿಷಯಭೋಗಗಳನ್ನು ಜೀವನು ಅನುಭವಿಸುವನು. ಅಪರೋಕ್ಷ ಜ್ಞಾನವಾದಾಗ ಅನಾದಿಯಿಂದ ಅದುವರೆಗೆ ಸಂಗ್ರಹವಾಗಿರುವ ಸಂಚಿತ ಕರ್ಮಗಳು ನಾಶವಾಗಿ ಅದರ ಫಲವಾದ ವಿಷಯಗಳು ಸಂಸ್ಕಾರ ರೂಪದಿಂದ ಮನಸ್ಸಿನಲ್ಲಿ ನಿಲ್ಲುವುದಿಲ್ಲ. ವಿಷಯಗಳು ಬಂದರೂ ಅಪರೋಕ್ಷ ಜ್ಞಾನಿಯ ಮನಸ್ಸು ಹರ್ಯನುಸಂಧಾನಪ್ರಾಪ್ತ ಸುಖಮಗ್ನವಾಗಿ ಉನ್ಮತ್ತನಂತೆ ವಿಷಯಗಳನ್ನು ಲೆಕ್ಕಿಸುವುದೇ ಇಲ್ಲ.

ಅನಾದಿಯಾದ ಲಿಂಗದೇಹವಿರುವವರೆಗೂ ಸಂಸಾರಕ್ಕೆ ಕಾರಣವಾದ ಅಹಂಕಾರ ಮಮಕಾರಗಳು ಹೋಗುವುದಿಲ್ಲ. ಲಿಂಗದೇಹವು ಇರುವಮಾತ್ರವೇ ಅಹಂಕಾರ ಮಮಕಾರಕ್ಕೆ ಕಾರಣವಾಗುವುದಿಲ್ಲ. ಮತ್ತೇನೆಂದರೆ ಲಿಂಗದೇಹದಿಂದ ಸ್ಥೂಲ ದೇಹವು ಹುಟ್ಟಬೇಕು. ಅದರಲ್ಲಿ ಇಂದ್ರಿಯಗಳು ಪಟುವಾಗಬೇಕು. ಆಯಾ ಪಟುವಾದ ಇಂದ್ರಿಯದಿಂದ ಅದರದರ ವಿಷಯ ಜ್ಞಾನವುಂಟಾದರೆ ಆ ವಿಷಯಗಳಲ್ಲಿ

'ಅಹಂ ಮಮ' ಎಂಬ ಅಭಿಮಾನವುಂಟಾಗುವುದು. ಕರ್ತನಾದ ಜೀವನು ವಿಷಯಾ ಸಕ್ತನಾಗಿರುವವರೆಗೂ ಭ್ರಮೆಯೂ, ಲಿಂಗದೇಹವೂ ಇರುವುದರಿಂದ ಅವನಿಗೆ ಹುಟ್ಟು ಸಾವು ಎಂಬ ಸಂಸಾರವು ತಪ್ಪುವುದಿಲ್ಲ. ಅಭಿಮಾನವನ್ನುಂಟುಮಾಡುವ ಲಿಂಗ ಶರೀರವು ಪಂಚಪ್ರಾಣಗಳು, ಜ್ಞಾನೇಂದ್ರಿಯಕರ್ಮೇಂದ್ರಿಯಗಳು ಹತ್ತು, ಮನಸ್ಸು ಒಟ್ಟು ಹದಿನಾರು ಕಲೆಗಳಿಂದ ಯುಕ್ತವಾಗಿ ಜೀವಸಂಬದ್ಧವಾಗಿರುವ ಪ್ರಯುಕ್ತ ಜೀವ ಎಂದು ಗೌಣವಾಗಿ ಕರೆಸುವುದು. ಜೀವನು ಈ ಲಿಂಗಶರೀರ ಜನ್ಯ ಸ್ಥೂಲ ದೇಹವನ್ನು ಹೊಂದಿ, ಅದರಿಂದ ಹರ್ಷಶೋಕಗಳನ್ನು ಹೊಂದುವವ ನಾಗಿ, ಲಿಂಗ ಶರೀರವೇ ಸಂಸಾರಕ್ಕೆ ಮೂಲವಾಗಿದೆ. ಸ್ಥೂಲದೇಹವನ್ನು ಬಿಟ್ಟು ತೇಜೋದೇಹವನ್ನಾಗಲಿ. ಯಾತನಾ ದೇಹವನ್ನಾಗಲಿ ಹೊಂದುವವರೆಗೂ, ಜೀವನು ಬಿಟ್ಟ ಆ ಸ್ಥೂಲದೇಹದ ಅಭಿಮಾನವನ್ನು ಬಿಡುವುದಿಲ್ಲ. ಬೇರೆ ದೇಹವನ್ನು ಹೊಂದಿದ ಮೇಲೆಯೇ ಹಿಂದಿನ ದೇಹಾಭಿಮಾನವು ಹೋಗುತ್ತದೆ. ಅಭಿಮಾನದಿಂದ ಜೀವನು ಮಾಡಿದ ಕರ್ಮಗಳು ಅನಂತವಾಗಿವೆ. ಅವು ಭಗವಂತನ ಪ್ರಸಾದವಿಲ್ಲದೆ ನಾಶವಾಗುವುದಿಲ್ಲ. ಆ ಕರ್ಮಗಳು ಇರುವವರೆಗೂ ದೇಹಗಳು ತಪ್ಪುವುದೇ ಇಲ್ಲ.

ಹೀಗೆ ಅನಾದಿಯಾದ ಲಿಂಗದೇಹದಲ್ಲಿರುವ ಮನಸ್ಸಿನಿಂದ ಸ್ಥೂಲದೇಹವು ಬರುವುದು. ಅದರಲ್ಲಿ ಅಹಂ ಮಮಾಭಿಮಾನದಿಂದ ಇಂದ್ರಿಯ ವಿಷಯಗಳ ಧ್ಯಾಸ, ಅದರಿಂದ ತಿರುಗಿ ಅದಕ್ಕನುಗುಣವಾದ ಕರ್ಮ ಮಾಡುವಿಕೆ, ಅದಕ್ಕೆ ಫಲವಾಗಿ ಮತ್ತೊಂದು ದೇಹವು ಬರುವುದು. ಇದೇ ಸಂಸಾರ ಪ್ರವಾಹವು. ಇದು ತಪ್ಪ ಬೇಕಾದರೆ ಪತ್ನೀ ಪುತ್ರಾದಿಗಳಲ್ಲಿನ ಪ್ರೇಮವನ್ನು ಬಿಟ್ಟು ಹರಿಯನ್ನು ಭಜಿಸು.

ಶ್ರೀಹರಿಯಾದರೋ ಜಗತ್ತಿನ ಸೃಷ್ಟ್ಯಾದಿ ಕರ್ತನು. ಜಗತ್ತಿನೊಳಗೆಲ್ಲ ವ್ಯಾಪ್ತನು. ಅದರ ಸತ್ತಾ ನಿಯಾಮಕನು. ಹೀಗೆಂದು ಅವನ ಗುಣಗಳನ್ನು ಚಿಂತಿಸು. ಬ್ರಹ್ಮಜ್ಞಾನವಾದ ಮೇಲೂ ಹರಿಯಲ್ಲಿ ಭಕ್ತಿ, ಸಜ್ಜನರಲ್ಲಿ ದಯೆ, ತಾನು ಜಡದೇಹವಲ್ಲವೆಂದೂ, ಜ್ಞಾನಾನಂದ ಸ್ವರೂಪನೆಂದೂ ಸ್ಪಷ್ಟ ಸ್ವರೂಪಜ್ಞಾನ ಇವು ಉಂಟಾದಾಗ, ಪರಮಾತ್ಮನ ಅತ್ಯರ್ಥ ಪ್ರಸಾದದಿಂದ ಬೇಗ ಸಂಸಾರದಿಂದ ಬಿಡುಗಡೆ ಯಾಗುವುದು.

ಬ್ರಹ್ಮನನ್ನು ಬಿಟ್ಟು ಇತರವಾದುದೆಲ್ಲ ನಶ್ವರ ಮತ್ತು ಪುರುಷಾರ್ಥ ಸಾಧಕವಲ್ಲ ವೆಂದು ತಿಳಿದು ಹರಿಯು ನಿತ್ಯಪುರುಷಾರ್ಥನೆಂದು ನಿಶ್ಚಯಿಸಿ ಅವನಲ್ಲಿ ಮಾಡುವ ನಿಷ್ಠೆಯೇ ಮುಕ್ತಿಗೆ ಪರಮಸಾಧನವು.

**ಮೈತ್ರೇಯ :–** ವಿದುರಾ ! ನಾರದರು ಪ್ರಾಚೀನಬರ್ಹಿಗೆ ಜೀವ ಪರಮಾತ್ಮರ ಲಕ್ಷಣವನ್ನು ಉಪದೇಶಿಸಿ ಹೊರಟು ಹೋದರು. ಪ್ರಾಚೀನಬರ್ಹಿಯು

ಮಂತ್ರಿಗಳನ್ನು ಕರೆದು ತನ್ನ ಮಕ್ಕಳು ಬಂದಾಗ ಸಂತಾನ ಪಡೆದು, ಪ್ರಜೆಗಳನ್ನು ರಕ್ಷಿಸಬೇಕೆಂದು ತನ್ನ ಅಪ್ಪಣೆ ತಿಳಿಸಬೇಕೆಂದು ಹೇಳಿ, ಕಪಿಲಾಶ್ರಮಕ್ಕೆ ಹೋಗಿ, ಗೋವಿಂದನ ಪಾದಾರವಿಂದವನ್ನು ಧ್ಯಾನಿಸಿ ಮುಕ್ತನಾದನು. ವಿದುರಾ ! ನಾರದರು ಹೇಳಿದ ಜೀವಪರಮಾತ್ಮರ ಸ್ವರೂಪವನ್ನು ಒಳಗೊಂಡ ಈ ಇತಿಹಾಸವನ್ನು ಪಠಿಸುವವರೂ, ಕೇಳುವವರೂ ಮುಕ್ತರಾಗುವರು. ಈ ಪುರಂಜನನ ಕಥೆಯನ್ನು ಗುರುಮುಖದಿಂದ ಶ್ರವಣಮಾಡಿದ ಹಾಗೆಯೇ ನಿನಗೆ ಉಪದೇಶಿಸಿರುವೆನು. ನೀನೂ ಹಾಗೆಯೇ ಅಧ್ಯಯನ ಮಾಡಿ ಅಭ್ಯಾಸ ಮಾಡು. ಈ ರೀತಿಯಾಗಿ ವಿಚಾರ ಮಾಡುವವನಿಗೆ ವೇದದಲ್ಲಿ ಹೇಳಿರುವ ದೇಹ, ಅಭಿಮಾನಿ ದೇವತೆಗಳು ಮುಂತಾದ ವಿಷಯದಲ್ಲಿ ಸಂಶಯ ಪರಿಹಾರವಾಗುವುದು. ಇದನ್ನು ಶ್ರವಣ ಮಾಡಿದ ನನಗೆ ಸಂಶಯವು ಹೋದಂತೆ ನನ್ನಿಂದ ಶ್ರವಣ ಮಾಡಿದ ನಿನಗೂ ಸಂಶಯವು ಪರಿಹಾರ ವಾಗುವುದು.

## ಇಪ್ಪತ್ತೊಂಭತ್ತನೆಯ ಅಧ್ಯಾಯ ಮುಗಿದುದು

ಇತ್ತ ಪ್ರಚೇತಸರು ಶಿವನು ಉಪದೇಶಿಸಿದ ರುದ್ರಗೀತೆಯನ್ನು ಜಪಿಸಿ ಸಮುದ್ರದಲ್ಲಿ ಮುಳುಗಿ ಶ್ರೀಹರಿಯನ್ನು ಭಜಿಸುತ್ತಿದ್ದರಷ್ಟೆ ? ಬಹಳ ವರ್ಷಗಳು ಕಳೆದುವು. ಬಳಿಕ ಹರಿಯು ಅವರಿಗೆ ದರ್ಶನ ಕೊಟ್ಟು

**ಹರಿ :** ನಿಮಗೆ ಕ್ಷೇಮವಾಗಲಿ. ಬೇಕಾದ ವರವನ್ನು ಕೇಳಿ ಕೊಡುವೆನು. ನಿಮ್ಮ ಏಕವಿಷಯ ಧರ್ಮಾನುಷ್ಠಾನವನ್ನು ಪ್ರತಿದಿನ ಸಂಧ್ಯಾಕಾಲದಲ್ಲಿ ಸ್ಮರಿಸುವವ ನಿಗೆ ತನ್ನಂತೆ ಗುಣಾಢ್ಯರಾದ ಸಹೋದರರೂ, ಪ್ರಾಣಿಗಳಲ್ಲಿ ದಯೆಯೂ ಉಂಟಾಗು ವುದು. ನೀವು ಉಪದೇಶ ಹೊಂದಿದ ರುದ್ರಗೀತೆಯಿಂದ ಬೆಳಗ್ಗೆ ಸಾಯಂಕಾಲಗಳಲ್ಲಿ ನನ್ನನ್ನು ಸ್ತುತಿಸುವವರಿಗೆ ಇಷ್ಟವರಗಳನ್ನೂ, ಶ್ರೇಷ್ಠಜ್ಞಾನವನ್ನೂ ಕೊಡುವೆನು. ನಿಮ್ಮ ಕೀರ್ತಿಯು ಲೋಕವಿಖ್ಯಾತವಾಗುವುದು. ನಿಮಗೆ ಲೋಕವಿಖ್ಯಾತನಾದ ಒಬ್ಬ ಪುತ್ರನಾಗುವನು. ಅವನ ಸಂತಾನವೇ ಮೂರು ಲೋಕದಲ್ಲಿಯು, ವ್ಯಾಪಿಸುವುದು. ಕಂಡುವೆಂಬ ಋಷಿಗೆ ಪ್ರಮ್ಲೋಚೆಯೆಂಬ ಅಪ್ಸರಸ್ತ್ರೀಯಲ್ಲಿ ಹುಟ್ಟಿದ ಕನ್ಯೆಯನ್ನು ತಾಯಿಯು ಬಿಟ್ಟುಹೋದ ಕಾರಣ ವೃಕ್ಷಾಭಿಮಾನಿಗಳು ರಕ್ಷಿಸಿದ್ದಾರೆ. ಚಂದ್ರನು ಅಮೃತವನ್ನು ಸುರಿಸುವ ತನ್ನ ತರ್ಜನೀ ಬೆರಳನ್ನು ಆ ಮಗುವಿಗೆ ಚೀಪಿಸಿ ಅಮೃತ ಪಾನ ಮಾಡಿಸಿರುವನು. ಅವಳೀಗ ಯೌವನವತಿಯಾಗಿರುವಳು. ನೀವು ಹತ್ತು ಮಂದಿಯೂ ಅವಳನ್ನು ಮದುವೆ ಮಾಡಿಕೊಳ್ಳಿ. ನಿಮ್ಮ ಹತ್ತು ಮಂದಿಯ ಮತ್ತು ಅವಳ ಸ್ವಭಾವವು ಒಂದೇ ಆಗಿರುವುದರಿಂದಲೂ. ನಾನು ಅಪ್ಪಣೆಕೊಟ್ಟಿರು ವುದರಿಂದಲೂ ಹತ್ತು ಜನಗಳಿಗೆ ಒಬ್ಬಳೇ ಪತ್ನಿಯೆಂಬ ದೋಷವಿಲ್ಲ. ನನ್ನ ಅನು

ಗ್ರಹದಿಂದ ದೇವಮಾನ ಬಹು ವರ್ಷಗಳ ಕಾಲ ಈ ಲೋಕ ಮತ್ತು ಸ್ವರ್ಗಲೋಕಗಳ ಸುಖವನ್ನು ಅನುಭವಿಸಿರಿ. ಬಳಿಕ ವೈರಾಗ್ಯ ಸಂಪನ್ನರಾಗಿ ಸಂಸಾರದಿಂದ ಬಿಡುಗಡೆಯನ್ನು ಹೊಂದಿ ನನ್ನ ಲೋಕಕ್ಕೆ ಬನ್ನಿರಿ. ವಿಹಿತಕರ್ಮಗಳನ್ನಾಚರಿಸಿ ನನಗೆ ಸಮರ್ಪಿಸುತ್ತ, ನನ್ನ ಕಥಾಶ್ರವಣದಲ್ಲಿಯೇ ಕಾಲ ಕಳೆಯುತ್ತ ಇರುವ ಗೃಹಸ್ಥರಿಗೆ ಆ ಧರ್ಮವು ಬಂಧಕವಾಗುವುದಿಲ್ಲ.

**ಪ್ರಚೇತಸರು** :– "ನಮೋ ನಮಃ ಕ್ಲೇಶವಿನಾಶನಾಯ" (ಇತ್ಯಾದಿಯಾಗಿ ಸ್ತುತಿಸಿ) ದೇವ ! ನಿನ್ನ ದರ್ಶನವಾಯಿತು. ಇದೇ ಸಾಕು. ನಮ್ಮ ಮನಸ್ಸಿನಲ್ಲಿರುವುದನ್ನು ಸರ್ವಜ್ಞನಾದ ನೀನು ತಿಳಿದೇ ಇರುವೆ. ನಮಗೆ ನೀನು ಪ್ರಸನ್ನನಾಗಿರುವೆ. ಇಂತಹ ನೀನೇ ನಮಗೆ ಇಷ್ಟವಾದ ವರವು. ಮತ್ತಾವುದೂ ಅಲ್ಲ. ಆದರೂ ಸಜ್ಜನಸಂಗವನ್ನೇ ಕೊಡು. ನಿನ್ನ ಪಾದವು ದೊರೆತಿರುವಾಗ ಅದನ್ನು ಬಿಟ್ಟು ಇನ್ನಾವುದನ್ನೂ, ಬೇಡುವುದಿಲ್ಲ. ಶಿವನ ಸಂಗವು ನಮಗಾದುದರಿಂದಲೇ ನಿನ್ನನ್ನು ನಾವು ಕಾಣುವಂತಾಯಿತು. ಆದ್ದರಿಂದ ಸಾಧುಸಂಗದ ಫಲವು ನಮ್ಮ ಅನುಭವಕ್ಕೆ ಬಂದಿದೆ. ಇದುವರೆಗೆ ಮಾಡಿದ ವೇದಾಧ್ಯಯನಾದಿ ಸಕಲಕರ್ಮಗಳೂ ನಿನ್ನ ಪ್ರಸಾದಕ್ಕೆ ಕಾರಣವಾಗಲಿ. ನೀನು ಅನಂತನು. ನಿನ್ನನ್ನು ನಮ್ಮ ಯೋಗ್ಯತೆ ಇರುವಷ್ಟು ಸ್ತುತಿಸಿರುವೆವು. ಸಮನೂ, ಶುದ್ಧನೂ, ಲಕ್ಷ್ಮಿಗಿಂತ ಉತ್ತಮನೂ, ವಾಸುದೇವನೂ ಆದ ನಿನಗೆ ನಮಸ್ಕಾರ !

**ಮೈತ್ರೇಯ** :– ಶ್ರೀಹರಿಯು ಪ್ರೀತನಾಗಿ ಪ್ರಚೇತಸರ ಇಷ್ಟವನ್ನು ಪೂರೈಸಿ ತನ್ನ ಲೋಕಕ್ಕೆ ಹೋದನು. ಪ್ರಚೇತಸರು ಸಮುದ್ರದಿಂದ ಈಚೆಗೆ ಬಂದು ನೋಡಿದರು. ಅರಾಜಕವಾಗಿ ಕೃಷ್ಯಾದಿಗಳಿಲ್ಲದೆ ಹೋಗಿದ್ದುದರಿಂದ ಭೂಮಿಯ ಮೇಲೆ ಮರಗಿಡಗಳು ಬಹಳ ಬೆಳೆದು ಹೋಗಿದ್ದುವು. ಅವರು ಇದನ್ನು ಕಂಡು ಕುಪಿತರಾಗಿ ಅಗ್ನಿ ಮತ್ತು ವಾಯುವನ್ನು ತಮ್ಮ ಮುಖದಿಂದ ಹೊರಡಿಸಿದರು. ವೃಕ್ಷಗಳು ಉರಿದು ಹೋಗಿ ಬೂದಿಯಾದುವು. ಬ್ರಹ್ಮದೇವರು ಬಂದು ಅವರನ್ನು ಸಮಾಧಾನ ಮಾಡಿ, ವೃಕ್ಷಾಭಿಮಾನಿಗಳಿಂದ ಅರ್ಪಿಸಲ್ಪಟ್ಟ **ಮಾರಿಷಾ** ನಾಮಕ ಕನ್ಯೆಯನ್ನು ಮದಿವೆಯಾಗುವಂತೆ ಹೇಳಲು ಪ್ರಚೇತಸರು ಅದರಂತೆ ಮದಿವೆಯಾದರು. ಶಿವನಿಂದೆಯನ್ನು ಮಾಡಿದ್ದರಿಂದ ಬ್ರಹ್ಮದೇವರ ಪುತ್ರನಾದ ದಕ್ಷನು ಆ ಕ್ಷತ್ರಿಯ ಜಾತಿ ಕನ್ಯೆಯಲ್ಲಿ ಹುಟ್ಟಿದನು. ಆಗಿನ ಚಾಕ್ಷುಷಮನ್ವಂತರದಲ್ಲಿ ದಕ್ಷನು ಬೇಕಾದಷ್ಟು ಪ್ರಜೆಗಳನ್ನು ಸೃಷ್ಟಿಸಿದನು. ಆಗ ತನ್ನ ಕಾಂತಿ ಮೊದಲಾದ ಗುಣಗಳಿಂದ ತೇಜಸ್ವಿಗಳ ಕಾಂತಿಯೆಲ್ಲವನ್ನೂ ಅಡಗಿಸಿದನಾದ್ದರಿಂದ ಅವನನ್ನು **ದಕ್ಷ** (ಸಮರ್ಥ) ನೆಂದೇ ಕರೆದು ನಾಮವಿಟ್ಟರು. ಹರಿಯ ಪುತ್ರರಾದ ಬ್ರಹ್ಮದೇವರೂ, ಮರೀಚೀ ಮೊದಲಾದ ಪ್ರಜೇಶ್ವರರೂ ಇವನನ್ನು ಪ್ರಜಾಸರ್ಗದ ರಕ್ಷಣೆಯಲ್ಲಿ ನಿಯೋಗಿಸಿದರು.

**ಮೂವತ್ತನೆಯ ಅಧ್ಯಾಯ ಮುಗಿದುದು**

ಪ್ರಚೇತಸರು ಮಾನವಮಾನ ಹನ್ನೆರಡು ಲಕ್ಷ ವರ್ಷಗಳ ಕಾಲ ರಾಜ್ಯವಾಳಿ ಹರಿಯ ಅಪ್ಪಣೆಯಂತೆ ಹೆಂಡತಿಯನ್ನು ಮಗನಪೋಷಣೆಯಲ್ಲಿ ಬಿಟ್ಟು, ಸಂನ್ಯಾಸಿಗಳಾಗಿ ಪಶ್ಚಿಮ ಸಮುದ್ರಕ್ಕೆ ಬಂದು ಹರಿಯನ್ನು ಆರಾಧಿಸಲಾರಂಭಿಸಿದರು. ಅಲ್ಲಿಗೆ ಬಂದ ನಾರದರನ್ನು ಅವರು ಪ್ರಶಂಸಿಸಿ "ಸ್ವಾಮೀನಾರದರೇ ! ರುದ್ರದೇವರೂ, ಶ್ರೀಹರಿಯೂ ಉಪದೇಶಿಸಿದ ಜ್ಞಾನವು ಕುಟುಂಬಾಸಕ್ತರಾಗಿದ್ದ ನಮಗೆ ಮರೆತು ಹೋದಂತಾಗಿದೆ. ಆದ್ದರಿಂದ ಪರಾಪರತತ್ತ್ವಗಳ ಜ್ಞಾನವನ್ನು ಉಂಟುಮಾಡುವ ಅಧ್ಯಾತ್ಮ ಜ್ಞಾನವನ್ನು ಮತ್ತೆ ಬೆಳಗಿಸಿರಿ. ಅದರಿಂದ ಈ ಸಂಸಾರವನ್ನು ದಾಟಲು ಸಾಧ್ಯವಾಗುವುದು" ಎಂದು ಪ್ರಾರ್ಥಿಸಿದರು.

**ನಾರದ :** ಹರಿಗೆ ಪ್ರೀತಿಕರವಾದ ಜನ್ಮ, ಕರ್ಮ, ಆಯುಷ್ಯ, ತಪಸ್ಸು ಮುಂತಾದುವುಗಳೇ ಸಾರ್ಥಕಗಳು. ಜ್ಞಾನೋತ್ಪತ್ತಿಪೂರ್ವಕವಾದ ಕರ್ಮಗಳನ್ನು ಪರಮಾತ್ಮಪ್ರಾಪ್ತಿಯವರೆಗೂ ಅನುಷ್ಠಿಸುತ್ತಿರಬೇಕು. ಶ್ರೀಹರಿಯೇ ಪರಮಾತ್ಮನು. ಅಂತರ್ಯಾಮಿಯಾದ ಅವನನ್ನು ಪೂಜಿಸುವುದು ಬ್ರಹ್ಮಾದಿಗಳ ಪ್ರೀತಿಜನಕರೂಪ ಪೂಜೆಯಾಗುವುದು. ಆದರಿಂದ ಭ್ರಮೆಯು ನಾಶವಾಗುವುದು. ಹರಿಯು ತ್ರಿಗುಣಾತ್ಮಕ ಜಗತ್ತನ್ನು ಧರಿಸಿದ್ದರೂ ಅದರ ಸಂಬಂಧ ಲೇಪವಿಲ್ಲ. ಇಂತಹ ದೋಷದೂರನನ್ನು ಚೆನ್ನಾಗಿ ನೀವು ಭಜಿಸಿರಿ. ಪ್ರಾಣಿಗಳಲ್ಲಿ ದಯೆ, ದೇವರು ಕೊಟ್ಟಷ್ಟರಲ್ಲಿಯೇ ತೃಪ್ತಿ, ಇಂದ್ರಿಯ ಜಯ ಈ ಮೂರು ಸಾಧನೆಗಳಿಂದ ಹರಿಯು ಬೇಗ ಪ್ರಸನ್ನನಾಗುವನು. ಪುತ್ರಾದಿಗಳಲ್ಲಿ ಮಮತೆಯನ್ನು ಬಿಟ್ಟು ಭಕ್ತಿಯಿಂದ ಆರಾಧಿಸುವವರ ಹೃದಯದಲ್ಲಿ ಹರಿಯು ಬಂದು ನಿಲ್ಲುವನು. ಪುನಃ ಹೋಗುವುದೇ ಇಲ್ಲ. ಅಯೋಗ್ಯರ ಪೂಜೆಯನ್ನು ಅವನು ಕಣ್ಣೆತ್ತಿ ನೋಡುವುದಿಲ್ಲ. "ದುರ್ಜನರ ಪೂಜೆಯ ನೊಲ್ಲ ಅಪ್ರತಿಮಲ್ಲ ಜಗಕೆಲ್ಲ". ಹರಿಯು ಭಕ್ತವತ್ಸಲ. ಈ ಪ್ರಭುವನ್ನು ಯೋಗ್ಯನಾದ ಯಾವನೂ ಬಿಡುವುದಿಲ್ಲ. ನಿಮ್ಮ ಹಿರಿಯರೆಲ್ಲರೂ ಹರಿಭಕ್ತರು. ಧ್ರುವನು ವಿಶೇಷ ಭಕ್ತ. ಐದನೆಯ ವಯಸ್ಸಿನಲ್ಲಿಯೇ ನನ್ನ ಉಪದೇಶದಂತೆ ಶ್ರೀಹರಿಯನ್ನು ಆರಾಧಿಸಿ ಉತ್ತಮ ಪದವಿಯನ್ನು ಪಡೆದನು. ಧ್ರುವನಿಗೆ ಅನುಗ್ರಹಿಸಿದ ಶ್ರೀ ಹರಿಯನ್ನು ಶಿವೋಪದಿಷ್ಟ ಮಂತ್ರದಿಂದ ಸಂಸಾರನಾಶಕ್ಕಾಗಿ ನೀವು ಭಜಿಸಿರಿ.

(ಹೀಗೆ ನಾರದರು ಹೇಳಿ ಹೊರಟು ಹೋದರು. ಪ್ರಚೇತಸರು ಅದರಂತೆ ಹರಿಯನ್ನು ಆರಾಧಿಸಿ ಅವನ ಸಾನ್ನಿಧ್ಯವನ್ನು ಹೊಂದಿದರು.

**ಶುಕ :** ಪರೀಕ್ಷಿದ್ರಾಜನೇ ! ಇದುವರೆಗೆ ನಾನು ಹೇಳಿದ್ದು ಉತ್ತಾನಪಾದ ರಾಜನ ವಂಶವನ್ನು. ಇನ್ನು ಮುಂದೆ ಪ್ರಿಯವ್ರತನ ವಂಶವನ್ನು ಹೇಳುವೆನು. ಪ್ರಿಯವ್ರತನು ನಾರದರಿಂದ ಸರ್ವೋತ್ತಮನಾದ ಶ್ರೀಹರಿಯ ತತ್ತ್ವವನ್ನು ತಿಳಿದು, ರಾಜ್ಯವಾಳಿ ಭೂಮಿಯನ್ನು ಮಕ್ಕಳಿಗೆ ಹಂಚಿಕೊಟ್ಟು ಕೊನೆಗೆ ಶ್ರೀಹರಿಯನ್ನು ಸೇರಿದನು.

(ಹೀಗೆ ಮೈತ್ರೇಯರು ವರ್ಣಿಸಿದ ಶ್ರೀಹರಿಯ ನಿರ್ದೋಷವಾದ ಕಥೆಯನ್ನು ಕೇಳಿದ ವಿದುರರು ಆನಂದಬಾಷ್ಪದಿಂದ ತುಂಬಿದ ನೇತ್ರರಾಗಿ, ಮೈತ್ರೇಯರ ಪಾದಗಳ ಮೇಲೆ ತಲೆಯಿಟ್ಟು ನಮಿಸಿದರು. ಮನಸ್ಸಿನಲ್ಲಿ ಶ್ರೀ ಹರಿಯ ಪಾದಗಳನ್ನೇ ಸ್ಮರಿಸುತ್ತಿದ್ದರು ಅವರು "ಮಹಾಯೋಗಿಗಳೆ ! ತಾವು ದಯಾಪೂರ್ಣ ಮನಸ್ಸಿನಿಂದ ಜ್ಞಾನವನ್ನುಂಟು ಮಾಡಿದಿರಿ ನಿರಪೇಕ್ಷಿಗಳಾದ ಭಕ್ತರ ಮನಸ್ಸಿನಲ್ಲಿ ನೆಲೆಸಿರುವ ಶ್ರೀಹರಿಯನ್ನು ಮನದಟ್ಟು ಮಾಡಿದಿರಿ" ಎಂದು ಹೇಳಿ ಅವರಿಗೆ ನಮಿಸಿ ಅಪ್ಪಣೆ ಪಡೆದು ಹಸ್ತಿನಾವತಿಗೆ ತೆರಳಿದರು

**ಶುಕ** ಶ್ಲೋಕ

**ಏತದ್ಯಃ ಶೃಣುಯಾದ್ರಾಜನ್ ರಾಜ್ಞಾಂ ಹರ್ಯರ್ಪಿತಾತ್ಮನಾಂ ।**
**ಆಯುರ್ಧನಂ ಯಶಃ ಸ್ವಸ್ತಿಗತಿ ಮೈಶ್ವರ್ಯಮಾಪ್ನುಯಾತ್ ॥36/31॥**

ರಾಜನೇ ! ಶ್ರೀಹರಿಗೆ ಅರ್ಪಿತ ಮನಸ್ಸುಳ್ಳ ಈ ರಾಜರ ಚರಿತ್ರೆಯನ್ನು ಕೇಳಿದವನು ಈ ಲೋಕದಲ್ಲಿ ಆಯುಷ್ಯ, ಹಣ, ಯಶಸ್ಸು, ಕ್ಷೇಮ, ಐಶ್ವರ್ಯಗಳನ್ನೂ, ಪರಲೋಕದಲ್ಲಿ ಉತ್ತಮ ಗತಿಯನ್ನೂ ಹೊಂದುವನು

**ಮೂವತ್ತೊಂದನೆಯ ಅಧ್ಯಾಯ ಮುಗಿದುದು**

**ಚತುರ್ಥಸ್ಕಂಧಃ ಸಮಾಪ್ತಃ**

# ಪಂಚಮಸ್ಕಂಧಾರಂಭ

**ಪರೀಕ್ಷಿತ್ :-** ಪ್ರಿಯವ್ರತೋ ಭಾಗವತ ಆತ್ಮಾರಾಮಃ ಕಥಂ ಮುನೇ।
ಗೃಹೇಽರಮತ ಯನ್ಮೂಲಃ ಕರ್ಮಬಂಧಃ ಪರಾಭವಃ ||೧||

ಮುನಿವರ್ಯರೇ । ಜೀವರಿಗೆ ತಮ್ಮ ಮತ್ತು ಹರಿಯ ಜ್ಞಾನವಿಲ್ಲದಿರುವುದೇ ಸೋಲು. ಇದು ಅವರ ಕೆಟ್ಟಕರ್ಮದ ಫಲವು. ಈ ಸಂಸಾರಕ್ಕೆ ಕಾರಣವಾದ ಕರ್ಮಸಂಪಾದನೆಯಿಂದ ಅವರು ಪುನಃ ಪುನಃ ದುಃಖಿಗಳಾಗುವರು. ಇದಕ್ಕೆಲ್ಲ ಕಾರಣವು ದೇಹಗೇಹಾದಿಗಳಲ್ಲಿ 'ನಾನು, ನನ್ನದು' ಎಂಬ ಸ್ವಾತಂತ್ರ್ಯಾಭಿಮಾನ. ಇದು ಗೃಹಸ್ಥಾಶ್ರಮದಲ್ಲಿ ಹುಟ್ಟುತ್ತದೆ. ನಾರದೋಪದೇಶದಿಂದ ಶ್ರೀಹರಿಯನ್ನು ತಿಳಿದು ಅವನಲ್ಲಿಯೇ ಮೋದಿಸುವ ಭಕ್ತನು ಪ್ರಿಯವ್ರತನು ಗೃಹಸ್ಥಾಶ್ರಮದಲ್ಲಿ ಹೇಗೆ ಆಸಕ್ತನಾದ? ಆತ್ಮಾರಾಮರು ಎಂದೂ ಗೃಹಾದಿಗಳಲ್ಲಿ ಆಸಕ್ತರಾಗುವುದಿಲ್ಲ. ಏಕೆಂದರೆ ಅವರು ಹರಿಯ ಧ್ಯಾನದಿಂದ ಆನಂದವನ್ನು ಅನುಭವಿಸುತ್ತಾ ಇರುವರು. ಹೆಂಡತಿ, ಮನೆ, ಮಕ್ಕಳಲ್ಲಿ ಆಸಕ್ತನಾದ ಪ್ರಿಯವ್ರತನಿಗೆ ಸದಾ ಹರ್ಯುಪಾಸನೆ ಹೇಗೆ ಬಂದಿತು ? ಆದರಿಂದ ಮುಕ್ತಿ ಹೇಗಾಯಿತು ?

**ಶ್ರೀಶುಕಾಚಾರ್ಯರು :-** ನಿವೃತ್ತಿ ಮಾರ್ಗಕ್ಕೆ ಬಾಧೆಯಿಲ್ಲದಂತೆ ಕುಟುಂಬಾಸಕ್ತಿ ಇದ್ದರೆ ಗೃಹಸ್ಥನೂ ಮುಕ್ತನಾಗುವನು. ಹುಟ್ಟಿದಾಗಿನಿಂದ ಮುಕುಂದನ ಪಾದದಲ್ಲಿ ಮನಸ್ಸನ್ನು ಸ್ಥಿರವಾಗಿ ಸ್ಥಾಪಿಸಿದ ಪುಣ್ಯಾತ್ಮನಿಗೆ ಗೃಹಸ್ಥಾಶ್ರಮವು ಮುಕ್ತಿಗೆ ವಿರೋಧಿಯಾಗುವುದಿಲ್ಲ. ಸಂನ್ಯಾಸಿಗೆ ಮಾತ್ರ ಅದು ಮುಕ್ತಿಗೆ ವಿರೋಧಿ. ಪ್ರಿಯವ್ರತನು ನಾರದರ ಅನುಗ್ರಹದಿಂದ ತತ್ತ್ವಜ್ಞಾನಿಯಾಗಿರುವುದರಿಂದ ಅವನು ಹರಿಯಲ್ಲಿಯೇ ಚಿತ್ತವಿಟ್ಟಿರುವನು. ತಂದೆಯು ರಾಜನಾಗೆಂದು ಅಪ್ಪಣೆ ಮಾಡಿದರೂ, ದೊರೆತನವು ವಿಷಯಸಂಗದಿಂದ ಸಂಸಾರಕ್ಕೆ ಕಾರಣವಾಗುತ್ತದೆಯೆಂದು ತಿಳಿದು ತಂದೆಯ ಮಾತನ್ನು ನಡೆಸದೆ ಗಂಧಮಾದನಪರ್ವತಕ್ಕೆ ಹೋಗಿ ಅಲ್ಲೇ ನೆಲೆಸಿಬಿಟ್ಟನು. ನಾರದರು ಬಂದು ಅವನಿಗೆ ಉಪದೇಶಿಸುತ್ತಿದ್ದರು. ಸ್ವಾಯಂಭುವನು ಮಗನ ಆಶ್ರಮಕ್ಕೆ ಬಂದನು. ಆಗಲೇ ಬ್ರಹ್ಮದೇವರೂ ಅಲ್ಲಿಗೆ ಬಂದರು. ಎಲ್ಲರೂ ನಮಿಸಿದರು.

**ಬ್ರಹ್ಮ :-** ಮಗೂ ! ಶಾಸ್ತ್ರವಿಹಿತವಾದ ನನ್ನ ಮಾತನ್ನು ಕೇಳು. ಹರ್ಯಾಜ್ಞೆಯನ್ನು ಮೀರಬಾರದು. ಮೂಗುದಾರದಿಂದ ಬಿಗಿಯಲ್ಪಟ್ಟ ಎತ್ತುಗಳಂತೆ ನಾವೆಲ್ಲ ಆವನ ಅಧೀನರಾಗಿ ಅವನ ಆಣತಿಯನ್ನು ನಡೆಸುತ್ತಿರುವೆವು. ಅವನ

ಆಜ್ಞೆಯನ್ನು ಯಾವನೂ ಉಲ್ಲಂಘಿಸಲಾರನು. ಉದ್ದವಾದ ಹಗ್ಗದಲ್ಲಿ ಸಣ್ಣ ಸಣ್ಣ ಹಗ್ಗಗಳಿಂದ ದನಗಳನ್ನು ಕಟ್ಟಿ ಹಾಕುವ ಹಾಗೆ ವೇದಗಳಲ್ಲಿ ಅವರವರ ಗುಣಕರ್ಮ ಗಳಿಗೆ ತಕ್ಕಂತೆ ಹೆಸರನ್ನು ಕೊಟ್ಟು ಕಟ್ಟಿಹಾಕಿರುವನು. ಅವನು ಸರ್ವನಿಯಾಮಾಕ. ವಿಹಿತಕರ್ಮವನ್ನು ಅವನ ಪೂಜೆಯೆಂದು ಮಾಡುತ್ತಿರುವೆವು. ಅವನು ಕೊಟ್ಟ ದೇಹ ದೊಳಗಿದ್ದು, ಅವನು ಕೊಟ್ಟ ಸುಖದುಃಖಗಳನ್ನು ಅನುಭವಿಸುತ್ತ ಇದ್ದೇವೆ. ಜೀವನ್ಮುಕ್ತನಾಗಿದ್ದರೂ ಪ್ರಾರಬ್ಧಕರ್ಮವನ್ನು ಭೋಗಿಸಿಯೇ ಕಳೆದುಕೊಳ್ಳಬೇಕು. ಜಿತೇಂದ್ರಿಯನಲ್ಲದವನು ಕಾಡಿನಲ್ಲಿದ್ದರೇನು ? ಆರು ಶತ್ರುಗಳಕಾಟ ಅಲ್ಲಿಯೂ ತಪ್ಪು ವುದಿಲ್ಲ. ಆತ್ಮಜ್ಞಾನಿಯು ಜಿತೇಂದ್ರಿಯನಾಗಿದ್ದರೆ ಗೃಹಸ್ಥಾಶ್ರಮವು ಆವನಿಗೆ ಯಾವ ಭಯವನ್ನೂ ಉಂಟುಮಾಡಲಾರದು. ಗೃಹಸ್ಥನು ವಿಷಯಸುಖವನ್ನು ಅನುಭವಿಸಿ, ಸಾಕೆಂದು ವಿರಕ್ತನಾಗಿ, ಹರಿಯೆಂಬ ಕೋಟೆಯನ್ನಾಶ್ರಯಿಸಿ ಪ್ರಬಲ ಶತ್ರುಗಳನ್ನು ಗೆಲ್ಲಬೇಕು. ಮಗೂ! ನೀನು ಹೇಗೂ ಪದ್ಮನಾಭನ ಪಾದದುರ್ಗವನ್ನಾಶ್ರ ಯಿಸಿರುವೆ. ಆರುಶತ್ರುಗಳನ್ನೂ ದುರ್ಬಲಗೊಳಿಸಿರುವೆ. ಹರಿಯು ಕೊಟ್ಟ ಈಲೋಕದ ಭೋಗಗಳನ್ನು ಅನುಭವಿಸು. ಬಳಿಕ ಅವುಗಳ ಆಸಕ್ತಿಯಿಲ್ಲದ ನೀನು ಮೋಕ್ಷವನ್ನು ಹೊಂದು.

ಶುಕ :– ಅನುಗ್ರಹಪೂರ್ವಕವಾದ ಬ್ರಹ್ಮದೇವರ ಮಾತನ್ನು ಪ್ರಿಯ ವ್ರತನು ಒಪ್ಪಿದನು. ಮನುರಾಜನು ಭೂಪಾಲನೆಗೆ ಮಗನನ್ನು ನಿಯಮಿಸಿ ಸಂಸಾರ ದಿಂದ ಉಪರತನಾದನು.

ಪ್ರಿಯವ್ರತನು ಧ್ಯಾನದಿಂದ ಶುದ್ಧಮನಸ್ಕನಾಗಿ ಜ್ಞಾನಾಧಿಕ್ಯವನ್ನು ಹೊಂದಿ ಭೂಮಿಯನ್ನಾಳಿದನು ವಿಶ್ವಕರ್ಮನ ಪುತ್ರಿ ಬರ್ಹಿಷ್ಮತಿಯನ್ನು ಮದಿವೆಯಾಗಿ ಅಗ್ನೀಧ್ರ, ಇಧ್ಮಜಿಹ್ವ, ಯಜ್ಞಬಾಹು, ಮಹಾವೀರ, ಹಿರಣ್ಯರೇತ, ಘೃತಪೃಷ್ಠ, ಸವನ, ಮೇಧಾತಿಥಿ ವೀತಿಹೋತ್ರ ಮತ್ತು ಕವಿಯೆಂಬ ಹತ್ತು ಮಂದಿ ಪುತ್ರರನ್ನೂ, ಊರ್ಜ ಸ್ವತಿಯೆಂಬ ಕನ್ಯೆಯನ್ನೂ ಪಡೆದನು. ಕವಿ, ಮಹಾವೀರ, ಸವನ ಎಂಬ ಮೂವರೂ ಸಂನ್ಯಾಸಿಗಳಾಗಿ ಮುಕ್ತರಾದರು. ಪ್ರಿಯವ್ರತನಿಗೆ ಮತ್ತೊಬ್ಬಳು ಹೆಂಡತಿಯಲ್ಲಿ ಉತ್ತಮ, ರೈವತ, ತಾಪಸ ಎಂಬ ಮೂವರು ಮಕ್ಕಳಾದರು ಆ ಮೂವರೂ ಮನ್ವಂತ ರಾಧಿ ಪತಿಗಳಾದರು. ಪ್ರಿಯವ್ರತರಾಜನು ಒಂದು ನೂರು ಹತ್ತು ಕೋಟಿ ವರ್ಷಗಳ ಕಾಲ ಭೂಮಿಯನ್ನು ಪಾಲಿಸುತ್ತಿದ್ದನು. ಸೂರ್ಯನು ಮೇರುವಿಗೆ ಪ್ರದಕ್ಷಿಣೆ ಮಾಡುತ್ತ ಲೋಕಾಲೋಕ ಪರ್ವತದವರೆಗಿನ ಭೂಮಿಯನ್ನು ಮಾತ್ರ ಪ್ರಕಾಶಿಸುತ್ತಿರುವನಷ್ಟೆ? ಉಳಿದ ಅರ್ಧಭೂಮಿಯಲ್ಲಿ ಕತ್ತಲು ಕವಿದಿತ್ತು. ಅದನ್ನು ಬೆಳಗಿಸಬೇಕೆಂದು ಪ್ರಿಯ ವ್ರತನು ಬಯಸಿದನು. ಹರಿಯ ಉಪಾಸನೆಯಿಂದ ಬಲವನ್ನು ಗಳಿಸಿದ್ದ ಪ್ರಿಯ ವ್ರತನು ಸೂರ್ಯನ ರಥದ ಸಮಾನ ವೇಗವುಳ್ಳದ್ದೂ, ಪ್ರಕಾಶಮಯವೂ ಆದ ರಥದಲ್ಲಿ

ಕುಳಿತು, ಸೂರ್ಯನ ಹಿಂದೆ ಏಳುಬಾರಿ ಮೇರುವಿಗೆ ಪ್ರದಕ್ಷಿಣೆ ಬಂದನು. ಅವನ ರಥ ಚಕ್ರದ ಸುತ್ತಪಟ್ಟಿಯ ಕೊರೆತದಿಂದ ಉಂಟಾದ ತಗ್ಗುಗಳೇ ಏಳು ಸಮುದ್ರಗಳನ್ನು ಹಿಂದಿನಂತೆ ಸರಿಯಾಗಿ ವಿಂಗಡಿಸಿ ತೋರಿಸಿದುವು. ಇವುಗಳಿಂದ ಭೂಮಿಯು ಏಳು ದ್ವೀಪಗಳಾಗಿ ವಿಭಾಗವಾಯಿತು. ಮೊದಲ ಮೊದಲಿನ ಸಮುದ್ರ ಮತ್ತು ದ್ವೀಪಗಳ ವಿಸ್ತೀರ್ಣಕ್ಕಿಂತ ಹೊರಗಿನ ಸಮುದ್ರದ್ವೀಪಗಳ ವಿಸ್ತಾರವು ಇಮ್ಮಡಿ ಆಯಿತು. ಜಂಬೂ, ಪ್ಲಕ್ಷ. ಶಾಲ್ಮಲಿ, ಕುಶ, ಕ್ರೌಂಚ, ಶಾಕ ಮತ್ತು ಪುಷ್ಕರ ಇವೇ ಏಳು ದ್ವೀಪಗಳು. ಲವಣ, ಇಕ್ಷುರಸ, ಸುರ, ಘೃತ, ಕ್ಷೀರ, ದಧಿಮಂಡ ಮತ್ತು ಶುದ್ಧ ಇವೇ ಏಳು ಸಮುದ್ರಗಳು.

ಪ್ರಿಯವ್ರತನು ಅಗ್ನೀಧ್ರ, ಇಧ್ಮಜಿಹ್ವ, ಯಜ್ಞಬಾಹು, ಹಿರಣ್ಯರೇತಾ, ಘೃತಪೃಷ್ಠ, ಮೇಧಾತಿಥಿ, ವೀತಿ ಹೋತ್ರ ಈ ಮಕ್ಕಳನ್ನು ಕ್ರಮವಾಗಿ ಒಂದೊಂದು ದ್ವೀಪದ ಅಧಿಪತಿಗಳನ್ನಾಗಿ ಮಾಡಿದನು. ತನ್ನ ಮಗಳಾದ ಊರ್ಜಸ್ವತಿಯನ್ನು ಶುಕ್ರಾಚಾರ್ಯರಿಗೆ ಮದಿವೆ ಮಾಡಿಕೊಟ್ಟನು. ಆಕೆಯಲ್ಲಿ ದೇವಯಾನಿ ಎಂಬ ಮಗಳು ಹುಟ್ಟಿದಳು.

ಪರೀಕ್ಷಿದ್ರಾಜನೇ ! ಚಂಡಾಲನಾದರೂ ಒಂದು ಬಾರಿ ಭಕ್ತಿಯಿಂದ ಶ್ರೀಹರಿ ನಾಮವನ್ನು ಉಚ್ಚರಿಸಿದರೆ, ಆ ಕಾಲದಲ್ಲೇ ಪಾಪದಿಂದ ಮುಕ್ತನಾಗುವನು. ಅಂದ ಮೇಲೆ ಭಕ್ತನಾದ ಪ್ರಿಯವ್ರತನು ಈ ಸಾಮರ್ಥ್ಯವನ್ನು ತೋರಿದುದು ಅತಿಶಯವೆ? ಮುಂದೆ ಪ್ರಿಯವ್ರತನು ವೈರಾಗ್ಯವನ್ನು ಹೊಂದಿ, ಸಂನ್ಯಾಸಿಯಾಗಿ ಮೋಕ್ಷಸಾಧನೆ ಮಾಡುತ್ತಿದ್ದನು.

### ಒಂದನೆಯ ಅಧ್ಯಾಯ ಮುಗಿದುದು

ಪ್ರಿಯವ್ರತನು ಸಂನ್ಯಾಸಿಯಾದ ಮೇಲೆ ಅವನ ಹಿರಿಯ ಮಗ ಅಗ್ನೀಧ್ರನು ರಾಜನಾಗಿ ಜಂಬೂದ್ವೀಪನಿವಾಸಿಗಳನ್ನು ತನ್ನ ಮಕ್ಕಳಂತೆ ರಕ್ಷಿಸಿದನು. ಮುಂದೆ ಪಿತೃಲೋಕವನ್ನು ಹೊಂದುವುದಕ್ಕಾಗಿ ಪುತ್ರನನ್ನು ಬಯಸಿ ಅವನು ಮಂದರದ ಗುಹೆಯಲ್ಲಿ ಬ್ರಹ್ಮನನ್ನು ಕುರಿತು ತಪಸ್ಸನ್ನು ಮಾಡಿದನು. ಬ್ರಹ್ಮದೇವರು ಇವನ ಇಷ್ಟಪೂರ್ತಿಮಾಡಬೇಕೆಂದು ತಮ್ಮ ಸಭಾಗಾಯಕಿ ಪೂರ್ವಚಿತ್ತಿ ಎಂಬ ಅಪ್ಸರೆ ಯನ್ನು ಕಳುಹಿಸಿದರು. ಅವಳು ಬರುವಾಗ ಆದ ಧ್ವನಿಯನ್ನು ಕೇಳಿದ ಅಗ್ನೀಧ್ರನು ಕಣ್ತೆರೆದು ಅವಳನ್ನು ನೋಡಿದನು. ಕೂಡಲೇ ಕಾಮಪೀಡಿತನಾದ. ವಿವೇಕ ಹೋಯಿತು. ಆಕೆಯನ್ನು ಮಾತಾಡಿಸುವನು.

**ಅಗ್ನೀಧ್ರ :** ಮುನಿವರ್ಯನೇ ! ನೀನು ಯಾರು ? ಏನ ಮಾಡಲು ಬಯಸು ತ್ತಿರುವೆ ? ನೀನು ಭಗವಂತನ ಮಾಯೆಯೇನು? ನನ್ನಂತಹವನನ್ನು ವಶಮಾಡಿ ಕೊಳ್ಳಲು ಹುಬ್ಬುಗಳನ್ನು ಧರಿಸಿರುವೆಯಾ? ವನದಲ್ಲಿ ಮೃಗಗಳನ್ನು ಹುಡುಕುತ್ತಿರು ವೆಯಾ ? ತಪೋಧನನೇ ! ತಪಸ್ವಿಗಳ ತಪಸ್ಸಿಗೆ ವಿಘ್ನಕಾರಿಯಾದ ಈ ರೂಪವನ್ನು ಯಾವ ತಪಸ್ಸಿನಿಂದ ಸಂಪಾದಿಸಿದೆ ? ನೀನು ನನ್ನೊಡನೆ ತಪವನ್ನು ಮಾಡಲು ಅರ್ಹ ನಾಗಿರುವೆ. ನಾನು ನಿನ್ನನ್ನು ಬಿಡಲಾರೆನು.

(ಹೆಂಗಸನ್ನು ಗಂಡಸಿನಂತೆ ಮಾತಾಡಿಸಿದುದು ಆ ರಾಜನಿಗೆ ಹೆಣ್ಣಿನಾಸೆಯ ಭ್ರಾಂತಿಯನ್ನು ತಿಳಿಸುತ್ತದೆ.) ಪೂರ್ವಚಿತ್ತಿಯು ಅಗ್ನೀಧ್ರನ ರೂಪ, ಶೀಲ ಮುಂತಾದ ಸದ್ಗುಣಗಳಿಗೆ ಮಾರುಹೋಗಿ ಅವನೊಡನೆ ಹತ್ತುಸಾವಿರ ವರ್ಷಗಳ ಕಾಲ ಸುಖಿಸುತ್ತ ಬಂದಳು. ಅಗ್ನೀಧ್ರನು ಆಕೆಯಲ್ಲಿ ನಾಭಿ, ಕಿಂಪುರುಷ, ಹರಿವರ್ಷ, ಇಲಾವೃತ, ರಮ್ಯಕ, ಹಿರಣ್ಮಯ, ಕುರು, ಭದ್ರಾಶ್ವ ಮತ್ತು ಕೇತುಮಾಲರೆಂಬ ಒಂಭತ್ತು ಮಕ್ಕಳನ್ನು ಪಡೆದನು. ಬಳಿಕ ಪೂರ್ವಚಿತ್ತಿಯು ಬ್ರಹ್ಮದೇವರ ಸಭೆಗೆ ಹೊರಟು ಹೋದಳು. ಅಗ್ನೀಧ್ರನು ಜಂಬೂದ್ವೀಪವನ್ನು ಒಂಭತ್ತು ಖಂಡಗಳ ನ್ನಾಗಿ ವಿಭಾಗಿಸಿ ತನ್ನ ಮಕ್ಕಳಿಗೆ ಹಂಚಿ ಕೊಟ್ಟನು. ನಾಭಿ ಮೊದಲಾದ ಅವನ ಮಕ್ಕಳು ತಮ್ಮ ತಮ್ಮ ಭಾಗಕ್ಕೆ ಬಂದ ವರ್ಷಗಳನ್ನು ಪಾಲಿಸುತ್ತಿದ್ದರು. ಆ ವರ್ಷಗಳು ಅವರವರ ಹೆಸರಿನಿಂದಲೇ ಪ್ರಸಿದ್ಧವಾದುವು.

ಅಗ್ನೀಧ್ರನು ಅಪ್ಸರೆಯಿಂದ ಬೇಕಾದ ಭೋಗಗಳನ್ನು ಅನುಭವಿಸಿದ್ದರೂ ಅಲಂಬುದ್ಧಿಯನ್ನು ಹೊಂದಲಿಲ್ಲ. ಅವಳಿಂದಾದ ಸುರತೋತ್ಸವಸುಖವನ್ನೇ ಚಿಂತಿಸುತ್ತ, ಆಕೆಯ ಲೋಕವನ್ನು ಹೊಂದಲಪೇಕ್ಷಿಸಿ, ಹರಿಯನ್ನು ಯಜ್ಞದಿಂದ ಸೇವಿಸುತ್ತ ಬಂದನು. ಆ ಅಪ್ಸರಿಸಿಯರ ಲೋಕದಲ್ಲಿಯೇ ಪಿತೃಗಳೂ ಮೋದಿ ಸುತ್ತಿರುವರು. ಅಗ್ನೀಧ್ರನು ಕೊನೆಗೆ ಆ ಲೋಕಕ್ಕೆ ಹೋದನು. ಅವನು ಮೃತ ನಾದ ಮೇಲೆ ಅವನ ಮಕ್ಕಳಾದ ನಾಭಿ ಮೊದಲಾದ ಒಂಭತ್ತು ಮಂದಿ ಪುತ್ರರೂ ಮೇರುವಿನ ಪುತ್ರಿಯರಾದ ಮೇರುದೇವೀ, ಪ್ರತಿರೂಪಾ, ಉಗ್ರದಂಷ್ಟ್ರೀ, ಲತಾ. ರಾಮಾ. ಶ್ಯಾಮಾ, ನಾರೀ, ಭದ್ರಾ ಮತ್ತು ದೇವೀ ಎಂಬ ಒಂಭತ್ತು ಮಂದಿ ಕನ್ಯೆಯರನ್ನು ಕ್ರಮವಾಗಿ ಮದಿವೆಯಾದರು.

**ಎರಡನೆಯ ಅಧ್ಯಾಯ ಮುಗಿದುದು**

**ಋಷಭಾವತಾರ**

ನಾಭಿರಾಜನು ಮಕ್ಕಳಿಗಾಗಿ ಭಕ್ತಿಯಿಂದ ಯಜ್ಞಮಾಡಿದನು. ಭಕ್ತವತ್ಸಲ

ನಾದ ಶ್ರೀಹರಿಯು ಚತುರ್ಭುಜನಾಗಿ ಅಲ್ಲಿ ವ್ಯಕ್ತನಾದನು. ಇವನನ್ನು ನೋಡಿದ ಪುರೋಹಿತರು, ಸಭಿಕರು, ಯಜಮಾನರೆಲ್ಲರೂ ಆನಂದಿಸಿ ಪೂಜಿಸಿದರು. ಹೀಗೆ ಪ್ರಾರ್ಥಿಸುವರು :–

"ಶ್ರೀಹರೇ ! ನೀನು ಪೂಜ್ಯತಮನು. ನಾವು ನಿನ್ನ ಭಕ್ತರು. ಶಾಸ್ತ್ರೋಕ್ತವಾದ ಪೂಜೆಯೆಂದರೆ "ನಮೋ ನಮೋ" ಎಂಬುದು ಮಾತ್ರ. ಅಸ್ವತಂತ್ರರಾದ ನಮ್ಮ ಬುದ್ಧಿಯು ವಿಷಯಾಸಕ್ತವಾಗಿ, ನಿನ್ನ ಹೊಂದುತ್ತಿಲ್ಲ. ನಿನ್ನ ಸರ್ವಧರ್ಮಗಳನ್ನೂ, ಆಕಾರಗಳನ್ನೂ, ನಾಮಗಳನ್ನೂ ನಿರೂಪಿಸಲು ಸಮರ್ಥನಾವನು ? ಸರ್ವಶ್ರೇಷ್ಠನಾದ ನಿನ್ನ ಗುಣಗಳು ಸಕಲ ದುಃಖಗಳನ್ನೂ ಹೋಗಲಾಡಿಸವುವು ಮತ್ತು ಮೋಕ್ಷವನ್ನು ಕೊಡಿಸತಕ್ಕವು. ನಿನ್ನ ಭಕ್ತರು ಅರ್ಪಿಸುವ ಬಿಂದು ಉದಕ, ಒಂದು ದಳ ತುಳಸಿ, ಅಲ್ಪವಾದ ಸ್ತುತಿ, ಚಿಗುರು, ಗರಿಕೆ ಇವುಗಳಿಂದಲೇ ನೀನು ತೃಪ್ತನಾಗುವೆ. ಭಕ್ತಿಯಿಲ್ಲದೆ ಬಂಗಾರದ ಬೆಟ್ಟವನ್ನು ಅರ್ಪಿಸಿದರೂ ನೀನು ತೃಪ್ತನಾಗುವುದಿಲ್ಲ. ನೀನು ಸರ್ವದಾ ಸುಖಿ ಪೂರ್ಣನಾದುದರಿಂದ ನಮ್ಮ ಪೂಜೆಯಿಂದ ನಿನಗೆ ಯಾವ ಲಾಭವೂ ಇಲ್ಲ. ನಮಗೆ ಮಾತ್ರ ನಿನ್ನ ಅನುಗ್ರಹ ಲಾಭವಾಗುವುದು. ನಮ್ಮ ಉದ್ಧಾರ ನಮಗೆ ತಿಳಿಯದು. ನೀನಾಗಿ ಕರುಣಿಸಿ ಮೋಕ್ಷವನ್ನು ಕೊಡಬೇಕು. ನಮ್ಮ ಯತ್ನಕ್ಕೆ ಒಲಿಯುವವ ನೀನಲ್ಲ. ಆದರೂ ಭಕ್ತರು ಪ್ರಯತ್ನಮಾಡುತ್ತಿರುವರೆಂದು ಅಪೇಕ್ಷಿಸಿದವನಂತೆ ಇಲ್ಲಿ ನೀನು ಪ್ರತ್ಯಕ್ಷನಾಗಿರುವೆ. ಮುನಿಗಳು ವೈರಾಗ್ಯ, ಭಕ್ತಿಗಳಿಂದ ನಿನ್ನಲ್ಲೇ ಆಸಕ್ತರಾಗಿ ಆನಂದಿಸುವರು ಮತ್ತು ನಿನ್ನನ್ನೇ ಕೀರ್ತಿಸುವರು. ನಾವಾದರೋ ನಿನ್ನ ನಾಮವನ್ನು ಕೀರ್ತಿಸಲು ಅಸಮರ್ಥರು. ಎಡವಿದಾಗ, ಬಿದ್ದಾಗ. ಸೀನಿದಾಗ, ಆಕಳಿಸಿದಾಗ, ಪರಸ್ಥಳದಲ್ಲಿದ್ದಾಗ, ಪುತ್ರಾದಿಶೋಕವೊದಗಿದಾಗ, ರೋಗದಿಂದ ನರಳುವಾಗ, ಸಾಯುವಾಗ ನಿನ್ನ ನಾಮಗಳು ನಮ್ಮ ನಾಲಗೆಯಿಂದ ಹೊರಡಲಿ. ಈ ನಾಭಿರಾಜರ್ಷಿಯು ನಿನ್ನಂಥ ಮಗನನ್ನು ಅಪೇಕ್ಷಿಸುತ್ತಿರುವನು. ಈ ಅಭೀಷ್ಟವನ್ನು ಪೂರ್ಣಮಾಡು. ಹೀಗೆ ಕೇಳಿದ್ದಕ್ಕೆ ನಮ್ಮನ್ನು ಕ್ಷಮಿಸು."

**ಶ್ರೀಹರಿ :–** ನನಗೆ ಸಮನು ನಾನೇ ಆದ್ದರಿಂದ ನಾನು ಮಗನಾಗಬೇಕಾಗಿದೆ. ಈ ವರವು ಸುಲಭವಲ್ಲ. ಆದರೂ ಬ್ರಾಹ್ಮಣರ ಮಾತನ್ನು ವ್ಯರ್ಥಮಾಡುವವನಲ್ಲ. ನಾನು ನಾಭಿಯ ಮಗನಾಗಿ ಅವತರಿಸುವೆನು.

(ಹೀಗೆ ಹೇಳಿ ಅಂತರ್ಧಾನ ಹೊಂದಿದನು. ಬಳಿಕ ನಾಭಿರಾಜನ ಇಷ್ಟವನ್ನು ಪೂರೈಸಬೇಕೆಂದುಮೇ ರು ದೇವಿಯಲ್ಲಿ ಅವತರಿಸಿದನು. ದಿಗಂಬರರೂ, ಪರಮ ಹಂಸಾ

ಶ್ರಮಿಗಳೂ, ಊರ್ಧ್ವರೇತಸ್ಕರೂ ಆದ ಋಷಿಗಳ ಪರಮ ಧರ್ಮಗಳನ್ನು ತೋರಿಸುವುದೇ ಈ ಋಷಭಾವತಾರದ ಉದ್ದೇಶವಾಗಿದೆ.)

## ಮೂರನೆಯ ಅಧ್ಯಾಯ ಮುಗಿದುದು

ಶ್ರೀಹರಿಯು ಅವತರಿಸಿದನಷ್ಟೆ ? ಅವನು ಭಗವಂತನ ಲಕ್ಷಣಗಳುಳ್ಳವನೆಂದು ತಿಳಿದು ಮಂತ್ರಿಮೊದಲಾದವರೂ, ಪ್ರಜೆಗಳೂ, ಬ್ರಾಹ್ಮಣರೂ ಮತ್ತು ದೇವತೆಗಳೂ ಅವನನ್ನು ಧರ್ಮದಿಂದ ಭೂಪರಿಪಾಲನೆ ಮಾಡುವ ಬಗ್ಗೆ ಅತಿಶಯದಿಂದ ಸ್ವೀಕರಿಸಿದರು. ಕೊಂಡಾಡಲು ಅರ್ಹವಾದ ಶ್ರೇಷ್ಠದೇಹವುಳ್ಳವನಾಗಿ, ಓಜಸ್ಸು, ಬಲ, ಕಾಂತಿ, ಯಶಸ್ಸು, ವೀರ್ಯ ಮತ್ತು ಕಾರ್ಯಗಳಿಂದ ಕೂಡಿರುವ ಈ ಸ್ವಾಮಿಗೆ ಋಷಭನೆಂಬ ಅನ್ವರ್ಥವಾದ ನಾಮವನ್ನು ನಾಭಿರಾಜನು ಇಟ್ಟನು. ಆಗ ಇಂದ್ರನಾಗಿದ್ದ ಯಜ್ಞನಾಮಕ ಶ್ರೀಹರಿಯು ತನ್ನ ರೂಪದೊಡನೆ ಸ್ಪರ್ಧಿಸುವನೋ ಎಂಬಂತೆ ಇದ್ದ ಋಷಭನ ಖಂಡದಲ್ಲಿ ಮಳೆಗರೆಯಲಿಲ್ಲ. ಇದನ್ನು ನೋಡಿ ಋಷಭದೇವರು ನಕ್ಕು ಸ್ವರೂಪ ಸಾಮರ್ಥ್ಯದಿಂದಲೇ ತನ್ನ ನಾಭಿ ಖಂಡದಲ್ಲಿ ಮಳೆಸುರಿಸಿದನು. ನಾಭಿರಾಜನು ಋಷಭದೇವನಿಗೆ ಪಟ್ಟಗಟ್ಟಿ, ಪತ್ನೀಸಮೇತನಾಗಿ ಬದರಿಗೆ ಹೋಗಿ ನರನಾರಾಯಣನನ್ನು ಸೇವಿಸುತ್ತ, ಯೋಗ್ಯಕಾಲದಲ್ಲಿ ಮುಕ್ತಿಯನ್ನು ಹೊಂದಿದನು. "ನಾಭಿರಾಜನು ಶ್ರೀಹರಿಯನ್ನು ಪೂಜಿಸಿ ಓಲಿಸಿದುದರಿಂದ ಶ್ರೀಹರಿಯೇ ಅವನ ಮಗನಾಗಿ ಅವತರಿಸಿದನು. ಈ ಕಾರಣ ನಾಭಿಯು ಗೈದ ಮಹಾ ಪ್ರಸಿದ್ಧವಾದ ಕರ್ಮವನ್ನು ವರ್ಣಿಸಲು ಯಾರಿಂದ ಸಾಧ್ಯ ? ಎಂದು ಜ್ಞಾನಿಗಳು ನಾಭಿಯನ್ನು ಸ್ತುತಿಸುವರು.

ಋಷಭದೇವರು ತಾನು ಅವತರಿಸಿದ ಭೂಖಂಡವು ಕರ್ಮ ಕ್ಷೇತ್ರವೆಂದು ತಿಳಿದು ಇತರರಿಗೆ ಮಾರ್ಗವನ್ನು ತೋರಿಸಲು ಗುರುಕುಲವಾಸ ಮಾಡಿ, ಗುರ್ವಾಜ್ಞೆಯಿಂದ ಗೃಹಸ್ಥನಾಗಿ, ಆಧರ್ಮವನ್ನು ಶಿಕ್ಷಿಸುತ್ತ, ಇಂದ್ರದತ್ತ ಜಯಂತೀದೇವಿಯನ್ನು ಸ್ವೀಕರಿಸಿ, ಅವಳಲ್ಲಿ ತನ್ನ ಲಕ್ಷಣವನ್ನು ಹೋಲುವ ನೂರು ಮಂದಿ ಮಕ್ಕಳನ್ನು ಪಡೆದನು. ಮಹಾಯೋಗಿ ಭರತನೇ ಜ್ಯೇಷ್ಠ ಪುತ್ರನು. ಮುಂದೆ ಈ ಖಂಡಕ್ಕೆ ಅವನೇ ಅಧಿಪತಿಯಾಗುವುದರಿಂದ ಭಾರತ ವರ್ಷವೆಂದು ಪ್ರಸಿದ್ಧವಾಯಿತು. ಋಷಭದೇವರ ನೂರು ಮಂದಿ ಮಕ್ಕಳಲ್ಲಿ ಜ್ಯೇಷ್ಠನಾದ ಭರತನನ್ನು ಬಿಟ್ಟು, ಕುಶಾವರ್ತ, ಬ್ರಹ್ಮಾವರ್ತ, ಆರ್ಯಾವರ್ತ, ಮಲಯಕೇತು, ಭದ್ರಸೇನ, ಇಂದ್ರಸ್ಪೃಕ್, ವಿದರ್ಭ ಮತ್ತು ಕೀಕಟ ಎಂಬ ಒಂಭತ್ತು ಮಂದಿ ಪುತ್ರರು ಉಳಿದ ತೊಂಭತ್ತು ಮಂದಿಗಿಂತ ಶ್ರೇಷ್ಠರು. ಕವಿ, ಹರಿ, ಅಂತರಿಕ್ಷ, ಪ್ರಬುದ್ಧ, ಪಿಪ್ಪಲಾಯನ, ಆವಿರ್ಹೋತ್ರ, ದ್ರುಮಿಲ, ಚಮಸ ಮತ್ತು ಕರಭಾಜನ ಎಂಬ ಒಂಭತ್ತು ಮಂದಿಯು ಮಹಾಭಗವ

ದ್ಭಕ್ತರು. ಇವರ ಚರಿತ್ರೆಯನ್ನು ಹನ್ನೊಂದನೆಯ ಸ್ಕಂಧದಲ್ಲಿ ಹೇಳುವೆನು. ಉಳಿದ 81 ಮಂದಿ ಜಯಂತೀ ಪುತ್ರರು ತಂದೆಯ ಆಜ್ಞೆಯನ್ನು ಪರಿಪಾಲಿಸುತ್ತ, ಮಹಾ ಶ್ರೋತ್ರಿಯರೂ, ಯಜ್ಞಶೀಲರೂ ಆದ ಬ್ರಾಹ್ಮಣರಾದರು. ಋಷಭ ದೇವನು ನೂರು ಯಾಗಗಳನ್ನು ಮಾಡಿದನು. ಇವನು ರಾಜ್ಯವಾಳುತ್ತಿದ್ದಾಗ ಯಾರೂ ಇವನಿಂದಾಗಲೀ, ಇತರರಿಂದಾಗಲೀ ಯಾವುದನ್ನೂ ಇಚ್ಛಿಸುತ್ತಿರಲಿಲ್ಲ. ಎಲ್ಲರೂ ಭಗವದ್ ಜ್ಞಾನವನ್ನೇ ಇಚ್ಛಿಸುತ್ತಿದ್ದರು.

ಋಷಭ ದೇವನು ಒಂದು ದಿನ ಬ್ರಹ್ಮಾವರ್ತಕ್ಕೆ ಬಂದನು, ಅಲ್ಲಿ ಬ್ರಹ್ಮರ್ಷಿ ಶ್ರೇಷ್ಠರು ಸಭೆ ಸೇರಿದ್ದರು. ಪ್ರಜೆಗಳೂ ಶ್ರವಣಕ್ಕಾಗಿ ಅಲ್ಲಿ ಸೇರಿದ್ದರು. ವಿಧೇಯರಾಗಿದ್ದ ತನ್ನ ಮಕ್ಕಳಿಗೂ, ಪ್ರಜೆಗಳಿಗೂ ಋಷಭದೇವನು ಹೀಗೆ ಉಪದೇಶಿಸುವನು.

## ನಾಲ್ಕನೆಯ ಅಧ್ಯಾಯವು ಮುಗಿದುದು

**ಋಷಭ :** ಮಕ್ಕಳಿರಾ ! ಈಗಿರುವ ಮನುಷ್ಯದೇಹವು ನಾಯಿ ನರಿಗಳಿಗೆ ಹೇಗೋ ಹಾಗೆ ವಿಷಯ ಭೋಗಕ್ಕೆ ಬಂದಿಲ್ಲ. ತಪಸ್ಸನ್ನು ಮಾಡಿ ಮೋಕ್ಷವನ್ನು ಹೊಂದಲು ಬಂದಿರುವುದು. ಶಾಂತರು, ನಿರ್ಮತ್ಸರರು, ರಾಗಾದಿ ದೋಷರಹಿತರು, ಸದಾಚಾರವಂತರೂ ಆದ ನನ್ನ ಭಕ್ತರ ಸೇವೆಗಾಗಿ ನರದೇಹವನ್ನು ಉಪಯೋಗಿಸಬೇಕು. ವಿಷಯಲಂಪಟರ ಸಂಗವು ಅನರ್ಥಕರ. ಅವರು ಪಾಪವನ್ನೇ ಮಾಡುತ್ತಿರುವರು. ಅದರಿಂದ ದೇಹಕ್ಕೆಬಹಳ ದುಃಖವಾಗುತ್ತದೆ. ಶ್ರವಣಾದಿಗಳಿಂದ ಪರಮಾತ್ಮನ ಸ್ವರೂಪವನ್ನು ಎಲ್ಲಿಯವರೆಗೆ ತಿಳಿಯುವುದಿಲ್ಲವೋ ಅಲ್ಲಿಯವರೆಗೆ ಸಂಸಾರಕ್ಲೇಶವೂ, ಪಾಪಕರ್ಮಗಳ ಫಲವೂ ತಪ್ಪದೇ ಇರುವುವು. ಅಲ್ಲಿಯವರೆಗೆ ಜಡಮನಸ್ಸಿನ ಪ್ರ ತಾಪವಿರುವುದು. ಶ್ರೀ ಹರಿಯಅಪರೋಕ್ಷವಾದ ಮೇಲೆ ಶರೀರ ಬಂಧವಿಲ್ಲ. ಪಾಪಲೇಪವಿಲ್ಲ. ಜೀವಾಚ್ಛಾದಿಕಾ, ಪರಮಚ್ಛಾದಿಕಾ ಎಂಬಿವೆರಡೂ ಜೀವನ ಮತ್ತು ಪರಮಾತ್ಮನ ಸ್ವರೂಪವನ್ನು ತಿಳಿಯುವುದಕ್ಕೆ ಅಡ್ಡವಾಗಿರುವುವು. ಅವಿದ್ಯೆಯೆಂದರೆ ಶ್ರೀಹರಿಯೇ ಸ್ವತಂತ್ರನೆಂಬ ಜ್ಞಾನವಿಲ್ಲದಿರುವುದು, ಇದರಿಂದಲೇ ಹರಿಯು ಮನಸ್ಸನ್ನು ಕರ್ಮವಶ ಮಾಡಿರುವನು.ಶ್ರೀ ಹರಿಯು ಅವ್ಯಕ್ತಸ್ವಭಾವದವನು. ಅದರಿಂದ ಅವನು ಜ್ಞಾತವಾಗದಂತೆ ಇರುವನು. ಅಂತರ್ಯಾಮಿಯಾದ ವಾಸುದೇವನಲ್ಲಿ ಮಾಡುವ ಭಕ್ತಿಯಿಂದಲೇ ಮೋಕ್ಷವು ದೊರೆಯತಕ್ಕದ್ದು. ಅವಿದ್ಯೆಯು ಇರುವಾಗ ಕರ್ಮವು ಮನಸ್ಸನ್ನು ವಿಷಯಗಳಲ್ಲಿ ತೊಡಕಿಸುವುದು. ಪುರುಷರಿಗೆ ಸ್ತ್ರೀಸಂಸರ್ಗವೇ ಅವರ ಮನಸ್ಸನ್ನು ಬಂಧಿಸುವ ಪಾಶ. ಜೀವನು ದುಃಖಿಯಾಗುವುದಕ್ಕೆ ಮನೆ ಮಕ್ಕಳು, ಮಡದಿ, ಆಪ್ತರು, ಹಣ ಇವು ಮತ್ತು ನಾನು ನನ್ನದು ಎಂಬ ಮೋಹ ಇವೇ ಕಾರಣಗಳು. ಲಿಂಗಶರೀರವು ತಿರುಗಿ ಬಾರದಂತೆ ಪೂರ್ಣವಾಗಿ ಶಿಥಿಲವಾದಾಗ, ಸ್ತ್ರೀ

ವ್ಯಾಮೋಹವು ನಿವೃತ್ತವಾಗುವುದು. ಬಳಿಕ ಅಹಂಕಾರವು ತೊಲಗಿ, ದುಃಖವು ಬಿಟ್ಟು ಹೋಗುವುದು. ಆಮೇಲೆ ಮುಕ್ತನಾಗಿ ಪರಬ್ರಹ್ಮನನ್ನು ಹೊಂದುತ್ತಾನೆ.

(ಭಕ್ತ್ಯಾದಿ ಸಾಧನಗಳಿಂದ ಸತ್ಯವಾದ ಬಂಧ ನಿವೃತ್ತಿಯಾಗುವುದು ಸಾಧ್ಯ ಎಂಬ ಅಭಿಪ್ರಾಯದಿಂದ ಮೋಕ್ಷ ಸಾಧನೆಗಳನ್ನು ಹೇಳುತ್ತಾನೆ :)

ಗುರ್ವಂತರ್ಯಾಮಿಯೊದ ನನ್ನಲ್ಲಿ ಭಕ್ತಿ, ಸದಾಸೇವೆ, ವಿಷಯ ಬಯಕೆ, ತ್ಯಾಗ, ದ್ವಂದ್ವಸಹನೆ, ಸಕಲ ಪ್ರಾಣಿಗಳಿಗೂ ನಾನಾ ಬಗೆಯ ಕ್ಲೇಶವಿದೆ ಎಂಬುದರ ವಿಮರ್ಶೆ, ವೇದಾಂತ ವಿಚಾರ, ತಪಸ್ಸು, ಕಾಮ್ಯಕರ್ಮತ್ಯಾಗ, ವಿಹಿತ ಕರ್ಮಾನುಷ್ಠಾನ, ನಿಷಿದ್ಧ ಕರ್ಮತ್ಯಾಗ, ನನ್ನಪೂಜೆ, ಕಥಾಶ್ರವಣ, ಸತ್ಸಂಗ, ನನ್ನ ಗುಣ ಮತ್ತು ನಾಮಗಳ ಸಂಕೀರ್ತನೆ ಇತ್ಯಾದಿಗಳು ಅಹಂಕಾರವನ್ನು ತೊಲಗಿಸಿ, ಮೋಕ್ಷಕ್ಕೆ ಸಾಧನಗಳಾಗು ತ್ತವೆ. ಶ್ರೀ ಹರಿಯು ವ್ಯಾಪ್ತನೆಂಬ ಅನುಸಂಧಾನ, ಮೋಕ್ಷಕ್ಕೆ ಕಾರಣವಾದ ಸ್ವಯೋಗ್ಯ 'ಹರಿಸರ್ವೋತ್ತಮ' ನೆಂಬ ಜ್ಞಾನ ಮತ್ತು ವಿಶೇಷ ಜ್ಞಾನ, ಧ್ಯಾನ, ವೈಷ್ಣವ ಸಿದ್ಧಾಂತದಲ್ಲಿ ಆಸಕ್ತಿ, ಸತ್ವಗುಣ ಇವುಗಳಿಂದ ಕೂಡಿದವನು ಅಹಂಕಾರ ವೆಂಬ ಲಿಂಗಶರೀರವನ್ನು ತ್ಯಜಿಸುವನು.

ಪುತ್ರ ಅಥವಾ ಶಿಷ್ಯನಿಗೆ ಬಂದಿರುವ ಅಜ್ಞಾನನಿಮಿತ್ತಕ ಸಂಸಾರವನ್ನು ನಿವೃತ್ತಿ ಮಾರ್ಗೋಪದೇಶವನ್ನು ಮಾಡಿ ಬಿಡಿಸದಿರುವ ತಂದೆಯು ತಂದೆಯಲ್ಲ. ಗುರುವು ಗುರುವಲ್ಲ. ಕುರುಡನನ್ನು ಹಳ್ಳಕ್ಕೆ ತಳ್ಳಿದವನಾಗುವನು. ಜ್ಞಾನಿಯಾದ ಹಿರಿಯನು ಕಿರಿಯನಿಗೆ ಪ್ರವೃತ್ತಿಮಾರ್ಗವನ್ನು ಎಂದೂ ಉಪದೇಶಿಸುವುದಿಲ್ಲ. ಈ ನನ್ನ ಶರೀರವು ಮಾನವನ ಶರೀರದಂತೆ ಕಾಣಿಸುತ್ತಿದೆ. ಆದರೆ ಭೌತಿಕವಲ್ಲ. ಅಪರಿಚ್ಛಿನ್ನ ಜ್ಞಾನಾತ್ಮಕವಾದುದು. ಪ್ರಾಕೃತರು ಇದನ್ನು ತಿಳಿಯಲಾರರು. ನನ್ನ ಹೃದಯವು ಬಲ ಮತ್ತು ಜ್ಞಾನಗಳ ಸಮಾವೇಶವಾದ ಸತ್ವ ಗುಣವನ್ನೇ ವಿಷಯೀಕರಿಸುವುದು. ಆದ್ದರಿಂದ ಈ ನನ್ನ ದೇಹವು ಅಲೌಕಿಕ. ಇದರಲ್ಲಿ ಧರ್ಮವೇ ಪ್ರವೃದ್ಧ ವಾಗುವುದರಿಂದ ಅಧರ್ಮವು ಬೆನ್ನಿನಲ್ಲಿದೆ. ಅದು ನನ್ನಿಂದ ದೂರವಾಗಿದೆ. ಅದಕ್ಕೆ ನಾನು ಸಿಗುವುದಿಲ್ಲ. ಈ ಕಾರಣಗಳಿಂದಲೇ ನನ್ನನ್ನು ಶಬ್ದಾರ್ಥ ತತ್ತ್ವ ಬಲ್ಲ ಜ್ಞಾನಿಗಳು 'ಋಷಭ'ನೆಂಬ ಅನ್ವರ್ಥನಾಮದಿಂದ ಕರೆಯುವರು

ಮಕ್ಕಳಿರಾ ! ಇಂತಹ ನಾನು ನಿಮಗೆ ತಂದೆಯೂ ಗುರುವು ಆಗಿರುವೆನು. ನಿಮಗೆ ಹಿತವನ್ನು ಹೇಳುವೆನು ಕೇಳಿ ;-

ನೀವು ಜ್ಯೇಷ್ಠನಾದ ಭರತನನ್ನು ಅನುಸರಿಸುತ್ತಾ ಸೇವಿಸುತ್ತಿರಿ. ಇದರಿಂದ ಅವನಲ್ಲಿರತಕ್ಕ ನನ್ನನ್ನು ಸೇವಿಸಿದಂತಾಗುತ್ತದೆ. ಮೋಕ್ಷಸಾಧನವಾದ ತಾರತಮ್ಯ ವನ್ನು ವಿವರಿಸುವೆನು ಕೇಳಿ :- ಸ್ಥಾವರಗಳಿಗಿಂತ ಜಂಗಮಪ್ರಾಣಿಗಳು ಉತ್ತಮ,

ಅವಕ್ಕಿಂತ ಮನುಷ್ಯರು ಉತ್ತಮರು. ಅವರಗಿಂತ ಗಂಧರ್ವರು ಉತ್ತಮರು. ಅವರಿಗಿಂತ ದೇವತೆಗಳು ಉತ್ತಮರು. ಆವರಿಗಿಂತ ದಕ್ಷ, ಸನಕಾದಿಗಳು ಉತ್ತಮರು. ಅವರಿಗಿಂತ ಇಂದ್ರನು ಉತ್ತಮನು. ಅವನಿಗಿಂತ ರುದ್ರನು ಉತ್ತಮನು. ಅವನಿಗಿಂತ ಬ್ರಹ್ಮನು ಉತ್ತಮನು. ಅವನಿಗಿಂತ ಹರಿಯಾದ ನಾನೇ ಉತ್ತಮನು. ಹೀಗೆ ಸರ್ವೋತ್ತಮನಾದ ನಾನು ಬ್ರಾಹ್ಮಣರಿಂದ ಉಪಾಸ್ಯನಾದ ದೇವತೆ. ಈ ಬ್ರಾಹ್ಮಣರಿಗೆ ಸಮರಾದ ಪ್ರಾಣಿಗಳು ಈ ಭೂಲೋಕದಲ್ಲೇ ಇಲ್ಲ. ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿದರೆ ನಾನು ತೃಪ್ತನಾಗುವ ಹಾಗೆ ಅಗ್ನಿಹೋತ್ರ ಹೋಮಾದಿಗಳಿಂದ ತೃಪ್ತನಾಗುವುದಿಲ್ಲ.

ಪವಿತ್ರ ಮನಸ್ಸು, ಹರಿನಿಷ್ಠೆ, ಇಂದ್ರಿಯನಿಗ್ರಹ, ಸತ್ವಗುಣ, ಕಿರಿಯರಲ್ಲಿ ಕನಿಕರ, ತಪಸ್ಸು, ದ್ವಂದ್ವಸಹನೆ ಮತ್ತು ಬ್ರಹ್ಮಜ್ಞಾನ ಇವೆಲ್ಲ ಇರುವುದು ಬ್ರಾಹ್ಮಣರಲ್ಲಿಯೇ. ನನ್ನ ಶರೀರದಂತಿರುವ ವೇದಗಳನ್ನು ಅವರು ಧರಿಸಿರುವರು. ಅವರೇ ಉತ್ತಮ ಅಧಿಷ್ಠಾನ. ನಾನು ಲಕ್ಷ್ಮಿಯ ಪತಿಯು. ಇಂತಹ ನನ್ನಿಂದಲೂ ಬ್ರಾಹ್ಮಣೋತ್ತಮರು ಏನನ್ನೂ ಅಪೇಕ್ಷಿಸುವುದಿಲ್ಲ. ಅವರಿಗೆ ಪ್ರಾರ್ಥನೀಯ ವಸ್ತುವೆಂದರೆ ನಾನೊಬ್ಬನೇ ಆದ್ದರಿಂದ ನೀವೆಲ್ಲರೂ ಇಂತಹ ಬ್ರಾಹ್ಮಣರನ್ನು ಅವಶ್ಯವಾಗಿ ಪೂಜಿಸಬೇಕು

ಮಕ್ಕಳಿರಾ ! ಸ್ಥಾವರ ಜಂಗಮಾತ್ಮಕವಾದ ಈ ಸರ್ವವೂ ನನಗೆ ಆವಾಸಸ್ಥಾನವಾಗಿರುವುವು. ಆದ್ದರಿಂದ ಅವು ಯಥಾಯೋಗ್ಯವಾಗಿ ಬಹುಮಾನಿಸಲು ಅರ್ಹಗಳಾಗಿವೆ. ಜೀವೇಶ್ವರರಿಗೆ ಭೇದವನ್ನೇ ಹೇಳಬೇಕು. ಅದೇ ನನಗೆ ಪ್ರೀತಿಕರ. ನಾನು ಸರ್ವರಲ್ಲಿಯೂ ಅಂತರ್ಯಾಮಿಯಾಗಿರುವೆನೆಂದು ಪೂಜಿಸದೇ ಇರುವವನು ಯಮನ ಪಾಶವನ್ನು ತಪ್ಪಿಸಿಕೊಳ್ಳಲಾರನು.

(ಹೀಗೆ ಮಕ್ಕಳಿಗೆ ಅಪ್ಪಣೆ ಮಾಡಿದ ಋಷಭದೇವರು ಭಕ್ತಿಜ್ಞಾನ ವೈರಾಗ್ಯ ರೂಪದಿಂದ ಪರಮಹಂಸರ ಧರ್ಮವನ್ನು ತಿಳಿಸುವುದಕ್ಕಾಗಿ ಸಂನ್ಯಾಸವನ್ನು ಕೈಗೊಳ್ಳಲು ಭರತನಿಗೆ ಪಟ್ಟಗಟ್ಟಿ, ಮನೆ ಮಠಗಳನ್ನು ಬಿಟ್ಟು ಉನ್ಮತ್ತನಂತೆ, ದಿಗಂಬರನಾಗಿ ಸಂನ್ಯಾಸವನ್ನು ಕೈಗೊಂಡನು. ಪುರಗ್ರಾಮಾದಿಗಳಲ್ಲಿದ್ದ ದುರ್ಜನರು ದುರುಕ್ತಿಗಳನ್ನಾಡಿ ಪೀಡಿಸಿದರೂ, ಸ್ಥಿರಮನಸ್ಕನಾಗಿ ಒಬ್ಬನೇ ಸಂಚರಿಸುತ್ತಾ ಇದ್ದನು. ಜನರು ಇವನನ್ನು ಪಿಶಾಚಿ ಹಿಡಿದಿದೆ ಎಂದು ತಿಳಿದರು. ಬಳಿಕ ಋಷಭದೇವರು ಅಜಗರ ವ್ರತವನ್ನು ಆಚರಿಸುತ್ತ ಮಲಗಿಕೊಂಡೇ ಉಣ್ಣುತ್ತ, ಕುಡಿಯುತ್ತ ಮೂತ್ರೋತ್ಸರ್ಜನೆ ಮೊದಲಾದವುಗಳನ್ನು ಮಾಡುವವನಂತೆ ತೋರಿಸಿಕೊಂಡನು. ಅವನು ಸೃಷ್ಟಿಸಿ ತೋರಿದ ಪುರೀಷದ ಸುವಾಸನೆ ಹತ್ತು ಯೋಜನದ ಸುತ್ತ ವಲಯ

ದಲ್ಲಿ ಸುಗಂಧವನ್ನು ಹರಡಿತ್ತು. ಹೀಗೆ ನಾನಾ ಬಗೆ ಯೋಗಚರ್ಯೆಯಿಂದ ಇರತಕ್ಕ ಋಷಭ ದೇವರು ತನ್ನದೇ ಆದ ವಾಸುದೇವ ರೂಪದಲ್ಲಿ ಮನಸ್ಸನ್ನಿಟ್ಟು ಸ್ವಾಭಾವಿಕ ಗಳೇ ಆದ ಅಣಿಮಾದಿ ಅಷ್ಟಸಿದ್ಧಿಗಳ ಮಹಿಮೆಯನ್ನು ತಾನು ಆಪ್ತಕಾಮನಾದ್ದ ರಿಂದ ಚೆನ್ನಾಗಿ ತೋರಿಸಲು ಇಷ್ಟಪಡದೆ ಗೋಪ್ಯ ಮಾಡಿದನು.)

## ಐದನೆಯ ಅಧ್ಯಾಯ ಮುಗಿದುದು

**ಪರೀಕ್ಷಿತ್ :–** ಆಚಾರ್ಯ ! ಯೋಗವೆಂದರೆ ಶ್ರೀಹರಿಯ ಉಪಾಸನೆಯಷ್ಟೆ ? ಆದ ರಿಂದ ಕರ್ಮಬೀಜಗಳಾದ ರಾಗದ್ವೇಷಾದಿಗಳು ಸುಟ್ಟುಹೋಗಿ ನಿರ್ವೀರ್ಯಗಳಾಗುವುವು. ಈ ಅವಸ್ಥೆಗಳಲ್ಲಿ ಯೋಗಿಗಳು ಶ್ರೀಹರಿಯಲ್ಲಿಯೇ ರತರಾಗಿ ಆತ್ಮಾರಾಮರೆನಿಸುವ ವರು. ಇವರಿಗೆ ಯೋಗ ಸಿದ್ಧಿಗಳು ತಾವಾಗಿಯೇ ಕರಗತವಾಗುವುವು. ಅಣಿಮಾದಿ ಸಿದ್ಧಿಗಳನ್ನು ಯೋಗಿಗಳು ಉಪಯೋಗಿಸಿಕೊಂಡರೂ ಅವರಿಗೇ ಅವು ಕ್ಲೇಶದಾಯಕ ವಾಗುವುದಿಲ್ಲ. ಹೀಗಿರಬೇಕಾದರೆ ಋಷಭದೇವರು ಅಣಿಮಾದಿಗಳ ಸಿದ್ಧಿಯನ್ನು ಏತಕ್ಕಾಗಿ ತೋರಲಿಲ್ಲ ?

**ಶುಕ :–** ರಾಜನೇ ! ಕೆಲವರು ಮಹನೀಯರು "ಮನಸ್ಸು ಯಾವಾಗಲೂ ಸ್ವಾಧೀನವಾಗಿರುತ್ತದೆ"ಎಂಬುದನ್ನು ಒಪ್ಪುವುದಿಲ್ಲ ಅದು ಸ್ವಾಭಾವಿಕವಾಗಿ ಚಂಚಲ. ಸಿದ್ಧಿಯನ್ನು ಉಪಯೋಗಿಸಿ ಅದರ ಭೋಗದಲ್ಲಿ ಆಸಕ್ತನಾಗುವವನ ಮನಸ್ಸು ಬೇಗ ವಿಷಯದಲ್ಲಿ ಸೇರುವುದು. ನೀರು ಹೊಸಗಡಿಗೆಯನ್ನು ಆಕ್ರಮಿಸದೇ ಇರುವುದೇ ? ಮಹಾಯೋಗಿಗಳ ಮನಸ್ಸೂ ವಿಷಯಾಸಕ್ತವಾಗುವುದರಿಂದ ಅನರ್ಥವಿದ್ದೇ ಇದೆ. ಚಂಚಲವಾದ ಮನಸ್ಸು ತನ್ನ ಅಧೀನವಾಗಿದೆ ಎಂದು ನಂಬಿ ಸಿದ್ಧಿಯಿಂದ ಒದಗುವ ಭೋಗವನ್ನು ಅನುಭವಿಸಲು ಹೋಗಬಾರದು.

ಕರ್ದಮಾದಿ ದೇವತೆಗಳು ಮಹಾಧಿಕಾರಿಗಳು ತಮ್ಮ ಸಿದ್ಧಿಗಳನ್ನು ಉಪ ಯೋಗಿಸಿ ಭೋಗಪಟ್ಟರೂ, ಅಲ್ಲಿ ಮನಸ್ಸು ಆಸಕ್ತವಾದರೂ, ಅದೂ ಹರಿಯ ಪೂಜೆಯೆಂಬ ಭಾವನೆಯಿಂದ ಆಗಲೂ ಮನಸ್ಸು ಸ್ಥಿರವಾಗಿಯೇ ಇರುವುದರಿಂದ ಅವರಿಗೆ ಮುಕ್ತಿಯಲ್ಲಿ ಆನಂದ ಹ್ರಾಸವಿಲ್ಲ. ಆದೇ ಸೌಭರಿ ಮೊದಲಾದ ಯೋಗಿ ಗಳು ಮನಸ್ಸು ತಮ್ಮ ಅಧೀನವಾಗಿದೆ ಎಂದು ನಂಬಿ ಬಹುಕಾಲದಿಂದ ಸಂಪಾದಿಸಿ ಕೊಂಡಿದ್ದ ತಪಸ್ಸನ್ನೇ ಕಳೆದುಕೊಂಡರು. ಮನಸ್ಸನ್ನು ನಂಬಿದ ಯೋಗಿಗಳ ಗತಿಯು ಹೇಗಾಗುವುದೆಂದರೆ ವ್ಯಭಿಚಾರಿಣಿಯಾದ ಹೆಂಡತಿ ಗಂಡನ ಶತ್ರುಗಳಿಗೆ ಅವಕಾಶಕೊಟ್ಟಂತೆ ಚಂಚಲವಾದ ಯೋಗಿಯ ಮನಸ್ಸು ಕಾಮಾದಿ ಅರಿಷಡ್ವರ್ಗ ಗಳಿಗೆ ಯಾವಾಗಲೂ ಅವಕಾಶಕೊಟ್ಟು ಆ ಯೋಗಿಯನ್ನೇ ಯೋಗಭ್ರಷ್ಟನನ್ನಾಗಿ

ಮಾಡುತ್ತದೆ. ಕಾಮ, ಕ್ರೋಧ, ಮದ, ಲೋಭ, ಶೋಕ, ಮೋಹ, ಭಯ ಮೊದಲಾದುವೂ, ಮತ್ತು ಕರ್ಮದಿಂದ ಬರುವ ಸಂಸಾರ ಬಂಧವೂ ಮನಸ್ಸಿನ ಮೂಲ ಕವೇ ಉಂಟಾಗುವುದು. ಅಂತಹ ಮನಸ್ಸನ್ನು ಯಾವ ಜ್ಞಾನಿಯು ತಾನೇ ಅಧೀನ ವೆಂದು ನಂಬಿಯಾನು ?

ಸಕಲ ಲೋಕ ಪಾಲಕರಿಗೆ ಚೂಡಾಮಣಿಯೂ, ಲೋಕ ವಿಲಕ್ಷಣನೂ, ಅವಧೂತ ವೇಷಭಾಷಾ ಚರಿತ್ರೆ (ನಡವಳಿಕೆ) ಗಳಿಂದ ತನ್ನ ಪ್ರಭಾವವನ್ನು ತೋರಿ ಸದೇ ಇರುವವನೂ, ಯೋಗಿಗಳಿಗೆ ಮೋಕ್ಷಸಾಧನ ಪ್ರಕಾರವನ್ನು ತೋರಿಸುವವನೂ ಆದ ಋಷಭಪರಮಾತ್ಮನು, ದೇಹ ಸ್ಥಾನೀಯವಾದ ಭೂಮಿಯನ್ನು ಬಿಡಲು ಇಚ್ಛಿಸುತ್ತ, ಜ್ಞಾನಿಗಳು ಮರಣ ಕಾಲದಲ್ಲಿ ಭಗವದ್ರೂಪಗಳಿಗೆ ಐಕ್ಯವನ್ನೂ ತನ್ನ ಬಿಂಬ ರೂಪವನ್ನೂ ಸ್ಮರಿಸಬೇಕೆಂಬ ವಿಧಿಯನ್ನು ತಿಳಿಸುವುದಕ್ಕಾಗಿ ತನ್ನ ಸಚ್ಚಿದಾ ನಂದ ಸ್ವರೂಪವೇ ಪರಬ್ರಹ್ಮನಾದ ನನ್ನ ಸ್ವರೂಪವು, ನಾನು ಬೇರೆ ಅಲ್ಲ-ಬ್ರಹ್ಮವು ಬೇರೆ ಅಲ್ಲವೆಂದು ತನ್ನ ಮೂಲಸ್ವರೂಪವನ್ನು ಸ್ಮರಿಸಿದನು.

ಜಡದೇಹವಲ್ಲದ ಋಷಭರೂಪೀ ಪರಮಾತ್ಮನ ಯೋಗಸಾಮರ್ಥ್ಯವೆಂಬ ದೇಹವು ಬ್ರಹ್ಮಾಂಡದ ಒಳಗೂ ಹೊರಗೂ ಜ್ಞಾನವೆಂಬ ಪ್ರಕಾಶದಿಂದ ಸಂಚರಿ ಸುತ್ತಿತ್ತು. ಬಳಿಕ ಕಾಂಕಟ ಕರ್ಣಾಟಕ ದೇಶದಿಂದ ಹೊರಟು ದಕ್ಷಿಣ ಕರ್ಣಾಟಕಕ್ಕೆ ಬಂದು ಅಲ್ಲಿನ ಕುಟಚಪರ್ವತದ ತಪ್ಪಲಿನ ವನದಲ್ಲಿ, ಬಾಯಲ್ಲಿ ಕಲ್ಲುಗಳನ್ನು ತುಂಬಿ ಕೊಂಡು ದಿಗಂಬರನಾಗಿ ಅವನು ಸುತ್ತುತ್ತಿದ್ದನು. ಕಾಡುಗಿಚ್ಚಿನಿಂದ ಆಕಾಡು ಸುಡು ತ್ತಿರುವಾಗ ಅಲ್ಲಿ ಪ್ರವೇಶಿಸಿದ ಋಷಭದೇವನು ಕಾಡುಗಿಚ್ಚಿನಿಂದ ಆ ಪ್ರದೇಶವನ್ನು ಸುಟ್ಟನು. ಮುಂದೆ ಅಗ್ನಿಯಿಂದ ಹೊರಬಂದು ಪುತ್ರೋತ್ಪತ್ತಿ ತನ್ನ ಆ ರೂಪ ವನ್ನು ವ್ಯಕ್ತ ಮಾಡಿದನು. ಋಷಭನು ತನ್ನ ಸ್ವರೂಪವನ್ನು ತೋರಿಸಿಕೊಳ್ಳದೆ ತಾನು ವಾಸುದೇವನಾದ್ದರಿಂದ "ನಾನೇ ವಾಸುದೇವನು" ಎಂದು ಉಪದೇಶಿಸಿದನು. ಇದನ್ನು ಇವನ ಶಿಷ್ಯನಿಂದ ಕೇಳಿ ತಿಳಿದ ಕಾಂಕಟ, ದಕ್ಷಿಣ ಕರ್ಣಾಟಕಗಳ ದೊರೆ ಅರ್ಹನು (ಇವನು ಪೌಂಡ್ರಕ ವಾಸುದೇವನ ಅಂಶ) ಋಷಭದೇವನ ಅಭಿಪ್ರಾಯ ವನ್ನು ಅರಿಯದೆ 'ನಾನೇ ದೇವರು' ಎಂಬ ಅದ್ವೈತಮತವನ್ನೂ. ಅಹಿಂಸಾ ಪರಮ ಧರ್ಮ ಎಂಬ ಅರ್ಹತ ಅಂದರೆ ಜೈನಮತವನ್ನೂ ತನ್ನ ಬುದ್ಧಿಗೆ ತೋರುವಂತೆ ಮುಂದೆ ಪ್ರಚಾರ ಮಾಡುವನು. ಎರಡು ಶಾಸ್ತ್ರದಿಂದ ಮನುಷ್ಯಾಧಮನಾದ ಅರ್ಹನ ಪ್ರಶಿಷ್ಯ ಕ್ರಮು ಎಂಬುವನು ಶಾಸ್ತ್ರವನ್ನು ರಚಿಸುವನು, ಅದನ್ನು ಅನು ಸರಿಸುವವರು ದೇವಮಾಯೆಯಿಂದ ಮೋಹಿತರೂ, ವೇದೋಕ್ತಶೌಚಾಚಾರ ರಹಿತರೂ ಆಗಿ, ದೇವತೆಗಳಿಗೆ ದ್ರೋಹಕರಗಳಾದ ಕರ್ಮವನ್ನೂ ಅಂದರೆ ಸ್ನಾನ ಮಾಡ ದಿರುವುದು, ತಲೆಕೂದಲನ್ನು ಕೀಳಿಸಿಕೊಳ್ಳುವುದು, ಮೊದಲಾದ ಕರ್ಮಗಳನ್ನೂ, ವೇದ

ವಿರುದ್ಧ ಮತಗಳನ್ನು ಪ್ರಮಾಣವಿಲ್ಲದೆ ಸ್ವೀಕರಿಸುತ್ತ, ಕಲಿಯ ಪ್ರಭಾವದಿಂದ ಬುದ್ಧಿಭ್ರಷ್ಟರಾಗಿ, ಪರಬ್ರಹ್ಮನನ್ನೂ. ಬ್ರಾಹ್ಮಣರನ್ನೂ ಯಜ್ಞಾದಿಗಳನ್ನೂ ದೂಷಿಸುವರು. ಕ್ರಮುಕೃತ ಶಾಸ್ತ್ರವನ್ನು ಅನುಸರಿಸುವವರು ನಿತ್ಯನರಕದಲ್ಲಿ ಬೀಳುವರು. (ಈ ವಿಷಯವನ್ನು ಪಂಚಮಸ್ಕಂಧ ಆರನೆಯ ಅಧ್ಯಾಯ ೧೧ ಮತ್ತು ೧೨ನೆಯ ಅಧ್ಯಾಯದಲ್ಲಿ ಶ್ರೀವೇದವ್ಯಾಸ ದೇವರು ಹೇಳಿದ್ದಾರೆ.)

ಋಷಭಾವತಾರವು ಅಸುರಜನರಿಗೆ ಮೋಹಕ ಮಾತ್ರವೇ ಅಲ್ಲ. ರಜೋಗುಣದ ಉಪದ್ರವಕ್ಕೆ ಗುರಿಯಾದ ಸಜ್ಜನರಿಗೆ ಮೋಕ್ಷಮಾರ್ಗವನ್ನು ಶಿಕ್ಷಿಸುವುದು. ಏಳು ದ್ವೀಪಗಳಲ್ಲಿ, ಒಂಭತ್ತು ಖಂಡಗಳಲ್ಲಿ ಭರತ ಖಂಡವು ಹೆಚ್ಚು ಪುಣ್ಯಸಾಧನವೂ ಪಾಪಸಾಧನವೂ ಆಗಿದೆ. ಇತರ ಖಂಡಗಳಲ್ಲಿ ಹಿಂದೆ ಗಳಿಸಿದ ಪುಣ್ಯದ ಫಲವನ್ನು ಭೋಗಿಸುತ್ತಾರೆ. ಪಾಪವಿಲ್ಲ. ಅವು ಭೋಗ ಭೂಮಿ. ಭರತಖಂಡದ ಜನರು ಪರಮಾತ್ಮನು ಮಾಡಿದ ಋಷಭ ಮೊದಲಾದ ಅವತಾರಗಳ ಕರ್ಮಗಳನ್ನು ಗಾಯನ ಮಾಡುತ್ತಾರೆ.

ಸಕಲ ವೇದಗಳು, ಲೋಕಗಳು, ದೇವತೆಗಳು, ಗೋಬ್ರಾಹ್ಮಣರು ಇವರೆಲ್ಲರಿಗೂ ಋಷಭಪರಮಾತ್ಮನು ಮುಖ್ಯಸ್ವಾಮಿಯು. ಅವನ ಚರಿತ್ರೆಯನ್ನು ಪಠಿಸುವವರಿಗೆ ಸಕಲ ಪಾಪಗಳೂ ಹೋಗಿ ಪರಮ ಮಂಗಳವುಂಟಾಗುವುದು. ಮುಕ್ತಿಯನ್ನೂ ಬಯಸದೆ ಕೇವಲ ಭಕ್ತಿಗಾಗಿ ಭಕ್ತಿಯನ್ನು ಮಾಡುವ ಏಕಾಂತ ಭಕ್ತರಿಗೆ ಮೋಕ್ಷದಲ್ಲಿ ಆನಂದಾತಿಶಯುವು ಆಗುವುದೆಂದು ಶಾಸ್ತ್ರಗಳು ಹೇಳುತ್ತಿವೆ. ಈ ಚರಿತ್ರೆಯನ್ನು ಹೇಳುವವರಿಗೂ, ಕೇಳುವವರಿಗೂ ಪರಮಾತ್ಮನಲ್ಲಿ ಭಕ್ತಿ ಉಂಟಾಗುವುದು.

ಪರೀಕ್ಷಿದ್ರಾಜನೇ ! ಪಾಂಡವರಾದ ನಿಮಗೂ, ಯಾದವರಿಗೂ ಸ್ವಾಮಿಯಾದವನೂ, ಗುರುವೂ, ಪ್ರಿಯನೂ, ಕುಲಸ್ವಾಮಿಯೂ ಆದ ಶ್ರೀಹರಿಯು ಕೆಲವು ವೇಳೆ ಬಂಟನಂತೆ ನಡೆದುಕೊಂಡಿದ್ದರೂ, ತನ್ನನ್ನು ಭಜಿಸುವವರಿಗೆ ಮೋಕ್ಷವನ್ನಾದರೂ ಕೊಟ್ಟಾನು. ಸಂಪೂರ್ಣ ಭಕ್ತಿಯೋಗವನ್ನು ಕೊಡುವುದಿಲ್ಲ. ಬ್ರಹ್ಮದೇವರಿಗೆ ಭಕ್ತಿಗಾಗಿಯೇ ಮುಕ್ತಿಯಾದ್ದರಿಂದ ಅವರಿಗೇ ಪೂರ್ಣಭಕ್ತಿಯನ್ನು ಕೊಡುವನು.

**ಸೂಚನೆ**

ಶ್ರೇಯಸ್ಸನ್ನು ಬಯಸಿ ನಿತ್ಯವೂ ಪಾರಾಯಣಮಾಡಬೇಕೆಂಬುವರಿಗೆ ಅನುಕೂಲವಾಗಬೇಕೆಂದು ಶ್ರೀ ಋಷಭದೇವರ ಮಹಿಮಾಪದ್ಯವನ್ನು ಕೆಳಗೆ ಕೊಡಲಾಗಿದೆ.

**ನಿತ್ಯಾನುಭೂತ ನಿಜಲಾಭನಿವೃತ್ತ ತೃಷ್ಣಃ** **ಶ್ಲೋಕ**
**ಶ್ರೇಯಸ್ಯತದ್ರಚನಯಾ ಚಿರಸುಪ್ತಬುದ್ಧೇಃ ।**
**ಲೋಕಸ್ಯ ಯಃ ಕರುಣಯಾಽಭಯ ಮಾತ್ಮಲೋಕ—**
**ಮಾಖ್ಯಾನ್ನಮೋ ಭಗವತೇ ಋಷಭಾಯ ತಸ್ಮೈ ॥ 20 ॥**

**ಅರ್ಥ -:** ಶ್ರೀಹರಿಯ ಅವತಾರನಾದ ಋಷಭದೇವನು ಯಾವಾಗಲೂ ಸ್ವರೂಪಭೂತಾನಂದದ ಅನುಭವವುಳ್ಳವನು. ಆದ್ದರಿಂದಲೇ ಅವನಿಗೆ ಮತ್ತೊಂದರ ಆಸೆಯಿಲ್ಲ. ಅನಾದಿಯಿಂದ ಅಜ್ಞಾನಿಗಳಾಗಿ ಶ್ರೇಯಸ್ಸಿಗೆ ವಿರುದ್ಧ ವ್ಯಾಪಾರಗಳನ್ನು ಮಾಡುತ್ತಾ ಮೋಕ್ಷಸಾಧನೆಯನ್ನು ತಿಳಿಯದ ಯೋಗ್ಯ ಜೀವರ ಮೇಲಿನ ಕರುಣದಿಂದ ಆತ್ಮತತ್ತ್ವಜ್ಞಾನೋಪದೇಶಕನೂ, ಸಂಸಾರ ಭಯ ಪರಿಹಾರಕನೂ, ಅಪರೋಕ್ಷಜ್ಞಾನವನ್ನು ಅನುಗ್ರಹಿಸುವವನೂ ಆದ ಋಷಭಭಗವಂತನಿಗೆ ನಮಸ್ಕಾರ !

## ಆರನೆಯ ಅಧ್ಯಾಯ ಮುಗಿದುದು

ಭರತರಾಜನು ತಂದೆಯ ಅಪ್ಪಣೆಯಂತೆ ಧರ್ಮದಿಂದ ರಾಜ್ಯ ಪರಿಪಾಲನೆ ಮಾಡುತ್ತಿದ್ದನು. ವಿಶ್ವರೂಪನ ಮಗಳಾದ **ಪಂಚಜನಿ** ಎಂಬುವಳನ್ನು ಮದಿವೆಯಾದನು. ಅವಳಲ್ಲಿ ಸುಮತಿ, ರಾಷ್ಟ್ರಭೃತ, ಸುದರ್ಶನ, ಆವರಣ ಮತ್ತು ಧೂಮ್ರಕೇತು ಎಂಬ ಐದುಮಂದಿ ಪುತ್ರರನ್ನು ಪಡೆದನು. ಅಂಜನಾಭ ಎಂಬ ವರ್ಷವನ್ನು ಭರತನು ಆಳುತ್ತಿದ್ದುದರಿಂದ ಆಖಂಡವು ಭರತವರ್ಷವೆಂದೇ ಪ್ರಸಿದ್ಧವಾಯಿತು. ಶ್ರೀಹರಿಯನ್ನು ಯಜ್ಞಗಳಿಂದ ಪೂಜಿಸಿದನು. ಸರ್ವದೇವತೆಗಳನ್ನು ತಿಳಿಸುವ ಮಂತ್ರಗಳ ಅರ್ಥವು ಅನ್ವಯಿಸುವಂತೆ ಆಯಾ ದೇವತೆಗಳಿಗೆ ಅವುಗಳನ್ನು ನಿಯಮಿಸಿದವನು ಶ್ರೀಹರಿಯೇ ಆದ್ದರಿಂದ ಅವನೇ ಈ ಕರ್ಮಗಳಿಗೆಲ್ಲ ಮುಖ್ಯ ಕರ್ತನೆಂದು ಅರಿತಿದ್ದನು. ದಿನದಿನಕ್ಕೆ ಭಕ್ತಿ ಹೆಚ್ಚುತ್ತ ಬಂದಿತು. ಹತ್ತುಸಾವಿರ ವರ್ಷಗಳ ಕಾಲ ರಾಜ್ಯವಾಳಿ, ಮಕ್ಕಳಿಗೆ ಅದನ್ನು ಹಂಚಿ, ಅರಮನೆಯನ್ನು ಬಿಟ್ಟು ಪುಲಹಾಶ್ರಮ ಎಂಬ ಸಾಲಗ್ರಾಮ ಕ್ಷೇತ್ರಕ್ಕೆ ಹೋದನು. ಅಲ್ಲಿ ಈಗಲೂ ಕೂಡ ಶ್ರೀಪರಮಾತ್ಮನು ಭಕ್ತರಿಗೆ ಅಪೇಕ್ಷಿತವಾದ ರೂಪದಿಂದ ಪ್ರತ್ಯಕ್ಷನಾಗಿ ಇಷ್ಟಾರ್ಥವನ್ನು ಕೊಡುತ್ತಿರುವನು. ಆ ಆಶ್ರಮದಲ್ಲಿ ಗಂಡಕೀ ಎಂದು ಪ್ರಸಿದ್ಧವಾದ ಚಕ್ರನದಿಯು ಹರಿಯುತ್ತಿದೆ. ಆ ನದಿಯಲ್ಲಿ ಮೇಲೆ ಕೆಳಗೆ ಚಕ್ರರೇಖೆಗಳುಳ್ಳ ಶಾಲಗ್ರಾಮಶಿಲೆಗಳು ತುಂಬಿವೆ. ಆ ಆಶ್ರಮದಲ್ಲಿ ಭರತನು ಪುಷ್ಪ, ತುಲಸಿ, ಜಲ ಮತ್ತು ಕಂದಮೂಲಗಳಿಂದ ಹರಿಯನ್ನು ಪೂಜಿಸುತ್ತ ಪರಮಾನಂದವನ್ನು ಹೊಂದಿದನು. ಈ ಭಕ್ತಿಯೋಗದಿಂದ ಸಂಶಯ, ವಿಪರ್ಯಯರಹಿತನಾಗಿ, ಬಾಹ್ಯ ವ್ಯಾಪಾರಗಳನ್ನು ಸ್ಮರಿಸುತ್ತಲಿರಲಿಲ್ಲ. ಇಂತಹ ವ್ರತನಿಷ್ಠನಾದ ಭರತನು ಅಜಿನವನ್ನು ಧರಿಸಿ, ಗಂಡಕಿಯಲ್ಲಿ ತ್ರಿಕಾಲ ಸ್ನಾನವನ್ನು ಮಾಡುತ್ತ ಸೂರ್ಯೋದಯವಾದಾಗ, ಸೂರ್ಯಮಂಡಲಾಂತರ್ಗತನಾದ ಪರಮಾತ್ಮನನ್ನು ನೋಡಿ ಸ್ತುತಿ ಮಾಡುತ್ತಿದ್ದನು.

ಶ್ಲೋಕ|| ಪರೋ ರಜಃ ಸವಿತರ್ಜಾತವೇದೋ ದೇವಸ್ಯ ಗರ್ಭೋ ವನಸೇದಂ ಜಜಾನ | ಸ್ವರೇತಸಾದಃ ಪುನರಾವಿಶ್ಯ ಚ ಸ್ವಯಂ ಹಂಸಂ ಗೃಧ್ರಾಣಾಂ ಋಷಭಂ ಸಂಗೃಣೀಮಃ ||೧೩||

ದೋಷದೂರ, ಜಗದುತ್ಪಾದಕ, ಸರ್ವಜ್ಞ, ಸೂರ್ಯಾಂತರ್ಗತ ಶ್ರೀಪರಮಾತ್ಮನೇ ! ನೀನು ವೇದಗಳಲ್ಲಿ ಪ್ರತಿಪಾದಿಸಲ್ಪಡತಕ್ಕವನು. ಬ್ರಹ್ಮಾದಿ ಜಗತ್ತನ್ನು ಸೃಷ್ಟಿಸಿ ಸ್ವರೂಪಶಕ್ತಿಯಿಂದ ಅದರಲ್ಲಿ ರಕ್ಷಿಸುತ್ತಿರುವೆ. ಆದರೂ ದೋಷ ಲೇಪವಿಲ್ಲದವ ನಾಗಿ ಭಕ್ತರ ದೋಷಗಳನ್ನು ಪರಿಹರಿಸುವೆ. ಸ್ವತಂತ್ರನೂ, ವಿಷಯಾಕಾಂಕ್ಷಿಗಳಾದ ಜೀವರಿಗೆ ಸ್ವಾಮಿಯೂ ಆದ ನಿನ್ನನ್ನು ಸ್ತೋತ್ರ ಮಾಡುವೆವು.

## ಏಳನೆಯ ಅಧ್ಯಾಯ ಮುಗಿದುದು

ಭರತನು ಒಂದು ದಿನ ನದಿಯ ತೀರದಲ್ಲಿ ಮಂತ್ರವನ್ನು ಜಪಿಸುತ್ತ ಕುಳಿತಿದ್ದನು. ಗರ್ಭಿಣಿ ಜಿಂಕೆಯೊಂದು ನೀರನ್ನು ಕುಡಿಯಲು ನದಿಯ ಬಳಿಗೆ ಬಂದು ನೀರನ್ನು ಕುಡಿಯುತ್ತಾ ಇದ್ದಿತು. ಆಗ ಸಿಂಹವೊಂದು ಗರ್ಜಿಸಿತು. ಇದನ್ನು ಕೇಳಿ ಆ ಜಿಂಕೆಯು ನಡುಗಿ ಆಚೆಯ ದಡವನ್ನು ಸೇರಬೇಕೆಂದು ಹಾರಿತು. ಆಗ ಗರ್ಭಸ್ರಾವ ವಾಗಿ ಮರಿಯು ಪ್ರವಾಹದಲ್ಲಿ ಬಿದ್ದಿತು. ತಾಯಿ ಜಿಂಕೆಯು ಗುಹೆಯೊಳಗೆ ಹೋಗಿ ಸತ್ತು ಹೋಯಿತು. ಇದನ್ನು ನೋಡಿದ ಭರತನು ಜಿಂಕೆಯ ಮರಿಯನ್ನು ಪ್ರವಾಹದಿಂದೆತ್ತಿ, ತನ್ನಾಶ್ರಮಕ್ಕೆ ತಂದು ಅದು ತನ್ನದು ಎಂಬ ಅಭಿಮಾನದಿಂದ ತನ್ನ ಮಗುವಿನಂತೆ ಚೆನ್ನಾಗಿ ರಕ್ಷಿಸುತ್ತ ಬಂದನು. ಪೂಜೆ, ನಿಯತಕರ್ಮ, ನಿಯಮ ಗಳನ್ನೆಲ್ಲ ಕ್ರಮವಾಗಿ ಬಿಟ್ಟನು. ತಬ್ಬಲಿಯಾದ್ದರಿಂದ ಆ ಮರಿಯನ್ನು ರಕ್ಷಿಸಲೇ ಬೇಕೆಂದು ಅದರಲ್ಲಿ ಮಿತಿಮೀರಿ ಸ್ನೇಹವನ್ನು ಮಾಡಿದನು. ಭರತನು ದರ್ಭೆ, ತುಳಸಿ ಪುಷ್ಪಾದಿಗಳನ್ನು ತರಲು ಹೊರಗೆ ಹೋದಾಗ, ಆಶ್ರಮದಲ್ಲಿರುವ ಮರಿಗೆ ತೋಳ ಮುಂತಾದುವುಗಳಿಂದ ಅಪಾಯ ಬರುವುದೆಂದು ಚಿಂತಿಸಿ, ಆ ಮರಿಯನ್ನು ತನ್ನ ಜೊತೆಯಲ್ಲಿಯೇ ಕರೆದುಕೊಂಡು ಹೋಗುತ್ತಿದ್ದನು. ಅದು ನಡೆಯದೆ ಇದ್ದ ಸಮಯದಲ್ಲಿ ಅದನ್ನು ಅವನು ತನ್ನ ಹೆಗಲ ಮೇಲೆ ಹೊತ್ತುಕೊಂಡು ಹೋಗುತ್ತಿ ದ್ದನು. "ನಿನಗೆ ಮಂಗಳವಾಗಲಿ" ಎಂದು ಆಗಾಗ ಹರಸುತ್ತಿದ್ದನು. ಆ ಮರಿಯು ಸ್ವಲ್ಪ ದೊಡ್ಡದಾದ ಮೇಲೆ ಓಡಿ ಹೋಯಿತು. ಹೆಂಡತಿ, ಮಕ್ಕಳು, ಸಾಮ್ರಾಜ್ಯ ದಲ್ಲಿನ ಮೋಹವನ್ನು ತೊರೆದು ಕಾಡಿಗೆ ಬಂದಿರುವ ಭರತನಿಗೆ ಅವನ ಕರ್ಮಾನುಸಾರ ಜಿಂಕೆಯ ಮರಿಯಲ್ಲಿ ಮೋಹಬಂದಿತು ! ಆದರಿಂದ ಅವನು "ಅಯ್ಯೋ ! ಜಿಂಕೆ ಮರಿಯು ಎಲ್ಲಿಗೆ ಹೋಯಿತೋ ? ಕಾಣೆ ! ಅದನ್ನು ಅಗಲಿದ ನನ್ನ ಗತಿಯೇನು ? ನಾನೆಂತಹ ಪಾಪಿ ? ನಿರ್ಭಾಗ್ಯನು ನಾನು. ಹಿಂತಿರುಗಿ ಬಂದ ಅದನ್ನು ತಿರುಗಿ

ನೋಡುವ ಅದೃಷ್ಟವಿದೆಯೋ ಇಲ್ಲವೋ ?" ಇತ್ಯಾದಿಯಾಗಿ ಚಿಂತಾಕ್ರಾಂತನಾದನು. ಸತ್ಕರ್ಮಭ್ರಷ್ಟನಾದನು. ಮೇಲಾಗಿ ಶ್ರೀಹರಿಯನ್ನು ಮರತೇಬಿಟ್ಟನು. ಆ ಮರಿಯನ್ನೇ ಯಾವಾಗಲೂ ಚಿಂತಿಸುತ್ತಿದ್ದ ಭರತನಿಗೆ ಮೃತ್ಯುವು ಬಂದಿತು. ಆಗಲೂ ಜಿಂಕೆಯನ್ನೇ ಸ್ಮರಿಸುತ್ತ ಪ್ರಾಣಬಿಟ್ಟನು. ಆ ಸಂಸ್ಕಾರದಿಂದ ಅವನು ಜಿಂಕೆಯಾಗಿಯೇ ಹುಟ್ಟಿದನು. ಆದರೆ ಹಿಂದಿನ ಜನ್ಮದಲ್ಲಿ ಪರಮಾತ್ಮನನ್ನು ಚೆನ್ನಾಗಿ ಆರಾಧಿಸಿದ್ದನಾದ್ದರಿಂದ "ಜಿಂಕೆಯಲ್ಲಿ ಮೋಹವಿಟ್ಟಿದ್ದರಿಂದ ಈಗ ಮೃಗ ಜನ್ಮವು ಬಂದಿದೆ" ಎಂದು ತಿಳಿದನು. ಅದಕ್ಕಾಗಿ ಅತಿಸಂತಾಪಪಟ್ಟು "ಆಶ್ಚರ್ಯ ! ನಾನೆಂಥ ಪಾಪಿ ? ಜನ್ಮಾಂತರದಲ್ಲಿ ಜಿತೇಂದ್ರಿಯನಾಗಿ ಹರಿಕಥೆಗಳನ್ನು ಕೇಳುತ್ತ ಅವನಲ್ಲಿಯೇ ಮನಸ್ಸನ್ನಿಟ್ಟಿದ್ದರೂ ಜಿಂಕೆಯ ಸಂಗದಿಂದ ಯೋಗಭ್ರಷ್ಟನಾದೆನು. ಎಂತಹ ಅವಿವೇಕಿಯು ನಾನು ?" ಎಂದು ಪಶ್ಚಾತ್ತಾಪಪಟ್ಟು, ವೈರಾಗ್ಯವನ್ನು ಹೊಂದಿ, ಆಜನ್ಮದ ತಾಯಿ ಜಿಂಕೆಯನ್ನು ಬಿಟ್ಟು ಕಾಲಂಜರ ಪರ್ವತದಿಂದ ಹೊರಟು ಹಿಂದಿನ ಜನ್ಮದಲ್ಲಿ ತಪಸ್ಸನ್ನು ಮಾಡುತ್ತಿದ್ದ ಪುಲಹಾಶ್ರಮಕ್ಕೆ ಬಂದನು ಆಸಾಲಗ್ರಾಮ ಕ್ಷೇತ್ರದಲ್ಲಿ ಅವಸಾನವನ್ನು ನಿರೀಕ್ಷಿಸುತ್ತ ದುಃಸಂಗಕ್ಕೆ ಹೆದರಿ ಒಣಗಿದ ಎಲೆಗಳನ್ನು ತಿನ್ನುತ್ತ, ಪ್ರಾರಬ್ಧ ಕರ್ಮವನ್ನು ಅನುಭವಿಸಿ, ಅದು ಮುಗಿದ ಕೂಡಲೆ ಗಂಡಕೀನದಿಯ ನೀರಿನಲ್ಲಿ ಮೃಗಶರೀರವನ್ನು ಬಿಟ್ಟನು.

## ಎಂಟನೆಯ ಅಧ್ಯಾಯ ಮುಗಿದುದು

ಶಮದಮಾದಿಗುಣಸಂಪನ್ನನೂ, ಪರಮಾತ್ಮನ ಜ್ಞಾನದಿಂದ ಆನಂದಿಸತಕ್ಕವನೂ, ಆಂಗಿರಸಗೋತ್ರೋತ್ಪನ್ನನೂ, ಆದ ಒಬ್ಬ ಬ್ರಾಹ್ಮಣನಿದ್ದನು. ಅವನ ಹಿರಿಯ ಹೆಂಡತಿಯಲ್ಲಿ ಒಂಭತ್ತು ಮಂದಿ ಪುತ್ರರಾದರು. ಅವರೆಲ್ಲ ತಂದೆಯ ಗುಣವನ್ನು ಹೋಲುತ್ತಿದ್ದರು. ಕಿರಿಯ ಹೆಂಡತಿಯಲ್ಲಿ ಒಂದು ಹೆಣ್ಣು ಮತ್ತು ಒಂದು ಗಂಡು ಅವಳಿ ಮಕ್ಕಳು ಹುಟ್ಟಿದರು. ಆ ಗಂಡು ಮಗುವೇ ಭರತನು. ಅವನಿಗೆ ಆ ಬ್ರಾಹ್ಮಣ ಜನ್ಮದಲ್ಲಿಯೂ ಶ್ರೀಹರಿಯ ಅನುಗ್ರಹದಿಂದ ಪೂರ್ವ ಜನ್ಮಗಳ ಸ್ಮರಣೆ ಉಂಟಾಗಿ, ಬಂಧುಗಳೊಡನೆ ಸೇರಿ ಮೋಹದಿಂದ ಮರೆದರೆ ಅನರ್ಥವುಂಟಾಗುವುದೆಂದು ಹೆದರಿ ಏಕಾಕಿಯಾಗಿದ್ದು ಪರಮಾತ್ಮನ ಪಾದಾರವಿಂದವನ್ನೇ ನಿರಂತರ ಸ್ಮರಿಸುತ್ತ ಹುಚ್ಚ, ಬೆಪ್ಪ, ಕುರುಡ, ಕಿವುಡನಂತೆ ನಡೆಯುತ್ತಿದ್ದನು. ಅವನ ತಂದೆಯು ಕಿರಿಯಮಗನೆಂದು ವಾತ್ಸಲ್ಯದಿಂದ ಜಾತಕರ್ಮದಿಂದ ಉಪನಯನ ಪರ್ಯಂತ ಸಂಸ್ಕಾರಗಳನ್ನು ಮಾಡಿ ಶೌಚಾಚಮನಾದಿಗಳನ್ನು ಶಿಕ್ಷಿಸಿದನು. ವಿದ್ಯೆಯನ್ನು ಕಲಿಸಬೇಕೆಂದು ಮೊದಲು ಚೈತ್ರಾದಿ ನಾಲ್ಕು ಮಾಸಗಳಲ್ಲಿ ಗಾಯತ್ರಿಯ ಮಂತ್ರವನ್ನು ಎಷ್ಟು ವರ್ಷಿ ಹೇಳಿ ಕೊಟ್ಟರೂ, ಭರತನು ಸ್ವರವರ್ಣಗಳನ್ನು ವ್ಯತ್ಯಾಸವಾಗಿ ಹೇಳುತ್ತ ಒಂದನು.

ತಂದೆಯು ಇವನಿಗೆ ಜ್ಞಾನವುಂಟಾಗಲಿಲ್ಲವೆಂದು ತಿಳಿದು ವ್ಯಥೆಯಿಂದ ಪ್ರಾಣತ್ಯಜಿಸಿದನು. ಕಿರಿಯ ಹೆಂಡತಿಯು ಸಹಗಮನ ಮಾಡಿದಳು. ಬಳಿಕ ಒಂಭತ್ತು ಮಂದಿ ಅಣ್ಣಂದಿರೂ ಭರತನ ಮಹಿಮೆಯನ್ನು ತಿಳಿಯದೆ ಅವನನ್ನು ಹುಚ್ಚನೆಂದೇ ಭಾವಿಸಿ ಅವನ ಇಚ್ಛಾನುಸಾರ ಅವನನ್ನು ಬಿಟ್ಟು ಬಿಟ್ಟರು.

ಭರತನು ದೇಹಧಾರಣೆಗಾಗಿ ಭಿಕ್ಷಬೇಡಿ, ದೈವೇಚ್ಛೆಯಿಂದ ದೊರೆತ ಅನ್ನವು ಅಲ್ಪವಾಗಿರಲಿ, ಮೃಷ್ಟಾನ್ನವಾಗಿರಲಿ, ಕುತ್ಸಿತವಾಗಿರಲಿ ಅದನ್ನೇ ಉಂಡು ತೃಪ್ತನಾಗುತ್ತಿದ್ದನು ಅವನ ಜನಿವಾರ ಕೊಳೆಮುದ್ದೆಯಾಗಿದೆ. ಉಟ್ಟಬಟ್ಟೆ ಹರಕು. ಇವನ್ನು ನೋಡಿದ ಜನರು ಅವನ ಮಹಿಮೆಯನ್ನು ತಿಳಿಯದೇ ಹೋದರು. ಆದ್ದರಿಂದ ಹುಚ್ಚ, ಪೆಪ್ಪನೆಂದು ಅವನನ್ನು ಅಪಮಾನಿಸುತ್ತಿದ್ದರು. ಅದನ್ನು ಹಚ್ಚಿಕೊಳ್ಳದೆ ಭರತನು ಸಂಚರಿಸುತ್ತಿದ್ದನು. ಸಹೋದರರು ಕೂಲಿಯವನಿಗೆ ಹೇಳುವಂತೆ ಅವನಿಗೆ ಯಾವ ಕೆಲಸವನ್ನು ಹೇಳಿದರೂ, ಏನೂ ತಿಳಿಯದವನಂತೆ ತನ್ನ ಮನಸ್ಸು ಬಂದ ಹಾಗೆ ಕೆಲಸ ಮಾಡುತ್ತಿದ್ದನು. ಆ ದುಡಿಮೆಗೆ ಅವರು ಕೊಡುತ್ತಿದ್ದ ಅನ್ನವು ತಕ್ಕುದೇ ಅಥವಾ ಕಡಿಮೆಯೇ ಎಂಬುದನ್ನು ಗಮನಿಸುತ್ತಿರಲಿಲ್ಲ. ನುಚ್ಚಕ್ಕಿ, ಹಿಂಡಿ ಉದ್ದು, ಸೀಕಲ ಅನ್ನ ಯಾವುದು ದೊರೆಯುವುದೋ ಅದನ್ನು ಅಮೃತದಂತೆ ಆಸ್ವಾದಿಸುತ್ತಿದ್ದು ರಾಗ ರಹಿತನಾಗಿದ್ದನು.

ಒಂದು ದಿನ ಕಳ್ಳರಿಗೆ ಮುಖಂಡನಾಗಿದ್ದ ಶೂದ್ರನೊಬ್ಬನು, ತನಗೆ ಮಕ್ಕಳು ಬೇಕೆಂದು ಭದ್ರಕಾಳಿಗೆ ನರಬಲಿ ಕೊಡುವುದಾಗಿ ಹರಕೆ ಮಾಡಿಕೊಂಡು, ಒಬ್ಬ ಮನುಷ್ಯನನ್ನು ಕೋಣೆಯಲ್ಲಿ ಕೂಡಿ ಹಾಕಿದ್ದನು. ಆ ಮನುಷ್ಯನಿಗೆ ಸಾಯುವ ಕರ್ಮವಿರಲಿಲ್ಲ. ಅದೃಷ್ಟ ನಿಯಾಮಕನ ಅನುಗ್ರಹದಿಂದ ಅವನು ತಪ್ಪಿಸಿಕೊಂಡು ಓಡಿ ಹೋದನು. ಧಣಿಯು ಮತ್ತಾರನ್ನಾದರೂ ಹಿಡಿದುಕೊಂಡು ಬನ್ನಿರೆಂದು ತನ್ನ ಕೈಕೆಳಗಿರುವವರಿಗೆ ಅಪ್ಪಣೆ ಮಾಡಿದನು. ಆ ಆಳುಗಳು ಬಲಿಯನ್ನು ಹುಡುಕುತ್ತ ಅನೇಕ ಸ್ಥಳಗಳಲ್ಲಿ ಪರದಾಡಿದರು. ಅರ್ಧರಾತ್ರಿಯ ಸಮಯ. ಭರತನು ಬತ್ತದ ಗದ್ದೆಯನ್ನು ಕಾಯುತ್ತ ಕುಳಿತಿರುವನು. ಕಳ್ಳರು ಅವನನ್ನು ನೋಡಿ ಹಗ್ಗದಿಂದ ಬಿಗಿದು ತಂದು, ಅವರ ಸಂಪ್ರದಾಯದಂತೆ ಬಲಿಯಾಗುವವನಿಗೆ ಮಾಡಬೇಕಾದ ಸ್ನಾನಾಲಂಕಾರಗಳನ್ನು ಮಾಡಿ ಭದ್ರಕಾಳಿಯ ಮುಂದೆ ಕೂಡಿಸಿದರು. ಯಜಮಾನನಾದ ಶೂದ್ರನು ಭರತನನ್ನು ಕೊಲ್ಲಲು ಕತ್ತಿಯನ್ನು ಮೇಲಕ್ಕೆತ್ತಿದನು. ಭರತನು ಕೊಲೆಗಾರರು ಮಾಡುತ್ತಿದ್ದ ವ್ಯಾಪಾರವೊಂದಕ್ಕೂ ತಕರಾರುಮಾಡದೆ. ಬಾಯೆತ್ತದೆ ಸುಮ್ಮನೆ ಕುಳಿತಿದ್ದನು. ಅವನು ಬ್ರಹ್ಮಜ್ಞಾನಿಯಾದ್ದರಿಂದ ತನ್ನ ಮನಸ್ಸಿನಲ್ಲಿ ಹೀಗೆ ಹೇಳಿಕೊಳ್ಳುತ್ತಿದ್ದನು :–

ಕಾಂಬೋದಿ ರಾಗ ಝಂಪೆತಾಳ

ನಿನ್ನ ಸಂಕಲ್ಪಾನುಸಾರ ಮಾಡೊ ಪ
ಎನ್ನ ಸಾಕುವ ದೊರೆಯೆ ಮಾನ್ಯಮಾನದ ನೀನು ಅ.

(ಮಾನ್ಯ ಅಂದರೆ ಸರ್ವರಿಂದಲೂ ಪೂಜ್ಯನೆಂದರ್ಥ. ಮಾನದ ಎಂಬುದರ ಅರ್ಥ :- 1) ಜೀವರಿಗೆ ವಿಷಯ ವಸ್ತುಗಳಲ್ಲಿ ಅಭಿಮಾನವನ್ನು ಹುಟ್ಟಿಸುವವನು, 2) "ಮಾನದೋ ಅರ್ಜನಾದಿಭ್ಯೋ ಮಾನಂ ರಾಜ್ಯಂ ಚ ದತ್ತವಾನ್"- ನಿರುಕ್ತಿ. ಅಂದರೆ ಅರ್ಜುನಾದಿಗಳಿಗೆ ಮಹಾರಥಿಕನೆಂಬ ಆಧಿಪತ್ಯ, ರಾಜ್ಯವನ್ನು ಕೊಡತಕ್ಕವನಿಗೆ ಮಾನದನೆಂದು ಹೆಸರು. 3) ಮಾನವೆಂದರೆ ದುರ್ಜನರ ಗೌರವ, ಮರ್ಯಾದೆಗಳನ್ನು. ದ ಅಂದರೆ ನಾಶಮಾಡುವವನು.)

ಪಾತ್ರನೆಂದೆನಿಸು ಪಾಪಾತ್ಮನೆಂದೆನಿಸೆನ್ನ
ಶ್ರೋತ್ರಿಯನೆಂದೆನಿಸು ಬಹುಶುಂಠನೆನಿಸು
ಪುತ್ರಮಿತ್ರಾದ್ಯರಿಂ ಬೈಸು ಪೂಜೆಗಳ ನಡೆಸು
ಕರ್ತನೀ ಜಗಕೆ ಸರ್ವತ್ರವ್ಯಾಪಕನೆ ೧

ಜನರೊಳಗೆ ನೀನಿದ್ದು ಜನುಮಜನುಮಗಳಲ್ಲಿ
ಗುಣ ಕಾಲಕರ್ಮಸ್ವಭಾವಂಗಳ
ಅನುಸರಿಸಿ ಪುಣ್ಯಪಾಪಗಳ ಮಾಡಿಸಿ, ಫಲಗ
ಳುಣಿಸಿ ಮುಕ್ತರ ಮಾಡಿ ಪೊರೆವ ಕರುಣಾಳು ೨

ಏತಕೆನ್ನನು ಬರಿದೆ ದುಃಖಿತನ ಮಾಡುವಿ, ಧ
ರಾತಳದೊಳನುದಿನ ವಿಧಾತಪಿತನೆ
ಭೀತಿಗೊಂಬುವನಲ್ಲ ಭಯನಿವಾರಣ, ಜಗ
ನ್ನಾಥ ವಿಠಲನೆ ದಯಮಾಡು ಜಗದೀಶ ೩

ಈ ಕ್ರೂರ ಕರ್ಮವನ್ನು ನೋಡಿ ಭದ್ರಕಾಳಿಯು, ಬ್ರಾಹ್ಮಣನ ಕೊಲೆ ಅತಿ ಅಯೋಗ್ಯವೆಂದು ತಿಳಿದು ತೇಜೋಮಯ ಶರೀರದಿಂದ ಪ್ರತ್ಯಕ್ಷಳಾಗಿ, ಶೂದ್ರನ ಕೈಲಿದ್ದ ಕತ್ತಿಯನ್ನು ಕಿತ್ತುಕೊಂಡು ಆ ಪಾಪಿಗಳ ಶಿರಸ್ಸುಗಳನ್ನು ಕತ್ತರಿಸಿ, ತನ್ನ ಪರಿವಾರಗಳೊಡನೆ ಅವರ ರಕ್ತವನ್ನು ಹೀರಿ, ತಲೆ ಬುರುಡೆಗಳನ್ನು ಚೆಂಡಾಡುತ್ತ, ಗಾನಮಾಡಿ ಕ್ರೀಡಿಸಿದಳು.

ಪರೀಕ್ಷಿದ್ರಾಜನೇ. ಮಹಾನುಭಾವರಿಗೆ ಅಪರಾಧ ಮಾಡಿದರೆ, ಅಪರಾಧಿ

ಗಳಿಗೇ ಕೇಡುಂಟಾಗುವುದು. ಆದ್ದರಿಂದ ನಿರ್ಭಯನಾದ ಪರಮಾತ್ಮನ ಪಾದಾರವಿಂದವನ್ನು ಆಶ್ರಯ ಮಾಡಿರುವವರನ್ನು ಸಂಹರಿಸಲು ಯಾರೂ ಸಮರ್ಥರಲ್ಲ.

**ಒಂಭತ್ತನೆಯ ಅಧ್ಯಾಯ ಮುಗಿದುದು**

## ರಹೂಗಣರಾಜನಿಗೆ ಉಪದೇಶ

ಸಿಂಧು ಸೌವೀರ ದೇಶಗಳ ರಾಜನಾದ ರಹೂಗಣನು ಇಕ್ಷುಮತೀನದಿಯ ತೀರದ ಆಶ್ರಮದಲ್ಲಿದ್ದ ಕಪಿಲಋಷಿಗಳನ್ನು ನೋಡಲು ಪಲ್ಲಕ್ಕಿಯನ್ನೇರಿ ಹೊರಟಿದ್ದನು. ಆ ರಾಜನ ಪ್ರಧಾನಾಧಿಕಾರಿಯು ಪಲ್ಲಕ್ಕಿಯನ್ನು ಹೊರಲು ಬೇಕಾಗಿದ್ದ ಒಬ್ಬ ಪುರುಷನನ್ನು ಹುಡುಕುತ್ತಿರುವಾಗ ಭರತನು ಅವನ ಕಣ್ಣಿಗೆ ಬಿದ್ದನು. ಅವನು ಕತ್ತೆಯಂತೆ ಭಾರವನ್ನು ಹೊರುವ ಧಡೂತಿ ಆಸಾಮಿ ಎಂದು ನಿಶ್ಚಯಿಸಿ, ಅವನನ್ನು ಬಲಾತ್ಕಾರವಾಗಿ ಎಳೆದು ತಂದು ಪಲ್ಲಕ್ಕಿಯ ಮುಂಭಾಗದ ಕೊಂಬನ್ನು ಹೊರಸಿದನು. ಭರತನು ಪಲ್ಲಕ್ಕಿಯ ಕೊಂಬನ್ನು ಹೊತ್ತು, ಎರಡು ಹೆಜ್ಜೆಯಷ್ಟು ಪ್ರದೇಶವನ್ನು ನೋಡಿಕೊಂಡು ಕಾಲುಹಾಕುತ್ತಿದ್ದನು. ಅದು ಮಿಕ್ಕವರ ಹೆಜ್ಜೆಗೆ ಅನುಗುಣವಾಗಿರಲಿಲ್ಲ. ಪಲ್ಲಕ್ಕಿ ಏರುಪೇರಾಯಿತು. ರಹೂಗಣನು "ಏಕೆ ಹೀಗೆ ? ಸರಿಯಾಗಿ ಹೆಜ್ಜೆ ಹಾಕಿರಿ" ಎಂದು ಗದರಿಸಿದನು.

**ವಾಹಕರು :–** ಪ್ರಭೋ ! ನಾವು ಸರಿಯಾಗಿಯೇ ಹೊರುತ್ತಿದ್ದೇವೆ. ಈಗ ತಾನೇ ಬಂದ ಬಿಟ್ಟಿಯ ಆಳು ನಮ್ಮಂತೆ ಹೆಜ್ಜೆ ಹಾಕದೆ ದಾಟುಕಾಲು ಹಾಕುತ್ತಿದ್ದಾನೆ. ಇವನೊಂದಿಗೆ ಪಲ್ಲಕ್ಕಿ ಹೊರಲು ನಮಗೆ ಸಾಧ್ಯವಿಲ್ಲ.

(ಭರತನು ಬೂದಿಮುಚ್ಚಿದ ಕೆಂಡದಂತೆ ಬ್ರಹ್ಮವರ್ಚಸ್ವಿಯಾಗಿದ್ದನು. ಅವನ ಮಹಿಮೆಯನ್ನು ತಿಳಿಯದೆ ರಹೂಗಣನು ತಾನು ರಾಜನೆಂಬ ದುರಾಗ್ರಹವುಳ್ಳವನಾಗಿ ಸಿಟ್ಟಿನಿಂದ "ಎಲೋ ಅಪ್ಪಾ ! ನೀನು ಬಹಳ ಸಣಕಲಾಗಿರುವೆ. ದೀರ್ಘದಾರಿಯಲ್ಲಿ ನೀನೊಬ್ಬನೇ ಪಲ್ಲಕ್ಕಿಯನ್ನು ಹೊತ್ತು ಬಹಳ ಬಳಲಿ ಸೋತು ಹೋಗಿರುವೆ" ಎಂದು ಹೀಯಾಳಿಸಿದನು. ಭರತನು ಅದನ್ನು ಲಕ್ಷೀಕರಿಸದೆ, ಹಾಸ್ಯ ಮಾಡಿದರೂ ಮಾಡಲಿ ಎಂದು ಮೊದಲಿನಂತೆ ಹೆಜ್ಜೆ ಹಾಕುತ್ತ ಹೋದನು. ಪಲ್ಲಕ್ಕಿ ಅಲ್ಲಾಡಿತು. ಕುಪಿತನಾದ ರಾಜನು "ಲೇ" ನೀನು ಬದುಕಿದ್ದರೂ ಸತ್ತಿರುವೆಯೇನು? ನಾನು ರಾಜನೆಂಬುದನ್ನೂ ಗಮನಿಸದೆ ತುಚ್ಛೀಕರಿಸಿರುವೆ. ಯಮನಂತೆ ನಿನ್ನನ್ನು ಶಿಕ್ಷಿಸುತ್ತೇನೆ" ಎಂದು ಹೂಂಕರಿಸಿದನು. ಆಗ ಭಗವದ್ಭಕ್ತರಲ್ಲಿ ಉತ್ತಮನೂ, ಸರ್ವಪ್ರಾಣಿಗಳಲ್ಲಿಯೂ ಪ್ರೇಮವಿಟ್ಟಿರುವ ಭರತನು ವಿಕಸಿತವದನನಾಗಿ ರಾಜನ ಮಾತುಗಳಿಗೆ ತಕ್ಕ ಉತ್ತರ ಕೊಟ್ಟನು.)

**ಭರತ** . ರಾಜನೇ ! ವೀರನೆ ! "ತುಂಬ ಬಳಲಿ ನೀನೊಬ್ಬನೇ ಬಹುದೂರ ದಿಂದ ಪಲ್ಲಕ್ಕಿಯನ್ನು ಹೊರುತ್ತಿರುವೆ. ಶಕ್ತಿಯಿಲ್ಲದೆ ಬೆಂಡಾಗಿರುವೆ" ಇತ್ಯಾದಿಯಾಗಿ ನೀನು-ಹೇಳಿದ ಮಾತು ಸತ್ಯವಾಗಬಹುದಾಗಿತ್ತು. ಆದರೆ ಸರ್ವವೂ ಭಗವದಧೀನ, ಆದ್ದರಿಂದ ನಾನು ಸ್ವತಂತ್ರವಾಗಿ ಭಾರವನ್ನು ಹೊರುವವನೂ ಅಲ್ಲ. ನನಗೆ ಸ್ವತಂತ್ರ ವಾಗಿ ಹೋಗುವ ಶಕ್ತಿಯೂ ಇಲ್ಲ. ಸೇರಬೇಕಾದ ಸ್ಥಳವೂ ಸ್ವತಂತ್ರವಾಗಿಲ್ಲ. ಸರ್ವ ಸ್ವತಂತ್ರನಾದ ಪರಮಾತ್ಮನ ಪ್ರೇರಣೆಯಂತೆಯೇ ಸರ್ವವೂ ನಡೆಯತಕ್ಕದು.

ಭಾರಾದಿಗಳು ಮಿಥ್ಯೆಯೆಂಬ ಅಭಿಪ್ರಾಯವಲ್ಲ. "ಭರ್ತಾಸನ್ ಭ್ರಿಯ ಮಾಣೋ ಬಿಭರ್ತಿ" ಇತ್ಯಾದಿ ಶ್ರುತಿಗಳಲ್ಲಿ ಶ್ರೀಪರಮಾತ್ಮನೇ ಧಾರಣಾದಿಗಳನ್ನು ಮಾಡುವವನೆಂದು ಸ್ಪಷ್ಟವಾಗಿದೆ. ನೀನು 'ಪಂಚಭೂತಾತ್ಮ ಶರೀರದಲ್ಲಿ ಪುಷ್ಟ ನಾಗಿರುವೆ'–ಎಂದು ಹೇಳಿದ ಪ್ರವಾದವನ್ನು ಜ್ಞಾನಿಗಳು ಒಪ್ಪುವುದಿಲ್ಲ. ಏಕೆಂದರೆ ಸ್ಥೌಲ್ಯಾದಿಗಳು ದೇಹದ ಧರ್ಮಗಳು. ಸ್ವಾಭಾವಿಕವಾಗಿ ಜೀವನ ಧರ್ಮಗಳಲ್ಲ. ದಪ್ಪ ಸಣ್ಣ, ರೋಗ, ಕೊರಗು, ಹಸಿವು, ಬಾಯಾರಿಕೆ, ಭಯ, ಜಗಳ, ಆಶೆ, ಮುಪ್ಪು, ನಿದ್ರೆ, ಆಲಸ್ಯ, ಕೋಪ, ಅಹಂಕಾರ, ಮದ ಇವೆಲ್ಲ ದೇಹದಲ್ಲಿ ಅಭಿಮಾನವುಳ್ಳ ವರಿಗೇ ಇರುವುವು. ದೇಹಾಭಿಮಾನವಿಲ್ಲದ ನನಗೆ ಇವಾವುದೂ ಇಲ್ಲ. ರಾಜನೇ ! ಉತ್ಪತ್ತಿ ನಾಶಗಳುಳ್ಳ, ಕ್ಷಣಕ್ಷಣಕ್ಕೂ ವಿಕಾರಹೊಂದುವ ಜಡದೇಹಕ್ಕೆ **'ಜೀವನ್ಮೃತ'** ಎಂಬ ವ್ಯವಹಾರವು ನಿಯಮದಿಂದ ಕಂಡು ಬಂದಿದೆ. ಈ ದೇಹವು ಪ್ರಾಣ ಸಂಯೋಗವಿರುವಾಗ ಚೇಷ್ಟೆ ಮಾಡುವುದರಿಂದ **"ಜೀವತ್"** ಎಂದೂ, ದುಃಖ ಸಂಬಂಧವಿರುವುದರಿಂದ ಅಥವಾ ಪ್ರಾಣ ಸಂಬಂಧವಿಲ್ಲದಿರುವಾಗ ಸುಖ ದುಃಖ ರಹಿತವಾಗಿರುವ ಕಾರಣ "ಮೃತ"ವೆಂದೂ ಕರೆಯಲ್ಪಡುವುದು. ಚೇತನನನ್ನು ಜೀವನ್ಮೃತನೆಂದು ಹೇಳಿದರೆ ತಪ್ಪಾಗುವುದು. ಶರೀರವನ್ನು ಕುರಿತು ಹೇಳಿದರೆ. ಅದು ಶರೀರಗಳಿಗೆ ಸಾಧಾರಣವಾದ್ದರಿಂದ ನನ್ನ ದೇಹ ಮಾತ್ರ ಜೀವನ್ಮೃತವಲ್ಲವಾಗಿ ಆಕ್ಷೇಪವಾಗುವುದಿಲ್ಲ. "ನಾನು ರಾಜನು, ನೀನು ಸೇವಕನು" ಎಂಬುದು ಮುಖ್ಯ, ನಿಯತ ಮತ್ತು ಸತ್ಯವೆಂದು ನೀನು ಹೇಳುವಿಯಾದರೆ ಶ್ರೀಹರಿಯೊಬ್ಬನೇ 'ನಾನು ರಾಜನು, ನೀನು ಸೇವಕನು ಎಂದು ಹೇಳಬಹುದು. ಆದರಿಂದಲೇ **"ಶ್ರೀಹರಿಯೇ ಸ್ವಾಮಿ"**ಎಂದು ಉಪಾಸನೆ ಮಾಡುವುದು ಸಂಧ್ಯೋಪಾಸನೆಯಂತೆ ವಿಹಿತವಾಗುವುದು ನಿನ್ನಲ್ಲಿರುವ ಸ್ವಾಮಿ ಭಾವವು ಅಸ್ಥಿರವಾದ್ದರಿಂದ ನಿನಗೆ ಸದಾ ಶಾಸನ ಮಾಡುವ ಯೋಗ್ಯತೆ ಇಲ್ಲ. ಏಕೆಂದರೆ ಪರಮಾತ್ಮನೇ ಜೀವರ ಕರ್ಮಾನುಸಾರ ರಾಜನನ್ನು ಸೇವಕ ನನ್ನಾಗಿಯೂ, ಸೇವಕನನ್ನು ರಾಜನನ್ನಾಗಿಯೂ ಮಾಡುತ್ತಾನೆ. ದೇವತೆಗಳಲ್ಲಿರತಕ್ಕ ಸ್ವಾಮಿತ್ವವು ಮನುಷ್ಯರಿಗಿರುವಂತಲ್ಲ. ಶ್ರೀಹರಿಯಿಂದ ನಿಯತವಾಗಿದೆ. ಶ್ರೀ ಹರಿಯ ಲ್ಲಾದರೋ ಸರ್ವದಾ ಸ್ವಾಮಿತ್ವವು ಮುಖ್ಯವಾಗಿದೆ. ದೇವತೆಗಳಲ್ಲಿ ಸ್ವಾಮಿತ್ವವು ತಾರತಮ್ಯಾನುಸಾರವಾಗಿ ಅಮುಖ್ಯವೂ, ನಿಯತವೂ ಆಗಿದೆ. ಮನುಷ್ಯರಲ್ಲಿ ಅದು

ವ್ಯತ್ಯಾಸವಾಗುತ್ತಿರುವುದರಿಂದ ಅಮುಖ್ಯ ಮತ್ತು ಅನಿಯತ. "ಕರ್ಮವಶದಿಂದ ಈಗ ನಾನು ರಾಜನು, ನೀನು ಭೃತ್ಯನು" ಎಂದು ಒಪ್ಪಿಕೋ ಎನ್ನುವೆಯಾ ? ಹಾಗಾದರೆ ನೀನು ಅಪ್ಪಣೆ ಮಾಡಿದರೆ ನಾವು ಶಕ್ತಿಯಿದ್ದಷ್ಟು ಮಾಡುವೆವು. ವೀರಾ ! "ಶಿಕ್ಷಿಸಿ ನಿನ್ನ ಬೆಪ್ಪುತನವನ್ನು ಬಿಡಿಸುವೆನು"ಎಂದು ನೀನು ಹೇಳಿದೆಯಷ್ಟೆ? ವೀರನೇ ! ಉನ್ಮತ್ತನಂತೆ, ಮತ್ತನಂತೆ ಜಡನಂತೆ ನಾನು ಸ್ವರೂಪ ಸ್ಥಿತಿಯನ್ನು ಹೊಂದಿರುವೆನು. ಸ್ವತಂತ್ರನಾದ ಶ್ರೀಹರಿಯಲ್ಲಿಯೇ ಸ್ಥಿತನಾಗಿರುವೆನು. (ಅವನು ಇಟ್ಟಹಾಗೆ ಇರುವೆನು ಎಂದು ತಾತ್ಪರ್ಯ.) ನಿನ್ನ ಶಿಕ್ಷೆಯಿಂದ ನನಗೇನಾದೀತು ? ಸ್ವಾಭಾವಿಕವಾಗಿ ಸ್ತಬ್ಧನೆಂದಿಟ್ಟುಕೊಂಡರೂ ಅಂಥವನಿಗೆ ಶಿಕ್ಷೆಯಿಂದ ಏನೂ ಆಗುವುದಿಲ್ಲ. ಸ್ವಭಾವವನ್ನು ಶಿಕ್ಷಾದಿಗಳಿಂದ ಹೋಗಲಾಡಿಸಲು ಸಾಧ್ಯವೇ ಇಲ್ಲವಾದ್ದರಿಂದ ಹಿಟ್ಟನ್ನು ಕುಟ್ಟಿದಂತೆ ವ್ಯರ್ಥ.

**ಶುಕ :** ಪ್ರಾರಬ್ಧಕರ್ಮವನ್ನು ಕಳೆಯಲು ಅದನ್ನು ಭೋಗಿಸುತ್ತಿದ್ದ ಭರತನು ಹಿಂದಿನಂತೆ ಪಲ್ಲಕ್ಕಿಯನ್ನು ಹೊತ್ತನು. ಅಹಂಕಾರ ಮಮಕಾರಗಳನ್ನು ಹೋಗಲಾಡಿಸತಕ್ಕ ಆ ಬ್ರಾಹ್ಮಣನ ಮಾತನ್ನು ಕೇಳಿ ರಹೂಗಣನು ಅವನ ಪಾದಕ್ಕೆರಗಿ ಗರ್ವವನ್ನು ಬಿಟ್ಟು, ಅಪರಾಧವನ್ನು ಕ್ಷಮಿಸಬೇಕೆಂದು ಪ್ರಾರ್ಥಿಸಿ.

**ರಹೂಗಣ :–** ತಾವು ಯಾರಿಗೂ ಗೊತ್ತಾಗದಂತೆ ಸಂಚರಿಸುತ್ತಿರುವಿರಿ. ತಾವು ಯಾರು ? ಜನಿವಾರವನ್ನು ಧರಿಸಿರುವುದರಿಂದ ಆವಧೂತ ಯೋಗಿಗಳ ಪೈಕಿ ತಾವು ಯಾರು? ಯಾರ ಮಕ್ಕಳು? ಎಲ್ಲಿರುವಿರಿ? ಇಲ್ಲಿಗೆ ಬರಲು ಕಾರಣವೇನು? ನನಗೆ ಅನುಗ್ರಹಿಸಲು ಬಂದಿರುವ ಶುದ್ಧರಾದ ಕಪಿಲಮುನಿಗಳಿರಬಹುದೆ ? ಬ್ರಾಹ್ಮಣೋತ್ತಮರೆ ! ನಾನು ಇಂದ್ರನ ವಜ್ರಾಯುಧಕ್ಕಾಗಲೀ, ಶಿವನ ಶೂಲಕ್ಕಾಗಲೀ, ಯಮನ ದಂಡಕ್ಕಾಗಲೀ, ಅಗ್ನ್ಯಾದಿಗಳ ಅಸ್ತ್ರಗಳಿಗಾಗಲೀ ಹೆದರುವುದಿಲ್ಲ. ಬ್ರಾಹ್ಮಣರ ವಂಶಕ್ಕೆ ಮಾಡಿದ ಅಪರಾಧದಿಂದ ಬಹಳವಾಗಿ ಹೆದರುವೆನು. ಆದ್ದರಿಂದ ಉತ್ತರವನ್ನು ನೀಡಬೇಕು. ಅಜ್ಞಾನವನ್ನು ಹೋಗಲಾಡಿಸಿ ತತ್ತ್ವವನ್ನು ತಿಳಿಸುವ ಕಪಿಲಮುನಿಗಳ ಬಳಿಗೆ ಹೊರಟಿರುವೆನು. ರಾಜನೆಂಬ ದುರಭಿಮಾನದಿಂದ ತಮ್ಮನ್ನು ತಿರಸ್ಕರಿಸಿದೆ. ದಯೆಯನ್ನಿಡಿ. ಸಂದೇಹವನ್ನು ಪರಿಹರಿಸಿ. ಮಹಾಂತರ ತಿರಸ್ಕಾರವು ನನ್ನನ್ನು ಕೂಡಲೇ ದಹಿಸುವುದು. ರುದ್ರದೇವರಂತಹವರು ಸ್ವೋತ್ತಮರಲ್ಲಿ ಮಾಡಿದ ಅಪರಾಧದಿಂದ ಕೂಡಲೇ ತಮ್ಮನ್ನು ತಾವೇ ಸುಟ್ಟುಕೊಳ್ಳುವರು. ಹೀಗಿರುವಾಗ ನನ್ನ ಪಾಡೇನು ?

**ಹತ್ತನೆಯ ಅಧ್ಯಾಯ ಮುಗಿದುದು**

**ಭರತ :–** ರಾಜನೇ! ನೀನು ಪಂಡಿತನಲ್ಲ. ಆದರೂ ಪಂಡಿತನಂತೆ ಮಾತಾಡು ತ್ತಿರುವೆ. "ಭಾರ ಹೊರುವವನು ನೀನು. ಅಪ್ಪಣೆ ಕೊಡತಕ್ಕವನು ನಾನು" ಎಂದು ನೀನು ಹೇಳಿದೆ. ಜ್ಞಾನಿಗಳು ಹೀಗೆ ಸರ್ವಥಾ ಹೇಳಲಾರರು. ವೇದದ ಮೇಲ್ನೋಟದ ಅರ್ಥದಲ್ಲಿಯೇ ಆಸಕ್ತರಾದ ದಡ್ಡರಿಗೆ "ಹರಿಯೇ ಸಕಲ ಯಜ್ಞಭೋಕ್ತೃವು. ಯಜಮಾನ, ಋತ್ವಿಜರೇ ಮೊದಲಾದವರಲ್ಲಿದ್ದು ಯಜ್ಞಕಾರ್ಯಗಳನ್ನು ಮಾಡಿಸು ವವನೂ ಅವನೇ. ಜೀವರು ಅಸ್ವತಂತ್ರರು. ವೇದಗಳಲ್ಲಿ ಕರ್ಮಾದಿಗಳನ್ನು ಹೇಳು ವುದೂ ಶ್ರೀಹರಿಯ ಪ್ರೀತಿಗಾಗಿಯೇ" ಇತ್ಯಾದಿ ತತ್ತ್ವವು ತೋರುವುದಿಲ್ಲ. ಜ್ಞಾನಿ ಗಳಿಂದ ಶಿಕ್ಷಿತ ಬುದ್ಧಿಯುಳ್ಳವರೇ ವೇದಗಳಲ್ಲಿ ಮುಖ್ಯವಾಗಿ ಪರಮಾತ್ಮನೇ ಪ್ರತಿ ಪಾದ್ಯನೆಂದು ತಿಳಿಯುವರು. ಕಾಮ್ಯಕರ್ಮದಲ್ಲಿ ಆಸಕ್ತಿಯಿದ್ದವನಿಗೆ ಜ್ಞಾನಮಾರ್ಗವು ರುಚಿಸುವುದಿಲ್ಲ. ಇಹಪರಲೋಕಗಳ ಸುಖಗಳೆಲ್ಲ ಅತ್ಯಲ್ಪ ಮತ್ತು ಅಸ್ಥಿರಗಳೆಂದು ತಿಳಿಯದೆ ತತ್ತ್ವಜ್ಞಾನವುಂಟಾಗುವುದಿಲ್ಲ. ಚೇತನನ ಮನಸ್ಸು ತ್ರಿಗುಣಗಳ ವಶ ವಾಗಿರುವವರೆಗೆ ಆ ಚೇತನನು ಶಾಸ್ತ್ರವಿಧಿಯನ್ನು ಉಲ್ಲಂಘಿಸುವನು ಮತ್ತು ತ್ರಿಗುಣಾತ್ಮಕ ಪುಣ್ಯಪಾಪಕರ್ಮಗಳನ್ನು ಮಾಡುತ್ತಲೇ ಇರುವನು. ನಾನಾ ವಿಷಯಗಳ ಸಂಸ್ಕಾರಕ್ಕೆ ಉಪಾದಾನ ಕಾರಣವಾದ ಮನಸ್ಸು ನಾನಾ ಬಗೆಯ ಜನ್ಮ ಗಳನ್ನು ತಂದಿತ್ತು, ಸಂಸಾರದಲ್ಲಿ ಭ್ರಮಿಸುವ ಜೀವನನ್ನು ಲಿಂಗಶರೀರ ರೂಪದಿಂದ ಸಂಬಂಧಿಸಿ ವಶಮಾಡಿಕೊಂಡು ಕಾಲರೂಪೀ ಹರಿಯು ಕರ್ಮಫಲವಾಗಿ ಕೊಟ್ಟ ಸುಖದುಃಖ ಮಿಶ್ರಫಲಗಳನ್ನು ಅನುಭವಕ್ಕೆ ತಂದುಕೊಡುವುದು. ಸ್ವಾತಂತ್ರ್ಯಾಭಿ ಮಾನವು ಇರುವವರೆಗೂ ಸಂಸಾರವು ತಪ್ಪುವುದಿಲ್ಲ. ಇಂತಹ ಮನಸ್ಸು ಜೀವರ ಸಂಸಾರಕ್ಕೂ, ಮೋಕ್ಷಕ್ಕೂ ಕಾರಣವು. ತುಪ್ಪ ಮತ್ತು ಬತ್ತಿಗಳನ್ನು ಗ್ರಹಿಸುವ ದೀಪವು ಹೊಗೆಯಿಂದ ಕೂಡಿದ ಜ್ವಾಲೆಯನ್ನೂ, ತುಪ್ಪವಿಲ್ಲದ ಕಾಲದಲ್ಲಿ ಹೊಗೆ ಯಿಲ್ಲದ ಜ್ವಾಲೆಯನ್ನು ಹುಟ್ಟಿಸುವುದಿಲ್ಲವೆ ? ಇದರಂತೆ ಗುಣ ಮತ್ತು ಕರ್ಮ ಸಹಿತವಾದ ಮನಸ್ಸು ಬಾಹ್ಯವಿಷಯಗಳನ್ನಾಶ್ರಯಿಸಿದರೆ, ವಿಷಯಸುಖಾಸಕ್ತಿ ಯಿಲ್ಲದ ಮನಸ್ಸು ತತ್ತ್ವವೆನಿಸಿದ ಶ್ರೀಹರಿಯನ್ನಾಶ್ರಯಿಸುವುದು. 'ನಾನು, ನನ್ನದು' ಎಂಬ ಎರಡು ವೃತ್ತಿಗಳೇ ಸಂಸಾರಕ್ಕೆ ಕಾರಣಗಳು. ಅಥವಾ ಸ್ವತಂತ್ರಕರ್ತ ನೆಂಬ ಭ್ರಮರೂಪವಾದ ಮನಸ್ಸು ಮಾಡುವ ವ್ಯಾಪಾರವೇ ವಿಶೇಷ ಸಂಸಾರಕ್ಕೆ ಕಾರಣ. ಜೀವಾಂತರ್ಯಾಮಿ ಹರಿಯು ದೇಹ, ಇಂದ್ರಿಯ, ಯೋಗ್ಯತೆ, ಅನುಭವ ದಿಂದ ಬಂದ ಸಂಸ್ಕಾರ, ಜನ್ಮಾಂತರ ಪುಣ್ಯ ಪಾಪ ಇವುಗಳನ್ನು ಪಕ್ವಮಾಡುವ ಕಾಲ ಇವುಗಳಲ್ಲಿದ್ದು ಜೀವನ ಅದೃಷ್ಟವನ್ನು ಅನುಸರಿಸಿ, ಜೀವನ ಭೋಗಕ್ಕಾಗಿ ಕೋಟಿ ಗಟ್ಟಲೆ ಮನೋವಿಕಾರಗಳನ್ನು ಹುಟ್ಟಿಸುತ್ತಾನೆ. ಸ್ವೇಚ್ಛೆಯಿಂದಲೇ ನಿರ್ಮಿತ ಗಳಾದ, ಅಸ್ಥಿರಗಳಾದ ಜೀವನ ಮನೋವ್ಯಾಪಾರಗಳನ್ನು ಹರಿಯು ವಿಕಾರ ಶೂನ್ಯನಾಗಿ ನೋಡುತ್ತಿರುವನು. ಅವನ ಮಹಿಮೆಯನ್ನು ಹೇಳುವೆನು ಕೇಳು .–

ಶುದ್ಧನಾದ ಶ್ರೀಹರಿಯು ಸಾಕ್ಷಿ, ಕ್ಷೇತ್ರಜ್ಞನು, ಸರ್ವತ್ರವ್ಯಾಪ್ತ, ಜೀವಾಂತರ್ಯಾಮಿ, ಆಕಾರಸಹಿತವಾದ ದೇಹಗಳಲ್ಲಿ ನೆಲೆಸಿರುವವನು, ಪರಿಣಾಮರಹಿತ, ಸರ್ವಜ್ಞ, ಸ್ವಯಂಪ್ರಕಾಶ, ಉತ್ಪತ್ತಿಶೂನ್ಯ. ಬ್ರಹ್ಮದೇವರಿಗೂ ನಿಯಾಮಕ, ನಾರಾಯಣ ಶಬ್ದವಾಚ್ಯ, ಉತ್ಪತ್ತ್ಯಾದಿಗಳನ್ನು ಬಲ್ಲವನು, ಸರ್ವತ್ರ ವ್ಯಾಪಿಸಿದ್ದರೂ ಅಲ್ಲಿರುವ ದೋಷ ನಿರ್ಲೇಪ, ಇವನಿಗೆ ಇವನೇ ಆಶ್ರಯ, ಜೀವನಿಗೆ ಕಾಣಿಸದೇ ಇರಲು ಅವನ ಇಚ್ಛೆಯೇ ಕಾರಣ. ವಾಯುದೇವರು ಸರ್ವರಲ್ಲಿಯೂ ಪ್ರವೇಶಿಸಿ ನಿಯಮಿಸಿದರೂ ಅವರಿಗೆ ಸುಖದುಃಖವಿಲ್ಲದಿರುವಾಗ, ಸರ್ವೋತ್ತಮನಾದ ಹರಿಗೆ ಎಲ್ಲಿಂದ ಬಂದೀತು ?

ರಹೂಗಣ ರಾಜನೇ ! ಜೀವರು ಮನಸ್ಸಿನಲ್ಲಿನ ನಾನು, ನನ್ನದು ಎಂಬ ಅಭಿಮಾನ ರೂಪ ಭ್ರಮೆಯನ್ನು ಶಾಸ್ತ್ರ ಶ್ರವಣಮಾಡಿ ಅದರಿಂದ ಲಭ್ಯವಾದ ಪರೋಕ್ಷ ಜ್ಞಾನದಿಂದ ಕಳೆದುಕೊಂಡು, ಸರ್ವವೇದಾಂತ ಪ್ರತಿಪಾದ್ಯವಾದ ಭಗವತ್ ಸ್ವರೂಪವನ್ನು ತಿಳಿಯುವವರೆಗೆ ಸಂಸಾರದಲ್ಲಿ ತಿರುಗುತ್ತಾ ಇರುವರು. ಮನಸ್ಸು ಜೀವನ ಯೋಗ್ಯತೆಯನ್ನು ತಿಳಿಸುವುದು. ಅದು ಶೋಕ, ಮೋಹ, ರೋಗ, ಅಭಿಮಾನ, ಲೋಭ ಮತ್ತು ವೈರವನ್ನು ಬೆಳೆಸುವುದು. ಸಂಸಾರ ತಾಪಗಳಿಗೆ ಸ್ಥಾನವಾಗಿರುವುದು. ಮನಸ್ಸು ಅಭಿಮಾನವನ್ನು ಹುಟ್ಟಿಸದೆ ಹೋಗುವವರೆಗೆ ಸಂಸಾರವು ತಪ್ಪುವುದಿಲ್ಲ, ಮನಸ್ಸಿನಿಂದ ಹುಟ್ಟುವ ವಿಪರೀತಜ್ಞಾನ (ಭ್ರಮೆ) ವೆಂಬ ಶತ್ರುವನ್ನು ಗುರುಗಳ ಮತ್ತು ಶ್ರೀಹರಿಯ ಪಾದಾರವಿಂದಗಳ ಉಪಾಸನೆ ಮಾಡಿ ನಾಶಪಡಿಸು. ಭಕ್ತಿಯಿಂದ ಶ್ರೀಹರಿಯನ್ನು ಹೀಗೆ ಪ್ರಾರ್ಥಿಸು :–

ಜತೆ ॥ ಅತ್ತಿತ್ತ ಸುತ್ತಿ ಭವಾಟವಿಯಲಿ ನೊಂದೆ ।
ಇತ್ತ ಬಾರೆಂದು ನಿನ್ನ ಹತ್ತಿರಲಿರಿಸೊ ಸಿರಿಕೃಷ್ಣ ॥

## ಹನ್ನೊಂದನೆಯ ಅಧ್ಯಾಯ ಮುಗಿದುದು

**ರಹೂಗಣ** :– ಬ್ರಾಹ್ಮಣೋತ್ತಮನೇ ! ನೀನು ಜೀವನು. ಅಜ್ಞಾನಿಗಳಿಗೆ ಜ್ಞಾನೋಪದೇಶಕ್ಕಾಗಿ ನೀನು ಬದುಕಿರುವೆ. ನಿನಗೆ ನಮಸ್ಕಾರ ! ನಿನ್ನ ಮಾತು ಅಮೃತ. "ಶ್ರೀಹರಿಯೇ ಮುಖ್ಯಭರಣಕರ್ತನು, ಜೀವನಲ್ಲ" ಎಂಬ ನಿಮ್ಮ ಅಭಿಪ್ರಾಯವನ್ನು ಅರ್ಥವಾಗುವಂತೆ ಚೆನ್ನಾಗಿ ತಿಳಿಸಬೇಕು.

**ಭರತ** :– ರಾಜನೇ ! ಮೂಲಕಾರಣವನ್ನೇ ಪರಂಪರೆಯಿಂದ ಮುಖ್ಯಾಶ್ರಯವೆಂದು ತಿಳಿಯಬೇಕು. ಹಾಗಿಲ್ಲದಿದ್ದರೆ ಪಲ್ಲಕ್ಕಿಯನ್ನು ಹೊರುವ ಈ ದೇಹವು

ನೆಲದಮೇಲೆ ಸಂಚರಿಸುತ್ತದೆ ಎಂಬ ಮಾತು ಸರಿಹೋಗುವುದಿಲ್ಲ. ನೆಲದ ಸಂಬಂಧ ವಿರುವುದು ಕಾಲಿಗೆ. ಅದರ ಮೇಲೆ ಗಿಣ್ಣು. ಅದರ ಮೇಲೆ ಮೀನ ಖಂಡ. ಅದರ ಮೇಲೆ ಮೊಣಕಾಲು. ಅದರಮೇಲೆ ತೊಡೆ. ಅದರ ಮೇಲೆ ನಡು. ಅದರ ಮೇಲೆ ಎದೆ. ಅದರ ಮೇಲೆ ಕುತ್ತಿಗೆ ಭುಜಗಳೂ ಮಧ್ಯೆ ಆಧಾರಗಳಾಗಿರುವುವು. ಇವೆಲ್ಲ ಪಲ್ಲಕ್ಕಿ ಹೊರಲು ಉಪಯುಕ್ತಗಳಾದರೂ ಅವು ಅಮುಖ್ಯ ಆಶ್ರಯಗಳು. ಅವುಗಳೆಲ್ಲ ವನ್ನೂ ಬಿಟ್ಟು ನೆಲದಲ್ಲಿ ದೇಹವೇ ಸಂಚರಿಸತಕ್ಕದ್ದು ಎಂದು ಹೇಳುವುದು ಕೂಡದೇ ಹೋಗಬೇಕಾಗುವುದು. ಆದ್ದರಿಂದ ಪ್ರಧಾನವನ್ನು ಇಟ್ಟುಕೊಳ್ಳಬೇಕಲ್ಲದೆ ಅಮುಖ್ಯ ವನ್ನು ಇಟ್ಟುಕೊಳ್ಳಬಾರದು. ಅದರಂತೆಯೇ ಶ್ರೀಹರಿಯೇ ಹೊರುವುದು ಮುಂತಾ ದುವುಗಳಿಗೆ ಮುಖ್ಯಾಶ್ರಯನಾಗಿದ್ದಾನೆಂದು ತಿಳಿಯಬೇಕು. ಹೀಗೆಯೇ "ಭೂಮಿ ಯಲ್ಲಿ ರಾಜನು ಹೋಗುತ್ತಿರುವನು" ಎಂಬ ಮಾತನ್ನೂ ಮೂಲಾಶ್ರಯದ ಅಭಿಪ್ರಾಯದಿಂದಲೇ ಉಪಪಾದಿಸಬೇಕು. ಏಕೆಂದರೆ ಹೆಗಲಮೇಲೆ ಈ ಪಲ್ಲಕ್ಕಿ– ಅದರಲ್ಲಿ ಸೌವೀರ ರಾಜನೆಂಬ ಹೆಸರುಳ್ಳ ನಿನ್ನ ದೇಹ. ಅದರಲ್ಲಿ ನನ್ನದೆಂಬ ಪೂರ್ಣ ವಾದ ಅಭಿಮಾನವುಳ್ಳ "ಸಿಂಧು ದೇಶದ ರಾಜನೇ ನಾನು" ಎಂಬ ಅಹಂಕಾರದಿಂದ ಕುರುಡನಾಗಿರುವ ನೀನಿರುವೆ. ಅಂದರೆ ಮಾಂಸಪಿಂಡ ರೂಪವಾದುದು ಈ ದೇಹ. ಅದಕ್ಕೂ ನಿನಗೂ ಅತ್ಯಂತ ಭೇದಗಳು ಬಹಳವಾಗಿವೆ. ಹೀಗೆ ನಿನಗೂ, ಭೂಮಿಗೂ ಇಷ್ಟು ಅಂತರವಿದ್ದರೂ "ರಾಜನು ಭೂಮಿಯ ಮೇಲೆ ಹೋಗುತ್ತಿರುವನು" ಎಂಬ ಮಾತು ಮೂಲಾಶ್ರಯನಾದ ನಿನ್ನ ಅಭಿಪ್ರಾಯದಿಂದಲೇ ಯುಕ್ತವೆನಿಸುವುದು.

ರಾಜನೆಂಬ ಅಹಂಕಾರದಿಂದ ನೀನು ಶೋಚನೀಯವಾದ ಈ ವಾಹಕರನ್ನು ನಿಯಮಿಸಲು ಹೊರಟು ಒಳ್ಳೆಯ ಮಾತನ್ನೂ ಆಡದಿರುವೆ. ಇದರಿಂದ ನಿನಗೆ ಇಲ್ಲಿಯೂ, ಪರಲೋಕದಲ್ಲಿಯೂ ದುಃಖವು ಹೆಚ್ಚುವುದೇ ಹೊರತು ಕಡಿಮೆಯಾ ಗುವುದಿಲ್ಲ. ನಮ್ಮ ಅಂತರ್ಯಾಮಿಯೇ ಮುಖ್ಯವಾಹಕನು. ಹಾಗೆಯೇ ನಿನ್ನ ಅಂತರ್ಯಾಮಿಯೇ ಪ್ರಜೆಗಳ ಮುಖ್ಯ ರಕ್ಷಕನು. ಜ್ಞಾನಿಗಳಾರೂ ನಿನ್ನನ್ನು ಮುಖ್ಯ ರಕ್ಷಕನೆನ್ನುವುದಿಲ್ಲ.

## ಧ್ರುವ ತಾಳದ ಸೂಳಾದಿ

ಹರಿ ನಡೆಯದಿರಲು ನಡೆಯಲೊಲ್ಲದೀ ಜಗ
ಹರಿ ನುಡಿಯದಿರಲು ನುಡಿಯಲೊಲ್ಲದೀ ಜಗ
ಹರಿ ನೋಡದಿರಲು ನೋಡಲಾರದೀ ಜಗ
ಹರಿ ಮಾಡದಿರಲು ಮಾಡಲೊಲ್ಲದೀ ಜಗ
ಹರಿ ಉಸಿರಿಕ್ಕದಿರೆ ಉಸಿರಿಕ್ಕದೀ ಜಗ
ಹರಿ ಎವೆ ಇಕ್ಕದಿರೆ ಎವೆ ಇಕ್ಕದೀ ಜಗ

ಹರಿ ಸರ್ವಪ್ರೇರಕ ಪುರಂದರ ವಿಟ್ಠಲ
ಹರಿ ಆಡಿಸಿದಂತೆ ಆಡುತಿಪ್ಪುದೀ ಜಗ ॥ ೦ ॥

—ಗೋರೆ ಬಾಳ ಹನುಮಂತರಾಯರ ಪುರಂದರದಾಸರ ಸುಳಾದಿ ಪುಟ 23

**ರಹೂಗಣ :–** ಉತ್ಪತ್ತಿ ಸ್ಥಿತಿಗಳು ಪೃಥ್ವಿಯಲ್ಲಿ ಕಾಣುತ್ತಿದೆಯಾಗಿ ಅದೇ ಮೂಲಕಾರಣವೆಂದೇಕೆ ಹೇಳಬಾರದು ?

**ಭರತ :–** 'ಕ್ಷಿ ನಿವಾಸ ಗತ್ಯೋಃ' ಎಂಬ ಧಾತುವ್ಯಾಖ್ಯಾನುಸಾರ ಶ್ರೀಹರಿಯೇ ಸರ್ವರಿಗೂ ಆಶ್ರಯನಾಗಿರುವುದರಿಂದ **ಕ್ಷಿತಿ** ಎಂದು ಕರೆಯಲ್ಪಡುತ್ತಾನೆ. ಸರ್ವತ್ರ ಪ್ರಸಿದ್ಧನಾದ್ದರಿಂದ **ಪೃಥಿವೀ** ಎನಿಸುತ್ತಾನೆ. ಹೀಗೆ ಶ್ರೀವಿಷ್ಣುವೇ ಪರಮಮುಖ್ಯ ವೃತ್ತಿಯಿಂದ ಕ್ಷಿತಿನಾಮಕನಾಗಿರುವನು. ಭೂಮಿಯಲ್ಲಿ ಕ್ಷಿತಿ ಎಂಬ ವ್ಯವಹಾರ ಮಾತ್ರವಿದೆ. ಕ್ಷಿತಿ ಶಬ್ದಕ್ಕೆ ಮುಖ್ಯವಾಚ್ಯನು ಶ್ರೀಹರಿಯೇ ಅಂದಮೇಲೆ ಪೃಥ್ವಿಯ ಪರಮಾಣುಗಳೇ ಮುಖ್ಯಾಶ್ರಯವೆಂಬ ಮಾತೂ ಅಯುಕ್ತವೇ. ಶ್ರೀಹರೀಚ್ಛೆಯಿಂದ ನಿಯತವಾದ ಪ್ರಕೃತಿಯಿಂದ ಆಧಾರಗಳಾಗಿರುವ ಪರಮಾಣುಗಳ ಸಮೂಹಗಳು ಅಮುಖ್ಯಾಧಾರಗಳು. ಶ್ರೀಹರಿಯೇ ಮೂಲಾಶ್ರಯನೂ, ಮೂಲಕಾರಣನೂ ಆಗಿರುವನು. ಸ್ಥಾವರಜಂಗಮವೆಂಬ ಪ್ರಪಂಚವೆಲ್ಲವೂ ಶ್ರೀಹರೀಚ್ಛೆಯಿಂದಲೇ ಜಡಪ್ರಕೃತಿ ಮತ್ತು ಚೇತನಪ್ರಕೃತಿಗಳಿಂದ ಅಮುಖ್ಯವಾಗಿ ಕೃತವಾಗಿದೆ ಮತ್ತು ಧರಿಸಲ್ಪಟ್ಟಿದೆ ಎಂದು ತಿಳಿ. ಪ್ರಕೃತಿಯೇ ಮೊದಲಾದ ಸಕಲ ಜಗತ್ತಿಗೂ ಪ್ರವರ್ತಕನಾದ ಶ್ರೀಹರಿಯ ಸ್ವರೂಪವನ್ನು ಹೇಳುವೆನು ಕೇಳು :–

ಶ್ರೀಹರಿಯು ಜ್ಞಾನ ಸ್ವರೂಪನು. ದೋಷಲೇಪರಹಿತನು. ಜಡಮಿಶ್ರವಲ್ಲದ ಅಬಾಧಿತ ವಸ್ತು. ಅಸದೃಶನು. ಅವನ ಒಳಗೆ ಹೊರಗೆ ಪ್ರೇರಕ ರಹಿತನು. ಸ್ವಗತ ಭೇದ ಶೂನ್ಯನು. ಅಪರಿಚ್ಛಿನ್ನನು. ಪೂರ್ಣನು. ಆನಂದಾದಿ ಸಾಧುಗುಣ ಪೂರ್ಣನು, ಮುಕ್ತಾಮುಕ್ತ ನಿಯಾಮಕನು. ಪ್ರತಿಯೊಬ್ಬ ಜೀವನೊಳಗೂ ಅವನಿಗೆ ಅಭಿಮುಖನಾಗಿ ಬಿಂಬನಾಗಿರುವನು. ಕೋಪರಹಿತನು. ಉತ್ಕೃಷ್ಟ ಸುಖಪೂರ್ಣನು. ಭಗವಚ್ಛಬ್ದವಾಚ್ಯನು. ಇವನನ್ನೇ ವಾಸುದೇವನೆಂದು ಕರೆಯುವರು. ಇಂತಹ ಪರಮಾತ್ಮನ ಜ್ಞಾನಕ್ಕೆ ಅಂತರಂಗ ಸಾಧನೆಯೇನೆಂದರೆ :

ಜ್ಞಾನವು ಮಹಾತ್ಮರ ಪಾದಧೂಳಿ ಸೇವೆಯಿಂದಲೇ ಉಂಟಾಗಬೇಕು. ತಪಸ್ಸು ವಿದ್ಯೆ, ಸಂನ್ಯಾಸ ಮೊದಲಾದುವುಗಳಿಂದ ದೊರೆಯಲಾರದು. ಭಗವದ್ಭಕ್ತರಾದರೋ ಪರಮಾತ್ಮನ ಗುಣಗಳನ್ನೇ ಸರ್ವದಾ ಸ್ಮರಿಸುತ್ತಾರೆ. ಲೌಕಿಕ ವೃತ್ತಾಂತಗಳನ್ನು ಒಂದು ಕ್ಷಣವೂ ಹೇಳಲಾರರು. ಇಂತಹ ಮಹಾನುಭಾವರ ಉಪದೇಶದಿಂದಲೇ ಹರಿ

ಯಲ್ಲಿ ಭಕ್ತಿ ಉಂಟಾಗುವುದು. ರಹೂಗಣನೇ ! ಆದ್ದರಿಂದ ನೀನೂ ಭಗವದ್ಭಕ್ತರ ಸೇವೆಯನ್ನು ಮಾಡಿದರೆ ಭಕ್ತಿಜ್ಞಾನಗಳುಂಟಾಗಿ ಮುಕ್ತನಾಗುವೆ.

ನಾನೂ ಭರತನಾಮಕ ರಾಜನಾಗಿದ್ದೆ. ಭಗವಂತನ ಆರಾಧನೆ ಮಾಡುತ್ತಿದ್ದ ನಾನು ಒಂದು ಜಿಂಕೆಮರಿಯಲ್ಲಿನ ಮಮತೆಯಿಂದ ಮರಣ ಕಾಲದಲ್ಲಿ ಅದನ್ನೇ ಸ್ಮರಿಸುತ್ತಿದ್ದೆ. ಅದರಿಂದ ಜಿಂಕೆಯಾಗಿ ಹುಟ್ಟಿದೆ. ಪೂರ್ವಜನ್ಮದಲ್ಲಿ ಮಾಡಿದ ಪರಮಾತ್ಮನ ಪೂಜೆಯ ಪ್ರಭಾವದಿಂದ ಆ ಮೃಗದೇಹದಲ್ಲಿಯೂ ಜನ್ಮಾಂತರ ಸ್ಮೃತಿಯು ತಪ್ಪಿಹೋಗಲಿಲ್ಲ. ಆದ್ದರಿಂದ ನಾನು ದುಃಸಂಗದಿಂದ ಸಂಸಾರವು ಗಂಟುಬೀಳುವುದೆಂದರಿತು ಅವಧೂತನ ಚರ್ಯೆವುಳ್ಳವನಾಗಿ ಸಂಚರಿಸುತ್ತಿರುವೆನು. ಆದಕಾರಣ ಮನುಷ್ಯನು ಸರ್ವಸಂಗವನ್ನು ಪರಿತ್ಯಾಗ ಮಾಡಿ ಸಜ್ಜನಸಂಗದಿಂದ ಉಂಟಾಗುವ ಜ್ಞಾನದಿಂದ ಪುತ್ರಮಿತ್ರಕಳತ್ರಾದಿ ಮೋಹವನ್ನು ನಿರ್ಮೂಲವಾಗಿ ಭೇದಿಸಿಕೊಂಡು ಜರಾಮರಣಾದಿ ಸಂಸಾರಸಮುದ್ರವನ್ನು ದಾಟಿ ಶ್ರೀಪರಮಾತ್ಮನನ್ನು ಹೊಂದುವನು.

## ಹನ್ನೆರಡನೆಯ ಅಧ್ಯಾಯ ಮುಗಿದುದು

**ಭರತ :** (ಸಂಸಾರವನ್ನು ಅಡವಿಗೆ ಹೋಲಿಸಿ ಹೇಳುತ್ತಾನೆ :) ರಾಜನೇ ! ಶ್ರೀಹರಿಯ ಬಂಧಕೇಚ್ಛೆಯಿಂದ ಸಂಸಾರ ಮಾರ್ಗದಲ್ಲಿ ಜೀವ ಸಮುದಾಯವು ಸ್ಥಾಪಿಸಲ್ಪಟ್ಟಿದೆ. ಹರಿಯ ಅನುಗ್ರಹವಿಲ್ಲದೆ ಇದನ್ನು ದಾಟಲಾಗುವುದಿಲ್ಲ, ನಾನೇ ಕರ್ಮಮಾಡತಕ್ಕವನು , ನನ್ನದಿದು' ಎಂದು ತಿಳಿಯುವುದರಿಂದ ಬೇರೆ ಬೇರೆ ದೇಹವನ್ನು ಹೊಂದುತ್ತಿರುವನು. ಸ್ವಾರ್ಥಸಾಧನೆಯಲ್ಲಿ ಜೀವವು ಆಸಕ್ತವಾಗಿ ಸಂಸಾರವೆಂಬ ಅಡವಿಯನ್ನು ಪ್ರವೇಶಿಸುವುದು. ಅಲ್ಲಿ ಸುಖವು ದೊರೆಯುತ್ತಿಲ್ಲ. ಕಳ್ಳರಂತಿರುವ ಜ್ಞಾನೇಂದ್ರಿಯಗಳು ಮತ್ತು ಮನಸ್ಸು ಸೇರಿ ಈ ಆರು ಇಂದ್ರಿಯಗಳೂ ಜೀವವನ್ನು ಬಲಾತ್ಕಾರವಾಗಿ ವಿಷಯ ಭೋಗದಲ್ಲಿ ಆಸಕ್ತವನ್ನಾಗಿ ಮಾಡಿ ಪುಣ್ಯರೂಪವಾದ ಹಣವನ್ನು ದೋಚಿಬಿಡುವುವು. ನದಿಗಳಂತಿರುವ ಪುತ್ರಕಳತ್ರಾದಿ ಹೊರಗಿನ ಶತ್ರುಗಳು ಸವಿಮಾತುಗಳಿಂದ ಜೀವನನ್ನು ಮೋಹಗೊಳಿಸಿ ಹಣದಂತಿರುವ ಕಾಲವನ್ನು ಅಪಹರಿಸುತ್ತಾರೆ. ಎಲ್ಲೆಲ್ಲಿ ನೋಡಿದರೂ ಅಡವಿಯಲ್ಲಿ ಬೆಳೆದ ಬಳ್ಳಿ ಪೊದೆಗಳಂತಿರುವ ಆಸೆಗಳಿಂದಲೂ, ಶ್ರೌತ್ರಸ್ಮಾರ್ತ ಕರ್ಮಗಳಿಂದಲೂ ತುಂಬಿದ ಗೃಹಸ್ಥಾಶ್ರಮದಲ್ಲಿದ್ದುಕೊಂಡು, ಕಾಡುನೊಣ, ಸೊಳ್ಳೆಗಳಂತಿರುವ ರಾಜಭಟರು, ಕಳ್ಳರು ಮೊದಲಾದವರು ಧನಧಾನ್ಯಗಳನ್ನು ಕಿತ್ತುಕೊಳ್ಳುವುದರಿಂದ ಬಾಧೆಗೆ ಗುರಿಯಾಗಿ, ಕರ್ಮನಿರ್ಮಿತ ಮನುಷ್ಯಾದಿ ಶರೀರವು ಅನಿತ್ಯವಾಗಿದ್ದರೂ ಸ್ಥಿರವೆಂದು ತಿಳಿಯುವನು. ಅನ್ನ ಬಟ್ಟೆಯಿಲ್ಲದೆ ದುಃಖಿಸುತ್ತಾನೆ. ಧನವು ಅಪಹರಿಸಲ್ಪಟ್ಟಾಗ ಮೂರ್ಛಿತನಾಗುತ್ತಾನೆ. ಅನ್ನವಿಲ್ಲದಿದ್ದಾಗ ಕಂಡವರ ಹಣವನ್ನು ಕದಿಯಲು

ಹೋಗುವನು. ಸಿಕ್ಕಿ ಬಿದ್ದು ಸರ್ವಸ್ವವನ್ನೂ ಕಳೆದುಕೊಂಡು ದುಃಖಿಸುತ್ತ ಮೂರ್ಛೆ ಹೊಂದುವನು. ಕೈಗೆ ಸಿಕ್ಕಿದಾಗ ಭೋಗ್ಯ ವಸ್ತುಗಳನ್ನು ನೋಡಿ ಹಿಗ್ಗುವನು. ಕಾಲಿಗೆ ಮುಳ್ಳು, ಕಲ್ಲು ಚುಚ್ಚಿದ ಮಾನವನಂತೆ ಕರ್ಮ ಮಾರ್ಗದಲ್ಲಿ ಮುಂದುವರಿಯಲಾಗದೆ, ಹಣವಿಲ್ಲದಿರುವುದರಿಂದ ಜಾಠರಾಗ್ನಿಯಿಂದ ದಗ್ಧನಾಗಿ ತನ್ನ ಕುಟುಂಬದವರ ಮೇಲೆ ಸಿಟ್ಟು ಮಾಡುವನು. ಕಾಲವೆಂಬ ಅಜಗರವು ಇವನನ್ನು ನುಂಗುತ್ತಿದ್ದರೂ ಅದರ ಪರಿವೆಯೇ ಇರುವುದಿಲ್ಲ. ಪರರಿಂದ ಸಾಲ ತಂದು ವ್ಯಾಪಾರ ಮಾಡುವವನು ನಷ್ಟವಾದಾಗ ಮನೆ, ಒಡವೆ, ಮಂಚ ಮುಂತಾದುವುಗಳನ್ನು ಕಳೆದುಕೊಂಡು, ಯಾರನ್ನು ಬೇಡಿದರೂ ದ್ರವ್ಯವು ದೊರೆಯದೆ ಅವಮಾನವನ್ನು ಹೊಂದುವನು. ಹೀಗೆ ದೇಹಾಭಿಮಾನದಿಂದ ಅನೇಕ ಬಗೆಯ ದುಃಖವನ್ನು ಅನುಭವಿಸುತ್ತ ಪುಣ್ಯಶೇಷದಿಂದ ಅಲ್ಪ ಸುಖವನ್ನೂ ಅನುಭವಿಸಿ, ಮತ್ತೂ ಸಂಸಾರವನ್ನೇ ಹೊಂದಿ ನರಕಾದ್ಯನರ್ಥಕ್ಕೆ ಭಾಗಿಯಾಗುವನು, ಹೀಗೆ ಬಹುದುಃಖವನ್ನು ಅನುಭವಿಸಿದರೂ ಮಹಾನುಭಾವರ ಸಂಗವು ದೊರೆಯುವ ತನಕ ಮೋಕ್ಷ ಸಾಧನವನ್ನು ಮಾಡುವುದೇ ಇಲ್ಲ ಸಂಸಾರವು ಅನೇಕ ಬಗೆಯ ದುಃಖಕ್ಕೆ ಕಾರಣವಾದುದರಿಂದ ಯಾರಿಗೂ ಇದನ್ನು ದಾಟಲು ಸಾಧ್ಯವಾಗುವುದಿಲ್ಲ. ಇಂತಹ ಬಹುಶ್ರಮ, ಉಪದ್ರವಗಳಿಂದ ವಿಪತ್ತನ್ನು ಹೊಂದಿ ಮೃತಪ್ರಾಯನಾಗುತ್ತಾನೆ. ಹೀಗೆ ಸಂಸಾರದಲ್ಲಿ ತೇಲಿ ಮುಳುಗುತ್ತಿರುವವರು "ನನ್ನ ಭೂಮಿ, ನನ್ನ ರಾಜ್ಯ" ಎಂದು ವೈರ ಬೆಳಸಿ ಯುದ್ಧದಲ್ಲಿ ಸಾಯುತ್ತಾರೆ. ಮುಕ್ತಿಗೆ ಹೋಗುವುದಿಲ್ಲ. ಮತ್ತೆ ಸಂಸಾರ ಅರಣ್ಯದಲ್ಲಿ ಅಲೆಯುತ್ತ ಇದ್ದು ಆಗಲೂ ಯಾವನೂ ಭಗವತ್ತತ್ತ್ವವನ್ನು ತಿಳಿಯುವುದಿಲ್ಲ. ರಾಜನೇ ! ನೀನು ಸರ್ವ ಪ್ರಾಣಿಗಳಲ್ಲಿಯೂ ಮೈತ್ರಿಯನ್ನು ಸಂಪಾದಿಸಿ ನಿಷಿದ್ಧ ಹಿಂಸೆಯನ್ನು ಬಿಟ್ಟು, ವಿಷ್ಣು ವೈಷ್ಣವ ದ್ವೇಷರಹಿತನಾಗಿ ವೈರಾಗ್ಯಾದಿಗಳನ್ನು ಹೊಂದಿ ಸಂಸಾರವನ್ನು ದಾಟಿ ಮುಕ್ತನಾಗು.

**ರಹೂಗಣ** :– ಬ್ರಾಹ್ಮಣನೇ ! ಸಕಲ ಜನ್ಮಗಳಲ್ಲಿಯೂ ಶ್ರೇಯಃಸಾಧನವಾದುದು ಮನುಷ್ಯಜನ್ಮ. ಇನ್ನಾವ ಜನ್ಮದಲ್ಲಿಯೂ ಭಗವದ್ಭಕ್ತರ ಸಮಾಗಮ ಮೇಲಿಂದ ಮೇಲೆ ಆಗುವುದಿಲ್ಲ. ತಮ್ಮನ್ನು ಸೇವಿಸಿ, ತಮ್ಮ ಪಾದಧೂಳಿಯನ್ನು ಪಡೆದವಗೆ ಪಾಪಗಳು ನಶಿಸುವುವು. ಶ್ರೀಹರಿಯಲ್ಲಿ ಭಕ್ತಿ ಉಂಟಾಗುವುದು. ಇದೇನು ಆಶ್ಚರ್ಯವಲ್ಲ. ನನಗೆ ಅನುಭವಕ್ಕೆ ಬಂದಿದೆ. ಒಂದು ಮುಹೂರ್ತಕಾಲ ತಮ್ಮ ಸಹವಾಸದಿಂದ 'ಜೀವರು ಸ್ವತಂತ್ರರು, ಜೀವರೇ ಹೊರುವುದು ಮೊದಲಾದ ಕ್ರಿಯೆಗಳ ಮುಖ್ಯಕರ್ತರು, ನಾನೇ ಶಿಕ್ಷಕ' ಇತ್ಯಾದಿ ಅಜ್ಞಾನವು ನಾಶವಾಯಿತು. ತಮ್ಮನ್ನು ತಿರಸ್ಕರಿಸಿದ ನನ್ನ ಅಪರಾಧವನ್ನು ಕ್ಷಮಿಸಿ. ಭಗವದ್ಭಕ್ತರು ಹಿರಿಯರಾಗಿರಲಿ, ಶಿಶುಗಳಾಗಿರಲಿ, ಯುವಕರಾಗಿರಲಿ, ವಟುಗಳಾಗಿರಲಿ ಅವರೆಲ್ಲರಿಗೂ ನಮಸ್ಕಾರ. ಅವಧೂತ ವೇಷದಲ್ಲಿ ಭೂಮಿಯ ಮೇಲೆ ಸಂಚರಿಸುವ ಸರ್ವ

ಬ್ರಾಹ್ಮಣರಿಗೂ ನಮಸ್ಕಾರ ! ಪರಿವೆಯಿಲ್ಲದೆ ಅಂತಹವರನ್ನು ತಿರಸ್ಕರಿಸಿದ ರಾಜರಿಗೂ, ವಿಶೇಷವಾಗಿ ನನಗೂ ಒಳ್ಳೆಯದಾಗಲಿ.

**ಶುಕ :–** ಪರೀಕ್ಷಿದ್ರಾಜನೇ ! ಭಗವದ್ಭಕ್ತರ ಪ್ರಭಾವವೇ ಹೀಗಿರುವಾಗ ಭಗವಂತನ ಬಲವನ್ನು ಏನೆಂದು ಹೇಳೋಣ ? ರಹೂಗಣನು ಮಹಾನುಭಾವನಾದ ಭರತನ ಸಂಸರ್ಗದಿಂದ ತತ್ತ್ವಜ್ಞಾನವನ್ನು ಹೊಂದಿ ಹೆಂಡಿರು ಮಕ್ಕಳಲ್ಲಿನ ಮೋಹವನ್ನೂ, ನಾನು, ನನ್ನದು ಎಂಬ ಅಭಿಮಾನವನ್ನೂ ಬಿಟ್ಟನಲ್ಲವೆ ? ರಾಜನೇ! ಭರತನ ಮಹಿಮೆಯನ್ನು ಹಿರಿಯರು ಹೀಗೆ ಹೇಳಿರುವರು :– ಭರತನು ಪರಮಾತ್ಮನ ಪುತ್ರನು. ಕಾರ್ತವೀರ್ಯಾದಿ ಕರ್ಮಜದೇವತೆಗಳಿಗೆ ಸಮಾನರಾದ ರಾಜರನ್ನು ಬಿಟ್ಟು ಯಾವ ರಾಜನೂ ಭರತನ ಸಮಾನನಾಗಲಾರನು. ಸರ್ವದಾ ಬಿಡಲಾಗದ ಹೆಂಡತಿ ಮಕ್ಕಳನ್ನು ತರುಣನೇ ಆಗಿದ್ದ ಭರತನು ಬಿಟ್ಟನು. ನಿಷ್ಕಂಟಕವಾಗಿದ್ದ ರಾಜ್ಯವನ್ನು ಮಲದಂತೆ ದೂರಮಾಡಿದನು. ಉತ್ತಮಶ್ಲೋಕನಾದ ಶ್ರೀಹರಿಯಲ್ಲಿಯೇ ಆಸಕ್ತನಾದನು. ಈ ವೈರಾಗ್ಯವೇ ಭಗವದ್ಭಕ್ತರಿಗೆ ಉಚಿತವಾದುದು. ಇಂತಹ ಮಹಾತ್ಮರು ಹುಟ್ಟುಸಾವುಗಳನ್ನು ತಪ್ಪಿಸುವ ಮೋಕ್ಷವನ್ನೂ ಆದರಿಸುವುದಿಲ್ಲ. ಭರತನು ಮೃಗಜನ್ಮವನ್ನು ಸ್ವೀಕರಿಸಿ "ಜ್ಞಾನಸ್ವರೂಪಿಯೂ, ಸರ್ವೇಶ್ವರನೂ, ರಮಾಪತಿಯೂ ಆದ ನಾರಾಯಣನಿಗೆ ನಮಸ್ಕಾರ !" ಎಂದು ಭಕ್ತಿಯಿಂದ ಗಾನ ಮಾಡುತ್ತ ಮೃಗ ಶರೀರವನ್ನು ಬಿಟ್ಟನು.

ಈ ಚರಿತ್ರೆಯು ಕ್ಷೇಮವನ್ನುಂಟುಮಾಡುವುದು. ಆಯುಷ್ಯವನ್ನು ವೃದ್ಧಿಪಡಿಸುವುದು ಧನ್ಯತೆಯನ್ನುಂಟು ಮಾಡುವುದು. ಕೀರ್ತಿಕರವೂ, ಸ್ವರ್ಗಪ್ರದವೂ, ಮೋಕ್ಷಕ್ಕೆ ಪ್ರಯೋಜಕವೂ ಆಗಿದೆ. ಇದನ್ನು ಹೇಳುವವನೂ, ಕೇಳುವವನೂ, ಅಭಿನಂದಿಸುವವನೂ ಶ್ರೀಹರಿಯೇ ಸ್ವತಂತ್ರನೆಂದು ತಿಳಿಯುವರು. ಮತ್ತು ಅವರಾರೂ ಅಸ್ವತಂತ್ರರಿಂದ ಯಾವುದನ್ನೂ ಅಪೇಕ್ಷಿಸುವುದಿಲ್ಲ.

## ಹದಿಮೂರನೆಯ ಅಧ್ಯಾಯ ಮುಗಿದುದು

**ಪರೀಕ್ಷಿತ್ :–** ಆಚಾರ್ಯರೇ ! ಸಂಸಾರವು ಘೋರಾರಣ್ಯಕ್ಕೆ ಸಮವೂ, ಅದು ಅನೇಕ ದುಃಖಗಳಿಗೆ ಸಾಧನವೆಂದು ಗೂಢವಾಗಿ ಹೇಳಿದುದನ್ನು ಸ್ಪಷ್ಟವಾಗಿ ವಿವರಿಸಿರಿ.

**ಶುಕ :–** ಜೀವರು ಭಗವಂತನ ಅಧೀನವಾದ ಪ್ರಕೃತಿಯಿಂದ ಸಂಸಾರವೆಂಬ ಅಡವಿಯನ್ನು ಹೊಂದಿ ಭಗವದ್ಭಕ್ತರು ಮೋಕ್ಷಕ್ಕಾಗಿ ಮಾಡುವ ಹರಿಗುರು ಸಜ್ಜನ ಚರಣ ಸೇವೆಯನ್ನು ಮಾಡುವುದಿಲ್ಲ. ಆರು ಇಂದ್ರಿಯಗಳೇ ಅಡವಿಯಲ್ಲಿ

ರುವ ಕಳ್ಳರು. ಅವು ನಾನಾ ಬಗೆಯ ವಿಷಯಾನುಭವವುಂಟು ಮಾಡಿ ಪುಣ್ಯವೆಂಬ ಧನವನ್ನು ಅಪಹರಿಸುತ್ತವೆ. ತೋಳ ನರಿಗಳಂತೆ ಸತಿಸುತರು. ಅವರು ಮೋಹಿತ ನಾದ ಕುಟುಂಬಿಯು ನೋಡುತ್ತಿರುವಂತೆಯೇ ಸರ್ವಸ್ವವನ್ನೂ ಅಪಹರಿಸುತ್ತಾರೆ. ಅಡವಿಯ ಹುಲ್ಲು ಪೊದೆಗಳಂತೆ ಪುನಃ ಪುನಃ ಹುಟ್ಟುವುವು ಕರ್ಮಗಳು. ಅವುಗಳಿಂದ ಸಂಸಾರ. ಕಾಡು ನೊಣ ಸೊಳ್ಳೆಗಳೇ ದುಷ್ಟರು. ಹೀಗೆ ಹಿಂಸಿತನಾದ ಜೀವನು ಈ ಸಂಸಾರವು ಅನಿತ್ಯವೆಂದು ತಿಳಿಯದೆ ಸ್ತ್ರೀ ಭೋಗಕ್ಕಾಗಿ ಸುವರ್ಣಾದಿ ಸಂಪಾದ ನೆಗೆ ಯತ್ನಿಸುವನು. ಕಾಡಿನಲ್ಲಿ ಮೇಲಕ್ಕೆ ಒಯ್ಯುವ ಸುಂಟರಗಾಳಿಯಂತೆ ಸ್ತ್ರೀಯು ತೊಡೆಯ ಮೇಲೆ ಇವನನ್ನು ಕೂಡಿಸಿಕೊಳ್ಳುವಳು. ಆಗ ಜೀವನು ಕುರುಡನಂತಾ ಗುವನು. ಮಾನಮರ್ಯಾದೆ ಜ್ಞಾನವೇ ಇರುವುದಿಲ್ಲ. ಕರ್ಮಸಾಕ್ಷಿಗಳಾದ ದೇವತೆ ಗಳು ನೋಡುತ್ತಿರುವರೆಂಬ ಜ್ಞಾನವೇ ಇರುವುದಿಲ್ಲ. ದುಃಖಾಗ್ನಿಯೇ ಕಾಡುಗಿಚ್ಚು. ಧನವನ್ನು ಕಸಿದುಕೊಂಡು ಹೆಣದಂತೆ ಮಾಡುವ ರಾಜರೇ ಯಕ್ಷರು. ನಿದ್ರೆಯೇ ಹೆಬ್ಬಾವು. ಸಂಪಾದನೆಗಾಗಿ ವ್ಯಾಪಾರ ಮಾಡುತ್ತ ವಂಚನೆಯಿಂದ ದ್ವೇಷಕ್ಕೆ ಗುರಿ ಯಾಗುವನು. ಭೋಗಪಡಲು ಹಣವನ್ನು ಗಳಿಸಬೇಕೆಂದು ವ್ಯವಸಾಯವನ್ನು ಮಾಡುತ್ತ ಮಕ್ಕಳ ಮಾತಿಗೆ ಮರುಳಾಗುವನು. ಕಾಲಚಕ್ರವೇ ಮೃತ್ಯು. ಅದಕ್ಕೆ ಹೆದರಿ ಕ್ಷುದ್ರ ದೇವತೆಗಳನ್ನು ಭಜಿಸುವನು. ಅವರಿಂದ ಅನುಕೂಲಗಳಾಗುವುದಿಲ್ಲ. ವಿಪ್ರನಾದರೂ ಶೂದ್ರಿಯ ಸಂಗ, ಅವಳ ಅನ್ನ ತಿಂದು ವಿಹಿತಕರ್ಮವನ್ನು ಮರೆಯು ವನು. ಇಲ್ಲಿ ದುಃಖಪಟ್ಟು, ನರಕದಲ್ಲೂ ನರಳಿ ತಿರುಗಿ ಮನುಷ್ಯನಾಗಿ ಹುಟ್ಟುವನು.

ಹೀಗೆ ಸಂಸಾರದಲ್ಲಿ ಬಹಳ ದುಃಖವಿರುವುದರಿಂದ, ವಿರಕ್ತನಾಗಿ, ಜ್ಞಾನಿಗಳ ಉಪದೇಶದಿಂದ ಹರಿಮಹಿಮೆ ತಿಳಿದು, ಭಕ್ತಿಮಾಡಿ, ಕ್ಲೇಶಗಳನ್ನು ಕಳೆದುಕೊಂಡು ಮುಕ್ತಿಯನ್ನು ಪಡೆಯಬೇಕು. ಈ ಭರತನ ಚರಿತ್ರೆಯನ್ನು ಪರನಶ್ರವಣ ಮಾಡಿ ದವರು ಮಂಗಳವನ್ನು ಹೊಂದುವರು.

## ಹದಿನಾಲ್ಕನೆಯ ಅಧ್ಯಾಯ ಮುಗಿದುದು

**ಶುಕ .—** (ಪ್ರಿಯವ್ರತನ ವಂಶದವರನ್ನು ಹೇಳುತ್ತಾರೆ :-) ಭರತಪುತ್ರ ಸುಮತಿಯು ಋಷಭನಂತೆ ಅವಧೂತ ಮಾರ್ಗವನ್ನು ಅನುಸರಿಸಿರುವನೆಂದು ಕೆಲವರು ಪಾಖಂಡಿಗಳು ತಿಳಿದು. ವೇದವಿರುದ್ಧ ಬೌದ್ಧಾಗಮದಲ್ಲಿ ಇವನು ದೇವತೆಯೆಂದು ಕಲ್ಪಿಸಿ ಸಾಕ್ಷಾತ್ ಬುದ್ಧನೇ ಅವತರಿಸಿರುವನೆಂದು ಹೇಳುತ್ತಾರೆ. ಸುಮತಿಯ ಮಗನು ದೇವತಾದಿ. ಅವನಿಗೆ ದೇವದ್ಯುಮ್ನ, ಅವನಿಗೆ ಪರಮೇಷ್ಠಿ, ಅವನ ಮಗ ಪ್ರತೀಹ ಅವನ ಪುತ್ರರು ಪ್ರತೀಹರ್ತಾ, ಪ್ರಸ್ತೋತಾ, ಉದ್ಗಾತಾ ಎಂದು ಮೂವರು.

ಪ್ರತೀಹರ್ತನಿಗೆ ವ್ಯೋಮ ಮತ್ತು ಭೀಮರೆಂಬ ಇಬ್ಬರು ಪುತ್ರರು. ವ್ಯೋಮನ ಮಗನು ಉದ್ಗೀಥ. ಅವನಿಗೆ ಪ್ರಸ್ತೋತಾ. ಅವನಿಗೆ ವಿಭು. ಅವನಿಗೆ ಪೃಥಷೇಣ, ಅವನಿಗೆ ನಕ್ತ. ನಕ್ತನಿಗೆ ಋತಿದೇವಿಯೆಂಬ ಪತ್ನಿಯಲ್ಲಿ ಗಯನು ಹುಟ್ಟಿದನು. ಗಯನೊಳಗೆ ಜಗದ್ರಕ್ಷಣೆಗಾಗಿ ಸತ್ವಗುಣವನ್ನು ಸ್ವೀಕರಿಸಿದ ಶ್ರೀಹರಿಯ ಅಂಶದ ಮೂರ್ತದೇಹ ವಿಶೇಷದ ಆದೇಶ ಚಿಹ್ನೆಗಳಿದ್ದುವು. ಅಂಗೈ ಅಂಗಾಲುಗಳಲ್ಲಿ ಚಕ್ರಾದಿ ಚಿಹ್ನೆಗಳಿದ್ದುವು. ಇದರಿಂದ ಈ ಗಯನು ಪ್ರಿಯವ್ರತಾದಿ ಚಕ್ರವರ್ತಿಗಳ ಗುಂಪಿನಲ್ಲಿ ಗಣನೆಗೆ ಬಂದನು. ಇವನ ಕೀರ್ತಿ ಎಲ್ಲರ ಕಿವಿಗೂ ಬಿದ್ದಿತ್ತು. ಎಲ್ಲರಿಂದಲೂ ಗೇಯಮಾನನಾದ್ದರಿಂದ **ಗಯ**ನೆಂಬ ನಾಮದಿಂದ ಈ ರಾಜರ್ಷಿಯು ಪ್ರಸಿದ್ಧ ನಾಗಿದ್ದನು. ಈತನು ಪ್ರಜೆಗಳನ್ನು ರಕ್ಷಿಸುತ್ತ, ಯಜ್ಞಾದಿಗಳಿಂದ ಶ್ರೀಹರಿಯನ್ನು ಪೂಜಿಸುತ್ತ, ಅವುಗಳ ಫಲವನ್ನು ಹರಿಗರ್ಪಣ ಮಾಡುತ್ತ, ಭಕ್ತಿಯೋಗದಿಂದ ಶುದ್ಧ ಅಂತಃಕರಣವುಳ್ಳವನಾಗಿ, ಪರಮಾತ್ಮನನ್ನು ಒಳಗೆ ಪ್ರತ್ಯಕ್ಷೀಕರಿಸಿ, ದೇಹಾದಿ ಗಳಲ್ಲಿ ಮಮತೆಯನ್ನು ತ್ಯಜಿಸಿ, ಏಕ ಛಕ್ರಾಧಿಪತಿಯಾಗಿ ಆಳುತ್ತಿದ್ದನು ಅವನಿಗೆ ದಕ್ಷಕನ್ಯೆಯರಾದ ಕೀರ್ತಿ, ಶ್ರೀ, ವಾಕ್, ಸ್ಮೃತಿ, ಮೇಧಾ, ಧೃತಿ, ಕ್ಷಮಾ ಮೊದ ಲಾದವರು ನದೀಜಲದಿಂದ ಅಭಿಷೇಕಮಾಡಿ, ಉತ್ತಮ ಸ್ಥಿತಿಗೆ ಬರುವಂತೆ ಆಶೀರ್ವದಿಸಿದರು. ಭೂದೇವಿಯು ಗಯನ ಗುಣಗಳಿಗೆ ಮೆಚ್ಚಿ, ಈತನ ಪ್ರಜೆಗಳಿಗೆ ಬೇಕಾದ ಅಭೀಷ್ಟಗಳನ್ನು ಕೊಡುತ್ತಿದ್ದಳು. ಇತರ ರಾಜರೆಲ್ಲ ಇವನಿಗೆ ಕಪ್ಪವನ್ನು ಕೊಡುತ್ತಿದ್ದರು. ಇವನು ಧರ್ಮದಿಂದ ಪ್ರಜೆಗಳನ್ನು ಪರಿಪಾಲಿಸುತ್ತಿದ್ದುದರಿಂದ, ಬ್ರಾಹ್ಮಣರೆಲ್ಲರೂ ಸಂತುಷ್ಟರಾಗಿ ತಮ್ಮ ಪುಣ್ಯದ ಆರನೆಯ ಒಂದು ಭಾಗವನ್ನು ಅವನಿಗೆ ಅರ್ಪಿಸುತ್ತಿದ್ದರು. ಮೊದಲೇ ಪ್ರೀತನಾಗಿದ್ದ ಹರಿಯು ಭಕ್ತಿಯಿಂದ ಗಯನು ಅರ್ಪಿಸಿದ ಯಜ್ಞಕರ್ಮಗಳನ್ನು ಸ್ವೀಕರಿಸಿ ಮತ್ತಷ್ಟು ಪ್ರೀತನಾದನು.

ಗಯನಿಗೆ ಅವನ ಪತ್ನಿಯಾದ ಜಯಂತಿಯಲ್ಲಿ ಚಿತ್ರರಥ, ಸ್ವಾತಿ ಮತ್ತು ಅವರೋಧ ಎಂಬ ಮೂವರು ಪುತ್ರರಾದರು. ಚಿತ್ರರಥನಿಗೆ ಸಮ್ರಾಟ್, ಅವನಿಗೆ ಮರೀಚಿ, ಅವನಿಗೆ ಬಿಂದುಮಂತ, ಅವನಿಗೆ ಮಧು, ಅವನಿಗೆ ವೀರವ್ರತ, ಅವನಿಗೆ ಮನ್ಯು ಮತ್ತು ಪ್ರಮನ್ಯು ಎಂಬ ಇಬ್ಬರು ಪುತ್ರರಾದರು. ಮನ್ಯುವಿಗೆ ಭುವನ, ಅವನಿಗೆ ತ್ವಷ್ಟೃ, ಅವನಿಗೆ ವಿರಜ, ಅವನಿಗೆ ಶತಜಿತ್ ಮೊದಲಾದ ನೂರು ಮಂದಿ ಪುತ್ರರೂ, ಒಬ್ಬ ಪುತ್ರಿಯೂ ಹುಟ್ಟಿದರು. ಶ್ರೀಪರಮಾತ್ಮನು ದೇವಸಮೂಹಕ್ಕೆ ಕೀರ್ತಿಯನ್ನು ತಂದುಕೊಟ್ಟಹಾಗೆ ಕೊನೆಯುವನಾದ ವಿರಜನೆಂಬುವನು ಪ್ರಿಯವ್ರತ ರಾಜನ ವಂಶಕ್ಕೆ ಕೀರ್ತಿಯನ್ನು ತಂದು ಕೊಟ್ಟನು.

**ಹದಿನೈದನೆಯ ಅಧ್ಯಾಯ ಮುಗಿದುದು**

**ಪರೀಕ್ಷಿತ್ :** ಮಹಾನುಭಾವರೇ ! ತಾವು ಹಿಂದೆ ಭೂಮಂಡಲದ ಪರಿಮಾಣವನ್ನು ತಿಳಿಸುವಾಗ , ಸೂರ್ಯನ ಕಿರಣಗಳು ಎಲ್ಲಿಯವರೆಗೆ ವ್ಯಾಪಿಸಿಕೊಂಡಿರುವುವೋ, ಚಂದ್ರನು ನಕ್ಷತ್ರಗಳಿಂದ ಯುಕ್ತನಾಗಿ ಎಲ್ಲಿಯವರೆಗೆ ಕಾಣುತ್ತಾನೆಯೋ ಅವುಗಳ ವಿಸ್ತಾರವನ್ನೂ, ಸಪ್ತದ್ವೀಪ, ಸಪ್ತಸಮುದ್ರಗಳ ಪರಿಮಾಣ ಮತ್ತು ಲಕ್ಷಣಾದಿಗಳನ್ನು ಸಂಗ್ರಹವಾಗಿ ಹೇಳಿದ್ದೀರಿ. ಈಗ ವಿಸ್ತಾರವಾಗಿ ತಿಳಿಸಿರಿ. ಹಾಗೂ ಸುವರ್ಣಭೂಮಿ ಮೊದಲಾದವುಗಳ ವಿಸ್ತಾರಗಳನ್ನೂ ಹೇಳಿರಿ. 14 ಲೋಕಗಳೂ ಶ್ರೀಹರಿಯ ಸ್ಥೂಲಪ್ರತಿಮೆ. ಇದನ್ನು ಮನಸ್ಸಿನಲ್ಲಿ ನಿಲ್ಲಿಸುವ ಅಭ್ಯಾಸ ಮಾಡಿದರೆ ಸಚ್ಚಿದಾನಂದರೂಪೀಹರಿಯ ಜ್ಞಾನಾನಂದರೂಪವನ್ನು ನಿರಂತರ ಸ್ಮರಿಸಲು ಸಮರ್ಥವಾಗುವುದು. ಆದ್ದರಿಂದ ಈ ಪ್ರತಿಮಾ ರೂಪವನ್ನು ವಿವರವಾಗಿ ತಿಳಿಸಿರಿ.

**ಶುಕ :** ಹರಿಯ ಪ್ರತಿಮೆಯಾದ ಸಮುದ್ರ, ದ್ವೀಪಗಳ ಪೂರ್ಣವಿಚಾರವನ್ನು ಮನುಷ್ಯನು ತಿಳಿಯಲು ಬ್ರಹ್ಮದೇವರ ಪೂರ್ಣಾಯುಷ್ಯಕಾಲವೂ ಸಾಲದು. ಆದ್ದರಿಂದ ಭೂಗೋಳದ ಮುಖ್ಯ ವಿಶೇಷಗಳನ್ನು ಮಾತ್ರ ನಾಮ, ರೂಪ, ಸಂಖ್ಯಾ ಪರಿಮಾಣ ಮತ್ತು ಲಕ್ಷಣಗಳನ್ನು ತಿಳಿಸುತ್ತ ವಿವರಿಸುವೆನು.

**ಜಂಬೂ ದ್ವೀಪ :** ಇದು ವರ್ತುಲಾಕಾರವಾಗಿದೆ. ಸುತ್ತಳತೆ ಒಂದು ಲಕ್ಷ ಯೋಜನ. ಇದರ ಸುತ್ತಲೂ ಅಷ್ಟೇ ಅಂದರೆ ಒಂದು ಲಕ್ಷ ಯೋಜನ ಪರಿಮಾಣವುಳ್ಳ ಲವಣ ಸಮುದ್ರವಿದೆ. ಈ ಜಂಬೂದ್ವೀಪದಲ್ಲಿ ಒಂಭತ್ತು ವರ್ಷ (ಖಂಡ) ಗಳಿವೆ. ಅವು ಒಂದೊಂದೂ ಒಂಭತ್ತು ಸಾವಿರ ಯೋಜನಗಳ ವಿಸ್ತೀರ್ಣ. ಈ ವರ್ಷಗಳ ಮಧ್ಯದಲ್ಲಿ ಗಡಿಯ ಪವತಗಳಾದ ನೀಲ, ಶ್ವೇತ, ಶೃಂಗವಂತ, ನಿಷಧ, ಹೇಮಕೂಟ, ಹಿಮಾಲಯ, ಮಾಲ್ಯವಂತ ಮತ್ತು ಗಂಧಮಾದನಗಳೆಂಬ ಎಂಟು ಪರ್ವತಗಳು ಗಡಿಕಲ್ಲುಗಳಂತೆ ಸೇರಿರುತ್ತವೆ. ಈ ದ್ವೀಪದ ಮಧ್ಯಭಾಗದಲ್ಲಿ ಇಲಾವೃತ ವೆಂಬ ವರ್ಷವಿದೆ. ಈ ವರ್ಷದ ಮಧ್ಯೆ ಲಕ್ಷಯೋಜನ ವಿಸ್ತೀರ್ಣವಾದ ಬಂಗಾರದ ಮೇರು ಪರ್ವತವಿದೆ. ಇದರ ಶಿಖರದ ಸುತ್ತಳತೆ 32 ಸಾವಿರ ಯೋಜನಗಳು. 16 ಸಾವಿರ ಯೋಜನಗಳ ಉದ್ದವಿರುವ ಈ ಪರ್ವತದ ಬುಡವು ಭೂಮಿಯೊಳಗೆ ಸೇರಿದೆ. ಇಳಾವೃತಖಂಡದ ಉತ್ತರದಿಕ್ಕಿನಲ್ಲಿ ಕ್ರಮವಾಗಿ ನೀಲ, ಶ್ವೇತ, ಶೃಂಗವಂತ ಎಂಬ ಮೂರು ಪರ್ವತಗಳು ರಮ್ಯಕ, ಹಿರಣ್ಮಯ, ಕುರು ಎಂಬ ಮೂರು ಖಂಡಗಳಿಗೆ ಗಡಿಗಳಾಗಿವೆ. ಇವು ಪಶ್ಚಿಮಸಮುದ್ರದಿಂದ ಪೂರ್ವಸಮುದ್ರದವರೆಗೂ ಹಬ್ಬಿ ಎರಡು ದಿಕ್ಕುಗಳಲ್ಲಿಯೂ ಲವಣ ಸಮುದ್ರವನ್ನು ಮುಟ್ಟುತ್ತಿವೆ ಒಂದೊಂದು ಪರ್ವತವೂ ಎರಡೆರಡು ಸಾವಿರ ಯೋಜನ ವಿಸ್ತೀರ್ಣ.

ಇಲಾವೃತದ ದಕ್ಷಿಣದಲ್ಲಿ ನಿಷಧ, ಹೇಮಕೂಟ, ಹಿಮಾಲಯ ಎಂಬ ಮೂರು ಪರ್ವತಗಳು ಹರಿವರ್ಷ, ಕಿಂಪುರುಷ, ಭಾರತ ಎಂಬ ಮೂರು ಖಂಡಗಳಿಗೆ

ಗಡಿಯ ಪರ್ವತಗಳಾಗಿವೆ. ಈ ಪರ್ವತಗಳು ತಲಾ ಎರಡೆರಡು ಸಾವಿರ ಯೋಜನಗಳ ವಿಸ್ತೀರ್ಣಗಳಾಗಿವೆ.

ಇಳಾವೃತದ ಪೂರ್ವದಿಕ್ಕಿನಲ್ಲಿ ಗಂಧಮಾದನ ಪರ್ವತವು ಭದ್ರಾಕ್ಷ್ವ ಖಂಡಕ್ಕೂ ಪಶ್ಚಿಮ ದಿಕ್ಕಿನಲ್ಲಿ ಮಾಲ್ಯವಂತ ಪರ್ವತವು ಕೇತುಮಾಲ ಖಂಡಕ್ಕೂ ಗಡಿಪರ್ವತ ಗಳಾಗಿದ್ದು, ನೀಲ, ನಿಷಧಗಳೆಂಬ ಎರಡು ಪರ್ವತಗಳವರೆಗೂ ವ್ಯಾಪಿಸಿಕೊಂಡು ಎರಡೆರಡು ಸಾವಿರ ಯೋಜನಗಳ ವಿಸ್ತಾರವಾಗಿವೆ.

ಮೇರುವಿನ ನಾಲ್ಕುದಿಕ್ಕುಗಳಲ್ಲಿ ಕ್ರಮವಾಗಿ ಮಂದರ, ಮೇರುಮಂದರ, ಸುಪಾರ್ಶ್ವ, ಕುಮುದ ಎಂಬ ನಾಲ್ಕು ಪರ್ವತಗಳಿದ್ದು ಅವು ಒಂದೊಂದು ಹತ್ತು ಸಾವಿರ ಯೋಜನಗಳ ಪರಿಮಾಣವುಳ್ಳವುಗಳಾಗಿ, ಮೇರುವಿನ ಜಗುಲಿಗಳಂತಿವೆ. ಈ ನಾಲ್ಕು ಪರ್ವತಗಳಲ್ಲಿ ಕ್ರಮವಾಗಿ ಹಾಲು, ಜೇನು, ಕಬ್ಬಿನರಸ ಮತ್ತು ಶುದ್ಧ ಜಲವುಳ್ಳ ಸರೋವರಗಳಿರುವುವು. ಹಾಗೆಯೇ ಮಾವು, ನೇರಳೆ, ಈಚಲು, ಆಲ ಈ ಹೆಮ್ಮರಗಳೂ ಆಯಾ ಪರ್ವತದ ಧ್ವಜದಂತೆ ಎತ್ತರವಾಗಿವೆ. ಈ ವೃಕ್ಷಗಳು ಒಂದೊಂದೂ ಸಾವಿರದ ನೂರು ಯೋಜನಗಳು, ಈ ನಾಲ್ಕು ಪರ್ವತಗಳಲ್ಲಿಯೂ ಕ್ರಮವಾಗಿ ನಂದನ, ಚೈತ್ರರಥ, ವೈಭ್ರಾಜಕ ಮತ್ತು ಸರ್ವತೋಭದ್ರ ಎಂಬ ನಾಲ್ಕು ದೇವೋದ್ಯಾನಗಳಿವೆ.

ಮಂದರ ಪರ್ವತದ ಬುಡದಲ್ಲಿರುವ ದೇವಚೂತವೃಕ್ಷದ ಮೇಲ್ಭಾಗದಿಂದ ಕೋಡುಗಲ್ಲಿನ ಗಾತ್ರದ ಸಿಹಿಯಾದ ಮಾವಿನ ಹಣ್ಣುಗಳು ಉದುರುತ್ತಿರುವುವು. ಕೆಳಗೆ ಬಿದ್ದು ಒಡೆದು ಹೋದ ಆ ಹಣ್ಣುಗಳ ರಸವು ನೀರಾಗಿ 'ಅರುಣೋದೆ' ಎಂಬ ಹೆಸರಿನ ನದಿಯಾಗಿ ಆಪರ್ವತದ ಶಿಖರದಿಂದ ಕೆಳಕ್ಕೆ ಧುಮುಕುತ್ತ ಇಳಾವೃತ ಖಂಡದ ಪೂರ್ವಪ್ರದೇಶಕ್ಕೆ ನೀರುಣಿಸುತ್ತದೆ. ಈ ನದಿಯ ನೀರು ಅತ್ಯಂತ ಸಿಹಿ, ಸುವಾಸನೆ ಮತ್ತು ಕೆಂಪು ಬಣ್ಣದ್ದು. ಇದನ್ನು ಭವಾನಿಯ ದಾಸಿಯರಾದ ಯಕ್ಷ ಸ್ತ್ರೀಯರು ಸೇವಿಸುವರು. ಅದರಿಂದ ಇವರ ದೇಹದ ಮೇಲೆ ಬೀಸುವ ಗಾಳಿಯು ಅಲ್ಲಿನ ಸುಗಂಧವನ್ನೊಯ್ದು ಹತ್ತು ಯೋಜನದ ಪ್ರದೇಶವನ್ನು ಸುವಾಸಿತವನ್ನಾಗಿ ಮಾಡುವುದು.

ಮೇರುಮಂದರ ಪರ್ವತದಲ್ಲಿರುವ ಜಂಬೂವೃಕ್ಷದಿಂದ ಆನೆಯ ದೇಹದಷ್ಟು ದಪ್ಪವಾಗಿರುವ ನೇರಳೆ ಹಣ್ಣುಗಳು ಉದರಿ ಒಡೆದು ನೀರಾಗಿ ಜಂಬೂ ಎಂಬ ನದಿ ಯಾಗಿ ಮೇರು ಮಂದರ ಶಿಖರದಿಂದ ಹತ್ತು ಸಾವಿರ ಯೋಜನಗಳ ಕೆಳಗಿರುವ ಭೂಮಿಯ ಮೇಲೆ ಬೀಳುತ್ತ ಇಲಾವೃತ ಖಂಡದ ದಕ್ಷಿಣ ಪ್ರಾಂತದಲ್ಲಿ ಹರಿಯು ವುದು. ಆನದಿಯ ತೀರದಲ್ಲಿರುವ ಮಣ್ಣು ಜಂಬೂರಸದಿಂದ ಮಿಶ್ರವಾಗಿ ಸೂರ್ಯ

ಕಿರಣಗಳ ಶಾಖವು ತಟ್ಟುವುದರಿಂದ ಪಾಕವಾಗಿ ಬಂಗಾರವಾಗುತ್ತದೆ. ಅದಕ್ಕೆ ಜಾಂಬೂನದ ಎಂದು ಹೆಸರು. ಈ ಬಂಗಾರದ ಒಡವೆಗಳನ್ನೇ ದೇವತೆಗಳೂ, ದೇವ ತಾಸ್ತ್ರೀಯರೂ ಧರಿಸುವರು. ಹೀಗೆಯೇ ಇಳಾವೃತಖಂಡದ ಪಶ್ಚಿಮ ಭಾಗದಲ್ಲಿರುವ ಸುಪಾರ್ಶ್ವ ಎಂಬ ಪರ್ವತದಲ್ಲಿರುವ ಕದಂಬ ವೃಕ್ಷದ ಪೊಟರೆಗಳಿಂದ ಮದ್ಯದ ಐದು ಧಾರೆಗಳು ಸುರಿಯುವುವು. ಒಂದೊಂದು ಧಾರೆಯೂ ಐದೈದು ಮಾರಿನಷ್ಟು ದಪ್ಪ. ಇವು ಆ ಪರ್ವತದ ಕೆಳಗೆ ಸುರಿಯುತ್ತ ಇಳಾವೃತಖಂಡದ ಪಶ್ಚಿಮ ಭಾಗದ ಪ್ರಾಂತೀಯರನ್ನು ಸಂತೋಷಪಡಿಸುತ್ತಿವೆ. ಈ ಕದಂಬ ರಸವನ್ನು ಕುಡಿದವರ ಮುಖದಿಂದ ಹೊರಡುವ ಗಾಳಿಯು ನೂರು ಯೋಜನಗಳ ಪ್ರದೇಶವನ್ನು ಸುವಾಸಿತವನ್ನಾಗಿ ಮಾಡುತ್ತದೆ.

ಕುಮುದ ಪರ್ವತದಲ್ಲಿ **ಶತವಲಶ** ಎಂಬ ಹೆಸರಿನ ಆಲದ ಮರವಿದೆ. ಅದರ ಕಾಂಡದಿಂದ ಹಾಲು, ಮೊಸರು, ಜೇನು, ಬೆಲ್ಲ, ಅನ್ನ, ಭಕ್ಷ್ಯ ಮೊದಲಾದುವೂ, ಬಟ್ಟೆ, ಹಾಸಿಕೆ, ಆಸನ, ಆಭರಣ ಮೊದಲಾದ ಸರ್ವ ಇಷ್ಟಾರ್ಥಗಳನ್ನೂ ಕೊಡತಕ್ಕ ನದಗಳು ಪರ್ವತದ ಮೇಲಿನಿಂದ ಬೀಳುತ್ತ ಇಳಾವೃತದ ಉತ್ತರ ಪ್ರಾಂತದಲ್ಲಿರುವ ಜನರನ್ನು ಉಪಭೋಗಯುಕ್ತರನ್ನಾಗಿ ಮಾಡುತ್ತಿವೆ. ಇವುಗಳನ್ನು ಅನುಭವಿಸುವ ಆ ಜನರಿಗೆ ಎಂದೂ ಚರ್ಮದ ಸುಕ್ಕಾಗಲಿ, ನರೆಯಾಗಲೀ, ಆಯಾಸ, ಬೆವರು, ದುರ್ವಾಸನೆಗಳಾಗಲೀ, ಮುಪ್ಪು, ಮರಣ, ಅಪಮೃತ್ಯು, ಶೀತ, ಉಷ್ಣ, ಬಣ್ಣದ ಬದಲಾವಣೆ, ಜ್ಞಾನಕ್ಕೆ ಅಡ್ಡಿತರುವ ಭೂತಾವೇಶ ಮೊದಲಾದ ತಾಪ ವಿಶೇಷಗಳು ಉಂಟಾಗುವುದಿಲ್ಲ. ಬದುಕಿರುವವರೆಗೂ ನಿರತಿಶಯ ಸುಖವೇ ಆಗುವುದು.

ಮೇರುಪರ್ವತದ ಬುಡದಲ್ಲಿ ಕಮಲದ ಕೇಸರಿಗಳಂತೆ ಕುರಂಗ, ಕುರರ, ಕುಸುಂಭವ, ಕಂಕತ, ತ್ರಿಕೂಟ, ಶಿಶಿರಪತಂಗ, ರುಚಕ, ನಿಷಧ, ಶಿತಿವಾಸ, ಕಪಿಲ, ಶಂಖ, ವೈಡೂರ್ಯ, ಜಾರುಧಿ, ಹಂಸ, ಋಷಭ, ನೀರ, ನಾಗ, ಕಾಲಂಜರ, ನಾರದ ಮೊದಲಾದ ಬೆಟ್ಟಗಳಿರುವುವು.

ಮೇರುವಿನ ಪೂರ್ವಕ್ಕಿರುವ ಮಂದರಪರ್ವತದ ಆಚೆ ಜಠರ, ದೇವಕೂಟ ಪರ್ವತಗಳು ಹದಿನೆಂಟು ಸಾವಿರ ಯೋಜನ ದೂರದಲ್ಲಿ ದಕ್ಷಿಣದಿಂದ ಉತ್ತರಕ್ಕೆ ಹಬ್ಬಿ, ಎರಡು ಸಾವಿರ ಯೋಜನ ದಪ್ಪ, ಅಷ್ಟೇ ಯೋಜನ ಎತ್ತರವಾಗಿವೆ.

ಮೇರುಪಶ್ಚಿಮದಲ್ಲಿ ಪವನ, ಪಾರಿಯಾತ್ರ ಪರ್ವತಗಳೂ, ದಕ್ಷಿಣದಲ್ಲಿ ಕೈಲಾಸ ಕರವೀರ ಪರ್ವತಗಳೂ, ಉತ್ತರದಲ್ಲಿ ಶೃಂಗ ಮತ್ತು ಮಕರವೆಂಬ ಪರ್ವತಗಳೂ ಹಬ್ಬಿವೆ. ಈ ಎಂಟು ಪರ್ವತಗಳಿಂದ ಸುವರ್ಣಮಯ ಮೇರುಪರ್ವತವು ಶೋಭಿಸುತ್ತಿದೆ.

ಮೇರುಶಿಖರದ ಮಧ್ಯ ಸುವರ್ಣಾತ್ಮಕವಾದ, ಚಚ್ಚೌಕವಾದ, ಹತ್ತು ಸಾವಿರ ಯೋಜನ ಪರಿಮಾಣವುಳ್ಳ ಚತುರ್ಮುಖವಿನಿರ್ಮಿತ "ಶತಕೋಟಿ" ಎಂದು ಪ್ರಸಿದ್ಧವಾದ ಬ್ರಹ್ಮದೇವರ ಪಟ್ಟಣವಿದೆ. ಅದರ ಸುತ್ತಲೂ ಇಂದ್ರಾದಿ ಅಷ್ಟದಿಕ್ಪಾಲಕರ ಪಟ್ಟಣಗಳಿವೆ. ಅವು ಒಂದೊಂದೂ ಎರಡು ಸಾವಿರದ ಐನೂರು ಯೋಜನಗಳ ವಿಸ್ತೀರ್ಣವುಳ್ಳದ್ದು.

### ಹದಿನಾರನೆಯ ಅಧ್ಯಾಯ ಮುಗಿದುದು

## ಗಂಗಾವತರಣ

ಗದ್ಯ ॥ ತತ್ರ ಭಗವತಃ ಸಾಕ್ಷಾದ್ಯಜ್ಞಲಿಂಗಸ್ಯ ವಿಷ್ಣೋರ್ವಿಕ್ರಮತೋ ವಾಮಪಾದಾಂಗುಷ್ಠನಖನಿರ್ಭಿನ್ನೋರ್ಧ್ವಾಂಡಕಟಾಹವಿವರೇಣಾಂತಃ ಪ್ರವಿಷ್ಟಾ ಯಾ ಬಾಹ್ಯಜಲಧಾರಾ ತಚ್ಚರಣ ಪಂಕಜಾವನೇಜನಾರುಣ ಕಿಂಜಲ್ಕೋಪರಂಜಿತಾ ಅಖಿಲಜಗದಘಮಲಾಪಹೋಪಸ್ಪರ್ಶನಾಮಲಾ ಸಾಕ್ಷಾದ್ಭಗವತ್ಪದೀತ್ಯನುಪಲಕ್ಷಿತವಚೋಭಿರಭಿಧೀಯಮಾನಾಽತಿಮಹತಾ ಕಾಲೇನ ಯುಗಸಹಸ್ರೋಪಲಕ್ಷಣೇನ ದಿವೋ ಮೂರ್ಧನ್ಯವತತಾರ ಯತ್ತದ್ವಿಷ್ಣುಪದಮಾಹುಃ ॥ 1/17"

ಅರ್ಥ ;- ವಾಮನನಾಗಿ ಅವತರಿಸಿದ ಶ್ರೀಹರಿಯು, ಬಲಿಚಕ್ರವರ್ತಿಯ ಯಜ್ಞದಲ್ಲಿ ತ್ರಿವಿಕ್ರಮನ ರೂಪವನ್ನು ತಾಳಿ, ಬಲಪಾದದಿಂದ ಭೂಮಿಯನ್ನು ಆಕ್ರಮಿಸಿಕೊಂಡು, ಎಡಪಾದವನ್ನು ಮೇಲಕ್ಕೆ ಎತ್ತಿದಾಗ, ಆ ಕಾಲಿನ ಹೆಬ್ಬೆರಳಿನ ಉಗುರು ಬ್ರಹ್ಮಾಂಡ ಕಟಾಹದ ಮೇಲ್ಭಾಗದ ಚಿಪ್ಪನ್ನು ಭೇದಿಸಿತು. ಅದರಿಂದಾದ ರಂಧ್ರದಿಂದ ಬ್ರಹ್ಮಾಂಡದ ಹೊರಗಿನ ಕಟಾಹಕ್ಕೆ ಬಡಿಯುತ್ತಿದ್ದ ನೀರು ಒಳಕ್ಕೆ ನುಗ್ಗಿತು. ಸ್ವಾಭಾವಿಕವಾಗಿ ಬೆಳ್ಳಗಿದ್ದ ನೀರು ಶ್ರೀಹರಿಯ ಪಾದಕಮಲವನ್ನು ತೊಳೆದುದರಿಂದ, ಅದರ ಕೆಂಪು ಪರಾಗವು ಸೇರಿ ನೀರೂ ಕೆಂಪಾದಂತಾಯಿತು. ಶ್ರೀಹರಿಯ ಪಾದ ಪರಾಗಸ್ಪರ್ಶದ ನೀರನ್ನು ಆಚಮನ ಮಾಡಿದರೂ ಯೋಗ್ಯ ಜೀವರ ಪಾಪವೆಂಬ ಕೊಳೆಯನ್ನು ಅದು ನಾಶಪಡಿಸುವ ಸಮರ್ಥವಾಯಿತು ಮತ್ತು ತನಗೆ ಪಾಪಸಂಪರ್ಕವಿಲ್ಲದಂತೆ ಶುದ್ಧವಾಗಿಯೇ ಇರುವುದು. ಇಂತಹ ಹರಿಯ ಪಾದೋದಕವನ್ನು ವೇದಗಳೂ, ಪುರಾಣಗಳೂ ನಿಮಿತ್ತಾಂತರ ಪ್ರಯುಕ್ತವಲ್ಲದ, ಯಥಾರ್ಥವಾದ "ವಿಷ್ಣುಪದಿ" ಎಂಬ ಹೆಸರಿನಿಂದ ಕರೆಯುತ್ತಿರುವುವು.

ಒಂದು ಸಾವಿರ ಯುಗಗಳಷ್ಟು ದೀರ್ಘಕಾಲದ ನಂತರ ವಿಷ್ಣುಪದಿಯು ಅಂತರಿಕ್ಷದ ಮೇಲ್ಭಾಗದಲ್ಲಿರುವ ಧ್ರುವಲೋಕದಲ್ಲಿ ಇಳಿಯಿತು. ಈ ಸ್ಥಳವು

ಶಿಂಶುಮಾರನೆಂಬ ಶ್ರೀಹರಿಯ ನಿವಾಸಸ್ಥಾನವಾದ್ದರಿಂದ ಇದನ್ನು **ವಿಷ್ಣುಪದ** ಎಂದು ಜ್ಞಾನಿಗಳು ಕರೆಯುವರು.

ಆ ವಿಷ್ಣುಪದದಲ್ಲಿರುವ ವೀರವ್ರತನೂ, ಪರಮ ಭಗವದ್ಭಕ್ತನೂ, ಉತ್ತಾನ ಪಾದನ ಪುತ್ರನೂ ಆದ ಧ್ರುವರಾಜನು "ಇದು ನಮ್ಮ ವಂಶದ ದೇವತೆಯಾದ ಶ್ರೀ ವಿಷ್ಣುವಿನ ಪಾದಾರವಿಂದದ ಜಲವೆಂದು ಪ್ರತಿದಿನವೂ ಮೂರು ಕಾಲಗಳಲ್ಲಿಯೂ ಅಭಿವೃದ್ಧಿಯಾಗುತ್ತಿರು ಶ್ರೀಹರಿ ಭಕ್ತಿಯಿಂದ ಅತ್ಯಂತ ಆದರಪೂರ್ವಕವಾಗಿ ಶಿರಸ್ಸಿನಲ್ಲಿ ಧರಿಸಿರುವನು. ಭಕ್ತಿಯಿಂದ ಅವನು ಮೈಮರೆಯುವನು. ಅವನ ಕಣ್ಣಿನಿಂದ ಆನಂದಬಾಷ್ಪವು ಸುರಿಯುತ್ತಿರುವುದು. ದೇಹದಲ್ಲಿ ರೋಮಾಂಚನವಾಗುವುದು.

ಈ ವಿಷ್ಣುಪದಿಯು ಧ್ರುವಲೋಕದಿಂದ ಸಪ್ತರ್ಷಿಗಳ ಲೋಕಕ್ಕೆ ಹರಿದು ಬರುವುದು. ಸಪ್ತರ್ಷಿಗಳು ಶ್ರೀಹರಿಯಲ್ಲಿ ನಿರಂತರ ಭಕ್ತಿಯನ್ನು ಮಾಡುತ್ತಾ, ಇತರ ಪುರುಷಾರ್ಥಗಳನ್ನು ಬಯಸದೇ, ಮೋಕ್ಷವೇ ದೊರೆಯಿತೆಂದು ತಿಳಿದು ಆ ನದಿಯ ಜಲವನ್ನು ತಮ್ಮ ಜಟೆಗಳಲ್ಲಿ ಧರಿಸಿರುವರು. ವಿಷ್ಣುಪದಿಯು ಆ ಲೋಕದಿಂದ ಕೆಳಗಿದು ಚಂದ್ರಮಂಡಲಕ್ಕೆ ಬಂದು ಅಲ್ಲಿಂದ ಹೊರಟು ಶತಕೋಟಿ ಪಟ್ಟಣದಲ್ಲಿಳಿದು ಸೀತಾ, ಅಲಕನಂದಾ, ಚಕ್ಷುಃಸು ಮತ್ತು ಭದ್ರಾ ಎಂಬ ಹೆಸರಿನ ನಾಲ್ಕು ಶಾಖೆಗಳಾಯಿತು.

ಸೀತಾ ಎಂಬ ಗಂಗಾಶಾಖೆಯು ಶತಕೋಟಿಯಲ್ಲಿರುವ ಕೇಸರಿಪರ್ವತ ಮೊದಲಾದ ಗಿರಿಶಿಖರಗಳ ಮಾರ್ಗವಾಗಿ ಇಳಿದು, ಗಂಧಮಾದನಪರ್ವತದ ಶಿಖರದ ಮೇಲೆ ಬಿದ್ದು ಭದ್ರಾಶ್ವ ಖಂಡದಲ್ಲಿ ಹರಿದು ಪೂರ್ವದಿಕ್ಕಿನ ಲವಣಸಮುದ್ರವನ್ನು ಸೇರುತ್ತದೆ.

ಚಕ್ಷುಃಸು ಎಂಬ ಗಂಗಾಶಾಖೆಯು ಮಾಲ್ಯವಂತಪರ್ವತದಿಂದ ಕೆಳಗಿಳಿದು ಕೇತುಮಾಲಾ ಖಂಡದಲ್ಲಿ ಹರಿದು ಪಶ್ಚಿಮ ಲವಣ ಸಮುದ್ರವನ್ನು ಸೇರುವುದು.

ಭದ್ರಾ ಎಂಬ ಗಂಗಾಶಾಖೆಯು ಶತಕೋಟಿಯಿಂದ ಕೆಳಗಿಳಿದು, ಉತ್ತರ ಕುರು ಖಂಡದಲ್ಲಿ ಹರಿದು ಉತ್ತರ ದಿಕ್ಕಿನ ಲವಣ ಸಮುದ್ರವನ್ನು ಸೇರುವುದು.

ಅಲಕನಂದೆಯು ಶತಕೋಟಿಯಿಂದ ಹೊರಟು ಹಿಮವತ್ಪರ್ವತವನ್ನು ಸೇರಿ, ಅಲ್ಲಿಂದ ಹೊರಟು ಭರತಖಂಡದಲ್ಲಿ ಹರಿದು ದಕ್ಷಿಣದಲ್ಲಿರುವ ಲವಣಸಮುದ್ರಕ್ಕೆ ಸೇರುವುದು. ಆ ನದಿಯಲ್ಲಿ ಸ್ನಾನಮಾಡುವವರಿಗೆ ಅಶ್ವಮೇಧ - ರಾಜಸೂಯ ಯಜ್ಞಗಳ ಫಲವು ಲಭಿಸುವುದು.

ಭರತ ಖಂಡದಲ್ಲಿ ಮೇರು ಮುಂತಾದ ಪರ್ವತಗಳಲ್ಲಿ ಹುಟ್ಟಿರುವ ಇತರ ನದಿಗಳು, ನದಗಳೂ ಹರಿಯುತ್ತವೆ. ಸಕಲ ಖಂಡಗಳಲ್ಲಿಯೂ ಭರತಖಂಡವೇ ಕರ್ಮಭೂಮಿಯು. ಉಳಿದ ಖಂಡಗಳು ಸ್ವರ್ಗಸುಖವನ್ನು ಅನುಭವಿಸಿ, ಉಳಿದಿರುವ ಪುಣ್ಯದ ಫಲವಾದ ಸುಖವನ್ನು ಅನುಭವಿಸುವವರನ್ನು ಒಳಗೊಂಡಿವೆ. ಅವಕ್ಕೆ ಭೂಸ್ವರ್ಗಗಳೆಂದು ಹೆಸರು. ಈ ಖಂಡಗಳಲ್ಲಿ ಭೂಮಿಯ ಸಂಬಂಧದ ದುಃಖ ಇರುವುದುಂಟು. ಇಲ್ಲಿರುವವರಿಗೆ ಹತ್ತು ಸಾವಿರ ವರ್ಷ ಆಯುಷ್ಯ. ಅವರೆಲ್ಲರೂ ತ್ರೇತಾಯುಗದವರಂತೆ ಸುಖಿಗಳಾಗಿರುತ್ತಾರೆ. ಈ ಎಂಟು ಖಂಡಗಳಲ್ಲಿಯೂ ದೇವಶ್ರೇಷ್ಠರು ತಮ್ಮ ಸೇವಕರ ನಾಯಕರಿಂದ ಪೂಜಿತರಾಗಿ, ದೇವಸುಂದರಿಯರ ನೋಟದಿಂದ ಆಕರ್ಷಿಸಲ್ಪಟ್ಟವರಾಗಿ, ಅಲ್ಲಿರುವ ಗಿರಿಗಳ ಕಣಿವೆ, ನಿರ್ಮಲೋದಕ ಕೊಳ ಇವುಗಳಲ್ಲಿ ಆ ರಮಣಿಯರೊಡನೆ ವಿಹರಿಸುತ್ತ, ಜಲಕ್ರೀಡಾದಿ ಲೀಲೆಗಳಿಂದ ಇಷ್ಟಬಂದಂತೆ ವಿಹರಿಸುವರು.

ಒಂಭತ್ತು ಖಂಡಗಳಲ್ಲಿಯೂ, ಭಕ್ತರನ್ನು ಅನುಗ್ರಹಿಸುವುದಕ್ಕಾಗಿ ಶ್ರೀ ನಾರಾಯಣನು ಒಂಭತ್ತು ರೂಪಗಳಿಂದಿರುವನು.

### ಇಳಾವೃತ ಖಂಡ

ಇಲ್ಲಿ ಪುರುಷನೆಂದರೆ ರುದ್ರನೊಬ್ಬನೆ. ಅವನು ಪಾರ್ವತಿಯಿಂದ ಕೂಡಿ ಕ್ರೀಡಿಸುತ್ತಿರುವನು. ಅಲ್ಲಿಗೆ ಪ್ರವೇಶಿಸುವ ಗಂಡು ಜಾತಿಯ ನರ, ಪಶು ಪಕ್ಷಿಗಳು ಪಾರ್ವತಿಯ ಶಾಪದಿಂದ ಸ್ತ್ರೀಯರಾಗುವರು. ಆದ್ದರಿಂದಲೇ ಇಲ್ಲಿ ಇತರ ಯಾವ ಪುರುಷರೂ ಇಲ್ಲ. ಈ ವಿಷಯವನ್ನು ಒಂಭತ್ತನೆಯ ಸ್ಕಂಧದಲ್ಲಿ ಹೇಳುವೆವು. ಈ ಖಂಡದಲ್ಲಿರುವವರು, ಅಲ್ಲಿರುವ ಸಂಕರ್ಷಣರೂಪೀ ಪರಮಾತ್ಮನ ಮಂತ್ರವನ್ನು ಜಪಿಸುತ್ತ ಸೇವಿಸಿ ಸ್ತುತಿಸುತ್ತಾರೆ :

**“ಓಂ ನಮೋ ಭಗವತೇ ಮಹಾಪುರುಷಾಯ ಸರ್ವಗುಣ ಸಂಖ್ಯಾತಾಯ ಅನಂತಾಯ ಅವ್ಯಕ್ತಾಯ ನಮ ಇತಿ”**

(ಇದು ರುದ್ರದೇವರು ಜಪಿಸುವ ಮಂತ್ರ. ಈ ಮಂತ್ರದಲ್ಲಿ ‘ಅನಂತಾಯ’ ಎಂದು ಹೇಳಿರುವುದರಿಂದ ಶೇಷದೇವರಲ್ಲಿ ಸಂನಿಹಿತನಾಗಿರುವ, ಶೇಷಾಂತರ್ಯಾಮಿ ಸಂಕರ್ಷಣ ಪರಮಾತ್ಮನೂ, ಶೇಷದೇವರೂ ಇಬ್ಬರೂ ರುದ್ರದೇವರಿಂದ ಉಪಾಸ್ಯರೆಂದು ಸೂಚಿತವಾಗುವುದು. ಮುಂದೂ ಹೀಗೆಯೇ ತಿಳಿಯಬೇಕು.)

ಶೇಷದೇವರ ಪರವಾದ ಅರ್ಥ : ಪೂಜ್ಯನೂ, ರುದ್ರಾದಿ ದೇವತೆಗಳಿಗಿಂತ ಶ್ರೇಷ್ಠನೂ, ತನಗೆ ಯೋಗ್ಯವಾದ ಸರ್ವಸಾವಧಿಕ ಗುಣಸ್ವರೂಪನೂ, ಅನುಗ್ರಹವಿಲ್ಲದೆ ವ್ಯಕ್ತನಾಗದವನೂ, ಪ್ರಣವ ಪ್ರತಿಪಾದ್ಯ ಶ್ರೀಹರಿಯನ್ನು ಉಪಾಸಿಸುವವನೂ

ಅನಂತನೆಂದು ಕರೆಸುವವನೂ, ಶ್ರೀಹರಿಗೆ ಪ್ರತಿಮೆಯಂತಿರುವವನೂ ಆದ ಶೇಷ ದೇವನಿಗೆ ನಮಸ್ಕಾರ !

ಹರಿಯ ಪರವಾದ ಅರ್ಥ : ಶೇಷಾಂತರ್ಯಾಮಿಯೂ, ಸಮಗ್ರ ಐಶ್ವರ್ಯ ಸಂಪನ್ನನೂ, ಸರ್ವೋತ್ತಮನೂ, ಸರ್ವಗುಣ ಸಂಪನ್ನನೆಂದು ಸರ್ವಶ್ರುತಿಗಳಲ್ಲಿಯೂ ಪ್ರಸಿದ್ಧನೂ, ಅನುಗ್ರಹವಿಲ್ಲದೆ ಭಕ್ತರಿಗೆ ಕಾಣಿಸದವನೂ, ಓಂಕಾರಪ್ರತಿಪಾದ್ಯನೂ, ದೇಶಕಾಲ ಗುಣಗಳಿಂದ ಕೊನೆಯಿಲ್ಲದವನೂ ಆದ ಸಂಕರ್ಷಣನಿಗೆ ಮತ್ತೆ ಮತ್ತೆ ನಮಸ್ಕಾರ ! ಪರಮಾತ್ಮನೇ ! ಭಕ್ತರ ಸಂಸಾರ ದುಃಖವನ್ನು ಪರಿಹರಿಸುವ ನಿನ್ನನ್ನು ಭಜಿಸುತ್ತೇನೆ. ಅಪಾರ ಮಹಿಮನಾದ ನಿನಗೆ ನಮಸ್ಕಾರ !

## ಹದಿನೇಳನೆಯ ಅಧ್ಯಾಯ ಮುಗಿದುದು

**ಭದ್ರಾಶ್ವಖಂಡ :** ಯಮಧರ್ಮನ ಮಕ್ಕಳಾದ ಭದ್ರಶ್ರವರು ಮತ್ತು ಅವರ ವಂಶನಾಯಕರೂ ಹಯವದನ ದೇವರನ್ನು ಸೇವಿಸುತ್ತಿರುವರು.

### ಮಂತ್ರ

**"ಓಂ ನಮೋ ಭಗವತೇ ಧರ್ಮಾಯ ಆತ್ಮಶೋಧನಾಯ ನಮ ಇತಿ"**

ಗುಣಪೂರ್ಣನೂ, ಸಕಲೈಶ್ವರ್ಯಸಂಪನ್ನನೂ, ಜ್ಞಾನೋಪದೇಶದಿಂದ ಜೀವರನ್ನು ಶುದ್ಧರನ್ನಾಗಿ ಮಾಡುವವನೂ, ಜಗದ್ಧಾರಕನೂ ಆದ ಪರಮಾತ್ಮನಿಗೆ ನಮಸ್ಕಾರ !

ವಿಷಯಲಂಪಟರಾದ್ದರಿಂದ ಕಂಗುರುಡರಾಗಿ ಜೀವರು ಸಾಯುವರು. ಇದನ್ನು ತಿಳಿದಿದ್ದರೂ, ತಿಳಿಯದೇ ಇರುವವರಂತೆ ಜನರು ನಡೆಯುವ ಹಾಗೆ ಮಾಡುವ ನಿನ್ನ ವ್ಯಾಪಾರವು ವಿಚಿತ್ರವು. ಜ್ಞಾನಿಗಳಾದರೂ ನಿನ್ನಿಚ್ಛೆಯಿಂದ ನಿನ್ನನ್ನು ಸಂಪೂರ್ಣವಾಗಿ ತಿಳಿಯದೆ ಮುಗ್ಧರಾಗುವರು. ಈ ಮೋಹನಿವೃತ್ತಿಗಾಗಿ ನಿನ್ನನ್ನು ನಮಸ್ಕರಿಸುವೆವು. ಸೃಷ್ಟ್ಯಾದಿ ಸರ್ವವ್ಯಾಪಾರವನ್ನೂ ಸ್ವತಂತ್ರವಾಗಿ ಮಾಡತಕ್ಕವನು ನೀನೊಬ್ಬನೇ. ಆದರಿಂದ ಎಳ್ಳಷ್ಟು ಆಯಾಸ ನಿನಗಿಲ್ಲವಾದ್ದರಿಂದೆ **ಅಕರ್ತಾ** ಎನಿಸುವೆ. ಮಧುದೈತ್ಯನನ್ನು ಕೊಂದು ವೇದವನ್ನು ಬ್ರಹ್ಮದೇವರಿಗೆ ತಂದು ಕೊಟ್ಟಿರುವೆ. ಸತ್ಯ ಸಂಕಲ್ಪನೂ, ಸತ್ಯಕರ್ಮನೂ ಆದ ನಿನಗೆ ನಮಸ್ಕಾರ !

**ಹರಿವರ್ಷಖಂಡ :** ಇಲ್ಲಿ ನರಹರಿಯು ಇರುವನು. ಪ್ರಹ್ಲಾದರಾಜನು ಈ ಖಂಡನಿವಾಸಿಗಳಿಂದ ಸಹಿತನಾಗಿ, ಅನನ್ಯಭಕ್ತಿಯಿಂದ ನಿಷ್ಕಾಮಪೂರ್ವಕ ನರ

ಸಿಂಹವನ್ನು ಉಪಾಸಿಸುವನು, ಇವನೆಂತಹವನೆಂದರೆ ; "ತದ್ದಯಿತಂ ರೂಪಂ **ಮಹಾಪುರುಷ ಭಾಜನೋ ಮಹಾಭಾಗವತೋ** ದೈತ್ಯದಾನವಕುಲತೀರ್ಥೀ ಕರಣ ಶೀಲಾಚರಿತಃ ಪ್ರಹ್ಲಾದಃ"

ಉತ್ತಮ ಪುರುಷರ ಗುಣಗಳಾದ ವೀರ್ಯ ಶೌರ್ಯ ಮೊದಲಾದುವುಗಳನ್ನುಳ್ಳವನು ಪ್ರಹ್ಲಾದನು. ಅಥವಾ ಶ್ರೇಷ್ಠಜೀವರಾದ ಬ್ರಹ್ಮ ವಾಯು ಮೊದಲಾದವರ ಗುಣ ಗಳಾದ ಹರಿಭಕ್ತಿ, ಜ್ಞಾನ ಮೊದಲಾದ ಗುಣಗಳನ್ನುಳ್ಳವನು. ಮಹಾಭಗವದ್ಭಕ್ತನು. ದೈತ್ಯದಾನವ ಕುಲವನ್ನು ಪವಿತ್ರಗೊಳಿಸುವ ಸ್ವಭಾವವುಳ್ಳವನು. ಮತ್ತು ಆಚರಣೆ ವುಳ್ಳವನು. ಅಂದರೆ ಪ್ರಹ್ಲಾದನ ಸ್ವಭಾವ ಮತ್ತು ಆಚರಣೆಗಳು ದೈತ್ಯದಾನವ ಕುಲ ಗಳನ್ನು ಪವಿತ್ರಗೊಳಿಸುವುವು.

ವಿಶೇಷ : ಶುಕಾಚಾರ್ಯರು ಉಳಿದ ಖಂಡಗಳನ್ನು ವರ್ಣಿಸುವಾಗ ಅಲ್ಲಿರುವ ಉಪಾಸಕರ ಹೆಸರನ್ನು ಮಾತ್ರ ಹೇಳಿರುವರು. ಆದರೆ ಈ ಹರಿವರ್ಷಖಂಡದ ನರ ಹರಿಯ ಉಪಾಸಕನಾದ ಪ್ರಹ್ಲಾದನ ಮಹಿಮೆಯನ್ನು ಹೇಳಬೇಕಾದರೆ ಅವನು ಬಿಂಬಭೂತನಾಗಿರುವುದು ಮತ್ತು ವಾಯುದೇವರ ಆವೇಶವು ಅವನಲ್ಲಿ ಸರ್ವದಾ ಇರುವುದೇ ಕಾರಣಗಳೆಂಬುದನ್ನು ಭಾವುಕರು ಗ್ರಹಿಸಬೇಕು.

**ಮಂತ್ರ: ಓಂ ನಮೋ ನೃಸಿಂಹಾಯ ತೇಜಸ್ತೇಜಸೇ ಆವಿರಾವಿರ್ಭವ ವಜ್ರನಖ ! ವಜ್ರದಂಷ್ಟ್ರ ! ಕರ್ಮಾಶಯಾನ್ ರಂಧಯ ರಂಧಯ ತಮೋ ಗ್ರಸ ಸ್ವಾಹಾ ಅಭಯಮಭಯ ಮಾತ್ಮನೇ ಭೂಯಿಷ್ಠಾಃ ಓಂಕ್ಷ್ರೌಂ॥8/18**

ಸೂರ್ಯಾದಿ ತೇಜಃ ಪದಾರ್ಥಗಳಿಗಿಂತ ಅಧಿಕ ತೇಜೋರೂಪನಾದ ನರಸಿಂಹನಿಗೆ ನಮಸ್ಕಾರ ! ನಿನ್ನ ನಖಗಳು ವಜ್ರದಂತೆ ಅಭೇದ್ಯಗಳು. ನಿನ್ನ ದಾಡೆಹಲ್ಲುಗಳು ವಜ್ರ ದಂತೆ ಕಠಿಣವಾಗಿವೆ. ನೀನು ಯಾವಾಗಲೂ ನನಗೆ ಪ್ರಕಟನಾಗು ! ನಮ್ಮ ಕರ್ಮ ಗಳನ್ನೂ, ಅಂತಃಕರಣಗಳನ್ನೂ ಸುಟ್ಟುಬಿಡು ! ಸುಟ್ಟುಬಿಡು ! ಅಜ್ಞಾನವನ್ನು ಹೋಗಲಾಡಿಸು ! ತಮ ಅಂದರೆ ದೈತ್ಯ ಕುಲ. ಅದನ್ನು ಕೊಂದು ನುಂಗಿಬಿಡು. ನಿನಗಾಗಿ ಈ ದ್ರವ್ಯವನ್ನು ಹೋಮಿಸುವೆವು. ನಿನ್ನನ್ನು ಉಪಾಸಿಸುವ ಜೀವನಿಗೆ ಸಂಸಾರ ಭಯವನ್ನು ತಪ್ಪಿಸಿ ಮೋಕ್ಷವನ್ನು ಕೊಡು ಓಂ ಅಂದರೆ ಗುಣಪೂರ್ಣನು. ಹೋಂ ಅಂದರೆ ಹಕಾರ ಮತ್ತು ಓಂಕಾರ ಗಳಿಂದ ಪ್ರತಿಪಾದ್ಯನು.

(ಹರಿವರ್ಷದ ನಿವಾಸಿಗಳಿಗೆ ಮತ್ತು ಜಗತ್ತಿನಲ್ಲಿರತಕ್ಕ ಹರಿಭಕ್ತರಿಗೆ ಉಪದೇಶ ಮಾಡುತ್ತಾರೆ ;

**ಪ್ರಹ್ಲಾದ** : ಹರಿಭಕ್ತರೇ ! ಮಂಗಳವನ್ನು ಹೊಂದುವುದಕ್ಕಾಗಿ ಶ್ರೀಹರಿಯ ಧ್ಯಾನಮಾಡಿ, ಸೇವಿಸಿರಿ. ಸುತಾದಿಗಳಲ್ಲಿ ಸಂಗಬೇಡ. ಭಗವತ್ಪ್ರಿಯ ವಸ್ತುಗಳ ಸಂಗ

ವಾಗಲಿ. ಮನಸ್ಸನ್ನು ವಶಮಾಡಿಕೊಂಡವನಿಗೇ ಅಪರೋಕ್ಷ ಜ್ಞಾನ ಮತ್ತು ಸಂಸಾರ ದಿಂದ ಮುಕ್ತಿ. ಮಹಾತ್ಮರ ಸಂಗದಿಂದಲೇ ಶಾಸ್ತ್ರಜ್ಞಾನ. ಭಕ್ತನಾದ ಜೀವನು ಹಿರಿಯರಿಂದ ಹರಿಯ ಮಹಿಮೆಯನ್ನು ಶ್ರವಣ ಮಾಡದೆ ಇರುವುದಿಲ್ಲ. ಸದ್ಗುಣ ಗಳನ್ನು ಸಂಪಾದಿಸಿ, ಯಾವುದನ್ನೂ ಅಪೇಕ್ಷಿಸದೆ, ಭಕ್ತಿಯನ್ನು ಮಾಡುವ ಅಧಿಕಾರಿಗೆ ಸಕಲ ದೇವತೆಗಳೂ ಪ್ರಸನ್ನರಾಗುವರು. ಅದಿಲ್ಲದವನಿಗೆ ಈ ಭಾಗ್ಯವು ದೊರೆಯು ವುದೇ ಇಲ್ಲ. ಶ್ರೀ ಹರಿಯು ಜೀವನ ಪ್ರದನು. ಪೋಷಕನು. ಮೀನುಗಳಿಗ ನೀರಿನಂತೆ ಇಷ್ಟನು. ಅನಾದಿಯು. ಪರೋಪಕಾರಿಯು. ಇಂತಹ ಸ್ವಾಮಿಯನ್ನು ಬಿಟ್ಟು ಮನೆ ಮರ ಮೊದಲಾದುವುಗಳಲ್ಲಿ ಆಸಕ್ತವಾದರೆ ಸ್ತ್ರೀ ಪುರುಷರು ವಯಸ್ಸಿನಿಂದ ಹಿರಿಯ ರಾಗುವರೇ ಹೊರತು ಗುಣದಿಂದಲ್ಲ. ಅಂತಹವರು ನಾಯಿ ಕತ್ತೆಗಳಿಗಿಂತ ಅತ್ತತ್ತ. ದುಷ್ಟವಿಷಯಗಳು ಭಯ ಮತ್ತು ದೈನ್ಯಾದಿಗಳಿಗೆ ಕಾರಣವಾಗುವುವು. ಇದರ ಪರಿಣಾಮವೇ ಹುಟ್ಟಿ ಸಾಯುತ್ತಿರುವುದು. ಆದ್ದರಿಂದ ವಿಷಯದ ಹಂಬಲನ್ನು ಬಿಟ್ಟು ನಿರ್ಭಯನಾದ ಶ್ರೀಹರಿಯ ಪಾದವನ್ನು ಸೇವಿಸಿರಿ.

**ಕೇತುಮಾಲ :** ಈ ಖಂಡದಲ್ಲಿ ಶ್ರೀಹರಿಯು ಕಾಮದೇವನ ಅಂತರ್ಯಾಮಿ ಯಾದ ಪ್ರದ್ಯುಮ್ನ ರೂಪದಿಂದಿರುವನು. ರತಿಯಲ್ಲಿ ಆವಿಷ್ಟಳಾದ ಲಕ್ಷ್ಮೀದೇವಿಗೂ ಸಂವತ್ಸರ ದೇವತೆಗಳ ಪುತ್ರರಾದ ರಾತ್ರಿ ದೇವತೆಗಳಿಗೂ, ಆ ಖಂಡದ ಅಧಿಪತಿ ಗಳಿಗೂ ಪ್ರಿಯವನ್ನು ಮಾಡಬೇಕೆಂಬ ಇಚ್ಛೆಯಿಂದ ಪ್ರದ್ಯುಮ್ನನಾಮಕ ಶ್ರೀ ಹರಿಯು ಅಲ್ಲಿ ನೆಲೆಸಿರುವನು.

## ಮಂತ್ರ

**"ಓಂ ಹಾಂ ಹ್ರೀಂ ಹ್ರೂಂ ಓಂ ನಮೋ ಭಗವತೇ ಹೃಷೀಕೇಶಾಯ ಸರ್ವವಿಶೇಷನಿತ್ ಕ್ಷೇತ್ರಾತ್ಮನೇ ಆಕೂತಿನಾಂ ಚಿತ್ತಾನಾಂ ಚೇತಸಾಂ ವಿಶೇಷಾ ಣಾಂ ಚಾಧಿಪತಯೇ ಷೋಡಶಕಲಾಯ ಛಂದೋಮಯಾಯ ಅನ್ನಮ ಯಾಯ ಅಮೃತಮಯಾಯ ಸರ್ವಮಯಾಯ ಸಹಸೇ ಓಜಸೇ ಬಲಾಯ ಕಾಂತಾಯ ಕಾಮಾಯ ನಮಸ್ತೇ ಉಭಯತ್ರ ಭೂಯಾತ್ ॥ 18 ॥**

**ಅರ್ಥ :** ಸಮಗ್ರ ಐಶ್ವರ್ಯ ಸಂಪನ್ನನೇ ! ಮನ ಆದಿ ಇಂದ್ರಿಯ ನಿಯಾ ಮಕನೇ ! ಸಕಲ ವಿಶೇಷಗಳನ್ನೂ ತಿಳಿದ ಬ್ರಹ್ಮಾದಿಗಳಿಗೆ ಆ ವಾಸವಾದ ಸ್ವರೂಪ ದೇಹವುಳ್ಳನೇ ! ಅಭಿಪ್ರಾಯಗಳು, ಸಂಸ್ಕಾರಗಳು, ಅಂತಃಕರಣ, ಅದರ ವ್ಯಾಪಾರ ಗಳು, ಬುದ್ಧಿಯ ವ್ಯಾಪಾರಗಳು, ಮನಸ್ಸು-ಬುದ್ಧಿ-ಅಹಂಕಾರಗಳ ಪ್ರಭೇದಗಳು ಇವುಗಳಿಗೆಲ್ಲ ಅಧಿಪತಿಯೂ, ಹನ್ನೊಂದು ಇಂದ್ರಿಯಗಳು ಮತ್ತು ಪಂಚ ಭೂತಗಳು ಒಟ್ಟು 16 ಕಲೆಗಳಿಗೆ ಪ್ರವರ್ತಕನೂ, ವೇದಾರ್ಥಪ್ರದಾಯಕನೂ, ಮಹಾ

ಭೋಕ್ತೃವೂ, ಮಹಾಭೋಗ್ಯನೂ, ಮುಕ್ತಿಪ್ರದನೂ, ಸರ್ವೋತ್ತಮನೂ, ಸಹಸ್ಸು-ಓಜಸ್ಸು-ಬಲ-ಕಾಂತಿಗಳಿಗೆ ಕಾರಣನೂ, ಎಲ್ಲರಿಂದ ಅಪೇಕ್ಷಿತನೂ ಆದ ನಿನಗೆ ನಮೋನಮಃ ಒಳಗೂ ಹೊರಗೂ ನಮ್ಮನ್ನು ರಕ್ಷಿಸು.

**ಲಕ್ಷ್ಮೀ :–** ಪತಿ ಎಂದರೆ ಅನ್ವರ್ಥಪತಿಯು ನೀನೇ. ಸ್ತ್ರೀಯರೂ, ಅವರ ಪತಿಗಳೂ ಅಸ್ವತಂತ್ರರು. ಸ್ವತಃ ರಕ್ಷಿಸಲು ಶಕ್ತರಲ್ಲ. ಮಕ್ಕಳು, ಧನ, ಆಯುಷ್ಯ ಗಳನ್ನು ಸ್ವತಂತ್ರವಾಗಿ ರಕ್ಷಿಸುವ ಮುಖ್ಯ ಪತಿಯು ನೀನೇ ಸರಿ. ಇಂತಹ ನಿನ್ನ ಪೂಜೆಯು ಎಲ್ಲಕ್ಕಿಂತಲೂ ಅಧಿಕವೆಂದು ಬಯಸುವವನು ಸಕಲ ಪುರುಷಾರ್ಥಗಳನ್ನೂ ಹೊಂದುವನು. ನಿಷ್ಕಾಮ ಪೂಜೆಯೇ ನಿನಗೆ ಒಪ್ಪಿಗೆ, ಅದರಿಂದಲೇ ಇಷ್ಟಾರ್ಥಸಿದ್ಧಿ. ನನ್ನ ಅನುಗ್ರಹದಿಂದ ಐಶ್ವರ್ಯವನ್ನು ಹೊಂದಲು ನಿನ್ನನ್ನು ಬಿಟ್ಟು ನನ್ನನ್ನು ಕುರಿತು ತಪಸ್ಸನ್ನು ಮಾಡುವರು. ಅಂತಹವರಿಗೆ ನಾನೆಂತಹವಳು ಎಂಬುದು ತಿಳಿದಿಲ್ಲ. ನಿನ್ನಿಂದ ಅವರಿಗೆ ಇಷ್ಟಸಿದ್ಧಿಯಾಗುವುದಿಲ್ಲ. ನಿನ್ನ ಹಸ್ತವನ್ನು ನನ್ನ ತಲೆಯ ಮೇಲಿಡು. ನನ್ನನ್ನು ಶ್ರೀವತ್ಸ ಚಿಹ್ನೆಯಾಗಿ ನಿನ್ನ ಇಚ್ಛೆಯಿಂದಲೇ ವಕ್ಷಃಸ್ಥಳದಲ್ಲಿ ಧರಿಸಿರುವೆ. ಸರ್ವೇಶ್ವರನಾದ ನಿನ್ನ ಅಭಿಪ್ರಾಯವನ್ನು ಊಹಿಸಲು ಯಾರೂ ಸಮರ್ಥರಲ್ಲ. (ಹೀಗೆ ರಮಾದೇವಿಯು ಸ್ತುತಿಸುತ್ತಿರುವಳು.)

**ರಮ್ಯಕ :–** ಇಲ್ಲಿ ಮತ್ಸ್ಯರೂಪೀಪರಮಾತ್ಮನಿರುವನು. ವೈವಸ್ವತ ಮನುವು ಇಂದಿಗೂ ಮತ್ಸ್ಯಮೂರ್ತಿಯನ್ನು ಭಕ್ತಿಯಿಂದ ಆರಾಧಿಸುತ್ತಿರುವನು.

## ಮಂತ್ರ

**ಓಂ ನಮೋ ಭಗವತೇ ಮುಖ್ಯತಮಾಯ ನಮಃಸತ್ವಾಯ ಪ್ರಾಣಾಯ ಓಜಸೇ ಬಲಾಯ ಮಹಾಮತ್ಸ್ಯಾಯ ನಮ ಇತಿ ||25||**

– ಓಂಕಾರಪ್ರತಿಪಾದ್ಯ, ಭಗವಂತ, ಜಗತ್ತಿನಲ್ಲಿ ಅತ್ಯಂತ ಪ್ರಧಾನನಿಗೆ ನಮಸ್ಕಾರ. ಸಾಧುಗುಣಸ್ವರೂಪ, ಪ್ರಕೃಷ್ಟಚೇಷ್ಟಕ, ಪ್ರಕಾಶಸ್ವರೂಪ ಮತ್ತು ಬಲಿಷ್ಠನಿಗೆ ನಮಸ್ಕಾರ ! ಮಹಾಮತ್ಸ್ಯನಿಗೆ (ಲೋಕವಿಲಕ್ಷಣ ಮತ್ಸ್ಯಮೂರ್ತಿಗೆ) ನಮಸ್ಕಾರ !

**ಹಿರಣ್ಮಯ :–** ಇಲ್ಲಿ ಕೂರ್ಮಮೂರ್ತಿಯು ಇರುವನು. ಪಿತೃಗಣಾಧಿಪತಿ ಯಾದ ಅರ್ಯಮನು ಈ ಖಂಡದ ಜನರೊಂದಿಗೆ ಈ ಕೂರ್ಮರೂಪವನ್ನು ಉಪಾಸಿ ಸುವನು.

## ಮಂತ್ರ

**ಓಂ ನಮೋ ಭಗವತೇ ಅಕೂಪಾರಾಯ ಸರ್ವಸತ್ವಗುಣ ವಿಶೇಷಣಾಯ ನೋಪಲಕ್ಷಿತಸ್ಥಾನಾಯ ಅವಷ್ಮರ್ಣೇ ಪ್ರಮಾಣಾಯ ನಮೋ ಭೂಯಸೇ ನಮೋಽವಸ್ಥಾನಾಯ ನಮಸ್ತೇ ||30||**

— ಓಂಕಾರ ಪ್ರತಿಪಾದ್ಯನೂ, ಭಗವಂತನೂ ಆದ ನಿನಗೆ ನಮಸ್ಕಾರ ! ಸಮುದ್ರದಲ್ಲಿ ಸಂಚರಿಸುವ, ಪೂರ್ಣಜ್ಞಾನಾನಂದ ಮೊದಲಾದ ಗುಣಗಳೇ ವಿಶೇಷವಾಗಿ ಉಳ್ಳ, ನೀರಿನಲ್ಲಿರುವುದರಿಂದ ಎಲ್ಲಿರುವನೆಂದು ತಿಳಿಯಲಾಗದ, ಭಕ್ತಾಭೀಷ್ಟವನ್ನು ಕರೆವ ಸ್ವಭಾವವುಳ್ಳ, ಅಪ್ರಾಕೃತದೇಹಿಯಾದ, ಚೆನ್ನಾಗಿ ಹೇಳುವ ಸಾಮರ್ಥ್ಯವುಳ್ಳ, ಅತ್ಯಂತ ದೊಡ್ಡವನಾದ, ಜಗತ್ತಿನ ಸ್ಥಿತಿಗೆ ಕಾರಣನಾದ ನಿನಗೆ ನಮಸ್ಕಾರ !

**ಉತ್ತರಕುರು :–** ಇಲ್ಲಿ ಶ್ರೀಹರಿಯು ವರಾಹರೂಪದಿಂದಿರುವನು. ಭೂದೇವಿಯು ಈ ಖಂಡದ ಜನರೊಂದಿಗೆ ಸ್ವಾಮಿಯನ್ನು ಉಪಾಸಿಸುವಳು.

## ಮಂತ್ರ

**ಓಂ ನಮೋ ಭಗವತೇ ಮಂತ್ರತತ್ತ್ವಲಿಂಗಾಯ ಯಜ್ಞಕ್ರತವೇ ಮಹೀಧರಾಯ ಮಹಾಪುರುಷಾಯ ನಮಃ ಕರ್ಮಶುಕ್ಲಾಯ ತ್ರಿಯುಗಾಯ ನಮಸ್ತೇ ಇತಿ ||35||**

— ಓಂಕಾರ ಪ್ರತಿಪಾದ್ಯ ಭಗವಂತನಿಗೆ ನಮಸ್ಕಾರ ! ಮಂತ್ರತತ್ತ್ವದ ಮೂರ್ತಿ, ಯಜ್ಞಸಂಕಲ್ಪಕ್ಕೆ ವಿಷಯನು, ಭೂಮಿಧಾರಕ, ಪುರುಷೋತ್ತಮ, ಪರಾಕ್ರಮ ಕ್ರಿಯೆಯಿಂದ ಶುದ್ಧ, ತ್ರಿಯುಗಹೂತಿಯಾದ ಭಗವಂತನಿಗೆ ನಮಸ್ಕಾರ !

## ಹದಿನೆಂಟನೆಯ ಅಧ್ಯಾಯ ಮುಗಿದುದು

**ಕಿಂಪುರುಷಖಂಡ :–** ಇಲ್ಲಿ ರಾಮದೇವನಿರುವನು. ಹನುಮಂತದೇವರು ಕಿಂಪುರುಷಖಂಡದ ನಿವಾಸಿಗಳೊಡನೆ ನಿರಂತರವಾದ ಭಕ್ತಿಯಿಂದ ಶ್ರೀರಾಮನನ್ನು ಸೇವಿಸುವರು. ಆರ್ಷ್ಟಿಷೇಣನು ಗಂಧರ್ವರೊಡನೆ ಗಾನಮಾಡುವನು. ಹನುಮಂತದೇವರು ಅದನ್ನು ಭಕ್ತಿಯಿಂದ ಕೇಳುವರು.

## ಮಂತ್ರ

**ಓಂ ನಮೋ ಭಗವತ ಉತ್ತಮ ಶ್ಲೋಕಾಯ ನಮಃ ಆರ್ಯಲಕ್ಷಣ ಶೀಲವ್ರತಾಯ ನಮಃ ಉಪಾಶ್ರಿತಾತ್ಮನೇ ನಮಃ ಉಪಾಸಿತಲೋಕಾಯ ನಮಃ ಸಾಧುವಾದನಿಕರ್ಷಣಾಯ ನಮೋ ಬ್ರಹ್ಮಣ್ಯದೇವಾಯ ಮಹಾ ಪುರುಷಾಯ ಮಹಾರಾಜಾಯ ನಮ ಇತಿ ||6||**

— ಗುಣಪೂರ್ಣ, ನಿರತಿಶಯ ಕೀರ್ತಿವಂತನಾದ ಭಗವಂತನಿಗೆ ನಮೋ ನಮಃ. ಶ್ರೀವಿಷ್ಣುವಿನ ಲಕ್ಷಣವುಳ್ಳ, ಶೀಲವಾದ ನಿತ್ಯನಿರ್ದೋಷತ್ವ ಮತ್ತು ಸತ್ಯ

ವಾದ ಜಗತ್ಸೃಷ್ಟಿಯನ್ನು ಮಾಡುವುದೆಂಬ ವ್ರತವುಳ್ಳ, ಜೀವನಿಗೆ ಆಶ್ರಯನಾದವನಿಗೆನಮಸ್ಕಾರ ! ಜನರ ಉಪಾಸ್ಯನಿಗೆ ನಮಸ್ಕಾರ ! ಸಾಧುವೆಂಬ ಒರೆಗಲ್ಲಿನಂತೆ ನಿರ್ಧಾರಕನಾದ ಶ್ರೀಹರಿಗೆ ನಮಸ್ಕಾರ ! ಬ್ರಾಹ್ಮಣಪ್ರಿಯನೂ, ಕ್ರೀಡಾದಿಗುಣ ವಿಶಿಷ್ಟನೂ ಆದವನಿಗೆ ನಮಸ್ಕಾರ ! ಸರ್ವೋತ್ತಮ ಪುರುಷನಾದ, ರಾಜೋತ್ತಮನಿಗೆ ನಮಸ್ಕಾರ !

**ಭರತವರ್ಷ :–** ಇಲ್ಲಿ ನರನಿಂದ ಸಹಿತನಾದ ನಾರಾಯಣನು ಜೀವರನ್ನು ಅನುಗ್ರಹಿಸಲು ಅದೃಶ್ಯನಾಗಿ ತಪಸ್ಸನ್ನು ಮಾಡುತ್ತಿರುವನು. ನಾರದರು ಈ ಸ್ವಾಮಿಯನ್ನು ಸೇವಿಸುತ್ತಿರುವರು.

**ಮಂತ್ರ**

**ಓಂ ನಮೋ ಭಗವತ ಉಪಶಮಶೀಲಾಯ ಉಪರತಾನಾತ್ಮ್ಯಾಯ ಅಕಿಂಚನವಿತ್ತಾಯ ಋಷಿಋಷಭಾಯ ನರನಾರಾಯಣಾಯ ಪರಮಹಂಸಾಯ ಪರಮಗುರವೇ ಆತ್ಮಾರಾಮಾಧಿಪತಯೇ ನಮೋ ನಮ ಇತಿ||**

= ಓಂಕಾರ ಪ್ರತಿಪಾದ್ಯ ಭಗವಂತನಿಗೆ ನಮಸ್ಕಾರ ! ಭಗವನ್ನಿಷ್ಠೆಯೇ ಸ್ವಭಾವವಾಗಿ ಉಳ್ಳ, ದೇಹಸಂಬಂಧವಾದ ದುಃಖಾದಿಗಳಿಲ್ಲದ, ಸ್ವಯಂ ನಿರಪೇಕ್ಷನಾಗಿ ನಿಷ್ಕಾಮಭಕ್ತರೇ ತನ್ನವರೆನ್ನುವ, ಜ್ಞಾನಿಶ್ರೇಷ್ಠನಾದ, ಪರಮಹಂಸ (ಶುದ್ಧ) ನಾದ, ಉತ್ತಮಗುರುವಾದ, ತನ್ನಲ್ಲಿಯೇ ಸಂತೋಷಪಡುವ, ಬ್ರಹ್ಮಾದಿಗಳಿಗೆ ಅಧಿಪತಿಯಾದ ನರನಾರಾಯಣನಿಗೆ ನಮಸ್ಕಾರ ! ನಮಸ್ಕಾರ !

ಸೃಷ್ಟ್ಯಾದಿ ಕರ್ತನಾಗಿ, ದೇಹಗಳಲ್ಲಿದ್ದರೂ ನಿರ್ದೋಷಿಯಾಗಿ, ಸಾಕ್ಷಿಯಾಗಿರುವ ನಿನಗೆ ನಮಸ್ಕಾರ ! ಮರಣಕಾಲದಲ್ಲಿ ನಿನ್ನಲ್ಲಿಯೇ ಮನಸ್ಸನ್ನಿಟ್ಟು ದೇಹತ್ಯಾಗ ಮಾಡುವುದೇ ಧ್ಯಾನಯೋಗದ ನೈಪುಣ್ಯವೆಂದು ಬ್ರಹ್ಮದೇವರು ಹೇಳುವರು. ಅಜ್ಞಾನಿಗಳು ಮಡದಿ ಮಕ್ಕಳೇ ಮುಂತಾದವರನ್ನು ಚಿಂತಿಸುತ್ತಾ ಸಾಯಲು ಹೆದರುವಂತೆ ಅಪರೋಕ್ಷ ಜ್ಞಾನಿಯೂ ಹೆದರಿದರೆ ಅವನ ಶಾಸ್ತ್ರವ್ಯಾಸಂಗ ಮತ್ತು ಯೋಗಾಭ್ಯಾಸ ಪ್ರಯತ್ನಗಳು ಕೇವಲ ಶ್ರಮಗಳನ್ನು ಕೊಡ ತಕ್ಕವೇ ಹೊರತು ಫಲಕಾರಿಗಳಲ್ಲ. ಅಧೋಕ್ಷಜನೇ ! ಅಹಂ ಮಮತೆಗಳು ಮೋಕ್ಷಕ್ಕೆ ಪ್ರತಿಬಂಧಕಗಳು. ಹರಿಯ ಧ್ಯಾನ ನೈಪುಣ್ಯವೇ ಮೋಕ್ಷಕ್ಕೆ ಆವಶ್ಯಕ. ನಿನ್ನಲ್ಲಿ ಭಕ್ತಿಯಿಂದ ಅಭಿವೃದ್ಧವಾದ ಜ್ಞಾನ, ಧ್ಯಾನ ಮತ್ತು ಮೋಕ್ಷೋಪಾಯವೆಂಬ ಆ ಯೋಗದ ನೈಪುಣ್ಯವನ್ನು ನಮಗೆ ವಿಶೇಷವಾಗಿ ಕರುಣಿಸು. (ಹೀಗೆ ನಾರದರು ಗಾನಮಾಡುವರು.)

## ಉಗಾಭೋಗ

1) ನಿನ್ನ ಧ್ಯಾನವನ ಕೊಡು ಎನ್ನ ಧನ್ಯನ ಮಾಡು । ಪನ್ನಂಗಶಯನ ಶ್ರೀಪುರಂದರವಿಠಲ ॥ ೧ ॥

2) ನಿನ್ನ ಧ್ಯಾನದ ಶಕ್ತಿಯ ಕೊಡು । ಅನ್ಯರಲಿ ವಿರಕ್ತಿಯ ಕೊಡು । ನಿನ್ನ ನೋಡುವ ಯುಕ್ತಿಯ ಕೊಡು । ನಿನ್ನ ಪಾಡುವ ಭಕ್ತಿಯ ಕೊಡು । ನಿನ್ನ ಹತ್ತೆ ಬರುವ ಸಂಪತ್ತಿಯ ಕೊಡು । ಚಿತ್ತದಿ ತತ್ತ್ವದ ಕೃತ್ಯವ ತೋರು। ಮತ್ತೆ ತುದಿಯಲಿ ಎನಗೆ ಮುಕ್ತಿ ಕೊಡು । ಅತ್ತತ್ತ ಮಾಡ್ಡೆ ಭವಕತ್ತಲೆ ಎನಗೆ ಮುತ್ತಿದೆ ಹಯವದನ ॥ ೧ ॥

**ಶುಕ :–** ಭರತಖಂಡದಲ್ಲಿಯೂ ಅನೇಕ ನದಿಗಳೂ, ಪರ್ವತಗಳೂ ಇವೆ. ಅವುಗಳ ನಾಮ ಸಂಕೀರ್ತನೆ ಮಾಡುವವರು ಪಾವನರಾಗುವರು ಈ ಖಂಡದಲ್ಲಿ ಹುಟ್ಟಿದ ಜನರು ಸಾತ್ವಿಕ, ರಾಜಸ, ತಾಮಸಗಳೆಂಬ ತಮ್ಮ ಪ್ರಾರಬ್ಧಕರ್ಮಗಳಿಂದ ಶ್ರೀಹರೀಚ್ಛೆಯಂತೆ ಎಷ್ಟೋ ಬಾರಿ ಕ್ರಮವಾಗಿ ಸ್ವರ್ಗ, ಭೂಮಿ ಮತ್ತು ನರಕ ವಾಸಗಳನ್ನು ಹೊಂದುವರು. ಇಲ್ಲಿನ ಜನರಿಗೆ ವರ್ಣಾಶ್ರಮ ಧರ್ಮಾನುಸಾರ ಮೋಕ್ಷವೂ ದೊರೆಯುವುದು. ಹರಿಭಕ್ತರ ಸಂಗ ದೊರೆತಾಗ ಅವಿದ್ಯಾ ಗ್ರಂಥಿಯು ಸುಟ್ಟು ಹೋಗುವುದು. ಈ ಖಂಡದಲ್ಲಿಯೇ ಮೋಕ್ಷ ಸಾಧನೆಯನ್ನು ಮಾಡಬೇಕು. ಮೋಕ್ಷ ಪ್ರದನು ವಾಸುದೇವನು. ಅವನಲ್ಲಿ ನಿಷ್ಕಾಮಭಕ್ತಿಯನ್ನು ಚೆನ್ನಾಗಿ ಸಂಪಾದಿಸಬೇಕು.

ಎರಡನೆಯ ಸ್ಕಂಧದ ತಾತ್ಪರ್ಯ ಬ್ರಹ್ಮಪುರಾಣದಲ್ಲಿ ಹೀಗೆ ಹೇಳಿದೆ :– ಸ್ವರ್ಗ ದಲ್ಲಿರುವ ದೇವತೆಗಳಿಗೆ ಒಂದು ಮನ್ವಂತರಕಾಲ ಆಯುಷ್ಯ. ಮಹರ್ಲೋಕದಲ್ಲಿರುವ ವರಿಗೆ ಬ್ರಹ್ಮದೇವರ ಒಂದು ದಿನದ ಆಯುಷ್ಯ. ಜನೋಲೋಕ, ತಪೋಲೋಕ, ಸತ್ಯ ಲೋಕಗಳಲ್ಲಿರುವವರಿಗೆ ಬ್ರಹ್ಮದೇವರು ಮುಕ್ತಿಗೆ ಹೋಗುವವರೆಗೂ ಆಯುಷ್ಯ.

ಕಾಮ್ಯಕರ್ಮಗಳಿಂದ ದೊರೆಯುವ ಸ್ವರ್ಗದಲ್ಲಿ ವಿಷಯ ಭೋಗವಿದೆಯಾಗಿ ಹರಿ ಸ್ಮರಣೆಯು ಆಗ ಬರುವುದಿಲ್ಲ. ಆದ್ದರಿಂದ ತುಚ್ಛವಾದ ಸುಖವನ್ನು ಕೊಡುವ ಸ್ವರ್ಗ ದಿಂದ ಪ್ರಯೋಜನವಿಲ್ಲ. ಮಹರ್ಲೋಕದಲ್ಲಿರುವ ಜೀವರು ದೀರ್ಘಾಯಷ್ಮಂತ ರಾದರೂ ಮತ್ತೆ ಸಂಸಾರಕ್ಕೆ ಬರಬೇಕು. ಇದಕ್ಕಿಂತ ಅಲ್ಪ ಆಯುಷ್ಯವುಳ್ಳ ಭಾರತ ಭೂಮಿಯಲ್ಲಿ ಹುಟ್ಟುವುದೇ ಉತ್ತಮ. ಇಲ್ಲಿ ಹುಟ್ಟಿದ ಯೋಗಿಗಳು ಅಲ್ಪಾಯುಷ್ಯ ವುಳ್ಳ, ನಶ್ವರವಾದ ದೇಹದಿಂದ ಮಾಡಿದ ಕರ್ಮಗಳನ್ನು ಶ್ರೀಹರಿಗೆ ಭಕ್ತಿಯಿಂದ ಸಮರ್ಪಿಸಿ, ಪುನರ್ಜನ್ಮ ಭಯವಿಲ್ಲದ ಮೋಕ್ಷವನ್ನು ಹೊಂದಿ ಶಾಶ್ವತ ಸುಖವನ್ನು

ಅನುಭವಿಸುವರು. ಸ್ವರ್ಗದಲ್ಲಿರುವ ಪುಣ್ಯಾತ್ಮರು ಮೋಕ್ಷ ಸಾಧನೆಗಾಗಿ ಭರತಖಂಡ ದಲ್ಲಿ ಹುಟ್ಟಬೇಕೆಂದು ಬಯಸುವರು. ಇಂದ್ರಾದಿ ದೇವತೆಗಳು ತಮಗೆ ಆನಂದಾ ತಿಶಯಕ್ಕಾಗಿ ಭರತಖಂಡದಲ್ಲಿ ಹುಟ್ಟಬೇಕೆಂದು ಬಯಸುತ್ತಾರೆ.

### ಅಟತಾಳ ಸುಳಾದಿ

ಭರತಖಂಡದಿ ಜನ್ಮ ಬರುವುದೇ ದುರ್ಲಭ । ಮಾರುತ ಮತವು ಮತ್ತೆ ಮತ್ತೆ ತಾ ದುರ್ಲಭ । ಮರುಳೆ ನೀನು ಆವ ಜನುಮದಲ್ಲಿ ಲೇಶ । ಹರಿಕೃಪೆ ಪಡದೆಯೋ ಮತ್ತರಿಯೆ ಆ ಕಾರಣ । ಧರೆಯೊಳಗೆ ನಿನಗಿಂಥ ವರದೈಷ್ಣವ ಜನುಮ । ದೊರೆಯ ಲಾಯಿತು ಕಂಡ್ಯ ಸ್ಥಿರವೆಂದು ಈ ದೇಹ । ನೆರೆ ನಂಬದಿರು ಮುಂದೆ ದೊರೆವುದು ದುಸ್ತರ । ಸಿರಿರಮಣನು ಹೃತ್ಸರಸಿಜ ಮಧ್ಯದಿ । ಪರಮೇಷ್ಠಿ ಪವಮಾನ ಹರ ಮುಖ್ಯ ಸುರರಿಂದ । ನಿರತ ಕೊಳುತ ಸೇವೆ ಮೆರೆವ ಎಲ್ಲ ಕಾಲ । ಕರಣಗಳಲ್ಲಿಹರು ಸುಕರು ತಮ್ಮ ತಮ್ಮ । ಪರಿಪರಿ ಸ್ವೋಚಿತ ಆಚರಿಸಿ ಸಾಧನ । ಮಾರುತಾಂತರ್ಗತನ ಸುಚರಣಕರ್ಪಿಸುವರು । ಇರುತಿಪ್ಪ ರೀತೆರ ಖಳರು ತಿಳಿಯೆ ಪಾಪ ಪುರುಷನೇ ಮೊದ ಲಾದ ಪರಿಪರಿ ನಾಮದಿ। ಧರೆಯೊಳು ನರರು ಸಜ್ಜನರ ಸೇವೆಯ ಮಾಡೆ । ಒರೆವರೀ ವಿವರವ ಸ್ಥಿರಗೊಂಡು ಅನುಗಾಲ । ಶರೀರಂತಸ್ಥಿತ ನರಹರಿಯ ಸ್ಮರಿಸುತಲಿ । ಇರುತಿಪ್ಪ ಖಳರೊಳು ಅರಿದು ಮೊದಲಿಗನ । ನಿರತ ದಹಿಸಲು ಸಂಕರ್ಷಣನನ್ನೇ ಅಹರಹರ್ । ಮೊರೆ ಹೊಕ್ಕರೆಯು ಪತಿಕರಿಸಿ ಬಿನ್ನಹವನು।ಸರಿಸಿ ಪಾಲಿಪ ಈಪರಿ ಕಂಡು ಮತ್ತೆ ಉರವರಿತರು ಎಲ್ಲ ಚದುರಿ ಪೋಪರು ಕೇಳು. । ಹರುಷ ಪುಟ್ಟುವುದು ದುಸ್ತರವಲ್ಲ ಕಾಣೆಲೊ । ಗುರುಗಳ ಕರುಣದಿ ದೊರೆವುದು ಸತ್ಪುಣ್ಯ । ಸುರರೊಲಿ ವರು ಅರಘಳಿಗೆ ನಿಶ್ಚಿತನಾಗಿ । ಕರಿವರದನ ನಿಜಚರಣವ ನೆರೆ ನಂಬು। ಗರುಡಗಮನ ಲಕ್ಷ್ಮೀಪತಿವಿಠಲನು ನಿಜ । ಶರಣರ ರಕ್ಷಕನೆಂಬ ಬಿರುದ ವಹಿಸಿಪ್ಪ ॥೪॥

ಜಂಬೂ ದ್ವೀಪದಲ್ಲಿ ಸಗರ ಪುತ್ರರು ನೆಲವನ್ನು ಅಗೆದಿದ್ದರಿಂದ ಎಂಟು ಉಪ ದ್ವೀಪಗಳಾದುವೆಂದು ಕೆಲವರು ಹೇಳುತ್ತಾರೆ. ಸ್ವರ್ಣಪ್ರಸ್ಥ, ಚಂದ್ರಶುಕ್ಲ, ಆ ವರ್ತನ, ರಮಣಕ, ಮುದಾಹರಣ, ಪಾಂಚಜನ್ಯ, ಸಿಂಹಳ ಮತ್ತು ಲಂಕೆ ಎಂದು ಎಂಟು ಉಪದ್ವೀಪಗಳ ಹೆಸರು. ರಾಜನೇ ! ನಮ್ಮ ಗುರುಗಳ ಉಪದೇಶವನ್ನನುಸರಿಸಿ ನಿನಗಾಗಿ ಜಂಬೂದ್ವೀಪದಲ್ಲಿರತಕ್ಕ ಖಂಡಗಳನ್ನು ವರ್ಣಿಸಿರುವೆನು,

### ಹತ್ತೊಂಭತ್ತನೆಯ ಅಧ್ಯಾಯ ಮುಗಿದುದು

ಶುಕ : ಏಳುದ್ವೀಪಗಳಲ್ಲಿ ಪ್ಲಕ್ಷಾದಿ ಆರು ದ್ವೀಪಗಳ ಅಳತೆ, ಲಕ್ಷಣ ಮತ್ತು ಆಕಾರಗಳನ್ನು ಸಂಕ್ಷೇಪವಾಗಿ ಹೇಳುವೆನು ಕೇಳು :–

**ಪ್ಲಕ್ಷದ್ವೀಪ :** ಇದು ಲವಣ ಸಮುದ್ರವನ್ನು ಆವರಿಸಿ ಎರಡು ಲಕ್ಷ ಯೋಜನಗಳ ಅಳತೆ ಉಳ್ಳದ್ದಾಗಿದೆ ಇದರ ಸುತ್ತಲೂ ಇಕ್ಷು ಸಮುದ್ರವಿದೆ. ಈ ದ್ವೀಪದಲ್ಲಿ ಬಂಗಾರದ ಪ್ಲಕ್ಷ (ಬಸುರಿ) ಹೆಮ್ಮರವಿದೆ. ಆದ್ದರಿಂದಲೇ ಈ ದ್ವೀಪಕ್ಕೆ ಆದೇ ಹೆಸರಿದೆ. ಈ ದ್ವೀಪದಲ್ಲಿ ಏಳು ನಾಲಗೆಗಳುಳ್ಳ ಅಗ್ನಿದೇತೆಯು ಶ್ರೀ ಹರಿಯನ್ನು ಉಪಾಸಿಸುತ್ತಿರುವನು. ಪ್ರಿಯವ್ರತಸುತನಾದ ಇಧ್ಮಜಿಹ್ವನು ಈ ದ್ವೀಪಕ್ಕೆ ಅಧಿಪತಿಯಾಗಿರುವನು. ಅವನಿಗೆ ಏಳು ಮಂದಿ ಪುತ್ರರು. ಈ ದ್ವೀಪವನ್ನು ಏಳು ಖಂಡಗಳಾಗಿ ವಿಭಾಗಿಸಿ ಅವರಿಗೆ ಇಧ್ಮಜಿಹ್ವನು ಹಂಚಿರುವನು. ಶಿವ, ಯಶಸ್ಯ, ಭದ್ರ, ಶಾಂತ. ಕ್ಷೇಮ, ಅಮೃತ ಮತ್ತು ಅಭಯ ಎಂದು ಆ ಖಂಡಗಳ ಹೆಸರುಗಳು. ಇಲ್ಲಿ ಮಣಿಕೂಟ, ವಜ್ರಕೂಟಾದಿ ಏಳು ಪರ್ವತಗಳಿವೆ. ಇವು ಗಡಿ ಪರ್ವತಗಳಾಗಿವೆ. ಅರುಣೆ, ಅನುಗುಣೆ ಇತ್ಯಾದಿ ಏಳು ಮಹಾನದಿಗಳಿವೆ. ಹಂಸ, ಪತಂಗ, ಗೋಧ್ಯಾಯನ ಮತ್ತು ಸತ್ಯಾಂಗ ಎಂದು ಹೆಸರುಳ್ಳ ನಾಲ್ಕು ವರ್ಣಗಳಿವೆ. ಅಲ್ಲಿರುವ ಜನರು ಸಾವಿರ ವರ್ಷ ಆಯುಷ್ಯವುಳ್ಳವರು. ವೇದತ್ರಯಗಳಿಂದ ಸೂರ್ಯಾಂತರ್ಗತ ಪರಮಾತ್ಮನನ್ನು ಈ ಮಂತ್ರದಿಂದ ಭಜಿಸುತ್ತಾರೆ.

**ಮಂತ್ರ**

**ಪ್ರತ್ನಸ್ಯ ವಿಷ್ಣೋರ್ಯದ್ರೂಪಂ ಯತ್ಸತ್ಯಸ್ಯ ಬ್ರಹ್ಮಣಃ |**
**ಅಮೃತಸ್ಯ ಚ ಮೃತ್ಯೋಶ್ಚ ಸೂರ್ಯಮಾತ್ಮಾನಮೀಮಹಿ ||5||**

ಅರ್ಥ :- ಪುರಾತನನೂ, ವ್ಯಾಪ್ತನೂ ಆದ ಶ್ರೀಹರಿಗೆ ಸೂರ್ಯನು ಪ್ರತಿಮೆಯಾಗಿರುವನು. ವಾಚಿಕ, ಕಾಯಕ ಸುಕೃತಕ್ಕೆ ಪ್ರೇರಕರಾದ ಬ್ರಹ್ಮದೇವರಲ್ಲಿ ಶ್ರೀಹರಿಯು ಸಂನಿಧಾನವಿಟ್ಟರುವನು. ದುಷ್ಟರಸಮೂಹಕ್ಕೆ ಮಾರಕರಾದ ರುದ್ರದೇವರಲ್ಲಿಯೂ ಸಂನಿಹಿತನಾಗಿರುವನು. ಹೀಗೆ ಸೂರ್ಯ, ಬ್ರಹ್ಮಾ ಮತ್ತು ರುದ್ರ ಈ ತ್ರಿಮೂರ್ತಿಗಳಲ್ಲಿ ವಾಸಿಸುವವನೂ, ಸೂರ್ಯಮಂಡಲದಲ್ಲಿಯೂ ಇದ್ದು ಸೂರಿಗಳಿಗೆ ಅಂದರೆ ಜ್ಞಾನಿಗಳಿಗೆ ಗಮ್ಯನಾದ್ದರಿಂದ ಸೂರ್ಯನಾಮಕನೂ, ಆದಾನಾದಿ ಕರ್ತನೂ ಆದ ಶ್ರೀಹರಿಯನ್ನು ಶರಣು ಹೊಂದುತ್ತೇನೆ.

ಪ್ಲಕ್ಷಾದಿ ಆರು ದ್ವೀಪಗಳಲ್ಲಿರತಕ್ಕ ಜನರೆಲ್ಲರೂ ಆಯುಷ್ಯ, ಇಂದ್ರಿಯಶಕ್ತಿ, ಪ್ರಕಾಶ, ಸಹನಶಕ್ತಿ, ಬಲ, ಬುದ್ಧಿ ಮತ್ತು ಪರಾಕ್ರಮಗಳಲ್ಲಿ ಸಮಾನರಾಗಿರುವರು.

**ಶಾಲ್ಮಲಿದ್ವೀಪ :-** ಇದು ನಾಲ್ಕು ಲಕ್ಷ ಯೋಜನಗಳ ವಿಸ್ತಾರ. ಸುರಾ ಸಮುದ್ರದಿಂದ ಆವೃತವಾಗಿದೆ. ಇಲ್ಲಿ ಶಾಲ್ಮಲಿ (ಬೂರಗ) ಹೆಮ್ಮರವಿದೆ. ಇದರಲ್ಲಿ ಗರುಡದೇವರ ಗೂಡು ಇದೆ. ಪ್ರಿಯವ್ರತ ಪುತ್ರ ಯಜ್ಞಬಾಹುವು ಇದಕ್ಕೆ ಅಧಿಪತಿ.

ಸುರೋಚನ, ಸೌಮನಸ್ಯ, ಮೊದಲಾದ ಏಳುಮಂದಿ ಅವನಿಗೆ ಪುತ್ರರು. ಆ ರಾಜನು ಈ ಖಂಡವನ್ನು ಏಳುಭಾಗ ಮಾಡಿ ಏಳು ಮಕ್ಕಳಿಗೆ ಹಂಚಿರುವನು. ಬಳಿಕ ಅವನು ಹರಿಯಲ್ಲಿ ಆಸಕ್ತನಾದನು. ಸುರಸ, ಶತಶೃಂಗ ಮೊದಲಾದ ಏಳು ಪ್ರಧಾನ ಪರ್ವತ ಗಳಿವೆ. ಅನುಮತೀ, ಸಿಥೀವಾಲಿ ಇತ್ಯಾದಿ ಹೆಸರಿನ ಏಳು ನದಿಗಳಿವೆ. ಶ್ರುತಧರ, ವೀರ್ಯಧರ, ವಸುಂಧರ ಮತ್ತು ಊರ್ಧ್ವಧರ ಎಂಬ ನಾಲ್ಕು ವರ್ಣಗಳಿವೆ. ಈ ನಾಲ್ಕು ವರ್ಣದವರೂ ಸೋಮಾಂತರ್ಯಾಮಿ ಸೋಮನಾಮಕ ಪರಬ್ರಹ್ಮನನ್ನು ಉಪಾಸಿಸುವರು.

## ಮಂತ್ರ

**ಸ್ವಗೋಭಿಃ ಪಿತೃದೇವೇಭ್ಯೋ ವಿಭಜನ್ ಕೃಷ್ಣಶುಕ್ಲಯೋಃ ।**
**ಅಂಧಃಪ್ರಜಾನಾಂ ಸರ್ವಾಸಾಂ ರಾಜಾ ನಃಸೋಮಮಸ್ತ್ವಿತಿ ॥೧೨॥**

ಅರ್ಥ :- ಚಂದ್ರಾಂತರ್ಯಾಮಿಯಾದ ಶ್ರೀಹರಿಯು ತನ್ನ ಅಮೃತಕಿರಣ ಗಳಿಂದ ಪಿತೃದೇವತೆಗಳಿಗೆ ಕೃಷ್ಣಪಕ್ಷದಲ್ಲಿಯೂ, ದೇವತೆಗಳಿಗೆ ಶುಕ್ಲರಕ್ಷದಲ್ಲಿಯೂ ಸೋಮರಸವೆಂಬ ಆಹಾರವನ್ನು ವಿಭಾಗಿಸಿಕೊಟ್ಟು ಸಂತೋಷಪಡಿಸುವನು. ಅವನು ನಮಗೂ, ಎಲ್ಲರಿಗೂ ಸಂತೋಷವನ್ನುಂಟುಮಾಡಲಿ,

**ಕುಶದ್ವೀಪ :** ಇದು ಎಂಟು ಲಕ್ಷ ಯೋಜನಗಳ ವಿಸ್ತಾರವಾಗಿದೆ. ಅದರ ಸುತ್ತಲೂ ಘೃತೋದ ಸಮುದ್ರವಿರುವುದು. ಈ ದ್ವೀಪಕ್ಕೆ ಕುಶವೆಂದು ಹೆಸರಿಟ್ಟ ದೇವತೆಗಳು ಇಲ್ಲಿ ದರ್ಭೆಯ ಹುಲ್ಲನ್ನು ಸೃಷ್ಟಿಸಿರುವರು. ಪ್ರಿಯವ್ರತನ ಮಗ ಹಿರಣ್ಯರೇತಸ್ಸು ಈ ದ್ವೀಪದ ಅಧಿಪತಿ. ಇವನಿಗೆ ವಸುದಾನ, ದೃಢರುಚಿ ಇತ್ಯಾದಿ ಏಳು ಮಂದಿ ಪುತ್ರರು. ಈ ದ್ವೀಪವನ್ನು ಅವನು ಏಳು ಖಂಡಗಳಾಗಿ ಮಾಡಿ ಮಕ್ಕಳಿಗೆ ಹಂಚಿರುವನು ಇಲ್ಲಿನ ಗಡಿ ಪರ್ವತಗಳು ಚಕ್ರ, ಚತುಃಶೃಂಗಾದಿ ಏಳು ನಾಮಕಗಳು ಳ್ಳವು. ರಸಕುಲ್ಯೆ, ಮಧುಕುಲ್ಯೆ ಇತ್ಯಾದಿ ನಾಮದ ಏಳು ಪ್ರಧಾನ ನದಿಗಳಿವೆ. ಕುಶಲ, ಕೋವಿದ, ಅಭಿಯುಕ್ತ ಮತ್ತು ಕುಲಕ ಎಂಬ ನಾಲ್ಕು ವರ್ಣದವರೂ ಅಗ್ನ್ಯಂತರ್ಯಾಮಿ ಹರಿಯನ್ನು ಉಪಾಸಿಸುವರು.

## ಮಂತ್ರ

**ಪರಸ್ಯ ಬ್ರಹ್ಮಣಃ ಸಾಕ್ಷಾಜ್ಜಾತವೇದೋಽಸಿ ಹವ್ಯವಾಟ್ ।**
**ದೇವಾನಾಂ ಪುರುಷಾಂಗಾನಾಂ ಯಜ್ಞೇನ ಪುರುಷಂ ಯಜ ॥೧೭॥**

– ಸರ್ವಜ್ಞನಾದ ಅಗ್ನಿನಾಯಕ ಹರಿಯೇ ! ನೀನು ಸಾಕ್ಷಾತ್ ನಾರಾಯಣ ನಿಗಾಗಿ ಹವಿಸ್ಸನ್ನು ತೆಗೆದುಕೊಂಡು ಹೋಗುವೆ. ಶ್ರೀಹರಿಯಾದ ನಿನ್ನ ಅಂಗ

ಗಳನ್ನು ಆಶ್ರಯಿಸಿರುವ ದೇವತೆಗಳಿಗೂ ನೀನೇ ಹವಿಸ್ಸನ್ನು ತಲುಪಿಸುವವನು. ನೀನು ನಮ್ಮಲ್ಲಿದ್ದು ಯಾಗದಿಂದ ನಿನ್ನನ್ನು ಪೂಜಿಸುವಂತೆ ಮಾಡು.

**ಕ್ರೌಂಚದ್ವೀಪ :–** ಇದು 16 ಲಕ್ಷ ಯೋಜನ ವಿಸ್ತೀರ್ಣವುಳ್ಳದ್ದು. ಇದರ ಸುತ್ತಲೂ ಮೊಸರಿನ ಸಮುದ್ರವಿದೆ. ಕ್ರೌಂಚವೆಂಬ ದೊಡ್ಡ ಪರ್ವತವು ಈ ದ್ವೀಪದಲ್ಲಿರುವುದರಿಂದ ಇದಕ್ಕೂ ಅದೇ ಹೆಸರು ಬಂದಿದೆ. ಪ್ರಿಯವ್ರತ ಪುತ್ರ ಘೃತಪೃಷ್ಠನು ಆಳಿ, ಇದನ್ನು ಏಳು ವಿಭಾಗ ಮಾಡಿ ಆಮ, ಮಧ್ಯ ಇತ್ಯಾದಿ ಹೆಸರುಳ್ಳ ಏಳುಮಂದಿ ಪುತ್ರರಿಗೆ ಹಂಚಿ ಹರಿಯನ್ನು ಸೇರಿದನು. ಇಲ್ಲಿನ ಏಳು ಪರ್ವತಗಳು ಶುಕ್ಲ, ವರ್ಧಮಾನ ಇತ್ಯಾದಿ ಏಳು ನಾಮುಗಳುಳ್ಳವು. ಅಭಯಾ, ಅಮೃತಾಘೇ ಇತ್ಯಾದಿ ನಾಮಕಗಳಾದ ಏಳು ಪ್ರಧಾನನದಿಗಳು ಹರಿಯತ್ತಿವೆ. ಗುರು, ಋಷಭ, ದ್ರವಿಣ ಮತ್ತು ದೇವ ಎಂಬ ನಾಲ್ಕು ವರ್ಣದವರೂ ನೀರಿನ ಅಧಿದೇವತೆಯಾದ ವರುಣಾಂತರ್ಯಾಮಿ ಶ್ರೀಹರಿಯನ್ನು ಅರ್ಘ್ಯವಿತ್ತು ಸೇವಿಸುವರು.

## ಮಂತ್ರ

**ಆಪಃ ಪುರುಷವೀರ್ಯಾಶ್ಚ ಪುನಂತೀರ್ಭೂರ್ಭುವಃ ಸುವಃ ।**
**ತಾ ನಃ ಪುನೀಯುರಘುಘ್ನೀಃ ಸಂಸ್ಪೃಶೇ ತಾತ್ಮನಾ ಭವ ॥23॥**

– ನೀರಿನಲ್ಲಿರುವ ಶ್ರೀಹರಿಯ ರೂಪಗಳು ಅವನ ರೇತಸ್ಸಾಗಿರುವುವು. ನೀರು ಆ ರೂಪಗಳಿಂದ ನಿಯಮ್ಯವಾಗಿರುವುದು. ಆ ರೂಪಗಳು ಮೂರು ಲೋಕಗಳನ್ನೂ ಪಾವನ ಮಾಡುವುವು. ಪಾಪಗಳನ್ನು ಹೋಗಲಾಡಿಸುವುವು. ಶುದ್ಧಿ ಮತ್ತು ಮೋಕ್ಷಕ್ಕಾಗಿ ದೇಹದೊಳಗೆ ಹೊರಗೆ ಸೇವಿಸಲ್ಪಡುವುವು. ಅವು ನಮ್ಮನ್ನು ಪವಿತ್ರಗೊಳಿಸಲಿ.

**ಶಾಕದ್ವೀಪ :** ಇದು 32 ಲಕ್ಷ ಯೋಜನ ವಿಸ್ತಾರ. ಅದರ ಸುತ್ತಲೂ ಕ್ಷೀರ ಸಮುದ್ರವಿದೆ. ಅಲ್ಲಿ ಶಾಕವೆಂಬ ಹೆಮ್ಮರವಿದೆ. ಪ್ರಿಯವ್ರತನ ಪುತ್ರ ಮೇಧಾತಿಥಿಯು ಅದಕ್ಕೆ ಅಧಿಪತಿ. ಪುರೋಜವ, ಮನೋಜವ ಮೊದಲಾದ ಹೆಸರಿನ ಏಳುಮಂದಿ ಅವನ ಪುತ್ರರು. ಅವರು ತಂದೆಯು ಹಂಚಿಕೊಟ್ಟ ಏಳು ಖಂಡಗಳನ್ನು ಆಳುತ್ತಿರುವರು. ಈಶಾನ, ಉರುಶೃಂಗ ಇತ್ಯಾದಿ ಏಳು ಪ್ರಧಾನ ಪರ್ವತಗಳು. ಅನಘೇ, ಆಯುರ್ದೆ ಇತ್ಯಾದಿ ನಾಮಕ ಏಳು ಪ್ರಧಾನ ನದಿಗಳು. ಧೃತವ್ರತ, ಸತ್ಯವ್ರತ, ದಾನವ್ರತ ಮತ್ತು ಅನುವ್ರತ ಎಂಬ ನಾಲ್ಕು ವರ್ಣದವರು ವಾಯ್ವಂತರ್ಯಾಮಿ ವಾಯುನಾಮಕ ಶ್ರೀಹರಿಯನ್ನು ಪಾಸಿಸುವರು.

### ಮಂತ್ರ

**ಅಂತಃಪ್ರವಿಶ್ಯ ಭೂತಾನಿ ಯೋ ಬಿಭರ್ತ್ಯಾತ್ಮಕೇತುಭಿಃ ।**
**ಅಂತರ್ಯಾಮೀಶ್ವರಃ ಸಾಕ್ಷಾತ್ಪಾತು ನೋ ಯದ್ವಶೇ ಇದಂ ॥29॥**

– ವಾಯ್ವಂತರ್ಗತನಾದ ಶ್ರೀಹರಿಯು ಪ್ರಾಣಿಗಳ ಒಳಹೊಕ್ಕು ತನ್ನ ಪ್ರಾಣಾದಿ • ಸ್ವರೂಪಗಳಿಂದಲೂ, ಪ್ರಾಣಾದಿ ನಿಯಾಮಕರೂಪಗಳಿಂದಲೂ, ವ್ಯಾಪಾರಗಳಿಂದಲೂ ಅವರನ್ನು ಧರಿಸಿರುವನು. ಈ ಜಗತ್ತೆಲ್ಲ ಅವನ ಅಧೀನವೇ. ಅಂತಹ ಶ್ರೇಷ್ಠನೂ, ವಾಯ್ವಂತರ್ಯಾಮಿಯೂ, ಸಾಕ್ಷಾನ್ನಿಯಾಮಕನೂ ಆದ ಶ್ರೀ ಹರಿಯು ನಮ್ಮನ್ನು ಕಾಪಾಡಲಿ.

**ಪುಷ್ಕರದ್ವೀಪ :** ಇದು 64 ಲಕ್ಷ ಯೋಜನಗಳ ವಿಸ್ತಾರ. ಇದರ ಸುತ್ತಲೂ ಸಿಹಿನೀರಿನ ಸಮುದ್ರವಿದೆ. ಈ ದ್ವೀಪದಲ್ಲಿ ಹತ್ತು ಸಾವಿರ ಬಂಗಾರದ ದಳಗಳುಳ್ಳ ಅತಿ ಹಿರಿಯದಾದ ಕಮಲವಿದೆ. ಇದು ಬ್ರಹ್ಮದೇವರಿಗೆ ಅಧಿಕ ಪೀಠವಾಗಿ ಸೃಷ್ಟ ವಾಗಿದೆ. ಹತ್ತು ಸಾವಿರ ಯೋಜನಗಳ ಎತ್ತರ ಮತ್ತು ಗಾತ್ರವುಳ್ಳ ಮಾನಸೋತ್ತರ ವೆಂಬ ಒಂದೇ ಪರ್ವತವು ಈ ದ್ವೀಪದ ಮಧ್ಯಭಾಗದಲ್ಲಿದ್ದು ಒಳಹೊರ ಖಂಡಗಳನ್ನು ವಿಭಾಗಿಸುವ ಎಲ್ಲೆಯ ಪರ್ವತವಾಗಿದೆ. ಈ ಪರ್ವತದ ಮೇಲೆ ನಾಲ್ಕು ದಿಕ್ಕು ಗಳಲ್ಲಿಯೂ ಇಂದ್ರ, ಯಮ. ವರುಣ ಮತ್ತು ಕುಬೇರರೆಂಬ ಲೋಕಪಾಲಕರ ನಾಲ್ಕು ಪಟ್ಟಣಗಳಿವೆ. ಮಾನಸೋತ್ತರ ಪರ್ವತದ ಮೇಲ್ಭಾಗದಲ್ಲಿ ಮೇರುವನ್ನು ಸುತ್ತುವ ಸೂರ್ಯರಥದ, ಸಂವತ್ಸರ ಸೂಚಕವಾದ, ಸಂವತ್ಸರಾತ್ಮಕ ಚಕ್ರವು ಅಹೋರಾತ್ರಿ ಸುತ್ತಾಡುತ್ತದೆ. ಈ ದ್ವೀಪಕ್ಕೆ ಅಧಿಪತಿಯಾಗಿದ್ದ ಪ್ರಿಯವ್ರತನ ಪುತ್ರ ವೀತಿ ಹೋತ್ರನು ರಮಣ ಮತ್ತು ಧಾತಕಿ ಎಂಬ ತನ್ನಿಬ್ಬರು ಮಕ್ಕಳಿಗೆ ಎರಡು ಖಂಡ ಗಳನ್ನೂ ಹಂಚಿಕೊಟ್ಟು ಧ್ಯಾನಂಗತನಾಗಿರುವನು. ಅಲ್ಲಿನ ನಿವಾಸಿಗಳು ಬ್ರಹ್ಮಾಂತ ರ್ಯಾಮಿ ಶ್ರೀ ನಾರಾಯಣ ದೇವರನ್ನು ಆರಾಧಿಸುವರು.

### ಮಂತ್ರ

**ಯತ್ತತ್ಕರ್ಮಮಯಂ ಲಿಂಗಂ ಬ್ರಹ್ಮಲಿಂಗಂ ಜನೋಽರ್ಚತಿ ।**
**ಭೇದೇನೈಕಾಂತಮದ್ವೈತಂ ತಸ್ಮೈ ಭಗವತೇ ನಮಃ ॥83॥**

ಭಗವಂತ ! ನಿನ್ನ ಸ್ವರೂಪವು ಸರ್ವಲಕ್ಷಣಗಳಿಂದ ಕೂಡಿದೆ. ಯಜ್ಞಾದಿ ಕರ್ಮಕ್ಕೆ ಮುಖ್ಯೋದ್ದೇಶವಾಗಿದೆ ಚತುರ್ಮುಖನು ನಿನ್ನ ಸ್ವರೂಪದ ಪ್ರತಿಮೆಯು. ಇಂತಹ ನಿನ್ನ ಸ್ವರೂಪವನ್ನು ರಮಾಬ್ರಹ್ಮಾದಿ ಜಗತ್ತಿಗಿಂತ ಭಿನ್ನವೆಂದು ಭಕ್ತರು ಪೂಜಿಸುತ್ತಾರೆ. ಭೇದರಹಿತವಾದ ಇಂತಹ ಸ್ವರೂಪವುಳ್ಳ ನಿನಗೆ ನಮಸ್ಕಾರ !

ಶುದ್ಧೋದಕ ಸಮುದ್ರದ ಆಚೆಗೆ ಕಾಂಚನ ಭೂಮಿಯಿದೆ. ಅದರ ನಂತರ ಸುತ್ತಲೂ ಕೋಟೆಯಂತೆ ಲೋಕಾಲೋಕ ಪರ್ವತವಿದೆ. ಲೋಕವೆಂದರೆ ದೇವತೆಗಳು, ಮನುಷ್ಯರು ವ್ಯವಹಾರ ಮಾಡಲು ಯೋಗ್ಯ ಸ್ಥಳ. ಅದಿಲ್ಲದ ಸ್ಥಳಕ್ಕೆ ಅಲೋಕ ವೆಂದು ಹೆಸರು. ಇವೆರಡರ ಮಧ್ಯೆ ಆ ಪರ್ವತವಿದೆ, ಮಾನಸೋತ್ತರ ಪರ್ವತಕ್ಕೂ ಮೇರುಪರ್ವತಕ್ಕೂ ಮಧ್ಯೆ ಇರುವ ಸ್ಥಳವು ಹತ್ತು ಕೋಟಿ ಹದಿನಾರು ಲಕ್ಷ ಯೋಜನಗಳ ಅಳತೆ. ಕಾಂಚನಭೂಮಿಯೂ ಇಷ್ಟೇ ಅಳತೆ ಉಳ್ಳದ್ದು. ಆ ಕಾಂಚನ ಭೂಮಿಗೆ ದೇವತೆಗಳು. ಅವರ ಭೃತ್ಯರು ಹೊರತು ಇನ್ನಾರಿಗೂ ಹೋಗಲು ಸಾಧ್ಯ ವಿಲ್ಲ. ಲೋಕಾಲೋಕ ಪರ್ವತವನ್ನು ಭೂರ್ಲೋಕ, ಭುವರ್ಲೋಕ, ಸುವರ್ಲೋಕ ಗಳ ನಂತರ ಅವುಗಳ ಅಂಚಿನಲ್ಲಿ ನಿರ್ಣಯಕ್ಕಾಗಿ ಶ್ರೀಹರಿಯು ಸೃಷ್ಟಿಸಿರುವನು, ಈ ಕಾರಣದಿಂದಲೇ ಸೂರ್ಯನಿಂದಾರಂಭಿಸಿ ಧ್ರುವಪರ್ಯಂತವಾದ ಜ್ಯೋತಿಃ ಸಮೂಹದ ಕಿರಣಗಳು ಲೋಕಾಲೋಕಪರ್ವತದ ಒಳಪ್ರದೇಶವನ್ನು ಮಾತ್ರ ಬೆಳಗಿಸುವುವೇ ಹೊರತು ಎಂದೂ ಹೊರಗಿನ ಪ್ರದೇಶವನ್ನು ಬೆಳಗಿಸಲು ಸಮರ್ಥ ಗಳಾಗಲಾರವು. ಅಂದಬಳಿಕ ಈ ಪರ್ವತವು ಈ ಲೋಕಗಳಷ್ಟೇ ಅಂದರೆ 51 ಲಕ್ಷ ಯೋಜನ ಎತ್ತರ, 50½ ಲಕ್ಷ ಯೋಜನ ವಿಸ್ತಾರವಾಗಿರುವುದು. ಈ ಪರ್ವತದ ಮೇಲೆ ನಾಲ್ಕು ದಿಕ್ಕುಗಳಲ್ಲಿಯೂ ಋಷಭ, ಪುಷ್ಕರಚೂಡ, ವಾಮನ ಮತ್ತು ಅಪರಾಜಿತವೆಂಬ ಹೆಸರಿನ ದಿಗ್ಗಜಗಳನ್ನು ಬ್ರಹ್ಮದೇವರು ಲೋಕಗಳ ಸ್ಥಿತಿ ಗಾಗಿ ಸ್ಥಾಪಿಸಿರುವರು. ಈ ಆನೆಗಳಿಗೂ, ಲೋಕಪಾಲಕರಿಗೂ ಸಾಮರ್ಥ್ಯವನ್ನು ಹೆಚ್ಚಿಸುವುದಕ್ಕಾಗಿಯೂ ಹಾಗೂ ಸಕಲಲೋಕಗಳ ಮಂಗಳಕ್ಕಾಗಿಯೂ ಶ್ರೀಹರಿಯು ಇವರೊಳಗೆ ಅಂತರ್ಯಾಮಿಯಾಗಿರುವುದಲ್ಲದೆ ಹೊರಗೂ ನೆಲೆಸಿರುವನು.

ಆ ಲೋಕದ ಆಚೆ ಅಣಿಮಾದಿ ಸಿದ್ಧಿಯುಳ್ಳ ಯೋಗೇಶ್ವರರು ಮಾತ್ರ ಸಂಚರಿಸಲು ಯೋಗ್ಯವಾದ ಪ್ರದೇಶವಿದೆ. ಸ್ವರ್ಗ ಭೂಲೋಕಗಳ ನಡುವೆ ಇರುವ ಭಾಗವೇ ಅಂತರಿಕ್ಷ.

ಇಲ್ಲಿರುವ ಸೂರ್ಯಮಂಡಲವು ಬ್ರಹ್ಮಾಂಡದ ಮಧ್ಯದಲ್ಲಿದೆ. ಸೂರ್ಯಮಂಡಲ ಮತ್ತು ಬ್ರಹ್ಮಾಂಡದ ಗೋಳ ಇವುಗಳ ಮಧ್ಯಪ್ರದೇಶ ನಾಲ್ಕುದಿಕ್ಕುಗಳ ಕಡೆ ಯಿಂದಲೂ 25 ಯೋಜನಗಳಿರುವುವು. ಬಂಗಾರದ ಅಂಡದಲ್ಲಿ ಹುಟ್ಟಿದ ಕಾರಣ ಬ್ರಹ್ಮದೇವರನ್ನು ಹಿರಣ್ಯಗರ್ಭನೆಂದು ಕರೆಯುವಂತೆ ಈ ಮೃತ ಅಂದರೆ ಜೀವ ವಿಲ್ಲದ ಜಡವಾದ ಬ್ರಹ್ಮಾಂಡದಲ್ಲಿ ಇರುವುದರಿಂದಲೇ ಸೂರ್ಯನಿಗೆ ಮಾರ್ತಾಂಡ ನೆಂದು ಹೆಸರು. ಸೂರಿಗಮ್ಯನಾದ್ದರಿಂದಲೂ, ಸೂರ್ಯಾಂತರ್ಯಾಮಿಯಾಗಿರುವುದ ರಿಂದಲೂ ಶ್ರೀಹರಿಗೆ ಸೂರ್ಯನೆಂದು ಹೆಸರು. ಇವನೇ ದಿಕ್ಕು, ಆಕಾಶ, ದ್ಯುಲೋಕ, ಭೂಲೋಕ, ಸ್ವರ್ಗ, ಮೋಕ್ಷ, ನರಕ, ರಸಾತಲಾದಿ ಸ್ಥಾನ ಇವೆಲ್ಲವನ್ನೂ ವಿಭಾಗಿಸಿ

ಸೃಷ್ಟಿಸಿರುವನು. ಈ ಕಾರಣದಿಂದ ಇವನೇ ದೇವ-ಪಶು-ಮನುಷ್ಯ-ಸರ್ವಮರಬಳ್ಳಿ ಮೊದಲಾದ ಸಮಸ್ತ ಜೀವರಾಶಿಗಳ ಸೃಷ್ಟಿಕರ್ತನೆನಿಸಿರುವನು. ಸರ್ವರ ಚಕ್ಷುರಿಂದ್ರಿಯದಲ್ಲಿ ಅಧಿಷ್ಠಾನ ದೇವತೆಯಾಗಿದ್ದು ನಿಯಾಮಕನಾಗಿರುವನು.

## ಇಪ್ಪತ್ತನೆಯ ಅಧ್ಯಾಯ ಮುಗಿದುದು

**ಶುಕ :–** 50 ಕೋಟಿ ಯೋಜನ ವಿಸ್ತಾರವುಳ್ಳ ಬ್ರಹ್ಮಾಂಡ ಮತ್ತು ಭೂಮಂಡಲವನ್ನು ವಿವರಿಸಿದ್ದಾಯಿತು. ಇನ್ನು ಖಗೋಳವನ್ನು ವರ್ಣಿಸುವೆನು. ಭೂಮಿ ಮತ್ತು ಸ್ವರ್ಗದ ಮಧ್ಯೆ ಇರುವ ಅಂತರಿಕ್ಷ ಲೋಕವು ಭೂಮಿಯಿಂದ 50 ಲಕ್ಷ ಯೋಜನಗಳ ಮೇಲಿರುವುದು. ಮಹರ್ಲೋಕವು ಸ್ವರ್ಗದಿಂದ 75 ಲಕ್ಷ ಯೋಜನೆಗಳ ಮೇಲಿರುವುದು. ಅದರ ಮೇಲೆ ಜನೋಲೋಕವು ಒಂದು ಕೋಟಿ 12 1/2 ಲಕ್ಷ ಯೋಜನೆಗಳ ದೂರದಲ್ಲಿರುವುದು. ಜನೋಲೋಕದಿಂದ ತಪೋಲೋಕವು ಒಂದು ಕೋಟಿ, 68 ಲಕ್ಷ 75 ಸಾವಿರ ಯೋಜನೆಗಳ ಮೇಲಿರುವುದು, ಮಹರಾದಿ ಮೂರು ಲೋಕಗಳು ಒಟ್ಟು 50 ಕೋಟಿ ಯೋಜನ ವಿಸ್ತೀರ್ಣ. ಅಂತರಿಕ್ಷ, ಸ್ವರ್ಗ, ಮಹಃ, ಜನಃ ತಪಃ ಈ ಐದು ಲೋಕಗಳ ಪರಿಮಾಣದಷ್ಟು ಎತ್ತರದಲ್ಲಿ ಸತ್ಯಲೋಕವಿದೆ. ವೈಕುಂಠವು ಸತ್ಯಲೋಕದ ಎರಡರಷ್ಟು ದೂರದಲ್ಲಿ ಎತ್ತರದಲ್ಲಿದೆ.

### ಸೂರ್ಯಸಂಚಾರ

ಅಂತರಿಕ್ಷ ಲೋಕದ ಮಧ್ಯದಲ್ಲಿ ಸೂರ್ಯನಿರುವನು. ಜ್ವಲಿಸುವ ವಸ್ತುಗಳಿಗೆ ಇವನು ಸ್ವಾಮಿಯು, ಇವನು ಶ್ರೀ ಹರಿಯ ಕಾಂತಿಯಿಂದ ಬೆಳಗುವನು. ತನ್ನ ಬೆಳಕಿನಿಂದ ಬಿಸಿಲನ್ನು ಬೀರಿ, ಮೂರುಲೋಕಗಳನ್ನೂ ಬೆಚ್ಚಗಿರುವಂತೆ ಮಾಡಿ ಬೆಳಗುವನು. ಇವನು ಉತ್ತರಾಯಣ, ದಕ್ಷಿಣಾಯನ ಮತ್ತು ವೈಷುವ ಎಂಬ ಹೆಸರಿನ ಮಂದ, ತ್ವರಿತ, ಸಮಾನಗತಿಗಳಿಂದ ಆರೋಹಣ, ಅವರೋಹಣ, ಮತ್ತು ಸಮನಾದ ಸ್ಥಳಗಳಲ್ಲಿ ಆಯಾ ಕಾಲವನ್ನು ಮೀರದೆ ಸೇರುವವನಾಗಿ ಕ್ರಮವಾಗಿ ಅಹಸ್ಸುಗಳನ್ನು ದೀರ್ಘಗಳನ್ನಾಗಿಯೂ, ಹ್ರಸ್ವಗಳನ್ನಾಗಿಯೂ, ಹಗಲು ರಾತ್ರಿಗಳ ಕಾಲ ಸಮವಾಗಿರುವಂತೆಯೂ ಮಾಡುವನು. ಮೇಷ ಮತ್ತು ತುಲಾರಾಶಿಗಳಲ್ಲಿದ್ದಾಗ ಹಗಲು ರಾತ್ರಿಗಳು ಮೂವತ್ತುಘಳಿಗೆಗಳಾಗಿ ಸಮನಾಗಿರುವವು. ವೃಷಭ, ಮಿಥುನ, ಕಟಕ. ಸಿಂಹ, ಕನ್ಯೆ ಎಂಬ ಈ ಐದು ರಾಶಿಗಳಲ್ಲಿ ಸಂಚರಿಸುವಾಗ ಹಗಲುಗಳು ಮೂವತ್ತು ಘಳಿಗೆಗಳಿಗಿಂತ ಹೆಚ್ಚಾಗಿರುವುವು. ರಾತ್ರಿಗಳು ಕಮ್ಮಿ. ತಿಂಗಳು ಒಂದಕ್ಕೆ ಸ್ವಲ್ಪ ಹೆಚ್ಚು ಕಡಿಮೆ ಒಂದುಘಳಿಗೆ ಹೆಚ್ಚುತ್ತದೆ. ಹಾಗೆಯೇ ಕಮ್ಮಿಯಾಗುತ್ತದೆ.

ಹಗಲು ರಾತ್ರಿಗಳ ಕಾಲ ಹೀಗೆ ಹೆಚ್ಚು ಕಡಿಮೆಯಾದರೂ ಒಂದು ದಿವಸಕ್ಕೆ ಅರವತ್ತು ಘಳಿಗೆಗಳೇ ಆಗುವುವು. ವೃಶ್ಚಿಕ, ಧನುಃಸು, ಮಕರ, ಕುಂಭ ಮತ್ತು ಮೀನ ಈ ಐದು ರಾಶಿಗಳಲ್ಲಿ ಸೂರ್ಯನು ಸಂಚಾರ ಮಾಡುವಾಗ ರಾತ್ರಿಯ ಕಾಲವು ಮೂವತ್ತು ಘಳಿಗೆಗಳಿಗಿಂತ ಹೆಚ್ಚುತ್ತಾ ಹಗಲಿನ ಕಾಲವು ಕಡಿಮೆಯಾಗುತ್ತ ಬರುವುದು. ಹೀಗೆ ಮೂರುಗತಿಯಿಂದ ಸೂರ್ಯನ ರಥದ ಚಕ್ರವು ಮಾನಸೋತ್ತರ ಪರ್ವತ ಶಿಖರದಲ್ಲಿ ಒಂದು ದಿನದಲ್ಲಿ ಸುತ್ತುವ ಮಾರ್ಗದ ದೂರವು ಒಂಭತ್ತು ಕೋಟಿ, 51ಲಕ್ಷ ಯೋಜನಗಳೆಂದು ಹೇಳುವರು. ಮಾನಸೋತ್ತರ ಪರ್ವತದಲ್ಲಿ ಮೇರುವಿನ ಪೂರ್ವ ದಿಕ್ಕಿಗೆ ಸರಿಯಾಗಿ 'ದೇವಧಾನಿ' ಎಂಬ ಇಂದ್ರನ ಪಟ್ಟಣವೂ, ದಕ್ಷಿಣಕ್ಕೆ ಯಮನ ಸಂಯಮಿನೀ ಪಟ್ಟಣವೂ, ಪಶ್ಚಿಮಕ್ಕೆ ವರುಣನ ನಿಮ್ಲೋಚನೀ ಪಟ್ಟಣವೂ, ಉತ್ತರಕ್ಕೆ ಸೋಮನ ವಿಭಾವರೀ ಪಟ್ಟಣವೂ ಇರುವುವು. ಸೂರ್ಯನು ಇಂದ್ರನ ಪಟ್ಟಣದಲ್ಲಿದ್ದಾಗ ಸೂರ್ಯೋದಯವೂ, ಯಮನ ಪಟ್ಟಣದಲ್ಲಿದ್ದಾಗ ಮಧ್ಯಾಹ್ನವೂ, ವರುಣನ ಪಟ್ಟಣದಲ್ಲಿದ್ದಾಗ ಅಸ್ತಮಯವೂ, ಸೋಮನ ಪಟ್ಟಣದಲ್ಲಿದ್ದಾಗ ಅರ್ಧ ರಾತ್ರಿಯೂ ಆಗುವುದು. ಇಳಾವೃತ ಖಂಡದಲ್ಲಿರುವ ಪ್ರಾಣಿಗಳಿಗೆ ಯಾವಾಗಲೂ ನಡುಹಗಲೇ ಇದ್ದು ಸೂರ್ಯನು ತಾಪವನ್ನು ಕೊಡುವನು. ಸೂರ್ಯನು ಮೇರುವಿನ ಎಡಭಾಗದಲ್ಲಿ ಸಂಚರಿಸುವಾಗ, ಅವನ ಬಲಭಾಗದಲ್ಲಿಯೇ ಮೇರುವು ಇರುವಂತೆ ಮಾಡಿಕೊಳ್ಳುವನು. ಇದೇ ರೀತಿಯಲ್ಲಿಯೇ ಚಂದ್ರ ಮೊದಲಾದ ಇತರ ಗ್ರಹಗಳೂ ನಕ್ಷತ್ರಗಳೊಂದಿಗೆ ಜ್ಯೋತಿಶ್ಚಕ್ರದೊಡನೆ ಉದಯವನ್ನು ಹೊಂದುತ್ತಾ ಅಸ್ತಮಿಸುತ್ತಾರೆ. ಹೀಗೆ ವೇದ ಪ್ರತಿಪಾದ್ಯನಾದ ಸೂರ್ಯರಥವು ಎರಡು ಘಳಿಗೆಯಲ್ಲಿ 34 ಲಕ್ಷ 800 ಯೋಜನಗಳ ದೂರವನ್ನು ಅತಿಕ್ರಮಿಸುತ್ತ ಮೇಲೆ ಹೇಳಿದ ನಾಲ್ಕು ಪಟ್ಟಣಗಳಲ್ಲಿಯೂ ಸುತ್ತುತ್ತಿರುವುದು. ಸೂರ್ಯನ ರಥಕ್ಕೆ ಒಂದೇ ಗಾಲಿ. ಸಂವತ್ಸರಾಭಿಮಾನಿಯೇ ಅದಕ್ಕೆ ಅಭಿಮಾನಿ. (ಒಡೆಯ) ಚಕ್ರಕ್ಕೆ ಹನ್ನೆರಡು ಅರೆಗಾಲುಗಳು. ಹನ್ನೆರಡು ತಿಂಗಳುಗಳ ಅಭಿಮಾನಿಗಳೇ ಅವಕ್ಕೂ ಅಭಿಮಾನಿಗಳು. ಆ ಗಾಲಿಗೆ ಆರು ಅಂಚಿನ ಪಟ್ಟಿಗಳಿವೆ ಆರುಋತುಗಳ ಅಭಿಮಾನಿಗಳೇ ಅವಕ್ಕೂ ಅಭಿಮಾನಿಗಳು. ಆ ಚಕ್ರಕ್ಕೆ ಮೂರು ಗುಮ್ಮಗಳಿವೆ. ಇವಕ್ಕೆ ಚಾತುರ್ಮಾಸ್ಯಾಭಿಮಾನಿಗಳೇ ಒಡೆಯರು. ಆ ರಥದ ಅಚ್ಚಿನ ಒಂದು ಕೊನೆಯು ಮೇರುವಿನ ಮೇಲ್ಭಾಗದಲ್ಲಿದೆ ಮತ್ತೊಂದು ಕೊನೆಯು ಮಾನಸೋತ್ತರಪರ್ವತದಲ್ಲಿದೆ. ಈ ಅಚ್ಚಿನ ಉದ್ದ ಎರಡುಕೋಟಿ ಏಳುಲಕ್ಷಯೋಜನಗಳು. ಮಾನಸೋತ್ತರ ಪರ್ವತದಲ್ಲಿರುವ ಅಚ್ಚಿನ ಕೊನೆಗೆ ಚಕ್ರವು ಪೋಣಿಸಲ್ಪಟ್ಟಿದೆ. ಅದು ಎಣ್ಣೆಗಾಣದ ಎತ್ತಿನರೀತಿಯಲ್ಲಿ (ಗಾರೆ ಅರೆಯುವ ಗಾಲಿಯಂತೆ) ಮಾನಸೋತ್ತರ ಪರ್ವತದಲ್ಲಿಯೇ ಸುತ್ತುವುದು. ಈ ಉದ್ದದ ಅಚ್ಚಿನಲ್ಲಿ ಚಕ್ರವಿರುವ ಭಾಗದಲ್ಲಿ ಎರಡನೆಯ ಸಣ್ಣ ಅಚ್ಚಿನ ಕೆಳಭಾಗವಿದೆ. ಇದು 51 ಲಕ್ಷ, 75 ಸಾವಿರ ಯೋಜನಗಳ

ಉದ್ದವಿದೆ. ಗಾಣದ ಯಂತ್ರದಲ್ಲಿರುವಂತೆ ಈ ಸಣ್ಣ ಅಚ್ಚಿನ ಮೇಲ್ಭಾಗವು ಧ್ರುವ ಮಂಡಲದಲ್ಲಿ ವಾಯು ಪಾಶದಿಂದ ಬದ್ಧವಾಗಿದೆ. ರಥದಲ್ಲಿರುವ ಸೂರ್ಯನ ಪೀಠವು 36 ಲಕ್ಷ ಯೋಜನಗಳ ಎತ್ತರವಾಗಿ, ಒಂಭತ್ತು ಲಕ್ಷ ಯೋಜನಗಳ ಅಗಲವಾಗಿದೆ. ಆ ರಥದ ನೊಗವು ಎರಡು ಕೋಟಿ ಏಳುಲಕ್ಷ ಯೋಜನಗಳ ಉದ್ದವಿದೆ. ಗಾಯತ್ರಿ ಮೊದಲಾದ ಏಳು ಛಂದಸ್ಸಿನ ಹೆಸರುಳ್ಳ ಏಳು ಕುದುರೆಗಳು ಈ ನೊಗಕ್ಕೆ ಹೂಡಲ್ಪಟ್ಟಿವೆ. ಇವೇ ಆ ರಥವನ್ನು ಎಳೆಯುವುವು. ಅರುಣನು ಸಾರಥಿಯಾಗಿರುವನು. ಹೆಬ್ಬೆರಳಿನ ಒಂದು ಭಾಗದಷ್ಟು ಪರಿಮಾಣವುಳ್ಳ ಆರವತ್ತು ಸಾವಿರ ಮಂದಿ ವಾಲಖಿಲ್ಯರೆಂಬ ಋಷಿಗಳು ಸೂರ್ಯನಿಗೆ ಅಭಿಮುಖರಾಗಿ ಸೂಕ್ತಗಳಿಂದ ಸ್ತುತಿಸುವುದಕ್ಕೆ ನಿಯುಕ್ತರಾಗಿ ಸೂರ್ಯನಾಮಕ ಶ್ರೀಹರಿಯನ್ನು ಸ್ತೋತ್ರಮಾಡುತ್ತಿರುವರು. ಹಾಗೆಯೇ ಬೇರೆ ಋಷಿಗಳು, ಗಂಧರ್ವರು, ಅಪ್ಸರೆಯರು, ನಾಗರು, ಬಡಗಿಗಳು, ಯಾತುಧಾವರು ಮತ್ತು ದೇವತೆಗಳು ಎಂಬ ಏಳೇಳು ಮಂದಿಗಳನ್ನುಳ್ಳ ಗಣಗಳು ಹನ್ನೆರಡು ಬೇರೆ ಬೇರೆ ಇರುವುವು. ಈ ಗಣದವರು ಪ್ರತಿತಿಂಗಳಲ್ಲಿಯೂ ಸೂರ್ಯನನ್ನು ಉಪಾಸನೆ ಮಾಡುವರು.

ಭೂಮಂಡಲವು ಒಂಭತ್ತು ಕೋಟಿ, 51 ಲಕ್ಷ ಯೋಜನಗಳ ಸುತ್ತಳತೆಯುಳ್ಳದ್ದು. ಸೂರ್ಯನ ರಥವು ಒಂದು ಕ್ಷಣದಲ್ಲಿ ಎರಡು ಸಾವಿರ ಯೋಜನ, ಎರಡು ಹರಿದಾರಿಗಳನ್ನು ಸಂಚರಿಸಿ ಮುಗಿಸುವುದು.

### ಇಪ್ಪತ್ತೊಂದನೆಯ ಅಧ್ಯಾಯ ಮುಗಿದುದು

**ಟೀಕೆ :–** ತಿರುಗುತ್ತಿರುವ ಕುಂಬಾರ ಚಕ್ರದ ಮೇಲೆ ಇರುವೆಯೊಂದು ಚಕ್ರದೊಂದಿಗೆ ಸುತ್ತುತ್ತ ತಾನೂ ಚಕ್ರದ ಮೇಲೆ ಸರಿಯುತ್ತಿರುವುದು. ಅದರಂತೆ ಹನ್ನೆರಡು ರಾಶಿಗಳಿಂದ ಕೂಡಿರುವ ಕಾಲಚಕ್ರದೊಂದಿಗೆ ಮೇರುವನ್ನು ಸುತ್ತುತ್ತಿರುವ ಸೂರ್ಯಾದಿಗ್ರಹಗಳೂ, ಬೇರೆ ಬೇರೆ ನಕ್ಷತ್ರ ರಾಶಿಗಳಲ್ಲಿ ಕಂಡು ಬರುವುದರಿಂದ ಅವೂ ಸುತ್ತುತ್ತ ಇರುವುವು. ಈ ಕಾರಣದಿಂದ ಗ್ರಹಗಳಿಗೂ ಬೇರೆ ಬೇರೆ ಗತಿಗಳುಂಟು. ಸೂರ್ಯಾಂತರ್ಗತ ನಾರಾಯಣನು ಲೋಕಕ್ಷೇಮಕ್ಕೋಸ್ಕರ ಹನ್ನೆರಡು ಬಗೆಯ ರೂಪಗಳುಳ್ಳವನಾಗಿ ವಸಂತಾದಿ ಋತುಗಳಲ್ಲಿ ಆಯಾ ಋತುವಿನ ಗುಣ ಅಂದರೆ ಧರ್ಮಗಳನ್ನು ಉಂಟು ಮಾಡುತ್ತಾನೆ. ಶ್ರೀಹರಿಯ ಆ ಹನ್ನೆರಡು ಬಗೆಯ ರೂಪಗಳಿಗೂ ಆಯಾ ಋತುಗಳಲ್ಲಿ ಮಾಡುವ ಕರ್ಮಗಳನ್ನು ಅರ್ಪಿಸಿದರೆ ಅವರನ್ನು ಆ ಹನ್ನೆರಡು ಹರಿಯ ರೂಪಗಳೂ ವಿಶೇಷವಾಗಿ ಶುದ್ಧರನ್ನು ಮಾಡುವುವು. ಇದರಿಂದ ವರ್ಣಾಶ್ರಮಾಚಾರವಂತರು ಮೋಕ್ಷವನ್ನು ಹೊಂದುವರು.

ಅಂತರಿಕ್ಷ ಮಧ್ಯದಲ್ಲಿರುವ ಶಿಂಶುಮಾರವೆಂಬ ಕಾಲಚಕ್ರವನ್ನು ಆಶ್ರಯಿಸಿರುವ ಸೂರ್ಯನು ಹನ್ನೆರಡು ತಿಂಗಳುಗಳಾಗುವಂತೆ ಮಾಡುತ್ತಿರುವನು. ಇವುಗಳನ್ನೇ ಮೇಷಾದಿ ಸೌರಮಾಸಗಳೆಂದೂ, ಚೈತ್ರಾದಿ ಚಾಂದ್ರಮಾಸಗಳೆಂದೂ ಹೇಳುವರು. ಸೂರ್ಯನು ತನ್ನ ಮಂದ, ಶೀಘ್ರ, ಸಮಗತಿಗಳಿಂದ ಅಂತರಿಕ್ಷ ಮಂಡಲವನ್ನು, ಎಲ್ಲ ನಕ್ಷತ್ರ ಮಂಡಲವನ್ನೂ ಸಂಚರಿಸಿ ಮುಗಿಸುವ ಕಾಲವನ್ನು ಸಂವತ್ಸರ, ಪರಿವತ್ಸರ, ಇಡಾವತ್ಸರ, ಅನುವತ್ಸರ ಮತ್ತು ವತ್ಸರಗಳೆಂದು ಹೇಳುವರು.

ಸೂರ್ಯಮಂಡಲದ ಮೇಲೆ ಒಂದು ಲಕ್ಷ ಯೋಜನಗಳ ದೂರದಲ್ಲಿ ಚಂದ್ರ ನಿರುವನು. ಸೂರ್ಯಾದಿಗಳಿರುವ ನಕ್ಷತ್ರವನ್ನು ಚಂದ್ರನು ಒಂದೇ ದಿನದಲ್ಲಿ ದಾಟಿ ಮತ್ತೊಂದು ನಕ್ಷತ್ರಕ್ಕೆ ಹೋಗುತ್ತಾನೆ. ಶುಕ್ಲ ಮತ್ತು ಕೃಷ್ಣ ಪಕ್ಷಗಳಲ್ಲಿ ಚಂದ್ರನ ಕಲೆಗಳು ವೃದ್ಧಿ ಮತ್ತು ಕ್ಷಯವನ್ನು ಹೊಂದುವುದರಿಂದ ಚಂದ್ರ ಮಂಡಲದ ಪೃಷ ಭಾಗದಲ್ಲಿರುವ ಪಿತೃಲೋಕಕ್ಕೆ ಹಗಲು ರಾತ್ರಿಯಾಗಿ ಇಡಿ ದಿನವಾಗುತ್ತದೆ. ಒಂದೊಂದು ನಕ್ಷತ್ರವನ್ನೂ ಚಂದ್ರನು ಅರವತ್ತು ಘಳಿಗೆಗಳಲ್ಲಿ ದಾಟಿ ಹೋಗುತ್ತಾನೆ.

ಚಂದ್ರಮಂಡಲದ ಮೇಲೆ ಲಕ್ಷಯೋಜನ ದೂರದಲ್ಲಿ ಅಶ್ವಿನೀ ಮೊದಲಾದ ನಕ್ಷತ್ರಗಳು ಮೇರುವಿಗೆ ಪ್ರದಕ್ಷಿಣೆಯಾಗಿ ಚರಿಸುತ್ತಿರುವುವು. ಶ್ರೀ ಹರಿಯು ಕಾಲ ಸೂಚನೆಗಾಗಿ ಸೂರ್ಯರಥದ ಚಕ್ರದಲ್ಲಿ ನಿಯೋಜಿಸಿರುವನು.

ನಕ್ಷತ್ರಮಂಡಲದ ಮೇಲೆ ಎರಡು ಲಕ್ಷಯೋಜನಗಳ ದೂರದಲ್ಲಿ ಶುಕ್ರ ಗ್ರಹ ವಿದೆ. ಶುಕ್ರ ಗ್ರಹವು ಸೂರ್ಯನಿಗಿಂತ ಹಿಂದೆ, ಮುಂದೆ ಮತ್ತು ಸಮವಾಗಿ ಸಂಚರಿಸುವುದು.

ಶುಕ್ರ ಗ್ರಹದ ಮೇಲೆ ಎರಡು ಲಕ್ಷಯೋಜನಗಳ ದೂರದಲ್ಲಿ ಬುಧಗ್ರಹವಿದೆ. ಬುಧಗ್ರಹಕ್ಕೆ ಸೂರ್ಯನ ವಿಯೋಗ ಬಂದಾಗ ಅನಾವೃಷ್ಟಿ ಮುಂತಾದ ಭಯವು ಉಂಟಾಗುವುದು.

ಬುಧಗ್ರಹಕ್ಕಿಂತ ಮೇಲೆ ಎರಡು ಲಕ್ಷಯೋಜನಗಳ ದೂರದಲ್ಲಿ ಅಂಗಾರಕ ಗ್ರಹವಿದೆ. ಅಂಗಾರಕನು ಪ್ರಾಯಶಃ ದುಃಖಪ್ರದನು.

ಅಂಗಾರಕಗ್ರಹಕ್ಕಿಂತ ಮೇಲೆ ಎರಡು ಲಕ್ಷ ಯೋಜನಗಳ ದೂರದಲ್ಲಿ ಗುರು ಗ್ರಹವಿದೆ. ಗುರು ಗ್ರಹವು ಹೆಚ್ಚಾಗಿ ಬ್ರಾಹ್ಮಣರ ವಂಶಕ್ಕೇ ಅನುಕೂಲನು. ವಕ್ರ ನಾಗದಿದ್ದರೆ ಒಂದೊಂದು ರಾಶಿಯಲ್ಲಿ ಪರಿವತ್ಸರ ಕಾಲ ಸಂಚರಿಸುವನು.

ಬೃಹಸ್ಪತಿಗ್ರಹದ ಮೇಲೆ ಎರಡು ಲಕ್ಷ ಯೋಜನಗಳ ದೂರದಲ್ಲಿ ಶನೈಶ್ಚರ

ಗ್ರಹವಿದೆ. ಶನೈಶ್ಚರನು ಒಂದೊಂದು ರಾಶಿಯಲ್ಲಿ ಎರಡೂವರೆ ವರ್ಷಗಳ ಕಾಲ ಸಂಚರಿಸುವನು. ಇವನು ಪ್ರಾಯಶಃ ಸರ್ವರಿಗೂ ದುಃಖಪ್ರದನು.

ಶನೈಶ್ಚರಗ್ರಹದ ಮೇಲೆ ಹನ್ನೊಂದು ಲಕ್ಷ ಯೋಜನಗಳ ದೂರದಲ್ಲಿ ಸಪ್ತರ್ಷಿ ಮಂಡಲವಿದೆ. ಸಪ್ತರ್ಷಿಗಳು ಲೋಕಗಳ ಕ್ಷೇಮಕ್ಕಾಗಿ ಧ್ರುವಮಂಡಲವನ್ನು ಪ್ರದಕ್ಷಿಣಾಕಾರವಾಗಿ ಸುತ್ತಿ ಬರುತ್ತಿರುವರು.

ಸಪ್ತರ್ಷಿಮಂಡಲದ ಮೇಲೆ ಹದಿಮೂರು ಲಕ್ಷ ಯೋಜನಗಳ ದೂರದಲ್ಲಿ ಶ್ರೀಹರಿಗೆ ಮುಖ್ಯ ಸ್ಥಾನವಾದ ಧ್ರುವಮಂಡಲವಿದೆ. ಅಲ್ಲಿರುವ ಧ್ರುವನಿಗೆ ನಕ್ಷತ್ರ ರೂಪರಾದ ಅಗ್ನಿ, ಇಂದ್ರ, ಕಶ್ಯಪ, ದಕ್ಷಪ್ರಜಾಪತಿ ಮತ್ತು ಯಮ ಇವರು ಪ್ರದಕ್ಷಿಣೆ ಮಾಡುತ್ತಿರುವರು. ಚಕ್ರದೊಂದಿಗೆ ತಿರುಗುತ್ತಿರುವ ಸೂರ್ಯಾದಿಗ್ರಹಗಳು ಮತ್ತು ಅಶ್ವಿನ್ಯಾದಿ ನಕ್ಷತ್ರಗಳು ಇವುಗಳಿಗೆ ಮೇಟಿ ಕಂಬದಂತೆ ಶ್ರೀಹರಿಯು ಧ್ರುವ ನನ್ನು ಮಾಡಿರುವನು. ಸೂರ್ಯಾಂತರ್ಯಾಮಿಯಾದ ಶ್ರೀಹರಿಯು ಗ್ರಹ, ನಕ್ಷತ್ರಾದಿ ಗಳನ್ನು ವಾಯುಪಾಶದಿಂದ ಬಿಗಿದು ಕೆಳಗೆ ಬೀಳದಂತೆ ನಿಲ್ಲಿಸಿರುವನು. ಗ್ರಹಾದಿ ಗಳೆಲ್ಲರೂ ಆವಹ ಮೊದಲಾದ ವಾಯುಗಳಿಂದ ಪ್ರೇರಿತರಾಗಿ ಕಲ್ಪಪರ್ಯಂತ ಸುತ್ತು ತ್ತಿರುವರು. ಶಿಂಶುಮಾರರೂಪೀ ಹರಿಯು ಸ್ವಸಾಮರ್ಥ್ಯದಿಂದ ಇವುಗಳನ್ನು ಧರಿಸಿರುವನು. ಶಿಂಶುಮಾರನು ದೇಹವನ್ನು ಗುಂಡಗೆ ಮಾಡಿಕೊಂಡು ತಲೆಯನ್ನು ಕೆಳಗೆ ಮಾಡಿಕೊಂಡಿರುವನು ನಕ್ಷತ್ರರೂಪದಿಂದಿರುವ ಧ್ರುವರಾಜನು ಆ ಮೂರ್ತಿಯ ಬಾಲದ ಕೊನೆಯಲ್ಲಿಯೂ, ದಕ್ಷ. ಅಗ್ನಿ, ಇಂದ್ರ ಮತ್ತು ಯಮ ಇವರು ಬಾಲದ ಮಧ್ಯದಲ್ಲೂ, ಧಾತೃವಿಧಾತೃಗಳು ಬಾಲದ ಬುಡದಲ್ಲಿಯೂ, ಸಪ್ತರ್ಷಿಗಳು ನಡುವಿ ನಲ್ಲಿಯೂ, ಅಭಿಜಿತ್ ನಕ್ಷತ್ರದಿಂದಾರಂಭಿಸಿ ಪುನರ್ವಸು ನಕ್ಷತ್ರದ ಪೂರ್ತಿ ಉತ್ತ ರಾಯಣ ನಕ್ಷತ್ರಗಳು ಬಲಪಾರ್ಶ್ವದಲ್ಲಿಯೂ, ಪುಷ್ಯದಿಂದಾರಂಬಿಸಿ ಉತ್ತರಾಷಾ ಢಾವರೆಗಿನ ದಕ್ಷಿಣಾಯನ ನಕ್ಷತ್ರಗಳು ಎಡಪಾರ್ಶ್ವದಲ್ಲಿಯೂ ಇರುವುವು. ಅಜವೀಥಿ ಯೆಂಬ ದಕ್ಷಿಣಾಯನದ ಮಾರ್ಗವು ಬೆನ್ನಿನ ಮೇಲೂ, ಆಕಾಶಗಂಗೆಯು ಉದರ ದಲ್ಲಿಯೂ, ಪುನರ್ವಸು–ಪುಷ್ಯ ನಕ್ಷತ್ರಗಳು ಬಲ ಮತ್ತು ಎಡ ಜಘನಪ್ರದೇಶ ದಲ್ಲಿಯೂ, ಆರಿದ್ರ–ಆಶ್ಲೇಷ ನಕ್ಷತ್ರಗಳು ಎಡ ಪಾದಗಳಲ್ಲಿಯೂ, ಅಭಿಜಿತ್ ಮತ್ತು ಉತ್ತರಾಷಾಢಾ ನಕ್ಷತ್ರಗಳು ಎಡಮೂಗುಗಳಲ್ಲಿಯೂ ಶ್ರವಣ ಮತ್ತು ಪೂರ್ವಾಷಾಢಾ ನಕ್ಷತ್ರಗಳು ಬಲ ಎಡ ಕಣ್ಣುಗಳಲ್ಲಿಯೂ, ಧನಿಷ್ಠಾ ಮೂಲಾ ನಕ್ಷತ್ರಗಳು ಬಲಎಡ ಕಿವಿಗಳಲ್ಲಿಯೂ, ಮಘಾ ಮುಂತಾದ ಎಂಟು ನಕ್ಷತ್ರಗಳು ಎಡಭಾಗದಲ್ಲಿಯೂ, ಪೂರ್ವಾಭಾದ್ರದಿಂದ ಮೃಗಶೀರ್ಷಾ ಪೂರ್ತಿ ಎಂಟು ನಕ್ಷತ್ರಗಳು ಬಲಭಾಗದಲ್ಲಿಯೂ, ಶತಭಿಷಾ ಜ್ಯೇಷ್ಠಾ ನಕ್ಷತ್ರಗಳು ಬಲ–ಎಡ ಹೆಗಲುಗಳಲ್ಲಿಯೂ, ಅಗಸ್ತ್ಯನು ಮೇಲಿನ ದವಡೆಯಲ್ಲಿಯೂ, ಯಮನು ಕೆಳಗಿನ ದವಡೆಯಲ್ಲಿಯೂ, ಕುಜನು ಮುಖದಲ್ಲಿಯೂ ಶನೈಶ್ಚರನು ಉಪಸ್ಥೆಯಲ್ಲಿಯೂ, ಗುರುವು ಭುಜದಲ್ಲಿಯೂ, ರವಿಯು ಎದೆ

ಯಲ್ಲಿಯೂ, ನಾರಾಯಣನು ಹೃದಯದಲ್ಲಿ, ಚಂದ್ರನು ಮನಸ್ಸಿನಲ್ಲಿ, ಶುಕ್ರನು ಹೊಕ್ಕಳಲ್ಲಿ ಅಶ್ವಿನಿಗಳು ಮೊಲೆಗಳಲ್ಲಿ, ಪ್ರಾಣಾಪಾನಗಳಲ್ಲಿ ಬುಧನು, ಕಂಠದಲ್ಲಿ ರಾಹು, ಸರ್ವಾಂಗದಲ್ಲಿಯೂ ಕೇತುಗಳು, ರೋಮಗಳಲ್ಲಿ ಇತರ ಎಲ್ಲ ನಕ್ಷತ್ರಗಳೂ ಆಶ್ರಿತಗಳಾಗಿರುವುವು.

ಹೀಗೆ ಸರ್ವದೇವತೆಗಳಿಗೂ ಆಧಾರವಾದ ಶಿಂಶುಮಾರ ರೂಪೀ ಪರಮಾತ್ಮನ ಸ್ವರೂಪವನ್ನು ನಿತ್ಯವೂ ತ್ರಿಕಾಲದಲ್ಲಿ ಈ ಮಂತ್ರದಿಂದ ಜಪಿಸಬೇಕು :-

### ಮಂತ್ರ

**"ನಮೋ ನಮೋ ಜ್ಯೋತಿರ್ಲೋಕಾಯ ಕಾಲಾಯನಾಯಾನಿಮಿಷಾಂ ಪತಯೇ ಮಹಾ ಪುರುಷಾಯ ಧೀಮಹಿ ॥"**

ಜ್ಯೋತಿಸ್ಸಮೂಹಕ್ಕೆ ಆಶ್ರಯ, ದೇವತಾಪಾಲಕ, ಕಾಲಜ್ಞಾಪಕ ಸರ್ವೋತ್ತಮಪುರುಷನಾದ ನಿನಗೆ ನಮಸ್ಕಾರ ! ನಮಸ್ಕಾರ ! ನಿನ್ನನ್ನೇ ವಿಚಾರ ಮಾಡುವೆವು. ಮೂರು ಕಾಲಗಳಲ್ಲಿಯೂ ಈ ರೂಪವನ್ನು ಜಪಿಸುವ, ಸ್ತುತಿಸುವ ಮತ್ತು ನಮಿಸುವ ಅಧಿಕಾರಿಗಳಿಗೆ ತ್ರಿಕಾಲ ಕೃತ ಪಾಪಗಳೆಲ್ಲ ನಾಶವಾಗುವುವು.

### ಇಪ್ಪತ್ತೆರಡನೆಯ ಅಧ್ಯಾಯ ಮುಗಿದುದು

ಶ್ರೀಹರಿಯ ಕರುಣೆಯಿಂದ ದೇವತ್ವವನ್ನೂ ನವಗ್ರಹಗಳಲ್ಲಿ ಒಂದು ಸ್ಥಾನ ವನ್ನೂ ಪಡೆದಿರುವ ರಾಹುವು ಸೂರ್ಯನ ಕೆಳಗೆ ಹತ್ತು ಸಾವಿರ ಯೋಜನಗಳ ದೂರ ದಲ್ಲಿರುವನು. ಸೂರ್ಯಮಂಡಲವು ಹತ್ತುಸಾವಿರ ಯೋಜಗಳ ವಿಸ್ತಾರವಾಗಿದೆ. ಚಂದ್ರಮಂಡಲವು ಇಪ್ಪತ್ತುಸಾವಿರ ಯೋಜನಗಳ ವಿಸ್ತಾರವಾಗಿದೆ. ರಾಹು ಮಂಡಲವು ನಲವತ್ತು ಸಾವಿರ ಯೋಜನಗಳ ವಿಸ್ತಾರವಾಗಿದೆ. ರಾಹುವು ಸೂರ್ಯ ಚಂದ್ರರಲ್ಲಿ ವೈರವಿಟ್ಟು ಕೆಲವು ಪರ್ವಕಾಲಗಳಲ್ಲಿ ಸೂರ್ಯ ಮತ್ತು ಚಂದ್ರರನ್ನು ಹಿಡಿ ಯಲುಹೋಗುವನು. ಶ್ರೀಹರಿಯು ಸೂರ್ಯ ಮತ್ತು ಚಂದ್ರ ಮಂಡಲಗಳಲ್ಲಿ ರಕ್ಷಣೆಗಾಗಿ ಚಕ್ರವನ್ನಿಟ್ಟಿರುವನು. ಚಕ್ರವು ಈ ಎರಡು ಮಂಡಲಗಳ ಸುತ್ತಲೂ ಸುತ್ತುತ್ತಿರುವುದು. ರಾಹುವು ಇದನ್ನು ಸಹಿಸಲಾಗದೆ. ಭೀತನಾಗಿ ಹಿಮ್ಮೆಟ್ಟುವನು. ಇದನ್ನೇ ಜನರು ಗ್ರಹಣವೆನ್ನುವರು.

### ವಿಶೇಷ

ರಾಹುವು ದೈತ್ಯನಾದ್ದರಿಂದ ನವಗ್ರಹಪೂಜೆ, ಜಪ, ಹೋಮಗಳಲ್ಲಿ ಅವನ

ಉಪಾಸನೆ ನಿಷಿದ್ಧ. ಹಾಗಾದರೆ ವೇದೋಕ್ತವಾದ ರಾಹುವಿನ ಮಂತ್ರ ಮತ್ತು ಹೋಮವು ಯಾವ ದೇವತೆಗೆ ಸಂಬಂಧಿಸಿದೆ ? ಎಂದರೆ :-

**ವಿಪ್ರಚಿತ್ತಿಃ ಸಿಂಹಿಕಾಯಾಂ ಶತಂ ಚೈಕಮಜೀಜನತ್ ।**
**ರಾಹುಜ್ಯೇಷ್ಠಂ ಕೇತುಶತಂ ಗ್ರಹತ್ವಂ ಯ ಉಪಾಗತಃ ।**
**– ಭಾಗವತ ಆರನೇಸ್ಕಂಧ 6ನೇ, ಅಧ್ಯಾಯ 36ನೇ ಶ್ಲೋಕ.**

**ಅರ್ಥ :-** ವಿಪ್ರಚಿತ್ತಿ ದೈತ್ಯನು ಸಿಂಹಿಕೆಯೆಂಬ ತನ್ನ ಹೆಂಡತಿಯಲ್ಲಿ 101 ಮಕ್ಕಳನ್ನು ಪಡೆದನು. ಮುಂದೆ ಗ್ರಹನಾಗುವ ರಾಹುವೇ ಜ್ಯೇಷ ಪುತ್ರ. ಅವನ ಸಹೋದರರು ಕೇತುಗಳೆಂಬ ನೂರು ಮಂದಿ ಹುಟ್ಟಿದರು.

ರಾಹುವು ಗ್ರಹನಾದನೆಂದರೆ "ಗೃಹ್ಣಾತೀತಿ ತದುದ್ಯೋಗಂ ಕರೋತೀತಿಗ್ರಹ".. ಸೂರ್ಯಚಂದ್ರರನ್ನು ಗ್ರಹಿಸುವುದರಿಂದ ಗ್ರಹನೆನಿಸಿದನು. ಗ್ರಹದೇವತೆಯಾಗಲಿಲ್ಲ ವೆಂದು ತಾತ್ಪರ್ಯ.

**ಶ್ಲೋಕ :- ಶಿರಸ್ತು ತಸ್ಯಗ್ರಹತಾಮವಾಪ ಸುರೈಃಸಮಾವಿಷ್ಟಂ**
**– ಮಹಾಭಾರತ ತಾತ್ಪರ್ಯ ನಿರ್ಣಯ 10ನೇ ಅಧಾಯ** 31ನೇ ಶ್ಲೋಕ॥

**ಅರ್ಥ :-** ರಾಹುವಿನ ಶಿರಸ್ಸು ಚಂದ್ರ ಸೂರ್ಯರನ್ನು ಪರ್ವಕಾಲದಲ್ಲಿ ಗ್ರಹಿಸುವ ಉದ್ಯೋಗವನ್ನು ಹೊಂದಿತು. ಆ ಶಿರಸ್ಸಿನಲ್ಲಿ ದೇವತೆಗಳು ಪ್ರವೇಶಿಸಿದರು.

ಇದರಿಂದ ತಿಳಿದು ಬರುವ ವಿಶೇಷವೇನೆಂದರೆ :-

ರಾಹುವಿನ ಶಿರಸ್ಸಿನಲ್ಲಿ ದೇವತೆಗಳು ಅಂಶರೂಪದಿಂದಿರುವರು. ಆ ದೇವತೆಗಳು ಕರ್ಮಜ ದೇವತೆಗಳು. ಶ್ರೀವಿಜಯದಾಸರು "ಕ್ಷಿತಿಪರನು, ಸ್ಮರಿಸಿ" ಎಂಬ ಪದದಲ್ಲಿ 3ನೆಯ ನುಡಿಯಲ್ಲಿ "ಸ್ವರ್ಭಾನು ಮುಖಪತಿ" ಎಂದೂ, ಶ್ರೀಜಗನ್ನಾಥದಾಸರು ಹರಿಕಥಾಮೃತಸಾರ 32ನೆಯ ಸಂಧಿ, 37ನೆಯ ಪದ್ಯದಲ್ಲಿ ಕರ್ಮಜ ದೇವತೆಗಳ ಗುಂಪಿಗೆ ಸೇರಿರುವ ದೇವತೆಗಳ ಹೆಸರನ್ನು ಹೇಳುತ್ತ "ಭೇಶರವಿಗಳ ರಿಪುಗಳೆನಿಸಿರುವ ರಾಹು ಕೇತುಗಳು" ಎಂದೂ ಹೇಳಿರುವರು.

ಈ ವಿಮರ್ಶೆಯಿಂದ ರಾಹು ಕೇತುಗಳು ದೈತ್ಯರೇ ಸರಿ. ಅಮೃತಸಂಪರ್ಕ ವಿರುವುದರಿಂದ ರಾಹುವಿನ ತಲೆ ಅಮರವಾಗಿದೆ. ಅಲ್ಲಿ ಕರ್ಮಜದೇವತೆಗಳು ಅದೇ ಹೆಸರಿನಿಂದ ಆವಿಷ್ಟರಾಗಿದ್ದು ಪೂಜೆ, ಹೋಮಾದಿಗಳನ್ನು ಮಾಡುವವರಿಗೆ ಅನುಗ್ರಹಿಸುತ್ತಿದ್ದಾರೆ. ಆದ್ದರಿಂದ ರಾಹು ಕೇತು ನಾಮಕರಾದ ದೇವತೆಗಳ ಗುಂಪನ್ನುಳ್ಳ ನವಗ್ರಹಗಳು ಹರಿದಾಸರನ್ನು ಎಂದೂ ದಣಿಸವೆ ಅನುಗ್ರಹವನ್ನು ಮಾಡುತ್ತಾರಾಗಿ

ಅವರನ್ನು ಸ್ತುತಿಸಿ ಸದ್ಗತಿಯನ್ನು ಹೊಂದಬೇಕು. ಹೀಗೆ ಶ್ರೀಜಗನ್ನಾಥದಾಸರು ತತ್ತ್ವಸುವ್ವಾಲಿಯಲ್ಲಿ ಹೇಳುತ್ತಾರೆ .– "ಐಹಿಕ ಪಾರತ್ರಿಕದಿ ನೃಹರಿ ವಾಸರ ನವ ಗ್ರಹದೇವತೆಗಳು ದಣಿಸೋರೆ । ದಣಿಸೋರೆ ಇವರನ್ನು ಅಹಿತರೆಂದೆನುತ ಕೆಡಬೇಡಿ ॥ ಜಗನ್ನಾಥವಿಟ್ಠಲನ ಬದಿಗರಿವರಹುದೆಂದು ಹಗಲಿರಳು ಬಿಡದೆ ನುತಿಸುವ । ನುತಿಸುವ ಮಹಾತ್ಮರಿಗೆ ಸುಗತಿಗಳನಿತ್ತು ಸಲಹೋರು ॥

ರಾಹು ಮಂಡಲವ ಕೆಳಗೆ ಹತ್ತು ಸಾವಿರ ಯೋಜನಗಳ ದೂರದಲ್ಲಿ ಸಿದ್ಧ, ಚಾರಣ, ವಿದ್ಯಾಧರರ ನಿವಾಸಸ್ಥಾನಗಳಿವೆ. ಅವುಗಳ ಕೆಳಗೆ ಅಷ್ಟೇ ದೂರದಲ್ಲಿ ಯಕ್ಷ, ರಾಕ್ಷಸ, ಪಿಶಾಚ, ಭೂತ, ಪ್ರೇತಗಳ ವಿಹಾರಾಂಗಣವಾದ ಅಂತರಿಕ್ಷವಿರುವುದು. ಇಲ್ಲಿಯವರೆಗೂ ವಾಯುವು ಬೀಸುತ್ತಿದ್ದು ಮೋಡಗಳು ಇರುವುವು. ಅದರ ಕೆಳಗೆ ನೂರು ಯೋಜನಗಳಲ್ಲಿ ಭೂಪ್ರದೇಶವಿದೆ. ಹಂಸಾದಿ ಪಕ್ಷಿಗಳು ಗಗನದಲ್ಲಿ ಎಷ್ಟು ಎತ್ತರಕ್ಕೆ ಹಾರುತ್ತವೆಯೋ ಅಲ್ಲಿನವರೆಗಿನ ಸ್ಥಳವು ಭೂಮಂಡಲವೆನಿಸುತ್ತದೆ.

ಭೂಮಿಯ ಕೆಳಗೆ ಅತಲ, ವಿತಲ, ಸುತಲ, ತಲಾತಲ, ಮಹಾತಲ, ರಸಾತಲ ಮತ್ತು ಪಾತಾಳ ಎಂಬ ಬಿಲರೂಪದ ಏಳು ಲೋಕಗಳಿವೆ. ಒಂದೊಂದೂ ಹತ್ತು ಸಾವಿರ ಯೋಜನಗಳ ಅಗಲ ಮತ್ತು ಅಷ್ಟೇ ಎತ್ತರವಾಗಿರುವುದು. ಈ ಬಿಲಸ್ವರ್ಗದಲ್ಲಿರತಕ್ಕವರು ಸ್ವರ್ಗದಲ್ಲಿರುವವರಂತೆ ಕಾಮೋಪ ಭೋಗಗಳಿಂದ ಸುಖಪಡುತ್ತಿರುವರು. ಆ ಬಿಲಸ್ವರ್ಗಗಳಲ್ಲಿ ಮಯಾಸುರನಿರ್ಮಿತ ಪಟ್ಟಣಗಳಿವೆ. ಅಹೋರಾತ್ರಿಗಳ ಭಯವಿಲ್ಲದೆ ಸರ್ಪಗಳ ಹೆಡೆಗಳಲ್ಲಿರುವ ಮಣಿಗಳು ಕತ್ತಲನ್ನು ನಿವಾರಿಸುತ್ತವೆ. ಅಲ್ಲಿ ರೋಗಾದಿಗಳಿಲ್ಲ. ಸುದರ್ಶನ ಚಕ್ರದ ಹೊರತು ಬೇರೆ ಯಾರಿಂದಲೂ ಸಾವು ಬರುವುದಿಲ್ಲ. ಚಕ್ರವು ಪ್ರವೇಶಿಸಿದೊಡನೆ ಅಸುರಸ್ತ್ರೀಯರ ಗರ್ಭವು ಸ್ರಾವವಾಗಿ ಬೀಳುವುದು.

**ಅತಲ :–** ಇಲ್ಲಿ ಮಯನ ಪುತ್ರ ಬಲನು ವಾಸಿಸುತ್ತಿರುವನು. ಅವನು ಆಕಳಿಸುವಾಗ ಸ್ವೈರಿಣೀ (ಇಚ್ಛಾನುಸಾರ ಸಜಾತೀಯ ಪುರುಷರೊಡನೆ ಬೆರೆಯುವವಳು), ಕಾಮಿನೀ (ಗಂಡಸರ ಕಾಮನಾನುಸಾರವಾಗಿ ಸಜಾತೀಯ ವಿಜಾತೀಯ ಪುರುಷರೊಡನೆ ಬೆರೆಯುವವಳು), ಪುಂಶ್ಚಲೀ (ಸುರೂಪಿಯಾಗಲಿ, ಕುರೂಪಿಯಾಗಲೀ ಪುರುಷ ಮಾತ್ರರೊಡನೆ ಸುರತಕ್ರೀಡೆಯನ್ನು ಬಯಸುವವಳು) ಎಂಬ ಮೂರು ಬಗೆಯ ಸ್ತ್ರೀಯರು ಹುಟ್ಟಿರುವರು. ಇವರು ತಮ್ಮಲ್ಲಿಗೆ ಬರುವ ಪುರುಷನಿಗೆ ಹಾಟಕವೆಂಬ ರಸಾಯನವನ್ನು ಕೊಟ್ಟು ಸಮರ್ಥನನ್ನಾಗಿ ಮಾಡಿ ಯಥೇಷ್ಟವಾಗಿ ರಮಿಸುವರು.

**ವಿತಲ :–** ಹಾಟಕೇಶ್ವರನಾಮಕನಾದ ಶಿವನು ಪ್ರಜಾವೃದ್ಧಿಗಾಗಿ ಬ್ರಹ್ಮ ದೇವರಿಂದ ನಿಯತನಾಗಿ ಪಾರ್ವತೀಸಹಿತನಾಗಿರುವನು. ಇವರಿಬ್ಬರ ವೀರ್ಯದಿಂದ ಹಾಟಕಾನದಿಯು ಹುಟ್ಟಿದೆ

**ಸುತಲ :–** ಇಲ್ಲಿ ಬಲಿಯು ಶ್ರೀಹರಿಯನ್ನು ಆರಾಧಿಸುತ್ತಿರುವನು. ವಾಮನನು ಗದಾಪಾಣಿಯಾಗಿ ಈಗಲೂ ಬಲಿಯ ಬಾಗಿಲಲ್ಲಿ ಕಾದಿರುವನು.

**ತಲಾತಲ :–** ರುದ್ರರಕ್ಷಿತ ಮಯದಾನವನು ಭಯವಿಲ್ಲದೆ ಇಲ್ಲಿ ಇರುವನು.

**ಮಹಾತಲ :–** ಕದ್ರುವಿನ ಮಕ್ಕಳಾದ, ಅನೇಕ ಹೆಡೆಗಳುಳ್ಳ ಕ್ರೋಧವಶ ವೆಂಬ ಸರ್ಪಗಣವಿದೆ. ಆ ಸರ್ಪಗಳಲ್ಲಿ ಕುಹಕ, ತಕ್ಷಕ, ಕಾಲಿಯ ಮೊದಲಾದವರು ಗರುಡನಿಂದ ಹೆದರುತ್ತಿದ್ದರೂ ಕದಾಚಿತ್ ಮತ್ತರಾಗಿ ಹೆಂಡಿರುಮಕ್ಕಳಲ್ಲಿ ಕ್ರೀಡಿಸು ತ್ತಿರುವರು.

**ರಸಾತಲ :–** ದಿತಿಪುತ್ರರೂ, ದನುಪುತ್ರರೂ, ನಿವಾತಕವಚರೂ, ಕಾಲ ಕನ್ಯಾಪುತ್ರರೂ ಮೊದಲಾದ ದೇವ ಶತ್ರುಗಳು ಇಲ್ಲಿ ಇರುತ್ತಾರೆ.

**ಪಾತಾಳ .** ವಾಸುಕಿ ಮೊದಲಾದ ನಾಗಪತಿಗಳೂ, ಶಂಖ, ಕುಲಿಕ, ಮಹಾ ಶಂಖ, ಶ್ವೇತ, ಧನಂಜಯ ಮೊದಲಾದವರು ಇಲ್ಲಿ ವಾಸಿಸುತ್ತಿದ್ದಾರೆ. ಅವರ ಹೆಡೆ ಗಳಲ್ಲಿರುವ ಮಣಿಗಳು ಅಂಧಕಾರವನ್ನು ಹೋಗಲಾಡಿಸುತ್ತಿವೆ. ಪಾತಾಳಲೋಕದ ಕೆಳಗೆ ಮೂವತ್ತು ಸಾವಿರ ಯೋಜನಗಳ ದೂರದಲ್ಲಿ ಸಂಕರ್ಷಣಾವಿಷ್ಟ ಶೇಷ ನಿರುವನು. ಅವನ ಸಾವಿರ ಹೆಡೆಗಳ ಪೈಕಿ ಒಂದು ಹೆಡೆಯಲ್ಲಿ ಧರಿಸಲ್ಪಟ್ಟಿರುವ ಈ ಭೂಮಂಡಲವು ಸಾಸುವೆಯಂತೆ ಕಾಣಿಸುತ್ತಿದೆ. ಪ್ರಳಯವು ಸಮೀಪಿಸಿದಾಗ ಶೇಷನು ಜಗತ್ತನ್ನು ಸಂಹರಿಸಲು ಬಯಸುವನು. ಆಗ ಅವನ ಭ್ರೂಮಧ್ಯದಿಂದ ತ್ರಿಶೂಲ ಪಾಣಿಯು ಹೊರಗೆ ಬರುವನು. ರುದ್ರನ ರೂಪವು ಹನ್ನೊಂದಾಗಿ ಭಾಗಿಸಲ್ಪಟ್ಟಿರು ವುದು. ಇವನಿಗೆ ಸಾಂಕರ್ಷಣ ಎಂದು ಹೆಸರು. ಸರ್ಪರಾಜರು ಸಾತ್ವತಶ್ರೇಷ್ಠ ರೊಂದಿಗೆ ಶೇಷದೇವರ ಪಾದಪದ್ಮವನ್ನು ನಮಿಸುವರು. ನಾಗಕನ್ಯೆಯರು ಪ್ರೇಮ ಪೂರ್ಣರಾಗಿ ಶೇಷದೇವರ ಸುಂದರವದನವನ್ನೇ ನೋಡುವರು. ಸುರ, ಅಸುರ, ಉರಗಾದಿಗಳೂ ಸದಾ ಇವರನ್ನು ಧ್ಯಾನಿಸುತ್ತಿರುವರು ಶೇಷದೇವರು ಮುಕ್ತಿಯೋಗ್ಯ ಉಪಾಸಕರ ಮನಸ್ಸಿನಲ್ಲಿ ಸಂನಿಹಿತರಾಗಿ ಅಲ್ಲಿರುವ ಅಜ್ಞಾನ, ಅನ್ಯಥಾ ಜ್ಞಾನಗಳನ್ನು ಬೇಗ ಹೋಗಲಾಡಿಸುವರು. ನಾರದರು, ತುಂಬುರು ಸಹಿತರಾಗಿ ಬ್ರಹ್ಮಸಭೆಯಲ್ಲಿ ಶೇಷ ಮತ್ತು ಅವನ ಅಂತರ್ಯಾಮಿಯಾದ ಶ್ರೀಹರಿಯ ಮಹಿಮೆಗಳನ್ನು ಗಾನ ಮಾಡುವರು :–

"ಶೇಷಾಂತರ್ಯಾಮಿಯಾದ ಸಂಕರ್ಷಣನ ಕೃಪಾಕಟಾಕ್ಷದಿಂದ ತ್ರಿಗುಣಗಳು ತಮ್ಮ ಕಾರ್ಯದಲ್ಲಿ ಸಮರ್ಥಗಳಾದುವು. ಶ್ರೀಹರಿಯು ಜಗತ್ತನ್ನು ಸ್ವತಂತ್ರವಾಗಿ ಧರಿಸಿರುವವನು. ಇವನ ಮಹಿಮೆಯನ್ನು ಯಾರೂ ಪೂರ್ಣವಾಗಿ ತಿಳಿಯಲಾರರು. ಜಗತ್ತು ಇವನಲ್ಲಿ ಪ್ರಕಾಶಿಸುವುದು. ಸಿಂಹವು ಇವನ ಶೌರ್ಯಾದಿರೂಪ ಕ್ರೀಡೆಯನ್ನು ಅಭ್ಯಾಸ ಮಾಡಿತು. ಶ್ರೀಹರಿಯ ನಾಮವನ್ನು ಆಕಸ್ಮಿಕವಾಗಿ ಕೇಳಿದರೂ, ದುಃಖಿತನು ಧರ್ಮಭ್ರಷ್ಟನಾಗಿದ್ದರೂ, ಭಕ್ತಿಯಿಂದ ಹೇಳಿದರೆ ಸರ್ವಪಾಪಗಳೂ ತಕ್ಷಣ ನಾಶ ಹೊಂದುವುವು.

ಶ್ರೀಹರಿಯ ನಾಮದ ಮಹಿಮೆಯನ್ನು ಶ್ರೀಹರಿದಾಸರು ಹೇಳುವುದನ್ನು ಕೇಳಿ :–

**ಉಗಾಭೋಗ**

ಪತಿತನ ಪಾವನ ಮಾಡುವುದು ಹರಿ ನಿನ್ನ ನಾಮೋಚ್ಚಾರಣೆ
ಷಟ್ಕರ್ಮ ನಿರತನ ಮಾಡುವುದು ಹರಿ ನಿನ್ನ ನಾಮೋಚ್ಚಾರಣೆ
ಮಿತಿಯುಂಟೆ ನಿನ್ನ ನಾಮದ ಮಹಿಮೆಗೆ ರುಕ್ಮಿಣೀಪತಿವಿಠಲ ನಮೋ ನಮೋ ಎಂಬೆ ॥ ೧ ॥
ಕೋಟಿ ಕೋಟಿಗೆ ನಿನ್ನ ನಾಮವೊಂದೇ ಸಾಕು । ದಾಟಿಸುವುದು ಭವಸಾಗರವ ॥
ಬೂಟಕತನದಲ್ಲಿ ಹರಿದಾಸನಾದರೆ । ತೋಟವಿಲ್ಲದೆ ಮೋಟ ಎತ್ತಿದಂತೆ ॥
ನೀಟಾಗದು (ಸುಖವಾಗದು) ಕಾಣೊ ಎಂದಿಗೂ ಯಮಭಟರ । ಕಾಟತಪ್ಪದು ಕಾಶಿಯೊಳಗಿದ್ದರು ॥
ಹಾಟಕಾಂಬರಧರ ವಿಜಯವಿಠಲರೇಯ। ನಾಟಿಸು ನಿನ್ನ ಚರಣದಲ್ಲಿ ಮನಸು॥೧॥
ಅಣಕದಿಂದಾಗಲಿ ಡಂಭದಿಂದಾಗಲಿ । ಎಡಹಿದಡಾಗಲಿ ಬಿದ್ದಡಾಗಲಿ
ತಾಗಿದಡಾಗಲಿ ತಾಕಿಲ್ಲದಡಾಗಲಿ । ಮರೆದು ಮತ್ತೊಮ್ಮೆಯಾಗಲಿ
ಹರಿಹರಿಯೆಂದವಗೆ ನರಕದ ಭಯವ್ಯಾಕೆ । ಯಮ ಪಟ್ಟಣ ಕಟ್ಟಿದರೇನು
ಯಮಪಟ್ಟಣ ಒಟ್ಟಬಯಲಾದರೇನು । ಹರಿದಾಸರಿಗೆ ಪುರಂದರವಿಠಲ ॥ ೧ ॥

**ಶುಕ :–** ಶ್ರೀಹರಿಯ ಒಂದು ತಲೆಯಲ್ಲಿ ಭೂಮಂಡಲವು ಪರಮಾಣುವಿನಂತೆ ಹಗುರವಾಗಿದೆ. ಇವನ ಪರಾಕ್ರಮಗಳನ್ನು ಸಹಸ್ರಜಿಹ್ವನು ಪೂರ್ಣವಾಗಿ ಎಣಿಸಲಾರನು. ಭೂಮಿಯನ್ನು ಅನಾಯಾಸವಾಗಿ ಧರಿಸಿರುವ ಶ್ರೀಹರಿಯ ಅಧಿಷ್ಠಾನವುಳ್ಳ ಶೇಷದೇವರೂ ತಮ್ಮ ಯೋಗ್ಯತೆಗೆ ತಕ್ಕಂತೆ ಶ್ರೀಹರಿಗೆ ಆಧೀನವಾದ ಈ ಬಗೆಯ ಸಾಮರ್ಥ್ಯವುಳ್ಳವರು.

**ಇಪ್ಪತ್ತುಮೂರನೆಯ ಅಧ್ಯಾಯ ಮುಗಿದುದು**

**ಪರೀಕ್ಷಿತ್** – ಆಚಾರ್ಯರೆ ! ಸ್ವರ್ಗದಿಂದ ಹಿಡಿದು ಪಾತಾಳಪರ್ಯಂತ ಇರುವ ಲೋಕಗಳು ಮತ್ತು ಅವುಗಳಲ್ಲಿ ವಾಸಿಸುವರ ಸುಖದುಃಖಗಳು ವಿಚಿತ್ರಗಳಾಗಿರುವುವು. ಇವು ಪ್ರತ್ಯಕ್ಷದಿಂದಲೂ, ನಿಮ್ಮ ವಚನದಿಂದಲೂ ಮತ್ತು ಶಾಸ್ತ್ರದಿಂದಲೂ ತಿಳಿದು ಬರುತ್ತಿದೆ. ಈ ತಾರತಮ್ಯವು ಹೇಗೆ ಸಂಭವಿಸುವುದು ?

**ಶುಕ** :– ಕರ್ಮಮಾಡುವ ಜೀವರ ಶ್ರದ್ಧೆ, ಸಾತ್ವಿಕಾದಿಭೇದ, ಪೂಜ್ಯ ದೇವತಾ ಭೇದ ಇವುಗಳಿಂದ ಬಹು ಬಗೆಯಾಗಿರುವುದು. ಅದಕ್ಕೆ ಅನುಸಾರವಾಗಿ ಬೇರೆ ಬೇರ ಫಲಗಳಿಂದ ಲೋಕಗಳು ದೊರೆಯುವುವು. ಜೀವರ ಕರ್ಮಕ್ಕೆ ತಕ್ಕ ಲೋಕವು ದೊರೆಯುತ್ತೆ. ವೇದಾದಿಗಳಲ್ಲಿ ನಿಷೇಧಿಸಲ್ಪಟ್ಟ ಕರ್ಮಗಳಿಂದ ಪಾಪಗಳು, ಪಾಪಕರ್ಮಮಾಡುವ ಜೀವರ ಶ್ರದ್ಧೆಯೂ ತಾಮಸ, ತಾಮಸತರ ತಾಮಸತಮವೆಂದು ಮೂರು ಬಗೆ. ಆದ್ದರಿಂದ ಧರ್ಮದಿಂದ ಒಳ್ಳೆ ಫಲ ಬರುವಂತೆ ಅಧರ್ಮದಿಂದ ಅನೇಕ ಬಗೆಯ ಕೆಟ್ಟ ಫಲವೂ ಬರುವುದು. ಜೀವರು ಅನಾದಿ ಅವಿದ್ಯಾ ಮೂಲವಾದ ಕಾಮದಿಂದ ಕೂಡಿರುವರು. ಅವರ ಪಾಪಗಳಿಗೆ ಬರುವ ಫಲ ರೂಪಗಳಾದ ಗತಿಗಳೂ ಸಾವಿರಾರು ನರಕರೂಪಲ್ಲಿರುವುವು. ಅವುಗಳಲ್ಲಿ ಮುಖ್ಯವಾದ ಕೆಲವು ನರಕಗಳನ್ನು ವಿವರಿಸುವೆನು ಕೇಳು.

**ಪರೀಕ್ಷಿತ್** :– ನರಕಗಳು ಭೂಮಿಯ ಮೇಲಿವೆಯೇ ಅಥವಾ ಹೊರಗೆ ಇವೆಯೆ ? ಒಳಗಿವೆಯೆ ? ಒಳಗಿದ್ದಲ್ಲಿ ಅವು ಯಾವ ದಿಕ್ಕಿನಲ್ಲಿವೆ ?

**ಶುಕ** : ನರಕಗಳು ಮೂರು ಲೋಕಗಳ ಒಳಗೇ ಇವೆ, ಭೂಮಿಯ ಕೆಳಗೆ ಗರ್ಭೋದಕದ ಮೇಲೆ ದಕ್ಷಿಣ ದಿಕ್ಕಿನಲ್ಲಿವೆ. ಆ ದಿಕ್ಕಿನಲ್ಲಿ ಅಗ್ನಿಷ್ವಾತ್ತಾದಿ ಪಿತೃದೇವತೆಗಳು ತಮ್ಮ ಕುಲದವರ ಶ್ರೇಯಸ್ಸಿಗಾಗಿ ಧ್ಯಾನಾಸಕ್ತರಾಗಿರುತ್ತಾರೆ. ಪಿತೃಗಳಿಗೆ ಅಧಿಪತಿಯಾದ ಯಮನು ಹರಿಯ ಆಜ್ಞೆಯಂತೆ ಜೀವರು ಮಾಡಿದ ಕರ್ಮಕ್ಕೆ ಅನುಸಾರ ನರಕಗಳಿಗೆ ಹಾಕಿ ಶಿಕ್ಷಿಸುತ್ತಾನೆ. ಕೆಲವರು ನರಕಗಳು 21 ಇವೆ ಎನ್ನುವರು ಅವುಗಳ ಹೆಸರುಗಳು .– ತಾಮಿಸ್ರ, ಅಂಧತಾಮಿಸ್ರ, ರೌರವ, ಮಹಾರೌರವ, ಕುಂಭೀಪಾಕ, ಕಾಲಸೂತ್ರ. ಅಸಿಪತ್ರವನ, ಸೂಕರಮುಖ, ಅಂಧಕೂಪ, ಕೃಮಿಭೋಜನ, ಸಂದಂಶ, ತಪ್ತಭೂಮಿ, ವಜ್ರಕಂಟಕಶಾಲ್ಮಲೀ, ವೈತರಣೆ, ಪೂಯೋದ, ಪ್ರಾಣರೋಧ, ವಿಶಸನ, ಲಾಲಾಭಕ್ಷ, ಸಾರಮೇಯಾದನ, ಅವೀಚೀಪೂರ ಮತ್ತು ರೇತಃಪಾನ.

ಇವುಗಳಲ್ಲದೆ ಕ್ಷಾರಕರ್ದಮ, ರಕ್ಷೋಗಣಭೋಜನ, ಶೂಲಪ್ರೋತ, ದಂದಶೂಕ, ಅವಟನಿರೋಧ, ಪರ್ಯಾವರ್ತನ ಮತ್ತು ಸೂಚೀಮುಖ ಎಂಬ ಏಳು ನರಕ

ಗಳಿವೆ. ಈ ಇಪ್ಪತ್ತೆಂಟು ನರಕಗಳೂ ಅನೇಕ ಬಗೆಯ ತೀವ್ರ ಯಾತನೆಗಳನ್ನು ಅನು ಭವಿಸುವ ಸ್ಥಳಗಳು.

1. **ತಾಮಿಸ್ರ** .- ಇತರರ ಹಣ, ಹೆಂಡತಿ, ಮಕ್ಕಳನ್ನು ಅಪಹರಿಸುವವರನ್ನು ಈ ನರಕದಲ್ಲಿ ತಳ್ಳುವರು.

2. **ಅಂಧತಾಮಿಸ್ರ** .- ಮನುಷ್ಯರನ್ನು ವಂಚಿಸಿ ಅವರ ಧನ ಮತ್ತು ಹೆಂಡತಿ ಯರನ್ನು ಅನುಭವಿಸುವ ಪಾಪಿಯು ಬೀಳುವ ನರಕವಿದು

3. **ರೌರವ** :- ಪ್ರಾಣಿಗಳಿಗೆ ದ್ರೋಹಮಾಡಿ ಕುಟುಂಬ ಪೋಷಣೆ ಮಾಡಿದ ಪಾಪಿಯು ಬೀಳುವ ನರಕ.

4. **ಮಹಾರೌರವ** :- ತನ್ನ ದೇಹವನ್ನು ಮಾತ್ರ ಪೋಷಿಸುವ ಪಾಪಿಯು ಬೀಳುವ ನರಕ

5. **ಕುಂಭೀಪಾಕ** :- ಪಶುಪಕ್ಷಿಗಳನ್ನು ನಾಶಗೊಳಿಸಿದ ಪಾಪಿಗೆ ಆಗುವ ನರಕ.

6. **ಕಾಲಸೂತ್ರ** :- ತಂದೆ, ತಾಯಿ, ಬ್ರಾಹ್ಮಣರಿಗೆ ದ್ರೋಹ ಮಾಡಿದವನು ದುಃಖವನ್ನು ಅನುಭವಿಸುವ ನರಕ.

7. **ಅಸಿಪತ್ರವನ** :- ವೇದಮಾರ್ಗವನ್ನು ಬಿಟ್ಟು, ವೇದ ಮತ್ತು ಧರ್ಮಗಳನ್ನು ದ್ವೇಷಿಸುತ್ತ ಪಾಖಂಡ ಮಾರ್ಗವನ್ನು ಹಿಡಿದ ಪಾಪಿಗೆ ಆಗುವ ನರಕ.

8. **ಸೂಕರ ಮುಖ** :- ನಿರಪರಾಧಿಯನ್ನು ಶಿಕ್ಷಿಸಿದವನು, ಬ್ರಾಹ್ಮಣ ದೇಹ ವನ್ನು ದಂಡಿಸಿದ ರಾಜನು ಅಥವಾ ರಾಜ ಭೃತ್ಯನು ಬೀಳುವ ನರಕ.

9. **ಅಂಧಕೂಪ** :- ಇತರರಿಗೆ ಕೆಡಕಾಗುವುದನ್ನರಿಯದೆ, ಪ್ರಾಣಿಗಳ ರಕ್ತ ಪಾನಾದಿಗಳಿಂದಲೇ ಜೀವಿಸುವ ತಿಗಣೆ, ಸೊಳ್ಳೆ ಮೊದಲಾದುವುಗಳಿಗೆ ವ್ಯಥೆವುಂಟು ಮಾಡುವವನಿಗೆ ಆಗುವ ನರಕ.

10. **ಕೃಮಿಭೋಜನ** :- ಪಂಚಮಹಾಯಜ್ಞವನ್ನು ಮಾಡದೆ ಭೋಜನ ಮಾಡುವ ವಿಪ್ರನಿಗಾಗುವ ನರಕ.

11. **ಸಂದಂಶ** :- ಬ್ರಾಹ್ಮಣಾದಿಗಳ ಚಿನ್ನ ಮತ್ತು ರತ್ನಾದಿಗಳನ್ನು ಅಪಹರಿ ಸುವವನು ಬೀಳುವ ನರಕ.

12. **ತಪ್ತಭೂಮಿ** :- ಅಗಮ್ಯರಾದ ಸ್ತ್ರೀಯರನ್ನು ಬೆರೆತ ಪುರುಷರೂ, ಪತಿ ಭಿನ್ನ ಪರಪುರುಷ ರೊಡನೆ ಭೋಗಿಸಿದ ಸ್ತ್ರೀಯರೂ ಬೀಳುವ ನರಕ.

13. **ವಜ್ರಕಂಟಕ ಶಾಲ್ಮಲಿ** :- ಯೋಗ್ಯಾಯೋಗ್ಯ ವಿಚಾರವಿಲ್ಲದೆ ಸರ್ವಸ್ತ್ರೀ ಸಂಗ ಮಾಡಿದವರಿಗಾಗುವ ನರಕ.

14. **ವೈತರಣೀ ನದಿ :-** ಧರ್ಮಮಾರ್ಗಗಳನ್ನು ಕೆಡಿಸುವ ರಾಜರನ್ನೂ, ರಾಜ ಭೃತ್ಯರನ್ನೂ ಈ ನದಿಯಲ್ಲಿ ಯಮಭಟರು ಮುಳುಗಿಸಿ ಹಿಂಸಿಸುವರು.

15. **ಪೂಯೋದ :-** ಸದಾಚಾರ ಭ್ರಷ್ಟರಾಗಿ, ನೀಚ ಜಾತಿಯ ಹೆಂಗಸರನ್ನು ಭೋಗಿಸುವವರು ಬೀಳುವ ನರಕ. ಈ ನರಕದಲ್ಲಿ ಮೂತ್ರ ತುಂಬಿದುದರಲ್ಲಿ ಪಾಪಿಗಳನ್ನು ಮುಳುಗಿಸುವರು.

16. **ಪ್ರಾಣಿರೋಧ .-** ನಾಯಿ, ಬೆಕ್ಕುಗಳನ್ನು ಸಾಕುತ್ತ, ನಿಷ್ಕಾರಣವಾಗಿ ಮೃಗಗಳನ್ನು ಹಿಂಸಿಸುವ ಬ್ರಾಹ್ಮಣಾದಿಗಳು ಬಿದ್ದು ನರಳುವ ನರಕ.

17. **ವಿಶಸನ .-** ದಂಭದಿಂದ ಯಜ್ಞ ಮಾಡುವ ದಾಂಭಿಕರನ್ನು ಶಿಕ್ಷಿಸುವ ನರಕ.

18. **ಲಾಲಾಭಕ್ಷ್ಯ :-** ಕಾಮಾತುರನಾಗಿ ಹೆಂಡತಿಗೆ ರೇತಃಸನ್ನು ಕುಡಿಸುವ ಪುರುಷನು ಈ ನರಕದಲ್ಲಿ ಬಿದ್ದು ರೇತಃಪಾನ ಮಾಡುತ್ತಿರುವನು.

19. **ಸಾರಮೇಯಾದನ :-** ಮನೆಗೆ ಬೆಂಕಿಹಾಕುವವರು, ವಿಷಹಾಕಿ ಕೊಲ್ಲುವವರು, ಗ್ರಾಮಾದಿಗಳನ್ನು ಹಾಳು ಮಾಡುವವರೂ ಆದ ದಸ್ಯುರೂಪ ರಾಜರನ್ನೂ ರಾಜಭಟರನ್ನೂ ಈ ನರಕದಲ್ಲಿ ಹಾಕುವರು.

20. **ಅವೀಚೀಪೂರ :-** ಸುಳ್ಳುಸಾಕ್ಷಿ ಹೇಳುವವರು ನರಳುವ ನರಕ.

21. **ರೇತಃಪಾನ :-** ಪ್ರಮಾದದಿಂದ ಮದ್ಯಪಾನ ಮಾಡುವ ವಿಪ್ರ, ಕ್ಷತ್ರಿಯ, ವೈಶ್ಯ ವರ್ಣಗಳ ಪುರುಷ ಸ್ತ್ರೀಯರಿಗೆ ಕಾದ ಕಬ್ಬಿಣದ ರಸಪಾನಮಾಡಿಸುವ ನರಕ.

22. **ಕ್ಷಾರಕರ್ದಮ :-** ಸದಾಚಾರವಂತರೂ, ವಿದ್ಯಾವಂತರೂ ಆದ ಉತ್ತಮರಿಗೆ ಅವಮಾನ ಮಾಡುವವನು ಬೀಳುವ ನರಕ.

23. **ರಕ್ಷೋಗಣ ಭೋಜನ :-** ಕಾಳಿ, ಭೈರವ, ಭೂತ, ಭೇತಾಳ ಮೊದಲಾದ ದುರ್ದೇವತೆಗಳಿಗೆ ನರಬಲಿಯನ್ನು ಕೊಡುವ ಪಾಪಿಗಳು ನರಳುವ ನರಕ.

24. **ಶೂಲಪ್ರೋತ :-** ನಿರಪರಾಧಿ ಪ್ರಾಣಿಗಳಿಗೆ ಆಸೆ ತೋರಿಸಿ, ಅವುಗಳನ್ನು ಹಿಡಿದು ಹಿಂಸಿಸುವವರಿಗಾಗುವ ನರಕ.

25. **ದಂದಶೂಕ :-** ಸರ್ಪಾದಿಗಳಂತೆ ಕ್ರೂರಸ್ವಭಾವವುಳ್ಳವರಾಗಿ ಇತರ ಪ್ರಾಣಿಗಳಿಗೆ ಭಯಹುಟ್ಟಿಸುವ ಪಾಪಿಗಳು ನರಳುವ ನರಕ.

26. **ಅವಟ ನಿರೋಧ :-** ಗುಹಾದಿಗಳಲ್ಲಿ ತುರುಕಿ ಸೆರೆಹಾಕುವವರು ಶಿಕ್ಷಿಸಲ್ಪಡುವ ನರಕ.

27. **ಪರ್ಯಾವರ್ತನ :-** ಅತಿಥಿ ಅಭ್ಯಾಗತರನ್ನು ಆದರಿಸದೆ ತಿರಸ್ಕರಿಸುವವರು ಬೀಳುವ ನರಕ.

28 **ಸೂಚೀಮುಖ** :– ಧನದ ನಿಮಿತ್ತ ತನ್ನ ಸಮಾನವಿಲ್ಲವೆಂದು ಬೀಗಿ ಬಿರಿಯುತ್ತ, ದೊಡ್ಡವರನ್ನು ತಿರಸ್ಕರಿಸಿ ಲೋಭದಿಂದ ದುಡ್ಡನ್ನು ಸಂಗ್ರಹಿಸುವವರನ್ನು ಯಮಭಟರು ಈ ನರಕದಲ್ಲಿ ಹಾಕುವರು.

ಇಷ್ಟೇ ಅಲ್ಲದೆ ಧರ್ಮಭ್ರಷ್ಟರು ಹೋಗಿ ಬೀಳತಕ್ಕ ನರಕಗಳು ಯಮಲೋಕದಲ್ಲಿ ಸಾವಿರಾರು ಇವೆ. ಹಾಗೆಯೇ ಪುಣ್ಯಕರ್ಮ ಮಾಡಿದವರು ಸ್ವರ್ಗದಲ್ಲಿ ಸುಖವನ್ನು ಅನುಭವಿಸಿ, ಉಳಿದ ಪುಣ್ಯದ ಫಲವಾಗಿ ಭೂಮಿಯಲ್ಲಿ ಜನಿಸುವರು. ಯಾರು ನಿವೃತ್ತಿ ಮಾರ್ಗವನ್ನು ಅನುಸರಿಸುವರೋ ಅವರು ಮೋಕ್ಷವನ್ನು ಹೊಂದುವರು.

ರಾಜನೇ ! ಬ್ರಹ್ಮಾಂಡ ಕೋಶವು ಇಷ್ಟೇ. ಇದನ್ನೇ ಪುರಾಣದಲ್ಲಿ ಹದಿನಾಲ್ಕು ಲೋಕಗಳೆಂದು ವಿಭಾಗಿಸಿ ವರ್ಣಿಸುವರು.

ಬ್ರಹ್ಮಾಂಡವು ಶ್ರೀಹರಿಯ ಸ್ಥೂಲ ಪ್ರತಿಮೆ. ಈ ರೂಪವನ್ನು ಶ್ರದ್ಧೆಯಿಂದ ಪಠಿಸುವವರು, ಹೇಳುವವರು, ಕೇಳುವವರು ಇವರೆಲ್ಲರೂ ಭಕ್ತಿಯಿಂದ ಶುದ್ಧಾಂತಃಕರಣರಾಗಿ ಅಣುವಾದ ಶ್ರೀಹರಿಯ ಬಿಂಬರೂಪವನ್ನು ನೋಡುವರು. ಮೊದಲು ಹರಿಯ ಸ್ಥೂಲ ರೂಪವನ್ನು ಉಪಾಸಿಸಿ ಸಿದ್ಧಿ ಪಡೆದು, ಬಳಿಕ ಸೂಕ್ಷ್ಮ ರೂಪವನ್ನು ಉಪಾಸಿಸುವುದೇ ಕ್ರಮವು.

ಶ್ಲೋಕ ॥ **ಭೂದ್ವೀಪವರ್ಷಸರಿದದ್ರಿನಭಃಸಮುದ್ರಪಾತಾಳದಿಙ್ನರಕಭಾಗಣ ಲೋಕಸಂಸ್ಥಂ । ಗೀತಂ ಮಯಾ ತವ ನೃಪಾದ್ಭುತಮೀಶ್ವರಸ್ಯ ಸ್ಥೂಲಂ ವಪುಃ ಸಕಲಜೀವನಿಕಾಯ ಧಾಮ್ನಃ ॥44॥**

ಪರೀಕ್ಷಿದ್ರಾಜನೇ ! ಶ್ರೀಹರಿಯು ಸರ್ವಜೀವಸಮೂಹಕ್ಕೆ ಆಶ್ರಯನು ಮತ್ತು ಅಲ್ಲಿ ನೆಲೆಸಿರುವನು. ಸಕಲ ಜೀವರಿಗಾಶ್ರಯವಾದ ಬ್ರಹ್ಮಾಂಡಕ್ಕೂ ಅವನೇ ಆಶ್ರಯನು, ಸರ್ವನಿಯಾಮಕನು. ಇವನ ಸ್ಥೂಲ ಪ್ರತಿಮಾರೂಪವು ಅತ್ಯಾಶ್ಚರ್ಯಕರವಾದುದು. ಭೂಮಿ, ದ್ವೀಪಗಳು, ಖಂಡಗಳು, ನದಿಗಳು, ಬೆಟ್ಟಗಳು, ಆಕಾಶ, ಸಮುದ್ರ, ಪಾತಾಳ, ದಿಕ್ಕುಗಳು, ನರಕ, ತೇಜೋಗಣಗಳು ಮತ್ತು ಲೋಕಗಳು ಇವೇ ಅದರ ಅವಯವಗಳು. ಇಂತಹ ಶ್ರೀಹರಿಯ ಸ್ಥೂಲ ಪ್ರತಿಮೆಯ ಶರೀರವನ್ನು ನಿನಗೆ ಹೇಳಿರುವೆನು.

**ಇಪ್ಪತ್ತುನಾಲ್ಕನೆಯ ಅಧ್ಯಾಯ ಮುಗಿದುದು**

**ಪಂಚಮಸ್ಕಂಧ ಸಮಾಪ್ತ**

# ಷಷ್ಠಸ್ಕಂಧಾರಂಭ

**ರಾಜೋವಾಚ**

**ನಿವೃತ್ತಿಮಾರ್ಗಃಕಥಿತ ಆದೌ ಭಗವತಾ ಯಥಾ ।**
**ಕ್ರಮಯೋಗೋಪಲಬ್ಧೇನ ಬ್ರಹ್ಮಣಾ ಯದಸಂಸೃತಿಃ ॥೧॥**

**ಪರೀಕ್ಷಿತ್ :-** ಶುಕಮುನಿಗಳೇ ! ಭಕ್ತಿಪೂರ್ವಕ ಧ್ಯಾನದಿಂದ, ಅಪರೋಕ್ಷ ಜ್ಞಾನವೂ, ಅದರಿಂದ ಹರಿಯ ಪ್ರಸಾದವೂ, ಅದರಿಂದ ಸಂಸಾರನಿವೃತ್ತಿಯೂ ಆಗುವುದೆಂಬ ನಿವೃತ್ತಿಮಾರ್ಗವನ್ನು ಹೇಳಿರುವಿರಿ.

ಹಾಗೂ ಪ್ರವೃತ್ತಿಮಾರ್ಗ, ಅದರ ಫಲವನ್ನೂ, ಪ್ರಿಯವ್ರತ-ಉತ್ತಾನಪಾದರ ವಂಶಗಳನ್ನೂ, ಭೂಗೋಳ-ಖಗೋಳಗಳ ಪರಿಮಾಣಪೂರ್ವಕವಾದ ಆ ವಿಷಯಗಳನ್ನೂ, ನರಕಗಳ ವಿಷಯವನ್ನೂ ತಾವು ತಿಳಿಸಿದಿರಿ. ನರಕಗಳಿಗೆ ಕಾರಣಗಳಾದ ಪಾಪಗಳನ್ನು ಸಂಪೂರ್ಣವಾಗಿ ನಾಶಪಡಿಸುವ ಸರ್ವೋತ್ತಮವಾದ ಸಾಧನೆಯು ಯಾವುದೆಂಬುದನ್ನು ತಿಳಿಸಬೇಕು.

**ಶುಕ :-** ರಾಜೇಂದ್ರನೇ ! ಪಾಪಗಳ ಪ್ರಾಯಶ್ಚಿತ್ತಗಳು ಮೂರು ಬಗೆ. ಹೇಳುವಂತೆ ನಡೆಯುವುದು ಒಂದು ಬಗೆ. ಸಹಜವಾಗಿಯೇ ಚಾಂದ್ರಾಯಣಾದಿ ವ್ರತಗಳು, ಬ್ರಹ್ಮಚರ್ಯೆ, ಶಮ, ದಮ, ಸತ್ಯ, ಶೌಚ, ಸಮಬುದ್ಧಿ ಮತ್ತು ನಿಯಮಗಳಾಚರಣೆ ಇವೆಲ್ಲ ಎರಡನೆಯ ಬಗೆ. ಭಕ್ತಿಪೂರ್ವಕ ನಾರಾಯಣನ **ನಾಮ ಸಂಕೀರ್ತನೆ** ಮೂರನೆಯ ಬಗೆ. ಈ ಮೂರನೆಯ ಬಗೆಯೇ ಸರ್ವೋತ್ತಮ ಸಾಧನೆಯು. ಇದಕ್ಕೆ ಅಜಾಮಿಳನೇ ಸಾಕ್ಷಿ ;-

ಅಜಾಮಿಳನು ಬ್ರಾಹ್ಮಣನು. ಕನ್ಯಾಕುಬ್ಜದಲ್ಲಿದ್ದನು. ದಾಸಿಯ ಸಂಗ ಮಾಡಿ ಕಳ್ಳತನ, ಜೂಜು ಮುಂತಾದುವುಗಳಿಂದ ದ್ರವ್ಯ ಸಂಪಾದಿಸಿ ಕುಟುಂಬ ಭರಣ ಮಾಡುತ್ತಿದ್ದನು. ಇವನಿಗೆ 88 ವರ್ಷಗಳಾದುವು. ಹತ್ತು ಜನ ಮಕ್ಕಳಿದ್ದರು. ಕೊನೆಯ ಪ್ರೇಮದ ಮಗನಿಗೆ ನಾರಾಯಣನೆಂದು ಹೆಸರಿಟ್ಟಿದ್ದನು. ಹೀಗಿರಲು ಯಮಭಟರು ಪಾಶವನ್ನು ಬೀಸಿ ಇವನನ್ನು ಒಯ್ಯಲು ಬಂದರು. ಅವರನ್ನು ನೋಡಿದ ಅಜಾಮಿಳನು ದುಃಖಿತನಾಗಿ "ದೂರೇ ಕ್ರೀಡನಕಾಸಕ್ತಂ ಪುತ್ರಂ ನಾರಾಯಣಾಹ್ವಯಂ" ಅಂದರೆ ದೂರದಲ್ಲಿ ಆಟವಾಡುತ್ತಿದ್ದ ನಾರಾಯಣನೆಂಬ ಹೆಸರುಳ್ಳ ಮಗನನ್ನು ಕೂಗಿದನು, ಹರಿಯು ಇವನಿಗೆ ಆಗ ಅನುಗ್ರಹಿಸಿದನು. ಅದರಿಂದ ಮಗನ ಹೆಸರು ಶ್ರೀಹರಿಯದೆಂದು ಹೊಳೆಯಿತು. ಭಕ್ತಿವೃದ್ಧಿಯಾಯಿತು. ಆಗ

ಭಕ್ತಿಪೂರ್ವಕವಾಗಿ ಅರ್ಥಾನುಸಂಧಾನದಿಂದ "ನಾರಾಯಣ" ಎಂದು ಉಚ್ಚರಿಸಿದನು. ಆ ಕೂಡಲೇ ವಿಷ್ಣುದೂತರು ಬಂದು ಇವನನ್ನು ಒಯ್ಯಲು ಬಂದಿದ್ದ ಯಮಭಟರನ್ನು ತಡೆದುಬಿಟ್ಟರು. ಆಗ ಯಮಭಟರು "ತೇಜಸ್ವಿಗಳಾದ ನೀವು ನಮ್ಮನ್ನೇಕೆ ತಡೆಯುವಿರಿ" ಎಂದು ಕೇಳಿದರು.

**ವಿಷ್ಣುದೂತರು :-** ಧರ್ಮ ಯಾವುದು ? ಅಧರ್ಮ ಯಾವುದು ? ಹೇಳಿ.

**ಯಮಭಟರು :-** "ವೇದ ಪ್ರಣಿಹಿತೋ ಧರ್ಮಃ" ವೇದದಲ್ಲಿ ಕರ್ತವ್ಯವೆಂದು ಹೇಳಿರುವುದೇ ಧರ್ಮವು. ಮಾಡಬಾರದೆಂದು ನಿಷೇಧಿಸಿರುವುದೇ ಅಧರ್ಮ. ಇವೆರಡಕ್ಕೂ ಸೂರ್ಯ, ಅಗ್ನಿ ಮೊದಲಾದ ದೇವತೆಗಳೇ ಸಾಕ್ಷಿಗಳು.

**ವಿಷ್ಣುದೂತರು :-** ಎಂತಹವರನ್ನು ದಂಡಿಸುವಿರಿ ? ದಂಡಾಧಿಕಾರಿ ಯಾರು ?

**ಯಮಭಟರು :-** ಸೂರ್ಯ ಮೊದಲಾದ ಸಾಕ್ಷಿಗಳು ಯಾರನ್ನು ಅಧರ್ಮ ಮಾಡಿರುವನೆಂದು ತಿಳಿಯುವರೋ ಅವನೇ ದಂಡಿಸಲ್ಪಡತಕ್ಕವನು. ದಂಡಾಧಿಕಾರಿಯು ಯಮರಾಜನು. ತ್ರಿಗುಣ ಸಂಬಂಧದಿಂದ ಜೀವರು ಒಳ್ಳೆಯದೋ, ಕೆಟ್ಟದೋ ಯಾವುದಾದರೂ ಒಂದು ಕರ್ಮವನ್ನು ಮಾಡುತ್ತಲೇ ಇರುವರು. ಧರ್ಮ ಮಾಡಿದವನು ಸುಖವನ್ನೂ ಪಾಪಮಾಡಿದವನು ದುಃಖವನ್ನೂ ಅನುಭವಿಸುವನು. ಪ್ರಕೃತ ಈ ಅಜಾಮಿಳನು ನಿಷ್ಠಬ್ರಾಹ್ಮಣನಾಗಿದ್ದು ಪುಷ್ಪಾದಿಗಳನ್ನು ತರಲು ಕಾಡಿಗೆ ಹೋದಾಗ ಸ್ವೇಚ್ಛಾಚಾರಿಣಿಯಾದ ಒಬ್ಬ ದಾಸಿಯು ಪರಪುರುಷನೊಡನೆ ವಿಹರಿಸುತ್ತಿದ್ದುದನ್ನು ನೋಡಿದನು. ಮನಸ್ಸು ವಿಕಾರವಾಯಿತು. ಹೆತ್ತ ತಂದೆ, ತಾಯಿ, ಧರ್ಮಪತ್ನಿ ಇವರನ್ನೆಲ್ಲ ತೊರೆದು ಆ ದಾಸಿಯೊಡನೆ ಸಂಗಮಾಡಿ ಅವಳ ಜೊತೆಯಲ್ಲಿಯೇ ಇದ್ದುಬಿಟ್ಟನು. ಇವನು ಮಾಡದಿರುವ ಪಾಪವೇ ಇಲ್ಲ. ಇದುವರೆಗೂ ಇವನು ಆ ಪಾಪಗಳಿಗೆ ಪ್ರಾಯಶ್ಚಿತ್ತ ಮಾಡಿಕೊಂಡಿಲ್ಲ. ಆದ್ದರಿಂದ ಇವನನ್ನು ಶಿಕ್ಷಿಸಿ ಪಾಪ ಪರಿಹಾರ ಮಾಡಬೇಕೆಂದೇ ಇವನನ್ನು ಯಮರಾಜನ ಬಳಿಗೆ ಕರೆದುಕೊಂಡು ಹೋಗುವೆವು.

### ಒಂದನೆಯ ಅಧ್ಯಾಯ ಮುಗಿದುದು

**ವಿಷ್ಣುದೂತರು :-** ಮಹಾತ್ಮನಾದ ಧರ್ಮರಾಜನು ಅನ್ಯಾಯ ಮಾಡುವವನಲ್ಲವೆಂದು ಜೀವರು ನಂಬಿ, ನಿರಾತಂಕವಾಗಿ ಧರ್ಮವನ್ನಾಚರಿಸಿ ಕೊಂಡಿರುವರು. ಹೀಗಿರುವಾಗ ಅವನು ದ್ರೋಹವನ್ನು ಹೇಗೆ ಮಾಡುವನು ? ಈ ಅಜಾಮಿಳನು ಭಕ್ತಿ

ಪೂರ್ವಕವಾಗಿ ಹರಿನಾಮ ಸಂಕೀರ್ತನೆಯನ್ನು ಮಾಡಿದ ಕಾರಣ, ಅವನು ಮಾಡಿದ ಸಕಲ ಪಾಪಗಳೂ ನಾಶವಾಗಿ ಮೋಕ್ಷವನ್ನು ಈಗ ಹೊಂದುವುದಕ್ಕೂ ಅರ್ಹನಾಗಿರುವನು. ಪರಮಾತ್ಮನ ನಾಮಸಂಕೀರ್ತನೆಯಿಂದ ಹೋಗದಿರುವ ಪಾಪವೇ ಇಲ್ಲ. ಯಾವ ಪ್ರಾಯಶ್ಚಿತ್ತವೂ ಭಕ್ತಿಪೂರ್ವಕ ಹರಿನಾಮ ಕೀರ್ತನೆ ಮಾಡದೆ ಪಾಪವನ್ನು ಪರಿಹರಿಸಲಾರದು.

ಸಂಕೇತದಿಂದಾಗಲಿ, ಪರಿಹಾಸದಿಂದಾಗಲಿ, ಎದ್ದಾಗ, ಬಿದ್ದಾಗ, ಇನ್ನೂ ಯಾವ ಯಾವ ಸಂದರ್ಭಗಳಲ್ಲಿ ಯಾಗಲಿ, ದಡ್ಡನಾಗಿರಲಿ, ಜ್ಞಾನಿಯಾಗಿರಲಿ, ಪತಿತನಾಗಿರಲಿ, ಭಕ್ತಿಪೂರ್ವಕ ಹರಿನಾಮಸಂಕೀರ್ತನೆಯನ್ನು ಮಾಡಿದರೆ ಅಂತಹವನು ಸಕಲ ಪಾಪಗಳಿಂದಲೂ ಮುಕ್ತನಾಗುವುದಲ್ಲದೆ ಮುಕ್ತಿಮಾರ್ಗಕ್ಕೂ ಅರ್ಹನಾಗುತ್ತಾನೆ. ಆದ ಕಾರಣ ನಿರಪರಾಧಿಯೂ, ಪುಣ್ಯವಂತನೂ ಆಗಿರುವ ಈ ಅಜಾಮಿಳನನ್ನು ನೀವು ಒಯ್ಯುವುದು ಧರ್ಮವಲ್ಲ. ನಮ್ಮೀಮಾತಿನಲ್ಲಿ ಸಂಶಯವಿದ್ದರೆ ನಿಮ್ಮ ಧಣಿಯನ್ನೇ ಕೇಳಿರಿ. ಇದೆಲ್ಲವೂ ಅವನಿಗೆ ಗೊತ್ತಿದೆ.

(ವಿಷ್ಣುದೂತರು ಹೀಗೆ ಹೇಳಲು ಯಮಭಟರು ಅಜಾಮಿಳನನ್ನು ಬಿಟ್ಟು ಹೊರಟುಹೋದರು. ಅಜಾಮಿಳನು ವಿಷ್ಣುಭಟರಿಗೆ ನಮಸ್ಕರಿಸಿದನು. ಅವರು ಕಣ್ಮರೆಯಾದರು. ಹರಿ ಮತ್ತು ಯಮ ಭಟರ ಸಲ್ಲಾಪವನ್ನು ಕೇಳಿ ಅಜಾಮಿಳನು ಹರಿನಾಮದ ಮಹಿಮೆಯನ್ನು ಚೆನ್ನಾಗಿ ತಿಳಿದನು. ಹಿಂದೆ ತಾನು ಮಾಡಿದ ಅಕಾರ್ಯಗಳಿಗೆ ಪಶ್ಚಾತ್ತಾಪಪಟ್ಟು ವಿರಕ್ತನಾಗಿ ಗಂಗಾದ್ವಾರಕ್ಕೆ ಹೋಗಿ ಅಲ್ಲಿ ಶ್ರೀಹರಿಯನ್ನು ಧ್ಯಾನಿಸಿದನು. ವಿಷ್ಣು ದೂತರು ವಿಮಾನವನ್ನು ತಂದರು. ಅಜಾಮಿಳನು ಭೌತಿಕದೇಹವನ್ನು ಬಿಟ್ಟು ದಿವ್ಯತೇಜೋದೇಹವನ್ನು ಹೊಂದಿ ವಿಮಾನದಲ್ಲಿ ಕುಳಿತು ಲಕ್ಷ್ಮೀಪತಿಯ ಸನ್ನಿಧಾನಕ್ಕೆ ಹೊರಟು ಹೋದನು.

ಮಗನ ಹೆಸರಿನಿಂದ ಹರಿಯು ಜ್ಞಾಪಕಕ್ಕೆ ಬಂದು ಬಳಿಕ ಭಕ್ತಿಯಿಂದ ಶ್ರೀಪರಮಾತ್ಮನ ನಾಮವನ್ನು ಉಚ್ಚರಿಸಿದ ಅಜಾಮಿಳನೇ ಮುಕ್ತಿಯನ್ನು ಹೊಂದಿದನೆಂದ ಬಳಿಕ ಇನ್ನಾವ ನೆಪದಿಂದಲೂ ಇಲ್ಲದೆ ನೇರವಾಗಿ ಶ್ರೀಹರಿಯನ್ನು ಸದಾ ಕೀರ್ತಿಸುವವರು ಮುಕ್ತರಾಗುವರೆಂದು ಹೇಳಬೇಕೇನು ?

## ಎರಡನೆಯ ಅಧ್ಯಾಯ ಮುಗಿದುದು

ಇತ್ತ ಯಮಭಟರು ಯಮರಾಜನ ಬಳಿಗೆ ಬಂದು "ದೇವ ! ಲೋಕದಲ್ಲಿ ಪುಣ್ಯಪಾಪಗಳ ಶಾಸಕನು ಮುಖ್ಯವಾಗಿ ಒಬ್ಬನಿರಬೇಕು. ಎಲ್ಲರೂ ಸ್ವತಂತ್ರ ಶಾಸಕರಾದರೆ ಯಾವ ಜೀವನಿಗೂ ಬಂಧವಾಗಲೀ ಮುಕ್ತಿಯಾಗಲೀ ಆಗುವುದೇ ಇಲ್ಲ.

ಆದ್ದರಿಂದ ಮುಖ್ಯದಂಡಧರನು ನೀನೊಬ್ಬನೇ ಹೊರತು ಮತ್ತಾರಿಲ್ಲ. ಇಂತಹ ನಿನ್ನ ಅಪ್ಪಣೆಯು ಈಗ ಭೂಲೋಕದಲ್ಲಿ ನಡೆಯಲಿಲ್ಲ. ನಿನ್ನಪ್ಪಣೆಯಂತೆ ಅಜಾಮಿಳನನ್ನು ಕರೆತರಲು ಹೋದೆವು. ಅವನು 'ನಾರಾಯಣ' ಎಂದು ಕೂಗಿಕೊಂಡನು. ಕೂಡಲೆ ನಾಲ್ವರು ಸಿದ್ಧರು ಬಂದು ನಮ್ಮ ಪಾಶದಿಂದ ಅವನನ್ನು ಬಿಡಿಸಿದರು. ಆ ಸಿದ್ಧ ರಾರೆಂಬುದನ್ನು ತಿಳಿಸಬೇಕು" ಎಂದರು.

**ಯಮ :–** ಜಗತ್ತಿನ ಸೃಷ್ಟ್ಯಾದಿ ಕರ್ತನಾದ ಶ್ರೀಹರಿಯೇ ಸ್ವತಂತ್ರ ಶಾಸಕನು. ನಾನು ಮಾನವರಲ್ಲಿ ಪಾಪಮಾಡಿದವರಿಗೆ ಮಾತ್ರ ಶಾಸಕನು. ಬ್ರಹ್ಮಾದಿ ದೇವತೆಗಳೆಲ್ಲರೂ ಆ ಹರಿಯ ಆಜ್ಞೆಗೆ ಬದ್ಧರಾಗಿ ಅವರವರ ಕರ್ತವ್ಯವನ್ನು ಮಾಡು ತ್ತಿರುವರು. ವಿಧಿ, ಭವ, ಇಂದ್ರ, ಯಮನಾದ ನಾನು, ಅಗ್ನಿಮುಂತಾದ ದೇವತೆ ಗಳು, ಮನುಗಳು, ಋಷಿಗಳು ಎಲ್ಲರೂ ಸರ್ವಜ್ಞರಾದರೂ ಹರಿಯ ವ್ಯಾಪಾರವನ್ನು ತಿಳಿಯಲಾರೆವು. ಅವನ ಪ್ರಸಾದವಿಲ್ಲದೆ ಅವನನ್ನೂ ತಿಳಿಯಲಾಗುವುದಿಲ್ಲ. ಅವನ ದೂತರೂ ಚತುರ್ಭುಜವುಳ್ಳವರಾಗಿ ಭೂಮಿಯಲ್ಲಿ ಸಂಚರಿಸುತ್ತಿರುವರು. ಅವರು ಹರಿಭಕ್ತರನ್ನು ನಮ್ಮಿಂದಲೂ, ಇತರರಿಂದಲೂ ಅಪಾಯ ಬರದಂತೆ ರಕ್ಷಿಸುವರು. ಹರಿಯು ವಿಧಿಸಿರುವ ಧರ್ಮವು ಸೂಕ್ಷ್ಮವಾಗಿರುವುದು. ಅದನ್ನು ದೇವತೆಗಳೇ ತಿಳಿಯಲಾರರು.

"ಭಕ್ತಿ ಯೋಗೋ ಭಗವತಿ ತನ್ನಾಮಗ್ರಹಣಾದಿಭಿಃ" ಹರಿನಾಮ ಸಂಕೀರ್ತನೆ ಮುಂತಾದುವುಗಳಿಂದ ಹರಿಯಲ್ಲಿ ಭಕ್ತಿ ಮಾಡುವುದೇ ಧರ್ಮ. ಇದಕ್ಕೆ ಅಜಾಮಿಳನೇ ಸಾಕ್ಷಿ. ಪರಮಪಾಪಿಯಾದರೂ ಭಕ್ತಿಪೂರ್ವಕ ಹರಿನಾಮಸಂಕೀರ್ತನೆಯನ್ನು ಮಾಡಿ ದವನು ಪುಣ್ಯಾತ್ಮನು. ಅವನ ಮೇಲೆ ನಮ್ಮ ಅಧಿಕಾರವಿಲ್ಲ. ಅವನನ್ನು ಕೌಮೋದಕೀ ಗದೆಯು ಸರ್ವದಾ ರಕ್ಷಿಸುತ್ತಿರುವುದು. ಪರಮಾತ್ಮನ ಪಾದಸ್ಮರಣೆಮುಂತಾದು ವನ್ನು ಮಾಡದಿರುವ ಅಭಕ್ತರನ್ನು ನೀವು ಇಲ್ಲಿಗೆ ಕರೆದುಕೊಂಡುಬರಬೇಕು. ಮುಟ್ಟ ದಿರಿ ಮುಟ್ಟದಿರಿ ಹರಿದಾಸರನ್ನು. ಈಗ ನೀವು ಮಾಡಿದ ಅಪರಾಧವು ನಿಮ್ಮ ಸ್ವಾಮಿಯಾದ ನನ್ನದೇ ಆಯಿತು. ಶ್ರೀನಾರಾಯಣನು ನಮ್ಮ ಅಪರಾಧವನ್ನು ಕ್ಷಮಿಸಲಿ ! ಕೈ ಮುಗಿದು ಬೇಡುವೆನು.

**ಶುಕ :–** ಯಮನ ಮಾತನ್ನು ಅವನ ದೂತರು ಕೇಳಿ ಆಶ್ಚರ್ಯ ಹೊಂದಿ ಅವತ್ತಿನಿಂದ ಹರಿ ಭಕ್ತರ ತಂಟೆಗೇ ಹೋಗುತ್ತಿಲ್ಲ. ರಾಜೇಂದ್ರ ! ಹೀಗೆ ಹರಿನಾಮ ಸಂಕೀರ್ತನೆಯೇ ಮಹಾಪಾಪಗಳಿಗೆಲ್ಲ ಮುಖ್ಯ ಪ್ರಾಯಶ್ಚಿತ್ತವೆಂದು ತಿಳಿ. ಶ್ರೀಹರಿಯ ಮಹಿಮಾ ಶ್ರವಣ ಮನನಗಳಿಂದ ದೃಢವಾದ ಭಕ್ತಿಯುಂಟಾಗಿ ಮನಸ್ಸು ಶುದ್ಧ ವಾಗುವುದು. ಈ ಇತಿಹಾಸವನ್ನು ಅಗಸ್ತ್ಯರು ಮಲಯಪರ್ವತದಲ್ಲಿ ನನಗೆ ಹೇಳಿದರು.

**ಮೂರನೆಯ ಅಧ್ಯಾಯ ಮುಗಿದುದು.**

**ಪರೀಕ್ಷಿತ್ :** ಮುನಿಯೇ ! ಶ್ರೀಹರಿಯು ಯಾರಾರಲ್ಲಿ ಕುಳಿತು ಅವಾಂತರ ಸೃಷ್ಟಿಯನ್ನು ಹೇಗೆ ಮಾಡಿದನೆಂಬುದನ್ನು ತಿಳಿಸಿ.

**ಶುಕ :** ಪ್ರಾಚೀನಬರ್ಹಿಯ ಪುತ್ರರಾದ ಪ್ರಚೇತಸರು ಪ್ರಜಾಸೃಷ್ಟಿಯನ್ನು ಮಾಡಲು ಶ್ರೀಹರಿ ಮತ್ತು ತಂದೆಯಿಂದ ಆಜ್ಞಪ್ತರಾಗಿ ಬಹುಕಾಲ ತಪಸ್ಸನ್ನು ಮಾಡುತ್ತಿದ್ದು ಬಳಿಕ ಸಮುದ್ರದಿಂದ ಈಚೆಗೆ ಬಂದು ಭೂಮಿಯಲ್ಲೆಲ್ಲ ದಟ್ಟವಾಗಿ ಮರಗಿಡಗಳು ಬೆಳೆದಿರುವುದನ್ನು ಕಂಡು ಅಗ್ನಿವಾಯುಗಳನ್ನು ಸೃಷ್ಟಿಸಿ ಅವನ್ನು ದಹಿಸಿದರಷ್ಟೇ ? ಆಗ ವನಸ್ಪತಿರಾಜನಾದ ಚಂದ್ರನು ಬಂದು "ಪ್ರಚೇತಸರೇ ! ಹರಿಯು ಆಹಾರಕ್ಕಾಗಿ ಸೃಷ್ಟಿಸಿರುವ ಈ ಗಿಡಗಳನ್ನು ಸುಡಬಾರದು. ಹಾಗೆ ಸುಟ್ಟರೆ ಶ್ರೀಹರಿಯ ಅನುಗ್ರಹವಾಗುವುದಿಲ್ಲ. ಅವನ್ನು ರಕ್ಷಿಸುವುದು ನಿಮ್ಮ ಕರ್ತವ್ಯ. ಅದರಿಂದ ಹರಿಯು ಸಂತುಷ್ಟನಾಗುವನು. ಕೋಪವನ್ನು ಬಿಡಿ. ಉಳಿದ ಗಿಡಗಳನ್ನಾದರೂ ರಕ್ಷಿಸಿರಿ. ಕಂಡುಮುಷಿಯಿಂದ ಪ್ರಮ್ಲೋಚನೆಯೆಂಬ ಅಪ್ಸರೆಯಲ್ಲಿ ಹುಟ್ಟಿ ಈ ವೃಕ್ಷಗಳಿಂದ ಪಾಲಿತಳಾದ **ಮಾರಿಷಾ** ಎಂಬ ಈ ಕನ್ಯೆಯನ್ನು ಮದಿವೆ ಮಾಡಿಕೊಳ್ಳಿರಿ" ಎಂದು ಆ ಕನ್ಯೆಯನ್ನು ಅವರಿಗೆ ಕೊಟ್ಟು ಹೊರಟು ಹೋದನು. ಧರ್ಮರಾಜನು ತನ್ನ ನಾಲ್ವರು ತಮ್ಮಂದಿರೊಡನೆ ದ್ರೌಪದಿಯನ್ನು ಮದಿವೆಯಾದಂತೆ ಪ್ರಚೇತಸರು ಅವಳನ್ನು ಮದಿವೆಯಾಗಿ ಅವಳಲ್ಲಿ ದಕ್ಷನೆಂಬ ಮಗನನ್ನು ಪಡೆದರು. ದಕ್ಷನು ಮಾನಸಿಕಸೃಷ್ಟಿಯಿಂದ ಸಾಕಷ್ಟು ಪ್ರಜೆಗಳು ಹುಟ್ಟದಿರಲು, ವಿಂಧ್ಯಗಿರಿಯ ತಪ್ಪಲಿಗೆ ಬಂದು ಅಲ್ಲಿದ್ದ ಅಘಮರ್ಷಣ ತೀರ್ಥದಲ್ಲಿ ಸ್ನಾನಮಾಡಿ ಹರಿಯನ್ನು ಕುರಿತು ಹಂಸಗುಹ್ಯಸ್ತೋತ್ರವನ್ನು ಮಾಡಿದನು.

## ಹಂಸಗುಹ್ಯ ಸ್ತೋತ್ರ

ಸರ್ವೋತ್ತಮನಾದ ಪರಮಾತ್ಮನಿಗೆ ನಮಸ್ಕಾರ ! ದೇವ ! ನೀನು ನಿರ್ದೋಷನು. ಸತ್ಯಜ್ಞಾನಾನಂದಪೂರ್ಣನು. ಪ್ರಕೃತಿ ಪುರುಷರಿಗೆ ಬಂಧುವು. ಅವರು ಮಾಡುವ ಸೃಷ್ಟಿಗೆ ನೀನೇ ಪ್ರೇರಕನು. ಅವ್ಯಕ್ತತತ್ತ್ವಾಭಿಮಾನಿನಿಗೆ ನೀನೇ ಆಶ್ರಯದಾತನು. ಅಯೋಗ್ಯರಿಗೆ ಕಾಣಿಸದವನು. ಅಪ್ರಮೇಯನು. ಒಂದೇ ದೇಹದಲ್ಲಿ ಜೀವನ ಜೊತೆಯಲ್ಲಿಯೇ ನೆಲೆಸಿದ್ದರೂ ಮತ್ತು ಜೀವನಿಗೆ ಉಪಕಾರವನ್ನು ಮಾಡುತ್ತಿದ್ದರೂ ಅವನು ನಿನ್ನನ್ನು ತಿಳಿಯುವುದಿಲ್ಲ. ನಿನ್ನ ಅನುಗ್ರಹವಿಲ್ಲದೆ ಬ್ರಹ್ಮಾದಿಗಳೂ ನಿನ್ನನ್ನು ತಿಳಿಯಲಾರರು. ಜೀವನು ಸ್ವಪ್ನಾವಸ್ಥೆಗಳಲ್ಲಿಯೂ, ಪದಾರ್ಥಗಳನ್ನು ಸ್ವತಃ ನೋಡಲಾರನು. ಆಗ ಮನಸ್ಸು ಬಾಹ್ಯವಿಷಯವನ್ನು ಗ್ರಹಿಸುವುದಿಲ್ಲ. ಹೀಗಿದ್ದರೂ ಜೀವನು ಪದಾರ್ಥಗಳನ್ನುನೋಡುವ ಅನುಭವವಿರುವುದರಿಂದ ಇವಕ್ಕೆಲ್ಲ ವಿಲಕ್ಷಣನಾದ ಈಶ್ವರನೊಬ್ಬನು ಇದ್ದೇ ಇರುವನೆಂದು ಊಹೆಯಿಂದ

ನಿರ್ಣಯಿಸಬಹುದು. ನೀನೇ ಆ ಈಶ್ವರನು. ಈಶ್ವರನಾದ ನೀನು ಹೃತ್ಕಮಲದಲ್ಲಿ ರುವುದನ್ನು ಜ್ಞಾನಿಗಳು ಸಾಕ್ಷಾತ್ತಾಗಿ ನೋಡುವರಾದ್ದರಿಂದ ಈಶ್ವರನೊಬ್ಬನಿರುವ ನೆಂಬುದಕ್ಕೆ ಜ್ಞಾನಿಗಳ ಪ್ರತ್ಯಕ್ಷವೇ ಪ್ರಮಾಣವಾಗಿರುವುದು. ನೀನು ಅಪ್ರಾಕೃತನು. ಕಾಲ ಮತ್ತು ಕರ್ಮಗಳಿಗೂ ನಿಯಾಮಕನು. ಪಾದಿಗಳಿಗೆ ಅವರವರ ಯೋಗ್ಯತಾನು ಸಾರಬುದ್ಧಿಯನ್ನು ಕೊಟ್ಟು ಬ್ರಹ್ಮನಾದ ನೀನು ನಾನಾರೀತಿ ವಿಚಾರಕ್ಕೆ ವಿಷಯನಾಗಿ ಅದಕ್ಕೆ ತಕ್ಕ ಫಲವನ್ನು ಕೊಟ್ಟುಬಿಡುವೆ. ಕಂಸಸಂಹಾರ ಮುಂತಾದ ವ್ಯಾಪಾರಗಳಿಂದ 'ಕಂಸಾರಿ' ಮುಂತಾದ ನಾಮಗಳನ್ನು ಜನರಿಗೆ ಜ್ಞಾಪಿಸುತ್ತಿರುವೆ. ಉತ್ತಮ, ಮಧ್ಯಮ, ಅಧಮ ಜನರ ಯೋಗ್ಯತೆಗೆ ಅನುಗುಣವಾಗಿ ನೀನು ತಿಳಿಯಲ್ಪಡುವೆ. ಸ್ವಾಮಿಯೆ ! ಇಂತಹ ಸರ್ವೋತ್ಕೃಷ್ಟ ನಿಯಾಮಕನಾದ ನೀನು ನನ್ನ ಮನೋರಥವನು ಪೂರ್ಣಮಾಡು.

ಹೀಗೆ ದಕ್ಷನು ಸ್ತುತಿಸಲು ಶ್ರೀಹರಿಯು ಅಷ್ಟಭುಜವುಳ್ಳವನಾಗಿ, ಕಿರೀಟ ಕೇಯೂರಾದಿಗಳಿಂದ ಅಲಂಕೃತನಾಗಿ ಅವನ ಇದಿರಿಗೆ ಪ್ರತ್ಯಕ್ಷನಾದನು. ದಕ್ಷನು ಹರಿಗೆ ಸಾಷ್ಟಾಂಗನಮಸ್ಕಾರವನ್ನು ಮಾಡಿ ಆನಂದಾತಿಶಯದಿಂದ ಮಾತನಾಡಲಾರ ದಾದನು.

**ಹರಿ :** ದಕ್ಷನೇ ! ನಿನ್ನ ತಪಸ್ಸಿಗೆ ಮೆಚ್ಚಿದೆನು. ಬ್ರಹ್ಮ, ಶಿವ, ಪ್ರಜೇಶ್ವರರು, ಮನು-ಗಳು ಮತ್ತು ದೇವತೆಗಳು ಇವರೆಲ್ಲ ನನ್ನ ಸನ್ನಿಧಾನಕ್ಕೆ ಪಾತ್ರರು. ನೀನು ಪ್ರಜೆಗಳನ್ನು ಸೃಷ್ಟಿಸು. ತಪಸ್ಸು, ಯಜ್ಞ ಮೊದಲಾದುವುಗಳನ್ನೂ, ತದಭಿಮಾನಿ ಗಳನ್ನೂ ನಾನಾಗಲೇ ಸೃಷ್ಟಿಸಿರುವೆನು. ಆದ್ದರಿಂದ ಅವುಗಳನ್ನು ಯಾರು ಅನುಷ್ಠಿಸು ವರೋ ಅವರ ವಿಷಯದಲ್ಲಿ ನಾನು ಪ್ರೀತನಾಗುವೆನು. ನೋಡು ! ಹಿಂದೆ ಬ್ರಹ್ಮನು ಹುಟ್ಟಿದ ಕೂಡಲೇ ಸೃಷ್ಟಿಯ ಸಾಮಗ್ರಿಗಳು ಅವನಿಗೆ ಗೋಚರಿಸಲಿಲ್ಲ. ಆಗ ನಾನು ತಪಸ್ಸನ್ನು ಮಾಡೆಂದು ಅಶರೀರವಾಣಿಯನ್ನು ನುಡಿದೆನು. ಆವನು ಅದರಂತೆ ತಪಸ್ಸನ್ನು ಮಾಡಿದನು. ಆ ತಪಸ್ಸಿನ ಬಲದಿಂದಲೇ ನೀನೇ ಮೊದಲಾದ ಪ್ರಜೇಶ್ವರ ರನ್ನು ಸೃಷ್ಟಿಸಿದನು. ನೀನೂ ಅದರಂತೆ ತಪಸ್ಸನ್ನು ಮಾಡಿರುವೆ. ನಾನು ಅನುಗ್ರಹಿ ಸಿರುವೆನು. ಪಂಚಜನನೆಂಬ ಪ್ರಜೇಶ್ವರನ ಮಗಳಾದ 'ಅಸಿಕ್ನಿ' ಎಂಬುವಳನ್ನು ನೀನು ಮದಿವೆಯಾಗಿ ದಾಂಪತ್ಯಧರ್ಮದಿಂದ ಅವಳಲ್ಲಿ ಪ್ರಜೆಗಳನ್ನು ಸೃಷ್ಟಿಸು. ಮುಂದೆ ಹುಟ್ಟತಕ್ಕವರೂ ಗೃಹಸ್ಥರಾಗಿ ಈ ಮಾರ್ಗದಿಂದಲೇ ಪ್ರಜೆಗಳನ್ನು ಉತ್ಪಾದನೆ ಮಾಡಿ, ನನಗೆ ಪೂಜೆಯನ್ನು ಅರ್ಪಿಸುವರು.

(ಹೀಗೆ ಹೇಳಿ ಹರಿಯು ಕಣ್ಮರೆಯಾದನು.)

**ನಾಲ್ಕನೆಯ ಅಧ್ಯಾಯ ಮುಗಿದುದು**

ದಕ್ಷನು ಅಸಿಕ್ನಿಯನ್ನು ಮದಿವೆಯಾಗಿ ಅವಳಲ್ಲಿ ಹರ್ಯಶ್ವರೆಂಬ ಹತ್ತುಸಾವಿರ ಮಂದಿ ಪುತ್ರರನ್ನು ಪಡೆದು, ಪ್ರಜಾಸೃಷ್ಟಿಯನ್ನುಮಾಡಲು ತಕ್ಕ ಶಕ್ತಿ (ಸಿದ್ಧಿ)ಯನ್ನು ಪರಮಾತ್ಮನಿಂದ ಪಡೆದುಬನ್ನಿರೆಂದು ಅಪ್ಪಣೆ ಮಾಡಿದನು. ಸಮಾನ ಧರ್ಮವುಳ್ಳ ಆ ಹರ್ಯಶ್ವರು ಸಿಂಧು ಸಮುದ್ರ ಸಂಗಮ ಸ್ಥಳದಲ್ಲಿರುವ ನಾರಾಯಣ ಸರಸ್ಸಿಗೆ ಬಂದು ಸ್ನಾನ ಮಾಡಿ ತಪಸ್ಸಿಗೆ ನಿಂತರು. ಇವರೆಲ್ಲ ಮೋಕ್ಷಮಾರ್ಗಾಧಿಕಾರಿಗಳಾದ್ದರಿಂದ ಅವರಿಗೆ ಉಚಿತವಾದುದನ್ನು ಉಪದೇಶಿಸಬೇಕೆಂದು ನಾರದರು ಬಂದು, ವಿಚಾರ ಮಾಡತಕ್ಕವರಿಗೆ ಮಾತ್ರ ತಿಳಿಯುವಂತಹ ಹತ್ತು ಒಗಟಿನ ಮಾತುಗಳನ್ನು ಹೇಳಿದರು. ಹರ್ಯಶ್ವರು ಜ್ಞಾನಿಗಳಾದ್ದರಿಂದ ಅದನ್ನು ಅರ್ಥಮಾಡಿಕೊಂಡರು. ಅವು ಯಾವು ದೆಂದರೆ :–

| ಒಗಟು | ಅರ್ಥ |
|---|---|
| 1. ಭೂನಾಶ :– | ಲಿಂಗದೇಹವನ್ನು ಸಂಪೂರ್ಣವಾಗಿ ಕಳೆದುಕೊಳ್ಳುವುದು. |
| 2. ರಾಜ್ಯನಾದ ಮುಖ್ಯಪುರುಷ :– | ಮುಖ್ಯಸ್ವಾಮಿಯೂ, ಅನನ್ಯಾಶ್ರಯನೂ ಆದ ಶ್ರೀಹರಿ. |
| 3. ಹಿಂತಿರುಗಿ ಬರದ ಬಿಲ :– | ಬಲಾತ್ಮಕನಾದ್ದರಿಂದ ಬಿಲಶಬ್ದವಾಚ್ಯನಾದ ಶ್ರೀಹರಿ. |
| 4. ಬಹುರೂಪವುಳ್ಳ ಸ್ತ್ರೀ .– | ನಾನಾವಿಧವಾದ ಸಂಸ್ಕಾರಗಳಿಗೆಡೆಯಾಗಿ, ನಾನಾ ವ್ಯಾಪಾರವುಳ್ಳ ಚಿದಚಿನ್ಮಿಶ್ರವಾದ ಬುದ್ಧಿಯು. |
| 5. ಪುಂಶ್ಚಲೀಪತಿಯಾದ ಪುರುಷ :– | ರಜಸ್ತಮೋಗುಣಬದ್ಧ ಬುದ್ಧಿಗೆ ವಶನಾಗಿ ಜ್ಞಾನವನ್ನು ಕಳೆದುಕೊಂಡು ಸುಖದುಃಖಗಳನ್ನು ಅನುಭವಿಸುವ ಜೀವನು. |
| 6. ಉಭಯತಃ ಹರಿಯುವ ನದಿ :– | ಪ್ರಕೃತಿಯಿಂದ ಮಹತ್ತತ್ತ್ವವನ್ನೂ, ಅದರಿಂದ ಅಹಂಕಾರ ತತ್ತ್ವವನ್ನೂ ಹೀಗೆ ತತ್ತ್ವಗಳನ್ನು ಸೃಷ್ಟಿಸಿ ಜನ್ಯ ತತ್ತ್ವವನ್ನು ಜನಕತತ್ತ್ವದಲ್ಲಿ ಲಯ ಮಾಡುತ್ತಾ ಇರುವ ಶ್ರೀಹರಿಯ ಇಚ್ಛೆಯು. |
| 7. ಪಂಚಪಂಚಾದ್ಭುತ ಗೃಹ :– | 25 ತತ್ತ್ವಗಳಿಗೆ ಆಧಾರನಾಗಿ ಜೀವದೇಹದಲ್ಲಿದ್ದುಕೊಂಡು ಜ್ಞಾನವನ್ನು ಕೊಡುವ ಶ್ರೀಹರಿಯು. |
| 8. ವಿಚಿತ್ರ ಕಥೆಯುಳ್ಳ ಹಂಸ :– | ಈಶ್ವರಪ್ರತಿಪಾದಕವೂ, ಬಾಹಾತ್ರಯದಿಂದ ವಿಚಿತ್ರವಾದ ಕಥೆಯನ್ನೊಳಗೊಂಡು |

ಸಾರಭೂತವಾದುದನ್ನು ತಿಳಿಸಿಕೊಡುವ ಭಾರತಾದಿ ಶಾಸ್ತ್ರ.

9. ಹರಿತವಾದ ಅಲುಗುಳ್ಳ ಸ್ವಯಂ ಭ್ರಮಿ :– ಮಾಸಾದಿದಳವೇ ಮುಂತಾದುವುಗಳಿಂದ ಕೂಡಿ ಸ್ವತಂತ್ರನಾದ ಹರಿಯ ಅಧೀನವಾಗಿ ಜಗತ್ತನ್ನು ಮಹಾವೇಗದಿಂದ ಸುತ್ತಿಸುವ ಕಾಲಚಕ್ರ.

10. ತಂದೆಯ ಅಪ್ಪಣೆ :– ನಿವೃತ್ತಿಮಾರ್ಗಕ್ಕೆ ಅರ್ಹನಾದವನನ್ನು ಕುರಿತು ನಿವೃತ್ತಿಮಾರ್ಗವನ್ನು ಉಪದೇಶಿಸುವ ಶಾಸ್ತ್ರವೇ ತಂದೆಯು.

ಇವೆಲ್ಲವನ್ನೂ ತಿಳಿಯದೆ ಕಾಮ್ಯಕರ್ಮಗಳಾದ ಪ್ರಜಾಸೃಷ್ಟಿ ಮೊದಲಾದುವು ಗಳನ್ನು ಮಾಡುತ್ತ ಬಂದರೆ ಅದರಿಂದ ಫಲವೇನೂ ಇಲ್ಲ.

ನಾರದರ ಈ ಅಭಿಪ್ರಾಯವನ್ನು ಹರ್ಯಶ್ವರು ತಾವೇ ನಿಶ್ಚಯಿಸಿ, ಆ ಮುನಿ ಗಳಿಗೆರಗಿ, ಸಂನ್ಯಾಸಿಗಳಾಗಿ ಹರಿಧ್ಯಾನವನ್ನು ಮಾಡಿ ಕೃತಾರ್ಥರಾಗಿ ಹೋದರು.

ಇತ್ತ ದಕ್ಷನು ತನ್ನ ಮಕ್ಕಳು ನಾರದರ ಉಪದೇಶದಿಂದ ಸಂನ್ಯಾಸಿಗಳಾಗಿ ಹೊರಟುಹೋದುದಕ್ಕಾಗಿ ಪರಿತಪಿಸಿ, ತಿರುಗಿ ಸಾವಿರಪುತ್ರರನ್ನು ಪಡೆದನು. ಅವರಿಗೆ ಶಬಲಾಶ್ವರು ಎಂದು ಹೆಸರು. ಅವರೆಲ್ಲರೂ ತಂದೆಯ ಅಪ್ಪಣೆಯಂತೆ ಅಣ್ಣಂದಿರು ತಪಸ್ಸು ಮಾಡಿದ ಸ್ಥಳಕ್ಕೆ ಬಂದರು. ನಾರದರು ಅಲ್ಲಿಗೆ ಬಂದು ಅವರಿಗೂ ಅವರ ಅಣ್ಣಂದಿರಿಗೆ ಹೇಳಿದ್ದ ಹತ್ತು ವಾಕ್ಯಗಳನ್ನು ತಿಳಿಸಿ, ತಮ್ಮಂದಿರು ಜ್ಞಾನಿಗಳಾದ ಅಣ್ಣಂದಿರನ್ನು ಅನುಸರಿಸುವುದೇ ಪರಮ ಧರ್ಮವೆಂದು ಹೇಳಿ ಹೊರಟು ಹೋದರು. ಆ ಶಬಲಾಶ್ವರೂ ಕೂಡ ಸಂನ್ಯಾಸಿಗಳಾಗಿ ಸದ್ಗತಿಯನ್ನು ಹೊಂದಿಬಿಟ್ಟರು. ದಕ್ಷನಿಗೆ ಈ ವಿಚಾರವು ತಿಳಿದು ಬಂದಿತು. ಅದಕ್ಕಾಗಿ ಬಹು ಶೋಕವುಂಟಾಯಿತು. ಆಗ ಮಕ್ಕಳಂತೆ ದಕ್ಷನೂ ಸಂನ್ಯಾಸಿಯಾದಾನೆಂದು, ಅವನನ್ನು ಅನುಗ್ರಹಿಸಲು ಅಲ್ಲಿಗೆ ನಾರದರು ಬಂದರು. ದಕ್ಷನು ಅವರನ್ನು ನೋಡಿ ಕುಪಿತನಾಗಿ

**ದಕ್ಷ** :– ಸಾಧುವಂತೆ ವೇಷಧಾರಿಯಾದ ನಾರದನೇ ! ವಿಷಯಾನುಭವ ವಿಲ್ಲದೆ ಅದರ ಅಸಾರತಾಜ್ಞಾನವುಂಟಾಗುವುದಿಲ್ಲ. ವೈರಾಗ್ಯವಿಲ್ಲದ ಸಂನ್ಯಾಸ ಅನರ್ಥಕರ. ನನ್ನ ಮಕ್ಕಳು ಏನನ್ನೂ ಅರಿಯದವರು. ಅವರು ಋಣತ್ರಯವನ್ನು ಪರಿಹರಿಸಿಕೊಂಡಿರಲಿಲ್ಲ. ಅವರಿಗೆ ನೀನು ವಿರಕ್ತಮಾರ್ಗವನ್ನು ಬೋಧಿಸಿ ಬಿಟ್ಟೆ. ಅದರಿಂದ ಅವರು ಇಹ ಮತ್ತು ಪರ ಇವೆರಡರ ಶ್ರೇಯಸ್ಸನ್ನೂ ಹೊಂದದೆ ಕೆಟ್ಟು

ಹೋದರು. ಹೀಗೆ ನನ್ನ ಮನೆಯನ್ನೇ ಹಾಳುಮಾಡಿದ ನೀನು ನಿಂತ ಕಡೆ ನಿಲ್ಲದೆ ಅಲೆಯುತ್ತಿರು.

(ಹೀಗೆ ಶಾಪವನ್ನು ಕೊಟ್ಟನು. ನಾರದರಾದರೋ ಪ್ರತಿಶಾಪವನ್ನು ಕೊಡಲು ಸಮರ್ಥರಾದರೂ, ಸಾಧುವಿಗೆ ಕ್ಷಮೆಯೇ ಭೂಷಣವಾದ್ದರಿಂದ ತಮಗಿಂತ ಉತ್ತಮನಾದ ದಕ್ಷನು ಕೊಟ್ಟ ಶಾಪವನ್ನು ಸಂತೋಷದಿಂದ ಅನುಭವಿಸಿದರು. ಇದರ ಮೇಲೆ ಯಾವಾಗಲೂ ತ್ರಿಲೋಕಸಂಚಾರದಿಂದ ಹರಿ ಸೇವೆಯಾಗುವ ಕಾರಣ ಆ ಶಾಪವನ್ನು ವರವೆಂದೇ ಭಾವಿಸಿದರು.

ಕ್ಷಮೆಯೇ ಭೂಷಣವೆಂಬುದಕ್ಕೆ ಶ್ರೀವಾದಿರಾಜರ ಪದ :–

**ಕಾಂಬೋದಿರಾಗ** **ಝಂಪೆ ತಾಳ**

ತಾಳುವಿಕೆಗಿಂತ ತಪವು ಇಲ್ಲ ಪ
ಕೇಳಬಲ್ಲವರಿಗೆ ಹೇಳುವೆನು ಸೊಲ್ಲ ಅ

ದುಷ್ಟಮನುಜರು ಪೇಳ್ವ ನಿಷ್ಠುರದ ನುಡಿ ತಾಳು
ಕಷ್ಟಬಂದರೆ ತಾಳು ಕಂಗೆಡದೆ ತಾಳು
ನೆಟ್ಟ ಸೊಸಿ ಫಲಬರುವತನಕ ಶಾಂತಿಯ ತಾಳು
ಕಟ್ಟು ಬುತ್ತಿಯ ಮುಂದೆ ಉಣಲುಂಟು ತಾಳು ೧

ಹಳಿದು ಹಂಗಿಸುವಂಥ ಹಗೆಯ ಮಾತನು ತಾಳು
ಸುಳಿನುಡಿ ಕುಹಕ ಕುಮಂತ್ರವನೆ ತಾಳು
ಅಳುಕದಲೆ ಬಿರಿಸುಬಿಂಕದ ನುಡಿಯ ನೀತಾಳು
ಹಲಧರಾನುಜನನ್ನು ಹೃದಯದಲಿ ತಾಳು ೨

ನಕ್ಕು ನುಡಿವರ ಮುಂದೆ ಮುಕ್ಕರಿಸದೆ ತಾಳು
ಅಕ್ಕಸವ (ಕೋಪ) ಮಾಡುವರ ಅಕ್ಕರದಿ ತಾಳು
ಉಕ್ಕೊ ಹಾಲಿಗೆ ನೀರನಿಕ್ಕುವಂದದಿ ತಾಳು
ಪಕ್ಷೀಶ ಹಯವದನ ಶರಣೆಂದು ಬಾಳು ೩

## ಐದನೆಯ ಅಧ್ಯಾಯ ಮುಗಿದುದು

ಬ್ರಹ್ಮದೇವರು ದಕ್ಷನನ್ನು ಸಮಾಧಾನ ಮಾಡಿದರು. ದಕ್ಷನು ತಿರುಗಿ ಗಂಡು ಮಕ್ಕಳನ್ನು ಪಡೆದರೆ ನಾರದರು ಅವರನ್ನು ಸಂನ್ಯಾಸಿಗಳನ್ನಾಗಿ ಮಾಡಿಬಿಡುವರೋ

ಎಂದು ಭೀತನಾಗಿ, ಅರವತ್ತು ಮಂದಿ ಹೆಣ್ಣುಮಕ್ಕಳನ್ನು ಪಡೆದನು. ಅವರಲ್ಲಿ ಧರ್ಮರಾಜನಿಗೆ ಹತ್ತುಮಂದಿ ಕನ್ಯೆಯರನ್ನೂ, ಚಂದ್ರನಿಗೆ 27 ಮಂದಿ ಕನ್ಯೆಯರನ್ನೂ, ಕಶ್ಯಪರಿಗೆ 13 ಮಂದಿ ಕನ್ಯೆಯರನ್ನೂ, ತಿರುಗಿ ನಾಲ್ಕುಮಂದಿ ಕನ್ಯೆಯರನ್ನೂ, ಭೂತನಿಗೆ ಇಬ್ಬರನ್ನೂ, ಅಂಗಿರಸ್ಸಿಗೆ ಇಬ್ಬರನ್ನೂ, ಕೃಶಾಶ್ವನಿಗೆ ಇಬ್ಬರನ್ನೂ ಕೊಟ್ಟು ಮದಿವೆ ಮಾಡಿದನು. ಇವರಲ್ಲಿ ದೇವತೆಗಳು, ಪನ್ನಗರು, ರಾಕ್ಷಸರು, ಪಶುಗಳು ಹೀಗೆ ನಾನಾ ಜಾತಿಯ ಪ್ರಜೆಗಳು ಹುಟ್ಟಿ ಜಗತ್ತಿನಲ್ಲಿ ತುಂಬಿದರು. ಅವರಲ್ಲಿ ಕಶ್ಯಪರ ಸಂತಾನವೇ ಹೆಚ್ಚು. ಕಶ್ಯಪರಿಗೆ ಅದಿತಿಯಲ್ಲಿ ಶ್ರೀಹರಿಯು ವಾಮನನಾಗಿ ಅವತರಿಸಿದನು. ಹಾಗೆಯೇ ಹನ್ನೆರಡುಮಂದಿ ಸೂರ್ಯ ಪದವಿಯನ್ನಾಳುವ ದೇವತೆಗಳೂ ಹುಟ್ಟಿದರು. ಅವರಾರೆಂದರೆ :– ವಿವಸ್ವಂತ, ಅರ್ಯಮ್ಣ, ಪೂಷ, ತ್ವಷ್ಟೃ, ಸವಿತೃ, ಭಗ, ಧಾತೃ, ವಿಧಾತೃ, ವರುಣ, ಮಿತ್ರ, ಶಕ್ರ ಮತ್ತು ಉರುಕ್ರಮ.

ವಿವಸ್ವತನಿಗೆ ಅವನ ಪತ್ನಿ ಸಂಜ್ಞಾದೇವಿಯಲ್ಲಿ ಶ್ರಾದ್ಧದೇವನಾದ ವೈವಸ್ವತ ಮನುವು ಹುಟ್ಟಿದನು. ಅರ್ಯಮನಿಗೆ ಮನುಷ್ಯ ಪ್ರಜೆಗಳು ಹುಟ್ಟಿದರು. ಪೂಷನಿಗೆ ಮಕ್ಕಳಿಲ್ಲ. ತ್ವಷ್ಟೃವಿಗೆ ದೈತ್ಯಸಹೋದರಿಯಾದ ರಚನೆಯೆಂಬುವಳು ಪತ್ನಿ. ಅವಳಲ್ಲಿ ವಿಶ್ವರೂಪನೆಂಬ ಮಗನು ಹುಟ್ಟಿದನು. ಬೃಹಸ್ಪತ್ಯಾಚಾರ್ಯರು ದೇವತೆಗಳ ಪೌರೋಹಿತ್ಯವನ್ನು ಬಿಟ್ಟು ಹೋದಾಗ ದೇವತೆಗಳು ವಿಶ್ವರೂಪನನ್ನೇ ತಮಗೆ ಪುರೋಹಿತನನ್ನಾಗಿ ಮಾಡಿಕೊಂಡರು.

### ಆರನೆಯ ಅಧ್ಯಾಯ ಮುಗಿದುದು

**ಪರೀಕ್ಷಿತ್ :–** ಶುಕಮುನಿಗಳೇ ! ಬೃಹಸ್ಪತ್ಯಾಚಾರ್ಯರು ದೇವತೆಗಳ ಪೌರೋಹಿತ್ಯವನ್ನೇಕೆ ಬಿಟ್ಟರು ?

**ಶುಕ :–** ಇಂದ್ರನು ಐಶ್ವರ್ಯಮದದಿಂದ ಸಭೆಗೆ ಬಂದ ಬೃಹಸ್ಪತಿಗಳನ್ನು ಪ್ರತ್ಯುತ್ಥಾನಾದಿಗಳಿಂದ ಸತ್ಕರಿಸಲಿಲ್ಲ. ಇದನ್ನು ಕಂಡ ಗುರುವು ತಕ್ಷಣ ಹಿಂತಿರುಗಿ ಮನೆಗೆ ಹೋದನು. ಇಂದ್ರನಿಗೆ ತನ್ನ ಅವಿವೇಕವು ಆಕ್ಷಣ ತಿಳಿಯಿತು. ಸಭೆಯಾಲ್ಲಿಯೇ ತನ್ನನ್ನು ಧಿಕ್ಕರಿಸಿಕೊಂಡು ಗುರುಗಳ ಪಾದಕ್ಕೆ ಬಿದ್ದು ಕ್ಷಮೆ ಬೇಡಬೇಕೆಂದು ನಿಶ್ಚಯಿಸಿ ಗುರುಗಳ ಮನೆಗೆ ಹೋದನು. ಆಗ ಬೃಹಸ್ಪತಿಗಳು ಮನೆಯಲ್ಲಿದ್ದರೂ ತಮ್ಮ ಯೋಗಸಾಮರ್ಥ್ಯದಿಂದ ಇಂದ್ರನಿಗೆ ಕಾಣಿಸಲಿಲ್ಲ. ಇಂದ್ರನು ಎಷ್ಟು ಯತ್ನವನ್ನು ಮಾಡಿದರೂ ಗುರುದರ್ಶನವಾಗಲಿಲ್ಲ. ಈ ಸುಳುವನ್ನು ತಿಳಿದ ದೈತ್ಯರು ತಮ್ಮ ಪುರೋಹಿತರಾದ ಶುಕ್ರಾಚಾರ್ಯರ ಅನುಗ್ರವನ್ನು ಸಂಪಾದಿಸಿ ದೇವತೆಗಳನ್ನು ಯುದ್ಧದಲ್ಲಿ ಜಯಿಸಬೇಕೆಂದು ಹೋರಾಡಿ ದೇವತೆಗಳನ್ನು ಸೋಲಿಸಿದರು. ಪರಾಜಿತ

ರಾಗಿ ಪೆಟ್ಟು ತಿಂದ ದೇವತೆಗಳು ಇಂದ್ರನೊಡನೆ ಬ್ರಹ್ಮದೇವರ ಬಳಿಗೆ ಹೋದರು. ಇವರ ದುರವಸ್ಥೆಯನ್ನು ಕಂಡ ಬ್ರಹ್ಮದೇವರು ಗುರುವನ್ನು ಉದಾಸೀನ ಮಾಡಿದುದರ ಫಲವೇ ಇದೆಂದೂ, ವಿಪ್ರರು, ಗೋವಿಂದ, ಗೋವುಗಳ ಅನುಗ್ರಹಕ್ಕೆ ಪಾತ್ರರಾದವರಿಗೆ ಸುಖವಾಗುವುದೆಂದು ಅವರಿಗೆ ಬೋಧಿಸಿ, ತ್ವಾಷ್ಟ್ರಪುತ್ರ ವಿಶ್ವರೂಪನನ್ನು ಪುರೋಹಿತನನ್ನಾಗಿ ಮಾಡಿಕೊಂಡು ನಿಮ್ಮ ಮನೋರಥವನ್ನು ಪೂರ್ಣಮಾಡಿಕೊಳ್ಳಬೇಕೆಂದು ಹೇಳಿದರು. ದೇವತೆಗಳು ಅದರಂತೆಯೇ ವಿಶ್ವರೂಪನ ಬಳಿಗೆ ಬಂದು, ಅತಿಥಿಗಳಾಗಿ ಪಿತೃಗಳಾದ ತಾವು ಬಂದಿರುವುದಾಗಿಯೂ, ಪಿತೃಗಳು ಶಿವನ ಪ್ರತಿಮೆಗಳಾದುದರಿಂದ ತಮ್ಮನ್ನು ಸತ್ಕರಿಸಿ ಶಿವನ ಅನುಗ್ರಹಕ್ಕೆ ಪಾತ್ರನಾಗಬೇಕೆಂದೂ, ಪ್ರಕೃತ ತಮಗೆ ಪುರೋಹಿತನಾಗಿ ಶತ್ರುಗಳನ್ನು ಜಯಿಸುವಂತೆ ಮಾಡಬೇಕೆಂದೂ ಕೇಳಿಕೊಂಡರು. ವಿಶ್ವರೂಪನು ವಯಸ್ಸಿನಲ್ಲಿ ದೇವತೆಗಳಿಗಿಂತ ಚಿಕ್ಕವನಾದರೂ ಜ್ಞಾನಿಯಾಗಿರುವುದರಿಂದ ತಮ್ಮಿಂದ ವಂದನಾದಿಗಳನ್ನು ಸ್ವೀಕರಿಸಿದರೆ ಅವನಿಗೆ ದೋಷವಿಲ್ಲವೆಂದೂ ಹೇಳಿದರು. ಇದನ್ನು ಕೇಳಿ ವಿಶ್ವರೂಪನು ಪೌರೋಹಿತ್ಯವು ನಿಂದಿತವಾದ್ದರಿಂದ ಅದನ್ನು ವಹಿಸುವುದಕ್ಕೆ ಮನಸ್ಸಿಲ್ಲದಿದ್ದರೂ, ಗುರುಗಳಾದ ದೇವತೆಗಳ ಆಜ್ಞೆಯನ್ನು ಮೀರಲಾರದೆ ದೇವತೆಗಳ ಪುರೋಹಿತನಾದನು. ಆಗ ಅವನು ದೇವೇಂದ್ರನಿಗೆ 'ನಾರಾಯಣವರ್ಮ' ವನ್ನು ಉಪದೇಶಿಸಿದನು. ದೇವೇಂದ್ರನು ಅದನ್ನು ಭಕ್ತಿಯಿಂದ ಜಪಿಸಿ ಸಿದ್ಧಿಯನ್ನು ಪಡೆದು ಅದರ ಬಲದಿಂದ ಅಸುರರನ್ನು ಜಯಿಸಿದನು.

## ಏಳನೆಯ ಅಧ್ಯಾಯ ಮುಗಿದುದು

## ನಾರಾಯಣವರ್ಮ

ಪರೀಕ್ಷಿದ್ರಾಜನು ನಾರಾಯಣವರ್ಮವನ್ನು ಹೇಳಬೇಕೆಂದು ಕೇಳಿಕೊಂಡನು.

**ಶುಕ :** ರಾಜೇಂದ್ರ ! ವಿಶ್ವರೂಪಾಚಾರ್ಯನು ಇಂದ್ರನನ್ನು ಕುರಿತು ಹೀಗೆ ಹೇಳಿದನು :– ಮೊದಲು ಕೈಕಾಲುತೊಳೆದುಕೊಂಡು, ಆಚಮನ ಮಾಡಿ, ಪವಿತ್ರಪಾಣಿಯಾಗಿ, ಉತ್ತರಕ್ಕೆ ಮುಖಮಾಡಿಕೊಂಡು ಕೂಡಬೇಕು. "ಓಂ ನಮೋ ನಾರಾಯಣಾಯ'' ಎಂಬ ಎಂಟು ಅಕ್ಷರಗಳನ್ನು ಪಾದ ಮೊದಲಾದ ಅಂಗಗಳಲ್ಲಿ ನ್ಯಾಸ ಮಾಡಬೇಕು. "ಓಂ ನಮೋ ಭಗವತೇ ವಾಸುದೇವಾಯ" ಎಂಬ ದ್ವಾದಶಾಕ್ಷರಮಂತ್ರದಿಂದ ಹೃದಯಾದಿ ಷಡಂಗನ್ಯಾಸ ಮಾಡಬೇಕು. ಧ್ಯೇಯನ್ನೂ, ಜ್ಞಾನ ಶಕ್ತಿ ಬಲ ಐಶ್ವರ್ಯ ವೀರ್ಯ ತೇಜಸ್ಸು ಈ ಆರು ಶಕ್ತಿಗಳಿಂದ ಸಹಿತನಾಗಿರುವ ಪರಮಾತ್ಮನನ್ನು ಧ್ಯಾನ ಮಾಡಿ, ಈ ಮಂತ್ರವನ್ನು ಹೇಳಬೇಕು :–

ಶ್ರವಣಪ್ರತಿಪಾದ್ಯನೂ, ಗರುಡಾರೂಢನೂ, ಶಂಖಚಕ್ರಾದಿ ಎಂಟು ಆಯುಧಗಳನ್ನು ಎಂಟು ಬಾಹುಗಳಲ್ಲಿ ಧರಿಸಿರುವವನೂ, ಅಣಿಮಾದಿ ಅಷ್ಟಗುಣವಂತನೂ ಆದ ಶ್ರೀಹರಿಯು ಸರ್ವದಾ ಸಕಲವಿಪತ್ತುಗಳಿಂದ ತಪ್ಪಿಸಿ ರಕ್ಷಿಸಲಿ.

ಮತ್ಸ್ಯರೂಪೀ ಪರಮಾತ್ಮನು ಜಲಚರಗಳು ಮತ್ತು ವರುಣಪಾಶ ಇವುಗಳಿಂದ, ವಾಮನನು ಭೂಮಿಯ ಮೇಲೂ, ತ್ರಿವಿಕ್ರಮನು ಗಗನದಲ್ಲಿಯೂ, ನರಸಿಂಹನು ಗಿರಿ-ಅರಣ್ಯ-ರಣರಂಗ-ಯಜ್ಞಶಾಲೆ ಇವುಗಳಲ್ಲಿಯೂ, ವರಾಹನು ಮಾರ್ಗದಲ್ಲಿಯೂ, ಪರಶುರಾಮನು ಪರ್ವತದ ಶಿಖರಗಳಲ್ಲಿಯೂ ಮತ್ತು ಶ್ರೀರಾಮನು ದೇಶಾಂತರದಲ್ಲಿಯೂ ರಕ್ಷಿಸಲಿ !

ನಾರಾಯಣನು ಪ್ರಮಾದಗಳಿಂದಲೂ, ನರನು ಹಾಸದಿಂದಲೂ, ದತ್ತಸ್ವಾಮಿಯು ಯೋಗಭ್ರಷ್ಟತೆಯಿಂದಲೂ, ಕಪಿಲನು ಕರ್ಮಬಂಧದಿಂದಲೂ, ಸನತ್ಕುಮಾರನು ದುರ್ವಿಷಯಾಸಕ್ತಿಯಿಂದಲೂ, ಹಯವದನನು ದೇವಸತ್ಕಾರ ಮಾಡದೇ ಅದರಿಂದ ಬರುವ ದೋಷದಿಂದಲೂ, ಮಹಿದಾಸನು ಬ್ರಹ್ಮಾದಿಗಳೇ ಸ್ವತಂತ್ರರು ಎಂದು ಪೂಜಿಸುವ ದುಷ್ಟ ಉಪಾಸನೆಯಿಂದಲೂ ಕೂರ್ಮನು ಸಕಲನರಕಗಳಿಂದಲೂ, ಧನ್ವಂತರಿಯು ಅಪಥ್ಯದಿಂದಲೂ ಋಷಭನು ಶೀತೋಷ್ಣಾದಿ ದ್ವಂದ್ವಭಯಗಳಿಂದಲೂ ವಿಷ್ಣುವು ಸ್ವರ್ಗಾದಿ ಕಾಮನೆಯಿಂದಲೂ, ಫಲಾಪೇಕ್ಷೆಯಿಂದ ಯಜ್ಞಮಾಡಬೇಕೆಂಬ ದುರ್ಬುದ್ಧಿಯಿಂದಲೂ, ಶೇಷನು ಕ್ರೋಧವಶರೆಂಬ ಸರ್ಪಗಳಿಂದಲೂ, ವೇದವ್ಯಾಸದೇವರು ಶಾಸ್ತ್ರಜ್ಞಾನವಿಲ್ಲದಿರುವುದರಿಂದಲೂ, ಬುದ್ಧನು ದುಷ್ಟಶಾಸ್ತ್ರದಮಿಥ್ಯಾಜ್ಞಾನದಿಂದಲೂ, ಕಲ್ಕಿಯು ಕಲಿಯಿಂದಾಗುವ ದೋಷದಿಂದಲೂ ಕಾಪಾಡಲಿ !

ಕೇಶವನು ಪ್ರಾತಃಕಾಲದಲ್ಲಿಯೂ, ಗೋವಿಂದನು ಆಸಂಗವ (ಬೆಳಗ್ಗೆ 9ಗಂಟೆ) ದಲ್ಲಿಯೂ, ನಾರಾಯಣನು ಪೂರ್ವಾಹ್ಣದಲ್ಲಿಯೂ, ವಿಷ್ಣುವು ಮಧ್ಯಾಹ್ನದಲ್ಲಿಯೂ, ಮಧುಸೂದನನು ಅಪರಾಹ್ನದಲ್ಲಿಯೂ, ಮಾಧವನು ಸಾಯಂಕಾಲದಲ್ಲಿಯೂ, ಹೃಷೀಕೇಶನು ರಾತ್ರಿ ಭೋಜನಕಾಲವಲ್ಲಿಯೂ, ಪದ್ಮನಾಭನು ಅರ್ಧರಾತ್ರಿಯಲ್ಲಿಯೂ, ಶ್ರೀಧರನು ಅಪರ ರಾತ್ರಿಯಲ್ಲಿಯೂ. ಜನಾರ್ದನನು ಅರುಣೋದಯದಲ್ಲಿಯೂ, ದಾಮೋದರನು ಬೆಳಕು ಹರಿಯುತ್ತಿರುವಾಗಲೂ ಮತ್ತು ವಾಸುದೇವನು ಸೂರ್ಯೋದಯ ಕಾಲದಲ್ಲಿಯೂ ನನ್ನನ್ನು ಕಾಪಾಡಲಿ !

ಚಕ್ರವೇ ! ಶತ್ರುಗಳ ಸೈನ್ಯವನ್ನು ದಹಿಸು. ಕೌಮೋದಕೀಗದೆಯೆ ! ಭೂತಭೇತಾಳಾದಿಗಳನ್ನು ಚೂರ್ಣಮಾಡು. ಪಾಂಚಜನ್ಯವೇ ! ರಾಕ್ಷಸಾದಿಗಳನ್ನು

ಸಡುಗಿಸಿ ದೂರ ಓಡಿಸು. ನಂದಕಖಡ್ಗವೆ ! ಶತ್ರುಗಳನ್ನು ಕತ್ತರಿಸು. ಶತಚಂದ್ರ ಗುರಾಣಿಯೇ ! ಶತ್ರುಗಳ ಕಣ್ಣನ್ನು ಕುರುಡಾಗಿಸು !

ಪೂತನಾದಿಗಳ ಭಯವು ಭಗವನ್ನಾಮದ ಕೀರ್ತನೆಯಿಂದ ನಾಶವಾಗಲಿ ! ಗರುಡನು ಪಾಪಗಳಿಂದ ರಕ್ಷಿಸಲಿ ! ವಿಷ್ವಕ್ಸೇನನು ಹರಿನಾಮವನ್ನು ಸ್ಮರಿಸುವ ನಮ್ಮನ್ನು ಕಾಪಾಡಲಿ ! ಶ್ರೀನರಸಿಂಹನು ನಮ್ಮನ್ನು ಮೇಲೆ, ಕೆಳಗೆ, ಸರ್ವದಿಕ್ಕುಗಳಲ್ಲಿಯೂ ರಕ್ಷಿಸುತ್ತಿರಲಿ !

**ವಿಶ್ವರೂಪ :–** ಇಂದ್ರನೇ ! ಈ ಕವಚಮಂತ್ರವನ್ನು ಜಪಿಸುವುದರಿಂದ ಶತ್ರುಗಳನ್ನು ಜಯಿಸುವೆ. ಇದನ್ನು ಜಪಿಸಿ ಸಿದ್ಧಿಯನ್ನು ಪಡೆದವನು ಕಣ್ಣು ತೆರೆದು ನೋಡಿದರೆ, ಅವನಪಾದವು ಸೋಕಿದರೆ ಭಯವು ಪರಿಹಾರವಾಗುವುದು. ಹಿಂದೆ ಕೌಶಿಕನೆಂಬ ಬ್ರಾಹ್ಮಣನು ಈ ಕವಚದ ಸಿದ್ಧಿಯನ್ನು ಪಡೆದು ಕಾಡಿನಲ್ಲಿ ದೇಹ ಬಿಟ್ಟನು. ಇವನ ಅಸ್ಥಿಗಳ ಮೇಲೆ ಚಿತ್ರರಥಗಂಧರ್ವನ ವಿಮಾನವು ಹಾದು ಹೋಗಲಾರದೆ ತಲೆಕೆಳಗಾಗಿ ನೆಲದ ಮೇಲೆ ಬಿದ್ದಿತು. ಚಿತ್ರರಥಗಂಧರ್ವನು ಇದಕ್ಕೆ ಕಾರಣವನ್ನು ವಾಲಖಿಲ್ಯರಿಂದ ತಿಳಿದು ಆ ವಿಪ್ರನ ಅಸ್ಥಿಗಳನ್ನು ಸರಸ್ವತೀನದಿಯಲ್ಲಿ ವಿಸರ್ಜಿಸಿದನು. ಕೂಡಲೇ ವಿಮಾನವು ಮೇಲೇರಿತು. ಗಂಧರ್ವನು ಅದರಲ್ಲಿ ಕುಳಿತು ಮುಂದೆ ಸಾಗಿದನು.

ಇದನ್ನು ಶ್ರದ್ಧೆಯಿಂದ ಹೇಳುವವನೂ, ಕೇಳುವವನೂ ಸಕಲವಿಪತ್ತಿನಿಂದ ಪಾರಾಗುವರು

**ಶುಕ :–** ರಾಜೇಂದ್ರ ! ಇಂದ್ರನು ವಿಶ್ವರೂಪನಿಂದ ಈ ನಾರಾಯಣ ವರ್ಮವನ್ನು ಕಲಿತು ಅದರ ಬಲದಿಂದಲೇ ಅಸುರರನ್ನು ಜಯಿಸಿ ತ್ರಿಲೋಕಾಧಿಕಾರದ ಸುಖವನ್ನು ಅನುಭವಿಸಿದನು.

## ಎಂಟನೆಯ ಅಧ್ಯಾಯ ಮುಗಿದುದು

ವಿಶ್ವರೂಪನು ತಮ್ಮ ತಾಯಿಯ ಕಡೆಯವರಾದ ಅಸುರರಲ್ಲಿನ ಅಭಿಮಾನದಿಂದ ಅವರಿಗೆ ಗುಟ್ಟಾಗಿ ಹವಿಸ್ಸುಗಳನ್ನು ಕೊಡುತ್ತ ಬಂದನು. ಇದನ್ನರಿತ ದೇವೇಂದ್ರನು ಸೋಮಪೀಥ, ಸುರಾಪೀಥ ಮತ್ತು ಅನ್ನಾದವೆಂಬ ವಿಶ್ವರೂಪನ ಮೂರು ತಲೆಗಳನ್ನು ಕತ್ತರಿಸಿಬಿಟ್ಟನು. ಆದರಿಂದ ಬಂದ ಬ್ರಹ್ಮಹತ್ಯದ ಪಾಪವನ್ನು ಭೂಮಿ, ನೀರು, ವೃಕ್ಷ ಮತ್ತು ಸ್ತ್ರೀಯರಿಗೆ ಹಂಚಿದನು. ಅವರು ಇಂದ್ರನಿಂದ ವರಗಳನ್ನು ಪಡೆದು ಈ ಪಾಪವನ್ನು ಸ್ವೀಕರಿಸಲೊಪ್ಪಿದರು.

ಇತ್ತಲಾಗಿ ತ್ವಷ್ಟೃವು ಇಂದ್ರನನ್ನು ಸಂಹರಿಸುವ ಪುತ್ರನನ್ನು ಪಡೆಯಬೇಕೆಂದು ಹೋಮವನ್ನು ಮಾಡಿದನು. ದಕ್ಷಿಣಾಗ್ನಿಯಿಂದ ಭಯಂಕರಾಕಾರದ ವೃತ್ರಾಸುರನು ಹುಟ್ಟಿದನು. ಇವನ ಹಿಂಸೆಯನ್ನು ತಡೆಯಲಾರದೆ ಪ್ರಾಣಿಗಳು ಬೊಬ್ಬೆಯಿಡಲು ಇಂದ್ರಾದಿಗಳು ವೃತ್ರನನ್ನು ಇದಿರಿಸಿ ಯುದ್ಧ ಮಾಡಿದರು. ವೃತ್ರನು ದೇವತೆಗಳಿಂದ ಬಿಡಲ್ಪಟ್ಟ ಅಸ್ತ್ರಗಳನ್ನು ನುಂಗಿಬಿಟ್ಟು ಅವರನ್ನು ನಿಸ್ಸತ್ವರನ್ನಾಗಿ ಮಾಡಿದನು. ಆಗ ದೇವತೆಗಳು ಹರಿಯಲ್ಲಿ ಮರೆಹೊಕ್ಕು, ದರ್ಶನಕೊಡೆಂದು ಹೀಗೆ ಸ್ತುತಿಸಿದರು :-

"ಬ್ರಹ್ಮಾದಿಗಳು ಭೀತರಾಗಿ ಶ್ರೀದೇವಿಯನ್ನು ಪೂಜಿಸುವರು. ಅವಳಾದರೋ ಹರಿಗೆ ಹೆದರಿದವಳೋಪಾದಿ ಅವನಿಗೆ ಅಧೀನಳಾಗಿರುವಳು ಹೀಗೆ ರಮಾಬ್ರಹ್ಮಾದಿ ಜಗತ್ತಿಗೆ ಸ್ವಾಮಿಯೂ, ಪೂರ್ಣಕಾಮನೂ, ತನ್ನ ರೂಪಗಳಿಂದ ಭಿನ್ನರಹಿತನೂ, ರಾಗಾದಿ ಶೂನ್ಯನಾಗಿರುವ ಶ್ರೀಹರಿಯ ಹೊರತು ಉಳಿದವರಾರೂ ರಕ್ಷಕರಲ್ಲ. ಸತ್ಯ ವ್ರತನನ್ನು ಮತ್ಸ್ಯರೂಪದಿಂದ ರಕ್ಷಿಸಿದನು. ಆದಿಸೃಷ್ಟಿಯಲ್ಲಿ ಹುಟ್ಟಿದ ಬ್ರಹ್ಮ ದೇವರ ಭಯವನ್ನು ಪರಿಹರಿಸಿದನು. ನಮ್ಮೆಲ್ಲರನ್ನೂ ಅವನೇ ಸೃಷ್ಟಿಸಿರುವನು. ಪ್ರಜೇಶ್ವರರೆನಿಸಿಕೊಂಡ ನಾವೂ ಅವನ ಸಚ್ಚಿದಾನಂದ ಸ್ವರೂಪವನ್ನು ತಿಳಿಯಲಾರೆವು ಕೃತಾದಿಯುಗಗಳಲ್ಲಿ ಉಪೇಂದ್ರ, ಪರಶುರಾಮ ಮುಂತಾದ ರೂಪಗಳಿಂದ ಅವತರಿಸಿ ಶತ್ರುಗಳ ಬಾಧೆಯಿಂದ ಬಾಧಿಸಲ್ಪಡುತ್ತಿರುವ ನಮ್ಮನ್ನು ರಕ್ಷಿಸುವವನೂ ಅವನೇ. ಈಗಲೂ ನಾವು ಅವನನ್ನೇ ಮರೆಬಿದ್ದು ಬೇಡುತ್ತಿರುವೆವು."

ಹೀಗೆ ಸ್ತುತಿಸಿದ ದೇವತೆಗಳಿಗೆ ಶ್ರೀಹರಿಯು ಹದಿನೇಳು ರೂಪಗಳಿಂದ ದರ್ಶನ ಕೊಟ್ಟನು. ಆಗ ದೇವತೆಗಳು ತಮ್ಮ ಮನೋಭೀಷ್ಟಸಿದ್ಧಿಗಾಗಿ ಹೀಗೆ ಸ್ತುತಿಸುತ್ತಾರೆ.

"ಯಜ್ಞಸೃಷ್ಟಿಕರ್ತನೂ, ಸಂಸಾರದಲ್ಲಿ ಜೀವರನ್ನು ಬಂಧಿಸುವವನೂ, ಅನಂತ ನಾಮನೂ ಆದ ನಿನಗೆ ನಮಸ್ಕಾರ ! ನಿನ್ನ ತ್ರಿಧಾಮಗಳನ್ನು ಜ್ಞಾನಿಯೇ ತಿಳಿಯ ಬಲ್ಲನು. ಅವನೇ ಅದನ್ನು ಹೊಂದಲೂ ಅರ್ಹನು. ಲೋಕವಿಲಕ್ಷಣ ಕರ್ತನಾದ ನಿನ್ನ ಕ್ರೀಡೋಪಾಯವು ಅಂದರೆ ಜಗತ್ತಿನ ಸೃಷ್ಟಿ, ಸ್ಥಿತಿ, ಲಯ ಮೊದಲಾದವುಗಳಿಗೆ ಕಾರಣವಾದ ನಿನ್ನ ಕ್ರೀಡೆಯೆಂಬ ಉಪಾಯವು ನಿನ್ನ ಅನುಗ್ರಹವಿಲ್ಲದೆ ತಿಳಿಯ ಲಾರದು- ಅಜ್ಞರು ನಿನ್ನ ವಿಷಯದಲ್ಲಿ ಹೀಗೆ ಹೇಳುವರು :- ಭಗವಂತನಿಗೆ ಕರ್ಮ ಲೇಪವಿದೆಯೋ ಇಲ್ಲವೋ ಎಂದು ಸಂದೇಹಿಸಬೇಕಾಗಿಲ್ಲ. ಅಘಟಿತಘಟನಾ ಸಮರ್ಥ ನಾದ್ದರಿಂದ ಎರಡೂ ಅವನಿಗುಂಟು. ಹೀಗೆ ಅಯೋಗ್ಯರು ಹೇಳುವ ಈ ಪಕ್ಷವು ಸರಿಯಲ್ಲ. ದೇವ ! ನೀನು ಅಚಿಂತ್ಯ ಶಕ್ತಿವುಳ್ಳವನು ಎಂದ ಮಾತ್ರಕ್ಕೆ ವಿವೇಕವಿಲ್ಲ ದವನಂತೆ ಸಾಯುವುದು ಬದುಕುವುದು ಇಂತಹವುಗಳನ್ನು ನಿನ್ನಲ್ಲಿ ಘಟನೆ ಮಾಡಿ ಕೊಳ್ಳುವುದಿಲ್ಲ. ನಿನಗೆ ಸುಖ ದುಃಖ, ಪುಣ್ಯ ಪಾಪಗಳ ಲೇಪವಿಲ್ಲ.

(ಗೋಪಾಲದಾಸರು ಈ ವಿಷಯಕ್ಕೆ ಹೇಳುವುದನ್ನು ಕೇಳಿ :-)

**ಅಟತಾಳ**

ದುಃಖಿಷ್ಠರಿಗೆ ದುಃಖವ್ಯಕ್ತ ಮಾಡುವವನಾಗಿ । ದುಃಖಿ ಎಂತೆಂದು ತಾಕರೆಸಿಕೊಂಬುವನಯ್ಯ । ರಕ್ಕಸರಿಗೆ ನೀಚರ ಮಾಡೋದರಿಂದ । ಚೊಕ್ಕತಾ ಅವರನೆಂತೆಂದು ಬಂಧನೆನಿಸಿಕೊಂಬ । ದಿಕ್ಕಾಗಿ ಅವರವರ ಸಾಧ್ಯ ಸಾಧನ ಕರ್ಮ । ವ್ಯಕ್ತಮಾಡೋದರಿಂದ ಬಾಧ್ಯ ಬಾಧಕನೆಂಬ । ಉಕ್ತಿಯಲಿ ಕರೆಸಿಕೊಂಬ, ಹೇಯತ್ವಗಳಿಂದ । ಲಕುಮಿ ಪತಿಗೆ ಅವದಾವ ನಿಷೇಧವಿಲ್ಲ । ಭಕ್ತವತ್ಸಲ ದೇವ ಗೋಪಾಲವಿಠಲ । ಸಿಕ್ಕದೆ (ನಿರ್ಲಿಪ್ತ) ಮನೆಮನೆ ತುಕ್ಕುತಚರಿಸುವ ॥6॥

ಜ್ಞಾನಿಗಳು ನಿನ್ನನ್ನು ಅನಂತ, ಸಚ್ಚಿದಾನಂದ ಸ್ವರೂಪನಾದ ಪರಬ್ರಹ್ಮನನ್ನಾಗಿಯೇ ಸಾಕ್ಷಾತ್ತಾಗಿ ನೋಡಿರುವರು. ನಿನ್ನ ಮಹಿಮಾಮೃತವನ್ನು ಪಾನ ಮಾಡುವ ಏಕಾಂತ ಭಕ್ತರು ನಿನ್ನನ್ನು ಮಾತ್ರ ಬಯಸುವರೇ ಹೊರತು ಅಲ್ಪಗಳೂ, ಹೇಯಗಳೂ, ಅನಿತ್ಯಗಳೂ ಆದ ಯಾವ ವಿಷಯಗಳನ್ನೂ ಬಯಸುವುದಿಲ್ಲ. ನರಸಿಂಹನೇ ! ಅಂತಹ ಸಜ್ಜನರಿಗೆ ತಾಪಕೊಡುವ ದೈತ್ಯನನ್ನು ನೀನು ನಿಗ್ರಹಿಸುವೆ. ಈಗ ವೃತ್ರನಿಂದ ಲೋಕಕ್ಕೆ ತಾಪವಾಗಿದೆ. ಅವನನ್ನು ನೀನು ಕೊಂದು ನಿನ್ನ ಭಕ್ತರಾದ ನಮ್ಮನ್ನು ಕಾಪಾಡು ! ಸರ್ವಜ್ಞನಾದ ನಿನಗೆ ನಾವು ತಿಳಿಸಬೇಕಾದ ಅಂಶವು ಯಾವುದೂ ಇಲ್ಲ. ಹಂಸನಾದ ನಿನಗೆ ನಮಸ್ಕಾರ ! ಆಪತ್ಪರಿಹಾರಕನಾದ ನಿನಗೆ ನಮಸ್ಕಾರ "

**ಶ್ರೀಹರಿ** :- ನಿಮ್ಮ ಸ್ತುತಿಗೆ ಮೆಚ್ಚಿದೆನು. ನನ್ನನ್ನು ಫಲಾಪೇಕ್ಷೆಯಿಂದ ಭಜಿಸುವವನು ಅಲ್ಪನು ಅಧಮನವನು. ನಾನು ಮುಕುಂದನಾದರೂ ಅವನಿಗೆ ಬೇಕಾದುದನ್ನು ಮಾತ್ರ ಕೊಡುವೆನು. ನೀವಾದರೋ ನನಗೆ ಇಷ್ಟವಾದುದನ್ನೇ ಕೇಳಿರುವಿರಿ. ಆದ್ದರಿಂದ ವೃತ್ರಾಸುರನನ್ನು ಸಂಹರಿಸುವೆನು. ಆದರೆ ನೀವು ಇಷ್ಟು ಕೆಲಸ ಮಾಡಿರಿ. ನಾರಾಯಣವರ್ಮ ಸಿದ್ಧಿಯಿಂದ ದೃಢವಾದ ದೇಹವುಳ್ಳ ದಧೀಚಿಯ ಮೂಳೆಗಳನ್ನು ಅವನ ಬಳಿಗೆ ಹೋಗಿ ಯಾಚಿಸಿರಿ. ಧರ್ಮಾತ್ಮನಾದ ಅವನು ದೇಹವನ್ನು ಬಿಡುವನು. ವಿಶ್ವಕರ್ಮನು ಅವನ ಮೂಳೆಗಳಿಂದ ವಜ್ರಾಯುಧವನ್ನು ಮಾಡಲಿ. ನಾನು ಆ ಆಯುಧದಲ್ಲಿಯೂ, ಇಂದ್ರನಲ್ಲಿಯೂ ಸಂನಿಹಿತನಾಗಿ ವೃತ್ರನನ್ನು ಕೊಂದು ಇಂದ್ರನಿಗೆ ವೃತ್ರಸಂಹಾರಿಯೆಂಬ ಕೀರ್ತಿಯನ್ನುಂಟು ಮಾಡುವೆನು. ನೀವು ಮೊದಲಿನಂತೆ ತೇಜಸ್ವಿಗಳಾಗಿ ಸುಖವಾಗಿರುವಿರಿ.

**ಒಂಭತ್ತನೆಯ ಅಧ್ಯಾಯ ಮುಗಿದುದು**

ಹರಿಯ ಅಪ್ಪಣೆಯಂತೆ ದೇವತೆಗಳು ದಧೀಚಿ ಋಷಿಗಳ ಬಳಿಗೆ ಒಂದು ಅವರ ಮೂಳೆಗಳನ್ನು ಯಾಚಿಸಿದರು. ದಧೀಚಿಗಳು ಜ್ಞಾನಿಗಳಾದ್ದರಿಂದ ಸಂತೋಷ ಪಟ್ಟು ಸಾಯುವಾಗ ದೇವತೆಗಳಿಂದ ಧರ್ಮವನ್ನು ಕೇಳಬೇಕೆಂಬ ತಾತ್ಪರ್ಯದಿಂದ ಮಾತಾ ಡುತ್ತಾರೆ.

**ದಧೀಚಿ** :– ದೇವತೆಗಳಿರಾ ! ಪ್ರಾಣಿಗಳು ಸಾಯುವಾಗ ಅವರಿಗಾಗುವ ಸಂಕಟವನ್ನು ನೀವು ತಿಳಿದಿರುವಿರಿ. ಮನುಷ್ಯನು ತನಗಿಷ್ಟವಾದ ದೇಹವನ್ನು ಬಿಡಲು ಒಪ್ಪುವುದೇ ಇಲ್ಲವಷ್ಟೆ ?

**ದೇವತೆಗಳು** :– ನಿನ್ನಂತಹ ಕೃಪಾಳುಗಳಾದ ಮಹಾತ್ಮರು ಪರೋಪಕಾರ ಕ್ಕಾಗಿ ಕೊಡಬಾರದ ವಸ್ತುವೇ ಇಲ್ಲ. ಕೇವಲ ಸ್ವಾರ್ಥಿಯಾದ ಪುರುಷನಿಗೆ ಇತರರ ದುಃಖವೇ ತಿಳಿಯುವುದಿಲ್ಲ.

**ದಧೀಚಿ** :– ನಿಮ್ಮಿಂದ ಈ ಧರ್ಮವನ್ನು ಶ್ರವಣ ಮಾಡಬೇಕೆಂದೇ ಹೀಗೆ ಹೇಳಿದೆನು. ಪರರ ವ್ಯಥೆಯನ್ನು ಅರಿತು ಉಪಕರಿಸದವನು ಮನುಷ್ಯನೇ ಅಲ್ಲ. ಅವನೊಂದು ಪಶುವು.

(ಹೀಗೆ ಹೇಳಿ ಯೋಗಧಾರಣೆಯಿಂದ ಆ ಋಷಿಗಳು ದೇಹವನ್ನು ಬಿಟ್ಟರು. ವಿಶ್ವಕರ್ಮನು ಅವರ ಮೂಳೆಗಳಿಂದ ವಜ್ರಾಯುಧವನ್ನು ನಿರ್ಮಿಸಿದನು. ಇಂದ್ರನು ಅದನ್ನು ಹಿಡಿದು ಐರಾವತವನ್ನೇರಿ, ದೇವಸೇನೆಯೊಡನೆ ದೈತ್ಯರನ್ನಿದಿರಿಸಿ ಯುದ್ಧ ಮಾಡಿದನು. ನಮುಚಿ ಮೊದಲಾದ ಅಸುರಸೇನಾನಾಯಕರು ದೇವತೆಗಳಿಂದ ಪೆಟ್ಟು ತಿಂದು ಓಡಿದರು.)

**ವೃತ್ರ** :– ಅಸುರಾಗ್ರಣಿಗಳೇ ! ಹುಟ್ಟಿದವನಿಗೆ ಸಾವು ಸಿದ್ಧ. ವೀರರಾದ ನೀವು ಇಲ್ಲಿಂದ ಬದುಕಿಹೋದರೆ ಸಾಯದೇ ಉಳಿಯುವಿರೇನು ? ಆದ್ದರಿಂದ ಅಪರಿಹಾರ್ಯವಾದ ಸಾವನ್ನು ತಪ್ಪಿಸಿಕೊಳ್ಳಲು ಯತ್ನಮಾಡದೆ, ವೀರರಿಗೆ ಯೋಗ್ಯ ವಾದ ಉತ್ತಮ ಮರಣವನ್ನು ಹೊಂದಲು ಯತ್ನ ಮಾಡಬೇಕು. ಲೋಕದಲ್ಲಿ ಬ್ರಹ್ಮಜ್ಞಾನಪೂರ್ವಕ ಬ್ರಹ್ಮನ ಧ್ಯಾನದಿಂದ ಸಾಯುವುದೊಂದು, ರಣರಂಗದಲ್ಲಿ ವೀರಾವೇಶದಿಂದ ಕಾದಾಡಿ ಸಾಯುವುದೊಂದು ಇವೆರಡೇ ಪ್ರಶಸ್ತಮರಣಗಳೆಂದು ಶಾಸ್ತ್ರವು ಸಾರುತ್ತಿದೆ. ಆದ್ದರಿಂದ ನೀವು ಓಡಿಹೋಗದೆ ರಣರಂಗದಲ್ಲಿ ಸ್ಥಿರವಾಗಿ ನಿಂತು ಯುದ್ಧ ಮಾಡಿರಿ !

**ಹತ್ತನೆಯ ಅಧ್ಯಾಯ ಮುಗಿದುದು**

ವೃತ್ರನು ಹೀಗೆ ಹೇಳುತ್ತಿದ್ದರೂ ದೈತ್ಯರು ಓಡಿಹೋಗುತ್ತಿದ್ದರು. ದೇವತೆಗಳು ಅವರನ್ನು ಅಟ್ಟಿಕೊಂಡುಹೋಗಿ ಬಡಿಯುತ್ತಿದ್ದರು. ಇದನ್ನು ಕಂಡು ಕೋಪಗೊಂಡ ವೃತ್ರನು ತಮ್ಮವರನ್ನು ಅಡ್ಡಗಟ್ಟಿ ನಿಲ್ಲಿಸಿ ದೇವತೆಗಳನ್ನು ಕುರಿತು ಮಾತಾಡುತ್ತಾನೆ:-

**ವೃತ್ರ :-** ಇದೇನು ? ಹೆದರಿ ಓಡುತ್ತಿರುವ ಅಲ್ಪರ ಮೇಲೆ ನಿಮ್ಮ ಪೌರುಷವೆ? ನಿಜವಾಗಿ ನೀವು ಗಂಡುಗಲಿಗಳಾಗಿದ್ದರೆ ನನ್ನ ಮೇಲೆ ನಿಮ್ಮ ಪರಾಕ್ರಮ ವನ್ನು ತೋರಿಸಿರಿ.

(ಹೀಗೆ ಹೇಳಿ ಗರ್ಜಿಸಿದನು ಮತ್ತು ದೇವತೆಗಳ ಸೈನ್ಯದೊಳಗೆ ನುಗ್ಗಿ, ಪಾದದಿಂದ ಅವರನ್ನು ಹೊಸೆಯುತ್ತ ಬರಲು ಇಂದ್ರನು ಗದೆಯನ್ನು ಬೀಸಿದನು. ವೃತ್ರನು ಅದನ್ನು ತನ್ನ ಕೈಯಿಂದ ಹಿಡಿದು, ಓಡಿಬಂದು ಐರಾವತದ ಕುಂಭಸ್ಥಳಕ್ಕೆ ಗುರಿಯಿಟ್ಟು ಹೊಡೆದನು. ಆನೆಯು ಜರ್ಝರಿತವಾಗಿ ಹಿಂದಕ್ಕೆ ಸರಿಯಿತು. ಇಂದ್ರನು ಅಮೃತಹಸ್ತದಿಂದ ಸವರಲು ಆ ಆನೆ ಚೇತರಿಸಿಕೊಂಡು ನಿಂತಿತು. ಬಳಿಕ ಇಂದ್ರನು ಯುದ್ಧಕ್ಕೆ ಮುಂದೆ ಬಂದು ನಿಂತನು. ಆಗ ವೃತ್ರನಿಗೆ ಹಿಂದೆ ಇಂದ್ರನು ತನ್ನ ಅಣ್ಣನಾದ ವಿಶ್ವರೂಪನನ್ನು ಕೊಂದುದು ಸ್ಮರಣೆಗೆ ಬಂದು ಮಿತಿಮೀರಿದ ಕೋಪವು ಬಂದಿತು)

**ವೃತ್ರ :-** ಇಂದ್ರನೇ ! ಬ್ರಹ್ಮಹತ್ಯಗಾರನಾದ ನೀನು ದೈವಯೋಗದಿಂದ ನನಗೆ ಕಾಣಿಸಿಕೊಂಡಿರುವೆ. ನಿನ್ನನ್ನೀಗ ಕೊಂದು ಅಣ್ಣನ ಋಣವನ್ನು ತೀರಿಸುವೆನು. ನನ್ನನ್ನು ಪ್ರಹರಿಸಲು ಬರುವ ದೇವತೆಗಳೆಲ್ಲರನ್ನೂ ಕೊಂದು ಭೂತಗಣಗಳಿಗೆ ಬಲಿಯನ್ನು ಕೊಡುವೆನು. ನೀನೇ ನನ್ನನ್ನು ಕೊಂದರೆ ವೀರಸ್ವರ್ಗವನ್ನು ಸೇರಿ ಮಹಾತ್ಮರ ಸೇವಕನಾಗುವೆನು. ವಜ್ರಾಯುಧವು ನನ್ನನ್ನು ಕೊಲ್ಲುವುದೋ ಇಲ್ಲವೋ ಎಂಬ ಸಂದೇಹ ಬೇಡ. ದಧೀಚಿಯ ತಪಸ್ಸಿದ್ಧಿ ಮತ್ತು ಶ್ರೀಹರಿಯ ಸನ್ನಿಧಾನ ದಿಂದ ಅದು ಅಮೋಘವಾಗಿದೆ. ಶ್ರೀಹರಿಯಿದ್ದಕಡೆ ಜಯವು ತಪ್ಪುವುದಿಲ್ಲ. ಆದ್ದರಿಂದ ವಜ್ರಾಯುಧವನ್ನು ನೀನು ನಿಸ್ಸಂದೇಹವಾಗಿ ನನ್ನ ಮೇಲೆ ಬಿಟ್ಟು ನನ್ನನ್ನು ಕೊಂದುಬಿಡು. ಸಂಕರ್ಷಣದೇವನು ನನಗೆ ಉಪದೇಶಿಸಿರುವಂತೆ ಅವನ ಚರಣವನ್ನೇ ಧ್ಯಾನಿಸಿ ವೈಕುಂಠಕ್ಕೆ ತೆರಳುವೆನು. ಹರಿಯು ತನ್ನ ಏಕಾಂತ ಭಕ್ತರಿಗೆ ಎಂದಿಗೂ ನಶ್ವರಫಲವನ್ನು, ಸಂಪತ್ತನ್ನು ಕೊಡುವುದಿಲ್ಲ. ಅನುಗ್ರಹಿಸಬೇಕೆಂಬ ಇಚ್ಛೆ ಬಂದರೆ ಅವನು ಆ ಭಕ್ತನಲ್ಲಿರುವುದನ್ನೆಲ್ಲ ಕಿತ್ತುಕೊಳ್ಳುವನು. "ಆಹಾ ! ಶ್ರೀಹರೇ ! ನಾನು ನಿನ್ನ ದಾಸನ ದಾಸನು. ನನ್ನ ಮನಸ್ಸು ನಿನ್ನನ್ನು ಸ್ಮರಿಸಲಿ. ನನ್ನ ನಾಲಗೆಯು ನಿನ್ನನ್ನು ಕೊಂಡಾಡಲಿ. ನನ್ನ ದೇಹವು ನಿನ್ನ ಸೇವೆಯನ್ನು ಮಾಡಲಿ. ನಿನ್ನನ್ನುಳಿದು ಸ್ವರ್ಗ, ಸತ್ಯಲೋಕಾಧಿಪತ್ಯ ಇತ್ಯಾದಿ ಯಾವುದನ್ನೂ,

ಕೊನೆಗೆ ಮೋಕ್ಷವನ್ನೂ ಒಯಸುವುದಿಲ್ಲ. ನಿನ್ನನ್ನು ಎಂದಿಗೆ ನೋಡೇನು ? ದೇವಾ ! ಯಾವಾಗಲೂ ನಿನ್ನ ಭಕ್ತರ ಸಂಗವುಂಟಾಗಲಿ. ಹೆಂಡತಿ, ಮನೆ, ಮಠವೆಂದು ಅಭಿಮಾನ ಮಾಡುತ್ತ, ನಿನಗೆ ವಿಮುಖರಾಗಿರುವ ದುರ್ಜನರ ಸಂಗವು ಯಾವ ಜನ್ಮಕ್ಕೂ ಬೇಡ !

## ಹನ್ನೊಂದನೆಯ ಅಧ್ಯಾಯ ಮುಗಿದುದು

ಬಳಿಕ ವೃತ್ರನು ಇಂದ್ರನ ಮೇಲೆ ಶೂಲವನ್ನೆಸೆದನು. ಇಂದ್ರನು ಅದನ್ನು ಮಧ್ಯದಾರಿಯಲ್ಲೇ ಕತ್ತರಿಸಿ ವಜ್ರಾಯುಧದಿಂದ ವೃತ್ರನ ಬಲತೋಳನ್ನು ಕತ್ತರಿಸಿದನು. ವೃತ್ರನು ಎಡಗೈಯಿಂದ ಮುದ್ಗರವನ್ನು ಹಿಡಿದು ಬಂದು ಇಂದ್ರನ ಕಪೋಲಕ್ಕೆ ಬೀಸಿ ಬಡಿದನು. ಇಂದ್ರನ ಕೈಲಿದ್ದ ವಜ್ರಾಯುಧವು ಜಾರಿ ಕೆಳಗೆ ಬಿದ್ದಿತು. ಅದನ್ನು ತಿರುಗಿ ತೆಗೆದುಕೊಳ್ಳಲು ಇಂದ್ರನಿಗೆ ನಾಚಿಕೆಯಾಯಿತು.

**ವೃತ್ರ :–** ಇಂದ್ರನೇ ! ವಿಷಾದವು ಉಚಿತವಲ್ಲ. ವಜ್ರವನ್ನು ತೆಗೆದುಕೊಂಡು ನನ್ನನ್ನು ಕೊಂದುಬಿಡು. ಯುದ್ಧದಲ್ಲಿ ಜಯಾಪಜಯಗಳು ಯಾರಿಗೂ ಸ್ಥಿರವಲ್ಲ. ಹರಿಯೊಬ್ಬನೇ ಸದಾ ಜಯಶೀಲನು. ಜೀವರ ಕರ್ಮಾನುಸಾರವಾಗಿ ಜಯಾಪಜಯುಗಳು ಶ್ರೀಹರಿಯಿಂದ ಬರುವುವು. ಸರ್ವಜೀವರೂ ಬೊಂಬೆಗಳಂತೆ ಶ್ರೀಹರಿಯ ಅಧೀನರಾಗಿ, ಅವನು ನಡೆಸಿದಂತೆ ನಡೆಯುವರು. ಇಂತಹ ಸರ್ವಸ್ವಾಮಿಯಾದ ಶ್ರೀಹರಿಯನ್ನು ಸಾಮಾನ್ಯನಾದ ಜೀವನೆಂದು ತಿಳಿಯತಕ್ಕವನು ಅಜ್ಞಾನಿಯು. ಜೀವರಿಗೆ ಇಷ್ಟವಲ್ಲದ್ದು ಶ್ರೀಹರೀಚ್ಛೆಯಿಂದ ಹೇಗೆ ಬರುವುದೋ ಹಾಗೆಯೇ ಜೀವರಿಗೆ ಇಷ್ಟವಾದುದೂ ಹರೀಚ್ಛೆಯಿಂದಲೇ ಬರುವುದು. "ಸುಖವಾದರೆ ತನ್ನಿಂದಾಯಿತೆಂದೂ, ದುಃಖವಾದರೆ ದೈವ ಮಾಡಿತೆಂದೂ ತಿಳಿಯಬಾರದು. ಅವನ ಅಧೀನವಾಗಿಯೇ ಬರುವ ಸುಖದುಃಖಗಳನ್ನು ಅನುಭವಿಸಿ ನಿರ್ವಿಕಾರನಾಗಿರಬೇಕೇ ಹೊರತು ಸುಖವು ಬಂದಾಗ ಉಬ್ಬಿ, ದುಃಖವು ಬಂದಾಗ ಕುಗ್ಗಬಾರದು. ಬ್ರಹ್ಮಸಾಕ್ಷಾತ್ಕಾರ ಪಡೆದವನು ಹರುಷಾದಿಗಳಿಂದ ಮರುಳಾಗುವುದಿಲ್ಲ. ನನ್ನನ್ನು ನೋಡು ! ನನ್ನ ಆಯುಧವು ಹೋಯಿತು. ಬಲತೋಳೂ ಹೋಯಿತು. ಆದಕ್ಕಾಗಿ ದುಃಖಿಸದೆ ಹರೀಚ್ಛೆಯೆಂದು ತಿಳಿದು ನನ್ನ ಕರ್ತವ್ಯದಲ್ಲಿ ಆಸಕ್ತನಾಗಿಲ್ಲವೆ ? ಯುದ್ಧವು ಜೂಜಿನಂತಿರುವುದು. ಯಾರಿಗೆ ಜಯವೋ, ಯಾರಿಗೆ ಪರಾಜಯವೋ ಶ್ರೀಹರಿಗೇ ಗೊತ್ತು. ಇನ್ನಾರಿಗೂ ತಿಳಿಯುವುದೇ ಇಲ್ಲ.

**ಇಂದ್ರ :–** (ಕೆಳಗೆ ಬಿದ್ದಿದ್ದ ವಜ್ರಾಯುಧವನ್ನು ತೆಗೆದುಕೊಂಡು) ದಾನವನೇ ! ನೀನು ಜೀವನ್ಮುಕ್ತನಾಗಿರುವೆ. ಜಾತಿಯಲ್ಲಿ ಅಸುರನಾದರೂ ಜ್ಞಾನ

ಭಕ್ತ್ಯಾದಿ ಸಂಪನ್ನನಾಗಿರುವೆ. ನಿನ್ನಂತಹವನಿಗೆ ದೇವತೆಗಳಿಂದಾಗಲೀ, ಸ್ವರ್ಗಾದಿ ಗಳಿಂದಾಗಲೀ ಏನೂ ಆಗಬೇಕಾದ್ದಿಲ್ಲ.

(ಹೀಗೆ ವೃತ್ರನನ್ನು ಹೊಗಳಿದ ಮೇಲೆ ಅವರಿಬ್ಬರೂ ಯುದ್ಧಮಾಡಿದರು. ಪರಿಘವೆಂಬ ಆಯುಧವನ್ನು ವೃತ್ರನು ಎಡಗೈಯಿಂದ ಹಿಡಿದು ಹೊಡೆಯಲು ಹೋದಾಗ ಇಂದ್ರನು ವೃತ್ರನ ಎಡಗೈಯನ್ನೂ, ಪರಿಘಾಯುಧವನ್ನೂ ಕತ್ತರಿಸಿ ಬಿಟ್ಟನು. ಆಗ ವೃತ್ರನು ಐರಾವತ ಸಹಿತನಾದ ಇಂದ್ರನನ್ನು ನುಂಗಿ ಬಿಟ್ಟನು. ನಾರಾಯಣವರ್ಮಪಾರಾಯಣದ ಸಿದ್ಧಿಯಿಂದ ದೇವೇಂದ್ರನು ವೃತ್ರನ ಉದರ ದೊಳಗೆ ಸಾಯದೆ ಬದುಕಿದ್ದು, ವಜ್ರಾಯುಧದಿಂದ ವೃತ್ರನ ಹೊಟ್ಟೆಯನ್ನು ಸೀಳಿ ಕೊಂಡು ಹೊರಗೆ ಬಂದನು. ಬಳಿಕ ಹರಿಯ ಮಾತಿನಂತೆ ಅವರಿಬ್ಬರೂ ಗೆಳೆಯ ರಾದರು. ಒಂದು ವರ್ಷ ಕಳೆಯಿತು. ಸಮುದ್ರದ ತೀರದಲ್ಲಿ ಅವರಿಬ್ಬರೂ ಸಂಚರಿಸುತ್ತಿದ್ದಾಗ ಇಂದ್ರನು ಅಲ್ಲಿ ಸಿದ್ಧವಾದ ನೊರೆಯಲ್ಲಿ ವಜ್ರಾಯುಧವನ್ನು ಅದ್ದಿ ವೃತ್ರನ ಶಿರಸ್ಸನ್ನು ಕತ್ತರಿಸಿದನು. ಕೂಡಲೇ ಆ ದೇಹದೊಳಗಿನಿಂದ ಜೀವನು ಹೊರಟು ವಿದ್ಯಾಧರಲೋಕವನ್ನು ಸೇರಿದನು. ಸರ್ವರೂ ಇಂದ್ರನನ್ನು ಕೊಂಡಾಡಿ ಅವರವರ ಲೋಕಕ್ಕೆ ಹೊರಟು ಹೋದರು.

## ಹನ್ನೆರಡನೆಯ ಅಧ್ಯಾಯ ಮುಗಿದುದು

ಋಷಿಗಳು ಇಂದ್ರನನ್ನು ಕುರಿತು ವೃತ್ರಾಸುರನನ್ನು ಕೊಲ್ಲಬೇಕೆಂದೂ, ಅದ ರಿಂದ ಬರುವ ಬ್ರಹ್ಮಹತ್ಯೆಯನ್ನು ಅಶ್ವಮೇಧ ಯಾಗವನ್ನು ಮಾಡಿಸಿ ಪರಿಹರಿಸುವು ದಾಗಿ ಭರವಸೆ ಕೊಟ್ಟಿದ್ದರು. ಇಂದ್ರನಿಗೆ ಇದರ ತಾಪವಿಲ್ಲದಿದ್ದರೂ ಅವನು ಅನುಭವಿಸಲೇಬೇಕಾದ ಪ್ರಾರಬ್ಧಕರ್ಮಕ್ಕೆ ಇದು ಸೂಚಕವಾಯಿತು. ಆಗ ಇಂದ್ರನು ಮಾನಸಸರೋವರಕ್ಕೆ ಹೋಗಿ ಸೂಕ್ಷ್ಮರೂಪದಿಂದ ಅಲ್ಲಿದ್ದ ಕಮಲದ ದಂಟಿನಲ್ಲಿ ವಾಸಿಸುತ್ತ ಸಾವಿರವರ್ಷಗಳಕಾಲ ಹೆಂಡತಿ, ಮಕ್ಕಳು, ಐಶ್ವರ್ಯ, ಅಧಿಕಾರಾದಿ ಭೋಗಗಳಿಲ್ಲದೆ ಶ್ರೀ ನರಸಿಂಹನ ಧ್ಯಾನವನ್ನು ಮಾಡುತ್ತ ಕಾಲ ಕಳೆದನು. ಆ ವೇಳೆ ಯಲ್ಲಿ ನಹುಷನು ಇಂದ್ರಪದವಿಯನ್ನು ಅಲಂಕರಿಸಿದ್ದು, ಶಚಿಯನ್ನು ಬಯಸಿ, ಋಷಿ ಗಳಿಂದ ಶಾಪವನ್ನು ಹೊಂದಿ ಅಜಗರನಾದನು ಇಂದ್ರನು ನರಸಿಂಹನ ಧ್ಯಾನಮಾಡಿ ತನ್ನ ಪ್ರಾರಬ್ಧಕರ್ಮ ಉಪಮರ್ದನವನ್ನು ಹೊಂದಿ ಸ್ವರ್ಗಕ್ಕೆ ಬಂದು ಸೇರಿದನು. ಬಳಿಕ ಅವನು ಅಶ್ವಮೇಧವನ್ನು ಮಾಡಿ'ಇಂದ್ರೋ ವೃತ್ರಂ ಹತ್ವಾ ಮಹಾನಭೂತ್ ಎಂಬ ಶ್ರುತಿಯ ವಚನದಂತೆ ಅತಿಶಯ ಮಹಿಮೆಯುಳ್ಳವನಾದನು.

ಧನ್ಯವೂ, ಕೀರ್ತಿಪ್ರದವೂ, ಪಾಪಪರಿಹಾರಕವೂ, ಮಂಗಳಕರವೂ, ಆಯು

ವೃದ್ಧಿಕರವೂ, ಇಂದ್ರಿಯಶಕ್ತಿಪ್ರದವೂ ಆದ ಈ ಆಖ್ಯಾನವನ್ನು ಯಾವಾಗಲೂ, ಕೊನೆಗೆ ಪ್ರತಿಪರ್ವಕಾಲದಲ್ಲಾದರೂ ಜ್ಞಾನಿಗಳು ಪಠಿಸಬೇಕು ಮತ್ತೂ ಅದನ್ನು ಕೇಳಬೇಕು.

## ಹದಿಮೂರನೆಯ ಅಧ್ಯಾಯ ಮುಗಿದುದು

**ಪರೀಕ್ಷಿತ್ :** ಮುನಿಯೆ ! ವೃತ್ರಸು ಅಸುರನಾಗಿದ್ದರೂ ಶ್ರೀಹರಿಯಲ್ಲಿ ಭಕ್ತಿಯನ್ನು ಹೊಂದಿದುದಕ್ಕೆ ಕಾರಣವೇನು ?

**ಶುಕ :** ರಾಜೇಂದ್ರನೇ ! ವೃತ್ರನು ಪೂರ್ವದಲ್ಲಿ ಚಿತ್ರಕೇತುವೆಂಬ ಚಕ್ರವರ್ತಿಯಾಗಿದ್ದನು. ಅವನ ದೇಶಕ್ಕೆ ಶೂರಸೇನವೆಂದು ಹೆಸರು. ಅವನಿಗೆ ಕೋಟಿ ಪತ್ನಿಯರಿದ್ದರು. ಸಕಲವಿಷಯದಲ್ಲಿಯೂ ಅವನು ಭಾಗ್ಯಶಾಲಿ. ಆದರೇನು ? ಮಕ್ಕಳಿಲ್ಲವಾದುದರಿಂದ ಕೊರಗುತ್ತಿದ್ದನು. ಹೀಗಿರಲು ಇವನಿಗೆ ತತ್ತ್ವೋಪದೇಶವನ್ನುಮಾಡಿ ಉದ್ಧರಿಸಬೇಕೆಂದು ಅಂಗಿರಾಋಷಿಗಳೂ ಮತ್ತು ನಾರದರೂ ಅಲ್ಲಿಗೆ ಬಂದರು. ಆದರೆ ಮಕ್ಕಳಿಲ್ಲವೆಂದು ಕೇವಲ ಪ್ರಾಪಂಚಿಕ ವಿಷಯದಲ್ಲಿ ಮಗ್ನನಾಗಿದ್ದ ರಾಜನು ಆ ಮುನಿಗಳನ್ನು ಪುತ್ರವಂತನಾಗುವಂತೆ ಅನುಗ್ರಹಿಸಬೇಕೆಂದು ಬೇಡಿದನು. ಆ ಮುನಿಗಳು ರಾಜನ ಮನಸ್ಸು ತತ್ತ್ವೋಪದೇಶಕ್ಕೆ ಈಗ ಹುಲಸಾಗಿಲ್ಲವೆಂದೂ, ಅವನು ಪುತ್ರನನ್ನು ಪಡೆದು ಅದರಿಂದ ಬರುವ ದುಃಖವನ್ನು ಅನುಭವಿಸಿದ ಬಳಿಕ ವಿರಕ್ತನಾಗುವನೆಂದೂ, ಆಗ ಮಾಡುವ ತತ್ತ್ವೋಪದೇಶವು ಫಲಕಾರಿಯಾಗುವುದೆಂದೂ, ಮನಸ್ಸಿನಲ್ಲಿ ನಿಶ್ಚಯಿಸಿ, ತ್ವಷ್ಟೃದೇವತಾಕವಾದ ಯಜ್ಞವನ್ನು ಮಾಡಿ, ಯಜ್ಞಶೇಷವನ್ನು ಪಟ್ಟಮಹಿಷಿಯಾದ ಕೃತದ್ಯುತಿಗೆ ಕೊಟ್ಟರು. ಅದನ್ನು ಅವಳು ತಿಂದಳು. ಆಗ ಅಂಗಿರಾಋಷಿಗಳು 'ರಾಜನೇ' ನಿನಗೊಬ್ಬ ಮಗನು ಹುಟ್ಟುವನು. ಅವನು ನಿನಗೆ ಹರ್ಷಕ್ಕೂ ಶೋಕಕ್ಕೂ, ಕಾರಣನಾಗುವನು' ಎಂದು ಹೇಳಿ ಹೊರಟು ಹೋದರು.

ಕೃತದ್ಯುತಿಯು ಒಂದು ಗಂಡುಮಗುವನ್ನು ಹೆತ್ತಳು. ಅದು ದಿನೇದಿನೇ ಅಭಿವೃದ್ಧಿಯಾಗುತ್ತ ಬಂದಿತು. ರಾಜ ಮತ್ತು ರಾಣಿ ಆ ಮಗುವಿನಲ್ಲಿ ತಮ್ಮ ಪ್ರಾಣವನ್ನೇ ಇಟ್ಟು ಸದಾ ಅದರ ಲಾಲನೆಯಲ್ಲಿಯೇ ಕಾಲಕಳೆಯುತ್ತಾ ಬಂದರು. ರಾಜನು ಉಳಿದ ಪತ್ನಿಯರನ್ನು ಉದಾಸೀನ ಮಾಡಿದನು. ಅವರೆಲ್ಲರೂ ಇದನ್ನು ಕಂಡು ದುಃಖಿಸಿ ಆ ಮಗುವಿಗೆ ವಿಷವನ್ನು ಹಾಕಿಬಿಟ್ಟರು. ಮಗುವು ಸತ್ತುಹೋಯಿತು. ಇದನ್ನು ನೋಡಿದ ತಾಯಿ ಕೃತದ್ಯುತಿಯು ಬಹುವಾಗಿ ಪ್ರಲಾಪಿಸಿದಳು. ರಾಜನಿಗೆ

ದಿಕ್ಕೇ ತೋಚದಂತಾಯಿತು. ವ್ಯಸನಸಮುದ್ರದಲ್ಲಿ ಮುಳುಗಿದನು. ಆ ವೇಳೆಗೆ ಸರಿಯಾಗಿ ಅಂಗಿರಾಋಷಿಗಳೂ, ನಾರದರೂ ರಾಜನ ಬಳಿಗೆ ಬಂದರು.

## ಹದಿನಾಲ್ಕನೆಯ ಅಧ್ಯಾಯ ಮುಗಿದುದು

**ನಾರದ ಮತ್ತು ಅಂಗಿರಾಋಷಿ** :- ರಾಜೇಂದ್ರ ! ಇವನಿಗೂ ನಿನಗೂ ಯಾವ ಸಂಬಂಧವೂ ಇಲ್ಲ. ನನ್ನ ಮಗನೆಂಬುದು ಭ್ರಾಂತಿ. ಆದ್ದರಿಂದ ಈ ಮಗುವಿಗಾಗಿ ಶೋಕಿಸುವುದು ಉಚಿತವಲ್ಲ. ಪ್ರವಾಹದಿಂದ ಮರಳುಗಳು ಒಂದು ಕಡೆ ಸೇರಿ ತಿರುಗಿ ಬೇರೆ ಬೇರೆಯಾಗುವಂತೆ ಹರಿಯಿಂದ ಕರ್ಮಪ್ರವಾಹದಲ್ಲಿ ಬಿದ್ದ ಜೀವರು ಒಂದು ಕಡೆ ಸೇರಿ ಹರಿಯಿಂದಲೇ ಅಗಲಿ ಹೋಗುವರು. ಹಾಕಿದ ಬೀಜಗಳೆಲ್ಲವೂ ಹುಟ್ಟದಿರುವಂತೆ ಈ ಮಗುವಿನಂತೆ ದೊಡ್ಡವರಾಗಿ ಬೆಳೆಯದೆ ಮಗುವಾಗಿರುವಾಗಲೇ ಸಾಯುವರು. ನಾವು, ನೀನು, ಈ ಸಕಲರೂ, ಹುಟ್ಟತಕ್ಕ ಸರ್ವರೂ ಖಂಡಿತವಾಗಿ ಸಾಯತಕ್ಕವರೇ ಸರಿ. ಹೀಗಿರುವುದರಿಂದ ನನ್ನವರು ಎಂಬ ಅಭಿಮಾನವನ್ನು ಬಿಟ್ಟು, ಸೃಷ್ಟ್ಯಾದಿ ಕರ್ತನಾದ ಶ್ರೀಹರಿಯನ್ನು ಭಜಿಸು. ದೇಹಕ್ಕೆ ಜನನ ಮರಣಗಳೇ ಹೊರತು ಜೀವಕ್ಕಿಲ್ಲ. ಅವನನ್ನು ದೇಹದಲ್ಲಿ ತರುವ ಹರಿಯು ಸ್ವತಂತ್ರನೂ, ಅನಾದಿ ನಿತ್ಯನೂ ಆಗಿರುವನು. ಜೀವನು ತನ್ನ ದೇಹವನ್ನು ತಾನೇ ಎಂದು ತಿಳಿಯುವುದರಿಂದಲೇ, ದೇಹದ ಸಂಬಂಧದಿಂದ ಆದ ಬಂಧುಗಳಯೋಗ ವಿಯೋಗಳಿಗೆ ಹಿಗ್ಗಿ ಕುಗ್ಗುವನು. ಈ ಅಭಿಮಾನವನ್ನು ಬಿಟ್ಟವನು ಸಂಸಾರದಿಂದ ಮುಕ್ತನಾಗುವನು. ವಾಸುದೇವನನ್ನೇ ಸ್ಮರಿಸುವುದರಿಂದ ಅವನ ಪ್ರಸಾದವುಂಟಾಗಿ ಅದರಿಂದ ಜ್ಞಾನವು ದೊರೆಯುವುದು. ಹೀಗೆ ಜ್ಞಾನವನ್ನು ಸಂಪಾದಿಸಿ ಅಹಂಕಾರ ಮಮಕಾರಗಳನ್ನು ನಿರ್ಮೂಲ ಮಾಡು.

**ಚಿತ್ರಕೇತು** :- ಪೂಜ್ಯರಾದ ತಾವು ಯಾರು ? ವಿಷಯಾಸಕ್ತನಾಗಿ ತೊಳಲುತ್ತಿರುವ ನನಗೆ ತತ್ತ್ವೋಪದೇಶ ಮಾಡಿ ಉದ್ಧರಿಸಬೇಕು.

**ಅಂಗಿರಸ್ಸು** :- ನೀನು ಬಯಸಿದಂತೆ ಪುತ್ರನನ್ನು ಕರುಣಿಸಿದ ಅಂಗಿರಸ್ಸೇ ನಾನು. ಇವರು ನಾರದರು. ಆಗ ನಿನಗೆ ಜ್ಞಾನವನ್ನುಂಟು ಮಾಡಬೇಕೆಂದೇ ಬಂದಿದ್ದೆನು. ನಿನಗೆ ವೈರಾಗ್ಯವಿಲ್ಲದಿದ್ದುದನ್ನು ಕಂಡು ಸುಮ್ಮನಾದೆನು. ಈಗ ನಿನಗೆ ವಿಷಯಗಳು ಅಸಾರವೆಂದು ಅನುಭವಕ್ಕೆ ಬಂದಿರುವುದು. ಆದ್ದರಿಂದ ಈಗಿನ ನನ್ನ ಮಾತನ್ನು ಕೇಳು ರಾಜೇಂದ್ರನೇ ! ಈ ಪತ್ನಿ, ಪುತ್ರ, ಮನೆ ಮಠ ಎಲ್ಲವೂ ನಶ್ವರಗಳು. ಈ ದೇಹವು ಪ್ರಕೃತಿಯ ವಿಕಾರವು. ಜೀವನು ಚಿತ್ಸ್ವರೂಪನು. ಅಂದಮೇಲೆ ಜೀವನು ಜಡವಾದ ದೇಹ ಹೇಗಾದಾನು ? ಆದ್ದರಿಂದ ಇದರ ಲಕ್ಷಣ

ವನ್ನು ಅರಿತು ಅಭಿಮಾನವನ್ನು ಬಿಡು. ಹಿಂದೆ ಭೋಜನೆಂಬ ರಾಜನು ಸ್ವಪ್ನದಲ್ಲಿ ತನ್ನ ತಲೆಯನ್ನು ಕತ್ತರಿಸಿ, ಸಂಪತ್ತೆಲ್ಲವನ್ನೂ ಶತ್ರುಗಳು ಅಪಹರಿಸಿದಂತೆ ನೋಡಿ ಎಚ್ಚೆತ್ತನು. ಕೂಡಲೇ ಇವೆಲ್ಲ ಅಸ್ಥಿರಗಳೆಂಬ ವೈರಾಗ್ಯವು ಅಂಕುರಿಸಿತು. ಮನೆಯನ್ನು ಬಿಟ್ಟು ವನಕ್ಕೆ ಹೋಗಿ ಹರಿಯನ್ನು ಧ್ಯಾನಿಸಿ ದೇಹಾದ್ಯಭಿಮಾನವನ್ನು ಬಿಟ್ಟುಬಿಟ್ಟನು.

**ನಾರದ :–** ನೀನೂ ಅಂತಹ ವೈರಾಗ್ಯವನ್ನು ಹೊಂದುವುದಕ್ಕೆ ಅನುಕೂಲವಾದ ಮಂತ್ರವೊಂದನ್ನು ಉಪದೇಶಿಸುವೆನು. ಏಳು ದಿನಗಳು ಅದನ್ನು ಜಪಿಸಿದರೆ ಶ್ರೀ ಸಂಕರ್ಷಣ ದೇವರ ದರ್ಶನವಾಗುವುದು. ರುದ್ರಾದಿ ದೇವತೆಗಳು ಆ ದೇವರನ್ನು ಭಜಿಸಿದ್ದರಿಂದಲೇ ಇಹದಲ್ಲಿ ಸುಖವಾಗಿದ್ದು ಪರದಲ್ಲಿ ಉತ್ಕೃಷ್ಟವಾದ ಪದವಿಯನ್ನು ಪಡೆದರು. ನೀನೂ ಹಾಗೆಯೇ ಇಲ್ಲಿ ಸುಖವಾಗಿದ್ದು ನಿನ್ನ ಯೋಗ್ಯತಾನುಸಾರವಾದ ಪದವಿಯನ್ನು ಹೊಂದುವೆ.

**ಹದಿನೈದನೆಯ ಅಧ್ಯಾಯ ಮುಗಿದುದು**

ನಾರದರು ಸತ್ತು ಹೋಗಿದ್ದ ರಾಜಕುಮಾರನನ್ನು ತಮ್ಮ ಯೋಗಶಕ್ತಿಯಿಂದ ಬದುಕಿಸಿ, 'ಜೀವಾತ್ಮನೇ ! ನಿನ್ನ ಬಂಧುಗಳನ್ನು ನೋಡು. ಈ ಶರೀರದಲ್ಲಿಯೇ ಇದ್ದು ರಾಜ್ಯವನ್ನು ಆಳು' ಎಂದರು.

**ಜೀವಾತ್ಮಾ :–** ನನಗೆ ಎಷ್ಟೋ ಜನರು ತಂದೆ, ತಾಯಿ, ಬಂಧುಗಳಾಗಿ ಹೋದರು. ಯಾರನ್ನು ಸಮಾಧಾನ ಮಾಡುವುದಕ್ಕೆ ಸಾಧ್ಯ ? ಒಂದು ಜನ್ಮದಲ್ಲಿ ತಂದೆಯಾದವನು ಮತ್ತೊಂದರಲ್ಲಿ ಶತ್ರುವಾಗುವನು. ಹೀಗೆ ನಾನಾ ರೀತಿಯ ಸಂಬಂಧವುಂಟಾಗುವುದರಿಂದ ಯಾರನ್ನೂ ಸಮಾಧಾನ ಮಾಡಲು ಸಾಧ್ಯವಾಗುವುದೇ ಇಲ್ಲ. ಋಣಾನುಬಂಧದಿಂದ ಮಗ, ತಂದೆ, ಅಣ್ಣ, ತಮ್ಮ ಚಿಕ್ಕಪ್ಪ, ಸೋದರ ಮಾವ ಮುಂತಾಗಿ ಕರೆಯಲ್ಪಡುವರು. ಆದ್ದರಿಂದ ಈ ಸಂಬಂಧವು ಅನಿತ್ಯವಾದುದು. ಪರಮಾತ್ಮನು ಪರಮನಿತ್ಯನು. ಅವನಿಗೂ ನಿತ್ಯನಾದ ಜೀವನಿಗೂ ನಿತ್ಯ ಸಂಬಂಧವಿರುವುದು. ಸಮನೂ, ನಿರ್ಗುಣನೂ, ಸೃಷ್ಟ್ಯಾದಿಕರ್ತನೂ, ಶುಭ ಭೋಕ್ತೃವೂ, ಸರ್ವತ್ರವ್ಯಾಪ್ತನೂ, ಸರ್ವಜ್ಞನೂ ಆದ ಭಗವಂತನು ಜೀವರನ್ನು ನಿತ್ಯವೂ ಪೋಷಿಸುತ್ತ, ಗೆಳೆಯನಂತೆ ಉಪಕಾರವನ್ನು ಮಾಡುತ್ತಿರುವುದರಿಂದ ಅನಿಮಿತ್ತ ಬಂಧುವಾದ ಅವನನ್ನು ಭಜಿಸಬೇಕು. ಉಳಿದಸಂತೆಯ ಜನರನ್ನು ಕಟ್ಟಿಕೊಂಡೇನು ಫಲ ? ಅದಕಾರಣ ನನಗಾಗಿ ಇವರು ಶೋಕಿಸುವುದಲ್ಲ.

ಈ ತತ್ತ್ವವನ್ನೇ ದೃಷ್ಟಾಂತ ಸಹಿತವಾಗಿ ಶ್ರೀಪುರಂದರದಾಸರು ಹೇಳುತ್ತಾರೆ.

**ಉಗಾಭೋಗ**

ಹೇಗೆ ಬರೆದಿತೊ ಪ್ರಾಚೀನದಲ್ಲಿ
ಹಾಗೆ ಇರಲಿಬೇಕು ಸಂಸಾರದಲ್ಲಿ

ಹಕ್ಕಿ ಕುಳಿತಿತು ಅಂಗಳದಲ್ಲಿ । ಹಾರಿಹೋಯಿತು ಆಕ್ಷಣದಲ್ಲಿ ೧
ಸಂತೆ ನೆರೆದಿತು ನಾನಾಪರಿ । ತಿರುಗಿ ಪೋಯಿತು ತಮ್ಮತಮ್ಮ ದಾರಿ ೨
ಆಡುವ ಮಕ್ಕಳು ಮನೆ ಕಟ್ಟಿದರು । ಆಟಸಾಕೆಂದು ಮುರಿದಟ್ಟಿದರು ೩
ವಸ್ತಿಕಾರನು (ಹಂಗಾಮಿಯಾಗಿ ಬಂದವನು) ಊರಿಗೆ ಬಂದ ।
ಹೊತ್ತಾರೆ ಎದ್ದು ಊರಿಗೆ ಹೋದ ೪
ಸಂಸಾರದ ಮಾಯವ (ಮೋಹವ) ಬಿಡಿಸಯ್ಯ ೫
ಕಂಸಾರಿ ಪುರಂದರ ವಿಟ ಲರೇಯ.

(ಹೀಗೆ ಹೇಳಿ ಆಜೀವನು ದೇಹಬಿಟ್ಟು ಹೊರಟು ಹೋದನು. ಎಲ್ಲರಿಗೂ ಜ್ಞಾನೋದಯವಾಯಿತು. ವಿಷವನ್ನು ಹಾಕಿದ್ದ ರಾಜನ ಪತ್ನಿಯರು ನಾರದರು ಮತ್ತು ಅಂಗಿರಾಋಷಿಗಳು ಹೇಳಿದ ಪ್ರಾಯಶ್ಚಿತ್ತವನ್ನು ಮಾಡಿಕೊಂಡರು. ಚಿತ್ರಕೇತುವು ನಾರದರಿಗೆ ಶರಣು ಹೋಗಿ ತನ್ನನ್ನು ಉದ್ಧರಿಸಬೇಕೆಂದು ಬೇಡಿದನು. ನಾರದರು ಮಂತ್ರೋಪನಿಷತ್ತೆಂಬ ಮಂತ್ರವನ್ನು ಉಪದೇಶಿಸಿದರು. ಚಿತ್ರಕೇತುವು ಅದನ್ನು ಎಡಬಿಡದೆ ಏಳು ದಿನಗಳು ಜಪಮಾಡಿದನು. ಅದರಿಂದ ವಿಧ್ಯಾಧರಾಧಿಪತ್ಯವು ಅವನಿಗೆ ದೊರೆಯಿತು. ಮತ್ತು ಆ ಮಂತ್ರಜಪಮಾಡಿದ್ದರಿಂದ ಶೇಷಾಂತರ್ಯಾಮಿ ಸಂಕರ್ಷಣನು ಅವನ ಭಕ್ತಿಗೆ ಮೆಚ್ಚಿ 'ನೀನು ಜೀವನ್ಮುಕ್ತನಾದೆ' ಎಂದು ಹರಸಿ, ಅಧಿಕವಾದ ಜ್ಞಾನವುಂಟಾಗಲಿ ಎಂದು ತಾನೇ ತನ್ನ ಮಹಿಮೆಯನ್ನು ಹೀಗೆ ಉಪದೇಶಿಸಿದನು.

**ಸಂಕರ್ಷಣ** :– ನಾನು ಸರ್ವತ್ರ ವ್ಯಾಪ್ತನು. ಸಕಲಕ್ಕೂ ಕರ್ತನು. ಸರ್ವಕ್ಕೂ ಆಧಾರನು. ಜಾಗ್ರದಾದಿ ಮೂರು ಅವಸ್ಥೆಯಿಲ್ಲದವನಾಗಿ ಅವುಗಳಿಗೂ ನಾನೇ ಪ್ರೇರಕನಾಗಿರುವೆನು. ನನ್ನನ್ನು ಹೀಗೆಯೇ ತಿಳಿಯಬೇಕು. ಇಲ್ಲವಾದರೆ ನಿತ್ಯ ನರಕದಲ್ಲಿ ನರಳಬೇಕಾಗುವುದು. ಅಂತಹವನಿಗೆ ಎಂದಿಗೂ ಮುಕ್ತಿಯ ಮಾತೇ ಇಲ್ಲ. ಪ್ರವೃತ್ತಿ ಧರ್ಮವು ದುಃಖಪ್ರದವು. ನಿವೃತ್ತಿ ಮಾರ್ಗವೇ ಪ್ರಶಸ್ತ, ಶ್ರೇಯಸ್ಕರ. ನಾನು ಸಮರಹಿತನೂ, ಅಧಿಕರಹಿತನೂ ಆಗಿರುವೆನೆಂಬ ಜ್ಞಾನವೇ ಪರಮ ಪುರುಷಾರ್ಥ. (ಹೀಗೆ ಹೇಳಿ ಅಂತರ್ಧಾನನಾದನು)

**ಹದಿನಾರನೆಯ ಅಧ್ಯಾಯ ಮುಗಿದುದು**

ಚಿತ್ರಕೇತುವು ಭಗವಂತನು ಕೊಟ್ಟ ವಿಮಾನದಲ್ಲಿ ಕುಳಿತು ಸಂಚರಿಸುತ್ತ, ಕುಲ ಪರ್ವತಗಳ ತಪ್ಪಲುಗಳಲ್ಲಿ ವಿಹರಿಸುತ್ತ ಆನಂದಿಸುತ್ತಿದ್ದನು. ಅವನು ಒಂದು ದಿನ ಕೈಲಾಸದ ಶಿವನ ಸಭೆಗೆ ಹೋದನು. ಅಲ್ಲಿ ಶಿವನು ತನ್ನ ತೊಡೆಯ ಮೇಲೆ ಗೌರಿಯನ್ನು ಕೂಡಿಸಿಕೊಂಡು ಆಲಿಂಗಿಸುತ್ತಿದ್ದುದನ್ನು ಅವನು ನೋಡಿ

**ಚಿತ್ರಕೇತು** ;– ಆಹಾ ! ದೊಡ್ಡವನೆನಿಸಿಕೊಂಡ ಈ ಶಿವನು ನಾಚಿಕೆಯಿಲ್ಲದೆ ಈ ಸಭೆಯಲ್ಲಿ ಸತಿಯೊಡನೆ ಚಕ್ಕಂದವಾಡುತ್ತಿರುವನು.

**ಶಿವೆ** :– (ಕೋಪಗೊಂಡು) ನಮ್ಮನ್ನು ನೋಡಿ ಶಿಕ್ಷಿಸುವುದಕ್ಕೆ ನೀನು ಯಮನೇನು ? ನಮ್ಮಂತಹ ನಿರ್ಲಜ್ಜರಾದ ದುಷ್ಟರಿಗೆ ನಿಷೇಧಕನಾಗಿದ್ದಾನೆ ಪಾಪ ! ಬ್ರಹ್ಮದೇವರಿಗೆ ಧರ್ಮವು ತಿಳಿಯದಲ್ಲವೆ ? ಅವರ ಮಕ್ಕಳಾದ ಭೃಗು, ನಾರದಾದಿಗಳಿಗೂ ಧರ್ಮವು ತಿಳಿಯದಲ್ಲವೆ ? ಶಿವನು ಅಸಂಪ್ರಜ್ಞಾತ ಸಮಾಧಿಯಲ್ಲಿದ್ದು ಶಾಸ್ತ್ರವನ್ನು ಮೀರಿರುವ ಜ್ಞಾನಿ. ಅಂದರೆ ಮಹಾ ನಿಯಮವುಳ್ಳವನು. ಆದುದರಿಂದಲೇ ಅವನನ್ನು ಸನತ್ಕುಮಾರ, ಕಪಿಲ ಮತ್ತು ಮನುಗಳು ಯಾರೂ ನಿವಾರಿಸಲಿಲ್ಲ. ಅವರಾರೂ ಧರ್ಮವನ್ನು ಅರಿಯರೇನು ? ಬ್ರಹ್ಮಾದಿಗಳ ಅಭಿಪ್ರಾಯದಂತೆ ಈ ರುದ್ರದೇವರು ಇಂದ್ರಾದಿ ದೇವತೆಗಳಿಂದ ಯಾವಾಗಲೂ ಧ್ಯಾನಿಸಲ್ಪಡುವ ಪಾವನಮೂರ್ತಿ. ಇಂದ್ರಾದಿ ಜಗತ್ತಿಗೇ ಗುರುಗಳು. ಸ್ವರೂಪದಿಂದ ಅತ್ಯಂತ ಮಂಗಳರು.

**ವಿಶೇಷ** ;– ಮಹಾ ನಿಯಮವ್ರತವುಳ್ಳವರ ಲಕ್ಷಣವನ್ನು ಶ್ರೀ ಪುರಂದರ ದಾಸರು ಹೇಳುತ್ತಾರೆ :–

ಕಾಂಬೋದಿರಾಗ ಝಂಪೆತಾಳ

ವಿಧಿ ನಿಷೇಧ ನಿನ್ನವರಿಗೆಂತೊ ಹರಿಯೆ ||ಪ||

ವಿಧಿ ನಿನ್ನ ಸ್ಮರಣೆ ನಿಷೇಧ ವಿಸ್ಮೃತಿಯೆಂಬ
ವಿಧಿಯನೊಂದನೆ ಬಲ್ಲರಲ್ಲದೆ ಮತ್ತೊಂದು ||ಅ.ಪ||

ಆಧಾರ :– ಬ್ರಹ್ಮಸೂತ್ರ 3–4–14. "ಓಂ ಸ್ತುತಯೇಽನುಮತಿರ್ವಾಓಂ"
ಅರ್ಥ : 'ಸುಬ್ರಾಹ್ಮಣಃ ಕೇನ ಸ್ಯಾತ್' ಎಂಬ ಶ್ರುತಿಯಲ್ಲಿ ಬ್ರಹ್ಮಜ್ಞಾನಿಯಾದವನಿಗೆ ಯಥೇಷ್ಟಾಚಾರವಿದೆ. ಅದು ವಿಧಿಯಲ್ಲ. ಜ್ಞಾನಿಯು ತನ್ನಿಚ್ಛಾನುಸಾರವಾಗಿ ಕರ್ಮವನ್ನು ಮಾಡಿದರೂ ಮುಕ್ತನೇ ಆಗುತ್ತಾನೆ–ಎಂದು ಜ್ಞಾನಿಯ

ಸಾಮರ್ಥ್ಯದ ಮಹಿಮೆಯನ್ನು ಪ್ರಕಟಿಸಲು ಈ ಸೂತ್ರವು ಹೊರಟಿದೆ. ಅಥವಾ ಜ್ಞಾನಿಯು ಮಾಡಿದ ಸರ್ವಕರ್ಮಗಳಿಗೂ ಅಭ್ಯನುಜ್ಞೆಯು ಮಾತ್ರ.

ಸೂತ್ರದ ಭಾವ್ಯಾರ್ಥ :– (1) ಭೃತ್ಯನನ್ನು ಕರೆದು ಅವನ ಶಕ್ತಿಯನ್ನು ಪ್ರಕಟಿಸುವುದಕ್ಕಾಗಿ "ಯಥೇಷ್ಟವಾಗಿ ಮಾಡು" ಎಂದು ಹೇಳುವುದುಂಟು. ಅದು ವಿಧಿಯಲ್ಲ. ಆದರಂತೆ ಬ್ರಹ್ಮಜ್ಞಾನಿಯು ಸತ್ಕರ್ಮವನ್ನು ಮಾಡುತ್ತಿದ್ದರೂ, ಅಸತ್ಕರ್ಮವನ್ನು ಮಾಡುತ್ತಿದ್ದರೂ ಮೋಕ್ಷವುಳ್ಳವನೇ ಆಗುತ್ತಾನೆ–ಎಂದು ಜ್ಞಾನಿಗಳ ವರ್ಣನೆ ಮಾಡಿರುವರು, ಅಥವಾ ಜ್ಞಾನಿಯು ಅನುಷ್ಠೇಯಗಳಾದ ಸತ್ಕರ್ಮಗಳಲ್ಲಿ ಕೆಲವನ್ನು ಮಾಡುತ್ತಾ, ಕೆಲವನ್ನು ಮಾಡದೇಇದ್ದರೂ ಅವನು ಯಾವಾಗಲೂ ಮಹಾಫಲವುಳ್ಳವನೇ ಆಗುವನು.

ಹೀಗೆ ಮಾನವರಲ್ಲಿ ಜ್ಞಾನಿಗೆ ಈ ವಿನಾಯತಿ ಇದ್ದಮೇಲೆ, ದೇವತೆಗಳ ಧರ್ಮವೇ ಬೇರೆಯಾಗಿದ್ದು, ದೇವಶ್ರೇಷ್ಠರಾದ ರುದ್ರದೇವರಿಗೆ ಸ್ತ್ರೀ ವಿಲಾಸದ ದೋಷವಿಲ್ಲವೆಂದು ಅಭಿಪ್ರಾಯ.

ಪದ :– ಮಿಂದದ್ದೆ ಗಂಗಾದಿ ಪುಣ್ಯತೀರ್ಥಂಗಳು
ಬಂದದ್ದೆ ಪುಣ್ಯಕಾಲ ಸಾಧುಜನರು
ನಿಂದದ್ದೆ ಗಯೆ ವಾರಣಾಸಿ ಕುರುಕ್ಷೇತ್ರ
ಸಂದೇಹವೇಕೆ ಮದದಾನೆ ಪೋದುದೆ ಬೀದಿ ॥೧॥

ಕಂಡಕಂಡಲ್ಲಿ ವಿಶ್ವಾದಿ ಮೂರುತಿಯು, ಭೂ
ಮಂಡಲದಿ ಶಯನವೆ ನಮಸ್ಕಾರವು
ತಂಡತಂಡದ ಕ್ರಿಯೆಗಳೆಲ್ಲ ನಿನ್ನಯ ಪೂಜೆ
ಮಂಡೆಬಾಗಿಸಿ ನಮಿಪ ಭಾಗವತ ಜನಕೆ ॥೨॥

ನಡೆದ ನಡುಗೆಯು ಎಲ್ಲ ಲಕ್ಷಪ್ರದಕ್ಷಿಣೆ
ನುಡಿವ ನುಡಿಗಳು ಎಲ್ಲ ಗಾಯತ್ರಿಮಂತ್ರ
ಕೊಡುವುದೆಲ್ಲವು ಅಗ್ನಿಮುಖದಲ್ಲಿ ಆಹುತಿ
ದೃಢಭಕ್ತರೇನ ಮಾಡಿದರದೇ ಮರ್ಯಾದೆ ॥೩॥

ನಷ್ಟವಾದುದೆಲ್ಲ ಸಂಚಿತದ ಕರ್ಮವು
ಮುಟ್ಟಲಂಜುವುದೆಲ್ಲ ಆಗಾಮಿ ಕರ್ಮ
ಸ್ಪಷ್ಟವಾಗಿರುವ ಪ್ರಾರಬ್ಧ ಕರ್ಮವ ಮೀರಿ
ಸೆಟ್ಟಿ ಮೆಟ್ಟಿದ್ದೆ ಪಟ್ಟಣವೆಂಬುದೇ ನಿಜವು ॥೪॥

ಎಲ್ಲಿ ಕುಳ್ಳಿರಲಲ್ಲಿ ಪ್ರಾಯೋಪವೇಶ, ಮ
ತ್ತೆಲ್ಲಿ ನೋಡಲು ಮನವು ಅಲ್ಲಿಯೆ ಸಮಾಧಿ
ಎಲ್ಲೆಲ್ಲಿಯೂ ಪುರಂದರ ವಿಠಲರಾಯನ
ಬಲ್ಲವರಿಗೆಲ್ಲಿಹುದು ಪಾಪಪುಣ್ಯದ ಲೇಪ ॥3॥

**ಪಾರ್ವತಿ :–** ಇಂತಹ ರುದ್ರದೇವರನ್ನು ಈ ಕ್ಷತ್ರಿಯಾಧಮನು ಶಾಸನ ಮಾಡುತ್ತಿದ್ದಾನೆ. ಬ್ರಹ್ಮಾದಿಗಳೂ ಧರ್ಮಜ್ಞಾನಿಗಳಲ್ಲವೆಂದು ತಿರಸ್ಕಾರ ಭಾವನೆಯನ್ನು ತೋರಿಸಿದ್ದಾನೆ. ಆದ್ದರಿಂದ ಈ ಧಾರ್ಷ್ಟ್ಯವಂತನಾದ ಇವನು ದಂಡನೆಗೆ ಅರ್ಹನು. ತಾನೇ ಅಧಿಕ ಜ್ಞಾನಿಯೆಂದು ತಿಳಿದು, ಅತ್ಯಂತ ಗರ್ವಿಯಾದ ಇವನು ಶ್ರೀಹರಿಯ ಪಾದಮೂಲವನ್ನು ಸೇವಿಸಲು ಅರ್ಹನಲ್ಲ. "ದುರ್ಬುದ್ಧಿಯೆ ! ನೀನು ಅತ್ಯಂತ ಪಾಪದಿಂದ ಸಹಿತವಾದ ಅಸುರಯೋನಿಯಲ್ಲಿ ಹುಟ್ಟು. ಹೀಗಾದರೆ ಇನ್ನು ಮುಂದೆ ನಮ್ಮ ಮತ್ತು ಇತರ ದೊಡ್ಡವರಲ್ಲಿ ಅಪರಾಧವನ್ನು ಮಾಡದೆ ಇರುವೆ."

**ಚಿತ್ರಕೇತು :** (ಪಾರ್ವತಿಗೆ ನಮಸ್ಕರಿಸಿ) ಸಕಲವೂ ಶ್ರೀಹರಿಯ ಅಧೀನವು. ಜೀವರ ಕರ್ಮಾನುಸಾರ ಫಲವನ್ನು ಕೊಡುವವನು ಶ್ರೀಹರಿಯು. ಅದನ್ನು ತಪ್ಪಿಸಿಕೊಳ್ಳಲು ಯಾರಿಗೂ ಶಕ್ಯವಿಲ್ಲ. ನಿನ್ನ ಶಾಪವನ್ನು ತಲೆಯ ಮೇಲೆ ಹೊತ್ತೆನಮ್ಮಾ ! ಆದರೆ ಕೋಪಮಾತ್ರ ಮಾಡಬೇಡ. ಕ್ಷಮಿಸು. ನೀನು ಕುಪಿತಳಾದರೆ ನನ್ನ ಜ್ಞಾನವು ನಾಶವಾಗುವುದು. ಆದಕಾರಣ ವಿಶಾಪವನ್ನು ಬೇಡುವುದಿಲ್ಲ. ಕೋಪಿಸಬೇಡವೆಂದು ಪುನಃ ಪುನಃ ಬೇಡುವೆನು. (ಹೀಗೆ ಪ್ರಾರ್ಥಿಸಿ ಆ ದಂಪತಿಗಳನ್ನು ಪ್ರಸನ್ನೀಕರಿಸಿಕೊಂಡು ಅಲ್ಲಿಂದ ಹೊರಟು ಹೋದನು.)

**ಶಂಕರ :** ದೇವಿಯೇ ! ಹರಿಭಕ್ತರ ಮಹಿಮೆಯನ್ನು ನೋಡಿದೆಯಾ ? ಅವರು ಬರುತ್ತಿರುವ ಸುಖದುಃಖಗಳನ್ನು ಸಂತೋಷದಿಂದ ಅನುಭವಿಸುವರು. ಅವರು ಹರಿಯನ್ನು ಮಾತ್ರವೇ ಬಯಸುವವರು. ಅಷ್ಟೇ ಹೊರತು ಅವನಿಂದ ಸ್ವರ್ಗಾದಿಗಳನ್ನಾಗಲಿ, ಕೊನೆಗೆ ಮೋಕ್ಷವನ್ನಾಗಲೀ ಬೇಡುವವರಲ್ಲ. ಯಾವುದಕ್ಕೂ ಭಯಪಡುವವರೂ ಅಲ್ಲ. ಶಾಂತರೂ, ಸಮದರ್ಶಿಗಳೂ ಆದ ಅವರು ಬಂದ ದುಃಖವನ್ನು ಸಂತೋಷದಿಂದ ಸ್ವೀಕರಿಸುವರು. ಇದಾವುದೂ ಆಶ್ಚರ್ಯವಲ್ಲ.

(ಇದನ್ನು ಗೌರೀದೇವಿಯು ಕೇಳಿ ಸಮಾಧಾನ ಚಿತ್ತಳಾದಳು)

**ಶುಕ ;** ಈ ಚಿತ್ರಕೇತುವೇ ತ್ವಾಷ್ಟ್ರವು ಹೋಮಮಾಡಿದಾಗ ದಕ್ಷಿಣಾಗ್ನಿಯಲ್ಲಿ ವೃತ್ರಾಸುರನಾಗಿ ಹುಟ್ಟಿದ್ದನಾದ್ದರಿಂದ ಶಾಸ್ತ್ರಜ್ಞಾನವೂ, ಬ್ರಹ್ಮಜ್ಞಾನವೂ ಅವನಲ್ಲಿದ್ದಿತು.

ಈ ಕಥೆಯನ್ನು ಭಕ್ತಿಯಿಂದ ಹೇಳುವ, ಕೇಳುವ ಜನರು ಸಂಸಾರಬಂಧನದಿಂದ ಮುಕ್ತರಾಗಿ, ವೈಕುಂಠವನ್ನು ಪಡೆಯುವರು.

## ಹದಿನೇಳನೆಯ ಅಧ್ಯಾಯ ಮುಗಿದುದು

ಕಶ್ಯಪರಿಂದ ಅದಿತಿಯಲ್ಲಿ ಹುಟ್ಟಿದ ಹನ್ನೆರಡು ಮಂದಿ ಆದಿತ್ಯರಲ್ಲಿ ಸವಿತೃ ಮುಂತಾದ ಎಂಟು ಜನರ ವಂಶವನ್ನು ಹೇಳಿದರು. ಕಶ್ಯಪರಿಂದ ದಿತಿಯಲ್ಲಿ ಹುಟ್ಟಿದವರಾರೆಂಬುದನ್ನೂ, ಅವರ ವಂಶಾವಳಿಯನ್ನೂ ತಿಳಿಸುತ್ತ, ಆ ದಿತಿಯಲ್ಲಿ ಆಮೇಲೆ ಹುಟ್ಟಿದ 49 ಮಂದಿ ಮಕ್ಕಳು ಮರುನ್ನಾಮಕ ದೇವತೆಗಳಾದುದನ್ನು ಈಗ ಹೇಳುವರು :–

ಇಂದ್ರನಿಂದ ತನ್ನ ಮಕ್ಕಳು ನಾಶಹೊಂದಿದುದನ್ನು ನೋಡಿದ ದಿತಿಯು ಇಂದ್ರನನ್ನು ಕೊಲ್ಲುವ ಮಗನನ್ನು ಪಡೆಯಬೇಕೆಂದು ಬಯಸಿ, ತನ್ನ ಪತಿಯಾದ ಕಶ್ಯಪರನ್ನು ಭಕ್ತಿಯಿಂದ ಸೇವಿಸಿ ಸಂತೋಷಪಡಿಸಿದಳು. ಆಗ ಕಶ್ಯಪರು ವರವನ್ನು ಕೇಳೆಂದರು. ದಿತಿಯು ತನ್ನ ಮನದ ಬಯಕೆಯಂತೆ ಇಂದ್ರನನ್ನು ಕೊಲ್ಲಬಲ್ಲ-ಪುತ್ರನಾಗುವಂತೆ ವರವನ್ನು ಕೇಳಿದಳು. ಕಶ್ಯಪರು ಗಾಬರಿಯಾದರು. ತಾವು ಸ್ತ್ರೀಯಳಿಗೆ ಮರುಳಾದುದೇ ಇದಕ್ಕೆ ಕಾರಣವೆಂದು ತಮ್ಮನ್ನು ಹಳಿದುಕೊಂಡರು. ಕೊನೆಗೆ ಇಂದ್ರನೂ ಸಾಯಬಾರದು. ಕೊಟ್ಟ ವರವೂ ವ್ಯರ್ಥವಾಗಬಾರದು ಅದಕ್ಕೆ ತಕ್ಕ ಉಪಾಯವನ್ನು ಯೋಚಿಸಿ ಹೇಳುತ್ತಾರೆ :–

**ಕಶ್ಯಪ** :– ದೇವಿ ! ನೀನು ಒಂದು ವರುಷ ಯಾವ ಪ್ರಾಣಿಯನ್ನೂ ಹಿಂಸಿಸಬಾರದು. ಕಾಲು ತೊಳೆದು ಒರೆಸಿಕೊಳ್ಳದೆ ಮಲಗಬಾರದು. ಸಂಧ್ಯಾಕಾಲದಲ್ಲಿ ನಿದ್ರಿಸಬಾರದು. ಯಾವಾಗಲೂ ಶುಚಿಯಾಗಿದ್ದು, ಪ್ರತಿದಿನ ಲಕ್ಷ್ಮೀನಾರಾಯಣರನ್ನು ಪೂಜಿಸಿ, ಸುಮಂಗಲಿಯರನ್ನು ಹರಿದ್ರಾಕುಂಕುಮಾದಿಗಳಿಂದ ಅರ್ಚಿಸಿ, ಪತ್ಯಂತರ್ಗತ ಮಾಧವನನ್ನು ಧ್ಯಾನಿಸಬೇಕು. ಈ ಪುಂಸವನವ್ರತವನ್ನು ದೋಷರಹಿತವಾಗಿ ಒಂದು ವರುಷ ಆಚರಿಸಿದರೆ ನೀನು ಅಪೇಕ್ಷಿಸುವಂತಹ ಪುತ್ರನನ್ನು ಪಡೆಯುವೆ.

(ದಿತಿಯು ಒಪ್ಪಿದಳು. ಕಶ್ಯಪರ ಅನುಗ್ರಹದಿಂದ ಗರ್ಭಿಣಿಯಾಗಿ ಆ ವ್ರತವನ್ನು ನಡೆಸುತ್ತ ಬಂದಳು. ಇಂದ್ರನು ತನ್ನ ಶತ್ರುವನ್ನು ಸಂಹರಿಸಬೇಕೆಂದು ಯೋಚಿಸಿ, ದಿತಿಯ ಬಳಿಗೆ ಬಂದು ಅವಳನ್ನು ಸೇವಿಸಲು ಅಲ್ಲಿಯೇ ನಿಂತು ಸಮಯವನ್ನು ನಿರೀಕ್ಷಿಸುತ್ತಿದ್ದನು.

ಒಂದು ದಿನ ದಿತಿಯು ಶ್ರಾಂತಳಾಗಿ ಸಾಯಂಕಾಲದಲ್ಲಿ ಕಾಲು ತೊಳೆಯದೆ ಮಲಗಿ ನಿದ್ರಿಸ ಹತ್ತಿದಳು. ಇಂದ್ರನು ಆಗ ಯೋಗಶಕ್ತಿಯಿಂದ ಅವಳ ಉದರವನ್ನು ಪ್ರವೇಶಿಸಿ, ವಜ್ರಾಯುಧದಿಂದ ಗರ್ಭಪಿಂಡವನ್ನು ಏಳು ತುಂಡುಗಳಾಗಿ ಕತ್ತರಿಸಿದನು. ಶ್ರೀಹರಿಯ ಅನುಗ್ರಹವಿದ್ದುದರಿಂದ ಆ ತುಂಡುಗಳು ಸಾಯದೆ ಅಳುತ್ತಿರಲು, ತಿರುಗಿ ಒಂದೊಂದು ತುಂಡನ್ನೂ ಮತ್ತೆ ಏಳೇಳು ಭಾಗ ಮಾಡಿದನು. ಅವೆಲ್ಲವೂ ಅಳುತ್ತಿರಲು 'ಮಾರೋದೀ:' ಎಂದು ಹೇಳಿದನು. ಆದರಿಂದ ಅವರೆಲ್ಲರಿಗೂ ಮರುತ್ತುಗಳೆಂದೇ ಹೆಸರಾಯಿತು ದಿತಿಯು ಎಚ್ಚೆತ್ತಾಗ 49 ಮಂದಿ ಪುತ್ರರು ಇಂದ್ರನೊಡನೆ ತನ್ನೆದುರಿಗೆ ನಿಂತಿರುವುದನ್ನು ಕಂಡು ಸಂತೋಷಿಸಿದಳು. ತಾನು ಬಯಸಿದ್ದು ಒಬ್ಬ ಪುತ್ರನನ್ನು. 49 ಪುತ್ರರಾದುದು ಹೇಗೆಂದು ಇಂದ್ರನನ್ನು ಪ್ರಶ್ನಿಸಿದಳು. ಅವನು ಪಿಂಡವನ್ನು 49 ಭಾಗಗಳಾಗಿ ಕತ್ತರಿಸಿದುದನ್ನೂ ಶ್ರೀಹರಿಯ ಅನುಗ್ರಹದಿಂದ ಅವು ನಾಶ ಹೊಂದದೆ ಮಕ್ಕಳಾದುದನ್ನೂ ದಿತಿಗೆ ತಿಳಿಸಿ, ತನ್ನೀ ಕಾರ್ಯವನ್ನು ಕ್ಷಮಿಸಬೇಕೆಂದು ಬೇಡಿದನು. ವಾಸವನು ವಾಸ್ತವಸಂಗತಿಯನ್ನು ಹೇಳಿದ್ದರಿಂದ ದಿತಿಗೆ ಆನಂದವಾಯಿತು. ಇಂದ್ರನು ಹೊರಡಲು ಅಪ್ಪಣೆಯನ್ನು ಕೇಳಿದನು. ಅವಳು ಒಳ್ಳೆಯ ಮನಸ್ಸಿನಿಂದಲೇ ಅನುಮತಿಯನ್ನು ಕೊಟ್ಟಳು. ದೇವರಾಜನು ಆ 49 ಮಂದಿಯನ್ನೂ ತನ್ನ ಸಹೋದರರನ್ನಾಗಿ ಮಾಡಿಕೊಂಡು, ದಿತಿಗೆ ನಮಿಸಿ, ಆ ಮರುತ್ತುಗಳೊಡನೆ ತನ್ನ ಲೋಕಕ್ಕೆ ತೆರಳಿದನು.

## ಹದಿನೆಂಟನೆಯ ಅಧ್ಯಾಯ ಮುಗಿದುದು

**ಪರೀಕ್ಷಿತ್ :–** ಪುಂಸವನವ್ರತದ ವಿಧಾನವನ್ನು ತಿಳಿಸಿ

**ಶುಕ :–** ಸ್ತ್ರೀಯು ಮೋಕ್ಷಾದಿ ಸಕಲಪುರುಷಾರ್ಥಪ್ರದವಾದ ಪುಂಸವನ ವ್ರತವನ್ನು ಮಾಡಲು ಪತಿಯ ಅಪ್ಪಣೆಯನ್ನು ಕೇಳಿ, ಮಾರ್ಗಶಿರ ಶುಕ್ಲಪಕ್ಷ ಪಾಡ್ಯದಿಂದ ಆರಂಭಿಸಬೇಕು. ಮೊದಲು ಮರುಜ್ಜನ್ಮಕಥಾಶ್ರವಣ ಮಾಡಿ, ಸ್ನಾನಾದಿಗಳಿಂದ ಶುದ್ಧಳಾಗಿ, ಲಕ್ಷ್ಮೀನಾರಾಯಣರನ್ನು ಷೋಡಶೋಪಚಾರಗಳಿಂದ ಪೂಜಿಸಬೇಕು. ನಿವೇದಿತ ಹವಿಸ್ಸನ್ನು "ಓಂ ನಮೋ ಭಗವತೇ ಮಹಾಪುರುಷಾಯ, ಮಹಾ ವಿಭೂತಿ ಪತಯೇ ಸ್ವಾಹಾ" ಎಂಬ ಮಂತ್ರದಿಂದ ಹನ್ನೆರಡು ಬಾರಿ ಹೋಮಿಸಬೇಕು. ಬಳಿಕ ಸ್ತೋತ್ರ ಮಾಡಬೇಕು. ಬ್ರಾಹ್ಮಣಸುವಾಸಿನಿಯರಿಗೆ ಭೋಜನಾ ಮಾಡಿಸಿ, ಪತಿಯ ಊಟವಾದ ಬಳಿಕ ತಾನೂ ಊಟಮಾಡಬೇಕು. ಹೀಗೆ ಪ್ರತಿ ದಿನವೂ ಮಾಡಿ ಕಾರ್ತಿಕಮಾಸದ ಅಮಾವಾಸ್ಯೆ ಆ ವ್ರತವನ್ನು ಮುಗಿಸಬೇಕು. ಮಾರನೆಯ ದಿನ ಪತಿಯು ಹಾಲಿನಲ್ಲಿ ಬೇಯಿಸಿದ ಚರುವನ್ನು ಘೃತಸಹಿತವಾಗಿ ಹನ್ನೆರಡು ಬಾರಿ ಹೋಮವನ್ನು ಮಾಡಬೇಕು. ಬ್ರಾಹ್ಮಣರಿಗೆ ಭೋಜನ ಮಾಡಿಸಿ,

ಗೋಘೂ ಮೊದಲಾದ ದಾಸಗಳನ್ನು ಮಾಡಬೇಕು. ಅವರ ಆಶೀರ್ವಾದವನ್ನು ಸ್ವೀಕರಿಸಿ, ಊಟಮಾಡಿದ ಪತಿಯು ಉಳಿದನ್ನವನ್ನು ಪತ್ನಿಗೆ ಕೊಡಬೇಕು ಹೀಗೆ ವ್ರತಗೈದವರು ಇಷ್ಟಾರ್ಥಗಳೆಲ್ಲವನ್ನೂ ಪಡೆಯುವರು

ಶ್ಲೋಕ

**ತುಷ್ಟಾಃ ಪ್ರಯಚ್ಛಂತಿ ಸಮಸ್ತಕಾಮಾನ್ ಹೋಮಾವಸಾನೇ ಹುತಭುಕ್ ಶ್ರೀಹರಿಶ್ಚ ।**
**ರಾಜನ್ ಮಹನ್ಮರುತಾಂ ಜನ್ಮಪುಣ್ಯಂ ದಿತೇರ್ವ್ರತಂ ಚಾಭಿಹಿತಂ ಮಹತ್ತೇ ॥ 29 ॥**

ರಾಜನೇ ! ಅತಿಶಯ ಪುಣ್ಯಕರವಾದ ಮರುದ್ಗಣಗಳ ಜನ್ಮವನ್ನೂ, ದಿತಿಯು ಆಚರಿಸಿದ, ಶ್ರೀಹರಿಗೆ ಪ್ರೀತಿಕರವಾದ್ದರಿಂದ ಉತ್ತಮವಾದ ವ್ರತವನ್ನೂ ಹೇಳಿ ಕೇಳುವವರ ವಿಷಯದಲ್ಲಿ ಅಗ್ನಿಯು, ಲಕ್ಷ್ಮಿಯು ಮತ್ತು ನಾರಾಯಣ ಇವರು ಸಂತುಷ್ಟರಾಗಿ ಸಕಲ ಮನೋಭೀಷ್ಟಗಳನ್ನು ಕೊಡುವರು

**ಹತ್ತೊಂಭತ್ತನೆಯ ಅಧ್ಯಾಯ ಮುಗಿದುದು**

**ಷಷ್ಠಸ್ಕಂಧ ಸಮಾಪ್ತ**

ಶ್ರೀಪ್ರಜ್ಞಾ ದಾಂತ ಶ್ರೀಮದ್ರಾಘವೇಂದ್ರ ಗುರ್ವಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನರಸಿಂಹಾಯ ನಮಃ

# ಸಪ್ತಮಸ್ಕಂಧಾರಂಭಃ

ಹರಿ : ಓಂ

ಪರೀಕ್ಷಿತ್ :- ಸಮಃ ಪ್ರಿಯಃ ಸುಹೃದ್ಬ್ರಹ್ಮನ್ ಭೂತಾನಾಂ ಭಗವಾನ್ ಸ್ವಯಂ ।

ಇಂದ್ರಸ್ಯಾರ್ಥೇ ಕಥಂ ದೈತ್ಯಾನ್ ಅವಧೀದ್ವಿಷಮೋ ಯಥಾ ॥೧॥

ಶಾಕಮುನಿಗಳೇ ! ಶ್ರೀನಾರಾಯಣನಿಗೆ ಪಕ್ಷಪಾತವಿಲ್ಲವಷ್ಟೆ ? ಸಕಲ ಭೂತಾಂತರ್ಯಾಮಿಯೂ, ಪ್ರಿಯನೂ ಆದ ಹರಿಗೆ ಇಂದ್ರನ ಪಕ್ಷವನ್ನು ವಹಿಸಿ ದೈತ್ಯರನ್ನು ಕೊಲ್ಲುವುದರಿಂದ ವೈಷಮ್ಯವು ಬರುವುದು. ನಿತ್ಯಾಭಿವ್ಯಕ್ತವಾದ ಸ್ವರೂಪಾನಂದ ಜ್ಞಾನಾನುಭವನಾದ ಪ್ರಭುವಿಗೆ ದೇವತೆಗಳಿಂದ ಪ್ರಯೋಜನವಿಲ್ಲ. ಪ್ರಾಕೃತ ಗುಣರಹಿತನಾದ್ದರಿಂದ ದೈತ್ಯರಿಂದ ಹಾನಿಯೂ ಇಲ್ಲ. ಅಂದಬಳಿಕ ಶ್ರೀಶನು ದೈತ್ಯರನ್ನು ದ್ವೇಷದಿಂದ ಕೊಂದನೆಂಬ ವಿಷಯದಲ್ಲಿ ನಮಗೆ ಸಂದೇಹ ಬಂದಿದೆ. ದಯೆ ಮಾಡಿ ಅದನ್ನು ಪರಿಹರಿಸಿ. ನಿರ್ದೋಷ ಜ್ಞಾನಸ್ವರೂಪನಾದ ಶ್ರೀಹರಿಯ ಮಹಿಮೆಯನ್ನು ವರ್ಣಿಸಿರಿ.

ಶುಕ :- ಪಕ್ಷಪಾತ, ನಿರ್ದಯತೆ ಮುಂತಾದ ದೋಷ ದೂರನಾದ ಶ್ರೀಹರಿಯ ಚರಿತ್ರೆಯು ಭಕ್ತಿವರ್ಧಕವೆಂದು ನಾರದಾದಿಗಳು ಹೇಳುವರು. ನೀನು ಅದನ್ನೇ ಕೇಳುತ್ತಿರುವೆ. ಆದ್ದರಿಂದ ಇದು ಪ್ರಶಸ್ತ. ವೇದವ್ಯಾಸರನ್ನು ನಮಿಸಿ ಹರಿಕಥೆಯನ್ನು ಹೇಳುವೆನು.

ರಾಜೇಂದ್ರನೇ ! ಶ್ರೀಹರಿಯು ಸಮನು, ಪ್ರಿಯನು, ಉಪಕಾರಿ ಎಂದು ನೀನು ಹೇಳಿದುದು ಸತ್ಯ. ಪೂರ್ಣಕಾಮನಾದ್ದರಿಂದ ಅವನು ಲಾಭದ ಆಶೆಗಾಗಲಿ, ತ್ರಿಗುಣರಹಿತನಾದ್ದರಿಂದ ದೈತ್ಯರಲ್ಲಿನ ದ್ವೇಷ, ಭಯದಿಂದಲಾಗಲಿ ದೈತ್ಯರನ್ನು ಕೊಲ್ಲುವವನಲ್ಲವೆಂದು ನೀನು ಹೇಳಿದುದು ಸರಿ. ಇಂದ್ರನಿಗಾಗಿ ದೈತ್ಯರನ್ನು ಕೊಲ್ಲುವುದು ಪಕ್ಷಪಾತವಾದರೂ ಅವನಿಗೆ ಅದು ದೋಷವಲ್ಲ ಭೂಷಣವೇ ಸರಿ. ಅದು ಸಮತೆಗೆ ವಿರುದ್ಧವಲ್ಲ. ಹೇಗೆಂದರೆ ಶ್ರೀಹರಿಯು ಪ್ರಕೃತಿ ಗುಣ ರಹಿತನು. ಜನ್ಮಾದಿಗಳು ಅವನಿಗಿಲ್ಲ. ಒಂದೇ ರೀತಿಯಾಗಿರುವ ಸ್ವಾಮಿಯು ತನ್ನಿಚ್ಛೆಯಿಂದ

ಶರೀರಧಾರಿಗಳಾದ ದೇವದಾನವ ಮಾನವರನ್ನು ಹೊಕ್ಕು ಅವರಿಗೆ ಜಯಾಪಜಯ ಗಳನ್ನುಂಟುಮಾಡುವಾಗ ಬಾಧ್ಯ ಬಾಧಕನೆನಿಸುವನು. ಆದರೆ ಸ್ವತಃ ಅವನು ಬಾಧ್ಯ ನಲ್ಲವೇ ಅಲ್ಲ. ಅಂದರೆ ವಧಿಸಲ್ಪಡುವವನಲ್ಲಿದ್ದುಕೊಂಡು ವಧಿಸಲ್ಪಡುವಿಕೆ ಎಂಬ ಧರ್ಮಕ್ಕೆ ಪ್ರೇರಕನೇ ಹೊರತು ಭಗವಂತನು ವಧಿಸಲ್ಪಡುವವನಲ್ಲ.

ಶ್ರೀಹರಿಯು ಜೀವರಸ್ವಭಾವ, ದೇಹೇಂದ್ರಿಯಾದಿಗಳಿಗೆ ಕಾರಣಗಳಾದ ತ್ರಿಗುಣಗಳು, ಗುಣಗಳನ್ನು ವೃದ್ಧಿಮಾಡತಕ್ಕ ಕಾಲ, ತ್ರಿಗುಣ ನಿಮಿತ್ತಕ ಪುಣ್ಯಪಾಪ ಕರ್ಮ, ಮೂಲ ಕಾರಣ ಪ್ರಕೃತಿ, ಜೀವ ಮತ್ತು ಭಕ್ತಿ ಮುಂತಾದ ಸರ್ವವನ್ನೂ ಅನುಸರಿಸಿ ದೇವತೆಗಳಿಗೆ ಭಕ್ತ್ಯಾದಿ ಸದ್ಗುಣಗಳನ್ನು ಅಭಿವೃದ್ಧಿಮಾಡಿ, ದೈತ್ಯರಿಗೆ ದ್ವೇಷಾದಿಗಳನ್ನು ಅಭಿವೃದ್ಧಿ ಮಾಡಿ, ಸುಖ ದುಃಖಗಳನ್ನೂ ಜಯಾಪಜಯಗಳನ್ನೂ ಜನನ–ಮರಣ ಮುಂತಾದ ಫಲಗಳನ್ನೂ ಕೊಡುವವನಾದ್ದರಿಂದ ಸಮನೆನಿಸಿದನು. ಸ್ವಭಾವ ಮುಂತಾದುವುಗಳಿಗೆ ಅನುಸಾರವಾಗಿಯೇ ಫಲವನ್ನು ಕೊಡುವೆನೆಂದು ಸಂಕಲ್ಪವನ್ನು ಮಾಡಿರುವನು. ಅವನ ಸಂಕಲ್ಪಕ್ಕೆ ಅವನು ಅಧೀನನೇ ಹೊರತು ಮತ್ತಾವುದಕ್ಕೂ ಅಧೀನನಲ್ಲ. ಆದ್ದರಿಂದ ಅವನ ಸ್ವಾತಂತ್ರ್ಯಕ್ಕೆ ಧಕ್ಕೆ ಇಲ್ಲ. ಇಂದ್ರಾದಿಗಳನ್ನು ಪ್ರೀತಿಸುವುದಕ್ಕೆ ಅವರ ಸತ್ಸ್ವಭಾವವೇ ಕಾರಣವು. ಹಾಗೆಯೇ ದೈತ್ಯರ ವಧೆಗೆ ಅವರ ದುಷ್ಟ ಸ್ವಭಾವವೇ ಕಾರಣವಾದುದರಿಂದ ಹರಿಯು ಯಾವ ವಿಷಯದಲ್ಲಿಯೂ ಪಕ್ಷಪಾತಿಯಲ್ಲ.

ಶ್ರೀಹರಿಯು ಸ್ವಾಭಾವಿಕವಾಗಿಯೇ ಸುರಪ್ರಿಯನೂ, ಅಸುರರಿಗೆ ಅಪ್ರಿಯನೂ ಆಗಿರುವನು ಎಂಬುದಕ್ಕೆ ನಾರದರು ಧರ್ಮರಾಜನಿಗೆ ಹೇಳಿದ ಪಾವನ ಚರಿತ್ರೆ ಯನ್ನು ನಿನಗೆ ಹೇಳುವೆನು ಕೇಳು.

ರಾಜಸೂಯ ಯಾಗದಲ್ಲಿ ಶ್ರೀಕೃಷ್ಣನು ಶಿಶುಪಾಲನನ್ನು ಕೊಂದನು. ಅವನು ಶ್ರೀಹರಿಯ ಚರಣಸಾಯುಜ್ಯವನ್ನು ಹೊಂದಿದುದನ್ನು ಧರ್ಮರಾಜನು ನೋಡಿ ಆಶ್ಚರ್ಯದಿಂದ ನಾರದರನ್ನು ಕೇಳುತ್ತಾನೆ.

**ಧರ್ಮರಾಜ :–** ನಾರದರೇ ! ಏಕಾಂತಭಕ್ತರಿಗೂ ದುರ್ಲಭವಾದ ಹರಿ ಪಾದಾರವಿಂದದಲ್ಲಿ ದ್ವೇಷಿಯಾದ ಶಿಶುಪಾಲನಿಗೆ ಪ್ರವೇಶವು ಹೇಗೆ ದೊರೆಯಿತು ? ದ್ವೇಷ ಮಾಡಿದವನು ತಮಸ್ಸಿನಲ್ಲಿ ಬಿದ್ದನಲ್ಲವೆ ?

**ನಾರದ :–** ತನ್ನಿಂದ ಭಿನ್ನವಾದ ಜಡದೇಹವೇ ತಾನೆಂದು ಭ್ರಮಿಸುವವನಿಗೆ ನಿಂದನಾದಿಗಳಿಂದ ಖೇದವಾಗಿ ಕೋಪ ಬರುತ್ತದೆ. ಶ್ರೀಹರಿಗೆ ಪ್ರಾಕೃತ ದೇಹವೇ ಇಲ್ಲ. ಆದ್ದರಿಂದ ಅವನಿಗೆ ದೇಹಾಭಿಮಾನವಿಲ್ಲ. ಅದರಿಂದ ಅವನನ್ನು ನಿಂದಿಸಿದರೆ, ತಿರಸ್ಕರಿಸಿದರೆ ಖೇದಾದಿಗಳು ಅವನಿಗಿಲ್ಲ. ಅವನಿಗೆ ಕರ್ತರಾರೂ ಇಲ್ಲವಾದ್ದರಿಂದ

ಇತರರಿಂದ ಅವನಿಗೆ ಹಿಂಸೆ ಇಲ್ಲ. ಇಂತಹ ಸ್ವಾಮಿಗೆ ಶಿಶುಪಾಲನು ನಿಂದೆ ಮಾಡಿದ್ದ ರಿಂದ ದುಃಖ ಕೊಟ್ಟಂತಾಗಿ ಚೈದಶಿಶುಪಾಲನು ನರಕದಲ್ಲಿ ಬೀಳಬೇಕಾಗಿತ್ತೆಂದು ಹೇಳುವುದು ಸರಿಯಲ್ಲ. ಭಗವನ್ನಿಂದೆಯು ಪಾಪಕರ. ಅದರ ಫಲವಾಗಿ ಶಿಶುಪಾಲನು ನರಕಕ್ಕೆ ಬೀಳಬೇಕಾಗಿತ್ತೆಂದು ಹೇಳುವುದೂ ಸರಿಯಲ್ಲ. ಹರಿಯು ಭಕ್ತವತ್ಸಲನು. ದೈತ್ಯಜಾತಿಯಲ್ಲಿ ಹುಟ್ಟಿದವನಾದರೂ ಸ್ವರೂಪದಿಂದ ಭಕ್ತನಾದವನು ತಪ್ಪು ಮಾಡಿದರೆ ಅವನ ಅಪರಾಧಗಳನ್ನೆಣಿಸದೆ ಅವನನ್ನು ಕ್ಷಮಿಸಿ ಸದ್ಗತಿಯನ್ನೇ ಕೊಟ್ಟು ಬಿಡುವನು. ದೈತ್ಯಾದಿ ಸುಜೀವರು ವೈರ ನಿಮಿತ್ತವಾಗಿ ಮನಃಪ್ರವಣತೆಯಿಂದ ಭಜಿಸಿದರೂ, ಭಯದಿಂದ ಸ್ಮರಿಸಿದರೂ, ಕಾಮದಿಂದ ಒಲಿಸಿದರೂ, ಸ್ನೇಹದಿಂದ ಲ್ಲಾಲಿಸಿದರೂ ಸಾಕೆಂದು ಹಿಗ್ಗಿ ಶ್ರೀಹರಿಯು ಹಂಸವು ನೀರನ್ನು ಬಿಟ್ಟು ಕ್ಷೀರವನ್ನೇ ಸ್ವೀಕರಿಸುವಂತೆ, ಅವರ ದ್ವೇಷ, ಭಯ, ಕಾಮಾದಿಗಳನ್ನು ಗಮನಿಸದೆ ಆ ಜೀವರ ಅನನ್ಯ ಭಕ್ತಿಗೆ ಮೆಚ್ಚಿ ಸಲಹುವನು.

ತಮೋ ಯೋಗ್ಯನು ನಿತ್ಯದ್ವೇಷದಿಂದ ಶ್ರೀಹರಿಯಲ್ಲಿ ಅಭಿನಿವೇಶ ಅಂದರೆ ಆಗ್ರಹವನ್ನು ಹೊಂದುವಂತೆ ಮುಕ್ತಿಯೋಗ್ಯನು ನಿತ್ಯಭಕ್ತಿಯಿಂದ ಶ್ರೀಹರಿಯಲ್ಲಿ ಆಗ್ರಹವನ್ನು ಹೊಂದುವುದು ಅಷ್ಟು ಸುಲಭವಲ್ಲ. ಭಕ್ತರು ವಿರಳರೆಂದೇ ನನ್ನ ನಿಶ್ಚಯ.

ಕಣಜವು ಶಾಮ ಎಂಬ ಹುಳುವನ್ನು ಗೂಡಿನಲ್ಲಿಟ್ಟು ಬಂಧಿಸುತ್ತದೆ. ಆ ಹುಳು ವಿಗೆ ಮೊದಲು ಮೊದಲು ಕಣಜದ ಮೇಲೆ ಕೋಪವಿರುವುದು. ಆದರೆ ಕಣಜವು ಆಹಾರಾದಿಗಳನ್ನು ಇತ್ತು ಪೋಷಿಸುತ್ತಿರುವುದರಿಂದ ಹುಳುವು ಅದನ್ನು ಪ್ರೀತಿಸಲು ಆರಂಭಿಸುವುದು. ಆಗ ಕಣಜದ ಗಾನವು ಹುಳುವಿನ ಕಿವಿಗೆ ಇಂಪಾಗುವುದು. ಅದರ ಬರುವಿಕೆಯನ್ನೇಬಯಸಿ, ಕಣಜದ ರೂಪವನ್ನೇ ಹೊಂದಿಬಿಟ್ಟು, ಗೂಡಿನಲ್ಲಿ ತಂದಿಟ್ಟ ಕಣಜವೇ ತಾನಾಗದೆ, ಅದರಿಂದ ಭಿನ್ನವಾಗಿಯೇ ಗೂಡನ್ನು ಒಡೆದುಕೊಂಡು ಹಾರಿ ಹೋಗುವುದು. ಅದರಂತೆ ಶ್ರೀಹರಿಯು ಜೀವನನ್ನು ದೇಹಗಳಲ್ಲಿ ತಂದಿಡುವನು. ಜೀವನು ಮೊದಲು ದ್ವೇಷಿಸಿದರೂ, ಹರಿಯು ಆಹಾರಾದಿಗಳನ್ನು ಕೊಟ್ಟು ರಕ್ಷಿಸುವು ದರಿಂದ, ಅದನ್ನು ನೋಡಿದ ಸುಜೀವನು ಶ್ರೀಹರಿಯನ್ನು ಪ್ರೇಮಿಸಲಾರಂಭಿಸುವನು. ಪ್ರೇಮವು ಪಕ್ವವಾದಹಾಗೆ, ಹರಿಕಥಾ ಶ್ರವಣವನ್ನು ಮಾಡಿ ಹರಿಯ ದರ್ಶನವನ್ನೇ ಬಯಸುವನು. ಜೀವನು ಯೋಗ್ಯನಾದರೆ ತಾನೂ ಶ್ರೀಹರಿಯಂತೆ ಸಾರೂಪ್ಯವನ್ನು ಹೊಂದಿ, ಶರೀರಾದಿ ಬಂಧನದಿಂದ ಮುಕ್ತನಾಗಿ ಸುಖಿಸುವನು. ಹೀಗೆ ವೈರ ಕಾರಣ ವಾಗಿ ಹುಟ್ಟಿದ ನಿರಂತರ ಅನುಸಂಧಾನವೆಂಬ ಭಕ್ತಿಯಿಂದ ಸಕಲ ಪಾಪಗಳಿಂದ ಮುಕ್ತರಾಗಿ, ಚೈದ್ಯಾದಿಗತ ಸುಜೀವರು ಮುಕ್ತಿಯನ್ನು ಹೊಂದಿದರು. ಅಲ್ಲಿ ಆವಿಷ್ಟ ರಾಗಿದ್ದ ದುರ್ಜನರು ದ್ವೇಷಿಸಿದ್ದರಿಂದ ಬಂದ ಪಾಪದಿಂದ ತಮಸ್ಸನ್ನು ಹೊಂದಿದರು

ಸುಜೀವರು ಶ್ರೀಹರಿಯಲ್ಲಿ ಕಾಮವುಳ್ಳವರಾಗಿರಲಿ, ಸ್ನೇಹವುಳ್ಳವರಾಗಿರಲಿ, ಭಯ ದ್ವೇಷಗಳನ್ನುಳ್ಳವರಾಗಿರಲಿ ಚಿಂತೆಯಿಲ್ಲ. ಶ್ರೀಹರಿಯಲ್ಲಿ ನಿರಂತರ ಚಿಂತನೆಯೆಂಬ ಭಕ್ತಿಯು ಅವರಿಗೆ ಹುಟ್ಟಿಬಿಟ್ಟರೆ ಅದರಿಂದ ಸದ್ಗತಿಯನ್ನು ಅವರು ಹೊಂದಿಯೇ ಬಿಡುವರು.

ಗೋಪಿಯರು ಕಾಮದಿಂದ, ಕಂಸನು ಭಯದಿಂದ, ಶಿಶುಪಾಲನು ದ್ವೇಷದಿಂದ ಯಾದವರು ಬಂಧುತ್ವದಿಂದ, ಪಾಂಡವರಾದ ನೀವು ಸ್ನೇಹ ನಿಮಿತ್ತಕವಾದ ಭಕ್ತಿಯಿಂದ, ಶುಕಾದಿಗಳಾದ ನಾವು ಕಾಮವೇಮೊದಲಾದುವುಗಳಿಲ್ಲದೆ ಕೇವಲ ಭಕ್ತಿಯಿಂದ ಶ್ರೀಕೃಷ್ಣನನ್ನು ಹೊಂದಿದವರಾಗಿರುವೆವು. ಮೊದಲು ದ್ವೇಷಿಗಳಾಗಿದ್ದ ಶಿಶುಪಾಲಾದಿಗಳ ದ್ವೇಷ, ಕಾಮ, ಭಯ ಮುಂತಾದುವುಗಳು ಅಳಿಸಿಹೋಗಿ, ಭಕ್ತಿಯೇ ಸ್ಥಿರವಾಗುವುದು. ವೇನಾಸುರನಿಗೆ ಕಾರಣಗಳಾದ ಕಾಮ, ಭಯ, ದ್ವೇಷಾದಿಗಳಲ್ಲಿ ಒಂದೂ ಇರಲಿಲ್ಲವಾದ್ದರಿಂದ, ಕೇವಲ ದ್ವೇಷದಿಂದ ಅವನು ತಮಸ್ಸಿನಲ್ಲಿ ಬಿದ್ದುದು ನ್ಯಾಯವಾಗಿದೆ. ಶಿಶುಪಾಲನು ನಿಮ್ಮ ಚಿಕ್ಕಮ್ಮನ ಮಗನಲ್ಲವೆ ? ದಂತವಕ್ತ್ರನೂ ಶಿಶುಪಾಲನಂತೆಯೇ ಇರತಕ್ಕವನು. ಅವರಿಬ್ಬರೂ ಶ್ರೀಹರಿಯ ದ್ವಾರಪಾಲಕರು. ಬ್ರಾಹ್ಮಣರ ಶಾಪದಿಂದ ಚ್ಯುತರಾಗಿ ಅಸುರಾವೇಶದೂಷಿತರಾಗಿದ್ದರು.

**ಧರ್ಮರಾಜ :–** ಜಯವಿಜಯರು ಹರಿಭಕ್ತರಾಗಿದ್ದರೂ, ಅವರಿಗೆ ಬಂದ ಶಾಪವೆಂತಹುದು ?

**ನಾರದ :–** ಅಮುಕ್ತ ವೈಕುಂಠದ್ವಾರಪಾಲಕರಾದ ಜಯವಿಜಯರು, ಅಲ್ಲಿಗೆ ಬಂದ ಸನಕಾದಿಗಳನ್ನು ಒಳಗೆ ಬಿಡದೆ ತಡೆದರು. ಆ ಮುನಿಗಳು ಅಸುರಯೋನಿಯಲ್ಲಿ ಅವರಿಬ್ಬರೂ ಹುಟ್ಟುವಂತೆ ಶಪಿಸಿ, ಮೂರುಜನ್ಮಗಳನ್ನು ಮಾತ್ರ ಕಳೆದುಕೊಂಡು ಈ ಲೋಕಕ್ಕೆ ಬರಬೇಕೆಂದು ಉಪಶಾಪವಿತ್ತರು. ಅದರಂತೆ ಜಯವಿಜಯರು ಮೊದಲು ಹಿರಣ್ಯಕಶಿಪು-ಹಿರಣ್ಯಾಕ್ಷರಾಗಿ ಹುಟ್ಟಿದರು. ಹಿರಣ್ಯಾಕ್ಷನನ್ನು ಶ್ರೀವರಾಹದೇವನು ಸಂಹರಿಸಿದನು. ಹಿರಣ್ಯಕಶಿಪುವು ತನ್ನ ಮಗ ಪ್ರಹ್ಲಾದನು ಹರಿಯಲ್ಲಿ ಮಾಡುತ್ತಿದ್ದ ಭಕ್ತಿಯನ್ನು ಕಂಡು ಕೆಂಡವಾಗಿ ಅವನನ್ನು ಕೊಲ್ಲಬೇಕೆಂದು ಬಹಳವಾಗಿ ಹಿಂಸಿಸಿದನು. ಸರ್ವಭೂತಪತಿಯಾದ ಭಗವಂತನ ತೇಜಸ್ಸು ಆ ಬಾಲಕನನ್ನು ಸರ್ವವಿಪತ್ತಿನಿಂದಲೂ ಸಂರಕ್ಷಿಸುತ್ತ ಬಂದಿತು. ಆಶ್ಚರ್ಯವನ್ನೂ, ಕೋಪವನ್ನೂ ಉಳ್ಳ ಹಿರಣ್ಯಕಶಿಪುವು ಕೊನೆಗೆ ಮಗನನ್ನೇ ಕೊಲ್ಲಲು ಹೋದನು. ಆಗ ಶ್ರೀಹರಿಯು ನರಸಿಂಹ ರೂಪದಿಂದ ಪ್ರಕಟನಾಗಿ ಆ ದೈತ್ಯನನ್ನೇ ಕೊಂದು ಪ್ರಹ್ಲಾದನನ್ನು ಕಾಪಾಡಿದನು. ಸಾಯುವಾಗ ಭಯಂಕರವಾದ ಹರಿಯ ರೂಪವನ್ನೇ ನೋಡುತ್ತ ಮೃತರಾದ ಹಿರಣ್ಯ

ಕಶಿಪು ಮತ್ತು ಹಿರಣ್ಯಾಕ್ಷರು ಎರಡನೆಯ ಜನ್ಮದಲ್ಲಿ ರಾವಣ ಕುಂಭಕರ್ಣರೆನಿಸಿ ಲೋಕವಿದ್ರಾವಣರಾದ ಆ ರಾಕ್ಷಸರಿಬ್ಬರನ್ನೂ ಶ್ರೀರಾಮನು ಸಂಹರಿಸಿದನು. ಶ್ರೀ ರಾಮನ ರಾಜರೂಪವನ್ನು ನೋಡುತ್ತ ಸತ್ತ ಅವರಿಬ್ಬರೂ ಶಿಶುಪಾಲ ದಂತವಕ್ತ್ರ ರೆನಿಸಿ ರಾಜರಾಗಿ ಹುಟ್ಟಿದರು. ಶ್ರೀಕೃಷ್ಣನ ದಿವ್ಯರೂಪವನ್ನು ನೋಡುತ್ತ ಈ ಕೊನೆಯ ಜನ್ಮವನ್ನು ಕಳೆಯುವ ಅವರಿಗೆ ದಿವ್ಯರೂಪವು ಬಂದು ದ್ವಾರಪಾಲಕ ರಾಗುವರು. ವೈರವು ಕಾರಣವಾದರೂ, ಭಕ್ತಿಯು ತೀವ್ರವಾಗಿರುವುದರಿಂದ ಅವರು ವೈರಮಾಡಿದ್ದರಿಂದ ಬಂದ ಪಾಪದ ಫಲವನ್ನು ತಮ್ಮಲ್ಲಿ ಆವಿಷ್ಟರಾದ ದೈತ್ಯರಿಗೇ ಬಿಟ್ಟು ಭಕ್ತಿಫಲವಾದ ಮುಕ್ತಿಯನ್ನೇ ಹೊಂದಿದರು.

**ಧರ್ಮರಾಜ** :– ಪ್ರಿಯಪುತ್ರನೂ, ಮಹಾತ್ಮನೂ, ಅಚ್ಯುತಭಕ್ತನೂ ಆದ ಪ್ರಹ್ಲಾದನಲ್ಲಿ ಅವನ ತಂದೆಯು ಅಷ್ಟು ದ್ವೇಷ ಮಾಡಲು ಕಾರಣವೇನು?

**ಮೊದಲನೆಯ ಅಧ್ಯಾಯ ಮುಗಿದುದು**

**ನಾರದ** :– ವರಾಹ ದೇವರಿಂದ ತಮ್ಮನಾದ ಹಿರಣ್ಯಾಕ್ಷನು ಹತನಾದುದನ್ನು ಕೇಳಿ ಹಿರಣ್ಯಕಶಿಪುವು ಶೋಕ ಮತ್ತು ರೋಷಯುಕ್ತನಾಗಿ ಸಭೆಯಲ್ಲಿ ದಾನವರನ್ನು ಕುರಿತು ಹೇಳುತ್ತಾನೆ ;–

**ಹಿರಣ್ಯಕಶಿಪು** :– ತ್ರಿಶಿರ ! ವಿಪ್ರಚಿತ್ತಿ ! ಶಂಬರ ! ಪಾಕ ! ನಾರಾಯಣನು ಕ್ಷುದ್ರರಾದ ದೇವತೆಗಳ ಪಕ್ಷವನ್ನು ವಹಿಸಿ, ಅವರ ಪೂಜೆಗೆ ಋಣಿಯಾಗಿ, ತನ್ನ ಸ್ವಭಾವವಾದ ಸಮತೆಯನ್ನು ಬಿಟ್ಟು ನನ್ನ ತಮ್ಮನನ್ನು ಅನ್ಯಾಯವಾಗಿ ಕೊಂದಿರು ವನು. ಅವನ ರಕ್ತದಿಂದ ನನ್ನ ತಮ್ಮನಿಗೆ ತರ್ಪಣವನ್ನು ಮಾಡುವವರಿಗೆ ಮನೋ ವ್ಯಥೆಯು ಹೋಗುವುದಿಲ್ಲ. ಮೋಸಗಾರನಾದ ಅವನೊಬ್ಬನನ್ನು ಕೊಂದರೆ ಸಾಕು. ಉಳಿದ ಅಲ್ಪ ವೈರಿಗಳೆಲ್ಲರೂ ಆಸರೆಯಿಲ್ಲದೆ ಸಾಯುವರು. ಆದ್ದರಿಂದ ನೀವೆಲ್ಲರೂ ತಪಸ್ಸು, ಯಜ್ಞ, ದಾನ ಮತ್ತು ವೇದಾಧ್ಯಯನಗಳನ್ನು ಮಾಡುವ ಬ್ರಾಹ್ಮಣಾದಿ ಗಳನ್ನು ಕೊಂದುಬಿಡಿ. ವಿಷ್ಣುವಿನ ಪ್ರಾಣವು ಬ್ರಾಹ್ಮಣರ ತಪೋಯಜ್ಞ ಧರ್ಮ ಗಳಲ್ಲಿ ನೆಲೆಸಿದೆಯಂತೆ. ಅವನೇ ದೇವ ಋಷಿ ಪಿತೃ ಭೂತಗಳಿಗೆ ಆಧಾರನಂತೆ. ಆದ್ದರಿಂದ ಎಲ್ಲೆಲ್ಲಿ ಬ್ರಾಹ್ಮಣ, ಗೋವುಗಳು, ವೇದಾಧ್ಯಯನ, ವರ್ಣಾಶ್ರಮಾಚಾರ ಗಳು ಇರುವುವೋ ಅಲ್ಲೆಲ್ಲ ನುಗ್ಗಿ ಅವುಗಳನ್ನು ಹಾಳು ಮಾಡಿ ಗ್ರಾಮಾರಾಮ ಗಳನ್ನು ಭಸ್ಮಮಾಡಿರಿ.

**ನಾರದ** :– ಆ ಅನುಚರರು ಆದರಂತೆ ಪ್ರಜೆಗಳನ್ನು ನಾಶಮಾಡಿದರು. ಪುರಗ್ರಾಮಾದಿಗಳನ್ನು ಸುಟ್ಟರು. ಆಗ ಲೋಕಪಾಲಕರಾದ ದೇವತೆಗಳೆಲ್ಲ ಸ್ವರ್ಗ

ವಸ್ತ್ರ ಬಿಟ್ಟು ಭೂಮಿಗೆ ಬಂದು ಯಾರ ಕಣ್ಣಿಗೂ ಕಾಣಿಸದಂತೆ ಅಲೆಯುತ್ತಿದ್ದರು.

ಹಿರಣ್ಯಕಶಿಪುವು ತಮ್ಮನಿಗೆ ಪ್ರೇತಕಾರ್ಯವನ್ನು ಮಾಡಿ, ತಮ್ಮನ ಮಕ್ಕಳಾದ ಶಕುನಿ, ಶಂಬರ, ಧೃಷ್ಟ, ಭೂತಸಂತಾಪನ, ವೃಕ, ಕಾಲನೇಮಿ, ಮಹಾನಾಭ ಹರಿಶ್ಮಶ್ರು ಮತ್ತು ಉತ್ಕಲ ಇವರನ್ನೂ, ನಾದಿನಿಯಾದ ರುಶದ್ಭಾನ ಎಂಬುವಳನ್ನೂ ಮತ್ತು ತಾಯಿಯಾದ ದಿತಿಯನ್ನೂ ಸಮಾಧಾನ ಮಾಡಲು ಹೀಗೆ ಹೇಳುತ್ತಾನೆ ;–

**ಹಿರಣ್ಯಕಶಿಪು :–** ನೀವೆಲ್ಲ ಅಳುವುದನ್ನು ನಿಲ್ಲಿಸಿ. ವೀರಸ್ವರ್ಗವನ್ನು ಸೇರಿದ ಹಿರಣ್ಯಾಕ್ಷನಿಗಾಗಿ ದುಃಖಿಸಬಾರದು. ವೀರಮರಣವು ದುರ್ಲಭ. ಅಮ್ಮಾ! ಅರವಟ್ಟಿಗೆಯಲ್ಲಿ ಒಟ್ಟಿಗೆ ಸೇರುವ ಜನರಂತೆ ಇಲ್ಲಿ ಜೀವರು ಕಲೆತಿರುವರು. ವಿಧಿಯಿಂದ ಕಲೆತಿದ್ದು ವಿಧಿಯಿಂದಲೇ ಅಗಲಿ ಹೋಗುವರು. ಎಲ್ಲರೂ ಒಂದೇ ಕಡೆ ಯಾವಾಗಲೂ ಸ್ಥಿರವಾಗಿ ಇರಲು ಸಾಧ್ಯವೆ ? **ಹಾಗಾದರೆ ಯಾರ ಸಹವಾಸವು ನಿತ್ಯವೆನ್ನುವಿರಾ? ಕೇಳಿ; ಜೀವವಿಲಕ್ಷಣನಾದ ಪರಮಾತ್ಮನು ನಿತ್ಯ, ಅಪ್ರಾಕೃತ, ವ್ಯಾಪ್ತ ಮತ್ತು ಸರ್ವಜ್ಞನು. ಅವನೇ ಜೀವನಿಗೆ ಲಿಂಗಶರೀರದಿಂದ ಬಿಡಿಸಲು ಕಾರಣವಾದ ಭೌತಿಕ ಶರೀರಾದಿಗಳನ್ನು ಕೊಡುವವನು. ಜೀವನು** ಇಂತಹ ಶ್ರೀಹರಿಯೊಡನೆ ನಿತ್ಯವೂ ವಾಸಮಾಡುವನು. ಆದರೆ ಜೀವನಿಗೆ ಇದ್ದಂತೆ ವಿಷಯಗಳ ಅಪೇಕ್ಷೆಯು ಹರಿಗೆ ಇಲ್ಲ. ಅಜ್ಞಾನಿಗಳು ಜೀವನು ಹುಟ್ಟಿ ಸಾಯುವ ದೇಹದಲ್ಲಿ ಹರಿಯು ಬದ್ಧನಾಗಿರುವನೆಂದು ತಿಳಿದು ಕೆಡುವರು. ನೀರು ಅಲುಗಾಡಿದರೆ ಅಲ್ಲಿ ಮೂಡಿರುವ ಗಿಡಗಳ ಪ್ರತಿಬಿಂಬಗಳೂ ಅಲುಗಾಡುವುವು. ಅವನ್ನು ನೋಡಿದವರು ದಡದಮೇಲಿರುವ ಗಿಡಗಳೇ ಅಲುಗಾಡಿದುವು ಎಂದು ತಿಳಿಯುವಂತೆ ಅಭಿಮಾನದಿಂದ ಜೀವನು ಚಲಿಸುವಂತೆ ಅವನ ಬಳಿಯಿರುವ, ಚಲನೆಯಿಲ್ಲದ ಹರಿಯೂ ಚಲಿಸುವಂತೆ ತೋರುವುದು. ಚಲನಾದಿ ವಿಕಾರವು ನಿಜವಾಗಿ ದೇಹಕ್ಕೇ ಇರುವುದು. ಪರಮಾತ್ಮನಿಗಿಲ್ಲ. ಗರಗರನೆ ತಿರುಗುವವರಿಗೆ ಭೂಮಿಯೇ ತಿರುಗಿದಂತೆ ತೋರುವುದು. ಇದುಭ್ರಮೆಯೇ ಸರಿ. ಅದರಂತೆ ಪರಮಾತ್ಮನು ಜೀವನಂತೆ ದುಃಖಾದಿಗಳನ್ನು ಹೊಂದುವನೆಂಬುವನೂ ಭ್ರಾಂತನೇ. ಜೀವವಿಲಕ್ಷಣನೂ, ಪೂರ್ಣನೂ ಆದ ಭಗವಂತನನ್ನು ತಿಳಿಯದಿರುವ ಅಜ್ಞಾನಿಗೆ ಕೊನೆಯಲ್ಲಿ ತಮಸ್ಸೇ ಆಗುವುದು. ಪರಮಾತ್ಮನ ಜ್ಞಾನವು ಆಗುವುದೇ ಇಲ್ಲ. ಅಜ್ಞಾನದಿಂದ ಸಂಸಾರವೂ, ಜ್ಞಾನದಿಂದ ಮೋಕ್ಷವೂ ಆಗುವುದು.

ಪ್ರಿಯವಾಗಬೇಕು, ಅಪ್ರಿಯವು ಹೋಗಬೇಕು ಎಂದು ನಾವು ಮಾಡುವ ಕರ್ಮಗಳ ಫಲವು ಈಶ್ವರಾಧೀನವಾದುದರಿಂದ ಒಂದೊಂದು ಬಾರಿ ಪ್ರಿಯ

ವಿಯೋಗವೂ, ಅಪ್ರಿಯಯೋಗವೂ ಆಗುತ್ತಿರುವುದು. ಸಂಸಾರದಲ್ಲಿ ಹುಟ್ಟು, ಸಾವು, ಅವಿವೇಕ, ಅಪ್ರಿಯ, ಶೋಕ, ಢಂಭ ಮತ್ತು ಚಿಂತೆ ಎಂಬ ಅನರ್ಥಗಳು ತಪ್ಪದೆ ಸಂಭವಿಸುವುವು. ಆದುದರಿಂದ ಜನನೀ ! ಜೀವನು ನಿತ್ಯನು, ದೇಹವು ಅನಿತ್ಯವು, ದೇಹ ಜೀವಾದಿಗಳೆಲ್ಲವೂ ಸದಾ ಈಶ್ವರಾಧೀನಗಳೆಂದು ತಿಳಿದು ಶೋಕ ವನ್ನು ಬಿಡು. ಅಮ್ಮಾ ! ಇದರ ಬಗ್ಗೆ ಒಂದು ಕಥೆಯನ್ನು ದೃಷ್ಟಾಂತವಾಗಿ ಹೇಳುವೆನು ಕೇಳು :–

ಉಶೀನರ ದೇಶದ ರಾಜನು ಶತ್ರುಗಳಿಂದ ಹತನಾಗಿ ಸತ್ತುಬಿದ್ದಿದ್ದನು. ರಕ್ತವು ಮಡುವಾಗಿ ನಿಂತಿತ್ತು. ಅವನ ಹೆಂಡಂದಿರು ಗೋಳೋ ಎಂದಳುತ್ತ ಶವ ಸಂಸ್ಕಾರಕ್ಕೆ ಸಚಿವರಿಗೆ ಅವಕಾಶ ಕೊಡಲಿಲ್ಲ. ಕತ್ತಲಾಯಿತು. ಆಗ ಯಮನು ಬಾಲಕ ರೂಪದಿಂದ ಬಂದು ಪ್ರೇತಬಂಧುಗಳನ್ನು ನೋಡಿ ನಗುತ್ತಾ

**ಯಮ :–** ಆಹಾ ! ಇವರಿಗೆ ವಯಸ್ಸಾಗಿದೆಯೇ ಹೊರತು ವಿವೇಕವು ಬಂದಂತಿಲ್ಲ. ಎಲ್ಲರಂತೆ ಸಾಯುವುದು ಲೋಕವಿಧಿ. ಜೀವನು ಎಲ್ಲಿಂದಲೋ ಬಂದು ಹುಟ್ಟಿ ಸತ್ತು ಅಲ್ಲಿಗೇ ಹೋಗಿರುವಾಗ ಅವನಿಗಾಗಿ ಶೋಕಿಸುವುದು ವ್ಯರ್ಥ. ನಾವೂ ಒಂದು ದಿವಸ ಸಾಯುವುದು ನಿಶ್ಚಯವೆಂದು ತಿಳಿದೂ ಸತ್ತವರನ್ನು ನೋಡಿ ಅಳುತ್ತಾ ಕೂಡುವುದು ನ್ಯಾಯವೆ ?

ಹಾಗೆ ನೋಡಿದರೆ ನಾನೆಷ್ಟು ಧನ್ಯನು ? ತಂದೆ ತಾಯಿಗಳು ನನ್ನನ್ನು ಕಾಡಿನಲ್ಲಿ ಹಾಕಿ ಬಿಟ್ಟು ಹೋದರೂ, ನಾನು ಮೋಹವನ್ನೂ, ಶೋಕವನ್ನೂ ಹೊಂದದೆ ಸರ್ವವೂ ದೈವಾಧೀನವೆಂದು ಅರಿತು ನಿಶ್ಚಿಂತನಾಗಿರುವೆನು, ತೋಳನರಿಗಳೂ ನನ್ನ ಮುಟ್ಟಲಿಲ್ಲ. ಗರ್ಭದಲ್ಲಿ ರಕ್ಷಿಸಿದ ದೇವನೇ ಹುಟ್ಟಿದ ಮೇಲೂ ರಕ್ಷಕನಲ್ಲವೆ ? ಆ ದೇವನೇ ಜಗತ್ತೆಲ್ಲವನ್ನೂ ನಿರ್ಮಿಸಿ, ರಕ್ಷಿಸಿ ಸಲಹುತ್ತಿರುವನು. ಜೀವರೆಲ್ಲರೂ ಆತನ ಕೈಗೊಂಬೆಗಳು. ಆ ಪ್ರಭುವೇ ನಿಗ್ರಹಾನುಗ್ರಹ ಸಮರ್ಥನು. ದೇವ ರಕ್ಷಿತ ವಾದರೆ ಹಾದಿಯಲ್ಲಿ ಬಿಸಾಡಿದ ವಸ್ತುವೂ ಮತ್ತೆ ಲಭಿಸುವುದು, ದೇವರು ರಕ್ಷಿಸದೇ ಹೋದರೆ ಮನೆಯ ಗುಡಾಣದಲ್ಲಿಟ್ಟರೂ ಮಾಯವಾಗುವುದು. ಅದರಂತೆ ಅನಾಥ ನಾಗಿದ್ದರೂ ಶ್ರೀಶನಿಂದ ವೀಕ್ಷಿತನಾದನೆಂದರೆ ಅವನನ್ನು ಕಾಡಿನಲ್ಲಿ ಬಿಸಾಡಿದರೂ, ಅವನು ಬದುಕುವನು. ಮನೆಯಲ್ಲಿ ಬಂಧುಗಳು, ವೈದ್ಯರು, ಔಷಧಿ ಇವೆಲ್ಲವಿದ್ದರೂ ಶ್ರೀಹರಿಯು ಕಣ್ದೆರೆದು ನೋಡದಿದ್ದರೆ ತಪ್ಪದೆ ಸಾಯುವನು. ಹರಿಯು ತಾನಾಗಿ ಕೊಲ್ಲಲು ಹೊರಟಾಗ ಉಳಿಸುವವರು ಯಾರೂ ಇಲ್ಲ. ಹರಿಯು ರಕ್ಷಿಸಲು ನಿಂತಾಗ ಅಳಿಸುವವರು ಯಾರೂ ಇಲ್ಲ.

ದಾಸರೂ ಹೀಗೆಯೇ ಹೇಳುತ್ತಾರೆ :- ಉಗಾಭೋಗ

ಶ್ರೀಪತಿಯ ಕಟಾಕ್ಷವೀಕ್ಷಣ ತಪ್ಪುವಡೆ
ಅನೇಕ ಬಂಧುಗಳು ಲಕ್ಷವೈದ್ಯರು ಇರಲಾಗಿ ಕಣ್ಣ ಕಣ್ಣ ಬಿಡುವರು
ತಾಪಸಿ ಅರಣ್ಯದೊಳಗೊಬ್ಬ ಒಂಟಿಯಾಗಿರಲು ಅಂಜಬೇಡವೆಂದು ನಮ್ಮ
ಕಂಜನಾಭನೆ ಬಂದು ಆಪತ್ತುಗಳ ಪರಿಹರಿಸುವ ಪುರಂದರ ವಿಠಲ ‖ ೧ ‖

ಜೀವರು ತಮ್ಮ ತಮ್ಮ ಕರ್ಮಾನುಸಾರವಾಗಿ ಹರಿಯಿಂದ ಹಾಕಲ್ಪಟ್ಟ ಯೋನಿಯಲ್ಲಿ ಹುಟ್ಟಿ ಕರ್ಮದ ಫಲವುಂಡು ಹುಟ್ಟ ಸಾಯುತ್ತಿರುವರು. ಜೀವ ವಿಲಕ್ಷಣನಾದ ಶ್ರೀಹರಿಯು ಪ್ರಕೃತಿ ನಿರ್ಮಿತವಾದ ಜೀವ ದೇಹಗಳಲ್ಲಿ ಅಂತರ್ಯಾಮಿ ಯಾಗಿದ್ದರೂ, ದೇಹ ಕೃತ ಸುಖ ದುಃಖಾದಿ ಕರ್ಮ ಫಲವನ್ನು ಅನುಭವಿಸದೆ ಆನಂದ ಪೂರ್ಣನಾಗಿ ವಿರಾಜಿಸುವನು.

ಮನೆಯಲ್ಲಿ ವಾಸಿಸುವವನೇ ಮನೆಯಲ್ಲವಷ್ಟೆ ? ಅದರಂತೆ ಪೃಥ್ವೀಜಲ ಪರಮಾಣುಗಳಿಂದ ನಿರ್ಮಿತವಾದ ದೇಹವು ನಾಶವಾಗುವುದರಿಂದ ಆದೇಹವೇ ಜೀವನಲ್ಲ. ಕಟ್ಟಿಗೆಯೊಳಗಿರುವ ಬೆಂಕಿಯೇ ಕಟ್ಟಿಗೆ ಹೇಗಲ್ಲವೋ ಹಾಗೆಯೇ ದೇಹ ದಲ್ಲಿರುವ ಪ್ರಾಣನೂ ದೇಹವಲ್ಲ. ಇನ್ನು ಪರಮಾತ್ಮನೇ ದೇಹವಲ್ಲವೆಂದು ಹೇಳ ಬೇಕಾಗಿಯೇ ಇಲ್ಲ. ಎಲ್ಲ ಕಡೆಯೂ ತುಂಬಿರುವ (ವ್ಯಾಪ್ತವಾಗಿರುವ) ಆಕಾಶವು ಎಲ್ಲ ವಸ್ತುಗಳಿಂದಲೂ ಭಿನ್ನವಾಗಿ ನಿರ್ಲಿಪ್ತವಾಗಿರುವಂತೆ ರಮಾಕಾಂತನು ದೇಹದಲ್ಲಿ ನಿರ್ಲಿಪ್ತನಾಗಿ, ಜ್ಞಾನಾನಂದಗುಣಭರಿತನಾಗಿ ಶೋಭಿಸುತ್ತಿರುವನು. ದೇಹವೇ ತಾನೆಂಬ ಮಿಥ್ಯಾಜ್ಞಾನದಿಂದಲೇ ಜೀವನಿಗೆ ದುಃಖವಾಗುವುದು.

ಇಲ್ಲಿ ಮಲಗಿರುವವನು ಸುಯಜ್ಞನೆ ? ಈ ದೇಹದಲ್ಲಿ ಸುಯಜ್ಞನು ಇರುವು ದಾದರೆ ಮರುಮಾತಾಡದಿರುವನೆ ? ಎದ್ದು ನೋಡದಿರುವನೆ ? ಕೇಳಿ, ಮಾತಾಡುವ ಸುಯಜ್ಞನ ಪ್ರೇರಕನಾದ ಮುಖ್ಯಪ್ರಾಣವಲ್ಲಭನಾದ ಶ್ರೀಹರಿಯು ಇಲ್ಲಿ ಇಲ್ಲ. ಏಕೆ ವ್ಯರ್ಥವಾಗಿ ಅಳುವಿರಿ ? ಮುಖ್ಯಪ್ರಾಣನೂ, ಶ್ರೀಹರಿಯೂ ಇಲ್ಲದಿದ್ದಡೆ ಜೀವನು ಇರಲಾರನು. ಅಂದ ಬಳಿಕ ಜೀವನು ಶರೀರವನ್ನು ಬಿಡದೆ ಹಿಡಿದಿರಲು ಶಕ್ತನೆ ? ಸುರನರ ತಿರ್ಯಗಾದಿ ಶರೀರಗಳನ್ನು ಜೀವನು ಹೊಂದುವುದೂ, ಬಿಡು ವುದೂ ಶ್ರೀಹರಿಯ ಇಚ್ಛೆಯಂತೆ. ಮರಣಾದಿಗಳಲ್ಲಿ ಜಡದೇಹವು ಬಿದ್ದುಹೋಗ ಲಾಗಿ ಜೀವನು ಚಿದ್ದೇಹ ಮತ್ತು ಲಿಂಗದೇಹ ಸಹಿತನಾಗಿಯೇ ಮತ್ತೊಂದು ದೇಹ ವನ್ನು ಹೊಂದುತ್ತಾ ಅಭಿಮಾನ ನಾಶವಾಗುವವರೆಗೂ ಸಂಸಾರದಲ್ಲಿ ಸುತ್ತುತ್ತಿರು ವನು. ಶ್ರೀಹರಿಯು ಪ್ರೇರಕನಾಗಿ ಅನ್ನಮಯ, ಪ್ರಾಣಮಯ, ಮನೋಮಯ ಕೋಶಗಳಲ್ಲಿದ್ದು ಜೀವನಿಗೆ ಅವನ ಕರ್ಮಾನುಸಾರವಾಗಿ ದೇಹಗಳನ್ನು ಕೊಡುತ್ತಲೇ

ಇರುವನು. ಆವನು ಅನುಗ್ರಹಿಸಿ, ಅನುಭೂತ ದೇಹವನ್ನು ತಾನೂ ಬಿಟ್ಟು, ತನ್ನ ಪ್ರತಿಬಿಂಬನಾದ ಜೀವನನ್ನೂ ಬಿಡಿಸಿದ ತಕ್ಷಣ ಜೀವನು ಮುಕ್ತನೆನಿಸಿ ಸಾಂಸಾರಿಕ ಕ್ಲೇಶ, ಮೋಹಾದಿಗಳಿಲ್ಲದೆ ಸುಖಿಸುವನು.

ದೇಹವು ಅನಿತ್ಯ. ಅದನ್ನು ನಿತ್ಯವಾಗಿಸಲು ಸಾಧ್ಯವಿಲ್ಲ. ಒಂದು ಕಥೆಯನ್ನು ಹೇಳುವೆನು ಕೇಳಿ :--

ಬೇಡನೊಬ್ಬನು ಬಲೆಬೀಸಿ ಹಕ್ಕಿಗಳನ್ನು ಹಿಡಿದು ಜೀವಿಸುತ್ತಿದ್ದನು. ಒಂದು ದಿನ ಕುಲಿಂಗ ಅಂದರೆ ಮರಕುಟುಕನಹಕ್ಕಿಮಿಥುನವು ಹಾರಾಡುತ್ತಿದ್ದುದನ್ನು ಕಂಡು ಬೇಡನು ಬಲೆ ಬೀಸಿದನು. ಹೆಣ್ಣು ಹಕ್ಕಿ ಕುಲಿಂಗವು ಬಲೆಯೊಳಗಿನ ಕಾಳಿನಾಸೆ ಯಿಂದ ಬಲೆಯೊಳಗೆ ಬಿದ್ದಿತು. ಗಂಡು ಹಕ್ಕಿ ಕುಲಿಂಗವು ಅದನ್ನು ನೋಡಿ ಬಿಡಿ ಸಲು ಕೈಲಾಗದೆ ದುಃಖದಿಂದ ರೋದಿಸಿತು.

**ಕುಲಿಂಗ :--** ಅಯ್ಯೋವಿಧಿಯೆ ! ನಿನಗೇಕೆ ಕರುಣೆಯಿಲ್ಲ ? ಕೃಪಣಳಾಗಿ ಬಲೆಯಲ್ಲಿ ಸಿಕ್ಕಿ ಅಳುತ್ತಿರುವ ಮತ್ತು ನನ್ನನ್ನು ನೋಡಿ ವಿಲಪಿಸುವ ವಿಹಂಗಿಯ ಕಣ್ಣೀರನ್ನು ಒರೆಸಲಾರದೆ ಇರುವ ನನ್ನನ್ನೂ ಒಯ್ದುಬಿಡು. ಅರ್ಧಶರೀರವನ್ನು ಕೊಂದು ಉಳಿದ ಅರ್ಧಶರೀರವನ್ನು ಉಳಿಸಲಾಗುವುದೆ ? ವಿಧುರನಾಗಿ ನಾನೆಂತು ಬಾಳಲಿ ? ರೆಕ್ಕೆಪುಕ್ಕ ಬಲಿಯದ ಎಳೆಯ ಮಕ್ಕಳನ್ನು ಹೇಗೆ ಸಲಹಲಿ ? ಈ ತಬ್ಬಲಿ ಗಳು ತಾಯಿಯ ಬರವನ್ನು ಕಾಯ್ದು ಕಣ್ಣೀರಿಡುತ್ತಿವೆ. ಏನಮಾಡಲಿ ?

ಹೀಗೆ ಪ್ರಿಯೆಯ ವಿಯೋಗದಿಂದ ರೋದಿಸುತ್ತಿದ್ದ ಕುಲಿಂಗವನ್ನು ನೋಡಿ ಮೃತ್ಯುವಿನಿಂದ ಪ್ರೇರಿತನಾದ ಬೇಡನು ಮರದ ಬುಡದಲ್ಲಿ ಅವಿತುಕೊಂಡು ಗುರಿ ಯಿಟ್ಟು ಬಾಣದಿಂದ ಅದನ್ನು ಹೊಡೆದುಕೊಂದನು.

ಕುಳಿಂಗನಂತೆಯೇ ನೀವೂ ಒಂದು ದಿನ ಸಾಯುವುದು ನಿಜ. ನೂರುವರ್ಷ ರೋದಿಸಿದರೂ ನಿಮ್ಮ ಪತಿಯು ಹಿಂತಿರುಗಿ ಬರಲಾರನು. ನೀವು ಅಳುವುದು ವ್ಯರ್ಥ.

(ಹೀಗೆ ಹೇಳಿ ಯಮರಾಜನು ಕಣ್ಮರೆಯಾದನು. ಆಗ ಎಲ್ಲರೂ ಆಶ್ಚರ್ಯ ದಿಂದ ಆ ಬಾಲಕನ ಮಾತನ್ನು ನೆನೆದು ದೇಹಾದಿಗಳು ಅನಿತ್ಯಗಳೆಂದು ತಿಳಿದು ಸುಯಜ್ಞನಿಗೆ ಉತ್ತರಕ್ರಿಯೆಗಳನ್ನು ಮಾಡಿದರು.)

**ಹಿರಣ್ಯಕಶಿಪು :--** ಅಮ್ಮಾದಿತಿ ! ನನ್ನ ನಿಮ್ಮ, ಎಲ್ಲರ ದೇಹಗಳೂ ಅನಿತ್ಯಗಳು. ದೇಹದ ಸಲುವಾಗಿ ಅತ್ತರೆ ಫಲವಿಲ್ಲ. ಚೇತನವೆಲ್ಲಿ ? ದೇಹವೆಲ್ಲಿ ?

ಅವುಗಳ ಪರಸ್ಪರ ಸಂಬಂಧವು ಎಷ್ಟು ನಶ್ವರ ? ಹೀಗಿದ್ದೂ, 'ನಾನು-ನನ್ನದು' ಎಂಬ ದುರಭಿಮಾನವೂ, 'ನೀನು-ನಿನ್ನದು' ಎಂಬ ದ್ವೇಷಭಾವನೆಯೂ ಬರಬೇಕಾದರೆ ಅಜ್ಞಾನವೇ ಕಾರಣ.

(ಹೀಗೆ ಹೇಳಿದ ಹಿರಣ್ಯಕಶಿಪುವಿನ ಯಥಾರ್ಥ ವಚನವನ್ನು ಕೇಳಿ ದಿತಿಯು ಪುತ್ರಶೋಕವನ್ನು ಬಿಟ್ಟು ಶ್ರೀಹರಿಯ ಧ್ಯಾನದಿಂದ ನಿಶ್ಚಿಂತಳಾದಳು.)

ವಿಶೇಷ :- ಶಾಸ್ತ್ರಸಂಮತವಾದ ತತ್ತ್ವೋಪದೇಶವನ್ನು ಹಿರಣ್ಯಕಶಿಪುವಿನಲ್ಲಿದ್ದ ಸುಜೀವಿಯಾದ ಜಯನು ಮಾಡಿದನೆಂದು ತಿಳಿಯಬೇಕು.

## ಎರಡನೆಯ ಅಧ್ಯಾಯ ಮುಗಿದುದು

**ನಾರದ :-** ಧರ್ಮರಾಜನೇ ! ಹಿರಣ್ಯ ಕಶಿಪುವು ಅಜರಾಮರನಾಗಲು ಬಯಸಿ ಮಂದರಗಿರಿಯ ತಪ್ಪಲಿನಲ್ಲಿ ಘೋರ ತಪಸ್ಸನ್ನು ಆರಂಭಿಸಿದನು. ಆಗ ದೇವತೆಗಳು ತಮ್ಮ ತಮ್ಮ ಸ್ಥಾನಗಳನ್ನು ಹೊಂದಿದರು. ದೈತ್ಯನು ಬಹುಕಾಲ ತಪಸ್ಸನ್ನು ಮಾಡಿದುದರಿಂದ ಅವನ ಶಿರಸ್ಸಿನಿಂದ ಹೊರಟ ಸಧೂಮಾಗ್ನಿಯು ಮೂರುಲೋಕಗಳನ್ನೂ ದಹಿಸಲಾರಂಭಿಸಿತು. ತಪೋಜ್ವಾಲೆಯಿಂದ ತಪ್ತರಾದ ದೇವತೆಗಳು ಬ್ರಹ್ಮದೇವರ ಬಳಿಗೆ ಬಂದು ಮರೆಯಿಟ್ಟರು.

**ದೇವತೆಗಳು :-** ಜಗತ್ಪತಿಯೆ ! ದೈತ್ಯನ ತಾಮಸ ತಪಸ್ಸನ್ನು ಸಹಿಸಲು ಆಸದಳ. ದಯೆ ಮಾಡಿ ಅವನ ತಪಸ್ಸನ್ನು ನಿಲ್ಲಿಸಿರಿ. ಇಲ್ಲವಾದರೆ ಸರ್ವಲೋಕಗಳೂ ಸುಟ್ಟು ಹೋಗುವುವು. ದೈತ್ಯನ ಅಭಿಪ್ರಾಯವೇನೆಂದರೆ :- ಬ್ರಹ್ಮನು ತಪಸ್ಸಿನಿಂದ ಉತ್ತಮವಾದ ಸತ್ಯಲೋಕವನ್ನು ಸಂಪಾದಿಸಿರುವನು. ನಾನೂ ಅದರಂತೆ ತಪಸ್ಸನ್ನು ಮಾಡಿ ಆ ಬ್ರಹ್ಮ ಪದವಿಯನ್ನು ಸಾಧಿಸಿಯೇ ತೀರುವೆನು.

ಹೀಗೆ ದೈತ್ಯನು ನಿಶ್ಚಯಿಸಿರುವನು.

ಇಲ್ಲಿ ತಿಳಿಯಬೇಕಾದ ತಾತ್ಪರ್ಯವೇನೆಂದರೆ :- ಯೋಗ್ಯರಲ್ಲಿ ಋಜುಗಣದವರು ಅಯೋಗ್ಯರಲ್ಲಿ ಮಧು, ಕೈಟಭ, ಹಿರಣ್ಯಕಶಿಪು ಮೊದಲಾದ ದೈತ್ಯಶ್ರೇಷ್ಠರು ಈ ಉಭಯರು ಮಾತ್ರ ಬ್ರಹ್ಮಪದವಿಯನ್ನು ಬಯಸುವರು. ಇದು ದೇವತೆಗಳಿಗೆ ಚೆನ್ನಾಗಿ ತಿಳಿದಿರುವುದು. ಅಯೋಗ್ಯಪದಕ್ಕಾಗಿ ತಪಸ್ಸೇ ಮೊದಲಾದುವುಗಳನ್ನು ಮಾಡತಕ್ಕ ದೈತ್ಯರಿಗೆ ತಪಸ್ಸು ವ್ಯರ್ಥವೆಂಬ ಬುದ್ಧಿಯು ಹುಟ್ಟಬಾರದು ಎಂಬುದಕ್ಕಾಗಿ, ಬ್ರಹ್ಮದೇವರಲ್ಲಿ ವಿಜ್ಞಾಪಿಸಿಕೊಂಡರೆಂದು ತಿಳಿಯಬೇಕು.

ಪ್ರಭೋ ! ಜಗದ್ರಕ್ಷಕರಾದ ತಮ್ಮಿಂದ ಸಜ್ಜನರಿಗೆ ಶಾಂತಿ ಸಮಾಧಾನಗಳು, ಸುಖ ಸೌಭಾಗ್ಯಗಳು, ವಿಜಯ ಮತ್ತು ಕ್ಷೇಮ ಇವೆಲ್ಲ ದೊರೆಯಬೇಕು, ಅನನ್ಯ ಭಜಕರಾದ ನಮ್ಮನ್ನು ರಕ್ಷಿಸಬೇಕು.

(ಇದನ್ನು ಕೇಳಿದ ಕೂಡಲೇ ಬ್ರಹ್ಮದೇವರು ಭೃಗು ದಕ್ಷಾದಿಗಳಿಂದ ಸಹಿತರಾಗಿ ಹಂಸವನ್ನೇರಿ ಹೊರಟುಬಂದರು. ಅಲ್ಲಿ ಹುತ್ತ, ತೃಣ, ನಾನಾ ಜಾತಿಯ ಬಿದುರು ಮೆಳೆಗಳಿಂದ ಆವೃತನಾದ ದೈತ್ಯನನ್ನು ನೋಡಿದರು. ಅವನ ದೇಹವನ್ನೆಲ್ಲ ಕೀಟಗಳು ಮುತ್ತಿ ತಿನ್ನುತ್ತಿವೆ. ಅಸ್ತಿಮಾತ್ರಾವಶಿಷ್ಟವಾದ ದೇಹವನ್ನು ನೋಡಿ ಬ್ರಹ್ಮದೇವರು ವಿಸ್ಮಿತರಾಗಿ ನಗುತ್ತ "ಕಾಶ್ಯಪ ! ಎಳೇಳು ! ನಿನ್ನ ಹಾಗೆ ಕಠೋರ ತಪಸ್ಸನ್ನು ಹಿಂದೆ ಯಾರೂ ಮಾಡಿಲ್ಲ. ಬೇಕಾದ ವರಗಳನ್ನು ಕೇಳು ಕೊಡುವೆನು" ಎಂದರು. ಮತ್ತು ಕಮಂಡಲುವಿನ ಜಲವನ್ನು ಪ್ರೋಕ್ಷಿಸಿದರು. ಆದರಿಂದ ವಜ್ರ ದೇಹವನ್ನು ಹೊಂದಿದ ದೈತ್ಯನು ಎದ್ದುನಿಂತು ನಮಸ್ಕರಿಸಿ, ಕೈಮುಗಿದುಕೊಂಡು ಸ್ತುತಿಸಿದನು. ಇದು ಮಿಶ್ರಸ್ತುತಿಯಾಗಿದೆ.

**ಹಿರಣ್ಯಕಶಿಪು :–** (ಹರಿಪರವಾದ ಅರ್ಥ :–) ಪ್ರಳಯಕ್ಕೆ ಪ್ರವರ್ತಕನಾಗಿ ಕತ್ತಲಿಂದ ಆವೃತವಾಗಿದ್ದ ಜಗತ್ತನ್ನು ಸ್ವಸಾಮರ್ಥ್ಯದಿಂದ ಪ್ರಕಟಿಸಿದ, ಸ್ವಯಂ ಜ್ಯೋತಿ ಸ್ವರೂಪನಾದ ಶ್ರೀಹರಿಗೆ ನಮಸ್ಕಾರ !

(ಬ್ರಹ್ಮಪರವಾದ ಅರ್ಥ :–)

ಹರಿಯಿಂದ ಸೃಷ್ಟವಾಗಿ ಜಗತ್ತನ್ನು ಆವರಿಸಿದ್ದ ಕತ್ತಲನ್ನು ಹರಿಯ ಪ್ರೇರಣೆ ಯಿಂದ ಓಡಿಸಿ ಆ ಜಗತ್ತನ್ನು ಪ್ರಕಟಿಸುವವನೂ, ಮನ್ವಾದಿಗಳ ಮೂಲಕ ಪಾಲಿಸುತ್ತ ರುದ್ರನ ಮೂಲಕ ಸಂಹಾರ ಮಾಡುವವನೂ, ಮಹತ್ತತ್ತ್ವಾಭಿ ಮಾನಿಯೂ ಆದ ಬ್ರಹ್ಮದೇವನಿಗೆ ನಮಸ್ಕಾರ !

(ಹರಿಪರ :–) ಆದಿಯಲ್ಲಿ ಶ್ರೀವಿಷ್ಣುವು ವಾಸುದೇವ ರೂಪದಿಂದ ವ್ಯಕ್ತ ನಾದನು. ಅವನು ವ್ಯಂಜಕನು. ಜ್ಞಾನ ವಿಜ್ಞಾನಗಳೇ ಅವನ ದೇಹ, ವಿರಾಟ್ ಪುರುಷ ರೂಪದಿಂದ ಪ್ರಾಣೇಂದ್ರಿಯಾದಿ ಹದಿನೇಳು ವಿಕಾರಗಳೊಡನೆ ಅಂಡದೊಳಗೆ ವ್ಯಕ್ತನಾದ ಶ್ರೀಹರಿಗೆ ನಮಸ್ಕಾರ !

(ಬ್ರಹ್ಮಪರ :–) ಶ್ರೀಹರಿಯ ಪುತ್ರನೂ, ಜಗತ್ಸೃಷ್ಟಿಗೆ ಕಾರಣನೂ, ಜ್ಞಾನ ವಿಜ್ಞಾನಗಳನ್ನು ಉಪದೇಶಿಸುವ ದೇಹವುಳ್ಳವನೂ, ಅಂಡದೊಳಗೆ ವಿರಾಟ್ ಎಂಬ ದೇಹವನ್ನು ಪಡೆದವನೂ ಆದ ಚತುರ್ಮುಖನಿಗೆ ನಮಸ್ಕಾರ !

(ಹರಿಪರ .–) ಶ್ರೀಹರಿಯೇ ! ನೀನು ಮುಖ್ಯಪ್ರಾಣನಿಂದ ಯುಕ್ತನಾಗಿ ಸ್ಥಾವರ ಜಂಗಮ ಜಗತ್ತಿನ ಪ್ರವರ್ತಕನಾಗಿರುವೆ. ಮನಸ್ಸಿಗೆ ಸ್ಮರಣಶಕ್ತಿಯನ್ನು ಕೊಡುವೆ. ಮನ ಆದಿ ಇಂದ್ರಿಯಗಳಿಗೆ ಸ್ವಾಮಿಯೂ, ಶಬ್ದಾದಿಗಳ ಪ್ರವರ್ತಕನೂ ಆಗಿರುವೆ. ವೇದಗಳಿಂದ ಯಜ್ಞ ವಿಸ್ತಾರ ಮಾಡಿ, ಅವುಗಳಿಂದ ಪೂಜಿತನಾಗುವವನೂ ನೀನೆ. ನೀನು ಜೀವನಿಗೆ ಜೀವನಪ್ರದನು. ಶ್ರೇಷ್ಠನು. ಅಪ್ರಮೇಯನು. ಸರ್ವಜ್ಞನು. ಮುಕ್ತಪ್ರೇರಕನು. ಅವಸ್ಥಾತ್ರಯನಿಯಾಮಕನು. ಕಾಲದ ಅವಯವಗಳಾದ ಲವ, ನಿಮೇಷಾದಿಗಳಿಂದ ಜನರ ಆಯುಷ್ಯವನ್ನು ನಾಶ ಮಾಡುವವನು. ನಿರ್ವಿಕಾರ. ವ್ಯಾಪ್ತ. ಸರ್ವೋತ್ತಮನು. ಅಜನು. ಪರಮ ಪೂಜ್ಯನು. ಆದಾನಾದಿ ಕರ್ತನು, ಜೀವ ಪ್ರಾಣಾಧಾರಕನು.

(ಬ್ರಹ್ಮಪರ :–) ನೀನು ನಾಶರಹಿತನಾದ ಶ್ರೀಹರಿಯಲ್ಲಿಯೇ ಮನಸ್ಸನ್ನು ಇಟ್ಟಿರುವವನು. ಕಾಲಾಭಿಮಾನಿಯು. ನಿದ್ರಾರಹಿತನು. ಜೀವಾಂತರ್ಯಾಮಿಯು. ಜೀವೋತ್ತಮನು. ಅಕಾರವಾಚ್ಯ ಶ್ರೀಹರಿಯ ಪುತ್ರನು. ಜೀವಪ್ರಾಣಾಧಾರಕನು.

(ಹರಿಪರ :–) ಶ್ರೀಹರಿಯೇ ! ತ್ರಿಕಾಲದ ಜಗತ್ತನ್ನು ಒಳಹೊರಗೆ ವ್ಯಾಪಿಸಿರುವುದರಿಂದ ನಿನ್ನ ಹೊರತು ಸ್ವತಂತ್ರರು ಯಾರೂ ಇಲ್ಲ. ವೇದಾದಿ ಸಕಲ ವಿದ್ಯೆಗಳೂ ನಿನ್ನ ದೇಹವನ್ನು ಆಶ್ರಯಿಸಿಕೊಂಡಿವೆ. ಅನಂತ ಬ್ರಹ್ಮಾಂಡಗಳನ್ನು ಕುಕ್ಷಿಯಲ್ಲಿ ಧರಿಸಿರುವೆ. ಗುಣಪೂರ್ಣ, ಅವಸ್ಥಾತ್ರಯವಿದೂರ, ವಿಭುವೆ ! ಷಡ್ಗುಣನೂ, ಸನಾತನನೂ, ಸ್ವಾಮಿಯೂ, ಸ್ವಪ್ರಸಾದವಿಲ್ಲದೆ ಪ್ರಕಟನಾಗದವನೂ ಆದ ನೀನು ವಿರಾಣ್ಣಾಮಕ ಬ್ರಹ್ಮದೇವನೊಳಗಿದ್ದು ಇಂದ್ರಿಯ, ಮನಸ್ಸು, ಪ್ರಾಣ, ವಿಷಯಗಳನ್ನು ಭೋಗಿಸುವ ಕಾರಣ ಈ ಬ್ರಹ್ಮಾಂಡವು ನಿನ್ನ ಶರೀರ ಸ್ಥಾನೀಯವಾಗಿದೆ. ಅನಂತನೂ, ಸ್ವಪ್ರಸಾದ ವಿನಾ ಅಗೋಚರನೂ ಆದ ರೂಪದಿಂದ ಸಕಲ ಜಗದ್ವ್ಯಾಪ್ತನೂ, ಚೇತನಾಚೇತನ ಪ್ರಕೃತಿಗಳಿಗೆ ಪ್ರೇರಕಶಕ್ತಿಯೂ ಆದ ಭಗವಂತನಿಗೆ ನಮಸ್ಕಾರ !

ವರದರಾಜನೇ ! ನೀನು ವರವನ್ನು ಕೊಡುವುದಾದರೆ ನಿನ್ನಿಂದ ಸೃಷ್ಟವಾದ ಯಾವ ಭೂತದಿಂದಲೂ ನನಗೆ ಮರಣ ಬಾರದಂತಾಗಲಿ. ಮರಣವು ಹೊರಗೂ ಬೇಡ, ಒಳಗೂ ಬೇಡ, ಆಯುಧಗಳಿಂದ ಬೇಡ, ನೆಲದ ಮೇಲೆ, ಆಕಾಶದಲ್ಲಿ ಬೇಡ, ನರಸುರಾಸುರ ಮಹೋರಗರಿಂದ ಮರಣ ಬೇಡ. ಪ್ರಾಣವಿರುವ, ಅದಿಲ್ಲದಿರುವ ವಸ್ತುಗಳಿಂದ ಮರಣ ಬೇಡ. ಯುದ್ಧದಲ್ಲಿ ನನಗೆ ಪ್ರತಿಭಟರು ಇಲ್ಲದಂತೆ ಮಾಡು. ಏಕಛತ್ರಾಧಿಪತಿ ನಾನಾಗಬೇಕು. ಎಲ್ಲ ಲೋಕಪಾಲಕರ ದಿವ್ಯಶಕ್ತಿಗಳೂ ನನಗೆ

ಬರಬೇಕು. (ವರ, ಶಾಪಕೊಡುವ ಶಕ್ತನಾಗಬೇಕು.) ನನ್ನ ತಪೋ ಮಹಿಮೆಯಿಂದ ಯಾವ ಕುಂದೂ ಇಲ್ಲದೆ ನಾನು ಆನಂದದಿಂದಿರಬೇಕು.

## ಮೂರನೆಯ ಅಧ್ಯಾಯ ಮುಗಿದುದು

ಬ್ರಹ್ಮದೇವರು ಕೇಳಿದ ವರಗಳನ್ನೆಲ್ಲ ಕೊಟ್ಟು ಹೊರಟು ಹೋದರು. ವರವನ್ನು ಪಡೆದ ದೈತ್ಯರಾಜನು ಮದಿಸಿ ಶ್ರೀಹರಿಯಲ್ಲಿ ದ್ವೇಷಮಾಡಿದನು. ಹರಿಯು ತಮ್ಮನನ್ನು ಕೊಂದನೆಂದು ಅವನನ್ನು ನಿಂದಿಸಿದನು. ದೇವಾಸುರ ನರ ಗಂಧರ್ವಾದಿಗಳೆಲ್ಲರನ್ನೂ ಗೆದ್ದು ತನ್ನ ವಶಪಡಿಸಿಕೊಂಡು ಅವರನ್ನು ವಿಪರೀತವಾಗಿ ಹಿಂಸಿಸಿದನು. ಅವರ ಅಧಿಕಾರ, ಸ್ಥಾನ, ತರುಣೀ ರತ್ನಗಳನ್ನು ಕಸಿದುಕೊಂಡು ಭೋಗಿಸಿದನು. ಅಮರಾವತಿಯ ಮಹೇಂದ್ರ ಭವನದಲ್ಲಿ ವಾಸಮಾಡುತ್ತ ಮೂರು ಲೋಕಗಳನ್ನೂ ಆಳತೊಡಗಿದನು. ಮದ್ಯಪಾನದಿಂದ ಮತ್ತನಾಗಿದ್ದ ಅವನನ್ನು ಆದಿತ್ಯಾದಿ ದೇವತೆಗಳನ್ನು ಬಿಟ್ಟು ಉಳಿದ ಉಪದೇವತೆಗಳೆಲ್ಲರೂ ಅವನಿಗೆ ಭೋಗ್ಯ ವಸ್ತುಗಳನ್ನು ತಂದುಕೊಟ್ಟು ಅವನನ್ನು ಸೇವಿಸಿದರು. ಇಷ್ಟು ಭೋಗಗಳನ್ನು ಅನುಭವಿಸುತ್ತಿದ್ದರೂ, ಇಂದ್ರಿಯಗಳನ್ನು ನಿಗ್ರಹಿಸದ ಅವನು ತೃಪ್ತನಾಗದೆ, ಶಾಸ್ತ್ರ ವಿಹಿತ ಮಾರ್ಗವನ್ನೂ ಮೀರಿ ನಡೆಯುತ್ತ ಮೈಮರೆತನು. ಹೀಗೆ ಬಹುಕಾಲ ಕಳೆಯಿತು. ಅವನ ಚಂಡಶಾಸನದಿಂದ ಪೀಡಿತರಾದ ಸುರಕಿನ್ನರಸಿದ್ಧಸಾಧ್ಯ ಮುನಿಶ್ರೇಷ್ಠರು ಅನ್ಯರಕ್ಷಕರಿಲ್ಲವೆಂದರಿತು ಪರಮಾತ್ಮನಲ್ಲಿ ಶರಣು ಹೊಕ್ಕರು. ಆಗ ಅಶರೀರವಾಣಿಯಾಯಿತು.

**ಶ್ರೀಹರಿ :–** ದೇವತೆಗಳಿರಾ ! ಹೆದರಬೇಡಿ. ನಿಮ್ಮೆಲ್ಲರಿಗೂ ಮಂಗಳವಾಗುವುದು. ನನ್ನ ದರ್ಶನವು ಶ್ರೇಯಸ್ಸನ್ನುಂಟು ಮಾಡುವುದು. ದೈತ್ಯಾಧಮನ ಚೇಷ್ಟೆಯೆಲ್ಲ ನನಗೆ ತಿಳಿದಿದೆ. ಆ ನೀಚ-ದೈತ್ಯವನ್ನು ಕೊಂದು ನಿಮ್ಮೆಲ್ಲರಿಗೂ ಸುಖಶಾಂತಿಗಳನ್ನುಂಟು ಮಾಡುವೆನು. ಸ್ವಲ್ಪಕಾಲ ತಡೆಯಿರಿ. ದೇವ, ಗೋವು, ವಿಪ್ರ, ಸಾಧುಗಳಲ್ಲಿ, ಧರ್ಮದಲ್ಲಿ ಮತ್ತು ಧರ್ಮಪಾಲಕನಾದ ನನ್ನಲ್ಲಿ ದ್ರೋಹ ಮಾಡಿದವನು ತಡವಿಲ್ಲದೆ ನಾಶವನ್ನು ಹೊಂದುವನು. ಅವನಿಗೆ ಪ್ರಹ್ಲಾದನೆಂಬ ಮಗನು ಹುಟ್ಟುವನು. ಅವನು ವೈರವಿರದವನು, ಭಕ್ತೋತ್ತಮನು, ಮಹಾತ್ಮನು. ಅಂತಹ ಮಗನನ್ನು ಆ ದೈತ್ಯನು ಕೊಲ್ಲಲು ಯತ್ನಿಸಿದಾಗ, ಅವನಿಗೆ ಸಾವಿರಾರು ವರಗಳಿದ್ದರೂ ಅವನ್ನು ಲೆಕ್ಕಿಸದೆ ನಾನೇ ಆ ಹಿರಣ್ಯಕಶಿಪುವನ್ನು ಬಗೆದು ಕೊಲ್ಲುವೆನು.

**ವಿಶೇಷ :–** ಪ್ರಹ್ಲಾದನು ಹುಟ್ಟುವುದಕ್ಕೆ ಮುಂಚಿತವಾಗಿಯೇ ಶ್ರೀಹರಿಯು ಅವನಿಗೆ ನಾಮಕರಣ ಮಾಡಿದ್ದಾನೆ. ಮತ್ತು ಅವನಲ್ಲಿರುವ ಸ್ವಾಭಾವಿಕ ಸದ್ಗುಣ

ಗಳನ್ನು ಬಹಿರಂಗಪಡಿಸಿರುವವನು. ಇದನ್ನು ಚಿಂತಿಸಿದರೆ ಪ್ರಹ್ಲಾದನು ಹರಿಭಕ್ತಾಗ್ರೇಸರನು ಎಂಬ ಅವನ ಮಹಾಮಹಿಮೆಯು ತಿಳಿದು ಬರುವುದಲ್ಲವೆ ?

ಹೀಗೆ ಶ್ರೀಹರಿಯು ಹೇಳಲು ದೇವತೆಗಳು ಅವನಿಗೆ ನಮಸ್ಕರಿಸಿ, ಆ ದೈತ್ಯನು ಸತ್ತನೆಂದೇ ನಿಶ್ಚಯಿಸಿ ಶಾಂತರಾಗಿ ತಮ್ಮ ತಮ್ಮ ಸ್ಥಳಕ್ಕೆ ಹಿಂತಿರುಗಿ ಹೋದರು.

ನಾರದ :-, ಧರ್ಮರಾಜನೇ ! ಆ ದೈತ್ಯಪತಿಗೆ ನಾಲ್ವರು ಪುತ್ರರು. ಅವರಲ್ಲಿ ಪ್ರಹ್ಲಾದನು ವಯಸ್ಸಿನಲ್ಲಿಯೂ ಜ್ಯೇಷ್ಠನು. ಗುಣದಲ್ಲಿಯೂ ಶ್ರೇಷ್ಠನು.

## ಪ್ರಹ್ಲಾದರಾಜರ ಮಹಿಮೆ

ಪ್ರಹ್ಲಾದನು ಶ್ರೀಹರಿಪಾದಕಂಜನಿಷೇವಣದಿಂದ ಸಮಸ್ತ ಸಂಪದ್ಭರಿತನಾದರೂ, ಬ್ರಾಹ್ಮಣರಿಗೆ ವರಪ್ರದನು. ಶೀಲಸಂಪನ್ನನು. ಸತ್ಯಸಂಧನು. ಜಿತೇಂದ್ರಿಯನು. ಇಂತಹ ಸದ್ಗುಣಗಣಮಂಡಿತನಾಗಿ ಧವಲಯಶಶ್ಚಂದ್ರಿಕೆಯಿಂದ ಈ ಲೋಕವನ್ನಲ್ಲದೆ ದೇವಲೋಕವನ್ನೂ ಬೆಳಗಿದನು. (ಅಭಿನವ ಜನಾರ್ದನವಿಠಲಾಂಕಿತ ದಾಸರೂ ಹೇಳುವರು :-)

ಅಭಿನವ ಜನಾರ್ದನ ವಿಠಲನ ತಾ ಧ್ಯಾನಿಸುವ ಕೇಳಮ್ಮಯ್ಯ ।
ಅಭಿವಂದಿತರಿಗೆ ಅಖಿಲಾರ್ಥಗಳನು ಕೊಡುವ ಕೇಳಮ್ಮಯ್ಯ ।
ನಭಮಣಿಯಂದದಿ ತ್ರಿಭುವನದೋಳ್ ರಾಜಿಸುವ ಕೇಳಮ್ಮಯ್ಯ ।
ಶುಭಗುಣನಿಧಿ ಶ್ರೀರಾಘವೇಂದ್ರಗುರು ಅಬ್ಜಭವಾಂಡಕೆ ಪ್ರಬಲಕಾಣಮ್ಮ॥೩।
ತುಂಗಾತೀರದಿ ನಿಂತ ಸುಯತಿವರನಾರೇ ಪೇಳಮ್ಮಯ್ಯ ॥ಪ॥

"ಶ್ರೀಹರಿಯು ನನ್ನ ಸ್ವಾಮಿಮಾತ್ರವಲ್ಲ ಸರ್ವಸ್ವಾಮಿಯಾಗಿರುವನು" ಎಂದರಿತು ಸರ್ವಸಜ್ಜನರಿಗೆ ದಿವಿಜದ್ರುಮನೆನಿಸಿ ಸರ್ವಾಭೀಷ್ಟಸಿದ್ಧಿಯನ್ನಿತ್ತನು. ಸಕಲವಿದ್ಯಾಪ್ರವೀಣನಾದರೂ ಮೋಹವನ್ನು ಹೊಂದದೆ, ಸುಂದರ ರೂಪವುಳ್ಳವನಾದರೂ ದುಷ್ಟಕಾಮಕ್ಕೆಡಗೊಡದೆ, ಸಂಪದ್ಭರಿತನಾದರೂ ಲೋಭವನ್ನು ಹತ್ತಿರ ಸೇರಿಸದೆ, ಕುಲೀನನಾದರೂ 'ಮತ್ಸರಿಸದೆ, ಚಿರಾಯುವಾದರೂ ಮದಿಸದೆ, ಸಾರ್ವಭೌಮನ ಸುತನಾದರೂ ಕ್ರೋಧಾದಿಗಳಿಗೆ ವಶನಾಗದೆ ಪ್ರಹ್ಲಾದನು ನಿರಸ್ತದೋಷನೂ, ನಿರವದ್ಯವೇಷನೂ ಆಗಿರುವನು. ಅವನಿಗೆ ವ್ಯಸನ ಬಂದಾಗ ಏನಾದರೂ ಉದ್ವೇಗವೆ ? ನೋಡಿದ್ದು ಕೇಳಿದ್ದು ಎಲ್ಲ ವಿಷಯ ಸುಖವು ಬರಲಿ ಎಂಬ ಸ್ಪೃಹೆಯೆ ? ಸರ್ವತಂತ್ರ (ಶಾಸ್ತ್ರ) ಸ್ವತಂತ್ರನಾದ ಪ್ರಹ್ಲಾದನು ಹತಾನ್ಯತಂತ್ರನೂ (ಅಂದರೆ ದುಷ್ಟಶಾಸ್ತ್ರವನ್ನು ದೂರ ಇಟ್ಟವನೂ), ಹರಿಪರತಂತ್ರನೂ ಆಗಿರುವನು. ಅಸುರ ಜಾತಿಯವನಾದರೇನು ? ದೇವಸ್ವಭಾವದವನಾಗಿಯೇ ಮೆರೆದನು. ಬುದ್ಧಿಂ

ದ್ರಿಯ ಮನಃ ಪ್ರಾಣಗಳನ್ನು ಜಯಿಸಿ ಹರಿಯ ವಶಮಾಡಿ, ಜ್ಞಾನಭಕ್ತಿಗಳನ್ನು ಗಳಿಸಿ ದಯಾದಾಕ್ಷಿಣ್ಯ ವೈರಾಗ್ಯ ವಾಕ್ಪಾಟವ ಮುಖ್ಯ ಗುಣಪರಂಪರಾಸಂಪನ್ನನಾಗಿ ರುವನು.

ಧರ್ಮರಾಜನೇ ! ಕವಿಜನರು ಅವನನ್ನು ವರ್ಣಿಸಲು ತೊಡಗಿ, ಅವನ ಮಹಾ ಮಹಿಮೆಗೆ ಬೆರಾರು ಹೋಗಿ, ಸಂಪೂರ್ಣವಾಗಿ ಹೊಗಳಲಾರದೆ ಸಮಿಸಿ ಸುಮ್ಮನಾಗುವರು. ಹೆಚ್ಚೇನು ಕೇಳು ! ಜಾತಿಯಿಂದ ಶತ್ರುಗಳಾದ ದೇವತೆಗಳೂ ಸಾಧುಗಳ ಗುಣವನ್ನು ಗಾನ ಮಾಡಿಸುವ ಸಂದರ್ಭದಲ್ಲಿ ಭಕ್ತಿಯಲ್ಲಿ ಪ್ರಹ್ಲಾದನೆಂದು ತಮ್ಮ ಸಭೆಗಳಲ್ಲಿ ಗಂಧರ್ವರಿಂದ ಹೊಗಳಿಸಿ ಹೊಗಳಿಸಿ ಅದನ್ನು ಕೇಳಿ ಸಂತೋಷ ಪಡುವರು. ಆದುದರಿಂದಲೇ ಪ್ರಹ್ಲಾದ ಚರಿತ್ರೆಯನ್ನು ಹೇಳೆಂದು ಧರ್ಮಪ್ರಭು ವಾದ ನೀನು ಪ್ರಶ್ನಿಸಿರುವುದೇ ಸಾಕ್ಷಿ. ಸಕಲಸದ್ಗುಣಗಳೆಂಬ ರತ್ನಗಳಿಂದ ಪೂರ್ಣ ವಾದ ಹರಿಭಕ್ತಿನಾಮಕ ಸಮುದ್ರಕ್ಕೆ ರಾಜನು ಪ್ರಹ್ಲಾದನು. ಅವನ ಹರಿಭಕ್ತಿಯು ಸ್ವಭಾವ ಸುಂದರವಾಗಿದೆ. ಎಳೆಯ ವಯಸ್ಸಿನ ಆಟದ ಚಪಲತೆ ಅವನಿಗಿಲ್ಲ. ಕೂಗಿ ದರೂ ಅವನು ಮಾತನಾಡಲೊಲ್ಲ. ಯಾವ ವಸ್ತುವನ್ನೂ ನೋಡಲೊಲ್ಲನು. ಏಕೆಂದರೆ ಶ್ರೀಕೃಷ್ಣನೆಂಬ ಗ್ರಹವು ಅವನನ್ನು ಹಿಡಿದಿದ್ದಿತು. ಆದರಿಂದ ಹರಿಪಾದ ಚಿಂತನಾಮೃತದಿಂದ ಅವನ ಅಂತರಂಗವು ತುಂಬಿ ತುಳುಕುತ್ತಿತ್ತು. ಆದ್ದರಿಂದಲೇ ಅವನು ಜಡನಂತೆ ಉನ್ಮತ್ತನಂತೆ ಕಾಣಿಸುತ್ತಿದ್ದನು. ಕುಳಿತರೆ, ನಿಂತರೆ, ನಡೆದರೆ, ಉಂಡರೆ, ಹಾಲು ಕುಡಿದರೆ, ಮಾತಾಡಿದರೆ, ಆ ಕರ್ಮಗಳನ್ನು ಅಭಿಮಾನದಿಂದ ಮಾಡದೆ ಗೋವಿಂದ ಪರಿರಂಭಿತನಾಗಿ ಅಂದರೆ ಶ್ರೀಹರಿಯನ್ನೇ ಸ್ಮರಿಸುತ್ತಾ ಇರುವ ವನಾಗಿ, ಜಗತ್ತನ್ನೇ ಮರೆತು ಬಿಡುತ್ತಿದ್ದನು. ಗೋವಿಂದಪಾದಾರವಿಂದ ಮಕರಂದ ಮಿಳಿಂದನಾಗಿ ನಗುವನು. ಒಮ್ಮೆ ರೋದಿಸುವನು. ಮತ್ತೊಮ್ಮೆ ನಾಟ್ಯವಾಡುವನು. ಶ್ರೀಹರಿಯ ಧ್ಯಾನದಿಂದ ಪುಲಕಿತಗಾತ್ರನಾಗಿ, ಬಾಷ್ಪಾಕುಲನೇತ್ರನಾಗಿ, ವಿಷಯ ಗಳನ್ನು ಮರೆತು ನಿಶ್ಚೇಷ್ಟನಾಗಿ ನಿಂತು ಬಿಡುತ್ತಿದ್ದನು. ಅವನ ಮನಸ್ಸು ಹರಿಭಜ ನಾನಂದದಿಂದ ಕದಲುತ್ತಲೇ ಇರಲಿಲ್ಲ. ಬುಧಜನರ ವಿಧೇಯನೂ, ಮಹಾಭಾಗ ಧೇಯನೂ ಆಗಿದ್ದನು.

ಈ ಬಗೆಯಾದ ಹರಿಭಕ್ತಿಯು ಈ ಚಿಕ್ಕ ವಯಸ್ಸಿನಲ್ಲಿಯೇ ಇರಬೇಕಾದರೆ ವಾಯು ದೇವರ ಆವೇಶ ಪ್ರಹ್ಲಾದನಲ್ಲಿರಲೇ ಬೇಕು. ಶ್ರೀವೇದವ್ಯಾಸರು ಗರುಡ ಪುರಾಣದ ಬ್ರಹ್ಮಕಾಂಡದಲ್ಲಿ ಹೀಗೆ ಹೇಳಿರುವರು.

**ಶ್ಲೋಕ|| ವಾಯ್ವಾವೇಶಾಚ್ಚ ಪ್ರಹ್ಲಾದೋ ಹರಿಣಾ ತತ್ತ್ವಮಂಜಸಾ |**
**ಉಪವಿಷ್ಟೋ ಹ್ಯಭೂದ್ವೀಂದ್ರ ಹರಿಭಕ್ತೋ ಮಹಾಪ್ರಭುಃ |**
**ವಾಯ್ವಾವೇಶಾಚ್ಚ ಪ್ರಹ್ಲಾದೋ ನಾರದಾದಧಮಃಸ್ಮೃತಃ ||**

ಶ್ರೀಮದಾಚಾರ್ಯರೂ ಇದನ್ನೇ ಹೇಳುತ್ತಾರೆ :—
**ಹಿರಣ್ಯಕಶಿಪೋಃ ಪುತ್ರಃ ಪ್ರಹ್ಲಾದೋ ಭಗವತ್ಪ್ರಿಯಃ ।**
**ವಾಯುನಾ ಚ ಸಮಾವಿಷ್ಟೋ ಮಹಾಬಲ ಸಮನ್ವಿತಃ ।**

ಇಂತಹ ಮಹಾಭಗವದ್ಭಕ್ತನಾದ ಪುತ್ರನನ್ನು ಹಿರಣ್ಯಕಶಿಪುವು ಮಹಾತ್ಮನೆಂದು ತಿಳಿಯದೆ ಸಂಹರಿಸಲು ಯತ್ನಿಸಿದನು.

**ಧರ್ಮರಾಜ :—** ಸಾಧುವೂ, ಪರಮಶುದ್ಧನೂ ಆದ ಮಗನನ್ನು ಅವನ ತಂದೆಯು ಕೊಲ್ಲಲು ಯತ್ನಿಸಿದನೆ ? ಪುತ್ರರು ಪ್ರತಿಕೂಲರಾಗಿದ್ದರೂ, ಪುತ್ರವತ್ಸಲ ರಾದ ತಂದೆ ತಾಯಿಗಳು ಅವರನ್ನು ನಿಂದಿಸುವುದಿಲ್ಲ. ದಂಡಿಸುವುದಂತೂ ಇಲ್ಲವೇ ಇಲ್ಲ. ಹೀಗಿರುವಾಗ ಸ್ವವಶರೂ, ಸಾಧುಗಳೂ, ಗುರುಪ್ರಿಯರೂ ಆದ ಪುತ್ರರನ್ನು ದಂಡಿಸುವುದು ಪರಮಾಶ್ಚರ್ಯ ಮತ್ತೂ ಅಸ್ವಾಭಾವಿಕ. ಅಂತೂ ಕೊನೆಗೆ ಮಗನಲ್ಲಿ ಮಾಡಿದ ದ್ವೇಷವು ತಂದೆಯ ಮರಣಕ್ಕೆ ಕಾರಣವಾಯಿತು. ಇದು ಕುತೂಹಲ ವನ್ನುಂಟು ಮಾಡಿದೆ. ಆ ಪವಿತ್ರವಾದ ಚರಿತ್ರೆಯನ್ನು ಹೇಳಿರಿ.

## ನಾಲ್ಕನೆಯ ಅಧ್ಯಾಯ ಮುಗಿದುದು

**ನಾರದ :—** ಅಸುರ ಪುರೋಹಿತರಾದ ಶುಕ್ರಾಚಾರ್ಯರಿಗೆ ಶಂಡ, ಮರ್ಕರೆಂಬ ಇಬ್ಬರು ಪುತ್ರರು. ಅವರ ಬಳಿಗೆ ಹಿರಣ್ಯಕಶಿಪುವು ಪ್ರಹ್ಲಾದ, ಅನುಹ್ಲಾದ, ಸಹ್ಲಾದ, ಹ್ಲಾದ ಎಂಬ ತನ್ನ ಮಕ್ಕಳನ್ನು ವಿದ್ಯಾಭ್ಯಾಸಕ್ಕಾಗಿ ಕಳುಹಿಸಿದನು. ಇತರ ದೈತ್ಯ ಬಾಲಕರೂ ಅವರ ಜೊತೆಗೆ ಬಂದು ಸೇರಿದರು. ಗುರುಗಳು ಹೇಳಿದ ಪಾಠ ವನ್ನು ಪ್ರಹ್ಲಾದನು ಕಿವಿಗೆ ಹಾಕಿಕೊಳ್ಳಲಿಲ್ಲ. ಏಕೆಂದರೆ ಆ ಪಾಠವು ಸ್ವರೂಪಾಸದ್ಗ್ರಹಾಶ್ರಯವಾಗಿತ್ತು ಅಂದರೆ ಸ್ವರೂಪ = ಸ್ವತಂತ್ರನಾದ ಹರಿಯ ರೂಪವು ಅಸತ್ — ಶೂನ್ಯ (ಪರಮಾತ್ಮನಿಗೆ ಆಕಾರವಿಲ್ಲ) ಅಥವಾ ಸ್ವರೂಪ — ಪ್ರಪಂಚ ಸ್ವರೂಪವು, ಅಸತ್ = ಶೂನ್ಯ (ಜಗತ್ತು ಮಿಥ್ಯೆ) ಅಥವಾ ಸ್ವರೂಪಾಸತ್ — ಜೀವ ಪರಮಾತ್ಮರಸ್ವರೂಪಗಳು ಅಭಿನ್ನಗಳು. ಅಥವಾ ಸ್ವರೂಪದಿಂದ ಅಯೋಗ್ಯ ಪಕ್ಷ. ಹೀಗೆ ಗುರುಗಳು ವೈಷ್ಣವ ಸಿದ್ಧಾಂತಕ್ಕೆ ವಿರುದ್ಧವಾದ ಪಾಠವನ್ನು ಹೇಳಿಕೊಡುತ್ತಿದ್ದುದರಿಂದ ಪ್ರಹ್ಲಾದನು ಆ ವಚನವನ್ನು ಕಿವಿಗೊಟ್ಟು ಆಲಿಸದೆ, ಪಾಠವನ್ನೂ ಮಾಡದೆ ಹರಿಭಕ್ತಿ ಪೂರ್ಣನಾಗಿದ್ದನು.

ಒಂದು ದಿನ ದೈತ್ಯರಾಜನು ತನ್ನ ಬಳಿಗೆ ಬಂದ ಮಗನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಮುದ್ದಾಡಿ "ಕಂದನೆ ! ನಿನಗೆ ಚೆನ್ನಾಗಿ ತಿಳಿದಿರುವ ಒಂದು ಒಳ್ಳೆಯ ವಿಷಯವನ್ನು ಹೇಳು" ಎಂದನು.

**ಪ್ರಹ್ಲಾದ :–** ಅಸುರವರ್ಯನೇ ! ದೇಹಧಾರಿಗಳು ಸದಾ ವಿಷಯಾಸಕ್ತರಾಗಿ ಮನಸ್ಸು ಸಮಾಧಾನವಿಲ್ಲದೆ ದುಃಖಿಸುತ್ತಿರುವವರು ಸಂಸಾರವೆಂಬ ಹಾಳು ಬಾವಿಯಿಂದ ಮೇಲೆ ಬಂದು, ಅಜ್ಞಾನಾಂಧಕಾರವನ್ನು ಪರಿಹರಿಸಿ ಜ್ಞಾನವೆಂಬ ಬೆಳಕನ್ನುಂಟು ಮಾಡುವ ಸಜ್ಜನರ ಸಂಗಮಾಡಿ, ಹರಿಯನ್ನಾಶ್ರಯಿಸಬೇಕು. ಇದೇ ಮಿಗಿಲಾದ ಒಳ್ಳೆಯ ಮಾತು.

### ಉಗಾಭೋಗ

ಹರಿಯ ಬೇಕು ಹರಿಯನು ಐದುವುದಕ್ಕೆ
ಹರಿಯ ಬೇಕು ಬಹು ಜನ್ಮದಘಗಳನೆಲ್ಲ
ಹರಿಯ ಬೇಕು ಅಜ್ಞಾನ, ಶ್ರುತಿಗೆ ಸಂಮತವಾಗಿ
ಹರಿಯ ಬೇಕು ಮನ ಹರಿಯಲ್ಲಿ ಯಾವಾಗ
ಹರಿಯನ್ನೆ ನೆನೆದವರ ಸಂಸಾರದ ಮೂಲ
ಹರಿಯೆ ಬಲ್ಲನು ಕಾಣೊ ಹದವನರಿತು ಇನ್ನು
ಹರಿಯನ್ನು ಕಾಣದೆ ಸಂಸಾರಾಂಬುಧಿ
ಹರಿಯೊಳಗೆ ಬಿದ್ದು ಹರಿದಾಡುತಿಪ್ಪರ
ಹರಿಯು ನೋಡುವವರ ಕಂಡು ಸಾಧನ ಮಾರ್ಗ
ಹರಿಯು ತೋರಿ ತನ್ನರಿವಂತೆ ಮಾಳ್ಪನು
ಹರಿಯವತಾರ ಗೋಪಾಲವಿಠಲ
ಹರಿಯ ಹೇ ದೊರೆಯೆ ನಾನೆಂದು ಮರೆಯೆ ೧

ಪರಪಕ್ಷವನ್ನು ಅನುಸರಿಸಿರುವ ಮಗನ ಮಾತನ್ನು ಕೇಳಿ ದಾನವೇಂದ್ರನು ನಗುತ್ತ "ಬಾಲರ ಬುದ್ಧಿ ಪರಾನುಕರಣ ಶೀಲವಲ್ಲವೆ ? ಯಾರೋ ಶತ್ರುಗಳು ಇವನಿಗೆ ಈ ಮಾತನ್ನು ಕಲಿಸಿ ಕೆಡಿಸಿರುವರು. ಗುರುಸುತರೇ ! ಇವನನ್ನು ಕರೆದೊಯ್ದು ವಿಷ್ಣುಪಕ್ಷದವರ ಮಾತು ಇವನ ಕಿವಿಗೆ ಬೀಳದಂತೆ ಎಚ್ಚರವಹಿಸಿ ತ್ರಿವರ್ಗಗಳನ್ನು ಚೆನ್ನಾಗಿ ಕಲಿಸಿ" ಎಂದನು.

**ಗುರುಗಳು :–** (ಮನೆಗೆ ಕರೆತಂದು) ಕಂದ ! ಪ್ರಹ್ಲಾದ ! ನಿನಗೆ ಶುಭವಾಗಲಿ. ಸುಳ್ಳು ಹೇಳಬೇಡ. ಇಲ್ಲಿನ ಯಾರಿಗೂ ಇಲ್ಲದ ಹರಿಭಕ್ತಿಯು ದೈತ್ಯ ಕುಲದಲ್ಲಿ ಹುಟ್ಟಿದ ನಿನಗೆ ಸಲ್ಲದು. ಹರಿಯನ್ನಾಶ್ರಯಿಸಬೇಕೆಂದುದನ್ನು ನಿನಗೆ ಯಾರಾದರೂ ಹೇಳಿಕೊಟ್ಟರೋ ಅಥವಾ ನಿನ್ನ ಸ್ವಂತ ಬುದ್ಧಿಯದೊ !

**ಪ್ರಹ್ಲಾದ :–** ಪರಮಸ್ವತಂತ್ರನೂ, ಸರ್ವಕರ್ತನೂ ಆದ ಶ್ರೀಹರಿಯೇ ಸರ್ವರ ಬುದ್ಧಿ ಪ್ರೇರಕನು. ಹೀಗಿರುವಾಗ 'ನಾನೇಕರ್ತನು ಅಥವಾ ನನ್ನ ಬುದ್ಧಿ

ಪ್ರೇರಕನು ಇನ್ನೊಬ್ಬ ಜೀವನು" ಎಂಬ ಅನ್ಯಥಾಜ್ಞಾನವು ಭ್ರಾಂತರಿಗೆ ಶ್ರೀಹರಿಯ ಬಂಧಕಶಕ್ತಿಯಿಂದ ಹುಟ್ಟುತ್ತದೆ. ಇಂತಹ ಶ್ರೀಹರಿಗೆ ನಮಸ್ಕಾರ! ಹರಿಯು ಅನುಗ್ರಹಿಸಿದಾಗಲೇ 'ನಾನು–ನನ್ನದು' ಎಂಬ ರಾಗವು, 'ನೀನು–ನಿನ್ನದು' ಎಂಬ ದ್ವೇಷವೂ ನಾಶವಾಗುವುದು. 'ನಾನೇ ಸ್ವತಂತ್ರನು, ನೀನೇ ಸ್ವತಂತ್ರನು' ಎಂಬುದು ಪಶುಬುದ್ಧಿಯು. ಅದು ನಷ್ಟವಾಗಿ 'ಶ್ರೀಹರಿಯೇ ಸ್ವತಂತ್ರನು ಮತ್ತು ಸಕಲ ಬುದ್ಧಿ, ಇಂದ್ರಿಯಾದಿಗಳ ಸ್ವತಂತ್ರಪ್ರೇರಕನು' ಎಂಬ ಯಥಾರ್ಥಜ್ಞಾನವುಂಟಾಗು ವುದು. ನಾರಾಯಣನು ಅನಂತಮಹಿಮೆಯುಳ್ಳವನು. ಅವನ ಜ್ಞಾನವು ಬ್ರಹ್ಮಾದಿ ಗಳಿಗೂ ಅಗೋಚರವಾಗಿರುವಾಗ ಅನ್ಯಥಾಜ್ಞಾನಿಯು ಅವನನ್ನು ಎಂತು ತಿಳಿಯುವನು ?

ಆ ಸ್ವಾಮಿಯೇ ನನ್ನ ಅಂತರ್ಯಾಮಿಯಾಗಿ ನನ್ನ ಬುದ್ಧಿಯನ್ನು ತನ್ನ ಪಾದಗಳಲ್ಲಿ ರತವನ್ನಾಗಿ ಮಾಡುತ್ತಿರುವನು. ಬ್ರಾಹ್ಮಣೋತ್ತಮನೇ! ಅಯಸ್ಕಾಂತವು ಕಬ್ಬಿಣವನ್ನು ಸೆಳೆಯುವಂತೆ ಚಕ್ರಪಾಣಿಯ ಪಾದವು ನನ್ನ ಮನಸ್ಸನ್ನು ಆಕರ್ಷಿಸು ತ್ತಿದೆ. ಅವನ ಧ್ಯಾನಾಮೃತವನ್ನು ಪಾನಮಾಡಿ ಮತ್ತನಾದ ನನ್ನ ಚಿತ್ತವು ಅಪ್ರಯತ್ನವಾಗಿ ಶ್ರೀಹರಿಯನ್ನೇ ಸೇರಿ ನನ್ನನ್ನು ಅವಶನನ್ನಾಗಿರಿಸಿದೆ. ಇದೂ ಅವನ ಅನುಗ್ರಹವೇ ಸರಿ.

**ಶಂಡ :–** (ಪ್ರಹ್ಲಾದನು ರಾಜಪುತ್ರನಾದ ಕಾರಣ ಅವನನ್ನು ಶಿಕ್ಷಿಸಲು ಹೆದರಿ) ಕೋಲನ್ನು ತನ್ನಿರಿ. ಇವನನ್ನು ಬಲಿಹಾಕುವೆನು. ಕುಲಘಾತುಕನಾದ ಇವನು ನಮ್ಮ ಕೀರ್ತಿಯನ್ನು ಹಾಳುಮಾಡುವನು. ಇವನು ದೈತ್ಯರೆಂಬ ಚಂದನವನದಲ್ಲಿ ಜಾಲಿಮರದಂತೆ ಹುಟ್ಟಿರುವನು. ವಿಷ್ಣುವೆಂಬ ಕೊಡಲಿಯು ಇವನನ್ನು ಅದರ ಕಾವನ್ನಾಗಿ ಮಾಡಿಕೊಂಡು ಸರ್ವದಾನವ ಕುಲವನ್ನೂ ನಾಶ ಮಾಡದೆ ಬಿಡದು.

**ನಾರದ :–** ಹೀಗೆ ತರ್ಜನಭರ್ಜನಾದಿಗಳಿಂದ ಹೆದರಿಸಿ, ಧರ್ಮಾರ್ಥ ಕಾಮಗಳೆಂಬ ತ್ರಿವರ್ಗಪಾಠಗಳನ್ನು ಹೇಳಿಕೊಡಲಾರಂಭಿಸಿದರು. ಅನಧ್ಯಯನ ಕಾಲದಲ್ಲಿ ಒಂದುದಿನ ಗುರುಸುತನು ಪ್ರಹ್ಲಾದನನ್ನು ಅರಮನೆಗೆ ಕರೆತಂದನು. ರಾಜನು ಮಗನನ್ನು ಅಪ್ಪಿ ಮುದ್ದಾಡಿ ತೊಡೆಯ ಮೇಲೆ ಕೂಡಿಸಿಕೊಂಡು "ವತ್ಸ! ನೀನು ಗುರುಗಳಿಂದ ಕಲಿತುದರಲ್ಲಿ ಉತ್ತಮ ವಿಷಯವನ್ನು ಹೇಳು" ಎಂದನು.

**ಪ್ರಹ್ಲಾದ :–** ಶ್ರವಣ, ಕೀರ್ತನೆ, ವಿಷ್ಣುವಿನ ಸ್ಮರಣೆ, ಪಾದಸೇವನೆ, ವಂದನೆ, ದಾಸ್ಯ, ಸಖ್ಯ ಮತ್ತು ಆತ್ಮನಿವೇದನ ಅಂದರೆ ಆತ್ಮಸಮರ್ಪಣೆ ಅಲ್ಲ. ನಿಯಾಮಕನಾಗಿ ನನ್ನಲ್ಲಿ ಶ್ರೀಹರಿಯು ಇರುವನೆಂದೂ, ಮುಕ್ತರಲ್ಲಿಯೂ ಶ್ರೀಹರಿಯೇ

ನಿಯಾಮಕನೆಂದೂ ಚೆನ್ನಾಗಿ ತಿಳಿಯುವುದು ಎಂಬ ನವ ಲಕ್ಷಣದಿಂದ ಕೂಡಿದ ಹರಿಭಕುತಿಯೇ ತಾರಕವು. ಅದು ನಿರ್ವ್ಯಾಜವೂ, ನಿರಂತರವೂ ಆಗಿರಬೇಕು. ಇದೇ ಸಾತ್ವಿಕ ಶಾಸ್ತ್ರದ ಅಧ್ಯಯನ ಫಲವು.

**ಹಿರಣ್ಯಕಶಿಪು :–** ದುರ್ಮತಿಯಾದ ಬ್ರಾಹ್ಮಣಾಧಮನೇ ! ಇದೇ ಏನು ನೀನು ಕಲಿಸಿರುವುದು ? ಈ ದ್ರೋಹ ಮತ್ತು ವಂಚನೆಗೆ ತಕ್ಕ ಫಲವನ್ನು ನೀನು ಅನುಭವಿಸಬೇಕಾಗುವುದು.

**ಗುರುಪುತ್ರ :–** ನಿನ್ನ ಮಗನಿಗೆ ನಾನು ಕಲಿಸಿದ ಬುದ್ಧಿ ಇದಲ್ಲ. ಸ್ವಾಭಾವಿಕ ವಾಗಿಯೇ ಇದು ಒಂದಿದೆ.

**ಹಿರಣ್ಯಕಶಿಪು :–** ಎಲಾ ಮಗನೇ ! ಕಲಿಸದ ಈ ದುರ್ಬುದ್ಧಿ ನಿನಗೆ ಹೇಗೆ ಬಂತು ? ಬೊಗಳು !

**ಪ್ರಹ್ಲಾದ :** ಗೃಹವು ಸುಖಕರ. ವಿಷಯಭೋಗಗಳನ್ನು ಅನುಭವಿಸುವುದೇ ಬಾಳಿನ ಪ್ರಯೋಜನವೆಂದು ನಿಶ್ಚಯಿಸಿ, ವೇದಗಳನ್ನು ಜಗ್ಗಿ ವದರಿದರೂ, ವೇದ ತಾತ್ಪರ್ಯವಾದ ಶ್ರೀಹರಿಯನ್ನು ಭಜಿಸದೆ, ಇಂದ್ರಿಯಗಳಿಗೆ ದಾಸರಾಗಿ. ಅನುಭವಿಸಿದ ಹೇಯ ವಿಷಯಗಳನ್ನೇ ಮತ್ತು ಮತ್ತು ಅನುಭವಿಸುತ್ತಿರುವವರು ಅಜ್ಞಾನಿಗಳೇ ಸರಿ. ಅಂತಹವರು ಗುರುವೆನಿಸಿ ಉಪದೇಶಿಸಿದರೂ, ಶಿಷ್ಯರಾಗಿ ವರಿಸಿದರೂ ಅವರಿಗೆ ಶ್ರೀ ಕೃಷ್ಣನಲ್ಲಿ ಭಕ್ತಿಯು ಹುಟ್ಟುವುದೇ ಇಲ್ಲ. "ವೇದ ಓದಲು ಬಲು ವಿವಾದ ಮಾಡಲು। ಹಾದಿ ದೊರೆಯದು ಬುಧರ ಪಾದನಂಬದೆ" ಎಂದು ಜ್ಞಾನಿಗಳು ಹೇಳಿರುವಂತೆ ಅಜ್ಞಾನಿಗಳು ಹಿತವಾದವನ್ನು ಬಿಟ್ಟು ಅಹಿತವನ್ನೇ ಅನುಸರಿಸುವರು. ಹರಿಯು ಆಜ್ಞಾರೂಪವಾದ ವೇದವೇ ದೊಡ್ಡಹಗ್ಗ, ಬ್ರಾಹ್ಮಣಾದಿ ವರ್ಣಾಶ್ರಮಗಳೇ ಮೂಗದಾಣಿ ಹಗ್ಗ. ಇವೆರಡರಿಂದ ಸಕಲಜೀವರೂ ಬದ್ಧರಾಗಿರುವರು. ಇದನ್ನರಿಯದೆ ಗರ್ವಿತರಾಗಿ, ಸನ್ಮಾರ್ಗವನ್ನು ಬಿಟ್ಟು ಕುರುಡನನ್ನು ಹಿಂಬಾಲಿಸುವ ಕುರುಡನಂತೆ ಸಂಸಾರಕೂಪದಲ್ಲಿ ಬೀಳುವರು ಭಗವದ್ಭಕ್ತರ ಪಾದಧೂಳಿಯನ್ನು ಧರಿಸದೆ ಇರುವ ವನಿಗೆ ಶ್ರೀಹರಿಯಲ್ಲಿ ಭಕ್ತಿಯು ಹುಟ್ಟುವುದೇ ಇಲ್ಲ.

**ಹಿರಣ್ಯಕಶಿಪು** ರಾಕ್ಷಸರೇ ! ಇವನನ್ನು ಕೊಂದು ಬಿಡಿ. ಇವನ ಚಿಕ್ಕಪ್ಪ ನನ್ನು ಕೊಂದವನ ಪಾದಸೇವಕನಿವನಾಗಿರುವನು ಕೃತಘ್ನನೂ, ಕುಲನಾಶಕನೂ ಆಗಿರುವ ಈ ನೀಚನನ್ನು ಕ್ಷಮಿಸಿ ಬಿಡಬಹುದೆ ? ಅಯೋಗ್ಯನಾದ ಇವನ ಸೇವೆ ಯಿಂದ ವಿಷ್ಣುವಿಗಾದರೂ ಆಗುವ ಲಾಭವೇನು ? ಐದು ವರ್ಷದ ಬಾಲಕನಾದರೂ ಬಂಧು ಸ್ನೇಹವನ್ನು ಕತ್ತರಿಸಿ ಶತ್ರುವಿನಂತೆ ವರ್ತಿಸುವ ಈ ದುರ್ಗುಣನನ್ನು ಕೊಲ್ಲು

ವುದೇ ಲೇಸು. ಪರನಾದರೂ ಹಿತೈಷಿಯಾದರೆ ಔಷಧದಂತೆ ಸೇವಿಸುವುದೂ, ಸುತನಾದರೂ ಅಹಿತಕಾರಿಯಾದರೆ ದೇಹದಲ್ಲಿರುವ ರೋಗವನ್ನು ಹೊರಗಟ್ಟಿ ನಾಶಪಡಿಸುವುದೂ ನೀತಿ ಸಮ್ಮತವಾಗಿದೆ. ನನ್ನ ದೇಹದಿಂದ ಪುತ್ರಾಕಾರದಲ್ಲಿ ಜನಿಸಿದ ರೋಗವನ್ನು ಕಳೆದುಕೊಂಡು ನಿಶ್ಚಿಂತನಾಗುವೆನು. ಸರ್ಪದಷ್ಟವಾದ ಬೆರಳನ್ನು ಕತ್ತರಿಸಿದರಲ್ಲವೇ ಉಳಿದ ಅಂಗಗಳು ಜೀವಿಸುತ್ತವೆ ? ಭಟರೇ ! ವಿಷದ ಅನ್ನವನ್ನು ತಿನ್ನಿಸಿ ಭೂಮಿಯಲ್ಲಿ ಇವನನ್ನು ಹೂತುಬಿಡಿ ! ಕುಳಿತಲ್ಲೇ ತುಂಡರಿಸಿ, ದುಷ್ಟೇಂದ್ರಿಯವನ್ನು ನಿಗ್ರಹಿಸುವ ಮುನಿಯಂತೆ ಪುತ್ರರೂಪಶತ್ರುವನ್ನು ಕೊಂದು, ನಾನು ಸುಖಿಸುವಂತೆ ಮಾಡಿರಿ.

**ನಾರದ :** ರಾಕ್ಷಸರು ಶೂಲಾಯುಧದಿಂದ ಹೊಡೆದರೂ ಪ್ರಹ್ಲಾದನು ಭಯಪಡಲಿಲ್ಲ. ಹಿಂಜರಿಯದೆ ಹರಿಯ ಚರಣಪದ್ಮಧ್ಯಾನ ಪರನಾದನು

**ಉಗಾಭೋಗ**

ಎನಗೆ ನಿನ್ನಲ್ಲಿ ಭಕುತಿ ಇರಲಿ ಇಲ್ಲದಿರಲಿ । ಜನರು ಹರಿದಾಸನೆಂದೆನ್ನ ಕರೆಯುತಾರೆ । ಮನ ಪಾಪಕೆರಗದಂತೆ ಅನುದಿನವು ನೀ ಎನ್ನ ಸಲಹಬೇಕಾಯಿತೊ ಅನಿಮಿತ್ತಸುಜನ ಬಂಧು । ಕರಿಸಿ ಯಮಭಟರು ಎನ್ನೆಳೆದೊಯ್ವಾಗ । ಘನತೆಗೆ ಸಾಲದಯ್ಯ ತನ್ನವರ ಹಯವದನ । ಅನ್ಯರಿಗೊಪ್ಪಿಸಿದನೆಂಬ ದುರ್ವಾರ್ತೆ ತಪ್ಪಿಸಿಕೊಳ್ಳೊ ತಂದೆ ಮುನಿಜನವಂದ್ಯ ॥

ದೈತ್ಯರ ವಧಾಪ್ರಯತ್ನಗಳೆಲ್ಲ ಪುಣ್ಯರಹಿತನ ಕರ್ಮಜಾಲದಂತೆ ವ್ಯರ್ಥವಾದುವು. ಆಗ ದೈತ್ಯರಾಜನು ತಾನೇ ಪ್ರಹ್ಲಾದನನ್ನು ಕೊಲ್ಲಲು ವಿವಿಧೋಪಾಯಗಳನ್ನು ಮಾಡಿದನು. ಆನೆಗಳಿಂದ ತುಳಿಸಿದನು. ಹಾವುಗಳಿಂದ ಕಚ್ಚಿಸಿದನು. ಬೆಟ್ಟದ ಮೇಲಿಂದ ನೂಕಿದನು. ಮಾಟಶೂನ್ಯಗಳನ್ನು ಮಾಡಿಸಿದನು. ವಿಷ ಕುಡಿಸಿದ. ಸಮುದ್ರದಲ್ಲಿ ಎಸೆದ. ಬೆಂಕಿಯ ಜ್ವಾಲೆಯಲ್ಲಿ ಎತ್ತಿ ಹಾಕಿದ. ಹೀಗೆ ಪ್ರಹ್ಲಾದನನ್ನು ಕೊಲ್ಲಲು ಸರ್ವ ಪ್ರಯತ್ನವನ್ನು ಮಾಡಿದರೂ ಅವನು ಸಾಯಲಿಲ್ಲ. ಅವನು ಬದುಕಿರಬೇಕೆಂದೇ ಹರಿಯ ಸತ್ಯ ಸಂಕಲ್ಪವು. ದೈತ್ಯೇಂದ್ರನಿಗೆ ಚಿಂತೆ ಒಂದಿತು. ಈತನ ವಿರೋಧದಿಂದ ತನಗೇ ಮರಣ ಸಂಭವಿಸಬಹುದೆಂದು ಕಳವಳಿಸಿದ.

**ಶಂಡಾಮರ್ಕರು** ;– ರಾಜನೇ ! ಸರ್ವಲೋಕಗಳನ್ನೂ ಹುಬ್ಬು ಹಾರಿಸುವ ಮಾತ್ರದಿಂದಲೇ ಗೆದ್ದು ಆಳುತ್ತಿರುವ ನಿನಗೇಕಿಷ್ಟು ಚಿಂತೆ ? ಶಿಶುವಿನ ವಿಷಯದಲ್ಲಿ ಇಷ್ಟು ನಿಷ್ಠುರವೆ ? ಮಕ್ಕಳಿಗೆ ಗುಣದೋಷ ಭೇದವು ಸ್ಥಿರವಾಗಿರುವುದಿಲ್ಲ. ಇವನನ್ನು ವರುಣ ಪಾಶದಿಂದ ಕಟ್ಟಿ, ಶುಕ್ರಾಚಾರ್ಯರು ಬರುವವರೆಗೂ ನಮ್ಮ ಮನೆ

ಯಲ್ಲಿಟ್ಟು ರಕ್ಷಿಸುತ್ತಿರುವೆವು. ಹಿರಿಯರ ಸೇವೆಯನ್ನು ಮಾಡುತ್ತಾ ವಯಸ್ಸು ಬಂದಂತೆ ಇವನಿಗೆ ಬುದ್ಧಿಯು ಕುದುರುವುದು.

**ಹಿರಣ್ಯಕಶಿಪು :** ಹಾಗೆಯೇ ಮಾಡಿರಿ. ಇವನಿಗೆ ತ್ರಿವರ್ಗವನ್ನು ಮಾತ್ರ ಉಪದೇಶಿಸಿ. ರಾಜಧರ್ಮವನ್ನು ಚೆನ್ನಾಗಿ ಕಲಿಸಿರಿ. ಗೃಹಸ್ಥನ ಪ್ರವೃತ್ತಿ ಮಾರ್ಗದಲ್ಲಿ ನಡೆಯುವಂತೆ ಬುದ್ಧಿಯನ್ನು ಕಲಿಸಿ.

**ನಾರದ :** ಗುರುಪುತ್ರರು ಪ್ರಹ್ಲಾದನಿಗೆ ತ್ರಿವರ್ಗವನ್ನೇ ಉಪದೇಶಿಸುತ್ತ ಬಂದರು. ಒಂದು ದಿನ ಆಚಾರ್ಯರು ಮನೆಗೆಲಸದಲ್ಲಿ ತೊಡಗಿದರು. ಆಗ ಅಸುರ ಬಾಲಕರು, ಗುರುಗಳು ಇರಲಿಲ್ಲವಾದ್ದರಿಂದ ಪ್ರಹ್ಲಾದನನ್ನು ಆಟವಾಡಲು ಕರೆದರು. ಪ್ರಹ್ಲಾದನು ಆ ಬಾಲಕರ ಸುಸ್ವಭಾವವನ್ನರಿತು ಮೃದುಮಧುರ ಮಾತುಗಳಿಂದ ತನ್ನ ಹತ್ತಿರಕ್ಕೆ ಕರೆದನು. ಅವರು ಎಲ್ಲವನ್ನೂ ಬಿಟ್ಟು ಆದರದಿಂದ ಬಂದು ಕುಳಿತರು. ಮುಖ್ಯಪ್ರಾಣದೇವರ ಭಕ್ತನೂ, ಅವರ ಆವೇಶವನ್ನೇ ಸದಾ ಉಳ್ಳವನೂ ಆದ ಪ್ರಹ್ಲಾದನು ತನ್ನನ್ನೇ ನೋಡುತ್ತ ಕುಳಿತಿರುವ ಪರಿಶುದ್ಧ ಮನಸ್ಕರಾದ ಆ ಬಾಲಕರಿಗೆ ಪರಮಭಾಗವತ ತತ್ತ್ವವನ್ನು ಕರುಣೆಯಿಂದ ಉಪದೇಶಿಸಿದನು.

## ಐದನೆಯ ಅಧ್ಯಾಯ ಮುಗಿದುದು

**ಪ್ರಹ್ಲಾದ :–** ಬಾಲಕರೇ! ಪರಮ ಮಂಗಳ ವಿಷಯವನ್ನು ಹೇಳುವೆನು ಕೇಳಿ:

ಶ್ರೀಹರಿಯ ಚರಣಸೇವೆಯು ಸಂಸಾರದಲ್ಲಿ ವೈರಾಗ್ಯವನ್ನು ಹುಟ್ಟಿಸುವುದು. ಮತ್ತು ಪುರುಷಾರ್ಥಸಾಧಕವೂ ಆಗಿದೆ. ನಮ್ಮ ವಯಸ್ಸಿನ ಬಾಲಕರು ಎಷ್ಟೋ ಜನ ಮೃತರಾಗಿರುವರಲ್ಲವೆ ? ಆಟಗಳಲ್ಲಿ ವ್ಯರ್ಥವಾಗಿ ಕಾಲವನ್ನು ಕಳೆಯಬೇಡಿ. ಪೂರ್ವದಲ್ಲಿ ಬಾಲಕರು ಮರ್ಕಟನಂತೆ ಚಂಚಲವಾದ ಮನಸ್ಸಿಗೆ ವಶರಾಗಿ ಕುಣಿಯುತ್ತಿರಲಿಲ್ಲ. ಬಾಲ್ಯದಿಂದಲೂ ಮೋಕ್ಷ ಸಾಧನವನ್ನು ಮಾಡುತ್ತ ಹರಿಯ ಲೋಕವನ್ನು ಸೇರಿದ ಧ್ರುವಾದಿಗಳಂತೆ ನಾವೂ ಜ್ಞಾನವನ್ನು ಗಳಿಸಬೇಕು. ನಮ್ಮ ಗುರುಗಳಾದ ಶಂಡಾಮರ್ಕರು ಅನರ್ಥಕರವಾದ ಸಾಂಸಾರಿಕ ಸುಖವನ್ನೇ ಪರಮ ಪ್ರಯೋಜನವೆಂದು ಹೇಳಿಕೊಡುತ್ತಿರುವರು. ಅಂತಹ ಅವಿವೇಕಿಗಳು ಗುರುಗಳಾದ ಮಾತ್ರಕ್ಕೆ ಅವರ ಮಾತಿನಂತೆ ನಡೆಯಬಾರದು. ಅಜ್ಞಾನನಿದ್ರೆಯಿಂದೆಚ್ಚರಿಸಿ ಜ್ಞಾನಿಯನ್ನಾಗಿ ಮಾಡುವವರೇ ಗುರುಗಳು. ಅಂತಹವರಲ್ಲದ ಅಜ್ಞಾನಿಗಳ ಉಪದೇಶವನ್ನು ಅನುಸರಿಸಿದವನು ಕುರುಡನನ್ನು ಹಿಂಬಾಲಿಸಿದ ಕುರುಡನಂತೆ ಗತಿಯನ್ನು ಹೊಂದದೆ ಕೆಡುವನು.

ನಾವು ದೈತ್ಯಕುಲದಲ್ಲಿ ಹುಟ್ಟಿರುವ ಮಾತ್ರದಿಂದ ದೈತ್ಯಾರಿಯಾದ ನಾರಾಯಣನು ನಮಗೆ ಶತ್ರುವಲ್ಲ. ನಿಜವಾಗಿ ವಿಚಾರ ಮಾಡಿದರೆ ಶತ್ರು ಮಿತ್ರ ಉದಾಸೀನರೆಂಬ ಭಾವನೆ ಅಜ್ಞಾನ ಕಲ್ಪಿತವು. ರಾಗದ್ವೇಷ ವರ್ಜಿತನಿಗೆ ಶತ್ರುಗಳೂ ಇಲ್ಲ. ಮಿತ್ರರೂ ಇಲ್ಲ. ಎಲ್ಲವೂ ಶ್ರೀಹರಿಯಲೀಲೆ.

ನೀತಿ ಶಾಸ್ತ್ರದಿಂದ ಸಂಪತ್ಪ್ರಾಪ್ತಿಯೆಂದು ತಿಳಿಯುವುದು ತಪ್ಪು. ಶ್ರೀಹರಿಯೇ ಸಂಪತ್ತಿಗೂ, ವಿಪತ್ತಿಗೂ ಕಾರಣನು. ಉಳಿದೆಲ್ಲರೂ ಅಸ್ವತಂತ್ರರಾಗಿರುವುದರಿಂದ ಸಂಪತ್ ವಿಪತ್ತಿಗೆ ಹೇಗೆ ಕಾರಣರಾಗುವರು ?

ಶ್ರೀಹರಿಯ ಪ್ರೀತಿಯನ್ನು ಮಾತ್ರ ಬಯಸಿ, ಧರ್ಮಕಾಮಗಳ ಫಲವನ್ನು ತ್ಯಜಿಸಿ, ಇಂದ್ರಿಯಗಳನ್ನು ಜಯಿಸಿ, ಪುತ್ರಮಿತ್ರಾದಿ ಸ್ವಜನರ ವಶವಾಗದೆ ನಿವೃತ್ತಿಧರ್ಮ ವನ್ನಾಚರಿಸುವವನು ಬಹು ದುರ್ಲಭನು. ಆವನು ಒಲ್ಲೆನೆಂದರೂ ಶ್ರೀಹರೀಚ್ಛೆ ಯಿಂದ ಇಹಪರ ಸುಖವು ಲಭಿಸುತ್ತಿರುವುದು. ಪುತ್ರಮಿತ್ರಾದಿಗಳು ಅನುಷ್ಠಾನಾದಿಗಳಿಗೆ ಅನುವಾಗಿದ್ದರೆ ಅಂತಹವನು ಕಣ್ತೆರೆದು ಯಥಾರ್ಥಜ್ಞಾನಿ ಯಾಗಿರುವನು. ಆದ್ದರಿಂದ ನಿವೃತ್ತಧರ್ಮವನ್ನಾಚರಿಸಬೇಕು. ಮುದುಕರಾದ ಮೇಲೆ ಈ ಧರ್ಮವನ್ನು ಆಚರಿಸೋಣವೆಂದು ಹೇಳದೆ ಬಾಲ್ಯದಿಂದಲೇ ಈ **ಭಾಗವತ ಧರ್ಮ**ಗಳನ್ನು ಆಚರಿಸಿ ವಿಷ್ಣುಭಕ್ತನಾಗಬೇಕು. ಮಾನವ ಜನ್ಮ ದುರ್ಲಭ. ಆ ಜನ್ಮ ಬಂದಾಗಲೇ ಪುರುಷಾರ್ಥ ಸಾಧನವಾಗುವುದು. ನರದೇಹವೂ ಬಹುಕಾಲ ವಿರುವುದಿಲ್ಲ. ಅಸ್ಥಿರ. ಇದನ್ನರಿತು ಶ್ರೀಹರಿಯೇ ಪ್ರಿಯತಮನು ಎಂದು ನಿಶ್ಚಯಿಸಿ ಸರ್ವಭೂತಾಂತರ್ಯಾಮಿಯೂ, ಪ್ರಭುವೂ, ಅನಿಮಿತ್ತ ಬಂಧುವೂ ಆದ ಗೋವಿಂದನ ಪಾದಾರವಿಂದವನ್ನು ಬಿಡದೆ ಸೇವಿಸುವುದರಿಂದಲೇ ನೈಜಸುಖ ಪ್ರಾಪ್ತಿ.

ದೈತ್ಯಬಾಲಕರೇ ! ನಾಯಿ ನರಿಗಳಾಗಿ ಹುಟ್ಟಿದಾಗಲೂ ಆ ದೇಹಗಳಲ್ಲಿ ಇಂದ್ರಿಯಜನ್ಯ ಸುಖವು ತಾನಾಗಿ ದೊರೆಯುವುದು. ಬಯಸಿ ಬೇಡದಿದ್ದರೂ ದುಃಖವು ಬಂದೇ ಬರುವಂತೆ ಸುಖವೂ ಬರುವುದು. ಆದರೆ ಇವೆರಡಕ್ಕೂ ಹರೀಚ್ಛೆಯೇ ಮುಖ್ಯ ಕಾರಣ. ಆದ್ದರಿಂದ ವಿಷಯ ಸುಖಕ್ಕಾಗಿ ವ್ಯರ್ಥಪ್ರಯತ್ನ ವನ್ನು ಸರ್ವಥಾ ಮಾಡಬಾರದು. ಆ ಪ್ರಯತ್ನದಿಂದ ಆಯುಷ್ಯವು ವ್ಯರ್ಥವಾಗಿ ಹೋಗುವುದೇ ಹೊರತು ಬೇಡಿದುದೆಲ್ಲ, ಬಯಸಿದುದೆಲ್ಲ ಬರುವುದೇ ಇಲ್ಲ. ಮುಕುಂದನ ಚರಣಾರವಿಂದ ಸೇವನೆಯು ಎಂದಿಗೂ ವ್ಯರ್ಥವಲ್ಲ. ಸಾಮಾನ್ಯವಲ್ಲ ಶ್ರೀಹರಿ ಸೇವೆ. ಶರೀರವು ಬಿದ್ದುಹೋಗುವ ಮುನ್ನ, ಜರೆ–ರೋಗಾದಿಗಳಿಂದ ಕೆಡದ ಮುನ್ನ ನಮ್ಮ ಕ್ಷೇಮವನ್ನೂ, ನಮ್ಮ ಶ್ರೇಯಸ್ಸನ್ನೂ ಸಂಪಾದಿಸುವುದೇ ಕರ್ತವ್ಯವು.

ಪುರುಷಾಯುಷ್ಯವು ಪೂರ್ಣವಾಗಿ ನೂರು ವರ್ಷಗಳೆಂದಿಟ್ಟುಕೊಂಡರೂ ಶ್ರೀ ಹರಿಯ ಸೇವೆಗೆ ಉಪಯುಕ್ತವಾದ ಕಾಲವು ಅತ್ಯಲ್ಪವಾಗಿದೆ. ಇಂದ್ರಿಯ ಜಯವಿಲ್ಲದ ಜನ್ಮವು ವ್ಯರ್ಥವೇ. ನೂರು ವರ್ಷಗಳಲ್ಲಿ ನಿದ್ರೆಯಲ್ಲಿ ಐವತ್ತು ವರ್ಷಗಳು ಕಳೆದುಹೋಗುವುವು. ರಾತ್ರಿ ಕತ್ತಲಲ್ಲಿ ಮುಳುಗಿ ಮಲಗಿದವನಿಗೆ ಸಾಧನವೆಲ್ಲಿ ? ಉಳಿದ ಐವತ್ತು ವರ್ಷಗಳಲ್ಲಿ ಬಾಲ್ಯ, ಕೌಮಾರಗಳ ಇಪ್ಪತ್ತು ವರ್ಷಗಳು ಆಟಪಾಟಗಳಲ್ಲಿ ಕಳೆದುಹೋಗುವುವು. ಉಳಿದ ಮೂವತ್ತು ವರುಷಗಳಲ್ಲಿ ಯೌವ್ವನವು ಪಾರವಿಲ್ಲದ ಕಾಮವಾಹಿನಿಯಲ್ಲಿ ಕೊಚ್ಚಿಕೊಂಡುಹೋಗುವ ಗೃಹಾಸಕ್ತನನ್ನಾಗಿರಿಸಿ ಕೆಡಿಸುವುದು. ಮತಿಗೆಟ್ಟ ಯುವಕರು ಮಾಡದ ಪ್ರಮಾದವು ಯಾವುದು ? ನೋಡಿದಿರಾ ನಮ್ಮ ಜನರ ಕಾದಾಟವನ್ನು ? ಕುಟುಂಬಭರಣಕ್ಕಾಗಿ ಪರಸ್ಪರ ಬಡಿದಾಡಿ, ಜಗಳವಾಡಿ ಕ್ಷಣವಾದರೂ ನೆಮ್ಮದಿಯಿಲ್ಲದೆ ಕಷ್ಟಪಡುತ್ತಿರುವರು. ಬೇಡಿದುದು ಸಿಗದು. ಪಡುವ ಆಯಾಸವು ಫಲವನ್ನು ಕೊಡದು. ಸಂಸಾರಕ್ಕೆ ಸಿಕ್ಕಿ ಅರ್ಥಕಾಮಗಳಲ್ಲಿ ತೊಳಲುವ ಜನರಿಗೆ ಧರ್ಮವೆಲ್ಲಿ ? ಮೋಕ್ಷವೆಲ್ಲಿ ? ಜಿತೇಂದ್ರಿಯನಾಗದೆ ಸತಿಸುತಾದಿಗಳಲ್ಲಿ ಆಸಕ್ತನಾದವನಿಗೆ ಬಿಗಿದುಕೊಂಡಿರುವ ಸ್ನೇಹಪಾಶವನ್ನು ಕಳೆದುಕೊಳ್ಳಲು ಅಪೇಕ್ಷಿಸುವನೆ ? ಬಯಸಿದರೂ ಅದು ಬಿಡುವುದೆ ?

## ಕಾಮದ ಕಾಮಾಲೆ

ಪ್ರಿಯಪತ್ನಿಯು ದಯಾಪಾತ್ರಳಾಗಿ ವಿಚಿತ್ರವಾದ ವಚನಚತುರಳೆನಿಸಿ ಮನವನ್ನು ಸೆಳೆಯುವಳು. ಏಕಾಂತದಲ್ಲಿ ನರ್ಮಾಲಾಪ, ರತಿಸುಖದಾನ ಇವುಗಳಿಂದ ಸಂತೈಸುವಳು. ಪುತ್ರಮಿತ್ರರು ಪ್ರೇಮವನ್ನು ಪ್ರಕಟಿಸುವರು. ಮಕ್ಕಳ ಮುದ್ದಾದ ತೊದಲು ಮಾತುಗಳು ಕಿವಿ, ಮನಸ್ಸುಗಳಿಗೆ ಸುಖಕರವಾಗಿರುವುವು. ಹೆಣ್ಣು ಮಕ್ಕಳನ್ನು ದೂರದೇಶಕ್ಕೆ ಕೊಟ್ಟು ಅವರು ಸುಖವಾಗಿರುವರೋ ಇಲ್ಲವೋ ಎಂಬ ಚಿಂತೆ, ದೀನರಾದ ಬಂಧುಗಳ ಚಿಂತೆ, ಮುದುಕರಾದ ತಂದೆ ತಾಯಿಗಳ ಚಿಂತೆ, ಬೆಳೆದು ನಿಂತ ಬೆಳೆಗಳ ಚಿಂತೆ, ಮನೋಹರ ಭವನಾರಾಮಗಳ ಚಿಂತೆ, ಒಂದೇ ? ಎರಡೇ ? ಅನಂತ ಚಿಂತೆಗಳಿಂದ ಬೆಂದು ಬೆಂಡಾಗಿದ್ದರೂ ಪರಲೋಕದ ಚಿಂತೆ ಮಾತ್ರವಿಲ್ಲದೆ ಕಣಜದಂತೆ ಗೃಹಬದ್ಧನಾಗಿರುವ ಮೂಢನಿಗೆ ಧರ್ಮಾಚರಣೆ ಇನ್ನೆಲ್ಲಿ? ಹರಿಯ ಸೇವೆ ಇನ್ನೆಲ್ಲಿ ? ಲೋಭದಿಂದ ಕಾಮ್ಯಕರ್ಮ ಮಾಡುವವನಿಗೂ ಶ್ರೀ ಹರಿಗೂ ಬಲುದೂರ ದೂರ. ಕಾಮವೇ ಲೋಭನ ಅಪ್ಪ. ಕಾಮದ ಕಾಮಾಲೆ ರೋಗಿಗಳಿಗೆ ಉಪಸ್ಥೆಯ ಸಂಬಂಧವಾದ ಮತ್ತು ನಾಲಗೆ ಸಂಬಂಧವಾದ ಎರಡೇ ಸುಖಗಳಿರುವುವು. ಅವೇ ಪರಮ ಪ್ರಯೋಜನವೆಂಬ ಮೂಢನಿಗೆ ವೈರಾಗ್ಯವು ಕನಸಿನ ಗಂಟೇ ಸರಿ. ಕುಟುಂಬ ಪೋಷಣೆಯಲ್ಲಿ ವ್ಯರ್ಥವಾಗಿ ಕಳೆದುಹೋದ ಆಯುಷ್ಯವೆಷ್ಟು ? ಎಂಬುದು ಗಮನಕ್ಕೆ ಬರುವುದೇ ಇಲ್ಲ. ಹೀಗೆ ಮೈಮರೆತು

ಕುಟುಂಬದಲ್ಲಿಯೇ ಮುಳುಗಿರುವವನಿಗೆ ತಾಪತ್ರಯ, ದುಃಖ ಮಾತ್ರವೇ ಉಳಿಯು ವುದೇ ಹೊರತು ಜ್ಞಾನೋದಯವಾಗುವುದೇ ಇಲ್ಲ. ಕಂಡವರ ಹಣವನ್ನು ಕದ್ದ ಕಳ್ಳನಿಗೆ ರಾಜದಂಡವು ತಪ್ಪುವುದಿಲ್ಲವೆಂದು ನೋಡಿ ನೋಡಿ, ಒಂದುವೇಳೆ ರಾಜ ದಂಡವು ತಪ್ಪಿದರೂ ಪರಲೋಕದಲ್ಲಿ ಯಮರಾಜನ ದಂಡವು ತಪ್ಪದೆಂದು ಕೇಳಿ ಕೇಳಿಯೂ ಕಾಮತೃಪ್ತಿಯನ್ನು ಕಾಣದ ಕುರುಡನು ಪರರ ಗಂಟನ್ನು ಕದ್ದು ಕುಟುಂಬ ಪೋಷಣೆ ಮಾಡುವುದರಲ್ಲಿ ದಕ್ಷನೆನಿಸಿ ಕೊನೆಗೆ ವಿತ್ತವನ್ನು ಇಲ್ಲೇ ಬಿಟ್ಟು ಪಾಪವನ್ನು ಹೊತ್ತುಕೊಂಡು ಹೋಗುತ್ತಿರುವನು.

## ಅರ್ಥದ ಅನರ್ಥ

ಅರ್ಥಾಶೆಯನ್ನು ಬಿಟ್ಟೆನೆಂಬುವರು ಶುದ್ಧ ವಂಚಕರು. ಹಣವು ಪ್ರಾಣ ಕ್ಕಿಂತಲೂ ಪ್ರಿಯಕರವೆನಿಸಿದೆ. ಬಹಿಃಪ್ರಾಣವಾದ ಈ ಅರ್ಥದ ಸಲುವಾಗಿ ಕಳ್ಳರು, ಸೇವಕರು, ವರ್ತಕರು ಪ್ರಾಣಗಳನ್ನು ಲೆಕ್ಕಿಸುವುದಿಲ್ಲ. ಪ್ರಾಣವನ್ನಾದರೂ ತೆತ್ತು ಹಣವನ್ನು ಗಳಿಸುವೆವು ಎಂಬ ಜನರು ಹಣದಾಶೆಯನ್ನು ಎಂತು ಬಿಡುವರು ?

ವಿದ್ವಾಂಸನೆನಿಸಿದವನೂ ಕೂಡ "ನಾನು–ನನ್ನವರು, ಪರರು–ಪರಕೀಯರು" ಎಂಬ ದುಷ್ಟಬುದ್ಧಿಯಿಂದ ಕುಟುಂಬ ಪೋಷಣೆಯಲ್ಲಿಯೇ ಮುಳುಗಿ, ಕಂಡವರಿಗೆ ದ್ರೋಹ ಮಾಡಿ ಮೋಕ್ಷಸಾಧನ ಮಾರ್ಗದಿಂದ ದೂರನಾಗುವನು. ಈ ವಿಷಯದಲ್ಲಿ ಮೂಢನಂತೆ ವಿಪರೀತ ಜ್ಞಾನದಿಂದ ನಡೆಯುವ ವಿದ್ವಾಂಸನಿಗೂ, ದಡ್ಡನಿಗೂ ಯಾವ ಭೇದವೂ ಇಲ್ಲ. ಶಾಸ್ತ್ರಜ್ಞಾನದಿಂದ ಸಂಸಾರವು ಅನಿತ್ಯವೆಂದು ತಿಳಿದು ಇತರರಿಗೆ ಉಪದೇಶಿಸುವ ವಿದ್ವಾಂಸನೂ ಕೂಡ ಮನೆಯ ಮಡದಿಯ ಸುಂದರ ಕಟಾಕ್ಷ ಪಾಶಬದ್ಧನಾಗಿ ಕ್ರೀಡಾಮೃಗವಾಗಿ ಹೇಯವಾಗಿ ನಡೆಯುವನು. ಅಂದಬಳಿಕ ಮೂಢರನ್ನೇಕೆ ಬಯ್ಯಬೇಕು ?

ಆದ್ದರಿಂದ ದೈತ್ಯಬಾಲಕರೇ ! ದೈತ್ಯರ ಮತವನ್ನೂ, ತದನುವರ್ತಿಗಳಾಗಿ ಅರ್ಥಕಾಮಗಳಲ್ಲಿ ಮುಳುಗಿರುವವರನ್ನೂ ದೂರದಲ್ಲಿಟ್ಟು ಆದಿದೇವ ನಾರಾಯಣ ನನ್ನು ಭಜಿಸುವುದೇ ಕ್ಷೇಮಕರ. ಮುಕ್ತಸಂಗರಾದ ಮುನಿಜನರ ಕುಲದೈವವಲ್ಲವೆ ಗೋವಿಂದನು ?

ಅಚ್ಯುತನನ್ನು ಮೆಚ್ಚಿಸುವುದು ಕಷ್ಟವಲ್ಲ. ಅವನು ದೂರದಲ್ಲಿಲ್ಲ. ಅಂತರ್ಯಾಮಿ ಯಾಗಿ ಹೃದಯದಲ್ಲೇ ಇರುವನು. ಅವನು ಪತ್ನೀಪುತ್ರ ಮಿತ್ರಾದಿಗಳಿಗಿಂತಲೂ ಪ್ರಿಯನಾಗಿರುವನು. ಸರ್ವತ್ರವ್ಯಾಪ್ತ. ಬ್ರಹ್ಮಾದಿ ತೃಣಾಂತ ಜೀವರಲ್ಲೂ ನಿಯಾಮಕನು. ಕಾಲಕಾಲಕ್ಕೆ ನಮಗೆ ಬರತಕ್ಕ ಸುಖದುಃಖಾದಿ ವಿಕಾರಗಳಿಗೆಲ್ಲಕ್ಕೂ ಅವನೇ ಕಾರಣನು. ದೂರವಾದವರಿಗೆ ಅತ್ಯಂತ ದೂರ. ಸೇವಿಸುವವರಿಗೆ ಅತ್ಯಂತ

ಹತ್ತಿರವಾಗಿ ಯಾವಾಗಲೂ ಸಲಹಲು ಸಿದ್ಧನಾಗಿರುವನು. ಇಂತಹ ಸುಲಭನಾದ ಹರಿಯನ್ನು ಸೇವಿಸದೆ ಜನರು ಕೆಡುತ್ತಿರುವರು. ಸೃಷ್ಟಿಯಲ್ಲಿಯೂ, ಪ್ರಳಯ ದಲ್ಲಿಯೂ ಸ್ವಲ್ಪವೂ ಬದಲಾಯಿಸದೆ ಒಂದೇ ಸಮನಾಗಿದ್ದು ಜೀವ ಮತ್ತು ಜಡ ಗಳಿಂದ ಅತ್ಯಂತ ಭಿನ್ನನಾಗಿರುವನು. ಹೊರಗೆ ಕಾಲರೂಪದಿಂದ ವ್ಯಾಪ್ತನಾಗಿ, ಒಳಗೆ ಪುರುಷ ರೂಪದಿಂದ ಅಣುವಾಗಿರುವನು. ಅಣು, ಮಹತ್, ಕೃಶ, ಸ್ಥೂಲ, ಗುಣವಂತ, ನಿರ್ಗುಣ, ಅಂತಸ್ಥ, ಬಹಿರ್ವ್ಯಾಪ್ತ ಎಂಬ ವಿರುದ್ಧಗಳಾದ ರೂಪ ಗಳನ್ನು ಸ್ವೀಕರಿಸಿದರೂ ಸ್ವಗತಭೇದ ಶೂನ್ಯನಾಗಿಯೇ ಇರುವನು. ಅಪ್ರಾಕೃತ ಜ್ಞಾನಾನಂದ ದೇಹನೂ, ಸರ್ವೇಶನೂ, ಆದಿಪುರುಷನೂ, ಸರ್ವತ್ರವ್ಯಾಪ್ತನೂ ಆದ ನಾರಾಯಣನು ಸತ್ವಾದಿ ಗುಣ ಪ್ರೇರಕಳಾದ, ತಮೋರೂಪ ದುರ್ಗೆಯಿಂದ ಆವರಿಸಲ್ಪಟ್ಟು ಇತರರಿಗೆ ಕಾಣಿಸದಂತಿರುವನು. ಆ ದುರ್ಗಾದೇವಿಯು ಆ ಸ್ವಾಮಿ ಯನ್ನು ಆಲಿಂಗಿಸಿ ಸ್ತುತಿಸುತ್ತಾ ಇರುವಳು.

ದೈತ್ಯ ಬಾಲಕರೆ ! ಹರಿಯು ಹೀಗಿರುವುದರಿಂದ ನೀವು ದೈತ್ಯಭಾವವನ್ನು ತೊರೆದು, ಶ್ರೀಪತಿಯ ನಿಲಯವಾಗಿರುವ ಸರ್ವ ಪ್ರಾಣಿಗಳಲ್ಲಿಯೂ ದಯೆಯನ್ನು ಮಾಡುತ್ತಾ ನಡೆಯಿರಿ. ಅದರಿಂದ ಶ್ರೀರಮಣನು ಸಂತುಷ್ಟನಾಗುವನು. ಅವನು ಸಂತುಷ್ಟನಾದರೆ ನಿಮಗೆ ದುರ್ಲಭವಾದುದು ಯಾವದಿರುವುದು ? ಆದರೂ ಸಕಲ ಯೋನಿಗಳಲ್ಲಿಯೂ (ದೇಹಗಳಲ್ಲಿಯೂ) ಹುಟ್ಟಿದಾಗಿನಿಂದ ಸಿದ್ಧವಾದ ವಿಷಯ ಸುಖಗಳನ್ನು ಅಪೇಕ್ಷಿಸಬಾರದು. ಶ್ರೀಹರಿಯು ಮೋಕ್ಷವನ್ನು ಕೊಡುವವನಾಗಿರು ವಾಗ ತುಚ್ಛವಾದ ವಿಷಯಗಳನ್ನು ಬೇಡುವವನು ಕಲ್ಪವೃಕ್ಷವನ್ನಾಶ್ರಯಿಸಿ ಕಟ್ಟಿಗೆ ಯನ್ನು ಬೇಡಿದಂತೆ ಮೂರ್ಖನೇ ಸರಿ. ಮೋಕ್ಷದಲ್ಲಿಯೂ ಸುಖವನ್ನು ಬೇಡದೆ, ಕೇಶವನ ಸೇವೆಗಾಗಿ ಅವನನ್ನು ಆರಾಧಿಸುವವನು ಪಕ್ವಭಕ್ತನು. ಮೋಕ್ಷವನ್ನು ಬಯಸುವ ಅಪಕ್ವಭಕ್ತನಿಗೆ ಪಕ್ವಭಕ್ತನ ಭಾಗ್ಯ ದೊರೆಯಲಾರದು. ಹರಿಗುಣ ಮಕರಂದಪಾನವೇ ಸರ್ವಸಾರ (ಶ್ರೇಷ್ಠ) ವೆಂದು ತಿಳಿದು ಭಜಿಸುವ ಭಕ್ತರ ಚರಣಾರವಿಂದ ಸೇವೆಯು ನಮಗೆ ಸದಾ ದೊರೆತರೆ ಅದೇ ಜನ್ಮಲಾಭ. ಧರ್ಮಾರ್ಥ ಕಾಮಗಳ ಅನುಷ್ಠಾನ, ವೇದಾಧ್ಯಯ.ನ, ನೀತಿಯ ದಂಡಶಾಸ್ತ್ರ ಪರಿನಿಷ್ಠೆ, ಕೃಷಿ ವಾಣಿಜ್ಯಾದಿ ವಿವಿಧಜೀವಿಕಾಚರಣೆ ಮೊದಲಾದುವೆಲ್ಲ ಶ್ರೀಹರಿಯ ಸೇವೆಗಾಗಿ ಸಂಕಲ್ಪಿಸಿ, ಅನಿಮಿತ್ತ ಬಂಧುವೂ ಪರಮ ಪುರುಷನೂ ಆದ ಗೋವಿಂದನಿಗೆ ಅರ್ಪಿಸಿದರೇ ಸಫಲ.

ಈ ಜ್ಞಾನವು ನನಗೆ ನಾರದರಿಂದ ಬಂದಿದೆ. ನನ್ನ ಬುದ್ಧಿ ಕಲ್ಪಿತವಲ್ಲ. ಶೇಷಶಾಯಿಯು ಇದನ್ನು ಬ್ರಹ್ಮದೇವರಿಗೂ, ಬ್ರಹ್ಮದೇವರು ನಾರದರಿಗೂ ಹೇಳಿದರು. ಭಾಗವತಜ್ಞಾನವು ದುರ್ಲಭವಾದರೂ ಹರಿಭಕ್ತ ಸಜ್ಜನರ ಪಾದ

ಧೂಳಿಯನ್ನು ಧರಿಸಿದವರಿಗೆ ಸುಲಭವಾಗಿದೆ. ಜ್ಞಾನವಿಜ್ಞಾನ ಕಾರಣ, ಪರಮ ಶುದ್ಧವಾದ ಈ ಭಾಗವತಧರ್ಮವನ್ನು ನಾನು ಹಿಂದೆ ಒಂದುಬಾರಿ ನಾರದರಿಂದ ಕೇಳಿ ತಿಳಿದಿರುವೆನು.

**ದೈತ್ಯ ಬಾಲಕರು :–** ಪ್ರಹ್ಲಾದನೇ ! ನೀನೂ, ನಾವೂ ಶಂಡಾಮರ್ಕರನ್ನು ಬಿಟ್ಟು ಅನ್ಯ ಗುರುಗಳನ್ನು ಕಾಣೆವು. ಅಕ್ಷರಾಭ್ಯಾಸ ನಿರತರಾದ ನಮಗೆ ಈಶ್ವರ ಜ್ಞಾನವನ್ನು ತಿಳಿಸಿಕೊಡುವ ಕಾರಣವೂ ಇಲ್ಲ. ಬಾಲಕರಿಗೇಕೆ ಈ ಈಶ್ವರನ ವಿಚಾರ ಎಂದು ನಾವಿದ್ದಾಗ ನೀನು ಹೇಳಿದ ವಿಜ್ಞಾನವು ನಮ್ಮ ಕಣ್ಣುಗಳನ್ನು ತೆರೆಸಿದೆ. ನೀನು ಅಂತಃಪುರದಲ್ಲಿರುವವನಾದ್ದರಿಂದ ನಾರದರ ಸಂಗವು ನಿನಗೆ ಹೇಗಾಯಿತು ? ಈ ಸಂಶಯವನ್ನು ಪರಿಹರಿಸು.

## ಆರನೆಯ ಅಧ್ಯಾಯ ಮುಗಿದುದು

**ಪ್ರಹ್ಲಾದ :–** ಹಿರಣ್ಯಕಶಿಪುವು ತಪಸ್ಸನ್ನು ಮಾಡಲು ಮಂದರಗಿರಿಗೆ ಹೋದಾಗ ದೇವತೆಗಳು ದೈತ್ಯಪುರವನ್ನು ಮುತ್ತಿ ದಾನವರನ್ನು ಸದೆಬಡಿದರು. ಸೋತ ದೈತ್ಯರು ಭೀತರಾಗಿ ದಿಕ್ಕಾಪಾಲಾಗಿ ಓಡಿಹೋದರು. ಇಂದ್ರನು ಗರ್ಭಿಣಿಯಾದ ನನ್ನ ತಾಯಿಯನ್ನು ಸೆರೆಹಿಡಿದು ಒಯ್ಯುತ್ತಿದ್ದಾಗ ದೈವೇಚ್ಛೆಯಿಂದ ಅಲ್ಲಿಗೆ ನಾರದರು ಬಂದು ನಿರಪರಾಧಿನಿಯಾದ ಆಕೆಯನ್ನು ಬಿಟ್ಟುಬಿಡುವಂತೆ ಇಂದ್ರನಿಗೆ ಹೇಳಿದರು.

**ಇಂದ್ರ :–** ಇವಳ ಉದರದಲ್ಲಿರುವವನು ಹಿರಣ್ಯಕಶಿಪುವಿನ ವೀರ್ಯೋದ್ಭವನು. ಅವನು ಹುಟ್ಟಿ ಅಪ್ಪನಿಗಿಂತ ದುಷ್ಟನಾದರೆ ಮಾಡುವುದೇನು ? ಇವಳು ಹೆತ್ತ ಕೂಡಲೇ ಶತ್ರುವಿನ ಮಗನನ್ನು ಕೊಂದು ಇವಳನ್ನು ಬಿಟ್ಟುಬಿಡುವೆನು.

**ನಾರದ :–** ಇಂದ್ರ ! ಇವಳ ಉದರದಲ್ಲಿರುವವನು ದುಷ್ಟನಲ್ಲ. ಪಾಪ ವಿದೂರ. ಮಹಾಭಾಗವತ. ಅನಂತಾನುಚರನು. ಅವನನ್ನು ನೀನು ಕೊಲ್ಲಲಾರೆ. ಏಕೆಂದರೆ ಅವನು "ಬಲೀ". ಅಂದರೆ ಬಲಕ್ಕೆ ಮುಖ್ಯಾಭಿಮಾನಿಯಾಗಿರುವುದರಿಂದ ಮಹಾ ವಾಯುದೇವರಿಗೆ ಬಲೀ ಎಂದು ಹೆಸರು. ಅವರು ಈ ಭಗವದ್ಭಕ್ತನ ಒಳಗೆ ಆವಿಷ್ಟರಾಗಿರುವರು. ಆದ್ದರಿಂದ ಈ ಮಗುವೂ "ಬಲೀ" ಆಗಿರುವನು. (ಈ ಮಾತಿಗೆ ಆಧಾರ ;– "ಅಥೋ ಶುಚಿಸ್ಮೃತೀದೇವೀ ಸುಷಾವ ಪುತ್ರಮುತ್ತಮಂ । ವಾಯುನಾ ಚ ಸಮಾವಿಷ್ಟಂ ಹರಿಪಾದಾಬ್ಜಸಂಶ್ರಯಂ ॥" – ಬ್ರಹ್ಮಕಾಂಡ ಗರುಡ ಪುರಾಣ, ಅ. 38. ಶ್ಲೋಕ 98. ಅರ್ಥ ;– ಶುದ್ಧಳಾದ ಕಯಾಧು ದೇವಿಯು ವಾಯುದೇವರಿಂದ ಚೆನ್ನಾಗಿ ಆವಿಷ್ಟನಾದ, ಶ್ರೀಹರಿಯ ಪಾದಕಮಲವನ್ನು

ಚೆನ್ನಾಗಿ ಆಶ್ರಯಿಸಿರುವವನೂ ಆದ್ದರಿಂದಲೇ ಉತ್ತಮ ಪುತ್ರನೂ ಆದ ಪ್ರಹ್ಲಾದ ನನ್ನು ಹೆತ್ತಳು.

ಪ್ರಹ್ಲಾದನು ಹುಟ್ಟುವಾಗಲೇ ವಾಯ್ವಾವೇಶ ಯುಕ್ತನೆಂದು ವೇದವ್ಯಾಸರು ಹೇಳಿರುವುದರಿಂದ ಅವನು ಹುಟ್ಟುವುದಕ್ಕೆ ಮುಂಚೆ ತಾಯಿಯ ಹೊಟ್ಟೆಯಲ್ಲಿರು ವಾಗಲೇ ವಾಯ್ವಾವೇಶವುಳ್ಳವನಾಗಿದ್ದನೆಂದು ಹೇಳಬೇಕಾಗಿಲ್ಲ. ಆದ್ದರಿಂದಲೇ ಜ್ಞಾನಿಗಳಾದ ನಾರದರು ಮಾತೃಗರ್ಭದಲ್ಲಿದ್ದ ಪ್ರಹ್ಲಾದನನ್ನು ವರ್ಣಿಸುವಾಗ "ಬಲೀ" ಎಂದು ಹೇಳಿರುವರು. ಹುಟ್ಟುಗುಣವೆಂದಿಗೂ ಹೋಗುವುದಿಲ್ಲವಷ್ಟೆ ? ವಾಯ್ವಾವೇಶವು ಹುಟ್ಟುಗುಣವಾದ್ದರಿಂದ, ಹುಟ್ಟಿದ ಮೇಲೆ ಪ್ರಹ್ಲಾದನಲ್ಲಿ ಯಾವಾಗಲೂ ವಾಯುದೇವರ ಆವೇಶವಿದೆಯೆಂದು ಹೇಳಲು ಸಂಕೋಚ ಪಡಬೇಕಾದ್ದಿಲ್ಲ.)

**ಪ್ರಹ್ಲಾದ :–** ಬಾಲಕರೇ ! ನಾರದರ ಈ ಮಾತನ್ನು ಕೇಳಿ ದೇವೇಂದ್ರನು ನನ್ನ ತಾಯಿಯನ್ನು ಬಿಟ್ಟುಕೊಟ್ಟು ಅವಳಿಗೆ ಪ್ರದಕ್ಷಿಣೆ ಹಾಕಿ ಸ್ವರ್ಗಕ್ಕೆ ಹೊರಟು ಹೋದನು, ಆಗ ಕಯಾಧು ದೇವಿಗೆ ಯಾರ ಆಶ್ರಯವೂ ಇಲ್ಲದುದನ್ನು ನೋಡಿ ನಾರದರು ಆಶ್ರಮವನ್ನು ಮಾಡಿ ಕೊಂಡುಅಲ್ಲಿಗೆ ಕರೆತಂದು ಕಾಪಾಡುತ್ತಿದ್ದರು. ನಮ್ಮ ತಾಯಿಯು ನಾರದರ ವಚನದಂತೆ ತನ್ನ ಗಂಡನು ತಪಸ್ಸನ್ನು ಮುಗಿಸಿ ಬರುವವರೆಗೂ ಅಲ್ಲೇ ಇದ್ದುಬಿಟ್ಟಳು. ನಮ್ಮಮ್ಮನು ಭಕ್ತಿಯಿಂದ ದೇವರ್ಷಿಗಳನ್ನು ಸೇವಿಸಿದಳು. ಸೇವೆಗೆ ಮೆಚ್ಚಿ ನಾರದರು ವರವನ್ನು ಕೇಳೆಂದಾಗ ಆ ಪತಿವ್ರತೆಯು "ನನ್ನ ಉದರ ದಲ್ಲಿರುವ ಕೂಸು ನಾನಿಷ್ಟಪಟ್ಟಾಗ ಹುಟ್ಟಬೇಕು ಮತ್ತು ಅಲ್ಲಿಯವರೆಗೂ ಗರ್ಭಸ್ಥ ಶಿಶುವು ಸುಕ್ಷೇಮದಿಂದಿರಬೇಕು" ಎಂಬ ಎರಡು ವರಗಳನ್ನು ಕೇಳಿಕೊಂಡಳು. ನಾರದರು "ತಥಾಸ್ತು" ಎಂದರು. ಅವರು ಧರ್ಮವನ್ನೂ, ಜ್ಞಾನವನ್ನೂ ಆಕೆಗೆ ಉಪದೇಶಿಸುವಾಗ ಕರುಣೆಯಿಂದ ಆಕೆಯ ಗರ್ಭದಲ್ಲಿದ್ದ ನನಗೂ ಜ್ಞಾನೋದಯ ವಾಗುವ ಹಾಗೆ ಅನುಗ್ರಹಿಸಿದರು. ಬಹುಕಾಲ ಕಳೆದುದರಿಂದಲೂ, ಹೆಂಗುಸಾದ್ದ ರಿಂದಲೂ ನಮ್ಮ ತಾಯಿ ಅದನ್ನೆಲ್ಲ ಮರೆತಿರುವಳು. ನಾರದರ ಅನುಗ್ರಹದಿಂದ ನನ್ನ ಜ್ಞಾನವು ಅಚ್ಚಳಿಯದಂತೆ ಇದೆ. "ನಿನಗೆ ಜ್ಞಾನವಾದರೆ ನಮಗೇನೂ ಫಲವಿಲ್ಲ. ಅಲ್ಲ ಮಾರುವವನಿಗೆ ಬೆಲ್ಲದ ಚಿಂತೆಯೇ"–ಎಂದು ಹೇಳಬೇಡಿ. ನನ್ನ ಮಾತಿನಲ್ಲಿ ವಿಶ್ವಾಸವಿಡಿ. ಶ್ರದ್ಧೆಯಿಂದ ಕೇಳುವ ನಿಮಗೆ ಜ್ಞಾನವಾಗುವುದು. ಅಷ್ಟೇ ಅಲ್ಲ. ಶ್ರದ್ಧೆಯುಳ್ಳ ಸ್ತ್ರೀಬಾಲಾದಿಗಳಿಗೂ ಯಥಾ ಯೋಗ್ಯವಾದ ಜ್ಞಾನವು ನನಗಾದಂತೆ ಅವರಿಗೂ ಆಗುವುದು.

## ಉಪದೇಶ

ಜನನ, ವೃದ್ಧಿ, ಕ್ಷುತ್, ನೀರಡಿಕೆ, ಹ್ರಾಸ ಮತ್ತು ಸಾವು ಈ ಆರೂ ದೇಹಕ್ಕೆ ಹೊರತು ಶ್ರೀಹರಿಗಿಲ್ಲ. ವಸಂತಾದಿ ಕಾಲಗಳಲ್ಲಿ ಆಯಾಕಾಲೀನ ಫಲಪುಷ್ಪಾದಿ ಫಲ ಪ್ರಾಪ್ತಿಯಾಗುವಂತೆ ದೇಹವೂ ಕಾಲನಾಮಕ ಪರಮಾತ್ಮನ ಅಧೀನವಾಗಿ ಜೀರ್ಣ ವಾಗುತ್ತಿರುವುದು.

ಶ್ರೀಹರಿಯು ಸ್ವರೂಪನಾಶರಹಿತನು, ನಿತ್ಯನು, ಅಪ್ರಾಕೃತ ದಿವ್ಯ ದೇಹವುಳ್ಳ ವನು. ಮುಖ್ಯನು, ಸಕಲ ತತ್ತ್ವನಿಯಾಮಕನು, ಶರೀರಪ್ರವರ್ತಕನು, ಜೀವನ ಪ್ರದನು, ವಿಕಾರರಹಿತನು, ಯಾವಾಗಲೂ ಒಂದೇ ಪ್ರಕಾರನಾಗಿರುವವನು, ಒಳ ಹೊರಗೆಲ್ಲೆಡೆಯೂ ವ್ಯಾಪ್ತನು, ಕರ್ಮಫಲಸಂಗವರ್ಜಿತನು, ಅವಿದ್ಯಾದೂರನೂ ಆಗಿ ವಿರಾಜಿಸುತ್ತಿರುವನು. ಇಂತಹ ಮಹಾಮಹಿಮನಾದ ವಿಷ್ಣುವು ಆಡಿಸಿದಂತೆ ಆಡುವ ಅಸ್ವತಂತ್ರರಾದ ಜೀವರು, ಶರೀರದಲ್ಲಿರುವ ಅಹಂಕಾರ–ಮಮಕಾರಗಳನ್ನು ಬಿಡು ವುದು ಉಚಿತವೂ, ಜ್ಞಾನವಾಗಲು ಕಾರಣವೂ ಆಗಿದೆ. ಬಂಗಾರದ ಗಣಿಯಲ್ಲಿ ದೊರೆತಕಲ್ಲಿನಿಂದ ಬಂಗಾರವನ್ನು ಬೇರ್ಪಡಿಸಿ ಪಡೆಯುವಂತೆ, ಭಕ್ತಿಯೋಗದಿಂದ ಜ್ಞಾನರಸವನ್ನು ಬೆರಸಿ ವೈರಾಗ್ಯ ಜ್ವಾಲೆಯಲ್ಲಿ ಕಲ್ಮಷವನ್ನೆಲ್ಲ ಸುಟ್ಟು ಬ್ರಹ್ಮಾ ನಂದವನ್ನು ಹೊಂದಲು ಪ್ರಯತ್ನಿಸುವುದೇ ಮನುಜ ಜನ್ಮದ ಸಾರ್ಥಕ್ಯ.

ಶ್ರೀಹರಿಯು ಜಡಚೇತನಗಳಿಂದ ಅತ್ಯಂತ ಭಿನ್ನನೆಂದು ತಿಳಿಯಬೇಕಾದರೆ ತತ್ತ್ವಗಣನೆಯು ಆವಶ್ಯಕ.

## ತತ್ತ್ವ ಸಂಖ್ಯಾನ

ಮೂಲಪ್ರಕೃತಿ, ಮಹತ್ತತ್ತ್ವ, ಅಹಂಕಾರತತ್ತ್ವ,ಪಂಚಭೂತಗಳು ಇವುಗಳಿಗೆ ಅಷ್ಟಪ್ರಕೃತಿ ಎನ್ನುವರು. ಪ್ರಕೃತಿಯ ಗುಣಗಳಾದ ಸತ್ತ್ವ, ರಜಸ್ಸು, ತಮಸ್ಸು ಇವು ಮೂರು, ಇಂದ್ರಿಯಗಳು ೧೧, ಶಬ್ದಾದಿಗಳು ೫ (ಒಟ್ಟು 27 ತತ್ತ್ವಗಳಾದರೂ) ಇಪ್ಪತ್ತು ನಾಲ್ಕು ತತ್ತ್ವಗಳೆಂದು ಕಪಿಲ ಮತ್ತು ಮನ್ವಾದಿಗಳು ಪರಿಗಣಿಸಿರುವರು. ಇಪ್ಪತ್ತುನಾಲ್ಕು ತತ್ತ್ವಾಭಿಮಾನಿಗಳಲ್ಲಿ ವ್ಯಾಪ್ತನಾಗಿರತಕ್ಕ ವಾಸುದೇವನು ಇಪ್ಪತ್ತೈದನೆಯ ಸ್ವತಂತ್ರತತ್ತ್ವನೆನಿಸಿರುವನು. ಅವನೇ ಸರ್ವೋತ್ತಮನು. ಪ್ರಕೃತಿಯ ಗುಣಗಳ ವಿಕಾರ ಮೊದಲಾದ ದೋಷಗಳ ಲೇಪವಿಲ್ಲದವನು. ಶುದ್ಧನು. ಸ್ವಗುಣ ಕ್ರಿಯಾದಿಗಳಿಂದ ಭಿನ್ನನಲ್ಲ. ಅನ್ಯಜೀವರೆಲ್ಲ ಪ್ರಕೃತಿನಿರ್ಮಿತವಾದ ದೇಹವನ್ನು ಹೊಂದುವರು ಮತ್ತು ನೀಗುವರು.

ಜಂಗಮ ಸ್ಥಾವರ ಜೀವರಲ್ಲಿ ಶ್ರೀಹರಿಯು ಪ್ರಕೃತಿಯಲ್ಲ, ಚತುರ್ಮುಖನಲ್ಲ, ರುದ್ರನಲ್ಲ. ಮತ್ತಾರೂ, ಆವುದೂ ಅಲ್ಲ, ಸರ್ವೋತ್ತಮನು–ಎಂದು ಶಾಸ್ತ್ರದಿಂದ

ವಿಚಾರಿಸುತ್ತ ಬಂದರೆ ಈ ಜ್ಞಾನವು ಖಚಿತವಾಗುವುದು. ಜಗಜ್ಜನ್ಮಾದಿ ಕಾರಣ ನಾರು ? ನಿರ್ದೋಷ ವೇದಪ್ರತಿಪಾದ್ಯನಾರು ? ಎಂಬುದನ್ನು ವಿಮರ್ಶಿಸಿ, ವಿಚಾರ ಮಾಡುತ್ತ ಬಂದ ಹಾಗೆ ಶ್ರೀಹರಿಯ ಮಹಿಮೆಯು ನಿಧಾನವಾಗಿ ತಿಳಿದು ಬರುವುದು.

## ಅಂಧತಮಸ್ಸು ಯಾರಿಗೆ

ಜೀವನಿಗೆ ಪ್ರಕೃತಿಬಂಧವಿರುವುದರಿಂದ ಅವನಿಗೇ ದೇಹಪ್ರಾಪ್ತಿ ನಾಶಗಳುಂಟು. ಸ್ವಪ್ನ, ಎಚ್ಚರಿಕೆ, ನಿದ್ರೆ ಈ ಅವಸ್ಥೆಗಳನ್ನು ತಂದು ಕೊಡುವವನು ಶ್ರೀಹರಿಯೇ. ಆ ಪ್ರಭುವೇ ಜನ್ಮ, ಸ್ಥಿತಿ, ನಾಶಕರ್ತನೂ ಹೌದು. ಶ್ರೀಹರಿಯು ಶರೀರದೊಳಗಿದ್ದು ಇಂದ್ರಿಯಗಳ ವ್ಯಾಪಾರಗಳನ್ನು ಮಾಡಿಸಿ, ಜೀವನಿಗೆ ಸುಖ, ದುಃಖ, ನಿದ್ರಾದ್ಯ ವಸ್ಥೆಗಳು, ಮರಣಾದಿಗಳು ಇವನ್ನೆಲ್ಲ ಸ್ವತಂತ್ರವಾಗಿ ಕೊಡುತ್ತಿರುವನು ಹೀಗಿರು ವಾಗ ಅವನನ್ನು ಕಾಣದೆ **'ಶ್ರೀಹರಿಯೇ ಜೀವನಾಗಿರುವನು. ಬೇರೆಯಲ್ಲ'** ಎಂದು ಹೇಳುವವರು ಅತ್ಯಂತ ಮೂಢರಲ್ಲವೆ ? ಗಂಧದಿಂದ ಅತ್ಯಂತ ಭಿನ್ನವಾದ ಗಾಳಿ ಯನ್ನು ತಿಳಿಯದೆ 'ದುರ್ಗಂಧವಾಯು, ಸುಗಂಧವಾಯು' ಎಂದು ಗಾಳಿಯೇ ಗಂಧ ಸ್ವರೂಪವೆಂದು ಭ್ರಾಂತಿಯಿಂದ ತಿಳಿಯುವಂತೆ **"ಜೀವನೇ ಬ್ರಹ್ಮಸ್ವರೂಪನು, ಬ್ರಹ್ಮನಿಗೆ ಅಜ್ಞಾನವು ಬಂದಿತು"** ಎಂದು ತಿಳಿಯುವುದೂ ಸರ್ವಥಾ ಸರಿಯಲ್ಲ. ಅನ್ಯಥಾಜ್ಞಾನದಿಂದ ಜನನಮರಣವೆಂಬ ಸಂಸಾರಬಾಧೆಯು ತಪ್ಪುವುದಿಲ್ಲ. ಅಯೋಗ್ಯರಿಗೆ ಈ ಅನ್ಯಥಾಜ್ಞಾನದಿಂದ ಅಂಧಂತಮಸ್ಸಾಗುವುದು.

## ಭಕ್ತಿಯೇ ಉತ್ತಮ ಮಾರ್ಗ

**ಗುಂಬಕಾಂಬೋದಿ ರಾಗ** **ಆದಿತಾಳ**

ಭಕ್ತಿ ಬೇಕು ವಿರಕ್ತಿ ಬೇಕು ಅ
ಶಕ್ತಿ ಬೇಕು ಮುಂದೆ । ಮುಕ್ತಿಯ ಬಯಸುವಗೆ ಅ. ಪ.
ಸತಿಯ ಅನುಕೂಲ ಬೇಕು । ಸುತನು ಸುಗುಣನಾಗಬೇಕು
ಮತಿವಂತನಾಗಬೇಕು । ಮಧ್ವಮತವ ಪೊಂದಬೇಕು ೧
ಜಪದಿ ಜಾಣಮೆ ಬೇಕು । ತಪದಿ ಬಲವಿರಬೇಕು
ಉಪವಾಸ ವ್ರತಬೇಕು । ಉಪಶಾಂತಿ ಇರಬೇಕು ೨
ಸಂಗ ಉತ್ತಮ ಬೇಕು, ದು । ಸ್ಸಂಗವ ಬಿಡಬೇಕು
ರಂಗವಿಟ್ಠಲನ ಪಾದ । ಹಿಂಗದೆ ಭಜಿಸಬೇಕು ೩

ಜಾಗ್ರದ್ದಶೆಯಲ್ಲಿ (ಎಚ್ಚರವಿರುವಾಗ) ಹರಿನಿರ್ಮಿತ ಪದಾರ್ಥಗಳನ್ನು ನೋಡಿ ಸತ್ಯವೆಂದು ತಿಳಿದಿರುವೆವಷ್ಟೆ ? ಅದರಂತೆ ಕನಸಿನ ಪದಾರ್ಥಗಳೆಲ್ಲವೂ ಶ್ರೀಹರಿ ಯಿಂದಲೇ ನಿರ್ಮಿತವಾಗಿವೆ. ಅವು ಅಸ್ಥಿರವೂ ಹೇಯವೂ ಆಗಿವೆ. ಹಾಗೆಯೇ ಸಂಸಾರವು ಹೇಯವೂ, ಅಸ್ಥಿರವೂ ಆಗಿದೆಯೆಂದು ತಿಳಿಯದೆ ಅದನ್ನೇ ಆಶ್ರಯಿಸಿ ಕೊಂಡಿರುವವನು ಶೋಕಮೋಹಗಳನ್ನೂ, ಭಯವನ್ನೂ ಹೊಂದುವನು. ಸ್ವಾಭಾ ವಿಕವಾಗಿ ಜೀವಸ್ವರೂಪಕ್ಕೆ ಜನನಮರಣಗಳಿಲ್ಲ. ಆದರೂ ಅಭಿಮಾನದಿಂದ ದೇಹ ವಿಕಾರಾದಿ ಸಂಬಂಧದ ಅನುಭವಗಳನ್ನು ತನ್ನದೆಂದೇ ಭಾವಿಸಿ ಜೀವನು ದುಃಖಿಸು ತ್ತಿರುವನು. ಈ ಸಂಸಾರವು ಸತ್ಯವೇ. ಗರುಡಮಂತ್ರದಿಂದ ವಿಷವು ಹೋಗುವಂತೆ ಶ್ರೀಹರಿಯ ಪ್ರಸಾದದಿಂದ ಸಂಸಾರವು ನಾಶವಾಗುವುದು. ಶ್ರೀಹರಿಯ ಪ್ರಸಾದವು ಜ್ಞಾನದಿಂದ ಉಂಟಾಗುವುದು. ಈ ಜ್ಞಾನವು ನಿಷ್ಕಾಮಕರ್ಮಾನುಷ್ಠಾನ ಪೂರ್ವಕ ಶ್ರವಣ, ಮನನ, ಧ್ಯಾನಗಳಿಂದ ಉಂಟಾಗುವುದು.

ಆದ್ದರಿಂದ ಕರ್ಮಬೀಜಗಳು ಮೊಳಕೆಯಾಗದಂತೆ ಬೆಂದು ಹೋಗಲು ಫಲಾಪೇಕ್ಷೆ ಯನ್ನು ಬಿಡುವುದೇ ಉಪಾಯವು. ಬುದ್ಧಿಯು ಸಂಸಾರ ಸಮುದ್ರದಲ್ಲಿ ಮುಳುಗ ದಂತೆ ಇರಬೇಕಾದರೆ ಅದಕ್ಕೆ ಸಾವಿರಾರು ಉಪಾಯಗಳಿದ್ದರೂ ಶ್ರೀಹರಿಯಲ್ಲಿ ಭಕ್ತಿಯೇ ಉತ್ತಮ ಮಾರ್ಗ.

ಸರ್ವಸ್ವವನ್ನೂ ಹರಿಗೆ ಅರ್ಪಿಸಿ ಗುರುಶುಶ್ರೂಷೆ ಮಾಡಿರಿ. ಸಾಧು ಭಕ್ತರ ಸಂಗದಲ್ಲಿ ನಿತ್ಯವೂ ಶ್ರೀಹರಿಯ ಮಹಿಮೆಯನ್ನು ಶ್ರದ್ಧೆಯಿಂದ ಕೇಳುತ್ತ ಬನ್ನಿ. ಶ್ರೀಹರಿಯನ್ನು ಪೂಜಿಸಿರಿ. ಅವನ ಗುಣಕರ್ಮಗಳನ್ನು ಹೊಗಳಿರಿ. ಅವನ ಪಾದಾರ ವಿಂದವನ್ನು ಧ್ಯಾನಿಸಿರಿ. ಅವನ ಚಿಹ್ನೆಗಳಾದ ಪ್ರತಿಮೆಗಳಿಗೆ ಶಿರಬಾಗಿ ನಮಿಸಿರಿ ಹರಿಯ ಸನ್ನಿಧಾನಯುಕ್ತರಾದ ಸಜ್ಜನರು ಚಲಪ್ರತಿಮೆಗಳು. ಅವರನ್ನು ಪೂಜಿಸಿರಿ. ಶ್ರೀಶನು ಸರ್ವಪ್ರಾಣಿಗಳ ಹೃದಯದಲ್ಲಿರುವನೆಂದು ಅನುಸಂಧಾನದಿಂದ ಸರ್ವಜೀವ ರಲ್ಲಿಯೂ ಅವರವರ ಯೋಗ್ಯತಾನುಸಾರ ಗೌರವ, ಪ್ರೀತಿ, ದಯೆ ಈ ಗುಣವನ್ನು ತೋರಿ ಅವರನ್ನು ಸಂತೋಷಪಡಿಸಿರಿ. ಈ ಸಾಧನೆಗಳಿಂದ ಜನನಮರಣಾದಿ ಆರು ವಿಕಾರಗಳು ದೂರವಾಗಿ ಮನಸ್ಸು ಶುದ್ಧವಾಗುವುದು. ಆಗ ವಾಸುದೇವನ ಪಾದಾರ ವಿಂದಗಳಲ್ಲಿ ಭೃಂಗನಂತೆ ಭಕ್ತನಾಗಿ ಜೀವನು ಸಚ್ಚಿದಾನಂದನ ಉಪಾಸನೆ ಮಾಡಿದಾಗ ಸಂಸಾರಗಿಂದ ಮುಕ್ತನಾಗುವನು.

ಶ್ರೀರಮಣನ ಸೃಷ್ಟಿ, ರಕ್ಷಣೆ, ಲಯ ಮುಂತಾದ ಲೀಲೆಗಳನ್ನು ಕೇಳಿ, ಲೀಲಾ ಶರೀರಗಳಿಂದ ಸ್ವಾಮಿಯು ಮಾಡಿದ ಲೋಕೋತ್ತರ ಚರಿತ್ರೆಯನ್ನು ಕೇಳಿ, ಹರ್ಷೋ ದ್ರೇಕದಿಂದ ಗಾತ್ರವು ಪುಳಕಾಂಕಿತವಾಗಲು, ನೇತ್ರವು ಆನಂದಬಾಷ್ಪ ಪೂರಿತವಾಗಲು

ಮ್ಮೈಮರೆದು ಹಾಡಿ, ಪಾಡಿ, ಕುಣಿದು, ರೋದಿಸಿ "ಹರೇ ! ನಾರಾಯಣ ! ಜಗತ್ಪತೇ!" ಎಂದು ಗಟ್ಟಿಯಾಗಿ ಚೀರಿ, ನಾಚಿಕೆಯನ್ನು ತೂರಿ, ಮತ್ತೆ ಮತ್ತೆ ಗ್ರಹ ಬಡಿದವನಂತೆ ವರ್ತಿಸುವ ಏಕಾಂತಭಕ್ತನು ಜೀವನ್ಮುಕ್ತನೆಂದು ತಿಳಿಯಿರಿ. ಅವನ ಸಾಂಸಾರಿಕ ಬಂಧವು ಸಡಿಲವಾಗಿರುವುದು. ಅವನ ಮನಸ್ಸು ಭಕ್ತಿರಸ ಭರಿತ. ಅವನ ಕರ್ಮಗಳು ಸುಟ್ಟು ಕರಕಾಗಿ ನಷ್ಟವಾಗಿವೆ.

ಶ್ರೀಹರಿಯ ಮಹಿಮಾಶ್ರವಣವು ಸಂಸಾರಮೋಚಕ ಮಾತ್ರವಲ್ಲ. ಮೋಕ್ಷ ದಲ್ಲಿ ಆನಂದವು ಹೆಚ್ಚಲೂ ಕಾರಣವೆಂದು ಮುಕ್ತರು ಹಾಗೂ ಅಪರೋಕ್ಷ ಜ್ಞಾನಿಗಳು ಬಿಡದೆ ರಮಾರಮಣನ ಗುಣಕಥನ ಮಾಡುತ್ತಿರುವರು. ಆದ್ದರಿಂದ ನಮ್ಮ ಮನಸ್ಸಿ ನಲ್ಲಿಯೇ ನೆಲೆಸಿರುವ ಸ್ವಾಮಿಯನ್ನು ಭಜಿಸಿ ಮುಕ್ತರಾಗುವುದು ಯುಕ್ತವಾಗಿದೆ.

ಅಸುರ ಬಾಲಕರೇ ! ನಮ್ಮಲ್ಲಿ ನಿಂತು, ನಮ್ಮ ಸ್ವಾಮಿಯಾಗಿ ಕಾಪಾಡುತ್ತಿ ರುವ ಶ್ರೀಹರಿಯನ್ನು ಭಜಿಸುವುದರಲ್ಲಿ ಕಷ್ಟವೇನಿದೆ ಹೇಳಿ? ನಮ್ಮ ನಿಜವಾದ ಬಂಧುವು ಶ್ರೀ ಹರಿಯೇ ! ಮಿಕ್ಕವರು ದೇಹ ಬಂಧುಗಳು ವಿಷಯಗಳಲ್ಲಿ ಲಂಪಟ ರಾಗದೆ ಹರಿಯನ್ನು ಭಜಿಸೋಣ !

ಸಂಪತ್ತು, ಅದನ್ನು ಬಯಸುವ ಮಡದಿ, ಮನೆ, ಪಶು, ಧನ, ಮಕ್ಕಳು, ಆನೆ, ರಥ, ಕುದುರೆ ಇವೇ ಮೊದಲಾದ ಅರ್ಥಕಾಮ ಸಾಧನಗಳು ಎಲ್ಲವೂ ಚಂಚಲ ಗಳು. ಕ್ಷಣಭಂಗುರವಾದ ದೇಹದಲ್ಲಿ ನಿಂತಿರುವ ಜೀವನಿಗೆ ಈ ಚಂಚಲ ಪದಾರ್ಥ ಗಳಿಂದೇನು ಸುಖವಾಗುವುದು ?

ಯಾಗಾದಿಗಳಿಂದ ದೊರೆಯುವ ಸ್ವರ್ಗವೂ ಪ್ರಾಕೃತ ಮತ್ತು ಅಸ್ಥಿರ. ಮಹರ್ಲೋಕಾದಿಗಳಿಗಿಂತ ಅಧಮ. ಆದ್ದರಿಂದ ಫಲಾಪೇಕ್ಷೆಯಿಂದ ಮಾಡುವ ಕರ್ಮವನ್ನು ಬಿಡಿ. ಶಾಶ್ವತವಾದ ಸುಖವನ್ನು ಕೊಡುವ, ಮುಕ್ತಿ ಸಾಮ್ರಾಜ್ಯಕ್ಕೆ ಸೇರಿಸುವ ಮುಖ್ಯಪ್ರಾಣದೇವರನ್ನೂ, ಮುಕ್ತಿಕೊಡುವ ಮುಕುಂದನನ್ನೂ ಭಕ್ತಿ ಯಿಂದ ಭಜಿಸಿರಿ.

ಇಲ್ಲಿ ನಾವು ಸುಖಬೇಕೆಂದೂ, ದುಃಖಬೇಡವೆಂದೂ ಕರ್ಮ ಮಾಡುತ್ತೇವೆ. ಆದರೂ ನಮಗೆ ಒಲ್ಲದ ದುಃಖವೇ ಬರುತ್ತಿದೆ. ಬೇಕೆಂದು ಬಯಸುವ ಸುಖವು ಬರುತ್ತಿಲ್ಲ. ಸುಖಕ್ಕಾಗಿ ಮಾಡುವ ಪ್ರಯತ್ನದಿಂದ ಆಯಾಸ ಮತ್ತು ವ್ಯಯಗಳೆಂಬ ದುಃಖವೇ ದೊರೆತು, ಸದಾ ವ್ಯಥೆಪಡುತ್ತಿರುವ ನಮಗೆ ವಿವೇಕವಿದೆಯೆ ? ಪ್ರವೃತ್ತಿ ಮಾರ್ಗವು ದುಃಖವನ್ನೇ ಕೊಡುವುದು. ನಿವೃತ್ತಿ ಮಾರ್ಗವು ಸುಖವನ್ನೇ ಕೊಡು ವುದು. ಕಾಮವನ್ನು ಬಯಸುವ ದೇಹವು ನಮ್ಮದಲ್ಲ. ಕ್ಷಣಭಂಗುರವಾದ ದೇಹವು ಬಿದ್ದುಹೋದರೆ ಕಾಮಿತಗಳಿದ್ದೇನು ಫಲ ? ನೆಚ್ಚಿಕೊಂಡ ಶರೀರವೇ ಹೀಗಾದ

ಮೇಲೆ ಶರೀರ ಸಂಬಂಧಿಗಳಾದ ಮಡದಿ, ಮಕ್ಕಳು, ಮನೆ, ಹಣ ರಾಜ್ಯ, ಕೋಶ, ಮಂತ್ರಿ, ಆನೆ, ಕುದುರೆ ಮುಂತಾದುವು ಶಾಶ್ವತಗಳೆ ? ಸುಖಪ್ರದಗಳೆ ? ದೇಹವು ಬಿದ್ದು ಹೋದಮೇಲೆ, ಅದನ್ನು ದೂರದಲ್ಲಿಟ್ಟು ಸುಡುವ ದಾರಾಪುತ್ರಾದಿಗಳಿಂದಾಗಲಿ ಮನೆಧನಗಳಿಂದಾಗಲಿ ನಮಗೇನು ಪ್ರಯೋಜನ ? ನಿತ್ಯಾನಂದಮಹಾನಿಧಿಯಾದ ಶ್ರೀಹರಿಗೆ ಆ ದಾರಾದಿಗಳಿಂದ ಪ್ರಯೋಜನವೇನೂ ಇಲ್ಲವೆಂದು ಹೇಳಬೇಕಾದ್ದೇ ಇಲ್ಲ. ಗರ್ಭದಲ್ಲಿ ಬಿದ್ದಾಗಿನಿಂದ ಚಿತೆಯ ಮೇಲೆ ಮಲಗುವವರೆಗೂ ನಾವು ಮಾಡಿರುವ ಒಳ್ಳೆಯ ಕಾರ್ಯವೇನು ? ಆಲೋಚಿಸಿರಿ. ನಮ್ಮ ದೇಹದಿಂದ ನಮಗಾದ ಪ್ರಯೋಜನವಾದರೂ ಯಾವುದು ? ಏನೂ ಇಲ್ಲ. ಶ್ರೀಹರಿಯ ಅಧೀನನಾಗಿದ್ದು ದೇಹದಲ್ಲಿ ಬಂದು ಕರ್ಮಗಳನ್ನು ಮಾಡಿ, ಅವುಗಳ ಫಲವನ್ನು ಅನುಭವಿಸಲು ಮತ್ತೊಂದು ದೇಹವನ್ನು ಹೊಂದುತ್ತಿರುವ ಅವಿವೇಕಿಯು ಶ್ರೀ ಕಾಂತನ ಪಾದವನ್ನು ಹೊಂದುವುದೆಂತು ? ಆದ್ದರಿಂದ ಧರ್ಮಾರ್ಥ ಕಾಮಗಳೆಲ್ಲವೂ ಅನರ್ಥಗಳೇ ಎಂದು ಮನಗಂಡು ನಿಶ್ಚಲರಾಗಿ ನಿವೃತ್ತ ಮಾರ್ಗದಲ್ಲಿ ನಡೆದು ಭಕ್ತಿ ಯಿಂದ ಭಗವಂತನನ್ನು ಭಜಿಸಿರಿ.

ಶ್ರೀಹರಿಯು ಸರ್ವ ಪ್ರಾಣಿಗಳಂತರ್ಯಾಮಿಯೂ, ಪ್ರಿಯನೂ ಆಗಿರುವನು. ಅವರವರು ಮಾಡಿದ ಕರ್ಮವನ್ನು ಅವರವರಿಗೇ ಕಟ್ಟಿ ಉಣಿಸುವನು.

ದೇವತೆಯಾಗಲೀ, ದಾನವನಾಗಲೀ, ಮಾನವನೇ ಆಗಲಿ ಯಾರೇ ಆಗಲೀ ಮುಕುಂದನ ಚರಣವನ್ನು ಭಕ್ತಿಯಿಂದ ಭಜಿಸಿದವನು ಮುಕ್ತನಾಗಿ ಸುಖಿಸುವನು. ಈ ವಿಷಯದಲ್ಲಿ ನಾನೇ ನಿದರ್ಶನ. ಮುಕುಂದನನ್ನು ಮೆಚ್ಚಿಸಲು ವಿಪ್ರನೇ ಆಗ ಬೇಕಾದ್ದಿಲ್ಲ. ಋಷಿಯೇ ಆಗಬೇಕಾಗಿಲ್ಲ. ಭಕ್ತಿಯಿಲ್ಲದ ಆಚಾರ, ಶಾಸ್ತ್ರಜ್ಞಾನ, ದಾನ, ವ್ರತ, ಯಜ್ಞ, ಯಾತ್ರಾದಿಗಳು ಎಂದಿಗೂ ಹರಿಗೆ ಪ್ರೀತಿಕರವಲ್ಲ. ಯಾರೇ ಆಗಲಿ ಹರಿಯ ಮಹಿಮೆಯನ್ನರಿತು ನಿರ್ವ್ಯಾಜಭಕ್ತಿಯನ್ನು ಮಾಡಿದರೇ ಶ್ರೀ ಹರಿಯು ಮೆಚ್ಚುವನು. ಭಕ್ತಿಯಿಲ್ಲದ ದಾನವ್ರತ ಮೊದಲಾದುವೆಲ್ಲ ಬೂಟಾಟಿಕೆ ಯೆಂದೇ ತಿಳಿಯಿರಿ.

ದಾನವರೇ ! ನಮಗೆ ನಾವು ಪ್ರೀತಿಪಾತ್ರರಲ್ಲವೆ ? ಅಂತೆಯೇ ಶ್ರೀಹರಿಯು ನಮಗೂ ಹೆಚ್ಚು ಪ್ರೀತಿಪಾತ್ರನೆಂದು ಅರಿತು ಭಕ್ತಿಯನ್ನು ಮಾಡಿ. ಅವನು ಸರ್ವ ಜೀವನಿಯಾಮಕನು ಹಾಗೂ ಸರ್ವೋತ್ತಮನೆಂದು ತಿಳಿಯಿರಿ. ದೈತ್ಯರು, ಯಕ್ಷರು ಸ್ತ್ರೀಯರು, ಶೂದ್ರರು, ವ್ರಜವಾಸಿಗಳು (ಗೊಲ್ಲರು), ಪಕ್ಷಿ ಪಶುಗಳು ವೇದಾಂತ ಶಾಸ್ತ್ರವನ್ನು ಓದುವ ಪುಣ್ಯ ದೊರೆಯದೆ ಇದ್ದಾಗಲೂ ಅನಂತ ಜನ್ಮ ಸಂಸ್ಕಾರ ಗಳಿಂದ ಬಂದ ಭಕ್ತಿಯಿಂದ ಮುಕ್ತರಾದರು. ಶ್ರೀ ನಾರಾಯಣನು ಸರ್ವತ್ರ ನೆಲೆ ಸಿರುವನೆಂದು ನಂಬಿ, ಆಯಾ ಅಧಿಷ್ಠಾನಗಳ ಯೋಗ್ಯತಾನುಸಾರವಾಗಿ ಅವುಗಳಲ್ಲಿ

ನೆಲೆಸಿರುವ ಸ್ವಾಮಿಯನ್ನು ನಮ್ಮ ಯೋಗ್ಯತೆಗೆ ತಕ್ಕಂತೆ ಪೂಜಿಸುವುದರಿಂದ ನಾವು ಪ್ರಯೋಜನವನ್ನು ಚೆನ್ನಾಗಿ ಹೊಂದುತ್ತಿರುವೆವು. "ಶ್ರೀಹರಯೇ ನಮಃ"

## ಏಳನೆಯ ಅಧ್ಯಾಯ ಮುಗಿದುದು

**ನಾರದ :–** ಧರ್ಮರಾಜನೇ ! ದೈತ್ಯ ಬಾಲಕರು ಪ್ರಹ್ಲಾದನ ವಚನ ಗಳನ್ನು ಕೇಳಿ, ಅವನ ಉಪದೇಶವು ಪ್ರಾಮಾಣಿಕವೂ, ನಿರ್ದೋಷವೂ ಆಗಿರುವು ದೆಂದು ಅರಿತರು. ('ದೇವಾಃ ಶಾಪಾಭಿಭೂತಾಸ್ತು ಪ್ರಹ್ಲಾದಾದ್ಯಾ ಬಭೂವಿರೇ' ಎಂದು ಶ್ರೀಮದಾಚಾರ್ಯರಿಂದ ಉದಾಹೃತವಾದ ಪುರಾಣೋಕ್ತಿಯಂತೆ ಶಾಪಗ್ರಸ್ತ ರಾದ ದೇವತೆಗಳೇ ದೈತ್ಯ ಕುಲದಲ್ಲಿ ಹುಟ್ಟಿರುವರು. ಅವರೆಲ್ಲರಿಗೂ ಪ್ರಹ್ಲಾದನೇ ಬಿಂಬನಾಗಿ ಸ್ವರೂಪೋದ್ಧಾರಕ ಗುರುವೂ ಆಗಿರುವನು. ಆದ್ದರಿಂದಲೇ ಪ್ರಹ್ಲಾದನ ಸದುಪದೇಶವು ಅವರಿಗೆ ಚೆನ್ನಾಗಿ ಪರಿಣಾಮವಾಯಿತು. ಪ್ರಹ್ಲಾದನ ಅವತಾರರಾದ ಶ್ರೀಜಗನ್ನಾಥದಾಸರಿಂದ ವಿರಚಿತವಾದ ಹರಿಕಥಾಮೃತಸಾರವೇ ಇದಕ್ಕೆ ಸಾಕ್ಷಿ). ಅವರೆಲ್ಲರೂ ಶಂಡಾಮರ್ಕರ ಉಪದೇಶವನ್ನು ತ್ಯಜಿಸಿ ಪ್ರಹ್ಲಾದನನ್ನು ಅನುಸರಿಸಿದರು.

ಗುರುಪುತ್ರರು ನಡೆದ ವೃತ್ತಾಂತವನ್ನು ತಿಳಿದು ಭೀತರಾಗಿ ರಾಜನಿಗೆ ಪ್ರಹ್ಲಾದನ ದುರ್ನಯವನ್ನು ತಿಳಿಸಿದರು. ದುಃಸಹವಾದ ಮಗನ ವಿರೋಧ ಮಾರ್ಗಾನುಸರಣವನ್ನು ಕೇಳಿ ದೈತ್ಯೇಂದ್ರನಾದ ಹಿರಣ್ಯಕಶಿಪುವು ಮಗನನ್ನು ಕೊಂದು ಬಿಡಲು ನಿಶ್ಚಯಿಸಿದನು. ಕಠೋರಮನಸ್ಕನಾದ ಅವನು ತನ್ನ ಮುಂದೆ ವಿನಯದಿಂದ ತಲೆಬಾಗಿ ಕೈಮುಗಿದು ನಿಂತ ಮಗನನ್ನು ನೋಡಿ ಕೆರಳಿದ ಹಾವಿನಂತೆ ಮಾತಾಡಿದನು.

**ಹಿರಣ್ಯಕಶಿಪು :–** ದುರ್ವಿನೀತನೇ ! ದುರ್ಬುದ್ಧಿಯೆ ! ನನ್ನ ಶಾಸನವನ್ನು ಧಿಕ್ಕರಿಸುವ ನಿನ್ನನ್ನು ಯಮಲೋಕಕ್ಕೆ ಅಟ್ಟಿಬಿಡುವೆನು. ಭ್ರೂಭಂಗ ಮಾತ್ರದಿಂದ ಮೂರು ಲೋಕದ ಪ್ರಜೆಗಳನ್ನು-ರಾಜರನ್ನು ನಡುಗಿಸುವ ನನ್ನನ್ನೂ, ನನ್ನ ಶಾಸನ ವನ್ನೂ ಧಿಕ್ಕರಿಸುವೆಯಾ ? ಯಾರಿಂದ ನಿನಗೆ ಈ ಬಲ ?

**ಪ್ರಹ್ಲಾದ :–** ರಾಜನೇ ! ನಿನಗೆ, ನನಗೆ, ಬಲಿಷ್ಠರೆಂದು ಪ್ರಸಿದ್ಧರಾದ ಸರ್ವ ರಿಗೂ, ಬಲಪ್ರದನಾಗಿ ಬಲ ಎನಿಸಿರುವವನು ಶ್ರೀಹರಿಯು. ಅವರರಾದ ದೇವತೆ ಗಳಿಗಿಂತಲೂ ಶ್ರೇಷ್ಠರೆನಿಸುವ ಬ್ರಹ್ಮಾದಿಗಳಿಗೂ ಅವನೇ ಬಲಪ್ರದನಾಗಿರುವನು. ಇತರ ಸರ್ವರಿಗೂ ಇಂದ್ರನು ಬಲಪ್ರದನಾದರೆ ಅವನಿಗಿರುವ್ರನೂ, ಅವನಿಗೆ ಬ್ರಹ್ಮ ವಾಯುಗಳೂ ಅವರಿಗೆ ಶ್ರೀಹರಿಯೂ ಬಲಪ್ರದನು ಅವನಿಗೆ ಇನ್ನೊಬ್ಬ ಬಲಪ್ರದನಿಲ್ಲ.

ಅವನೇ ಸರ್ವೋತ್ತಮನು. ಓಜಸ್ಸು ಅಂದರೆ ಕೆಚ್ಚು–ಕಾಂತಿ, ಸಹನೆ, ಬಲ, ಇಂದ್ರಿಯ ಪಾಟವ ಇವಕ್ಕೆಲ್ಲ ಅವನೇ ಪ್ರಭುವು. ಆ ಪರಾಕ್ರಮಶಾಲಿಯು ಕಾಲ ರೂಪದಿಂದ ವ್ಯಾಪ್ತನಾಗಿ, ತನ್ನಧೀನವಾಗಿರುವ ತ್ರಿಗುಣಗಳಿಂದ ಬ್ರಹ್ಮಾಂಡವನ್ನು ಸೃಷ್ಟಿಸಿ, ಪಾಲಿಸಿ, ಸಂಹರಿಸುತ್ತಿರುವನು. ರಾಜನೇ ! ಅಸುರ ಭಾವವನ್ನು ಬಿಡು. ಮನಸ್ಸನ್ನು ರಮಾರಮಣನಲ್ಲಿಡು ನಿನಗೆ ಶತ್ರುಗಳೆಂಬುವರು ಯಾರೂ ಇಲ್ಲ. ನಿನ್ನ ಮನಸ್ಸೇ ನಿನಗೆ ಶತ್ರುವಾಗಿ, ಅಪಾಮಾರ್ಗದಲ್ಲಿ ಒಯ್ದು ಕೆಡಿಸುತ್ತಿದೆ. ನಮ್ಮ ನಮ್ಮ ಯೋಗ್ಯತೆಗೆ ತಕ್ಕಂತೆ ಮನೋಧಾರಣೆಯೇ ಶ್ರೀಹರಿಯ ಪೂಜೆಯೆಂದು ತಿಳಿ. ಜ್ಞಾನ ಭಕ್ತಿಯೆಂಬ ನಿಧಿಯನ್ನು ದೋಚುತ್ತಿರುವ ಇಂದ್ರಿಯಪಂಚಕ ಸಹಿತವಾದ ಮನಸ್ಸೆಂಬ ಶತ್ರುಷಟ್ಕವನ್ನು ಜಯಿಸದೆ ಕೆಲವರು ಹತ್ತುದಿಕ್ಕುಗಳನ್ನೂ ಗೆದ್ದೆವೆಂದು ತಿಳಿದಿರುವರು. ಮನಸ್ಸನ್ನು ತನ್ನ ವಶಮಾಡಿಕೊಂಡು, ಇಂದ್ರಿಯ ದಾಸನಾಗದೆ, ಯಥಾಯೋಗ್ಯವಾಗಿ, ಸರ್ವಪ್ರಾಣಿಗಳಲ್ಲಿರುವ ಶ್ರೀಹರಿಯನ್ನು ನೆನೆದು ನಡೆಯುವ ಜ್ಞಾನಿಗಳಿಗೆ ಶತ್ರುಗಳೇ ಇರುವುದಿಲ್ಲ. ಒಳಗೂ ಇರುವುದಿಲ್ಲ. ಅಂತಹವನಿಗೆ ಬಾಹ್ಯ ಶತ್ರುಗಳಾದರೂ ಏನೂ ಮಾಡಲಾರರು. ಅಜ್ಞಾನದಿಂದ ಕಲ್ಪಿಸಿಕೊಂಡವನಿಗೇ ಶತ್ರುಮಿತ್ರಾದಿಗಳು.

**ಹಿರಣ್ಯಕಶಿಪು :** ಛೀ ಮೂರ್ಖ ! ನೀನು ಸಾಯಬೇಕೆಂದಿರುವೆ. ಗೊತ್ತಾಯಿತು. ಏನು ಬೊಗಳುತ್ತಿರುವೆ ? ಸಾಯುವವರಿಗೆ ಸನ್ನಿ ಬಡಿದಂತೆ ಬಡಬಡಿಸುತ್ತಿರುವೆ. ನಿರ್ಭಾಗ್ಯನೆ ! ನಾನಲ್ಲದೆ ಜಗದೀಶನು ಯಾರು ? ಅವನೆಲ್ಲಿರುವನು ? ಬೊಗಳು.

**ಪ್ರಹ್ಲಾದ :–** ಮುಖ್ಯ ಪ್ರಾಣನಲ್ಲಿರುವವನೇ ಜಗನ್ನಾಥನು. ಅವನು ಸರ್ವತ್ರ ನೆಲೆಸಿರುವನು.

**ಹಿರಣ್ಯಕ :–** ಹಾಗಾದರೆ ಅವನು ಈ ಕಂಬದಲ್ಲಿರುವನೆ ?

**ಪ್ರಹ್ಲಾದ :–** ಇರುವನು. ಕಣ್ದೆರೆದು ನೋಡು.

**ಹಿರಣ್ಯಕ :–** ಇರಲಿ, ಈ ರೀತಿ ಪ್ರಲಪಿಸುವ ನಿನ್ನ ತಲೆಯನ್ನು ನಾನೀಗಲೇ ಕತ್ತರಿಸುವೆನು. ಬಂದು ಕಾಪಾಡಲಿ ಆ ನಿನ್ನ ಸ್ವಾಮಿಯು.

**ನಾರದ :–** ಹಿರಣ್ಯಕಶಿಪುವು ಹೀಗೆ ಆರ್ಭಟಿಸಿ, ಸಿಂಹಾಸನದಿಂದಿಳಿದು, ಖಡ್ಗವನ್ನು ಹಿಡಿದು ರೋಷದಿಂದ ಮಹಾಭಾಗವತನನ್ನು ಕೊಲ್ಲಬೇಕೆಂದು ಬರುತ್ತ ಮುಷ್ಟಿಯಿಂದ ಸ್ತಂಭವನ್ನು ಗುದ್ದಿದನು. ತಕ್ಷಣವೇ ಆ ಸ್ತಂಭದಿಂದ ಬ್ರಹ್ಮಾಂಡ ಕಟಾಹವೇ ಭೇದಿಸುವಂತೆ ಅತಿಭಯಂಕರ ಧ್ವನಿಯು ಹೊರಹೊಮ್ಮಿತು. ಆಗ

ಬ್ರಹ್ಮಾದಿಗಳೆಲ್ಲರೂ ಪ್ರಳಯಕಾಲವೇ ಸಮೀಪಿಸಿತೆಂದು ದಿಗ್ಭ್ರಾಂತರಾದರು. ದೈತ್ಯ ನಿಗೂ ಈ ಶಬ್ದವು ಭಯವನ್ನುಂಟು ಮಾಡಿತು. ಅದು ಯಾರಿಂದ ಬಂದಿತೆಂಬುದು ತಿಳಿಯಲಿಲ್ಲ. ದೈತ್ಯನ ಪರಿವಾರದದನುಜನಾಯಕರು ಎದೆಯೊಡೆದು ಓಡಿದರು. ಆಗ ಶ್ರೀನರಸಿಂಹನು ತನ್ನ ಭೃತ್ಯನಾದ ಪ್ರಹ್ಲಾದನ ವಚನವನ್ನು ನಡೆಸಿಕೊಡಲು ಆ ಸ್ತಂಭದಿಂದ ಕೇವಲ ಮೃಗವಲ್ಲದ–ನರನಲ್ಲದ ಹಾಗೂ ಮೃಗವೂ ಆದ ನರನೂ ಆದ ಅದ್ಭುತ ರೂಪದಿಂದ ಪ್ರಾದುರ್ಭವಿಸಿದನು.

ಶ್ರೀಮದ್ಭಾಗವತವು 'ಸತ್ಯಂ ವಿಧಾತುಂ ನಿಜಭೃತ್ಯ ಭಾಷಿತಂ' ಎಂದು ಹೇಳು ತ್ತಿದೆ. ಇದಕ್ಕೆ ಅನೇಕ ಅರ್ಥಗಳಿವೆ :– 1) ನನ್ನನ್ನು ಅನನ್ಯ ಭಾವದಿಂದ ಭಜಿಸುವ ಭಕ್ತರ ಯೋಗಕ್ಷೇಮವನ್ನು ನಾನು ವಹಿಸುವೆನು. ಹಾಗೂ ನನ್ನ ಭಕ್ತನು ಎಂದಿಗೂ ನಾಶಹೊಂದುವುದಿಲ್ಲ–ಎಂಬ ಮಾತನ್ನು ಸತ್ಯಮಾಡುವುದಕ್ಕಾಗಿ ಬಂದನು. 2) ಬ್ರಹ್ಮ ಸೃಷ್ಟಿಸಿದ ಜೀವರೇ ಮೊದಲಾದವರಿಂದ ಸಾವು ಬೇಡ ವೆಂದು ಹಿರಣ್ಯಕಶಿಪುವಿಗೆ ವರವನ್ನು ಕೊಟ್ಟಿರುವ ಬ್ರಹ್ಮದೇವರ ಮಾತನ್ನು ಸತ್ಯ ಮಾಡಬೇಕೆಂದು ಬಂದನು. 3) ಮೂರು ಜನ್ಮಗಳಲ್ಲಿ ದೈತ್ಯರಾಗಿ ಹರಿಯಿಂದಲೇ ಸಂಹೃತರಾಗಿ ತಿರುಗಿ ಬನ್ನಿ- ಎಂದು ಹೇಳಿದ ಸನಕಾದಿಗಳ ಮಾತನ್ನು ಸತ್ಯ ಮಾಡು ವುದಕ್ಕಾಗಿ ಬಂದನು. 4) ಶ್ರೀಹರಿಯು ಶುಕ್ಲಶೋಣಿತ ಪ್ರಭವಪ್ರಾಕೃತ ದೇಹನಲ್ಲ. ಆನಂದಮಯನು–ಎಂದು ಹೇಳುವ ಭಕ್ತರ ಮಾತನ್ನು ಸತ್ಯ ಮಾಡು ವುದಕ್ಕಾಗಿ ಶ್ರೀ ನೃಸಿಂಹನು ಸ್ತಂಭದಿಂದ ಆವಿರ್ಭವಿಸಿದನು. ಪ್ರಹ್ಲಾದನು ತನ್ನ ಭೀತಿ ಎಂದರೆ ರಕ್ಷಣೆಗಾಗಿ ಮಾತನಾಡದೆ 'ಮಾಧವನು ಸರ್ವವ್ಯಾಪಿ ಹಾಗೂ ಸರ್ವೇಶ್ವರನು' ಎಂದು ಜೀವವನ್ನೇ ಪಣ ಇಟ್ಟಿದ್ದನು. ಇವನನ್ನು ರಕ್ಷಿಸುವುದೇ ಕರ್ತವ್ಯವೆಂದೂ, ಸಕಲ ಚರಾಚರಗಳಲ್ಲಿಯೂ ತಾನು ವ್ಯಾಪ್ತನೆಂಬುದನ್ನು ಪ್ರತ್ಯಕ್ಷ ವಾಗಿ ತೋರಿಸಲು ದಯಾಮಯನಾದ ಶ್ರೀಹರಿ ಅನಂತ ನೃಸಿಂಹಾಕಾರಗಳಿಂದ ಲೋಕವನ್ನು ತುಂಬಿನಿಂತು ಹಿರಣ್ಯಕಶಿಪುವಿಗಾಗಿ ಸಭಾಸ್ತಂಭದಿಂದ ಪ್ರಕಟನಾದನು.

ಹಿರಣ್ಯಕಶಿಪುವು 'ಈ ವಿಚಿತ್ರ ಪ್ರಾಣಿ ಯಾವುದು ? ನನ್ನನ್ನು ಕೊಲ್ಲಲು ಹರಿಯೇ ಈ ರೂಪದಿಂದ ಬಂದಿರುವನೇನು ?' ಎಂದು ಹೇಳುತ್ತಾ ಗದೆಯಿಂದ ನರಸಿಂಹನನ್ನು ಹೊಡೆಯಲು ಬಂದನು.

**ಪ್ರಹ್ಲಾದ :** "ಈಗಲಾದರೂ ಬಾಗಿ ನಮಿಸು ಕೊನೆಗಾಲ ನಿನಗೆ ತಂದೆ" ಎಂದನು.

**ನಾರದ :–** ಈ ಮಾತನ್ನು ಲೆಕ್ಕಿಸದೆ ದೈತ್ಯನು ನರಹರಿಯನ್ನು ಹೊಡೆದನು. ನರಹರಿಯು ಅವನನ್ನು ಗರುಡನು ಹಾವನ್ನು ಹೇಗೋ ಹಾಗೆ ಹಿಡಿದನು. ದೈತ್ಯನು

ಕೊಸರಿ ತಪ್ಪಿಸಿಕೊಂಡು ಯುದ್ಧಕ್ಕೆ ನಿಂತನು. ಚಂದ್ರಾದಿ ದೇವತೆಗಳು ಇದನ್ನು ನೋಡಿ, ಭಯದಿಂದ ಮೋಡಗಳಲ್ಲಿ ಅವಿತುಕೊಂಡು ಹರಿಯು ದೈತ್ಯನನ್ನು ಕೊಲ್ಲದೇ ಬಿಟ್ಟಿರುವುದು ಒಳ್ಳೆಯದಲ್ಲವೆಂದು ಚಿಂತಿಸುತ್ತಿದ್ದರು. ದೈತ್ಯನು ಖಡ್ಗವನ್ನು ಹಿಡಿದು ಅದನ್ನು ತಿರುಗಿಸುತ್ತಾ ವೇಗದಿಂದ ಬರಲು ನರಹರಿ ಅಟ್ಟಹಾಸವನ್ನು ಮಾಡಿದನು. ಭಯದಿಂದ ದೈತ್ಯನು ಕಣ್ಣುಮುಚ್ಚಿ ನಿಂತನು. ನರಹರಿ ಅನಾಯಾಸವಾಗಿ ಅವನನ್ನು ಹಿಡಿದು ಕುತ್ತಿಗೆಗೆ ಕೈಹಾಕಿ ತರುಬುತ್ತಾ ಸಭೆಯ ಹೊಸ್ತಿಲಿನ ಬಳಿಗೆ ಎಳೆತಂದು, ಹೊಸ್ತಿಲಮೇಲೆ ಕುಳಿತು ಅವನನ್ನು ತನ್ನ ತೊಡೆಯಮೇಲೆ ಕೆಡವಿಕೊಂಡು ಗರುಡನು ಸರ್ಪವನ್ನು ಸೀಳುವಂತೆ ಲೀಲಾಜಾಲವಾಗಿ ಆ ದೈತ್ಯನ ಉದರವನ್ನು ಬಗಿದು ಕೊಂದನು. ಆ ಉದರದಲ್ಲಿನ ಕರುಳನ್ನು ಕೊರಳಿಗೆ ಹಾಕಿಕೊಂಡನು. ಕೇಸರಗಳೆಲ್ಲ ರಕ್ತಮಯವಾದುವು.

ಶ್ರೀಪುರಂದರದಾಸರು ದೈತ್ಯನ ಉದರವನ್ನು ಬಗಿಯುತ್ತಿದ್ದಾಗ ನರಸಿಂಹನು ಅದರ ಕಡೆಗೆ ನೋಡುತ್ತಿದ್ದುದರ ಕಾರಣವನ್ನೂ, ಕರುಳನ್ನು ಮಾಲೆಯಾಗಿ ಹಾಕಿಕೊಂಡುದಕ್ಕೆ ಕಾರಣವನ್ನೂ ಹೇಳುತ್ತ ದೈತ್ಯನ ದೇಹದಲ್ಲಿ ತನ್ನ ಭಕ್ತನಾದ ಜಯನೆಂಬ ಸುಜೀವಿಯು ಇದ್ದನೆಂಬುದನ್ನು ಸ್ಮರಣೆಗೆ ತರುವರು :—

ಧನ್ಯಾಸಿರಾಗ ಆದಿತಾಳ

ದಾನವನ ಕೊಂದದ್ದಲ್ಲ ಕಾಣಿರೋ ||ಪ||

ಗಾನವಿನೋದಿ ನಮ್ಮ ತೊರವೆಯ ನರಸಿಂಹ ||ಅ. ಪ||

ಅಚ್ಚ ಪ್ರಹ್ಲಾದನೆಂಬ ರತ್ನವಿದ್ದ ಒಡಲೊಳು
ಬಿಚ್ಚಿ ಬಗಿದು ನೋಡಿದನಿನ್ನೆಷ್ಟು ಇದ್ದಾವೆಂದು ||೧||

ನೆಂಟತನವ ಬೆಳೆಸೆ ಕರುಳ ಕೊರಲೊಳು
ಗಂಟು ಹಾಕಿಕೊಂಡನೆಷ್ಟು ಸ್ನೇಹ ಸಂಬಂಧದಿಂದ ||೨||

ತೊರವೆಯ ನರಸಿಂಹ ಪ್ರಹ್ಲಾದ ಪಾಲಕ
ಉರಿಮೋರೆ ದೈವ ನಮ್ಮ ಪುರಂದರವಿಟಲ ||೩||

ನರಸಿಂಹನು ಬಳಿಕ ತೊಡೆಯಮೇಲಿದ್ದ ದೇಹವನ್ನು ಕೆಳಗೆ ಹಾಕಿದನು. ಮೇಲೆ ಬಿದ್ದ ದೈತ್ಯ ಸೇನಾಪತಿಗಳನ್ನು ಸದೆಬಡಿದು ಸಿಂಹಾಸನದ ಮೇಲೆ ಕುಳಿತನು. ದೈತ್ಯನ ಸಂಪರ್ಕದಿಂದ ಕಲುಷಿತವಾಗಿದ್ದ ಪೀಠವು ಈಗ ಪವಿತ್ರವಾಗಿ, ಮುಂದೆ ಕೊಡುವ ಪ್ರಹ್ಲಾದನಿಗೆ ಶ್ರೇಯಸ್ಕರವಾಯಿತೆನಬಹುದು. ಘುಡಿಘುಡಿಸುತ್ತಿರುವ ನರಸಿಂಹನ

ಜಟಾ ಕೇಸರಗಳಿಗೆ ತಗುಲಿದ ಮೇಘ, ನಕ್ಷತ್ರ, ವಿಮಾನಗಳು ತಲೆಕೆಳಗಾದುವು ಅವನ ಶ್ವಾಸದಿಂದ ಸಮುದ್ರಗಳು ಉಕ್ಕೇರಿದುವು. ಭೂಮಿಯು ಕಂಪಿಸಿತು. ಆಕಾಶ ಮತ್ತು ದಿಕ್ಕುಗಳು ಕಾಂತಿಗುಂದಿದುವು. ಅವನ ಬಳಿಗೆ ಯಾರೂ ಸುಳಿಯಲಾರ ದಾದರು. ಸುರಸ್ತ್ರೀಯರು ಪುಷ್ಪವೃಷ್ಟಿ ಮಾಡಿದರು. ಗಂಧರ್ವರು ಗಾನ ಮಾಡಿದರು. ಇದರಿಂದ ನರಸಿಂಹನ ಕೋಪವು ಕಡಿಮೆಯಾಗಲೇ ಇಲ್ಲ. ಆಗ ಬ್ರಹ್ಮಾದಿ ದೇವತೆಗಳು ಮತ್ತು ದೇವಜಾತಿಗೆ ಸೇರಿದವರೆಲ್ಲರೂ ಬಂದು ತಲೆಯ ಮೇಲೆ ಕೈ ಜೋಡಿಸಿಕೊಂಡು ಸ್ತುತಿಸುತ್ತಾರೆ :-

**ಬ್ರಹ್ಮ :-** ಅನಂತ ! ಸರ್ವಜ್ಞಾನಬಲಾದಿ ಪೂರ್ಣನೆ ! ಸ್ವಯಂಪವಿತ್ರನಾಗಿ ಇತರರನ್ನು ಪಾವನ ಮಾಡತಕ್ಕ ಸ್ವಾಮಿಯೂ, ಲೀಲೆಯಿಂದ ಸೃಷ್ಟ್ಯಾದಿಗಳನ್ನು ಮಾಡುವ ಸ್ವತಂತ್ರ ಕರ್ತನೇ ! ನಿತ್ಯಶರೀರನಾದ ನಿನಗೆ ನಮಸ್ಕಾರ !

**ರುದ್ರ :-** ಭಕ್ತವತ್ಸಲ ! ಪ್ರಳಯಕಾಲದಲ್ಲಿ ನಮ್ಮನ್ನೆಲ್ಲ ನುಂಗಿಬಿಡುವಾಗ ಮಾಡುವಷ್ಟು ಕೋಪವು ನಿನಗೆ ಈಗೇಕೆ ? ಅಲ್ಪನಾದ ಅಸುರನು ಹತನಾದನು. ಅವನ ಸುತನಾದ ಪ್ರಹ್ಲಾದನು ನಿನ್ನ ಭಕ್ತನು. ಅವನನ್ನು ರಕ್ಷಿಸು.

**ಇಂದ್ರ :-** ಸರ್ವೋತ್ತಮನೆ ! ನಮ್ಮ ಯಜ್ಞಭಾಗವನ್ನು ಅಪಹರಿಸುತ್ತಿದ್ದ ಈ ದೈತ್ಯನನ್ನು ಕೊಂದು ನಮ್ಮ ಭಾಗವು ನಮಗೆ ಸಲ್ಲುವಂತೆ ಮಾಡಿ ರಕ್ಷಿಸಿದೆ. ನಮ್ಮ ಹೃದಯವು ದೈತ್ಯನ ಭಯದಿಂದ ನಡುಗುತ್ತಿತ್ತು. ಈಗ ನಿನ್ನನ್ನು ಧ್ಯಾನಿಸಲು ಅದು ಅಣಿಯಾಯಿತು. ನಮ್ಮ ಸ್ವರ್ಗಾಧಿಪತ್ಯ ಸ್ಥಿರವಲ್ಲ. ಪೂರ್ಣ ಸುಖವೂ ದೊರೆಯುವು ದಿಲ್ಲ. ಮುಕ್ತಿಯೂ ನಮಗೆ ಅಪೇಕ್ಷಿತವಲ್ಲ. ನಮಗೆ ಯಾವುದೂ ಬೇಡ. ನೀನು ಅನುಗ್ರಹಿಸು ಸ್ವಾಮಿಯೇ !

**ಋಷಿಗಳು :-** ಆದಿಪುರುಷನೇ ! ತಪೋರೂಪಿಯಾದ ನೀನು ತಪಸ್ಸಿನ ಬಲದಿಂದ ಸಕಲ ಲೋಕಗಳನ್ನೂ ಸೃಷ್ಟಿಸಿದೆ. "ನೀವು ತಪಸ್ಸನ್ನು ಮಾಡಿ ನನ್ನ ಜ್ಞಾನವನ್ನು ಸಂಪಾದಿಸಿ" ಎಂದು ನೀನು ಉಪದೇಶಿಸಿದೆ. ಈ ಪಾಪಿಯು ಅದನ್ನು ಕೆಡಿಸಿದ್ದನು. ನಿನ್ನ ದಯೆಯಿಂದ ಈಗ ತಪಸ್ಸನ್ನು ನಿರಾತಂಕವಾಗಿ ಮಾಡಿ ಧನ್ಯ ರಾಗುವೆವು.

**ಪಿತೃಗಳು :-** ನಮ್ಮ ವಂಶಜರು ನಮಗೆ ತೀರ್ಥಾದಿಗಳಲ್ಲಿ ಕೊಟ್ಟ ತಿಲೋದಕ ಪಿಂಡಗಳನ್ನು ನುಂಗಿ ನೀರುಕುಡಿದ ಈ ದುಷ್ಟನ ಹೊಟ್ಟೆ ಬಗಿದು ನಮ್ಮನ್ನುಳಿಸಿದ ಕರ್ಮರಕ್ಷಕನೇ ! ನಿನಗೆ ನಮಸ್ಕಾರ !

**ಸಿದ್ಧರು :-** ನಮ್ಮ ಅಣಿಮಾದಿ ಸಿದ್ಧಿಗಳನ್ನೆಲ್ಲ ಅಪಹರಿಸಿದ ಈ ಮದಾಂಧ ನನ್ನು ನಖಗಳಿಂದ ಸೀಳಿ ನಮ್ಮನ್ನು ರಕ್ಷಿಸಿದ ನಗಹರೇ ! ನಿನಗೆ ನಮಸ್ಕಾರ !

**ವಿದ್ಯಾಧರರು** :– ಹರಿಧ್ಯಾನದಿಂದ ನಮಗೆ ಸಿದ್ಧಿಯಾಗಿದ್ದ ಅಂತರ್ಧಾನಾದಿ ವಿದ್ಯೆಗಳನ್ನು ಕಸಿದುಕೊಂಡು ಪೀಡಿಸಿದ ದೈತ್ಯನನ್ನು ಕೊಂದ ಗೋವಿಂದ ! ನಿನಗೆ ನಮಸ್ಕಾರ !

**ನಾಗರು** :– ಈ ಪಾಪಿಯು ನಮ್ಮ ಶಿರೋರತ್ನಗಳನ್ನಲ್ಲದೆ, ನಾರೀರತ್ನ ಗಳನ್ನೂ ಅಪಹರಿಸಿದ್ದನು. ಅವನ ಎದೆಯನ್ನು ಸೀಳಿದ ನಿನ್ನನ್ನು ನೋಡಿ ನಮಗೆ ಸಂತೋಷವಾಗಿದೆ. ನಿನಗೆ ಅನಂತ ನಮಸ್ಕಾರಗಳು !

**ಮನುಗಳು** :– ನಿನ್ನಾಜ್ಞೆಯಂತೆ ಪ್ರಜೆಗಳನ್ನು ಪಾಲಿಸಲು ಮಾಡಿದ ನಮ್ಮ ಧರ್ಮಸೇತುವನ್ನು ಮುರಿದು ಮೆರೆದ ಈ ಖಳನನ್ನು ಕೊಂದೆ. ಆನಂದವಾಯಿತು. ನಾವೆಂತು ನಿನ್ನ ಸೇವೆಯನ್ನು ಸಲ್ಲಿಸೋಣ ? ಆಜ್ಞಾಪಿಸು !

**ಪ್ರಜೇಶ್ವರರು** :– ಪರೇಶನೇ ! ಪ್ರಜೇಶರಾಗಿ ಪ್ರಜೆಗಳನ್ನು ಸೃಷ್ಟಿಸುವ ನಮ್ಮ ಕರ್ತವ್ಯಧರ್ಮವನ್ನು ಕೆಡಿಸಿದ ಪ್ರಜಾದ್ರೋಹಿಯಾದ ಈ ದುಷ್ಟನನ್ನು ಬಗಿದು ಕೊಂದೆ. ಜಗನ್ಮಂಗಳಾವತಾರನೇ ! ನಿನಗೆ ವಂದನೆ !

**ಗಂಧರ್ವರು** :– ವಿಭೋ ! ನಿನ್ನ ಕಥೆಯನ್ನು ಪಾಡುವ, ನಿನ್ನ ಮುಂದೆ ಕುಣಿಯುವ ನಮ್ಮನ್ನು ರಾಕ್ಷಸಹತಕನು ತನ್ನನ್ನು ಹೊಗಳಿ ಹಾಡುವಂತೆ, ತನ್ನ ಮುಂದೆ ಕುಣಿಯುವಂತೆ ಮಾಡಿ ಪೀಡಿಸಿದನು ಅಂತಹ ದುಷ್ಟನಿಗಾದ ಶಿಕ್ಷೆಯನ್ನು ನೋಡಿ ನಮಗೆ ಆನಂದವಾಗಿದೆ. ಕೆಟ್ಟ ಮಾರ್ಗದಲ್ಲಿ ಹೋಗುವವನಿಗೆ ಕುಶಲ ವಾಗುವುದೆ ?

**ಚಾರಣರು** :– ಹರೇ ! ಭವಭಂಜಕನಾದ ನಿನ್ನ ಪಾದಪಂಕಜವನ್ನು ನಂಬಿ ಅಂಜದಿದ್ದ ನಮ್ಮನ್ನು ಪೀಡಿಸಿದ ದುಷ್ಟನನ್ನು ಕೊಂದ ನಿನಗೆ ನಮಸ್ಕಾರ !

**ಯಕ್ಷರು** :– ನಿನ್ನ ಮನೋಜ್ಞ ಸೇವೆಯಲ್ಲಿ ತೊಡಗಿದ್ದ ನಮ್ಮನ್ನು ದಿತಿಯ ಮಗನು ತನ್ನ ಪಲ್ಲಕ್ಕಿಯನ್ನು ಹೊರಲು ಇಟ್ಟುಕೊಂಡಿದ್ದನು. ನಿನ್ನವರಾದ ನಮ್ಮ ಕಷ್ಟವನ್ನು ಅರಿತು ಪೊರೆದ ನರಹರಿಯೇ ! ತತ್ತ್ವನಿಯಾಮಕನಾದ ನಿನಗೆ ನಮಸ್ಕಾರ !

**ಕಿಂಪುರುಷರು** ,– ನೀನು ಮಹಾಪುರುಷನು. ದೈತ್ಯನು ಕುಪುರುಷನು. ಕಿಂಪುರುಷರಾದ ನಮ್ಮನ್ನು ಛಲದಿಂದ ಪೀಡಿಸಿದ ಈ ಪಾಪಿಯನ್ನು ನೀನು ನಾಶ ಮಾಡಿದೆ.

**ವೇತಾಲರು :–** ಸಭೆಗಳಲ್ಲಿಯೂ, ಸತ್ರ್ರಯಾಗಗಳಲ್ಲಿಯೂ ನಿನ್ನ ರಮಣೀಯ ಗುಣಗಳನ್ನು ಗಾನಮಾಡಿ ಗೌರವದಿಂದ ಜೀವಿಸುತ್ತಿದ್ದೆವು. ನಮ್ಮ ಬದುಕನ್ನೇ ಹಾಳುಮಾಡಿದ, ದೊಡ್ಡ ರೋಗದಂತಿದ್ದ ದೈತ್ಯನನ್ನು ನೀನು ಸಂಹರಿಸಿದೆ.

**ಕಿನ್ನರರು :–** ಬಿಟ್ಟಿ ದುಡಿಸಿಕೊಂಡು ಕಷ್ಟಪಡಿಸುತ್ತಿದ್ದ ದುಷ್ಟನನ್ನು ಕೊಂದೆ. ಸರ್ವಪಾಪ ಪರಿಹಾರಕನಾದ ನೃಹರೇ ! ನಮ್ಮನ್ನು ಭವದಿಂದಲೂ ಕಾಪಾಡು !

**ವಿಷ್ಣು ಪಾರ್ಷದರು :–** ಸರ್ವಸಜ್ಜನ ರಕ್ಷಕನೇ ! ಪರಮ ಮಂಗಳಕರವಾದ ನಿನ್ನರೂಪವು ಆಶ್ಚರ್ಯಕರವಾಗಿದೆ. ಈ ಹಿರಣ್ಯಕಶಿಪುವು ಜಯನೆಂಬ ನಿನ್ನ ಸೇವಕ ನಲ್ಲವೆ ? ಅವನನ್ನು ಸಂಹರಿಸಿ ಸಲಹಿದ ನಿನಗೆ ನಮೋ ನಮಃ !

## ಎಂಟನೆಯ ಅಧ್ಯಾಯ ಮುಗಿದುದು

**ನಾರದ :–** ಹೀಗೆ ಸ್ತುತಿಸಿದರೂ, ಬ್ರಹ್ಮರುದ್ರರನ್ನು ಮುಖಂಡರನ್ನಾಗಿ ಉಳ್ಳ ಸಕಲ ಸುರ ಋಷ್ಯಾದಿಗಳು "ಮನ್ಯುಸಂಗ್ರಹಂ" = ಜ್ಞಾನಿಗಳಿಗೆ ಜ್ಞಾನಸಾರ ನಾಗಿ ಪ್ರಕಟನಾಗಿರುವವನೂ, ಅಜ್ಞಾನಿಗಳಿಗೆ ಕೋಪವುಳ್ಳವನಂತೆ ಕಾಣುವವನೂ, ಸುಖವಾಗಿ ವಿಷಯೀಕರಿಸಲು ಅಶಕ್ಯನೂ ಆದ ನರಹರಿಯ ಬಳಿಗೆ ಹೋಗಲು ಶಕ್ತ ರಾಗಲಿಲ್ಲ. ರುದ್ರಾದಿಗಳು ಆಗ ಲಕ್ಷ್ಮೀದೇವಿಯನ್ನು ಪ್ರಾರ್ಥಿಸಿ ಕಳುಹಿಸಿದರು. ನರಹರಿಯ ಅತ್ಯಾಶ್ಚರ್ಯಕರವಾದ ರೂಪವನ್ನು ಆಕೆಯು ನೋಡಿ ಸರ್ವಸಾಧಾರಣ ಜನರಿಗೆ ಅಂದರೆ ತನಗಲ್ಲ, ಈ ರೂಪವು ಮೊದಲು ಕಂಡಿದ್ದೂ ಅಲ್ಲ, ಕೇಳಿದ್ದೂ ಅಲ್ಲದಿರುವುದರಿಂದ, ಜನರಿಗೆ ಮೋಹವುಂಟಾಗುವುದಕ್ಕಾಗಿಯೂ, ಪ್ರಹ್ಲಾದನಲ್ಲಿ ತಾನೂ ಮತ್ತು ತನ್ನ ಪತಿಯೂ ವಾತ್ಸಲ್ಯವನ್ನು ತೋರಿಸಿ ಕೀರ್ತಿವಂತನನ್ನಾಗಿ ಮಾಡುವುದಕ್ಕಾಗಿಯೂ, ತಾನು ಹೆದರಿದವಳಂತೆಯೂ, ಸಂಶಯಗ್ರಸ್ತಳಂತೆಯೂ, ನಟಿಸಿ ನರಹರಿಯ ಸಮೀಪಕ್ಕೆ ಹೋಗಲಿಲ್ಲ. ಆಗ ಶ್ರೀನರಹರಿಯ ಅಭಿಪ್ರಾಯವನ್ನು ತಿಳಿದ ಬ್ರಹ್ಮದೇವರು ಪ್ರಹ್ಲಾದನಿಗೆ ಕೀರ್ತಿಯನ್ನುಂಟು ಮಾಡುವುದಕ್ಕಾಗಿ, ತಮ್ಮಬಳಿಯಲ್ಲೇ ನಿಂತಿದ್ದ ಕೇವಲ ಐದೇ ವರ್ಷದ ಬಾಲಕನಾದ ಪ್ರಹ್ಲಾದನನ್ನು ಕುರಿತು "ಪ್ರಹ್ಲಾದ ! ನಿಮ್ಮಪ್ಪನಿಗಾಗಿ ಕೋಪಿಸಿದ ನಮ್ಮಪ್ಪನ ಕೋಪವನ್ನು ಶಾಂತ ಮಾಡು" ಎಂದು ಹೇಳಿ ಕಳುಹಿಸಿದರು. ಪ್ರಹ್ಲಾದನು ಲೋಕ ವಂದ್ಯನ ಬಳಿಗೆ ಧೈರ್ಯವಾಗಿ ಹೋಗಿ ತಲೆಬಾಗಿ ನಮಿಸಿ ಆ ನರಹರಿಯ ಪಾದಗಳಲ್ಲಿ ಬಿದ್ದನು. ಶ್ರೀಪರಮಾತ್ಮನು ತನ್ನ ಪಾದ ಮೂಲದಲ್ಲಿ ಬಿದ್ದಿರುವ ಬಾಲಕನನ್ನು ಕೃಪೆ ಯಿಂದ ನೋಡಿ, ತನ್ನೆರಡು ಕೈಗಳಿಂದಲೂ ಅವನನ್ನು ಎತ್ತಿ ಅವನ ತಲೆಯ ಮೇಲೆ ತನ್ನ ಅಮೃತ ಹಸ್ತವನ್ನಿಟ್ಟನು.

ವಿಶೇಷ :– ಆಗ ಪ್ರಹ್ಲಾದನಿಗೆ ಶ್ರೀಹರಿಯ ಪಾದ ಮತ್ತು ಹಸ್ತ ಈ ಎರಡು ಅಂಗಗಳ ಸ್ಪರ್ಶಲಾಭವಾಯಿತು. ಆದರಿಂದ ಮುಕ್ತಿಯಲ್ಲಿಯೂ ಪ್ರಹ್ಲಾದನಿಗೆ ಸಾರೂಪ್ಯ, ಸಾಮೀಪ್ಯ, ಸಾಲೋಕ್ಯ ಮತ್ತು ಸಾಯುಜ್ಯ ಎಂಬ ನಾಲ್ಕು ವಿಧಮುಕ್ತಿಗಳಲ್ಲಿ ಮೂರನೆಯ ಮುಕ್ತಿಯಾದ ಸಾಲೋಕ್ಯ ಅಂದರೆ ಮುಕ್ತಲೋಕದ ಹರಿಯ ಅರಮನೆಯಲ್ಲಿರುವ ಹರಿಯ ಸಮೀಪದಲ್ಲಿ ವಾಸ ಮಾಡುವ ಮುಕ್ತಿಗಿಂತ ಉತ್ತಮವಾದ ಸ್ಪರ್ಶಮುಕ್ತಿಯು ದೊರೆಯುವುದೆಂದು ತಿಳಿಯಬೇಕು. ಈ ವಿಷಯಕ್ಕೆ ಪ್ರಮಾಣ :–

**ಅಪುನರ್ಭವಮಾತ್ರಾತ್ತು ಹರಿ ಸಾಮೀಪ್ಯ ಮುತ್ತಮಂ ।**
**ತತ್ರಾಪಿ ಸ್ಪರ್ಶಯೋಗ್ಯತ್ವಂ ಯಥಾ ವೇದವಿದೋ ವಿದುಃ॥ ಇತಿಪಾದ್ಮೇ.**

ದಶಮಸ್ಕಂಧ, 14ನೇ ಅಧ್ಯಾಯ, 36, 37ನೆಯ ಶ್ಲೋಕಗಳ ತಾತ್ಪರ್ಯ

ಅರ್ಥ :– ಸಾರೂಪ್ಯ, ಸಾಮೀಪ್ಯ ಮುಕ್ತರು ಸರ್ವಥಾ ಜನನ ಮರಣ ರಹಿತರು. ಅವರು ಸೇರುವ ಜನಲೋಕ ಮೊದಲಾದ ಲೋಕದಲ್ಲಿರುವುದಕ್ಕಿಂತ ಮುಕ್ತ ಶ್ವೇತದ್ವೀಪಾದಿ ಸ್ಥಾನಗಳಲ್ಲಿ ಭಗವಂತನ ಹತ್ತಿರವಿರುವುದು. ಉತ್ತಮವು. ಅದಕ್ಕಿಂತ ಶ್ರೀಹರಿಯ ಸ್ಪರ್ಶಯೋಗ್ಯತ್ವವು ಉತ್ತಮವು. (ಮುಕ್ತಿಯಲ್ಲಿ ಶ್ರೀಹರಿಯ ಸ್ಪರ್ಶ ಯೋಗ್ಯರಿಗೇ ಭೂಲೋಕದಲ್ಲಿದ್ದಾಗ ಶ್ರೀಹರಿಯ ಪಾದಸ್ಪರ್ಶವಾಗುತ್ತದೆ ಎಂದು ಅಭಿಪ್ರಾಯ.) ಹೀಗೆ ವೇದಜ್ಞರು ಹೇಳುತ್ತಾರೆಂದು ಪಾದ್ಮಪುರಾಣದಲ್ಲಿದೆ.

ಶ್ರೀಹರಿಯು ತನ್ನ ದಿವ್ಯ ಹಸ್ತವನ್ನು ಪ್ರಹ್ಲಾದನ ತಲೆಯ ಮೇಲೆ ಇಟ್ಟ ಮಾತ್ರಕ್ಕೆ ಅವನ ಸರ್ವಾನಿಷ್ಟವೂ ನಿವೃತ್ತಿಯಾಯಿತು. ದೇವ–ಜೀವರ ಈಶದಾಸ ಭಾವದ ಅಪರೋಕ್ಷವನ್ನು ಪಡೆದ ಪ್ರಹ್ಲಾದನು ಭಕ್ತಿಯಿಂದ ಹರಿಪಾದವನ್ನು ಧ್ಯಾನಿಸುತ್ತ ಹೀಗೆ ಸ್ತುತಿಸುತ್ತಾನೆ :–

**ಪ್ರಹ್ಲಾದ :** ಬ್ರಹ್ಮಾದಿ ದೇವತೆಗಳು ಸರ್ವದಾ ಸ್ತುತಿಸುತ್ತಾ ಇದ್ದರೂ ಸಂಪೂರ್ಣವಾಗಿ ನಿನ್ನ ಗುಣಗಳನ್ನು ವರ್ಣಿಸಲು ಶಕ್ತರಲ್ಲ. ಹೀಗಿರುವಾಗ ರಾಕ್ಷಸ ಜಾತಿಯಲ್ಲಿ ಹುಟ್ಟಿದ ನಾನು ವರ್ಣಿಸಲು ಶಕ್ತನೇ ? ಆದರೂ ನನ್ನಿಂದ ಸ್ತುತಿಸಿಕೊಳ್ಳಬೇಕೆಂದು ಇಚ್ಛಿಸುವ ಮಹಾಪ್ರಭುವಾದ ನಿನ್ನ ಕರುಣೆಗೇನೆಂಬೆ ? ಶ್ರೀಹರಿಯಾದ ನೀನು ಭಕ್ತಿಯಿಲ್ಲದ ಧನ, ಕುಲ, ರೂಪ, ತಪಸ್ಸು, ವೇದಾಧ್ಯಯನ, ಕಾಂತಿ, ಸಹನೆ, ಬಲ, ಪರಾಕ್ರಮ, ಬುದ್ಧಿ ಮೊದಲಾದ ಗುಣಗಳಿಗೆ ಒಲಿಯುವವನಲ್ಲ. ಭಕ್ತಿಯಿಂದಲೇ ಪ್ರಸನ್ನನಾಗುವವನು ಎಂಬುದಕ್ಕೆ ಗಜೇಂದ್ರನೇ ಸಾಕ್ಷಿ. ಸತ್ಯ, ದಮ, ಶಮ ಸ್ವೋತ್ತಮರಲ್ಲಿ ಮಾತ್ಸರ್ಯವಿಲ್ಲದಿರುವುದು, ನಿಷಿದ್ಧ ಕಾರ್ಯದಲ್ಲಿ ನಾಚಿಕೆ, ದುಃಖಿ

ಸಹನೆ, ಅಸೂಯೆ ಇಲ್ಲದಿರುವುದು, ದಾನ, ಯಜ್ಞ, ತಪಸ್ಸು, ವೇದಾಧ್ಯಯನ ಎಂಬ ಹನ್ನೆರಡು ಗುಣಗಳಿದ್ದೂ ಇವಕ್ಕೆಲ್ಲ ಮೂಲಕಾರಣವಾದ ಭಕ್ತಿಯಿಲ್ಲದ ಬ್ರಾಹ್ಮಣನಿಗಿಂತ ಶ್ರೀಹರಿಯಲ್ಲಿ ಭಕ್ತಿ ಮಾಡುವ ಚಂಡಾಲನೇ ಉತ್ತಮನು. ಆತ್ಮಸಮರ್ಪಣವಿಲ್ಲದ ಭಕ್ತಿಯು ಸಂಪೂರ್ಣವೆನಿಸಲಾರದು. ಬಿಂಬೋಪಾಸಕನು ಓಡಾಡಿದ ಸ್ಥಳವನ್ನೂ, ನೋಡಿ ನುಡಿದ ಜನರನ್ನೂ ಪಾವನಗೊಳಿಸುವನು. ಕುಲ, ಧನರೂಪಾದಿಗಳ ನಿಮಿತ್ತ ಅಹಂಕಾರಿಯಾದವನ ಪೂಜೆಯನ್ನು ಹರಿಯು ಸ್ವೀಕರಿಸುವುದಿಲ್ಲ. ಹರಿಯು ಆನಂದಾದಿ ಗುಣಪೂರ್ಣನಾಗಿರುವುದರಿಂದ ಇನ್ನೊಬ್ಬರು ಅವನಿಗೆ ಮಾಡುವ ಪೂಜೆಯಿಂದ ಅವನಿಗೆ ಯಾವ ಲಾಭವೂ ಇಲ್ಲ. ಆದರೂ ಭಕ್ತರನ್ನು ಸಂರಕ್ಷಿಸುವುದಾಗಿ ಪ್ರತಿಜ್ಞೆ ಮಾಡಿರುವುದರಿಂದ ಕರುಣಾಸಮುದ್ರನಾದ ಅವನು ಭಕ್ತರ ಪೂಜೆಯನ್ನು ಅವರಿಗೆ ಹಿತವಾಗಲೆಂದೇ ಸ್ವೀಕರಿಸುವನು. ಅವಿದ್ಯಾಮಗ್ನರಾದ ದುರ್ಜನರ ಸೇವೆಯನ್ನೊಲ್ಲ ಅಪ್ರತಿಮಲ್ಲ ಜಗಕೆಲ್ಲ. ಅವರಿಗೆ ಪುಣ್ಯವು ದಕ್ಕದಂತೆಮಾಡಿ, ಅವರಯೋಗ್ಯತೆಗೆ ತಕ್ಕ ತಮಸ್ಸಿಗೆ ಹಾಕುವನು. ಬಿಂಬನಾದ ಶ್ರೀಶನಿಗೆ ಮಾಡಿದ ನಿರ್ದೋಷಜ್ಞಾನಾನಂದಾದಿ ಗುಣಪೂರ್ಣ' ಎಂಬ ಧ್ಯಾನರೂಪ ಪೂಜೆಯ ಫಲವು ಪ್ರತಿಬಿಂಬನಾದ ಜೀವನಿಗೆ ಅಪ್ರಯತ್ನವಾಗಿ ಲಭಿಸಿ, ಹರಿಕರುಣೆಯಿಂದ ಅವನು ಸ್ವಯೋಗ್ಯ ಜ್ಞಾನಾನಂದಾದಿ ಗುಣಗಳನ್ನು ಹೊಂದುವನು.

ಈ ನೃಸಿಂಹನು ಜೀವನಂತೆ ಪ್ರಾಕೃತದೇಹವನ್ನು ಹೊತ್ತು ಹುಟ್ಟುವವನಲ್ಲ. ಹೀಗೆ ತಿಳಿದು ಪೂಜಿಸಿದರೆ ಶ್ರೀರಮಣನು ಅವನ ಜನನ ಮರಣವನ್ನು ತಪ್ಪಿಸಿ ಮುಕ್ತನನ್ನಾಗಿ ಮಾಡುವನು. ಪೂಜೆಗೆ ತಕ್ಕಫಲವನ್ನು ಕೊಡುವ ಹರಿಗೆ ಪಕ್ಷಪಾತಾದಿ ದೋಷಗಳಿಲ್ಲ. ಭಕ್ತಿಯೇ ತಾರಕವೆಂದು ನಂಬಿದನಾನು ನನ್ನ ಕೈಲಾದಷ್ಟು ಮಾತ್ರ ತುತಿಸಬಲ್ಲೆನೇ ಹೊರತು ಲಕುಮಿಯ ವಲ್ಲಭನ ಮಹಿಮೆಯನ್ನು ಸಂಪೂರ್ಣವಾಗಿ ವರ್ಣಿಸಲಾರೆನು.

ಪ್ರಕೃತಿಬಂಧನಕ್ಕೆ ಸಿಕ್ಕಿ ಜನನ ಮರಣವೆಂಬ ಸಂಸಾರ ಸಮುದ್ರದಲ್ಲಿ ಕೊಚ್ಚಿಕೊಂಡು ಹೋಗುತ್ತಿರುವ ಮನುಜನಿಗೆ ಹರಿಯ ಕೀರ್ತನೆಯು ಹೊರತು ಬೇರೆ ಉದ್ಧಾರದ ಮಾರ್ಗವೇ ಇಲ್ಲ.

ನಮ್ಮಂತೆ ಬ್ರಹ್ಮಾದಿಗಳು ಹರಿಭಕ್ತರಾದರೂ ಅವರು ಪ್ರಧಾನ ಭಕ್ತರು. ಅವರಿಗೆ ನಿನ್ನ ಅವತಾರವು ಸಜ್ಜನರ ರಕ್ಷಣೆ, ಸುಖಪ್ರಾಪ್ತಿ, ಸಂಪತ್ತಿಗೆ ಕಾರಣವೆಂಬ ನಿಶ್ಚಯಜ್ಞಾನವಿರುವುದರಿಂದ ನೃಸಿಂಹ ರೂಪವನ್ನು ನೋಡಿದ ಅವರಿಗೆ ಇತರರಂತೆ ಭಯೋದ್ವೇಗಗಳಿಲ್ಲ.

ಭಗವಂತನೇ ! ನಿನ್ನ ರುಚಿರಾವತಾರಗಳೆಲ್ಲವೂ ಲೀಲಾವಿಲಾಸಮಧುರಗಳಾಗಿವೆ. ಶ್ರೀನೃಸಿಂಹನೇ ! ಕೋಪವನ್ನು ಬಿಡು. ಅಸುರನು ಹತನಾಗಿರುವನು.

ಯಾರೂ ಇದಕ್ಕಾಗಿ ದುಃಖಿಸುವುದಿಲ್ಲ. ಹಾವು ಚೇಳುಗಳು ಹತವಾದರೆ ಅಹಿಂಸಾಪರ ನಾದ ಸಾಧುವೂ ಸಂತೋಷಪಡುವನು ಅಂದ ಬಳಿಕ ಸರ್ವಲೋಕೋಪದ್ರವಕರನಾದ ಅಸುರನು ಸತ್ತದ್ದರಿಂದ ಸಜ್ಜನರೆಲ್ಲರೂ ಸಂತೋಷವನ್ನು ಹೊಂದದೇ ಇರುವರೆ ? ಸರ್ವಲೋಕದ ಜನರೂ ನಿನ್ನ ದರ್ಶನದಿಂದಲೂ ಹರ್ಷಿತರಾಗಿರುವರು.

ಹುಬ್ಬುಗಂಟೇಕೆ ? ಕೋರೆಯನ್ನೇಕೆ ಮಸೆಯುವೆ ? ಜ್ಞಾನಾನಂದದೇಹಿಯಾದ ನಿನಗೆ ಕೋಪವೆಲ್ಲಿದೆ? ನರನಟನೆಯನ್ನು ತೋರಿದ ಲಕ್ಷ್ಮೀನಲ್ಲ! ಪ್ರಸನ್ನಸುಂದರನಾಗು. ದುರಿತನಿವಾರಕವೂ, ಮೋಕ್ಷಾದಿ ಸುಖಕಾರಣವೂ ಆದ ನಿನ್ನ ಮಂಗಳ ರೂಪವನ್ನು ಹೃದಯದಲ್ಲಿಟ್ಟು ನೆನೆಯುತ್ತ ಇಲ್ಲಿ ನೆರೆದಿರುವ ಹರಿದಾಸರು ತಮ್ಮ ತಮ್ಮ ಮನೆಗಳಿಗೆ ತೆರಳಲಿ.

ಅಜಿತ ! ನಿನ್ನ ಭಯಾನಕ ಮುಖವನ್ನೂ, ಬೆಂಕಿಕಿಡಿಗಳನ್ನು ಕಾರುವ ಕಣ್ಣು ಗಳನ್ನೂ, ಹುಬ್ಬಿನ ಗಂಟನ್ನೂ, ಕೋರೆ ಹಲ್ಲುಗಳನ್ನೂ, ಶಂಕುಕರ್ಣವನ್ನೂ ಅಂದರೆ ಗೂಟದಂತಿರುವ ಕಿವಿಗಳನ್ನೂ, ಕರಳುಮಾಲೆಯನ್ನೂ, ರಕ್ತಸಿಕ್ತ ಕೇಸರಗಳನ್ನೂ, ದಿಗ್ಗಜಗಳನ್ನು ನಡುಗಿಸುವ ನಿನ್ನ ಗರ್ಜನವನ್ನೂ, ಉದರವನ್ನು ಸೀಳಿದ ಉಗುರು ಗಳನ್ನೂ ನೋಡಿ ಹೆದರುವುದಿಲ್ಲ. (ಏಕೆಂದರೆ ನರಹರಿಯು ಜ್ಞಾನಾನಂದಮಯ ಶರೀರಿಯೆಂಬ ಜ್ಞಾನವುಳ್ಳ ದೇವತೆಗಳಲ್ಲಿ ಶಂಕುಕರ್ಣನೆಂಬ ದೇವಾಂಶನು ನಾನಾ ಗಿರುವುದೇ ಕಾರಣ.)

ಆದರೆ ದಯಾನಿಧೇ ! ದುಃಸಹ ಸಂಸಾರ ಚಕ್ರದಲ್ಲಿ ಸಿಕ್ಕಿಬಿದ್ದು ನರಳುತ್ತಿರುವ ನಾನು ಭವಜನಿತ ರಾಗದ್ವೇಷಾದಿ ಬಂಧನವನ್ನು ಕಂಡು ಹೆದರುತ್ತಿರುವೆನು. ಭವ ಭಂಜಕವಾದ ನಿನ್ನ ಪಾದಕಂಜ ಭಜನೆಯು ನನಗೆಂತು ದೊರೆಯುವುದು ? ಉತ್ತಮ ಶ್ಲೋಕಶಿಖಾಮಣಿಯೇ ! ಕರ್ಮಪಾಶವನ್ನು ನಾಶಪಡಿಸು. ನೀನೇ ಶರಣಾಗತನಾದ ನನ್ನ ದೇವನೆಂದೆನಿಸು.

ಸಕಲ ಯೋನಿಗಳಲ್ಲಿ ಹುಟ್ಟಿ ನೋಡಿದರೂ, ಪ್ರಿಯವಿಯೋಗ-ಅಪ್ರಿಯ ಸಂಯೋಗವಾಗುತ್ತಿದೆ. ಪ್ರಿಯವು ಬರಲಿಲ್ಲ. ಅಪ್ರಿಯವು ತಪ್ಪಲಿಲ್ಲ. ಜನ್ಮಶೋಕ ಗಳೆಂಬ ಬೇಗೆಯು ಬೇಯಿಸಿ ನೋಯಿಸುತ್ತಿರುವಾಗ ಈ ದುಃಖದ ಔಷಧವಾವುದೆಂದು ಅಲೆದು ಮತ್ತಷ್ಟು ದುಃಖವನ್ನು ಹೊಂದುತ್ತಿರುವೆನು. ನಿಜವಾದ ದುಃಖಪರಿಹಾರಕ ಔಷಧವು ನಿನ್ನ ದಾಸ್ಯವಾಗಿದೆ ಎಂದರಿಯದೆ ಕಷ್ಟಪಡುತ್ತಿರುವ ನನ್ನನ್ನು ನಿನ್ನ ದಾಸರದಾಸನೆನಿಸಿ ಉದ್ಧರಿಸು.

ಪರದೇವತೆಯಾದ ನಿನ್ನ ಪ್ರಿಯಕರ ಲೀಲಾಕಥೆಗಳು ಪರಮಹಂಸರ ಸೇವೆ ಯಿಂದ ದೊರೆಯತಕ್ಕದ್ದು. ಮತ್ತು ಬ್ರಹ್ಮಾದಿಗಳಿಂದ ಗಾನಮಾಡಲ್ಪಡತಕ್ಕದ್ದು.

ನಿನ್ನ ಭಕ್ತರಿಂದ ಅನುಶಿಕ್ಷಿತನಾಗಿ ನಾನೂ ನಿನ್ನ ಕಥೆಗಳನ್ನು ಪಾಡಿ ಪೊಗಳಿ ಸಂಸಾರ ದಿಂದ ಮುಕ್ತನಾಗುವೆನು. ಸಂಶಯವಿಲ್ಲ.

ರಾಗ ಛಾಪುತಾಳ

ಏಕೆ ಮಮತೆ ಕೊಟ್ಟು ದಣಿಸುವೆ ರಂಗ । ನೀಕರುಣದಿ ಎನ್ನ ಪಾಲಿಸು ಕೃಷ್ಣ ಪ
ನಿನ್ನ ಹಂಬಲಿಸದೆ ಅನ್ಯವಿಷಯಗಳಿ । ಗೆನ್ನನೊಪ್ಪಿಸುವುದು ನೀತವೆ
ಮನ್ನಿಸಿ ದಯದಿ ನೀ ಎನ್ನ ಪಾಲಿಸಲು ನಾ । ನಿನ್ನ ನೇಮಕೆ ಪ್ರತಿಕೂಲನೆ ೧
ತನುವು ತನ್ನದು ಅಲ್ಲ ತನುಸಂಬಂಧಿಗಳೆಂಬ । ತನುವು ಯಾರೊ ತಾನಾರೊ ಅವರಿಗೆ
ಧನಮೊದಲಾದ ವಿಷಯಗಳ ಅನುಭವ ಹಿಂ । ದಿನ ದೇಹದಂತಲ್ಲವೆ ೨
ಅರಿತು ಅರಿತು ಅವರು ಎನಗವರೆರವಾದರು । ವಿರಕುತಿ ವಿಷಯದಿ ಬಾರದು
ಕರುಣಸಾಗರ ನಿನ್ನ ಮೊರೆಹೊಕ್ಕಲ್ಲದೆ । ಮರುಳು ನೀಗುವ ಬಗೆಗಾಣೆನೊ ೩
ಇಂದ್ರಿಯಂಗಳು ವಿಷಯದಿಂದ ತೆಗೆಯಲು ಗೋ । ವಿಂದ ಎನ್ನ ವಶಕೆ ಬಾರವೊ
ಇಂದಿರೆಯರಸ ಬ್ರಹ್ಮಾದಿವಂದಿತ ನಿನ್ನ । ಬಂಧಕ ಶಕುತಿಗೆ ನಮೋ ನಮೋ ೪
ಎಂದಿಗೆ ನಿನ್ನ ಚಿತ್ತಕೆ ಬರುವುದೊ ಸ್ವಾಮಿ । ಅಂದೆ ಉದ್ಧರಿಸಯ್ಯ ಕರುಣಿಯೆ
ಸುಂದರವಿಗ್ರಹ ಗೋಪಾಲವಿಠಲ ಸುಖಸಾಂದ್ರ ಭವಮೋಚಕ ನಮೋನಮೋ ೫

ಅತ್ಯಂತ ಮಹಿಮನಾದ ನಿನಗೆ ಭಿನ್ನವಾದ ಪ್ರಾಕೃತಶರೀರವಿಲ್ಲ. ಶರೀರದಿಂದ ಬರುವ ಜನನ, ಮರಣ ಮತ್ತು ಚಿಂತೆ ಇವುಗಳ ಲೇಪಗಳೂ ಇಲ್ಲ. ಸ್ವರೂಪಭೂತ ಕಲ್ಯಾಣಗುಣಧಾಮನು ನೀನು. ನಿನ್ನ ನಂಬಿ ಶರಣಾಗತನಾಗಿಯೂ ಸಂಸಾರ ಚಕ್ರದಲ್ಲಿ ದುಃಖಿಸುತ್ತಿರುವನು. ಅವನನ್ನು ನೋಡುತ್ತ ಉದ್ಧರಿಸದೇ ಇರುವುದು ನ್ಯಾಯವೆ ? ಪ್ರಭೋ ! ವೈಭವೋಪೇತರನ್ನು ಮೀರಿಸುವ ಇಂದ್ರಾದಿ ದೇವತೆಗಳನ್ನು ಹುಬ್ಬು ಹಾರಿಸುವುದರಿಂದಲೇ ಗೆದ್ದ ನನ್ನ ಜನಕನನ್ನು ನೋಡಿರುವೆನು. ಅಂತಹ ವೀರನನ್ನು ಕೀಟದಂತೆ ಒಂದು ಕ್ಷಣದಲ್ಲಿ ಕೊಂದ ನಿನ್ನನ್ನು ನೋಡಿ ಆ ಹಮ್ಮೀರರ ವೈಭವಾದಿ ಗಳೆಲ್ಲವೂ ನಿನ್ನ ಅಧೀನವೆಂದು ಮನಗಂಡಿರುವೆನು. ಶರೀರಧಾರಿಗಳಾದ ಜೀವರು ಬಯಸುವ ಇಂದ್ರಿಯ ಸುಖ, ಸಂಪತ್ತು, ಆಯುಷ್ಯ. ಕಾಂತಿ, ವೀರ್ಯ ಮುಂತಾದು ದೆಲ್ಲವೂ ನಶ್ವರವಾಗಿವೆ. ಆಬ್ರಹ್ಮಸ್ತಂಬ ಪರ್ಯಂತವಾದುದೆಲ್ಲವೂ ಅಸಾರವೂ ಅನಿತ್ಯವೂ ಆಗಿವೆ. ಎಂದು ತಿಳಿದು, ನಾನು ವಿಷಯ ಸಂಗವನ್ನು ಬಿಟ್ಟು ನಿನ್ನಲ್ಲೀ ಶರಣಾಗತ ನಾಗಿರುವೆನು. ಉದರಂಭರದಿಂದ ದೂರಮಾಡಿ ನನ್ನನ್ನು ನಿನ್ನ ಭಕ್ತರಲ್ಲಿ ಸೇರಿಸು.

ಮೃಗತೃಷ್ಣಾರೂಪವಾದ ವಿಷಯಗಳೆಲ್ಲಿ ? ಅಶೇಷರೋಗಗಳ ಬೀಡಾದ ದೇಹ ವೆಲ್ಲಿ ? ಆದರೂ ಕಾಮಾಗ್ನಿಯನ್ನು ಸುಖಲೇಶವೆಂಬ ಜಲಕಣಗಳಿಂದ ಆರಿಸಲು ಪ್ರಯತ್ನಿಸುತ್ತಿರುವ ಮೂಢನಿಗೆ ವೈರಾಗ್ಯವು ಹುಟ್ಟುವುದಿಲ್ಲ. ವಿಷಯಗಳು, ಶರೀರ

ಇವು ನಶ್ವರಗಳೆಂದು ಉಪದೇಶಿಸುವ ಪಂಡಿತನೆನಿಸಿದವನಿಗೂ ವೈರಾಗ್ಯವು ಹುಟ್ಟು ವುದಿಲ್ಲವೆಂದ ಮೇಲೆ ಮೂಢರ ಪಾಡೇನು ?

ಅಜ್ಞಾನ ಮತ್ತು ತಮಃಪ್ರಚುರವಾದ ದೈತ್ಯಕುಲದಲ್ಲಿ ಹುಟ್ಟಿರುವ ಪಾಮರ ನಾದ ನಾನೆಲ್ಲಿ ? ಸರ್ವೋತ್ತಮನಾದ ನಿನ್ನ ಕಾರುಣ್ಯವೆಲ್ಲಿ ? ಬ್ರಹ್ಮಾದಿಗಳೂ, ರಮಾದೇವಿಯೂ ನಿರಂತರ ಸ್ವಾಮಿಯ ಸೇವೆಯನ್ನು ಮಾಡುತ್ತಿರುವುದರಿಂದ ಅವರ ತಲೆಯ ಮೇಲೆ ನಿನ್ನ ಪದ್ಮಹಸ್ತವನ್ನಿಟ್ಟು ಪರಮಾನುಗ್ರಹ ಮಾಡಿರುವೆ. ಇಂತಹ ನಿನ್ನ ಹಸ್ತವು ನನ್ನ ತಲೆಯ ಮೇಲೂ ಕ್ಷಣಕಾಲ ಇದ್ದುದರಿಂದ ನಿನ್ನ ದಾಸರ ದಾಸ ನಾದ ನನ್ನಲ್ಲಿ ನೀನು ಪರಮಾನುಗ್ರಹವನ್ನು ಮಾಡಿರುವೆ. ನಿನ್ನ ಲೀಲೆಯು ವಿಚಿತ್ರ. ದೇವಜಾತಿ, ಅಸುರಜಾತಿ ಎಂಬ ವೈಷಮ್ಯವು ನಿನಗಿಲ್ಲ. ದಯಾನಿಧೇ ! ಕಲ್ಪವೃಕ್ಷ ದಂತೆ ಸೇವಾನುಗುಣವಾಗಿ ಅನುಗ್ರಹವನ್ನು ಮಾಡುವವನು ನೀನು.

ಮರಣ ಜನನವೆಂಬ ಸಂಸಾರ ಗರ್ತದಲ್ಲಿ ಬಿದ್ದು ವಿಷಯ ಸಂಗಪಾಶಬದ್ಧನಾಗಿ ಕಾಲಸರ್ಪದ ಬಾಯಿಗೆ ತುತ್ತಾಗುತ್ತಿರುವ ನನ್ನ ಆರ್ತಿಯನ್ನು ನೋಡಿ, ಮರುಗಿ, ನಿನ್ನವರೇ ಆದ ದೇವರ್ಷಿಗಳನ್ನು ನನ್ನ ಬಳಿಗೆ ಕಳುಹಿಸಿ ನನ್ನನ್ನುದ್ಧರಿಸಿ ಕಾಪಾಡಿದೆ. ಹೀಗಿರುವಾಗ ನಿನ್ನ ಸೇವೆಯನ್ನೂ, ನಿನ್ನ ದಾಸರ ಸೇವೆಯನ್ನೂ ನಾನೆಂತು ಬಿಡಲಿ ? ಕೈಲಿ ಕತ್ತಿಯನ್ನು ಹಿಡಿದು ನಮ್ಮ ತಂದೆಯು "ನನ್ನಿಂದ ಅನ್ಯನಾದ ಜಗತ್ಸ್ವಾಮಿಯು ಎಲ್ಲಿರುವನು ? ನಿನ್ನನ್ನು ಕೊಲ್ಲುವೆನು. ನಿನ್ನ ದೊರೆಯಿದ್ದರೆ ಕಾಪಾಡಲಿ" ಎಂದು ಗರ್ಜಿಸುತ್ತ ನನ್ನ ಮೇಲೇರಿ ಬಂದನು. ಅಂತಹವನನ್ನು ನೀನು ಕೊಂದು ನನ್ನನ್ನು ಉಳಿಸಿದೆ. ಇದೆಲ್ಲ ನಿನ್ನ ಭಕ್ತರಾದ ನಾರದರ ವಾಕ್ಯವನ್ನು ಸತ್ಯವನ್ನಾಗಿಸಲು ನೀನು ಮಾಡಿದ ಲೀಲೆಯೇ ಸರಿ.

ಈ ಜಗತ್ತಿಗೆ ಹಿಂದೆಯೂ, ಪ್ರಳಯವಾದ ಮೇಲೂ ಶಶ್ವದೇಕಪ್ರಕಾರ ನಾಗಿರುವ ಮಹಾಪ್ರಭು ನೀನು ಯೋಗನಿದ್ರೆಯಿಂದೆಚ್ಚೆತ್ತು, ಸ್ವಸಾಮರ್ಥ್ಯದಿಂದ ಲಕ್ಷ್ಮಿಯೊಡನೆ ಕ್ರೀಡಿಸಿ, ತ್ರಿಗುಣಾತ್ಮಕವಾದ ಜಗತ್ತನ್ನು ಸೃಷ್ಟಿಸಿ, ಅದರೊಳಗೆಲ್ಲ ವ್ಯಾಪ್ತನಾಗಿದ್ದು ತದ್ಭಿನ್ನನೂ, ತತ್ಕೃತವಿಕಾರರಹಿತನೂ ಆಗಿರುವೆ. ಲೋಕವಿಲಕ್ಷಣ ನಾದ ನೀನು ಜಡ–ಜೀವರಲ್ಲಿ ನಿಯಾಮಕನಾಗಿ, ಯಾರಿಗೂ ಕಾಣಿಸದಂತೆ ಅಡಗಿರು ವುದರಿಂದ "ಜೀವನೇ ಬ್ರಹ್ಮ, ಜಗತ್ತೇ ಬ್ರಹ್ಮ" ಎಂದು ಅಜ್ಞಾನಿಗಳು ತಿಳಿಯಲು ಕಾರಣವಾಗಿದೆ. ನಿನ್ನಿಂದ ಜೀವಿಸಿ ನಿನ್ನ ಅಧೀನದಲ್ಲಿಯೇ ಇರುವ ಜೀವನಿಗೆ ಸ್ವಾತಂತ್ರ್ಯವಿಲ್ಲ. ಅವನಲ್ಲಿ ಸ್ವತಂತ್ರವಾಗಿ ನೆಲೆಸಿರುವ ನೀನೇ ಜೀವನೆನಿಸಿ ಅವನಿಗೆ ಜೀವನಪ್ರದನಾಗಿರುವೆ. ವೃಕ್ಷವೂ, ವೃಕ್ಷದಾಹವೂ ಕಾಲಾಧೀನವಾಗಿದೆ. ಇಂತಹ ಕಾಲವೂ ನಿನ್ನಾಧೀನವಾಗಿದೆ. ಆದ್ದರಿಂದಲೇ ನಿನಗೆ **ಕಾಲ** ಎಂಬ ನಾಮ.

ನೀನು ಪ್ರಳಯಜಲದಲ್ಲಿ ಶೇಷಶಯನನಾಗಿ, ಸೃಷ್ಟ್ಯಾದಿ ವ್ಯಾಪಾರವನ್ನು ಬಿಟ್ಟು, ಸ್ವಸ್ವರೂಪ ಸುಖಾನುಭವದಿಂದ ಪೂರ್ಣನಾಗಿ, ಸಕಲ ಜೀವ ಜಡಾತ್ಮಕ ಜಗತ್ತನ್ನು ಉದರದಲ್ಲಿಟ್ಟು, ಯೋಗನಿದ್ರೆಗಾಗಿ ಕಣ್ಣುಮುಚ್ಚಿದ್ದೆ. ಸೃಷ್ಟಿಕಾಲವು ಬರಲು ಕಣ್ಣುಬಿಟ್ಟು, ಪದ್ಮನಾಭ ರೂಪನಾಗಿ ನಾಭಿಯಿಂದ ಕಮಲವನ್ನು ಹುಟ್ಟಿಸಿದೆ. ವೃಕ್ಷಗಳಿಗೆ ಅಭಿಮಾನಿ ಕಣಿಕಾ ನಾಮಕ ದೇವತೆಯು ಆಲದಮರದ ಬೀಜದೊಳಗೆ ಇರುವುದು. ಅದರ ಪ್ರೇರಣೆಯಿಂದ ಆ ಮರವು ಹುಟ್ಟುವುದು. ಅದರಂತೆ ಪದ್ಮಕ್ಕೆ ಭಗವಂತನೇ ಪ್ರೇರಕದೇವತೆಯು, ಪ್ರಕೃತಿಯೇ ಉಪಾದಾನ ಕಾರಣವು, ಭಗವಂತ ನಿಂದ ಪ್ರೇರಿತವಾದ ಪ್ರಕೃತಿಯಿಂದ ಜಗದ್ರೂಪವಾಗಿರುವ ಪದ್ಮವು ಹುಟ್ಟಿತು. ಅಲ್ಲಿ ಜನಿಸಿದ ವಿರಿಂಚನು ತನ್ನೊಳಗೆ ಪುರುಷರೂಪದಿಂದ ಅಂತರ್ಯಾಮಿಯಾಗಿರುವ ನಿನ್ನನ್ನು ಕಾಣದೆ ನೂರು ವರ್ಷಗಳಕಾಲ ಹೊರಗಿರುವ ನೀರಿನಲ್ಲಿ ಹುಡುಕಿದನು. ಬೀಜದಲ್ಲಿರುವ ವೃಕ್ಷಾಭಿಮಾನಿಯು ಬೀಜವು ಅಂಕುರವಾದ ಮೇಲೆ ಅದರಲ್ಲಿದ್ದು ಆ ಅಂಕುರವನ್ನು ಬೆಳೆಸುತ್ತ ಯಾರಿಗೂ ಕಾಣದಂತೆ ಇರುವುದು. ಅದರಂತೆ ಶ್ರೀ ಹರಿಯು ಕಾರಣವಾದ ಪ್ರಕೃತಿಯಲ್ಲಿದ್ದು, ಸೃಷ್ಟಿಕಾಲದಲ್ಲಿ ಕಾರ್ಯವಾದ ಬ್ರಹ್ಮಾಂಡ ವನ್ನು ಹೊಕ್ಕು ಯಾರಿಗೂ ಕಾಣಿಸದಂತಿರುವನು. ಆದಕಾರಣ ನಿನ್ನ ಅನುಗ್ರಹ ದಿಂದಲೇ ನಿನ್ನ ದರ್ಶನವಾಗುವುದೆಂದು ಅರಿತು ಕಮಲಾಸನನು "ತಪತಪ" ಎಂದು ಆಜ್ಞಾಪಿಸಿದ ನಿನ್ನ ವಚನವನ್ನು ಶಿರಸಾ ವಹಿಸಿ ತಪಸ್ಸನ್ನು ಮಾಡಿ ಪರಿಶುದ್ಧ ಮನಸ್ಕನಾದನು. ಯೋಗಿಯು ಭೂಮಿಯಲ್ಲಿ ಅಡಗಿರುವ ಗಂಧಾಭಿಮಾನಿ ದೇವತೆ ಯನ್ನು ಕಾಣುವಂತೆ ಬ್ರಹ್ಮದೇವರು ತಮ್ಮೊಳಗಿರುವ ನಿನ್ನನ್ನು ನೋಡಿ ಸಂತೋಷ ಪಟ್ಟರು. ಈ ಸೂಕ್ಷ್ಮರೂಪದ ದರ್ಶನದಿಂದ ಅವರಿಗೆ ವಿರಾಡ್ರೂಪ ದರ್ಶನವೂ ಆಯಿತು.

ಅನಂತವದನ, ಚರಣ, ಶಿರಸ್ಸು, ಕರಣಾದಿ ದಿವ್ಯಾಂಗನೂ, ಆನಂದಾದಿ ಕಲ್ಯಾಣ ಗುಣಾಕರನೂ, ಸರ್ವಾಭರಣಭೂಷಿತನೂ ಮತ್ತು ಮಹಾ ಪುರುಷನೂ ಆದ ನಿನ್ನ ದರ್ಶನದಿಂದ ಮಹಾ ಭಗವದ್ಭಕ್ತರಾದ ಬ್ರಹ್ಮದೇವರು ಮಹಾ ಆನಂದ ವನ್ನು ಹೊಂದಿದರು.

ಆಗ ನೀನು ಹಯಗ್ರೀವರೂಪದಿಂದ ವೇದದ್ರೋಹಿಗಳಾದ ಮಧುಕೈಟಭ ರನ್ನು ವಧಿಸಿ ವೇದವನ್ನು ವಿರಿಂಚನಿಗೆ ತಂದುಕೊಟ್ಟೆ. ಸ್ಮರಣೆಮಾತ್ರದಿಂದ ಜ್ಞಾನ ಪ್ರದವಾದ ಆ ನಿನ್ನ ಪ್ರಿಯತಮರೂಪವು ನಮಗೆ ರಕ್ಷಕವಾಗಲಿ. ನರ, ದೇವ, ಋಷಿ, ಮೀನಾದಿ ರೂಪಗಳಿಂದ ಅವತರಿಸಿ ಧರ್ಮವನ್ನು ರಕ್ಷಿಸಲು ಲೋಕಕಂಟಕ ದೈತ್ಯರನ್ನು ವಧಿಸುವೆ. ಕಲಿಯುಗದಲ್ಲಿ ನಿನ್ನ ಅವತಾರವಿಲ್ಲವಾದ್ದರಿಂದ ನಿನ್ನನ್ನು ತ್ರಿಯುಗನೆನ್ನುವರು.

**ಅವತಾರಿಕೆ :–** ಹರಿಯ ಭಕ್ತವಾತ್ಸಲ್ಯತೆಯನ್ನು ಕೊಂಡಾಡಿ, ಮನಸ್ಸಿನ ಶುದ್ಧಿಯನ್ನು ಬಯಸಿ ಇಂದ್ರಿಯಗಳ ದೋಷವನ್ನು ಹೇಳಿಕೊಳ್ಳುವನು :–

ವಿಕುಂಠನಾಥನೇ ! ಮಾಡಿದ ಪಾಪದಿಂದ ಕೆಟ್ಟು ಕಾಮದುಷ್ಟವಾಗಿ, ಶೋಕ ಭಯಗಳಿಂದ ವ್ಯಾಕುಲವಾಗಿ, ದುಷ್ಟಕಾರ್ಯವನ್ನು ಮಾಡಲು ಹಾತೊರೆಯುವ ಮನಸ್ಸಿಗೆ ವಶನಾಗಿ ದೀನನಾಗಿರುವ ಎನಗೆ ನಿನ್ನ ಜ್ಞಾನವಾಗುವುದಾದರೂ ಹೇಗೆ ? ತಿಳಿಯದಾಗಿದೆ. ನಿನ್ನನ್ನು ನಂಬಿ ಬಂದಿರುವೆನೆಂದು ಇಷ್ಟುಮಾತ್ರ ತಿಳಿದು ಕಾಪಾಡು !

ಅಚ್ಯುತ ! ಹತ್ತು ಜನ ಹೆಂಡಂದಿರು ತಮಗೆ ವಶನಾದ ಗಂಡನನ್ನು ಎಳೆದು ಹಿಂಸಿಸುವಂತೆ ಈ ದೇಹದಲ್ಲಿರುವ ಜೀವನನ್ನು ಹತ್ತು ಇಂದ್ರಿಯಗಳು ಸೇರಿ ಹೀರು ತ್ತಿವೆ. ನಾಲಿಗೆ ರುಚಿಯನ್ನು ಕಂಡು ಮರುಗಿ ಸಾಕೆನ್ನದೆ ತಿನ್ನುತ್ತಿದೆ. ಶಿಶ್ನವು ಇನ್ನೊಂದೆಡೆ ಸೇರಿ ಹೋಗಿದೆ. ಶ್ರವಣ, ತ್ವಕ್, ಜಠರ, ನಾಸಿಕಗಳು ಶಬ್ದ, ಸ್ಪರ್ಶ, ಭೋಜನ, ಗಂಧಗಳನ್ನು ಬಯಸಿ ಹರಿದಾಡುತ್ತಿವೆ. ಇಂತು ಮಾಡಬಾರದ ಕುಕರ್ಮ ಮಾಡಿ, ಸಂಸಾರ ವೈತರಣಿಯಲ್ಲಿ ಬಿದ್ದು ಜನನ ಮರಣ, ರೋಗ ಭಯದಿಂದ ನೊಂದು ಪರಸ್ಪರ ಕಡಿದಾಡುವ ಮೂಢರಾದ ನಮ್ಮನ್ನು ಕರುಣೆಯಿಂದ ಗಡ್ಡೆಗೆ ಹಾಕಬೇಕು.

## ರೂಪಕತಾಳ ಸುಳಾದಿ

ಇಂದ್ರಿಯಂಗಳನಿತ್ತೆ ಅದಕೆ ವಿಷಯಂಗಳನಿತ್ತೆ । ಒಂದರ ಸಾಧನಗಳೊಂದ ಕ್ಕಾಗಿವೆ ಅಯ್ಯ । ಚಂದದಿ ನಿನ್ನಯ ಕಥೆಯ ಕೇಳುವ ಕರ್ಣ । ಮಂದಿಯ ವಾರ್ತೆ ಕೇಳಿ ಮಳುಳಾದವೊ । ಸುಂದರ ನಿನ್ನಯ ಮೂರ್ತಿನೋಳ್ಪ ಅಕ್ಷಿಗಳು । ಸೌಂದರ್ಯ ಸ್ತ್ರೀಯರ ನೋಡಲೆಳಸಿದವಯ್ಯ । ಇಂದಿರಾಪತಿ ನಿನ್ನ ನಿರ್ಮಾಲ್ಯ ತುಳಸಿಯ ಬಿಟ್ಟು। ಇಂದುಮುಖಿಯರ ಮೈಗಂಧಕೆಳಸಿತು ಘ್ರಾಣ । ಹೊಂದಿ ನಿನ್ನವರಪ್ಪುವ ಸ್ಪರ್ಶೇಂದ್ರಿಯ । ಮಂದಸ್ತ್ರೀಯರ ಮೈಯಾಲಿಂಗನಕ್ಕೆಳೆವುದು । ಅಂದದಿ ಸುಜನರರ್ಪಿಸಿದನ್ನಗಳ ಬಿಟ್ಟು । ನಿಂದ್ಯರ ಮನೆಯ ಓಗರ ಬಯಸುವುದು ಜಿಹ್ವೆ । ಇಂದ್ರಿಯಂಗಳು ಎಲ್ಲ ಈಪರಿ ಒಟ್ಟಾಗೆ । ಮುಂದಿನ ಗತಿಯೇನೊ ಮುಕುಂದನೆ । ಕಂದರ್ಪಜನಕ ಗೋಪಾಲವಿಠಲ ಕೃಷ್ಣ । ಮುಂದೇನು ಗತಿಯೆನಗೆ ಮುಂಕುದನೆ ॥೩॥

ಅನನ್ಯಾಧಿಪತೇ ! ಅಖಿಲಗುರುವೂ, ಜಗಜ್ಜನ್ಮಸ್ಥಿತಿಲಯಕಾರಣನೂ ಆದ ನಿನಗೆ ನಮ್ಮನ್ನು ಉದ್ಧರಿಸಿ ಪೊರೆಯಲು ಆಗುವ ಪ್ರಯಾಸವಾದರೂ ಏನು ? ಆತ್ಮ ಬಂಧುವಾದ ನೀನು ನಿನ್ನಪ್ರಿಯ ಜನರನ್ನು ರಕ್ಷಿಸುವುದು ನಿನ್ನ ಸ್ವಭಾವವು. ಆದ ರಿಂದ ನಿನಗಾವ ಲಾಭವಿಲ್ಲದಿದ್ದರೂ ನಮಗೆ ಮೋಕ್ಷವೆಂಬ ಮಹಾಪ್ರಯೋಜನವು ಲಭಿಸುತ್ತದೆ.

ನಿನ್ನವನಾದ ನನಗೆ ಸಂಸಾರವೈತರಣಿಯ ಭಯವಿಲ್ಲ. ನಿನ್ನ ಪವಿತ್ರಕಥಾ ಮೃತಪಾನ ಮತ್ತನಾಗಿ ನನ್ನ ಚಿಂತೆಯನ್ನು ಬಿಟ್ಟಿರುವೆನು. ಆದರೆ ನಿನ್ನ ಕಥೆಗಳನ್ನು ಕೇಳದೆ ನಿನಗೆ ವಿಮುಖರಾದ ಸುಜೀವ ಮೂಢರು ಸಂಸಾರದಡವನ್ನು ಹೇಗೆ ಸೇರುವ ರೆಂದು ಚಿಂತಿಸುತ್ತಿರುವೆನು. ದೇವತೆಗಳೂ, ಮುನಿಗಳೂ ತಮ್ಮನ್ನು ನಂಬಿರುವ ಜನರ ವಿಮೋಚನೆಗಾಗಿ ಯೋಚಿಸಿ ವಿಜನಸ್ಥಳದಲ್ಲಿ ಕಾಷ್ಠಮೌನದಿಂದ ತಪಸ್ಸೇ ಮೊದಲಾದ ಸತ್ಕಾರ್ಯಗಳನ್ನು ಮಾಡುತ್ತಿರುವರು. ಅಂತೆಯೇ ನಾನೂ ನನ್ನನ್ನು ನಂಬಿ ಆಶ್ರಯಿಸಿರುವ ಅನುಹ್ಲಾದಾದಿ ದೀನಜನರನ್ನು ಬಿಟ್ಟು ನಾನೊಬ್ಬನೇ ಮೋಕ್ಷ ವನ್ನು ಹೊಂದಲಾರೆನು. ಸ್ವಾಮಿಯೇ ! ನೀನು ನನಗೆ ಅನುಗ್ರಹವನ್ನು ಮಾಡಿದಂತೆ ಇವರನ್ನೂ ಅನುಗ್ರಹಿಸು. ಅವರಿಗೆ ಅನುಕೂಲರಾದವರು ನಿನ್ನ ಹೊರತು ಇನ್ನಾರೂ ಇಲ್ಲವೆಂದು ಅರಿತೇ ನಿನ್ನನ್ನು ಮೊರೆಹೊಕ್ಕಿರುವೆನು. ನನ್ನ ಮಾತನ್ನು ಲಾಲಿಸು.

ವಿಷಯುಗಳಿಂದಲೂ ಸುಖವಾಗುವುದಿಲ್ಲವೆ? ಎಂದರೆ ಮೈಥುನಾದಿ ಗಾರ್ಹಸ್ಥ್ಯ ಸುಖವು ಕಜ್ಜಿಯ ಕೈಯನ್ನು ತುರಿಸಿದಾಗ ಆಗುವ ಸುಖಾಭಾಸದಂತೆಯೂ ಹಾಗೂ ಅನಂತರದಲ್ಲಿ ಮಹಾ ದುಃಖವೂ ಆಗುತ್ತದೆ. ಇದನ್ನು ಅರಿಯದೆ ಕಡುಲೋಭಿಗಳು ಕೆಟ್ಟದಾದ ಕಾಮದಿಂದ ತೃಪ್ತರಾಗದೆ ದುಃಖಪಡುತ್ತಿರುವರು. ಆದ್ದರಿಂದ ಧೀರರು ನವೆಯನ್ನು ತಡೆದುಕೊಂಡು ನಿಶ್ಚಿಂತರಾಗುವುದೇ ಒಳ್ಳೆಯದು.

## ಪದ

'ಮೌನವ್ರತ ಶ್ರುತಿ ಧ್ಯಾನ–ಅಹರಹರ್ ಜಪವ್ಯಾ । ಖ್ಯಾನ ಧರ್ಮ ಸುದಾನ ಡಾಂಭಿಕರಿಗೆ ಫಲ । ವೇನು ಕೊಡುವ ನಿದಾನ — ಅಜಿತೇಂದ್ರಿಯರಿಗೆ ಐಹಿಕಾನು ಭೋಗಕ್ಕೆ ಕಾರಣ ಮೋಕ್ಷಕ್ಕಿವೇ ಕಾರಣ ॥

ಮೌನವ್ರತ, ವೇದಾಧ್ಯಯನ, ತಪಸ್ಸು, ಧರ್ಮಾಚರಣೆ, ಪ್ರವಚನ, ಪುರಾಣ ಪಠನ, ಜಪ, ಸಮಾಧಿಗಳು ಮುಕ್ತಿಗೆ ಸಾಧನವೆನಿಸಿವೆ. ಆದರೆ ಇಂದ್ರಿಯಲೋಲು ಪರಿಗೆ ಅವುಗಳಿಂದ ಕೆಲವು ಕಾಲ ಮರುಳಾದ ಜನರಿಂದ ಜೀವನ ನಡೆಯುತ್ತದೆ. ಅವರು ದಾಂಭಿಕರೆಂದು ಜನರಿಗೆ ಗೋತ್ತಾದಕೂಡಲೆ ಅವರ ಜೀವನವೂ ಸಾಗದೆ, ಗೌರವೂ ಹೋಗುವುದು.

ಭಕ್ತ ಸಾಮಾನ್ಯರು ಮಾಡುವ ಸುಲಭವಾದ ಉಪಾಸನೆ ಯಾವುದೆಂದರೆ :– ಬೀಜದಲ್ಲಿ ಅಂಕುರ, ಜೀವ, ಅಭಿಮಾನಿದೇವತೆ ಈ ಮೂವರೂ ಅಡಗಿರುವಂತೆ ಕಾರ್ಯಕಾರಣರೂಪ ಜಗತ್ತಿನಲ್ಲಿ ಬೀಜಗತ ದೇವತಾರೂಪದಂತೆ ಅಡಗಿರುವ ನಿನ್ನನ್ನು ಭಕ್ತಿಪೂರ್ವಕ ಶ್ರವಣಾದಿಗಳಿಂದ ವಿಚಾರಿಸಿ, ಜ್ಞಾನಿಗಳು ಆನಂದಜ್ಞಾನರೂಪನಾದ

ನಿನ್ನನ್ನು ಕಾರ್ಯ ಕಾರಣ ಜಗತ್ತಿಗಿಂತ ಭಿನ್ನನೆಂದು ತಿಳಿಯುವರು. ಕಾಷ್ಠಗಳು ಭಿನ್ನ ಭಿನ್ನಗಳಾದರೂ ಒಳಗಿರುವ ಅಗ್ನಿಯು ಒಬ್ಬನೇ ಆಗಿರುವಂತೆ ನಿನಗೆ ಸ್ವಗತಭೇದವಿಲ್ಲ. ಈ ಜಗತ್ತು ನಿನಗೆ ಪ್ರತಿಮೆಯಂತೆ ರೂಪವೆನಿಸಿದೆ. ಈ ರೂಪಗಳೆರಡನ್ನೂ ಚೆನ್ನಾಗಿ ತಿಳಿದವನೇ ಜ್ಞಾನಿ. ಸರ್ವಸ್ವಾಮಿ, ಸರ್ವಾಂತರ್ಯಾಮಿ ಮತ್ತು ಸರ್ವಶಕ್ತಿ ಪ್ರದನಾದ ನಿನ್ನನ್ನೂ ಅಗ್ನಿ, ಜಲ, ಆಕಾಶ, ಪ್ರಾಣ, ಇಂದ್ರಿಯ, ಹೃದಯ ಮತ್ತು ಚೇತನನೆಂದು ಕರೆಯುವರು. ಅವೆಲ್ಲವೂ ನಿನ್ನ ಅಧೀನವಾಗಿವೆ. ಸಂಸಾರಿಗಳೂ, ಮುಕ್ತರೂ ನಿನ್ನ ವಶದಲ್ಲಿದ್ದು ನಡೆಯುವರು. ಪೂರ್ಣಗುಣನಾದ ನೀನಲ್ಲದೆ ಮನೋವಾಗ್ಗೋಚರವಾದ ಸ್ವತಂತ್ರವಸ್ತುವು ಇನ್ನೊಂದಿಲ್ಲ.

ತ್ರಿಗುಣ ಮಾನಿನಿಯಾದ ರಮಾದೇವಿ, ತತ್ತ್ವೇಶರಾದ ಬ್ರಹ್ಮರುದ್ರೇಂದ್ರಾದಿ ದೇವತೆಗಳು, ಋಷಿಗಳು, ಮನುಜರೂ ಕೂಡ ಜನನ ಮರಣಾದಿ ದೋಷರಹಿತ ನಾದ ನಿನ್ನನ್ನು ಸಂಪೂರ್ಣವಾಗಿ ತಿಳಿಯಲಾಗುವುದಿಲ್ಲೆಂದು ವಿಚಾರ ಮಾಡಿ ತಿಳಿದ ವಿವೇಕಿಗಳು ಯಥಾಯೋಗ್ಯವಾಗಿ, ವೇದಾದಿಶಾಸ್ತ್ರಪ್ರತಿಪಾದ್ಯನಾದ ನಿನ್ನನ್ನು ಪಾಡಿ ಪೊಗಳಿ ಸ್ತುತಿಸುತ್ತಿರುವರು.

ನಾನೂ ಇದನ್ನೇ ಬೇಡುವೆನು. ಮನಸ್ಸಿನಿಂದ ಧ್ಯಾನಿಸುವುದು, ಕಣ್ಣುಗಳಿಂದ ನಿನ್ನ ಮೂರ್ತಿಯನ್ನು ನೋಡುವುದು, ನಾಲಗೆಯಿಂದ ಸ್ತುತಿಸುವುದು, ಕರಗಳಿಂದ ಪೂಜಾದಿಗಳನ್ನು ಮಾಡುವುದು, ಕಿವಿಗಳಿಂದ ಹರಿಕಥೆಯನ್ನು ಕೇಳುವುದು, ಪಾದ ಗಳಿಂದ ಕ್ಷೇತ್ರವನ್ನು ಸಂಚರಿಸುವುದು ಹೀಗೆ ಆರು ಅಂಗಗಳಿಂದ ಮಾಡುವ ಸೇವೆ ಯಿಂದಲ್ಲದೆ ಪರಮಹಂಸ ಪಾಲಕನಾದ ನಿನ್ನ ಚರಣಕಮಲದಲ್ಲಿ ಭಕ್ತಿಯು ಹುಟ್ಟ ಲಾರದು. ಭಕ್ತಿಯಿಲ್ಲದೆ ಮುಕ್ತಿಯಿಲ್ಲ. ಆದ್ದರಿಂದ ನನ್ನನ್ನು ನಿನ್ನ ಭಕ್ತವರ್ಗಕ್ಕೆ ಸೇರಿಸಿ ನನ್ನನ್ನೂ, ನನ್ನವರನ್ನೂ ಅನುಗ್ರಹಿಸಿ ಕಾಪಾಡು !

**ನರಸಿಂಹ :–** (ಸ್ತುತಿಗೆ ಪ್ರೀತನಾಗಿ ಸಿಟ್ಟನ್ನು ಬಿಟ್ಟು ಶಾಂತನಾಗಿ) ಪ್ರಹ್ಲಾದನೇ ! ನಿನಗೆ ಮಂಗಳವಾಗಲಿ. ನಿನ್ನಲ್ಲಿ ಪ್ರೀತನಾಗಿರುವೆನು. ಬೇಕಾದ ವರ ವನ್ನು ಬೇಡು. ಭಕ್ತರ ಸರ್ವಾಭೀಷ್ಟಪ್ರದನಾಗಿ ನಿಂತಿರುವೆನು ಕೇಳು. ನನ್ನ ದರ್ಶನವು ಬಹು ದುರ್ಲಭ. ಪ್ರಸನ್ನನಾಗಿರುವ ನನ್ನನ್ನು ನೋಡಿದವನನ್ನು ಸಂಸಾರವು ಮತ್ತೆ ಪೀಡಿಸಲಾರದು. ಮಂಗಳದೇವಿಯ ಪತಿಯು, ಸರ್ವಕಾಮಿತ ವರದರಾಜನೂ ಆದ ನನ್ನನ್ನು ಬುದ್ಧಿವಂತರು ಪೂರ್ಣ ಭಕ್ತಿಯಿಂದ ಭಜಿಸುವರು.

**ನಾರದ :–** ಸಾಮಾನ್ಯವಾಗಿ ಜನರು ಬೇಡುವ ವರಗಳನ್ನೆಲ್ಲ ಕೊಡುವೆನೆಂಬ ನರಹರಿಯ ಮಾತಿಗೆ ಮನಸೋಲದೆ ಏಕಾಂತ ಭಕ್ತನಾದ ಪ್ರಹ್ಲಾದನು ಶ್ರೀಹರಿಗೆ ವಂದಿಸಿ ಇಂತು ನುಡಿದನು.

**ಒಂಭತ್ತನೆಯ ಅಧ್ಯಾಯ ಮುಗಿದುದು**

**ನಾರದ** :- ವರಗಳೆಲ್ಲವೂ ಕಾಮಜನಕಗಳೂ, ವಿಘ್ನಕಾರಣಗಳೂ, ಆಗಿವೆ ಎಂದು ತಿಳಿದು, ಬಾಲಕನಾದರೂ, ಮಹಾಜ್ಞಾನಿಯಾದ ಪ್ರಹ್ಲಾದರಾಜನು ನಸ್ಸು ನೆಕ್ಕು ಹರಿಯನ್ನು ಕುರಿತು ಮಾತನಾಡುತ್ತಾನೆ :-

**ಪ್ರಹ್ಲಾದ** :- ನರಸಿಂಹನೇ ! ಸ್ವಾಭಾವಿಕವಾಗಿಯೇ ಕಾಮಾಸಕ್ತ ಮನಸ್ಸುಳ್ಳ ನಮ್ಮನ್ನೇಕೆ ಆಶೆಪಡಿಸಿ ಕೆಡಿಸುವೆ ? ಕಾಮದಿಂದ ಭೀತನಾಗಿ, ವೈರಾಗ್ಯ ಭಾಗ್ಯವನ್ನಾಶ್ರಯಿಸಿ, ಸಂಸಾರದಿಂದ ಬಿಡುಗಡೆಯಾಗಬೇಕೆಂದು ಬಯಸಿ, ನಿನ್ನ ಚರಣಾರವಿಂದವನ್ನು ಹೊಂದಿರುವೆನು. ಅಂತಹ ನನ್ನ ಭಕ್ತಿಯನ್ನು ಪರೀಕ್ಷಿಸಲು ಕಾಮಗಳಲ್ಲಿ ಪ್ರೇರಿಸುವೆಯಾ ? ಬೇಡ ! ಜನನಮರಣ ಬೀಜಗಳಲ್ಲವೆ ಕಾಮಗಳು ? ಅತ್ಯಂತ ಕರುಣಾಕರನೂ, ಅಖಿಲ ಲೋಕಜ್ಞಾನಪ್ರದನೂ, ಆದ ನೀನು ವಂಚಿಸುತ್ತಿಲ್ಲ. ಪರೀಕ್ಷಿಸಲು ಹೀಗೆ ಹೇಳುತ್ತಿರುವೆ. ಸಂಸಾರ ಅಂಧಂತಮಸ್ಸಿನಿಂದ ಪಾರುಗಾಣಿಸಿ, ಪೊರೆವ ನಿನಗೆ ಶಿರಬಾಗಿ ವಿಜ್ಞಾಪಿಸುವೆನು :-

ಪ್ರಭುವನ್ನು ಕಂಡು ಸುಮ್ಮನೆ ಕಾಮಿತಗಳನ್ನು ಬೇಡುವವನು ಭೃತ್ಯನಲ್ಲ. ಅಂತಹವನನ್ನು ವ್ಯಾಪಾರ ಮಾಡುವ ವರ್ತಕನೆನ್ನಬಹುದು. ಕಾಮಗಳನ್ನು ಬೇಡಿ ಪರಸ್ಪರ ಆಶ್ರಯವನ್ನು ಪಡೆದವರೂ ಸ್ವಾಮಿಯೂ ಅಲ್ಲ-ಭೃತ್ಯನೂ ಅಲ್ಲ. ಸ್ವಾಮಿಯಲ್ಲಿರುವ ವಸ್ತುಗಳನ್ನು ಬೇಡಿ ಭಜಿಸುವವನಿಗೆ ಧಣಿಯ ಸ್ವತ್ತಿನಲ್ಲಿ ಪ್ರೇಮವಿರುವುದೇ ಹೊರತು ಧಣಿಯಲ್ಲಿ ಪ್ರೇಮವಿಲ್ಲ. ಭೃತ್ಯನ ಸೇವೆ, ಗೌರವವನ್ನು ಬಯಸಿ ಅವನಿಗೆ ಇಷ್ಟವಾದುದನ್ನು ಕೊಡುವವನು ಸ್ವಾಮಿಯಲ್ಲ. ಮತ್ತೂ ಅವನು ಅಪೂರ್ಣನು. ನೀನಾದರೋ ಪೂರ್ಣನು. ನಾನು ನಿನ್ನ ಏಕಾಂತ ಭಕ್ತನು. ನನಗೆ ಕಾಮಗಳು ಬೇಕಿಲ್ಲ. ನಿನ್ನ ಭಕ್ತನಾಗುವುದೇ ನನಗೆ ಬೇಕು. ನೀನು ಯಾರಿಂದಲೂ ಯಾವುದನ್ನೂ ಅಪೇಕ್ಷಿಸದ ಸ್ವತಂತ್ರ ಪ್ರಭುವಾಗಿರುವೆ. ನಮ್ಮಿಬ್ಬರ ಈಶ ದಾಸ ಭಾವವು ಪ್ರಯೋಜನವನ್ನು ಅನುಸರಿಸಿದುದಲ್ಲ.

ಆದರೂ ನೀನು ಕೊಡುತ್ತೇನೆಂಬುದನ್ನು ಬೇಡವೆನ್ನಲಾರೆ. ನನಗೆ ಯಾವ ಅಪೇಕ್ಷೆಯೂ ಹುಟ್ಟದಿರುವಂತೆ ಮಾಡು. ಇದೇ ನಾನು ಬೇಡುವ ವರವು.

ಆಶೆ ಹುಟ್ಟಿದೊಡನೆ ಇಂದ್ರಿಯ, ಮನಸ್ಸು, ಪ್ರಾಣಗಳು ಕೆಡುತ್ತವೆ. ಭಕ್ತಿ, ಧೈರ್ಯ, ಧರ್ಮ, ವಿವೇಕ, ಲಜ್ಜೆ, ಶ್ರೀ, ತೇಜಸ್ಸು ಮತ್ತು ಸ್ಮೃತಿ ಮೊದಲಾದ ಸದ್ಗುಣಗಳೂ ದೂರವಾಗುವುವು. ಮನಸ್ಸಿನಲ್ಲಿ ಬೇರೂರಿನಿಂತ ಕಾಮಗಳನ್ನು ಮಾನವನು ಬಿಟ್ಟಾಗಲೇ ಸಂಸಾರದಿಂದ ಮುಕ್ತನಾಗುವನು. ನಾರದರು ಹೇಳಿಕೊಟ್ಟ ಈ ಮಂತ್ರವನ್ನು ಸದಾ ಜಪಿಸುವೆನು:-

**ಶ್ಲೋಕ || ಓಂ ನಮೋ ಭಗವತೇ ತುಭ್ಯಂ ಪುರುಷಾಯ ಮಹಾತ್ಮನೇ |
ಹರಯೇ ಅದ್ಭುತಸಿಂಹಾಯ ಬ್ರಹ್ಮಣೇ ಪರಮಾತ್ಮನೇ ||**

**ಅರ್ಥ :–** ಮಹಾತ್ಮನೇ – ಸರ್ವೋತ್ತಮನೂ, ಬ್ರಹ್ಮಣೇ – ಗುಣಪೂರ್ಣನೂ, ಪರಮಾತ್ಮನೇ – ಶ್ರೇಷಾ ಧಿಕಾರಿಯಾದ ಬ್ರಹ್ಮದೇವರಿಗೆ ಸ್ವಾಮಿಯೂ, ಭಗವತೇ – ಐಶ್ವರ್ಯಾದಿ ಗುಣಸಮುದ್ರನೂ, ಹರಯೇ - ಭಗವತ್ಸ್ವರೂಪಿಯೂ, ಅದ್ಭುತ ಸಿಂಹಾಯ – ನರಸಿಂಹನೂ, ಪುರುಷಾಯ – ಹೃತ್ಕಮಲವಾಸಿಯೂ, ಓಂ – ಪ್ರಣವ ಪ್ರತಿಪಾದ್ಯನೂ ಆದ ನಿನಗೆ ನಮಸ್ಕಾರ !

**ನರಸಿಂಹ :–** ಪ್ರಹ್ಲಾದನೇ ! ನಿನ್ನಂತಹ ಏಕಾಂತಭಕ್ತರು ಈ ಲೋಕ ಪರಲೋಕಗಳನ್ನು ಬಯಸುವುದೇ ಇಲ್ಲ. ಆದರೂ ನೀನು ದೈತ್ಯರಾಜನಾಗಿ ಒಂದು ಮನ್ವಂತರ ಕಾಲ ಸುಖವನ್ನು ಅನುಭವಿಸು. ನನ್ನ ಕಥೆಗಳನ್ನು ಕೇಳುತ್ತ ನನ್ನಲ್ಲಿ ನಿನ್ನ ಚಿತ್ತವೃತ್ತಿಯನ್ನರ್ಪಿಸು. ಸರ್ವಭೂತಾಂತರ್ಯಾಮಿಯಾದ ನನ್ನನ್ನು ಸಂತೋಷ ಪಡಿಸುವ ಯಜ್ಞಾದಿ ಸುಕರ್ಮಗಳನ್ನು ಮಾಡು. ಪ್ರಾರಬ್ಧ ಕರ್ಮ ಕಾಮ್ಯಪುಣ್ಯವನ್ನು ಭೋಗ ಮತ್ತು ದಾನಗಳಿಂದಲೂ, ಪ್ರಾರಬ್ಧ ಪಾಪಗಳನ್ನು ಪ್ರಾಯಶ್ಚಿತ್ತಾದಿ ಕರ್ಮ ಗಳಿಂದಲೂ ಉಪಮರ್ದನ ಮಾಡಿಕೊಂಡು ಅಂದರೆ ಪ್ರಾರಬ್ಧ ಪುಣ್ಯವನ್ನು ಶಿಷ್ಯ ರಿಗೂ, ಪಾಪವನ್ನು ದೈತ್ಯರಿಗೂ ಹಂಚಿ ಕಾಲವು ಬಂದಾಗ ಭೌತಿಕ ಶರೀರವನ್ನು ಬಿಟ್ಟು, ದೇವಲೋಕದಲ್ಲಿ ಸ್ತೋತ್ರಾರ್ಹವಾದ ಕೀರ್ತಿಯನ್ನು ಹರಡಿ, ಸಂಸಾರದಿಂದ ಮುಕ್ತನಾಗಿ ನನ್ನನ್ನು ಹೊಂದುವೆ. (ಸಾಲೋಕ್ಯಮುಕ್ತಿಯಲ್ಲಿ ಹರಿಯ ಸಮೀಪ ದಲ್ಲಿಯೇ ಇದ್ದು ಅವನನ್ನು ಸ್ಪರ್ಶಮಾಡುತ್ತಾ ಆನಂದವನ್ನು ಅನುಭವಿಸುವ ಮುಕ್ತಿ ಯನ್ನು ಹೊಂದುವೆ ಎಂದು ತಾತ್ಪರ್ಯ)

**ಅವತಾರಿಕೆ :–** ಪ್ರಹ್ಲಾದನು ಈಗ ಮಾಡಿದ ಸ್ತೋತ್ರವು ಉಪನಿಷತ್ತಿನ ಭಾವವುಳ್ಳದ್ದು. ಆದ್ದರಿಂದ ಸಚ್ಛಾಸ್ತ್ರರೂಪವಾದ ಆ ಸ್ತೋತ್ರಕ್ಕೆ ನರಸಿಂಹನು ಅಧಿಕಾರಿ ಮತ್ತು ಫಲವನ್ನು ಹೇಳುವನು :–

**ಶ್ಲೋಕ || ಯ ಏತತ್ಕೀರ್ತಯೇನ್ಮಹ್ಯಂ ತ್ವಯಾ–ಗೀತಮಿದಂ ನರಃ |
ತ್ವಾಂ ಚ ಮಾಂ ಚ ಸ್ಮರನ್ಕಾಲೇ ಕರ್ಮಬಂಧಾದ್ವಿಮುಚ್ಯತೇ || ಅ. 10/15 ||**

ನನ್ನನ್ನು ಕುರಿತು ನೀನು ಮಾಡಿದ ಈ ಸ್ತೋತ್ರವನ್ನು ಮುಕ್ತಿಯೋಗ್ಯನಾದ ಜೀವನು ಪ್ರಾತರಾದಿ ಶುಭಕಾಲಗಳಲ್ಲಿ ನಿನ್ನನ್ನು ಮತ್ತು ನನ್ನನ್ನು ಸ್ಮರಿಸುತ್ತ ಭಕ್ತಿ ಯಿಂದ ಹೇಳಿದರೆ ಅವನು ಹುಟ್ಟು ಸಾವುಗಳಿಂದ ಮುಕ್ತನಾಗುವನು.

(ಇದರಿಂದ ಪ್ರಹ್ಲಾದನು ಮುಕ್ತಿಯನ್ನು ಹೊಂದುವಂತೆ ಸಾಧನೆ ಮಾಡಿಸ ತಕ್ಕ ಬಿಂಬನೆಂದು ಹೇಳಿದಂತಾಯಿತು.)

**ಪ್ರಹ್ಲಾದ :–** ಪರಮೇಶನೇ ! ವರದರಾಜನಾದ ನಿನ್ನಿಂದ ಒಂದು ವರವನ್ನು ಬೇಡುವುದಿದೆ. ನಮ್ಮ ತಂದೆಯು ನೀನು ಸರ್ವೋತ್ತಮನೆಂದು ತಿಳಿಯ ಲಾರದೆ, ತಮ್ಮನನ್ನು ಕೊಂದ ವೈರಿಯೆಂದು ಭ್ರಾಂತನಾಗಿ ಸರ್ವಗುರುವಾದ ನಿನ್ನನ್ನು ನಿಂದಿಸಿದನು. ಮತ್ತು ನಿನ್ನ ಭಕ್ತನಾದ ನನ್ನನ್ನು ವಧಿಸಲು ಬಂದನು. ಆದ್ದರಿಂದ ದುರಂತದುಸ್ತರವಾದ ಪಾಪದ ಫಲವು ಅವನಿಗೆ ಬರದಂತೆ ಮಾಡು. ನಿನ್ನ ನೋಟ ದಿಂದಲೇ ಪೂತನಾಗಿರುವವನಾದರೂ ನನ್ನ ತಂದೆಯನ್ನು ಉದ್ಧರಿಸೆಂದು ಬೇಡುವೆನು.

**ನರಸಿಂಹ :** ಪ್ರಹ್ಲಾದನೇ ! ಕುಲಪಾವನನಾದ ನಿನ್ನಂತಹ ಸುಪುತ್ರನು ಜನಿಸಿರುವುದರಿಂದಲೇ ಇಪ್ಪತ್ತೊಂದು ತಲೆಮಾರಿನ ಪಿತೃಗಳೆಲ್ಲರೂ ಉದ್ಧೃತರಾಗಿರು ವರು. (21 ಪಿತೃಗಳು ಹೇಗೆಂದರೆ :- ತಂದೆ, ತಾತ, ಮುತ್ತಾತ, ಪುತ್ರ, ಪೌತ್ರ, ಪ್ರಪೌತ್ರ, ಪ್ರಪೌತ್ರ ಪುತ್ರ ಇವರು ಏಳು ಮಂದಿ ಒಂದು ಜನ್ಮಕ್ಕಾದರೆ ಮೂರು ಜನ್ಮಕ್ಕೆ ಒಟ್ಟು 21 ಮಂದಿಯಾಯಿತು.) ನನ್ನ ಭಕ್ತರು ಶಾಂತರು, ಸಮದರ್ಶಿಗಳು, ಸಮುದಾಚಾರರು. ಅಂತಹವರು ಕೀಕಟ ಅಂದರೆ ಮ್ಲೇಚ್ಛದೇಶದಲ್ಲಿ ಕಾಲಿಟ್ಟರೂ ಅದು ಪವಿತ್ರ ಸ್ಥಳವೆನಿಸುವುದು. ಕೃಕಲಾಸ (ಹೆಂಟೆಗೊದ್ದ) ಮುಂತಾದ ಯಾವ ಜೀವರಿಗೂ ಯಾವ ವಿಧವಾದ ಹಿಂಸೆಯನ್ನು ಕೊಡದೆ ಅಲ್ಲಿ ಅಂತರ್ಯಾಮಿಯಾಗಿರುವ ನನ್ನ ದರ್ಶನದಿಂದ ಪೂತರಾಗಿ ಭಕ್ತಿಯನ್ನು ಮಾಡುವರು. ಹಾಗೂ ಸರ್ವವಿಷಯ ಗಳಲ್ಲಿಯೂ ಆಶೆ, ಸ್ಪರ್ಧೆಗಳನ್ನು ಬಿಟ್ಟಿರುವರು. ಇಂತಹ ಭಕ್ತರಲ್ಲಿಯೂ, ನಿನ್ನಲ್ಲಿ ವಿಶೇಷವಿದೆ. ಅದೇನೆಂದರೆ :–

ಶ್ಲೋಕ

**ಭವಂತಿ ಪುರುಷಾ ಲೋಕೇ ಮದ್ಭಕ್ತಾ ಸ್ತ್ವಾಮನುವ್ರತಾಃ ।**
**ಭವಾನ್ಮೇ ಖಲು ಭಕ್ತಾನಾಂ ಸರ್ವೇಷಾಂ ಪ್ರತಿರೂಪಧೃಕ್ ॥**
॥ ಶ್ಲೋಕ 22, ಅ. 10 ॥

**ಅರ್ಥ :** ಜಗತ್ತಿನಲ್ಲಿ ನನ್ನ ಭಕ್ತರಾಗಿ ನಿನ್ನನ್ನು ಅನುಸರಿಸತಕ್ಕ, ಪುರು ಷಾರ್ಥವನ್ನು ಹೊಂದ ಬಲ್ಲಜೀವರು ಭವಂತಿ–ಮೂರು ಕಾಲಗಳಲ್ಲಿಯೂ ಇರುವರು. ಖಲು–ಕೆಲವರನ್ನು ಬಿಟ್ಟು ಉಳಿದ ನನ್ನ ಸಕಲ ಭಕ್ತರಿಗೂ ನೀನು, ಪ್ರತಿರೂಪಧೃಕ್- ಬಿಂಬ ಭೂತನಾಗಿರುವೆ.

**ವಿಶೇಷ :–** ಯಾರಿಗೆ ಪ್ರಹ್ಲಾದನು ಬಿಂಬನಲ್ಲವೋ ಅವರನ್ನು ಬಿಡಬೇಕು. ಅವರಾರು ಎಂಬುದನ್ನು ಸ್ಕಾಂದ ಪುರಾಣವು ಹೇಳುವುದೆಂದು ಶ್ರೀಮದಾಚಾರ್ಯರು ಭಾಗವತದ ಈ ಶ್ಲೋಕಕ್ಕೆ ತಾತ್ಪರ್ಯವಾಗಿ ಹೇಳಿರುವರು :–

ಋಷೀನ್ ಋ ತಾತ್ವಿಕಾನ್ ದೇವಾನ್ ನಾರದಾದೀಂಸ್ತಥೈವ ಚ ।
ಪ್ರಹ್ಲಾದಾದುತ್ತಮಃ ಕೋನು ವಿಷ್ಣು ಭಕ್ತ್ಯಾ ಜಗತ್ತ್ರಯೇ ॥ಇತಿ ಸ್ಕಾಂದೇ

ಬ್ರಹ್ಮಾದಿ ತತ್ತ್ವಾಭಿಮಾನಿ ದೇವತೆಗಳನ್ನೂ, ನಾರದಾದಿ ಋಷಿಗಳನ್ನೂ ಬಿಟ್ಟು ಹದಿನಾಲ್ಕು ಲೋಕಗಳ ಸಂಗ್ರಹರೂಪವಾದ ಮೂರು ಲೋಕಗಳಲ್ಲಿಯೂ ವಿಷ್ಣು ಭಕ್ತಿಯಲ್ಲಿ ಪ್ರಹ್ಲಾದನಿಗಿಂತ ಉತ್ತಮರು ಯಾರು ? ಯಾರೂ ಇಲ್ಲವೆಂದ್ಧು ತಾತ್ಪರ್ಯ.

ಭಾಗವತದಲ್ಲಿ ಪ್ರಹ್ಲಾದನನ್ನು ಅನುಸರಿಸುವ ಭಕ್ತರು ಇರುವರೆಂದು ನರ ಹರಿಯು ಹೇಳಿರುವನಷ್ಟೆ ? ಹರಿಭಕ್ತರ ತಾರತಮ್ಯದಲ್ಲಿ ಪ್ರಹ್ಲಾದನ ಸ್ಥಾನವನ್ನು ಗರುಡ ಪುರಾಣ ಬ್ರಹ್ಮಕಾಂಡವು ಅರ್ಥಾತ್ ವೇದವ್ಯಾಸರು ಹೇಳುತ್ತಾರೆ :–

"ವಾಯ್ವಾವೇಶಾಚ್ಚ ಪ್ರಹ್ಲಾದೋ ನಾರದಾದಧಮಃ ಸ್ಮೃತಃ"

ಪ್ರಹ್ಲಾದನಲ್ಲಿ ವಾಯುದೇವರ ಆವೇಶವಿರುವುದರಿಂದ, ತಾರತಮ್ಯದಲ್ಲಿ 14ನೇ ಕಕ್ಷೆಯಲ್ಲಿರುವ ನಾರದರ ಕೆಳಗಿನ 15ನೆಯ ಕಕ್ಷೆಯಲ್ಲಿ ಪ್ರಹ್ಲಾದನು ಸೇರಿರುವನು.

ಪ್ರಹ್ಲಾದನೆ ! ಹೀಗೆ ನೀನು ಶ್ರೇಷ್ಠನಾಗಿರುವುದರಿಂದ ಇತರ ಹರಿಭಕ್ತರೆಲ್ಲರೂ ನಿನ್ನನ್ನು ಅನುಸರಿಸಿ, ಬಿಂಬನಾದ ನಿನ್ನಿಂದ ಮೋಕ್ಷ ಸಾಧನೆಯನ್ನು ಪೂರ್ಣಮಾಡಿ ಕೊಂಡು ಕೃತಾರ್ಥರಾಗುವರು. ನಿಮ್ಮ ತಂದೆಯು ಭಗವದ್ವೇಷಿಯೆಂದು ಪ್ರೇತ ಕಾರ್ಯ ಮಾಡದಿರಬೇಡ. ನನ್ನ ಸ್ಪರ್ಶಮಾತ್ರದಿಂದ ಪವಿತ್ರನಾಗಿ ನಿನ್ನಂತಹ ಮಗನನ್ನು ಪಡೆದಿರುವ ನಿನ್ನ ತಂದೆಗೆ ಪ್ರೇತಕಾರ್ಯವನ್ನು ಮಾಡು. ತಂದೆಯ ರಾಜ್ಯ ವನ್ನಾಳು. ಬ್ರಹ್ಮಾದಿಗಳು ಹೇಳಿದಂತೆ ನಡಿ. ನನ್ನಲ್ಲಿ ಮನಸ್ಸಿಡು. ಸಕಲ ಕರ್ಮ ಗಳನ್ನೂ ನನ್ನ ಪೂಜೆಯೆಂದು ತಿಳಿ.

**ನಾರದ** :– ಧರ್ಮರಾಜನೇ ! ಪ್ರಹ್ಲಾದನು ಭಗವದಾಜ್ಞೆಯಂತೆ ತಂದೆಗೆ ಪ್ರೇತಕಾರ್ಯಗಳನ್ನು ಮಾಡಿದನು. ಬಳಿಕ ಶುಕ್ರಾದಿ ಗುರುಜನರು ಅವನನ್ನು ಕೂಡಿಸಿ ದೈತ್ಯರಾಜ್ಯದಲ್ಲಿ ಪಟ್ಟಗಟ್ಟಿದರು. ಪ್ರಹ್ಲಾದನು ನಿಷ್ಕಂಟಕ ರಾಜ್ಯವನ್ನು ಹೊಂದಿ ನರಹರಿಗೆ ನಮಿಸಿದನು. ಪ್ರಸನ್ನನಾದ ನರಸಿಂಹದೇವರನ್ನು ಕಂಡು ಬ್ರಹ್ಮದೇವರು ದೇವತೆಗಳಿಂದ ಸಹಿತವಾಗಿ ಬಂದು ವಂದಿಸಿ ವೇದವಚನಗಳಿಂದ ಸ್ತುತಿಸಿದರು.

**ಬ್ರಹ್ಮ** :– ದೇವ ದೇವನೇ ! ಸರ್ವೋತ್ತಮನೇ ! ಮಂಗಳರೂಪನೇ ! ಆದಿಪುರುಷನೇ ! ನಿನಗೆ ನಮಸ್ಕಾರ ! ಲೋಕತಾಪಕರನಾದ ದೈತ್ಯನು ನಿನ್ನಿಂದ ಹತ ನಾದನು. ಲೋಕಕ್ಕೆ ನಿನ್ನಿಂದ ಸುಖವಾಯಿತು. ನಾನು ಸೃಷ್ಟಿಸಿದ ಪ್ರಾಣಿಗಳಿಂದ

ಸಾವು ಬೇಡವೆಂದು ನನ್ನಿಂದ ವರವನ್ನು ಪಡೆದ ದುಷ್ಟನು ತನ್ನ ತಪೋಬಲದಿಂದ ಉನ್ಮತ್ತನಾಗಿ ವೇದಮಾರ್ಗವನ್ನು ಕೆಡಿಸಿದ್ದನು. ಏನು ಪುಣ್ಯವೊ ? ಅವನ ಮಗನು ಸಾಧುವೂ ಮಹಾಭಾಗವತನು. ಅವನನ್ನು ನೀನು ರಕ್ಷಿಸಿದೆ. ಈ ನಿನ್ನ ಮಂಗಳ ರೂಪವು ಧ್ಯಾನಿಸುವವರ ಮಹಾಪಾಪಪರಿಹಾರಕವೂ, ಆಪದ್ರಕ್ಷಕವೂ, ಮೃತ್ಯು ನಿವಾರಕವೂ ಆಗಿರಲಿ.

**ನರಸಿಂಹ :–** ಚತುರ್ಮುಖನೇ ! ಹಿರಣ್ಯ ಕಶಿಪುವಿಗೆ ನನ್ನ ಪ್ರೇರಣೆಯಂತೆ ಕೊಟ್ಟಂತಹ ವರಗಳನ್ನು ಹಾವಿಗೆ ಹಾಲೆರದಂತೆ ಕ್ರೂರರಾದ ಇತರ ದೈತ್ಯರಿಗೆ ಕೊಡ ಬೇಡ.

**ನಾರದ :–** ನರಹರಿಯು ಹೀಗೆ ಹೇಳಿ ಬ್ರಹ್ಮದೇವರಿಂದ ಪೂಜಿತನಾಗಿ ಕಣ್ಮರೆಯಾದನು. ಆಗ ಪ್ರಹ್ಲಾದನು ಬ್ರಹ್ಮ, ರುದ್ರ, ಪ್ರಜೇಶ್ವರರನ್ನೂ ಹರಿಭಕ್ತ ರೆಂದು ವಿನಯದಿಂದ ವಿಧ್ಯುಕ್ತವಾಗಿ ಪೂಜಿಸಿದನು. ಬ್ರಹ್ಮದೇವರು ಶುಕ್ರಾ ಚಾರ್ಯರನ್ನು ಕರೆಸಿ, ಪ್ರಹ್ಲಾದನಿಗೆ ದೈತ್ಯದಾನವ ರಾಜ್ಯದಲ್ಲಿ ಪಟ್ಟಾಭಿಷೇಕವನ್ನು ಮಾಡಿದರು. ದೇವತೆಗಳು ಭಗವಂತನಂತೆ ಬೇಕಾದ ವರಗಳನ್ನು ಕೊಟ್ಟು ಅವರು ಪ್ರಹ್ಲಾದನಿಂದ ಪೂಜೆಯನ್ನು ಸ್ವೀಕರಿಸಿ ತಮ್ಮ ತಮ್ಮ ಲೋಕಗಳಿಗೆ ತೆರಳಿದರು.

ಯುಧಿಷ್ಠಿರಾ ! ಹೀಗೆ ಹರಿಯ ದ್ವಾರಪಾಲಕರಾದ ಜಯ ವಿಜಯರು ಸನ ಕಾದಿಗಳ ಶಾಪದಿಂದ ದೈತ್ಯರಾಗಿ ಹುಟ್ಟಿ ಹರಿಯಿಂದ ಹತರಾಗುವಾಗ ರಾಕ್ಷಸಭಾವ ದಿಂದ ನರಸಿಂಹನನ್ನು ಚಿಂತಿಸಿ ಪ್ರಾಣಬಿಟ್ಟು ಮುಂದೆ ರಾಕ್ಷಸರಾಗಿಯೇ ಹುಟ್ಟಿದರು. ಶ್ರೀರಾಮನಿಂದ ಹತರಾಗುವಾಗ ಅವನನ್ನು ರಾಜಕುಮಾರನೆಂದು ಚಿಂತಿಸಿ ಪ್ರಾಣ ಬಿಟ್ಟು ಮುಂದೆ ಶಿಶುಪಾಲ ದಂತವಕ್ತ್ರರೆಂಬ ರಾಜಪುತ್ರರಾಗಿ ಹುಟ್ಟಿದರು. ಹರಿಯ ವಿಷಯದಲ್ಲಿ ಅಪ್ರಧಾನ ವೈರವನ್ನುಳ್ಳ ಪ್ರಧಾನವಾದ ಭಕ್ತಿಯನ್ನು ಮಾಡಿ, ಭಗ ವಂತನು ಶ್ರೀಕೃಷ್ಣನೆಂದು ತಿಳಿದು, ಈಗ ನೀನು ನೋಡುತ್ತಿರುವಂತೆಯೇ ಶ್ರೀಹರಿ ಯನ್ನು ಹೊಂದಿದರು. ಇವರು ಮಾತ್ರವೇ ಅಲ್ಲ. ಪೌಂಡ್ರಕ. ನರಕ ಮೊದಲಾದವ ರಲ್ಲಿದ್ದ ಸುಜೀವರು ದೈತ್ಯಾವೇಶ ಮತ್ತು ಹರಿನಿಂದನಾದಿಗಳಿಂದ ಬಂದ ಪಾಪಗಳನ್ನು ಕಳೆದುಕೊಂಡು ವೈರ ಭಕ್ತಿಯಿಂದ ಹರಿಯಲ್ಲಿಯೇ ಮನಸ್ಸನ್ನಿಟ್ಟು, ಕೀಟವು ಕಣಜ ರೂಪವನ್ನು ಹೊಂದುವಂತೆ ಸಾರೂಪ್ಯವನ್ನು ಹೊಂದಿದರು. ಶಿಶುಪಾಲಾದಿಗಳಲ್ಲಿ ಇದ್ದವರು ಅನಾದಿ ಭಕ್ತರು. ಶಾಪಾದಿ ಕಾರಣದಿಂದಲೇ ದೈತ್ಯಾವೇಶದಿಂದ ಹರಿ ಯನ್ನು ದ್ವೇಷಿಸಿದರು. ದಯಾಳುವಾದ ಶ್ರೀಹರಿಯು ವೈರಾದಿಗಳನ್ನು ಗಣನೆ

ಮಾಡದೆ, ಕೇವಲ ಭಕ್ತಿಯನ್ನೇ ನಿಮಿತ್ತಮಾಡಿಕೊಂಡು ಸಂಸಾರದಿಂದ ಅವರನ್ನು ಬಿಡಿಸಿ ಸಾರೂಪ್ಯವನ್ನು ಕೊಟ್ಟು ಅನುಗ್ರಹಿಸಿದನು.

**ಅವತಾರಿಕೆ :-** ಈ ಆಖ್ಯಾನದ ಮೊದಲು ದ್ವೇಷಾದಿಗಳಿಂದಲೂ ಭಗವತ್ಪ್ರಾಪ್ತಿಯೆಂದು ಸಾವಕಾಶವಾಕ್ಯಗಳಿಂದ ನಾರದರು ಹೇಳಿದ್ದರು. ಭಕ್ತ್ಯಾದಿಗಳಿಂದಲೇ ಭಗವತ್ ಪ್ರಾಪ್ತಿಯು, ದ್ವೇಷಾದಿಗಳಿಂದ ಅಲ್ಲವೇ ಅಲ್ಲ ಎಂದು "ಭಗವಾನ್ಯೇನ ಗಮ್ಯತೇ ಭಾಗವತಾನಾಂ ಧರ್ಮಃ" ಎಂಬ ನಿರವಕಾಶವಾಕ್ಯದಿಂದ ನಿಗಮನ ಮಾಡುವರು. ಸಾವಕಾಶವಾಕ್ಯಕ್ಕಿಂತ ನಿರವಕಾಶ ವಾಕ್ಯವೇ ಪ್ರಬಲ. ಉಪಕ್ರಮಕ್ಕಿಂತ ಉಪಸಂಹಾರವೇ ಪ್ರಬಲ. ಆದ್ದರಿಂದ ಭಕ್ತ್ಯಾದಿಗಳೆಂಬ ಭಾಗವತಧರ್ಮವೇ ಭಗವತ್ಪ್ರಾಪ್ತಿಗೆ ಸಾಧನವೆಂದು ಉಪಸಂಹರಿಸುತ್ತಾರೆ ;-

ಬ್ರಹ್ಮಣ್ಯನೂ, ದೇವನೂ, ಮಹಾತ್ಮನೂ ಆದ ಶ್ರೀ ಪರಮಾತ್ಮನ ಪುಣ್ಯಪ್ರದವಾದ ವರಾಹನಾರಸಿಂಹಾವತಾರಗಳನ್ನೂ, ಹಿರಣ್ಯಾಕ್ಷ ಹಿರಣ್ಯಕಶಿಪುಗಳ ವಧೆಯನ್ನೂ, ಭಕ್ತಿ-ಜ್ಞಾನ-ವೈರಾಗ್ಯವೆಂಬ ಶ್ರೀಹರಿಯ ಗುಣಗಳ ಸಾಮಾನ್ಯ ಜ್ಞಾನವನ್ನೂ, ಸೃಷ್ಟಿಕರ್ತೃತ್ವಾದಿ ಧರ್ಮನಿರೂಪಣೆಯಿಂದ ಉಂಟಾಗತಕ್ಕ ವಿಶೇಷ ಜ್ಞಾನವನ್ನೂ, ಸೃಷ್ಟ್ಯಾದಿ ನಿಯಾಮಕನಾದ ಶ್ರೀಹರಿಯ ಜ್ಞಾನಾನಂದಾದಿ ಗುಣಗಳನ್ನೂ, ದೈತ್ಯವಧಾದಿ ಅವನ ಕರ್ಮಗಳನ್ನೂ, ಸತ್ಯಲೋಕಾದಿ ಸ್ವರ್ಗಾಂತ ಲೋಕಗಳ ಸ್ವರೂಪ ವರ್ಣನೆಯನ್ನೂ, ಭಗವಂತನ ಪ್ರಾಪ್ತಿಗೆ ಕಾರಣಗಳಾದ ಭಾಗವತ ಧರ್ಮಗಳನ್ನೂ ಈ ಆಖ್ಯಾನದಿಂದ ವಿವರಿಸಿರುವೆನು. ದ್ವೇಷಿಸಿದ ಅಸುರರಿಗೆ ತಮಸ್ಸನ್ನೂ, ಭಕ್ತರಿಗೆ ಮೋಕ್ಷವನ್ನೂ ಕೊಡುವ ಶ್ರೀಹರಿಯು ಸಮನೇ ಸರಿ.

ಈ ಪುಣ್ಯಕರ ಚರಿತ್ರೆಯನ್ನು ಹೇಳುವವನೂ, ಕೇಳುವವನೂ ದುಷ್ಕರ್ಮನಾಶದಿಂದ ಮುಕ್ತಿಯನ್ನು ಪಡೆಯುವನು. ಮತ್ತು ಶ್ರೀಹರಿಯ ಲೋಕದಲ್ಲಿ ನೆಲೆಸಿ ನಿರ್ಭಯನಾಗಿ ಸುಖಿಸುವನು.

ಧರ್ಮರಾಜನೇ ! ನೀವು ಪ್ರಹ್ಲಾದನಿಗಿಂತ ಮಹಾಭಾಗ್ಯಶಾಲಿಗಳು. ಏಕೆಂದರೆ ಲೋಕಪಾವನರಾದ ಮುನಿಗಳು ತಾವಾಗಿಯೇ ನಿಮ್ಮ ಮನೆಗೆ ಬಂದು ನಿಮ್ಮಿಂದ ಪೂಜೆಗೊಳ್ಳುತ್ತ ನಿಮ್ಮ ಮನೆಯಲ್ಲಿ ನಿಂತ ನೀರಜಾಕ್ಷನ ಸಂದರ್ಶನಾನಂದವನ್ನು ಪಡೆಯಬೇಕೆಂದು ಕೌತುಕದಿಂದಿರುವರು. ಈ ಕೃಷ್ಣನೇ ಸಾಕ್ಷಾದ್ವಿಷ್ಣುವೆಂದು ತಿಳಿಯಿರಿ. ವಿಧಿಶಿವಾದಿಸುರರೇ ಇವನ ಮಹಿಮೆಯನ್ನು ಸಂಪೂರ್ಣವಾಗಿ ತಿಳಿಯಲಾರರು. ಅಪ್ರಾಕೃತ ಜ್ಞಾನಾನಂದ ಶರೀರನಾದ ಶ್ರೀಹರಿಯು ನಿಮಗೆ ಪ್ರಿಯನೆನಿಸಿ, ಮಿತ್ರನಾಗಿ, ದೂತನಾಗಿ, ಮಾತುಲೇಯನಾಗಿ ನಿಂತು ಸಲಹಿ ಹಾಗೂ ನಿಮ್ಮ ಅಗ್ರ

ಪೂಜೆಯನ್ನು ಸ್ವೀಕರಿಸಿ ಮಹಾಫಲಪ್ರದನಾಗಿರುವನು ಇದು ನಿಮ್ಮ ಭಾಗ್ಯ. ಜ್ಞಾನ ಭಕ್ತಿ ವೈರಾಗ್ಯವಂತರಿಗೇ ಇವನು ಒಲಿದು ರಕ್ಷಿಸುವವನು.

ಶ್ರೀಕೃಷ್ಣನಿಗೆ ನಾನು ನಮಸ್ಕರಿಸಿ, ಈ ಪ್ರಹ್ಲಾದಚರಿತ್ರೆಯ ಕಥನ ಪುಣ್ಯ ವನ್ನು ಇವನ ಅಡಿದಾವರೆಯಲ್ಲಿ ಅರ್ಪಿಸುವೆನು. ಭಕ್ತರಿಗೆ ಸ್ವಾಮಿಯಾದ ಶ್ರೀ ಕೃಷ್ಣನು ಪ್ರಸನ್ನನಾಗಲಿ !

## ಹತ್ತನೆಯ ಅಧ್ಯಾಯ ಮುಗಿದುದು

**ನಾರದ :–** ಶ್ರೀಹರಿಯು ಮಯಾಸುರನಿಂದ ರುದ್ರದೇವರಿಗೆ ಪ್ರತೀಕಾರ ಮಾಡಿಸಿ, ರುದ್ರದೇವರಿಗೆ ಬಂದಿದ್ದ "ಸರ್ವಜಗತ್ತೂ ಹರಿಯ ಅಧೀನವೋ, ಅಲ್ಲವೋ" ಎಂಬ ಸಂಶಯವನ್ನು ಪರಿಹರಿಸಿ **ತ್ರಿಪುರಾರಿ** ಎಂಬ ಕೀರ್ತಿಯನ್ನು ಕೊಟ್ಟನು. ಅದರ ವಿವರವೇನೆಂದರೆ :–

ಸುರರಿಂದ ಪರಾಜಿತರಾದ ಅಸುರರು ಮಯನನ್ನು ಮೊರೆಹೊಕ್ಕರು. ಅವನು ಬಂಗಾರ, ಬೆಳ್ಳಿ ಮತ್ತು ಕಬ್ಬಿಣದಿಂದ ಮೂರು ಪಟ್ಟಣಗಳನ್ನು ನಿರ್ಮಿಸಿ ಕೊಟ್ಟನು. ಅಸುರರು ಅವುಗಳಲ್ಲಿ ಅಡಗಿ, ಇಂದ್ರಾದಿ ದೇವತೆಗಳನ್ನು ಪೀಡಿಸ ತೊಡಗಿದರು. ದೇವತೆಗಳು ರುದ್ರದೇವರನ್ನು ಮೊರೆಹೊಕ್ಕರು. ಶಿವನು ಅವರಿಗೆ ಅಭಯವನ್ನು ಕೊಟ್ಟು ಪಾಶುಪತಾಸ್ತ್ರವನ್ನು ತ್ರಿಪುರಗಳ ಮೇಲೆ ಬಿಟ್ಟನು. ಬಾಣಾಗ್ನಿಯಿಂದ ಬೆಂದ ತ್ರಿಪುರವಾಸಿಗಳು ಸತ್ತುಬಿದ್ದರು. ಆಗ ಮಯನು ಸಿದ್ಧಾ ಮೃತರಸಕೂಪವನ್ನು ನಿರ್ಮಿಸಿ, ಸತ್ತವರನ್ನು ಅದರಲ್ಲಿ ಅದ್ದಿ ಬದುಕಿಸಿದನು. ಆಗ ಅಸುರರು ದ್ವಿಗುಣ ಬಲದರ್ಪಿತರಾಗಿ ಬೆಳೆದು ನಿಂತರು. ಸಿಡಿಲನ್ನು ಕುಡಿಯುವಂತೆ ಉರಿಯುವ ರಾಕ್ಷಸರು ಮತ್ತೆ ಮತ್ತೆ ಬರುತ್ತಿರುವುದನ್ನು ರುದ್ರದೇವರು ನೋಡಿ, ಭಗ್ನಸಂಕಲ್ಪರಾದರು. ಉತ್ಸಾಹವು ಹೋಗಿ ಸುಮ್ಮನೆ ಕುಳಿತುಬಿಟ್ಟರು.

ಶ್ರೀಹರಿಯು ರುದ್ರದೇವರಿಗೆ ಕೀರ್ತಿಯನ್ನು ಕೊಡುವುದಕ್ಕಾಗಿ ಆಕಳ ರೂಪ ವನ್ನು ತೆಗೆದುಕೊಂಡು, ಕರುವಿನ ರೂಪರಾದ ಬ್ರಹ್ಮದೇವರನ್ನು ಕರೆದುಕೊಂಡು ಬಂದು ಕೊಳದಲ್ಲಿದ್ದ ಸಿದ್ಧರಸವನ್ನೆಲ್ಲ ಹೀರಿಬಿಟ್ಟನು. ಈ ವಿಚಿತ್ರವಾದ ಗೋವನ್ನೂ, ವತ್ಸವನ್ನೂ ನೋಡಿ ಮೋಹಿತರಾದ ಕಾವಲಿದ್ದ ಅಸುರರು ಆಕಳನ್ನು ಹೊಡೆದೋಡಿ ಸದೆ, ಅದು ರಸವನ್ನೆಲ್ಲ ಹೀರುತ್ತಿದ್ದರೂ ನೋಡಿಯೂ ಸುಮ್ಮನಿದ್ದರು. ಅವರು ನೋಡುತ್ತಿರುವಂತೆಯೇ ಆ ಗೋವು ಮತ್ತು ವತ್ಸವು ಮಾಯವಾಗಲು, ಮಯನು ಭಗವಂತನ ಮಹಿಮೆ ಇದೆಂದು ತಿಳಿದು ಶೋಕಿಸದೆ, ಚಿಂತಿಸುತ್ತಿದ್ದ ದೈತ್ಯರನ್ನು ಕುರಿತು ಹೀಗೆ ಹೇಳಿದನು :–

'ದೈತ್ಯರೇ ! ಕೇಳಿರಿ ! ದೇವತೆಯಾಗಲೀ, ಅಸುರನಾಗಲೀ ದೇವರು ಕೊಟ್ಟ ಸುಖ ಮತ್ತು ದುಃಖಗಳನ್ನು ತಪ್ಪದೆ ಅನುಭವಿಸಲೇಬೇಕು. ಶ್ರೀಶನಲ್ಲದೆ ಮತ್ತಾರೂ ಸ್ವತಂತ್ರರಲ್ಲ.

ಆಗ ಶ್ರೀಹರಿಯು ತನ್ನ ಭೂದೇವಿ ಮುಂತಾದ ದೇವತಾ ಶಕ್ತಿಗಳಿಂದ ಶಂಭುವಿಗೆ ಯುದ್ಧೋಪಕರಣಗಳನ್ನೊದಗಿಸಿದನು. ಶಿವನಿಗೆ ಧರ್ಮಜ್ಞಾನ ವಿರಕ್ತಿ ತಪೋ ವಿದ್ಯಾಕ್ರಿಯಾ ಬಲಗಳನ್ನು ಅನುಗ್ರಹಿಸಿದನು. ರಥ, ಸೂತ, ಧ್ವಜ, ಧನುಸ್ಸು ಮತ್ತು ಕವಚಗಳನ್ನು ಒದಗಿಸಿ ಆರೂಪದಿಂದ ನಿಂತ ದೇವತೆಗಳು ಹೇಗೋ ಹಾಗೆ ಶ್ರೀಹರಿಯು ಬಾಣರೂಪನಾಗಿ ಶಿವನಿಗೆ ಸಹಾಯ ಮಾಡಿದನು. ಶಂಕರನು ಅಭಿಜಿನ್ಮುಹೂರ್ತದಲ್ಲಿ ಭಗವತ್ತೇಜೋಪಬೃಂಹಿತನಾಗಿ ನಾರಾಯಣಬಾಣದಿಂದ ತ್ರಿಪುರಗಳನ್ನು ಸುಟ್ಟು, ಅಸುರರ ಅಸುಗಳನ್ನು ಅಪಹರಿಸಿ ತ್ರಿಪುರಾರಿಯೆನಿಸಿ ಮೆರೆದನು. ಶಿವನ ವಿಜಯವನ್ನು ಕಂಡು ದೇವದುಂದುಭಿಗಳು ಮೊಳಗಿದುವು. ಗಂಧರ್ವರು ಗಾಯನಮಾಡಿದರು. ಅಪ್ಸರಸ್ತ್ರೀಯರು ನರ್ತಿಸಿದರು. ದೇವತೆಗಳು ದೇವದೇವನಾದ ಶಿವನ ಶಿರಸ್ಸಿನಲ್ಲಿ ಸುಮವೃಷ್ಟಿಯನ್ನು ಮಾಡಿದರು. ಸನಕಾದಿಗಳು ತ್ರಿಪುರಾರಿಯನ್ನು ಸ್ತುತಿಸಿ ವಂದಿಸಿದರು.

ಹೀಗೆ ಹರಿಯು ನಾನಾವತಾರಗಳಿಂದ ಮನುಜನಂತೆ ನಟಿಸಿ ಮಾಡುವ ಲೀಲೆಗಳನ್ನು ಋಷಿಗಳು ಪಾಡಿ ಪೊಗಳುತ್ತಿರುವರು. ಈ ಲೋಕಗುರುವಿನ ಮಹಿಮೆಯು ಅನಂತವಾಗಿದೆ. ಧರ್ಮರಾಜನೇ ! ಮತ್ತೇನನ್ನು ಕೇಳಲಿಚ್ಛಿಸುವೆ ?

## ಹನ್ನೊಂದನೆಯ ಅಧ್ಯಾಯ ಮುಗಿದುದು

**ಯುಧಿಷ್ಠಿರ :–** ಪರಮಾತ್ಮನ ಪ್ರಾಪ್ತಿಗೆ ಕಾರಣಗಳಾದ ವರ್ಣ, ಆಶ್ರಮ, ಕುಲಾಚಾರ ಸಹಿತವಾದ ಸನಾತನಧರ್ಮವನ್ನು ಕೇಳಲಿಚ್ಛಿಸುವೆನು. ಹೇಳಿ.

**ನಾರದ :–** ಜನ್ಮರಹಿತ, ಲೋಕಭರಿತ, ಧರ್ಮಸೇತುಪಾಲಕನೂ ಆದ ನಾರಾಯಣನಿಗೂ, ಧರ್ಮೋಪದೇಶಕರಾದ ಬ್ರಹ್ಮದೇವರಿಗೂ ವಂದಿಸಿ ಶ್ರೀ ನಾರಾಯಣನ ಮುಖದಿಂದ ಹೊರಟ ಭಾಗವತಧರ್ಮಗಳನ್ನು ಹೇಳುವೆನು ಕೇಳು :–

ಯಮಧರ್ಮರಾಜನಿಂದ ಮೂರ್ತಿದೇವಿಯಲ್ಲಿ ಅವತರಿಸಿ, ಲೋಕಕ್ಷೇಮಕ್ಕಾಗಿ ಬದರಿಯಲ್ಲಿ ತಪಸ್ಸನ್ನು ಮಾಡುತ್ತಿರುವ ಶ್ರೀ ನಾರಾಯಣ ಋಷಿಯು ಸರ್ವಧರ್ಮ ಫಲಪ್ರದನಾಗಿರುವನು. ಧರ್ಮವಿಷಯನೂ ಅವನೇ. ಸರ್ವವೇದ ಪ್ರತಿಪಾದ್ಯನಾದ ಆ ದೇವೋತ್ತಮನು ಧರ್ಮದಿಂದಲೇ ಪ್ರೀತನಾಗುವನು.

ಭಗವಂತನಿಂದ ಉಪದಿಷ್ಟವೂ, ವೇದಸ್ಮೃತಿಗಳಲ್ಲಿ ಉಕ್ತವೂ ಆದುದೇ ಧರ್ಮ. ಅದನ್ನು ಆಚರಿಸಿದರೆ ಮಾತ್ರ ಹರಿಯು ಪ್ರಸನ್ನನಾಗುವನೇ ಹೊರತು ಅಯೋಗ್ಯರು ಹೇಳಿದಂತೆ ನಡೆದರೆ ಫಲವಿಲ್ಲ. ಸರ್ವರಿಗೂ ಸಾಧಾರಣಗಳಾದ ಧರ್ಮಗಳನ್ನು ಹೇಳುವೆನು ಕೇಳು :– ಸತ್ಯ, ದಯೆ, ತಪಸ್ಸು, ಶೌಚ, ತಿತಿಕ್ಷೆ, ಪೂಜೆ, ಶಮೆ, ದಮ, ಅಹಿಂಸೆ, ಬ್ರಹ್ಮಚರ್ಯೆ, ನಿಷಿದ್ಧತ್ಯಾಗ, ದ್ವಿಜರಿಗೆ ಮಾತ್ರ ವೇದಾಧ್ಯಯನ, ಸ್ತ್ರೀಶೂದ್ರಾದಿ ಸರ್ವರಿಗೂ ಪುರಾಣಶ್ರವಣ ಮತ್ತು ನಾಮಸಂಕೀರ್ತನೆ, ಋಜುತ್ವ, ಸಂತೋಷವೆಂಬ ತೃಪ್ತಿ, ಸಮದೃಷ್ಟಿ, ಸಜ್ಜನಸೇವೆ, ದುರ್ವಿಷಯೇಚ್ಛಾನಿವೃತ್ತಿ, ಮೋಕ್ಷವಿರೋಧಿ ಪ್ರವರ್ತನ ವಿಮರ್ಶನೆ, ಮಂತ್ರಜಪ, ಆತ್ಮವಿಚಾರ, ಅನ್ನಾದಿ ವಿಭಜನೆ, ಸರ್ವಾಂತರ್ಯಾಮಿಯಾದ ಶ್ರೀಹರಿಯ ದರ್ಶನ, ಶ್ರವಣ, ಕೀರ್ತನ, ಸ್ಮರಣ, ಮಹಜ್ಜನ ಪೂಜನ, ಪಾದವಂದನ, ಸಖ್ಯ, ದಾಸ್ಯ, ಅರ್ಚನ ಮತ್ತು ಆತ್ಮ ಸಮರ್ಪಣೆಯೆಂಬ ಮೂವತ್ತು ಲಕ್ಷಣಗಳಿಂದ ಕೂಡಿದ ಭಾಗವತಧರ್ಮವು ಹರಿ ತೋಷಕರವಾಗಿದೆ.

ಸಕಲ ಸಂಸ್ಕಾರಯುಕ್ತನೇ ದ್ವಿಜನು. ಅವನೇ ಉಕ್ತಧರ್ಮವನ್ನು ಆಚರಿಸಲು ಅಧಿಕಾರಿಯು ಎನಿಸುವನು. ಬ್ರಾಹ್ಮಣನಿಗೆ ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪ್ರತಿಗ್ರಹ ಎಂಬ ಆರು, ಕ್ಷತ್ರಿಯನಿಗೆ ಯಜನ, ಅಧ್ಯಯನ ಮತ್ತು ದಾನಗಳೆಂಬ ಮೂರು, ವೈಶ್ಯನಿಗೆ ಅಧ್ಯಯನ, ದಾನವೆಂಬ ಎರಡು ಅಥವಾ ದಾನವೊಂದೇ ಎಂಬ ವರ್ಣಧರ್ಮಗಳು ವೇದದಲ್ಲಿ ಉಕ್ತವಾಗಿವೆ. ಜನ್ಮಶುದ್ಧಿ ಮತ್ತು ಆಚಾರಶುದ್ಧಿಯುಳ್ಳ ಬ್ರಾಹ್ಮಣನಿಗೇ ವೇದವಿಹಿತ ಶಾರೀರ ಮುಂತಾದ ಯಜ್ಞಕರ್ಮಗಳಲ್ಲಿ ಅಧಿಕಾರ. ವಿಪ್ರೇತರರಿಗೆ ಪರಿಗ್ರಹಾಧಿಕಾರವಿಲ್ಲ. ರಾಜನಿಗೆ ಬ್ರಾಹ್ಮಣನನ್ನು ಬಿಟ್ಟು ಅನ್ಯರಿಂದ ಸ್ವೀಕರಿಸಿದ ಕರ, ದಂಡ ಮುಂತಾದ ಧನದಿಂದ ವೃತ್ತಿವಿಹಿತವಾಗಿದೆ. ವೈಶ್ಯನು ಕೃಷಿ, ಗೋರಕ್ಷಣೆ, ವಾಣಿಜ್ಯ ಮೊದಲಾದುವು ಗಳನ್ನು ಅವಲಂಬಿಸಿ ಜೀವನಮಾಡುತ್ತ ಬ್ರಾಹ್ಮಣನಿಗೆ ಅನುಕೂಲನಾಗಿರಬೇಕು. ಶೂದ್ರನು ದ್ವಿಜರ ಸೇವೆಯಿಂದ ಜೀವಿಸಬೇಕು.

ಬ್ರಾಹ್ಮಣನು ಆಪತ್ಕಾಲದಲ್ಲಿ ವಾರ್ತಾ ಅಂದರೆ ಕೃಷಿ, ವಾಣಿಜ್ಯಾದಿಗಳಿಂದ ಜೀವಿಸಬೇಕು. ವಿಚಿತ್ರಶಾಲೀನ ಅಂದರೆ ಕಣಭಿಕ್ಷೆ, ಯಾಯಾವರ್ಯ ಅಂದರೆ ಮನೆ ಭಿಕ್ಷೆ, ಶಿಲೋಂಛನ–ಕಟಾವಾಗಿ ಉದುರಿದ್ದ ಕಾಳುಗಳನ್ನಾಯ್ದು ತರುವುದು, ಬೀಸಿ ಕುಟ್ಟಿ ಉಳಿಸಿಹೋಗಿರುವ ಹಿಟ್ಟನ್ನು ಸಂಗ್ರಹಿಸುವುದು ಇವುಗಳಿಂದ ಜೀವಿಸಬೇಕು. ಅಧಮನು ಉತ್ತಮವರ್ಣದವರ ವೃತ್ತಿಯನ್ನು ಆಪತ್ಸಮಯದಲ್ಲಿಯೂ ಅನುಸರಿಸ ಬಾರದು. ಬ್ರಾಹ್ಮಣನು ಎಂತಹ ಆಪತ್ತು ಬಂದರೂ ನೀಚಸೇವೆಯನ್ನು ಮಾಡಬಾರದು.

ಶಮೆ. ದಮ, ತಪಸ್ಸು, ಶೌಚ, ತೇಜಸ್ಸು, ತ್ಯಾಗ, ಮನೋಜಯ, ಕ್ಷಮೆ, ಆರ್ಜವ. ದಾನ, ದಯೆ, ಹರಿಚಿಂತನೆ ಮತ್ತು ಸತ್ಯವಚನ ಇವು ಬ್ರಾಹ್ಮಣವರ್ಣ ಲಕ್ಷಣಗಳು.

ಶೌರ್ಯ, ವೀರ್ಯ, ಧೈರ್ಯ, ತೇಜಸ್ಸು, ತ್ಯಾಗ, ಮನೋಜಯ, ಕ್ಷಮೆ, ಬ್ರಾಹ್ಮಣ ವಿಶ್ವಾಸ, ಪ್ರಸನ್ನತೆ ಮತ್ತು ರಕ್ಷಣೆ ಇವು ಕ್ಷತ್ರಿಯವರ್ಣದ ಲಕ್ಷಣಗಳು.

ದೇವ ಗುರು ಗೋಬ್ರಾಹ್ಮಣರ ಪೂಜೆ, ಧರ್ಮಾರ್ಥಕಾಮಗಳಿಂದ ಹರಿಯ ಪ್ರೀತಿ ಸಂಪಾದನೆ, ದೈವ ಭಕ್ತಿ, ಪ್ರಯತ್ನ ಶೀಲತೆ ಮತ್ತು ನೈಪುಣ್ಯ ಇವು ವೈಶ್ಯ ಲಕ್ಷಣಗಳು.

ಆಚಮನ ಮಾತ್ರದಿಂದ ಶೌಚಲಾಭ, ಸೇವೆ, ಸ್ವಾಮಿಭಕ್ತಿ, ನಿಷ್ಕಾಪಟ್ಯ, ಅಮಂತ್ರಕ ಯಜ್ಞ, ಚೌರ್ಯರಾಹಿತ್ಯ, ಕೇಶಶ್ಮಶ್ರುನಖಾದಿಮುನಿವೇಷವರ್ಜನೆ ಮತ್ತು ಗೋವಿಪ್ರರಕ್ಷಣೆ ಇವು ಶೂದ್ರವರ್ಣ ಲಕ್ಷಣಗಳು.

ಸ್ತ್ರೀಯರಿಗೆ ಪತಿಯೇ ದೇವರೆನಿಸುವನು. ಅವನಿಗೆ ಅನುಕೂಲಳಾಗಿ ಅವನ ಸೇವೆಯನ್ನು ಮಾಡುವುದು ಗೃಹಿಣಿಯ ಧರ್ಮ. ಭರ್ತೃ ಬಂಧುಗಳಿಗೆ ಅನುವ್ರತ ಳಾಗಿ, ಪತಿಯ ಕಷ್ಟ ಸುಖಗಳಲ್ಲಿ ಸಮಸಮ ಭಾಗಿಯಾಗುವವಳೇ ಪತಿವ್ರತೆ. ಮನೆ ಯನ್ನು ಸಾರಿಸಿ, ರಂಗವಲ್ಲಿ ಹಾಕಿ ಅಲಂಕರಿಸುವುದು, ತಾನೂ ಅಲಂಕೃತಳಾಗಿ ಶುಭ್ರ ವಸನ ಧರಿಸುವುದು, ಪತಿಯನ್ನು ಕಾಲಕಾಲದಲ್ಲಿ ತಕ್ಕ ವಿಷಯಗಳಿಂದಲೂ, ಪ್ರಿಯವೂ, ಹಿತವೂ ಆದ ವಾಕ್ಯಗಳಿಂದಲೂ । ಪ್ರೇಮದಿಂದಲೂ ಸೇವಿಸುವುದು ಇವೆಲ್ಲ ಸ್ತ್ರೀಯರ ಧರ್ಮವಾಗಿದೆ. ಅಯೋಗ್ಯವಾದುದನ್ನು ಬಯಸಬಾರದು. ತೃಪ್ತಳೂ, ದಾಂತಳೂ, ಧರ್ಮತತ್ಪರಳೂ, ಪ್ರಿಯಸತ್ಯವಚನಳೂ,ಶುದ್ಧಳೂ, ಪ್ರಮಾದರಹಿ ತಳೂ ಮತ್ತು ಆಲಸ್ಯರಹಿತಳೂ ಆಗಿರಬೇಕು. ಪತಿಯುಬ್ರಹ್ಮಹತ್ಯಾಪಾತಕಿ ಯಾಗಿದ್ದರೆ ಮಾತ್ರ ಅವನನ್ನು ಬಿಡಬಹುದು. ಅಷ್ಟೇ ಹೊರತು ಪರ ಪುರುಷನನ್ನು ಪತಿಯನ್ನಾಗಿ ಸ್ವೀಕರಿಸಬಾರದು. ಶ್ರೀದೇವಿಯು ಹರಿಪರಳಾಗಿರುವಂತೆ ಪತ್ಯಂತರ್ಯಾಮಿಯನ್ನು ಸ್ಮರಿಸುತ್ತ ಪತಿಯ ಸೇವೆಯನ್ನು ಮಾಡುವ ಮಾನಿನಿಯು ವೈಕುಂಠದಲ್ಲಿ ಪತಿಯಿಂದ ಸಹಿತಳಾಗಿ ಸುಖದಿಂದಿರುವಳು.

ಸಂಕರಜಾತಿಯವರ ವೃತ್ತಿ ಕುಲಕ್ಕೆ ತಕ್ಕಂತೆ ನಾನಾ ಬಗೆಯಾಗಿದೆ. ರಜಕಾದಿ ಸಪ್ತಕಾರುಜನರು ಮತ್ತು ಚಾಂಡಾಲಾದಿಗಳೂ ಕಳ್ಳತನ ಮಾಡದೆ ಪಾಪದೂರರಾಗಿ ಜೀವಿಸುವುದು ವಿಹಿತವಾಗಿದೆ.

ವೇದಜ್ಞಾನಿಗಳಾದ ಬ್ರಾಹ್ಮಣರು ಯುಗಾನುಸಾರವಾಗಿ ಧರ್ಮವನ್ನು ನಿರೂಪಿಸುವ ಗ್ರಂಥಗಳನ್ನು ತಿಳಿದು, ತಿಳಿದವರಿಂದ ಕೇಳಿ ಸ್ವಧರ್ಮದಿಂದ ನಡೆದರೆ

ಶುಭಫಲವನ್ನು ಹೊಂದಿ ಕೊನೆಗೆ ಮೋಕ್ಷವನ್ನು ಹೊಂದುವರು. ಪುಣ್ಯಪಾಪವೆಂಬ ಕರ್ಮಪಾಶದಿಂದ ಬದ್ಧನಾಗದೆ ಸ್ವಧರ್ಮಾಸಕ್ತನು ಭಕ್ತನೆನಿಸಿ ಹರಿಪುರವನ್ನು ಸೇರುವನು.

ಹೊಲವನ್ನು ಪ್ರತಿವರ್ಷವೂ ಉತ್ತು ಬಿತ್ತಿ ಫಲವನ್ನು ಪಡೆಯುವುದರಿಂದ ಭೂಮಿಯ ಸಸ್ಯಜನಕ ಶಕ್ತಿಯು ಕಡಿಮೆಯಾಗುತ್ತ ಬಂದು ಕೊನೆಗೆ ಹಾಕಿದ ಬೀಜವೂ ಸಿಗದೆ ನಷ್ಟವಾಗುವುದು. ಅದರಂತೆ ಕಾಮಸೇವನೆಯು ಹೆಚ್ಚಾದಂತೆ ಮನಸ್ಸು ನಿರ್ವೀರ್ಯವಾಗುವುದು. ಕ್ಷಯಾದಿ ರೋಗಬಾಧೆ ಉಂಟಾಗುವುದು. ತುಪ್ಪ ಸುರಿದಷ್ಟೂ ಬೆಂಕಿಯ ಉರಿ ಹೆಚ್ಚಾದಂತೆ ವಿಷಯ ಲೇಶಸೇವನೆಯಿಂದಲೂ ಕಾಮವು ಕಡಿಮೆಯಾಗದೆ ಹೆಚ್ಚುತ್ತಾ ಹೋಗುವುದು. ಆದ್ದರಿಂದ ವಿರಕ್ತವಾಗುವಂತೆ ಮಾಡಬೇಕು ಜ್ಞಾನ ಮತ್ತು ಭಕ್ತಿಯ ಸಹಾಯದಿಂದ ಯೋಗ್ಯನು ಮೋಕ್ಷವನ್ನು ಹೊಂದುವನು.

ಒಂದು ವರ್ಣಸೂಚಕವಾದ ಲಕ್ಷಣವು ಇನ್ನೊಂದೆಡೆ ಕಂಡುಬಂದರೆ ಅದು ಸಂಸ್ಕಾರಲಭ್ಯವಾದುದೆಂದು ತಿಳಿಯಬೇಕು. ವರ್ಣಲಕ್ಷಣ ವ್ಯತ್ಯಾಸದಿಂದ ಕುಲ ಜಾತಿಯ ವ್ಯತ್ಯಾಸ ಮಾಡಬಾರದು. ಉದಾ :– ಬ್ರಾಹ್ಮಣನಾಗಿರುವವನಲ್ಲಿ ತುರುಷ್ಕನ ಸಂಸ್ಕಾರವಿದ್ದರೆ ವಿಪ್ರಜಾತಿಯನ್ನು ಬಿಡಬಾರದು.

## ಹನ್ನೆರಡನೆಯ ಅಧ್ಯಾಯ ಮುಗಿದುದು

**ನಾರದ :–** ಯುಧಿಷ್ಠಿರನೇ ! ಈಗ ಬ್ರಹ್ಮಚರ್ಯ ಮತ್ತು ವಾನಪ್ರಸ್ಥ ಧರ್ಮಗಳನ್ನು ಹೇಳುವೆನು ಕೇಳು :– ಬ್ರಹ್ಮಚಾರಿಯು ಗುರುಕುಲದಲ್ಲಿರಬೇಕು. ಇಂದ್ರಿಯಗಳನ್ನು ವಶಮಾಡಿಕೊಂಡು ಗುರುಗಳಿಗೆ ಹಿತವಾದುದನ್ನೇ ಮಾಡಬೇಕು. ಗುರುಗಳಲ್ಲಿ ವಿನಿಯದಿಂದ ವರ್ತಿಸುತ್ತ ದೃಢ ಭಕುತಿಯನ್ನು ಮಾಡಬೇಕು. ಗುರು, ಸೂರ್ಯ ಮತ್ತು ಅಗ್ನಿಗಳನ್ನು ಪ್ರಾತಃ ಸಾಯಂಕಾಲಗಳಲ್ಲಿ ಅರ್ಚಿಸಬೇಕು. ಸಂಧ್ಯಾ ಕಾಲದಲ್ಲಿ ಮೌನವಾಗಿದ್ದು ಗುಣಪೂರ್ಣನಾದ ನಾರಾಯಣನನ್ನು ಗಾಯತ್ರಿಯಿಂದ ಧ್ಯಾನಿಸಿ ಜಪಿಸಬೇಕು. ಗುರುಗಳು ಪಾಠಹೇಳಲು ಕರೆದಾಗ ಪಾಠಪ್ರಾರಂಭದಲ್ಲಿಯೂ ಕೊನೆಯಲ್ಲಿಯೂ ಗುರುವಿಗೆ ವಂದಿಸಿ ವೇದಾಭ್ಯಾಸ ಮಾಡಬೇಕು. ಮೇಖಲ, ಅಜಿನ, ಜಟೆ, ಕಮಂಡಲು, ದಂಡ, ಉಪವೀತ ಕುಶ ಮತ್ತು ಪವಿತ್ರಾದಿಗಳನ್ನು ವಿಹಿತವಾದಂತೆ ಧರಿಸಬೇಕು. ಎರಡು ಸಂಧ್ಯೆಗಳಲ್ಲಿಯೂ ತಂದ ಭಿಕ್ಷಾನ್ನವನ್ನು ಗುರುಗಳಿಗೆ ನಿವೇದಿಸಿ ಅವರು ಉಣ್ಣೆಂದರೆ ಉಣಬೇಕು. ಅಪರಾಧ ಮಾಡಿದ್ದರೆ ಅದರ ಶಿಕ್ಷೆಗಾಗಿ ಗುರುಗಳು ಒಪ್ಪತ್ತೂಟ ಮಾಡೆಂದರೆ ಹಾಗೆಯೇ ಮಾಡಬೇಕು. ಸುಶೀಲನೂ, ಮಿತಭೋಜಿಯೂ

ಶ್ರದ್ಧಾಯುಕ್ತನೂ, ಜಿತೇಂದ್ರಿಯನೂ ಆಗಿ ಸ್ತ್ರೀಯರಿಂದಲೂ, ಸ್ತ್ರೈಣರಿಂದಲೂ ದೂರವಾಗಿರಬೇಕು. ಸ್ತ್ರೀಸಂಬಂಧವಾದ ಸಲ್ಲಾಪ ಮಾಡದೆ, ಕೆಲಸವಿಲ್ಲದಾಗ ಅವರ ಕೂಡೆ ಮಾತಾಡದೆ ಎಚ್ಚರಿಕೆಯಿಂದಿರಬೇಕು. ಇಂದ್ರಿಯಗಳು ಪ್ರಮಾದಕರಗಳು ಹಾಗೂ ಶೀಘ್ರವಿಷಯಗಾಮಿಗಳೂ ಆಗಿವೆ. ವಿಷಯಾಸಕ್ತಿಯು ಇಂದ್ರಿಯಗಳನ್ನು ಜಯಿಸಿರುವ ಯತಿಯ ಮನಸ್ಸನ್ನೂ ಕೆಡಿಸಿಬಿಡುವುದು. ಗುರುವಿನ ಮನೆಯಲ್ಲಿರುವ ಯುವತಿಯರೊಡನೆ ಸ್ನಾನ, ತೈಲಾಭ್ಯಂಗ, ಕೇಶವಿನ್ಯಾಸ ಮತ್ತು ಕ್ರೀಡಾದಿಗಳನ್ನು ನಡೆಸಬಾರದು. ಕೆಟ್ಟ ಮಾತುಗಳನ್ನು ಆಡಬಾರದು. ಮಧು ಸೇವನೆ, ಮಾಂಸ ಭಕ್ಷಣ, ಶುಲ್ಕಸ್ವೀಕಾರ, ಪ್ರಾಣಿಹಿಂಸೆಗಳನ್ನು ಸರ್ವಥಾ ಮಾಡಬಾರದು. ಸ್ತ್ರೀಯು ಬೆಂಕಿಯಿದ್ದಂತೆ. ಗಂಡಸು ತುಪ್ಪದ ಗಡಿಗೆಯಿದ್ದಂತೆ. ಬೆಂಕಿಯು ಸ್ವಲ್ಪ ತಾಕಿದರೂ ತುಪ್ಪವು ಕರಗುವಂತೆ ಮಗಳ ಮಗ್ಗುಲಲ್ಲಿ ತಂದೆಯು ಕುಳಿತರೂ ಮನಸ್ಸು ವಿಕಾರ ವಾಗುವುದು. ಆದ್ದರಿಂದ ತಂದೆಯಾಗಿದ್ದರೂ ಏಕಾಂತದಲ್ಲಿ ಮಗಳ ಹತ್ತಿರ ಕೂಡ ಬಾರದು.

ದೇಹಾಭಿಮಾನವೂ ಬಂಧಕವಾಗಿದೆ. ಶ್ರೀಹರಿಯು ಈ ಅಜ್ಞಾನಪಾಶವನ್ನು ಕತ್ತರಿಸಿ ಬಂಧನದಿಂದ ಬಿಡುಗಡೆ ಮಾಡುವವರೆಗೂ 'ನಾನು, ನನ್ನದು' ಎಂಬ ದುರಹಂಕಾರವು ಪೀಡಿಸಿ ಕೆಡಿಸುತ್ತಿರುವುದು. ಬ್ರಹ್ಮಚಾರಿ, ಗೃಹಸ್ಥ, ಯತಿ ಮೊದಲಾದೆಲ್ಲರಿಗೂ ಸ್ತ್ರೀವಿಷಯಕ ಮೋಹದಿಂದುಂಟಾಗುವ ಪ್ರಮಾದದಿಂದ ಎಚ್ಚರಿಕೆಯು ಕರ್ತವ್ಯವು. ಗೃಹಸ್ಥನು ಋತುಕಾಲದಲ್ಲಿ ತನ್ನ ಪತ್ನಿಯ ಸಂಪರ್ಕ ಮಾಡಿದರೂ ದೂಷಿತನಾಗದೆ ಬ್ರಹ್ಮಚರ್ಯೆಯುಳ್ಳವನಾಗಿಯೇ ಇರುವನು. ಗೃಹಸ್ಥನಾದ ಮೇಲೆ ಗುರುಕುಲದಲ್ಲಿದ್ದರೂ ಭಿಕ್ಷೆ ಮಾಡಬಾರದು. ಆಗಲೂ ಪಂಚಯಜ್ಞಾದಿ ಸುವ್ರತಶೀಲನಾದ ಬ್ರಾಹ್ಮಣನು ಬ್ರಹ್ಮಚಾರಿಯಂತೆ ಅಭ್ಯಂಜನ, ಮಧು, ಮಾಂಸ, ಹೂವು, ಗಂಧಲೇಪನಾದಿ ಅಲಂಕಾರ ಇವುಗಳನ್ನು ಆ ವ್ರತಕಾಲದಲ್ಲಿ ಬಿಡಬೇಕು. ವೇದ ವಿಚಾರದಿಂದ ಬ್ರಹ್ಮಜ್ಞಾನವನ್ನು ಸಂಪಾದಿಸಿ, ಉಪದೇಶಮಾಡಿದ ಗುರುವಿಗೆ ಶಕ್ತ್ಯನುಸಾರ ಗುರುದಕ್ಷಿಣೆಯನ್ನು ಕೊಡಬೇಕು. ಶಕ್ತಿಯಿಲ್ಲದಿದ್ದರೆ ಕರಮುಗಿಯಬೇಕು. ಬ್ರಹ್ಮಚಾರಿಯಾಗಿದ್ದರೆ ಬಳಿಕ ಗೃಹಸ್ಥನಾಗಬೇಕು. ಬ್ರಹ್ಮಚಾರಿಯಾಗಿದ್ದಾಗಲೇ ವೈರಾಗ್ಯ ಬಂದಿದ್ದರೆ ಸಂನ್ಯಾಸವನ್ನು ಸ್ವೀಕರಿಸಬಹುದು. ಶ್ರೀಮನ್ಮಧ್ವಾಚಾರ್ಯರು ಬ್ರಹ್ಮಚಾರಿಯಾಗಿದ್ದಾಗಲೇ ಸಂನ್ಯಾಸವನ್ನು ಕೈಗೊಂಡರು. ಅಗ್ನಿಯಲ್ಲಿ, ಗುರುವಿನಲ್ಲಿ ಮತ್ತು ತನ್ನಲ್ಲಿ ನೆಲೆಸಿರುವ ಶ್ರೀಹರಿಯು ಸರ್ವೇಶನು, ಸರ್ವಶಕ್ತನು, ಸರ್ವಾಂತರ್ಯಾಮಿಯು ಎಂದು ತಿಳಿದು ಬ್ರಹ್ಮಚಾರಿಯು ತನ್ನ ಆಶ್ರಮಾನುಷ್ಠಾನದ ಬದುಕನ್ನು ಸಾರ್ಥಕ ಮಾಡಿಕೊಳ್ಳಬೇಕು. ವಾನಪ್ರಸ್ಥ, ಯತಿ, ಬ್ರಹ್ಮಚಾರಿ, ಗೃಹಸ್ಥ ಎಂಬುವರು ಸ್ವಾಶ್ರಮವಿಹಿತಕರ್ಮಾನುಷ್ಠಾನದಿಂದ ಬ್ರಹ್ಮಜ್ಞಾನವನ್ನೂ, ಮೋಕ್ಷವನ್ನೂ ಹೊಂದುವರು.

ಈಗ ಮುನಿಸಂಮತವಾದ ವಾನಪ್ರಸ್ಥಧರ್ಮವನ್ನು ಹೇಳುವೆನು ಕೇಳು :– ವಾನಪ್ರಸ್ಥಧರ್ಮಾಚರಣೆಯಿಂದ ಬದರಿನಾರಾಯಣನ ಲೋಕವಾದ ವೈಕುಂಠದಲ್ಲಿ ಸ್ಥಿರವಾಗಿ ವಾಸಮಾಡಬಹುದು. ವಾನಪ್ರಸ್ಥನು ಕೃಷಿಯಿಂದ ಬೆಳೆದುದನ್ನೂ, ಅಕಾಲ ಫಲಾದಿಗಳನ್ನೂ ತಿನ್ನಬಾರದು. ಬೆಂದಪದಾರ್ಥವನ್ನೂ ಸ್ವೀಕರಿಸಬಾರದು. ಹಸಿಯ ನೆಲ್ಲಿಕಾಯಿ ಮೊದಲಾದುವನ್ನೂ, ಸೂರ್ಯನ ಶಾಕದಿಂದ ಪಕ್ವವಾದ ಹಣ್ಣು ಹಂಪಲುಗಳನ್ನೂ ಸ್ವೀಕರಿಸಬೇಕು. ನೀವಾರಾದಿ (ಕಾಡುಬತ್ತ ಮೊದಲಾದುವು) ಕಾಡಿನಲ್ಲಿ ಬೆಳೆಯುವ ಧಾನ್ಯಗಳಿಂದ ಕಾಲಕ್ಕನುಸರಿಸಿ ಪುರೋಡಾಶಗಳನ್ನು (ಹೋಮದ್ರವ್ಯ) ತಯಾರು ಮಾಡಿ, ಹೋಮಿಸಿ ಶೇಷವನ್ನು ಸ್ವೀಕರಿಸಬೇಕು. ಅನ್ನಾದಿಗಳು ಉಳಿದರೆ ಮೂರನೆಯ ದಿನಕ್ಕೆಂದಿಡಬಾರದು. ಅಗ್ನಿಹೋತ್ರವನ್ನು ರಕ್ಷಿಸಲು ಪರ್ಣಶಾಲೆ ಅಥವಾ ಗುಹೆಯನ್ನಾಶ್ರಯಿಸಬೇಕು. ತಾನು ಅವುಗಳಲ್ಲಿ ವಾಸಿಸದೆ ಚಳಿಗಾಳಿ ಬಿಸಿಲು ಮುಂತಾದುವುಗಳನ್ನು ಸಹಿಸಿಕೊಂಡು, ಕೇಶಾದಿಗಳನ್ನು ಬೆಳೆಸಿ ಜಟಾಧಾರಿಯಾಗಿ, ದಂಡಕಮಂಡಲುಗಳನ್ನು ಧರಿಸಿ ಹನ್ನೆರಡು, ಎಂಟು, ನಾಲ್ಕು, ಎರಡು ಅಥವಾ ಒಂದು ವರ್ಷಕಾಲವಾದರೂ ಕಾಡಿನಲ್ಲಿರಬೇಕು. ಕಷ್ಟಗಳಿಗೆ ಹೆದರಬಾರದು. ಸ್ವಧರ್ಮಾನುಷ್ಠಾನದಲ್ಲಿ ಅಶಕ್ತನಾದರೆ, ಮುಪ್ಪುರೋಗ ಪೀಡಿತನಾದರೆ ಆಗ ಬ್ರಹ್ಮವಿಚಾರ ಪರನಾಗಿ ಅನಶನ ಅಥವಾ ಪ್ರಾಯೋಪವೇಶವನ್ನು ಮಾಡಬೇಕು. ಅಹಂಮಮತೆಗಳನ್ನು ಬಿಟ್ಟು, ಅಗ್ನಿಗಳನ್ನು ತನ್ನೊಳಗೆ ಆರೋಪಿಸಿ, ತಾರತಮ್ಯಾನುಸಾರ ಲಯ ಚಿಂತನೆಯನ್ನು ಹೀಗೆ ಮಾಡಬೇಕು :–

ಕಾರ್ಯವಸ್ತುಗಳು ಕಾರಣ ಸೂಕ್ಷ್ಮವಸ್ತುಗಳಲ್ಲಿ ಲಯಹೊಂದುವುವು. ಶರೀರಗತ ಆಕಾಶವು ಹೊರಗಿನ ಆಕಾಶದಲ್ಲಿಯೂ, ಉಷ್ಣತೆಯು ಅಗ್ನಿಯಲ್ಲಿಯೂ, ರಕ್ತಶ್ಲೇಷ್ಮಪೂಯಗಳು ಜಲದಲ್ಲಿಯೂ, ಉಳಿದುವೆಲ್ಲ ಭೂಮಿಯಲ್ಲಿಯೂ ಲಯವಾಗುವುವು. ಅಗ್ನಿಯಲ್ಲಿ ವಾಗಿಂದ್ರಿಯ ಮತ್ತು ವಚನಗಳು, ಇಂದ್ರನಲ್ಲಿ ಹಸ್ತಶಿಲ್ಪಗಳು, ಜಯಂತನಲ್ಲಿರುವ ಯಜ್ಞನಾಮಕ ಶ್ರೀಹರಿಯಲ್ಲಿ ಪಾದಗಮನಗಳೂ, ದಕ್ಷಪ್ರಜೇಶ್ವರನಲ್ಲಿ ಉಪಸ್ಥರತಿಗಳೂ, ಯಮನಲ್ಲಿ ಪಾಯು ವಿಸರ್ಜನೆಗಳೂ, ಸೋಮಾದಿ ದಿಗ್ದೇವತೆಗಳಲ್ಲಿ ಶ್ರೋತ್ರಶಬ್ದಗಳೂ, ಆಹಂಕಾರಿಕ ಪ್ರಾಣನಲ್ಲಿ ತ್ವಕ್‌ಸ್ಪರ್ಶಗಳೂ, ಸೂರ್ಯನಲ್ಲಿ ಚಕ್ಷುಸ್ಸು–ರೂಪಗಳೂ ಲಯ ಹೊಂದುವುವು. ಜಿಹ್ವೇಂದ್ರಿಯವು ವರುಣನ ಅಧೀನವಾಗುವುದು. ನಾಸಿಕವು ಗಂಧಶಕ್ತಿಯಿಂದ ಸಹಿತವಾಗಿ ಭೂಮಿಯಲ್ಲಿ ಅಡಗುವುದು. ಮನೋರಥದಿಂದ ಸಹಿತವಾದ ಮನಸ್ಸು ಚಂದ್ರನಲ್ಲಿಯೂ, ಬೋಧ ಸಹಿತವಾದ ಬುದ್ಧಿಯು ಬೃಹಸ್ಪತಿಯಲ್ಲಿಯೂ, ಅಹಂಕಾರಸಹಿತ ಕರ್ಮಗಳು ರುದ್ರದೇವನಲ್ಲಿಯೂ ಸೇರುವುದೆಂದು ಚಿಂತಿಸಬೇಕು. ಅಹಂಕಾರದಿಂದಲ್ಲವೆ ಸಕಲ ಕರ್ಮಗಳೂ ನಡೆಯುವುದು? ಪುಣ್ಯಸಹಿತ ಚಿತ್ತವನ್ನು ವಿರಿಂಚನಲ್ಲಿ ಚಿಂತಿಸಿ ಅವನು ಶ್ರೀಹರಿಯ

ಅಧೀನನಾಗಿರುವನು ಎಂದು ಧ್ಯಾನಿಸಬೇಕು. ಭೂಮಿಯು ಜಲದಲ್ಲಿ, ಜಲವು ಅಗ್ನಿಯಲ್ಲಿ, ಅಗ್ನಿಯು ವಾಯುವಿನಲ್ಲಿ, ವಾಯುವು ಆಕಾಶದಲ್ಲಿ, ಆಕಾಶವು ಅಹಂಕಾರತತ್ತ್ವ ನಿಯಾಮಕ ರುದ್ರನಲ್ಲಿ, ರುದ್ರನು ಮಹತ್ತತ್ತ್ವಾಭಿಮಾನಿ ಬ್ರಹ್ಮನಲ್ಲಿ ಸೇರುವರೆಂದು ಚಿಂತಿಸಿ ಚತುರ್ಮುಖ ಬ್ರಹ್ಮನು ಶ್ರೀಭೂದೇವಿಯರ ಪತಿಯಾದ ಶ್ರೀಹರಿಯ ಅಧೀನನೆಂದು ಚಿಂತಿಸಿ, ಶ್ರೀಹರಿಯು ಸರ್ವಥಾ ನಾಶರಹಿತನೂ, ಸೃಷ್ಟ್ಯಾದಿ ವ್ಯಾಪಾರಗಳಲ್ಲಿ ಆಗ ಉದಾಸೀನನಾಗಿರುವನು ಎಂದು ತಿಳಿದು ಶರೀರವನ್ನು ಬಿಡುವವನು ಉತ್ತಮ ಯೋಗಿಯೆನಿಸುವನು. ಜ್ಞಾನಪೂರ್ಣನೂ, ಸ್ವಗತಭೇದ ಶೂನ್ಯನೂ ಆದ ಶ್ರೀಹರಿಯ ದಯೆಯಿಂದ ಅಂತಹ ಜ್ಞಾನಿಯ ಜಡಮನಸ್ಸು ಒಣಗಿದ ಕಟ್ಟಿಗೆ ಸುಟ್ಟು ಬೂದಿಯಾಗುವಂತೆ ಸುಟ್ಟು ಹೋಗಿ ಸಂಪೂರ್ಣನಾಶವಾಗಿ, ಜ್ಞಾನ ಪ್ರಕಾಶವನ್ನು ತೋರಿ ಜ್ಞಾನಮಯವಾದ ಮನಸ್ಸನ್ನು ಬೆಳಗುವುದರಿಂದ ಅವನು ಮುಕ್ತನಾಗುವನು.

## ಹದಿಮೂರನೆಯ ಅಧ್ಯಾಯ ಮುಗಿದುದು

**ನಾರದ :–** ಸಂನ್ಯಾಸಧರ್ಮವನ್ನು ವಿವರಿಸುವೆನು ಕೇಳು :– ವೈರಾಗ್ಯ ಭಾಗ್ಯವನ್ನು ಹೊಂದಿದ ಸಮರ್ಥನೇ ಸಂನ್ಯಾಸವನ್ನು ಸ್ವೀಕರಿಸಬಹುದು. ದೇಹಾತಿರಿಕ್ತವೆಲ್ಲವನ್ನೂ ಬಿಟ್ಟು, ದ್ರವ್ಯಾದಿಗಳ ಆಶೆಯಿಲ್ಲದೆ, ಸಂಚರಿಸುತ್ತಲಿರಬೇಕು. ಒಂದು ಕೌಪೀನ, ಆಚ್ಛಾದನ ವಸ್ತ್ರ (ಉಡುವುದು ಮತ್ತು ಹೊದೆಯುವುದು) ಇವನ್ನು ಮಾತ್ರ ಧರಿಸಬೇಕು. ಚಕ್ರಶಂಖಾದಿ ಚಿಹ್ನೆ ದಂಡ ಇವುಗಳನ್ನು ಬಿಟ್ಟು ಬೇರೆ ಯಾವುದನ್ನೂ ಧರಿಸಬಾರದು. ಸಕಲ ಪ್ರಾಣಿಗಳಿಗೂ ಸಖನಾದ ಶ್ರೀಮನ್ ನಾರಾಯಣನೇ ಮುಖ್ಯಾಶ್ರಯನೆಂಬ ಜ್ಞಾನವುಳ್ಳನಾಗಬೇಕು. ಅಸದೃಶನೂ, ಮೂರ್ತಾಮೂರ್ತಜಗತ್ತಿನಿಂದ ವಿಲಕ್ಷಣನೂ ಆದ ಶ್ರೀಹರಿಯನ್ನು ಆಶ್ರಯಿಸಿಕೊಂಡೇ ಪ್ರಾಮಾಣಿಕವಾದ ಜಗತ್ತು ಇದೆಯೆಂದೂ, ಶ್ರೀಪರಮಾತ್ಮನು ಸರ್ವಜಗತ್ತಿಗಿಂತ ಉತ್ತಮನೂ, ಸರ್ವಗುಣಪರಿಪೂರ್ಣನೂ ಆಗಿರುವನೆಂದು ತಿಳಿಯಬೇಕು. ಬಂಧಮೋಕ್ಷಗಳು ಪರಮಾತ್ಮನ ಅಧೀನಗಳೆಂದು ಅರಿಯಬೇಕು. ಅದ್ವೈತ ಶಾಸ್ತ್ರಾದಿಗಳಲ್ಲಿ ಆಸಕ್ತನಾಗಬಾರದು. ಜೀವನಕ್ಕಾಗಿ ವೃತ್ತಿ (ಉದ್ಯೋಗ)ಯನ್ನು ಕೈಗೊಳಬಾರದು. ಶುಷ್ಕತರ್ಕಗಳನ್ನು ಓದಬಾರದು. ಅಪ್ರಯೋಜಕವಾದ ಯಾವ ಪಕ್ಷವನ್ನೂ ಹಠದಿಂದ ಬೆಂಬಲಿಸಬಾರದು. ಪ್ರಯೋಜನವಿಲ್ಲದವರೂ, ವಿಶ್ವಾಸ ಮಾಡದವರೂ ಆದ ಶಿಷ್ಯರನ್ನು ಸೇರಿಸಿಕೊಳ್ಳಬಾರದು. ಜ್ಯೋತಿಷ್ಯಾದಿ ಅವೈಷ್ಣವ ಶಾಸ್ತ್ರವನ್ನು ಅಭ್ಯಾಸ ಮಾಡಬಾರದು. ಜೀವನೋಪಾಯಕ್ಕಾಗಿ ಪುರಾಣ ಪುಣ್ಯಕಥೆಗಳನ್ನು ಹೇಳಬಾರದು. ಕೃಷ್ಯಾದಿಗಳನ್ನು ಮಾಡಬಾರದು.

ಜ್ಞಾನಾಧಿಕಾರಿಗೆ ಕರ್ಮಪ್ರವೃತ್ತಿಯು ಅಧರ್ಮವೆನಿಸುವುದರಿಂದ ಕೃಷ್ಯಾದಿಗಳು

ಯತಿಗೆ ಪಾಪ ಕಾರಣವಾಗುವುವು. ಶಾಂತನಾದ ಯತಿಯು ನಿವೃತ್ತಿಕರ್ಮಗಳನ್ನು ಮಾಡುತ್ತ ಯತಿಯ ಚಿಹ್ನೆಗಳಾದ ದಂಡಾದಿಗಳನ್ನು ಬಿಟ್ಟರೂ ಚಿಂತೆಯಿಲ್ಲ. ಬಾಹ್ಯ ಚಿಹ್ನೆಗಳಿಲ್ಲದಿದ್ದರೂ ವಿದ್ಯಾತಪಃಶಮಾದಿ ಅಂತರಂಗ ಲಕ್ಷಣಗಳಿದ್ದರೆ ಸಾಕು. ಮಹಾ ಮತಿಯಾದರೂ ಮಂಕನಂತೆ, ಕವಿಯಾದರೂ ಮೂಕನಂತೆ ಜನರಿಗೆ ಕಾಣುತ್ತ ಹೊರಗೆ ಯಾವ ಮಹಿಮೆಯನ್ನೂ ತೋರಿಸಿಕೊಳ್ಳದೆ ಇರುವ ಅವಧೂತನು ಯತಿ ಗಳಲ್ಲಿ ಶ್ರೇಷ್ಠನೆನಿಸುವನು. ಈ ಅವಧೂತ ಚರ್ಯೆಯ ವಿಷಯವಾದ ಒಂದು ಕಥೆ ಯನ್ನು ಕೇಳು :–

ಪ್ರಹ್ಲಾದ ರಾಜನು ಒಂದು ಬಾರಿ ಸಹ್ಯಕಂದರದಲ್ಲಿ, ಕಾವೇರೀತೀರದಲ್ಲಿ ತಿರುಗುತ್ತ ಅಜಗರ ವೃತ್ತಿಯ ಮುನಿಯನ್ನು ಕಂಡನು. ಬರಿಯ ನೆಲದ ಮೇಲೆ ಬಿದ್ದುಕೊಂಡಿರುವ ಆ ಮುನಿಯು ಬೂದಿ ಮುಚ್ಚಿದ ಕೆಂಡದಂತೆ ನಿಗೂಢತೇಜಸ್ಕ ನಾಗಿದ್ದನು. ಲೋಕದ ರೀತಿ ನೀತಿಗಳನ್ನು ತಿಳಿಯಲು ತಿರುಗುತ್ತ ಬಂದ ಪ್ರಹ್ಲಾದ ರಾಜನು ಆತನನ್ನು ನೋಡಿದನು. ದೈತ್ಯರಾಜನಾದ ಅವನ ಹಿಂದೆ ಕೆಲವರು ಅಮಾತ್ಯರೂ ಇದ್ದರು. ಅವರು ಅವಧೂತನನ್ನು ನೋಡಿ ಕರ್ಮ, ವಚನ ಕ್ರಿಯೆ ಗಳಿಂದ ಅವನ ವರ್ಣಾಶ್ರಮ ವಿಚಾರವನ್ನು ತಿಳಿಯದಾದರು. ಭಗವದ್ಭಕ್ತನಾದ ಪ್ರಹ್ಲಾದರಾಜನು ಆ ಬ್ರಾಹ್ಮಣನಿಗೆ ನಮಿಸಿ ಅವನ ವೃತ್ತಾಂತವನ್ನು ತಿಳಿಯಲು ಪ್ರಶ್ನಿಸುತ್ತಾನೆ :–

**ಪ್ರಹ್ಲಾದ :–** ನಿನ್ನ ದೇಹವು ಭೋಗ ಪಡುವವರ ದೇಹದಂತೆ ಪುಷ್ಟ ವಾಗಿದೆ. ವಿತ್ತವಿಲ್ಲದ ನಿನಗೆ ಭೋಗವೆಲ್ಲಿಯದು ? ಭೋಗವಿಲ್ಲದ ನೀನು ಪುಷ್ಟ ನಾಗಿರುವುದಾದರೂ ಹೇಗೆ ? ನೆಲದ ಮೇಲೆ ಸುಮ್ಮನೆ ಮಲಗಿರುವ ನಿನಗೆ ಅರ್ಥ ವೆಲ್ಲಿಯದು ? ಅರ್ಥದಿಂದೊದಗುವ ಭೋಗವು ದೂರತರವೇ ಸರಿ. ದೇಹ ಪುಷ್ಟಿಯು ಹೇಗೆ ಬಂದಿದೆಯೆಂಬುದನ್ನು ದಯೆಮಾಡಿ ಹೇಳು.

**ಅವಧೂತ :–** ಶ್ರೀಹರಿಯ ದಯೆಯಿಂದ ಜ್ಞಾನವನ್ನು ಹೊಂದಿರುವ ನಿನಗೆ ತಿಳಿಯದೇ ಇರುವುದಿಲ್ಲ. ಪ್ರವೃತ್ತಿ ನಿವೃತ್ತಿ ಧರ್ಮಗಳಿಂದ ದೊರೆಯುವ ಲೋಕಗಳಾವುವೆಂಬುದನ್ನೂ ತಿಳಿದಿರುವೆ. ಶ್ರೀನಾರಾಯಣನು ನಿನ್ನ ಹೃತ್ಕಮಲ ದಲ್ಲಿ ವಿಶೇಷ ಸನ್ನಿಧಾನದಿಂದ ನೆಲೆಸಿರುವನು. ನಿನ್ನ ನಿರ್ವ್ಯಾಜಭಕ್ತಿಗೆ ಮೆಚ್ಚಿ ಅಚ್ಯುತನು ಸೂರ್ಯನಂತೆ ನಿನ್ನ ಹೃದಯಾಕಾಶವನ್ನು ಬೆಳಗುತ್ತಾ ಅಜ್ಞಾನಾಂಧಕಾರ ವನ್ನು ದೂರಮಾಡಿ ನಿನ್ನನ್ನು ಯಾವಾಗಲೂ ಬಿಡದೆ ಸಲಹುತ್ತಿರುವನು. ಆದ್ದರಿಂದ ನಿನ್ನ ಕೂಡೆ ಮಾತಾಡಿ ಪಾವನನಾಗುವೆನು. ಕೇಳು :–

ನಾನು ಸಂಸಾರವಾಹಿನಿಯಲ್ಲಿ ಬಿದ್ದು ಗ್ರಾಮ್ಯ ಸುಖಗಳ ರುಚಿಯನ್ನು ಸವಿದು ತೃಪ್ತನಾಗದೆ ದುರಾಸೆಯಿಂದ ಧರ್ಮಗಳನ್ನು ಮಾಡಿದೆನು. ಕರ್ಮಗಳ ಫಲರೂಪವಾಗಿ ಬಹು ಯೋನಿಗಳಲ್ಲಿ ಹುಟ್ಟಿ ಕೊನೆಗೆ ಇಲ್ಲಿಗೆ ಬಂದೆನು. ಶ್ರೀಹರಿಯ ದಯೆಯಿಂದ ಸ್ವರ್ಗಾಪವರ್ಗಕಾರಣವಾದ ವಿಪ್ರಜನ್ಮವು ಬಂದಿತು. ವಿಚಾರ ಮಾಡಿದೆನು. ವಿಪ್ರಾದಿ ಸಕಲ ವರ್ಣಶರೀರಧಾರಿಗಳು ಗಂಡಹೆಂಡಿರೆನಿಸಿ ಕೂಡುವುದನ್ನೂ, ಸುಖಪ್ರಾಪ್ತಿ-ದುಃಖನಿವೃತ್ತಿಗಾಗಿ ಶ್ರಮ ಪಡುತ್ತಿರುವುದನ್ನೂ, ಕೊನೆಗೆ ದುಃಖ ಬಂದು ಸುಖವು ಹೋಗಿ ಗೋಳಿಡುವುದನ್ನೂ ಕಂಡು ವಿರಕ್ತನಾದೆನು. ನಿಜವಾದ ಸುಖವೆಂದರೆ ಸ್ವರೂಪ ಸುಖವೇ. ಬಾಹ್ಯವಲ್ಲ. ಸ್ವರೂಪಸುಖವು ಶ್ರೀಹರಿಯ ಕೃಪೆಯಿಂದ ಮಾತ್ರ ದೊರೆಯುವುದು. ಪ್ರಯತ್ನ ಮಾತ್ರದಿಂದಲ್ಲ. ಬಾಹ್ಯ ವಿಷಯಸುಖವು ಮನಸ್ಸಿನ ಅಭಿಮಾನದಿಂದ ಮೋಹಕವಾಗಿದೆ. ಬುದ್ಧಿವಂತನು ನಶ್ವರವೂ, ಅಲ್ಪವೂ ಆದ ಸ್ರಕ್ಚಂದನವ ನಿತಾದಿಗಳಿಗಾಗಲಿ, ಸ್ವರ್ಗಾದಿಗಳಿಗಾಗಲಿ ಆಸೆ ಪಡದೇ ಇರುವುದೇ ಒಳ್ಳೆಯದು. ಆದರೂ ಜೀವನು 'ನಾನು ನನ್ನದು' ಎಂಬ ಅನ್ಯಥಾಜ್ಞಾನದಿಂದ ವಿಷಯ ಲೋಲನಾಗಿ ಹುಟ್ಟು ಸಾವುಗಳನ್ನಪ್ಪಿ ಮುಪ್ಪಾಗುತ್ತಿರುವನು. ನೀರಡಿಸಿದ ಜೀವನು ಮೇಲೆ ಅಂತರಗಂಗೆ ಮುಂತಾದ ಜಲಸಸ್ಯಗಳಿಂದ ಮುಚ್ಚಲ್ಪಟ್ಟು ಕಾಣದೆ ಒಳಗಿರುವ ಸರೋವರದ ಜಲವನ್ನು ಬಿಟ್ಟು ಬಿಸಿಲು ಕುದುರೆಯ ಬೆನ್ನಟ್ಟಿ ಹೋಗುವಂತೆ ಶ್ರೀಹರಿ ಯಿಂದಲ್ಲದೆ ಅನ್ಯರಿಂದ ಸುಖಾಭಿಲಾಷೆಯು ಪೂರೈಸುವುದೆಂದು ತಿಳಿದಿರುವನು. ಅಂತಹವನು ಮೂಢನೇ ಸರಿ. ಈ ದೇಹವು ದೇವರ ಅಧೀನ. ಈ ವಿಷಯಗಳೂ ದೇವರ ಅಧೀನಗಳೇ ಹೀಗಿರಲು ಅವುಗಳಿಂದ ತನಗೆ ಸುಖವಾಗಲಿ ಎಂದು ಬಯಸುವ ಜೀವನು ಅಸ್ವತಂತ್ರನು. ಅವನು ಹರಿಭಕ್ತನಾದರೆ ಸುಖಗಳು ತಾವಾಗಿ ದೊರೆಯು ತ್ತವೆ. ಹರಿ ವಿರುದ್ಧನಾದರೆ ಸುಖವು ದೂರವಾಗುವುದು. ಆದಕ್ಕಾಗಿ ಆ ಅಯೋಗ್ಯನ ಪ್ರಯತ್ನಗಳೆಲ್ಲ ವ್ಯರ್ಥವು. ದುಃಖದರ್ಶನದಿಂದ ವಿರಕ್ತನಾದರೆ ಬಹುಕಷ್ಟಪಟ್ಟು ಸಂಪಾದಿಸಿದ ಅರ್ಥ ಕಾಮಗಳು ಅವನಿಗೇನು ಸುಖವನ್ನು ಕೊಟ್ಟಾವು? ಡುಂಡು ಭಗ್ರಸ್ತ ಮಂಡೂಕದಂತಿರುವವನಿಗೆ ವಿಷಯ ಸುಖಗಳಿಂದ ಲಾಭವೇನು?

ಧನಿಕರು ಅತ್ಯಂತ ಲೋಭಿಗಳಾಗಿ ಅಪಾರ ಧನಕ್ಕಾಗಿ ಸತ್ತು ಸುಣ್ಣವಾಗುವು ದನ್ನೂ, ಧನರಕ್ಷಣೆಗಾಗಿ ನಿದ್ರೆ, ಅನ್ನ ವಿಹಾರಗಳನ್ನು ಬಿಟ್ಟು ಎಲ್ಲರಲ್ಲಿಯೂ ಸಂದೇಹ ದೃಷ್ಟಿಯಿಟ್ಟು ಯಾರನ್ನೂ ನಂಬದೆ ಕಷ್ಟಪಡುತ್ತಿರುವುದನ್ನು ನೋಡಿದೆನು. ರಾಜರು, ಕಳ್ಳರು, ಶತ್ರುಗಳು ಸ್ವಜನರು, ಇಲಿಗಳು. ಶುನಕಾದಿ ಪಶುಪಕ್ಷಿಗಳು ಮೊದಲಾದ ಪ್ರಾಣಿಗಳು ಧನಿಕರನ್ನು ಪ್ರೀತಿಸುವುದಕ್ಕಿಂತ ಹೆಚ್ಚಾಗಿ ಅವರಲ್ಲಿರುವ ಹಣವನ್ನು ಪ್ರೀತಿಸಿ, ಕೊನೆಗೆ ಪ್ರಾಣತೆಗೆಯುವುದನ್ನೂ ನೋಡಿಬಿಟ್ಟಿರುವೆನು. ಶೋಕ, ಮೋಹ, ಭಯ, ಕೋಪ, ರಾಗ, ದೀನತೆ ಮತ್ತು ಶ್ರಮ ಮೊದಲಾದ ಅನರ್ಥಗಳಿಗೆ ಕಾರಣವಾದ ಹಣದಾಶೆಯನ್ನು ಬಿಡಬೇಕು. ಈ ವಿಷಯದಲ್ಲಿ ದುಂಬಿ

ಮತ್ತು ಹಾವು ಈ ಎರಡು ಪ್ರಾಣಿಗಳೂ ನನಗೆ ಕಣ್ಣು ತೆರೆಸಿದುವು. ಕಷ್ಟಪಟ್ಟು ಹನಿ ಹನಿಯಾಗಿ ಕೂಡಿಟ್ಟ ಜೇನುತುಪ್ಪವನ್ನು ದೋಚಿ, ಜೇನುನೊಣಗಳನ್ನು ಕೊಂದು ಅವುಗಳ ಸರ್ವಸ್ವಾಪಹಾರ ಮಾಡಿದ ಮನುಜರನ್ನು ನೋಡಿರುವೆನು. ಏನನ್ನೂ ಮಾಡದೆ ದೇವರು ಕೊಟ್ಟುದನ್ನು ತಿಂದು, ಏನೂ ದೊರೆಯದಿದ್ದರೆ ಉಪವಾಸ ವಿರುತ್ತ ಗಾಳಿಯನ್ನು ಕುಡಿದು ಬದುಕಿರುವ ಹೆಬ್ಬಾವನ್ನು ನೋಡಿದೆ. ಅವೆರಡರಿಂದ ಸಕಲ ಕಾಮವಿರಾಗವನ್ನೂ, ಸರ್ವೇಶ್ವರ ಸಮರ್ಪಿತ ತುಷ್ಟಿಯನ್ನೂ ಕಲಿತು ಅವ ಧೂತನಾದೆನು. ನನಗೆ ದೊರೆಯತಕ್ಕ ಆಹಾರವು ಅಲ್ಪವಾಗಿರಲಿ, ಬಹಳವಾಗಿರಲಿ, ವಿಕಾರವಿಲ್ಲದೆ ಸಿಕ್ಕಿದ್ದನ್ನು ತಿಂದುಬಿಡುವೆನು. ಸಜ್ಜನರನ್ನು ನಿಂದಿಸುವುದೂ ಇಲ್ಲ. ಸ್ತುತಿಸುವುದೂ ಇಲ್ಲ. ಸರ್ವರಿಗೂ ಶ್ರೇಯಸ್ಸನ್ನು ಬಯಸುತ್ತಿರುವೆನು.

**ಅವತಾರಿಕೆ :** ಹೀಗೆ ಸ್ವವೃತ್ತಿಯನ್ನು ಹೇಳಿ, ಸಂನ್ಯಾಸಿಯು ವಿಹಿತೋಪಾ ಸನೆ ಮಾಡುತ್ತಿದ್ದು ಕೊನೆಗೆ ಕೃತಕೃತ್ಯನಾಗುವುದಕ್ಕಾಗಿ ಮಾಡಬೇಕಾದ ಲಯಚಿಂತನೆ ಪ್ರಕಾರವನ್ನು ಹೇಳುವನು :-

ದೇವ ಸಮೂಹವು ವಾಗಭಿಮಾನಿಯಾದ ಅಗ್ನಿಯ ಅಧೀನವೆಂದೂ, ಅಗ್ನಿಯು ಶಬ್ದಾದಿಗಳ ಪರಿಣಾಮಕ್ಕೆ ಕಾರಣನಾದ ಇಂದ್ರನ ಅಧೀನ ನೆಂದೂ, ಇಂದ್ರನು ವೈಕಾರಿಕಾಭಿಮಾನಿಯಾದ ಗರುಡನ ಅಧೀನನೆಂದೂ, ಗರುಡನು ಮಹತ್ತತ್ತ್ವಾಭಿಮಾನಿಯಾದ ಬ್ರಹ್ಮನ ಅಧೀನನೆಂದೂ, ಚತುರ್ಮುಖನು ಲಕ್ಷ್ಮಿಯ ಅಧೀನನೆಂದೂ, ಲಕ್ಷ್ಮಿಯು ಶ್ರೀವಿಷ್ಣುವಿನ ಅಧೀನಳೆಂದೂ ಚಿಂತಿಸಬೇಕು. ಬಳಿಕ ಪರಮಾತ್ಮನಲ್ಲಿಯೇ ಮನಸ್ಸನ್ನಿಟ್ಟು ಶ್ರೀಪರಮಾತ್ಮನ ಅಪರೋಕ್ಷಜ್ಞಾನಿಯಾಗಿ ಬಾಹ್ಯ ಕೃತ್ಯಗಳನ್ನು ಬಿಟ್ಟು ಕೃತಕೃತ್ಯನಾಗಬೇಕು.

ಪ್ರಹ್ಲಾದನೇ ! ನೀನು ಶ್ರೀಹರಿಗೆ ಅತಿಪ್ರಿಯನು. ಆದ್ದರಿಂದ ನನ್ನ ರಹಸ್ಯ ಚರಿತ್ರೆಯನ್ನು ನಿನಗೆ ಹೇಳಿದೆನು. ನನ್ನ ನಡವಳಿಕೆ ಹೊರಗೆ ಶಾಸ್ತ್ರವಿರುದ್ಧವೆನ್ನು ವಂತೆ ತೋರಿದರೂ, ಒಳ ಹೊಕ್ಕು ವಿಚಾರ ಮಾಡಿದರೆ ಶಾಸ್ತ್ರಸಂಮತವೆಂದು ಗೊತ್ತಾಗುವುದು.

**ನಾರದ :** ಯುಧಿಷ್ಠಿರನೇ ! ಪ್ರಹ್ಲಾದರಾಜನು ನಿವೃತ್ತಿ ಮಾರ್ಗಸ್ಥರು ಮಾಡಬೇಕಾದ ಧರ್ಮವನ್ನು ಆ ಋಷಿಯಿಂದ ಕೇಳಿ, ಅವರನ್ನು ಪೂಜಿಸಿ, ಅವರ ಅನು ಮತಿ ಪಡೆದು ತನ್ನ ಮನೆಗೆ ಹೊರಟು ಹೋದನು.

**ಹದಿನಾಲ್ಕನೆಯ ಅಧ್ಯಾಯ ಮುಗಿದುದು**

**ಯುಧಿಷ್ಠಿರ :–** ನಾರದರೆ ! ನಮ್ಮಂತ ಗೃಹಸ್ಥಾಶ್ರಮಿಗಳು ಮೋಕ್ಷ ಹೊಂದಬೇಕಾದರೆ ಮಾಡಬೇಕಾದ ಸಾಧನೆಗಳಾವುವು ?

**ನಾರದ :–** ಗೃಹಸ್ಥನು ತನ್ನಾಶ್ರಮಕ್ಕೆ ಉಚಿತವಾದ ಪಂಚಯಜ್ಞಾದಿಗಳನ್ನು ಫಲಾಪೇಕ್ಷೆಯಿಲ್ಲದೆ ಮಾಡುತ್ತ ಮುಕುಂದನಿಗೆ ಅರ್ಪಿಸಿ ಜ್ಞಾನಿಗಳನ್ನು ಸೇವಿಸಬೇಕು. ಶ್ರೀ ಪರಮಾತ್ಮನ ಕಥಾಮೃತವನ್ನು ಜ್ಞಾನಿಗಳಿಂದ ಕೇಳುತ್ತ, ಸಜ್ಜನರ ಸಂಗದಿಂದ ವೈರಾಗ್ಯವನ್ನು ಹೊಂದಿ, ತನ್ನ ತನ್ನ ಹೆಂಡತಿ ಮಕ್ಕಳು ಮೊದಲಾದವರಲ್ಲಿ ಮೋಹವನ್ನು ಬಿಡಬೇಕು, ಸ್ನಾನ, ಧ್ಯಾನ, ಯಾಗಾದಿ ವಿಹಿತ ಕರ್ಮಮಾಡಬೇಕಾದರೆ ದೇಹವು ದೃಢವಾಗಿರಬೇಕು. ಅದಕ್ಕೆ ತಕ್ಕ ಪೋಷಣೆ ಮಾಡಬೇಕು, ಅತಿಥಿ ಪೂಜೆಗೆ ಸಹಾಯ ಮಾಡುವ ಪತ್ನೀಪುತ್ರಾದಿಗಳ ಪೋಷಣೆ ಮಾಡಬೇಕು. ತನಗೆ ಬಂದಿರುವ ವೈರಾಗ್ಯವನ್ನು ಹೊರಗೆ ತೋರಿಸಬಾರದು. ನೀರಿನಲ್ಲಿರುವ ತಾವರೆಯೆಲೆಯಂತೆ ನಿರ್ಲಿಪ್ತನಾಗಿದ್ದು, ಕ್ಲಪ್ತವಾಗಿರುವ ಆಯುಷ್ಯವನ್ನು ಕಳೆದ ಮೇಲೆ ದೇಹವನ್ನು ಬಿಡಬೇಕು. ಅಥವಾ ಸಂನ್ಯಾಸಿಯಾಗಬೇಕು.

ಜ್ಞಾತಿಗಳು, ಬಂಧುಗಳು, ಮಕ್ಕಳು, ತಮ್ಮಂದಿರು ಮೊದಲಾದವರು ಆಡುವ ಯೋಗ್ಯವಾದ ಮಾತನ್ನು ನಡೆಸಿ, ನನ್ನದೆಂಬ ಹರವನ್ನು ಬಿಡಬೇಕು. ಅವರಂತೆ ವರ್ತಿಸಬೇಕು. ಭೂಮಿ, ಅಂತರಿಕ್ಷ, ದೇವಲೋಕಗಳಲ್ಲಿ ಶ್ರೀಹರಿಯು ಎಲ್ಲರ ಉಪಯೋಗಕ್ಕಾಗಿ ಭೋಗಸಾಧನಸಾಮಗ್ರಿಗಳನ್ನು ನಿರ್ಮಿಸಿರುವನು. ಜ್ಞಾನಿಯಾದ ಗೃಹಸ್ಥನು ಎಲ್ಲವೂ ತನ್ನ ಆಸ್ತಿಯೆಂದು ತಿಳಿಯಬಾರದು. ಬೇರೆಯವರೂ ಅನುಭವಿಸಲಿ ಎಂದೂ, ಅವಶ್ಯವಿದ್ದಷ್ಟು ಮಾತ್ರ ತಾನು ಉಪಯೋಗಿಸಿಕೊಳ್ಳಬೇಕು. ಅವರವರ ಹೊಟ್ಟೆಯು ತುಂಬುವಷ್ಟು ಅವರವರ ಆಸ್ತಿ. ಅದನ್ನು ಬಿಟ್ಟು ಅಗತ್ಯಕ್ಕಿಂತ ಹೆಚ್ಚು ಆಸ್ತಿಯನ್ನು ಸಂಪಾದಿಸಿಕೊಂಡವನು ಕಳ್ಳನೆನಿಸಿ ಶಿಕ್ಷೆಗೆ ಅರ್ಹನಾಗುವನು. ಮನೆಯಲ್ಲಿರುವ ಸೇವಕರು ಹಸು, ಕತ್ತೆ, ಬೆಕ್ಕು ಇಲಿ, ಇರುವೆ, ಹಕ್ಕಿ, ನೊಣ ಮೊದಲಾದ ಪ್ರಾಣಿಗಳನ್ನು ತನ್ನ ಆಶ್ರಿತ ಮಕ್ಕಳಂತೆ ಯಥೋಚಿತವಾಗಿ ಕಾಪಾಡಬೇಕು. ಸ್ತ್ರೀಜಿತನಾಗಬಾರದು. ತನ್ನ ಹೆಂಡತಿಯೆಂಬ ಅಭಿಮಾನವನ್ನು ಬಿಡಬೇಕು. ದೇವರು ಕೊಟ್ಟುದನ್ನು, ಬೇಡದೆ ದೊರೆತುದನ್ನು ಆಯಾಸವಿಲ್ಲದಂತೆ ಬಂಧು, ಅತಿಥಿ ಮೊದಲಾದವರಿಗೆ ಹಂಚಿಬಿಡಬೇಕು. ಸಂಪಾದಿಸಿದ ಧನದಿಂದ ದೇವ, ಋಷಿ, ಅತಿಥಿ, ಭೂತ ಮತ್ತು ಪಿತೃಗಳನ್ನೂ ಅವರ ಅಂತರ್ಯಾಮಿಯಾಗಿರುವ ಶ್ರೀಹರಿಯನ್ನೂ ಪ್ರತಿದಿನ ಪೂಜಿಸಬೇಕು. ಹರಿಗೆ ಅಗ್ನಿಯಲ್ಲಿ ಅರ್ಪಿಸಿದ ಆಜ್ಯಾಹುತಿಗಳಿಗಿಂತ ಬ್ರಾಹ್ಮಣರ ಮುಖವೆಂಬ ಅಗ್ನಿಯಲ್ಲಿಮಾಡುವ ಹೋಮವು ಹರಿಗೆ ಅತಿಪ್ರಿಯವು. ಪ್ರತಿಕೂಲಳಾದ ಹೆಂಡತಿಯಲ್ಲಿ ಅಭಿಮಾನ ಮಾಡುವ ಪುರುಷನು ಅವಳ ಇಷ್ಟವನ್ನು ಪೂರೈಸಲು ತನ್ನ ಪ್ರಾಣಗಳನ್ನು ಬಿಡಲೂ ಸಿದ್ಧನಾಗುವನು. ಅವಳ ಇಚ್ಛೆಗೆ ವಿರುದ್ಧರಾದ ತಂದೆತಾಯಿಗಳನ್ನಾದರೂ ಕೊಲ್ಲಲು ಹಿಂಜರಿಯುವುದಿಲ್ಲ. ಅದರಿಂದ ಕೊನೆಗೆ ಅನರ್ಥವನ್ನು ಹೊಂದುವನು. ಸತ್ಕುಲ

ಪ್ರಸೂತಳಾದವಳನ್ನು ಮದುವೆಯಾಗಿ, ಧರ್ಮರತನಾಗಿ ಶ್ರೀಹರಿಯನ್ನು ಭಜಿಸುವವನು ಧೀರನೆನಿಸುವನು. ಹೆಂಡತಿಯು ವ್ಯಭಿಚಾರಿಣಿಯಾದರೆ ಅವಳನ್ನು ಮುಟ್ಟದೆ ದಾಸಿ ಯಂತೆ ಭಾವಿಸಿ ಆಗಲೂ ರಕ್ಷಿಸಬೇಕು.

ದೇಹವನ್ನು ಸುಡದೆ ಹೂತ್ತರೆ ಅದು ಕೊಳೆತು ಹುಳುಗಳಾಗುವುದು. ಸುಟ್ಟರೆ ಬೂದಿಯಾಗುವುದು. ನಾಯಿ ನರಿಗಳು ತಿಂದರೆ ಅವುಗಳ ಹೊಟ್ಟೆಯಿಂದ ಮಲ ರೂಪವಾಗಿ ಹೊರಬೀಳುವುದು. ಇಂತಹ ತುಚ್ಛಶರೀರವೆಲ್ಲಿ ? ಅದರಿಂದಾಗುವ ರತಿಯ ಸುಖವನ್ನರಸಿ ಹೋಗುವ ಜೀವನೆಲ್ಲಿ ? ಅವನಲ್ಲಿ ಅಂತರ್ಯಾಮಿಯಾಗಿ ಶ್ರೀಹರಿಯು ಆಕಾಶದಂತೆ ವ್ಯಾಪ್ತನಾಗಿ, ನಿರ್ಲಿಪ್ತನೂ ಆಗಿ, ಸಮೃದ್ಧ ಆನಂದ ರೂಪನಾಗಿರುವನು. ಇಂತಹ ಪ್ರಭುವಿನ ಇಚ್ಛೆಯಿಲ್ಲದಿದ್ದರೆ ಪತ್ನೀಪತಿ ಸಂಯೋಗ ವಾದರೂ ಬಹಳ ದುರ್ಲಭವೇ ಸರಿ.

ಶ್ರೀಹರಿಗೆ ಅರ್ಪಿಸಿದ ಜ್ಞಾನ ಸಾಧನೆಗೆ ಯೋಗ್ಯಗಳಾದ ಪದಾರ್ಥಗಳಿಂದ ಜೀವಿಸುವ ಮನುಷ್ಯನು ಸಕಲವೂ ಶ್ರೀಹರಿಯ ಅಧೀನವೆಂದು ಅರಿತು ನಡೆದರೆ ಸಂನ್ಯಾಸಿಗಳಿಗೆ ಆಗುವ ಪುಣ್ಯಲೋಕಗಳನ್ನು ಹೊಂದುವನು. ಅರಿತು ನ್ಯಾಯಾರ್ಜಿತ ವಾದ ಧನದಿಂದ ದೇವ, ಋಷಿ, ಪಿತೃ ನರ, ಭೂತ ಯಜ್ಞ (ಪೂಜೆ)ಗಳನ್ನು ಮಾಡಿ ಶ್ರೀಶನಿಗೆ ಅರ್ಪಿಸುವ ಮನುಜನು ಜ್ಞಾನವನ್ನು ಪಡೆಯುವನು. ಅಧಿಕಾರವೂ, ಸಂಪತ್ತೂ ಇದ್ದರೆ ಅಗ್ನಿಷ್ಟೋಮಾದಿ ಯಜ್ಞಗಳನ್ನು ವೈತಾನಿಕ ವಿಧಿಯಿಂದ ಗೃಹಸ್ಥನು ಮಾಡಬಹುದು. ಎಲ್ಲರಿಗೂ ಇದು ಸಾಧ್ಯವಲ್ಲ. ಮರ್ತ್ಯರು, ಬ್ರಾಹ್ಮಣರು, ದೇವತೆಗಳು ಎಲ್ಲರೂ ಯೋಗ್ಯತಾನುಸಾರವಾಗಿ ಸಂಭಾವನೀಯರೇ ಆಗಿರುವರು. ಆದರೆ ವಿಪ್ರಮುಖದಿಂದ ಶ್ರೀಹರಿಯ ತುಷ್ಟಿಯನ್ನು ಸಂಪಾದಿಸು ವುದು. ಗೃಹಸ್ಥನ ಕರ್ತವ್ಯವು.

ಗೃಹಸ್ಥನು ಭಾದ್ರಪದ ಬಹುಳದಲ್ಲಿ ಅಪರಪಕ್ಷೀಯ ಶ್ರಾದ್ಧವನ್ನು ತನ ಯೋಗ್ಯತೆಗೆ ತಕ್ಕಂತೆ ಸಕಲಪಿತೃಪ್ರೀತಿಗಾಗಿ ಮಾಡಬೇಕು. ಉತ್ತರಾಯಣ ಮತ್ತು ದಕ್ಷಿಣಾಯನ ಪ್ರಾರಂಭ ದಿನಗಳು, ಹುಣ್ಣಿಮೆ, ಸಂವತ್ಸರಾಂತ ಸಂಕ್ರಮಣ, ಅಮಾವಾಸ್ಯೆ, ವ್ಯತೀಪಾತ, ಗ್ರಹಣ, ದ್ವಾದಶೀ, ಶ್ರವಣಾದಿ ದಿನತ್ರಯ, ತ್ರಯೋದಶಿ ಗಳೆಂಬ ನಾಲ್ಕು ಅಷ್ಟ ತಿಥಿಗಳು, (ಹೇಮಂತ, ಶಿಶಿರ ಋತುಗಳಲ್ಲಿ ಮತ್ತು ಕಾರ್ತಿಕ ದಲ್ಲಿ) ಮಾಘ ಶುದ್ಧ ಸಪ್ತಮೀ, ಮಾಘಪೂರ್ಣಿಮಾ, ಅನೂರಾಧಾ ನಕ್ಷತ್ರ ಯುಕ್ತ ದ್ವಾದಶೀ ಮತ್ತು ಜನ್ಮನಕ್ಷತ್ರ ಇವೇ ಮೊದಲಾದ ದಿನಗಳಲ್ಲಿ ಶ್ರಾದ್ಧವನ್ನು ಮಾಡಿ ದರೆ ಶ್ರೇಯೋವೃದ್ಧಿ, ಆಯುಷ್ಯ ಮತ್ತು ಬಲಪ್ರದ. ಈ ದಿನಗಳಲ್ಲಿ ಸ್ನಾನ, ಜಪ, ತಪಸ್ಸುವ್ರತ, ಹೋಮ, ದೇವಪೂಜೆ, ವಿಪ್ರಪೂಜೆ, ಪಿತ್ರ್ಯಾದಿ ಯಜ್ಞ, ಸಕಲ ಭೂತ

ಸೇವೆ ಮುಂತಾದ ಕರ್ಮಗಳು ಅಕ್ಷಯ ಫಲಪ್ರದಗಳಾಗಿವೆ. ವಿವಾಹ, ಕುಮಾರ ಜನ್ಮ ಕರ್ಮ, ಪ್ರೇತಕಾರ್ಯ, ಮೃತತಿಥಿಗಳು ಇವು ದಾನಾದಿ ಬಹುಫಲ ಕಾರಣಗಳೆನಿಸಿವೆ.

ಧರ್ಮಫಲವಾದ ಶ್ರೇಯಸ್ಸನ್ನು ಅಧಿಕವಾಗಿ ಕೊಡುವ ದೇಶಗಳನ್ನು ಕೇಳು :- ಸತ್ಪಾತ್ರನು ದೊರೆಯುವ ದೇಶವೇ ಪುಣ್ಯತಮ ದೇಶ. ಚರಾಚರ ಜಗತ್ತಿನಲ್ಲಿ ಹರಿಯ ಸನ್ನಿಧಾನವಿದೆ. ತಪೋವಿದ್ಯಾದಯಾದಿ ಗುಣವಂತನಾದ ಬ್ರಾಹ್ಮಣನು ಭಕ್ತನಾಗಿದ್ದರೆ ಅವನು ಉತ್ತಮ ಪಾತ್ರನೆನಿಸುವನು. ಶ್ರೀಹರಿಯ ಪಾವನ ಪ್ರತಿಮೆ ಗಳು ಇರುವ ದೇಶಗಳೂ ಪವಿತ್ರಗಳೇ. ಪುರಾಣಪ್ರಸಿದ್ಧ ಗಂಗಾದಿ ನದಿಗಳು, ಕುರುಕ್ಷೇತ್ರ, ಗಯಾ, ಪ್ರಯಾಗ, ಪುಷ್ಕರಾದಿಗಳು, ಪುಲಹಾಶ್ರಮ, ನೈಮಿಷ, ಫಾಲ್ಗು ನಕ್ಷೇತ್ರವೆನಿಸಿದ ಹರಿಪುರ, ಸೇತೂರಾಮೇಶ್ವರ, ಪ್ರಭಾಸ, ದ್ವಾರಕೆ, ಕಾಶೀ, ಮಧುರೆ, ಪಂಪಾ, ಬಿಂದು ಸರೋವರ, ಬದರಿ, ನಂದಾತೀರ, ಸೀತಾರಾಮಾಶ್ರಮ, ಕಾಂಚಿ,ಮಹೇಂದ್ರ ಮಲಯಾದಿ ಕುಲಾಚಲಪರ್ವತಗಳು ಮೊದಲಾದುವು ಶ್ರೀಹರಿಯ ದಿವ್ಯ ಸಂನಿಧಾನಯುಕ್ತ ಕ್ಷೇತ್ರಗಳು. ಅವುಗಳನ್ನು ಶ್ರೇಯಸ್ಕಾಮನು ತಪ್ಪದೆ ಸೇವಿಸ ಬೇಕು. ಅಲ್ಲಿ ಮಾಡಿದ ಸದ್ಧರ್ಮವು ಸಾವಿರಾರು ಮಡಿಯಷ್ಟು ಫಲಪ್ರದವಾಗುವುದು.

ಇನ್ನು ಪಾತ್ರನಾರೆಂಬುದನ್ನು ಜ್ಞಾನಿಗಳ ಮಾತಿನಿಂದ ತಿಳಿಸುವೆನು ಕೇಳು :- ಚರಾಚರಜಗತ್ತಿನಲ್ಲಿ ತುಂಬಿರುವ ಮಾರಮಣನೇ ಮುಖ್ಯತಮ ಪಾತ್ರನು. ದೇವ ಋಷಿಗಳಿದ್ದರೂ ರಾಜಸೂಯದಲ್ಲಿ ಈ ಕೃಷ್ಣನೇ ಪಾತ್ರನೆಂದರಿತು ನೀನವನಿಗೆ ಅಗ್ರ ಪೂಜೆಯನ್ನು ಮಾಡಿ ನಿನ್ನ ಯಜ್ಞವನ್ನು ಸಾರ್ಥಕಗೊಳಿಸಿದೆಯಲ್ಲವೆ ? ಈ ಬ್ರಹ್ಮಾಂಡವೆಂಬ ವೃಕ್ಷವು ಜೀವರಾಶಿಗಳಿಂದ ತುಂಬಿದೆ. ಆ ವೃಕ್ಷದ ಬುಡದ ಬೇರೇ ಅಚ್ಯುತನು. ಅವನ ಚರಣಕಮಲಕ್ಕೆ ನೀರೆರೆದರೆ ಬ್ರಹ್ಮಾಂಡವೇ ತೃಪ್ತವಾಗುವುದು. ಶ್ರೀಹರಿಯೇ ಮನುಜಾದಿ ಶರೀರಗಳನ್ನು ನಿರ್ಮಿಸಿರುವವನು. ಮತ್ತು ಜೀವನಿಗೆ ಅವನೊಳಗಿದ್ದು ಜೀವನಸುಖವನ್ನು ಕೊಡುತ್ತಿರುವನು. ತಾರತಮ್ಯದಿಂದಿರುವ ದೇವದಾನವ ಮಾನವರಲ್ಲಿ ನೆಲೆಸಿರುವ ಶ್ರೀಹರಿಯನ್ನು ತಿಳಿದು ಪೂಜಿಸುವುದೇ ಮಹಾ ಯಜ್ಞವು. ತ್ರೇತಾದಿ ಯುಗಗಳಲ್ಲಿ ಪರಮಾತ್ಮನ ಸನ್ನಿಧಾನಯುಕ್ತರಾದ ಪುರುಷರು ನನ್ನಲ್ಲಿ ಸನ್ನಿಧಾನ ಹೆಚ್ಚು, ತನ್ನಲ್ಲಿ ಸನ್ನಿಧಾನ ಹೆಚ್ಚು ಎಂದು ಕಲಹ ಮಾಡಿದ್ದನ್ನು ನೋಡಿ ಜ್ಞಾನಿಗಳು ಪ್ರತಿಮಾ ಪೂಜೆಯನ್ನು ಮಾಡುವ ಸಂಪ್ರದಾಯ ವನ್ನು ಆರಂಭಿಸಿದರು. ಶ್ರೀಹರಿಯಲ್ಲಿ ಭಕ್ತಿಯಿಲ್ಲದೆ ಪ್ರತಿಮಾ ಪೂಜೆಯಿಂದ ಫಲ ವೇನೂ ಇಲ್ಲ. ಮನುಷ್ಯರಲ್ಲಿ ಪಾತ್ರನೆಂದರೆ ಬ್ರಾಹ್ಮಣನೇ. ಅವನು ತಪಸ್ವಿಯಾಗಿ, ವೇದಾಧ್ಯಯನ ಸಂಪನ್ನನಾಗಿ, ಯದೃಚ್ಛಾಲಾಭದಿಂದ ತೃಪ್ತನಾಗಿದ್ದರೆ ಅವನಿಗಿಂತ ಉತ್ತಮ ಪಾತ್ರ ಮತ್ತೊಂದಿಲ್ಲ. ಜಗತ್ಪ್ರಭುವಾದ ಶ್ರೀಕೃಷ್ಣನನ್ನೇ ನೋಡು ! ತಾನು ಮೂರು ಲೋಕಸ್ವಾಮಿಯಾದರೂ, ಇತರರು ಸದ್ ಬ್ರಾಹ್ಮಣರನ್ನು ಪೂಜಿಸಿ ಮಂಗಳ ವನ್ನು ಹೊಂದಲಿ ಎಂಬುದಕ್ಕಾಗಿ, ಬ್ರಾಹ್ಮಣರನ್ನು ಪೂಜಿಸಿ ಅವರ ಪಾದದ ಧೂಳಿ ಯನ್ನು ತಲೆಯ ಮೇಲೆ ಧರಿಸುವನು.

**ಹದಿನೈದನೆಯ ಅಧ್ಯಾಯ ಮುಗಿದುದು**

**ನಾರದ :–** ಧರ್ಮರಾಜನೇ ! ಬ್ರಾಹ್ಮಣರಲ್ಲಿ ಕೆಲವರು ಯಾಗಾದಿ ಕರ್ಮಗಳಲ್ಲಿಯೂ, ಕೆಲವರು ಜ್ಞಾನಯೋಗ ಮತ್ತು ಕರ್ಮಯೋಗಗಳಲ್ಲಿಯೂ ಮತ್ತೆ ಕೆಲವರು ಶಾಸ್ತ್ರಪ್ರವಚನದಲ್ಲಿಯೂ ಪ್ರವೃತ್ತರಾಗಿರುವರು. ಇವರಲ್ಲಿ ಜ್ಞಾನಯೋಗಿಗಳೇ ಉತ್ತಮರು. ಶಾಶ್ವತವಾದ ಸುಖವನ್ನು ಅಪೇಕ್ಷಿಸತಕ್ಕವರು ಪಿತೃಗಳಿಗೂ, ದೇವತೆಗಳಿಗೂ ತೃಪ್ತಿಪಡಿಸಬೇಕಾದರೆ ಹವ್ಯ ಕವ್ಯಗಳನ್ನು ಜ್ಞಾನಿಗಳಿಗೇ (ಪರಮಹಂಸಾಶ್ರಮಿಗಳಿಗೇ) ಕೊಡಬೇಕು. ಅಂತಹವರು ದೊರೆಯದಿದ್ದರೆ ಇರುವವರಲ್ಲಿ ಉತ್ತಮರನ್ನು ನಿಮಂತ್ರಿಸಿ ಭೋಜನ ಮಾಡಿಸಬೇಕು. ಮಹಾಶ್ರೀಮಂತನಾಗಿದ್ದರೂ ಶ್ರಾದ್ಧದಲ್ಲಿ ವಿಶ್ವೇದೇವಸ್ಥಾನಕ್ಕೆ ಇಬ್ಬರನ್ನೂ, ಪಿತೃಸ್ಥಾನಕ್ಕೆ ಮೂವರನ್ನೂ ಅಥವಾ ಒಂದೊಂದು ಸ್ಥಾನಕ್ಕೆ ಒಬ್ಬೊಬ್ಬರನ್ನೂ ಕೂಡಿಸಿ ಭೋಜನ ಮಾಡಿಸಬೇಕು. ದುಡ್ಡಿದೆಯೆಂದು ಬಹುಮಂದಿ ಬ್ರಾಹ್ಮಣರನ್ನು ಶ್ರಾದ್ಧದಲ್ಲಿ ಕೂಡಿಸಿ ಭೋಜನ ಮಾಡಿಸಬಾರದು. ಭಗವತ್ಪ್ರೀತಿಗಾಗಿ ಸತ್ಪಾತ್ರದಲ್ಲಿ ಮಾಡಿದ ಅನ್ನದಾನವು ಅತ್ಯಲ್ಪವಾದರೂ ಅಕ್ಷಯಫಲ ಬರುವುದು. ಧರ್ಮಜ್ಞನು ಶ್ರಾದ್ಧದಲ್ಲಿ ಮಾಂಸವನ್ನು ಉಪಯೋಗಿಸಬಾರದು. ಅರಣ್ಯದಲ್ಲಿರುವ ಮಹಾಋಷಿಗಳು ತಿನ್ನತಕ್ಕವೂ, ಭಗವಂತನಿಗೆ ಪ್ರೀತಿಕರಗಳೂ ಆದ ಧಾನ್ಯಾದಿಗಳನ್ನು ಪಕ್ವಮಾಡಿ ಅವುಗಳಿಂದಲೇ ಬ್ರಾಹ್ಮಣಾದಿಗಳನ್ನು ಸಂತೋಷಪಡಿಸಬೇಕು. ಶ್ರೀಶ ಕೊಟ್ಟುದನ್ನು ದೇವ, ಋಷಿ, ಪಿತೃ, ಭೂತ, ಮಾನವರಿಗೂ, ತನ್ನವರಿಗೂ ಹಂಚಿ ಉಣ್ಣಬೇಕು. ಆದರಿಂದ ಮನುಜನು ಪಾಪರಹಿತನಾಗುವನು. ಧರ್ಮಿಷ್ಠರು ಪ್ರಾಣಿಹಿಂಸೆಯನ್ನು ಸರ್ವಥಾ ಮಾಡಬಾರದು. ಜ್ಞಾನಿಗಳು ಮನಸ್ಸನ್ನು ನಿಗ್ರಹಿಸಿ ಕರ್ಮಕ್ಕಿಂತ ಜ್ಞಾನಯಜ್ಞವೇ ಶ್ರೇಷ್ಠವೆಂದು ಭಾವಿಸಿ ಜ್ಞಾನಯಜ್ಞಮಾತ್ರದಲ್ಲಿಯೇ ಆಸಕ್ತರಾಗುವರು. ಪಶುಹಿಂಸಕನನ್ನು ಕಂಡು ಸಕಲ ಪ್ರಾಣಿಗಳೂ ಭಯಪಡುತ್ತವೆ. ಆದ್ದರಿಂದ ದೇವರು ಕೊಡುವ ಜ್ಞಾನಿಗಳಿಗೆ ಯೋಗ್ಯವಾದ ಆಹಾರದಿಂದ ತೃಪ್ತನಾಗಿ ನಿತ್ಯನೈಮಿತ್ತಿಕ ಕರ್ಮಗಳನ್ನು ಮಾಡಬೇಕು.

ತಮ್ಮ ಧರ್ಮವನ್ನು ಹಾನಿಮಾಡುವ ವಿಧರ್ಮ, ಅನ್ಯವರ್ಣಾಶ್ರಮ ಧರ್ಮ, ಕಾಮ್ಯ ಕರ್ಮವೆನಿಸುವ ಆಭಾಸಧರ್ಮ, ವೇದವಿರುದ್ಧವಾದ ಪಾಖಂಡ ಮುಂತಾದ ಧರ್ಮವೆನಿಸುವ ಉಪಧರ್ಮ, ಡಾಂಭಿಕ ಕರ್ಮ ಈ ಐದೂ ಅಧರ್ಮದ ಶಾಖೆಗಳು. ಇವನ್ನು ತ್ಯಜಿಸಬೇಕು. ಆಶ್ರಮ ವರ್ಣಗಳಿಗೆ ತಕ್ಕಂತೆ ವಿಹಿತವಾದ ಧರ್ಮವನ್ನು ಮಾಡಿ ಶ್ರೀಹರಿಗೆ ಅರ್ಪಿಸುವುದೇ ಸಾತ್ವಿಕ ಧರ್ಮವು. ಇದೇ ಸಂಸಾರ ಮೋಚಕವಾಗಿ ಮುಕ್ತಿಪ್ರದವು. ರಾಜಸತಾಮಸಧರ್ಮಗಳು ಸ್ವರ್ಗ, ನರಕ ಮತ್ತು ತಮಸ್ಸಿಗೆ ಕಾರಣಗಳಾಗಿವೆ.

ಧರ್ಮವನ್ನು ಮಾಡಲು ಧನಬೇಕೆಂದು ಅದಕ್ಕಾಗಿ ಕೃಷ್ಯಾದಿಗಳನ್ನು ಮಾಡ

ಬಾರದು. ತೀರ್ಥಯಾತ್ರಾದಿಗಳನ್ನು ಮಾಡಬೇಕೆಂದು ದ್ರವ್ಯಯಾಚನೆ ಮಾಡ ಬಾರದು. ಹಾಗೆ ಮಾಡಿ ಆಚರಿಸಿದ ಧರ್ಮದಿಂದ ಫಲವಿಲ್ಲ. ಅಜಗರಕ್ಕೆ ಆಹಾರ ವನ್ನು ಅದರ ಬಾಯಿಯ ಹತ್ತಿರವೇ ಒದಗಿಸುವ ತಂದೆಯು ಇರುವನೆಂದು ನಂಬಿ, ದುಷ್ಟ ಪ್ರಯತ್ನಗಳನ್ನು ಮಾಡದಿರುವ ಹರಿಭಕ್ತನಿಗೆ ದೊರೆಯುವ ಸುಖಶಾಂತಿಗಳು, ಕಾಮ ಲೋಭಗಳನ್ನುಳ್ಳವನಾಗಿ ಹತ್ತಾರುಕಡೆ ಅಲೆಯುವ ವಿವೇಕರಹಿತನಿಗೆ ದೊರೆಯಲಾರವು. ಪಾದರಕ್ಷೆಗಳನ್ನು ಮೆಟ್ಟಿಕೊಂಡು ನಡೆಯುವವನಿಗೆ ಕಲ್ಲು ಮುಳ್ಳುಗಳ ಬಾಧೆಯಿಲ್ಲ. ಅದರಂತೆ ಕಾಮವನ್ನು ಬಿಟ್ಟವನಿಗೆ ದುಃಖಚಿಂತೆಗಳಿಲ್ಲ. ತೃಪ್ತನಿಗೆ ಸರ್ವತ್ರ ಶಾಂತಿಯೇ ದೊರಕುವುದು. ದೇವರು ಯಾವ ಆಹಾರವನ್ನೂ ಕೊಡದೆ ನೀರನ್ನು ಕೊಟ್ಟರೆ ಅದನ್ನೇ ಕುಡಿದು ತೃಪ್ತನಾಗಿ ಮನೆಯಲ್ಲಿಯೇ ಇರು ವವನು ಸಿಂಹದಂತೆ ಗೌರವವನ್ನು ಹೊಂದುವನು. ಹೊಟ್ಟೆಗಾಗಿಯೂ, ತನ್ನ ಮಕ್ಕಳು ಮರಿಗಳಿಗಾಗಿಯೂ ತಿರುಗುವವನು ನಾಯಿಯಂತೆ ಅವಮಾನವನ್ನು ಹೊಂದುವನು. ತೃಪ್ತನಾಗದ ದುರಾಶೆಯುಳ್ಳ ಬ್ರಾಹ್ಮಣನ ತೇಜಸ್ಸು, ವಿದ್ಯೆ, ತಪಸ್ಸು ಮತ್ತು ಯಶಸ್ಸು ಮುಂತಾದ ಗುಣಗಳು ಹಾಳಾಗುವುವು. ಹಾಗೂ ಇಂದ್ರಿಯಗಳ ದಾಸನಾದ ಅವನ ಜ್ಞಾನವೂ ಕಾದ ಹೆಂಚಿನಮೇಲೆ ಹಾಕಿದ ನೀರಿನ ಹನಿಯಂತೆ ನಾಶವಾಗುವುದು. ಒಂದುವೇಳೆ ತಾತ್ಕಾಲಿಕವಾಗಿ ಕಾಮಿತಲಾಭದಿಂದ ಕಾಮದ ಕೊನೆಯು ಕಾಣಬಂದಂತೆ ತೋರಿದರೂ, ಇನ್ನೂ ಬೇಕೆಂಬ ಆಶೆಯು ಇರುವುದಾದರೆ ಪ್ರಪಂಚವನ್ನೇ ಗೆದ್ದು ವಶಮಾಡಿಕೊಂಡರೂ ಆ ದುರಾಶೆಯು ಪೀಡಿಸದೆ ಬಿಡದು.

ರಾಜನೇ ! ಪಂಡಿತರು ಬಹುಜನರಿರುವರು. ಅವರು ಸಂಶಯಗಳನ್ನೆಲ್ಲ ಪರಿಹರಿಸಬಲ್ಲರು. ಅವರು ಚೆನ್ನಾಗಿ ವ್ಯಾಸಂಗ ಮಾಡಿರುವರು. ಅವರು ಯಜ್ಞ ಸಭೆಯ ಅಧಿಪತಿಗಳಾಗಿಯೂ ಇರುವರು. ಇಂತಹ ಗುಣಾಢ್ಯರವರಾದರೂ ಅವರು ಲೋಭವನ್ನು ಗೆಲ್ಲಲಾರದೆ ಪಾಪಕರ್ಮಗಳನ್ನು ಮಾಡಿ ಕೀಟಾದಿ ಪಾಪಜನ್ಮಗಳಲ್ಲಿ ಹುಟ್ಟುತ್ತಿರುವರು.

ನಿಷಿದ್ಧ ವಿಷಯದ ಅಭಿಲಾಷೆಯನ್ನು ಬಿಡುವುದರಿಂದ ಕಾಮವನ್ನೂ, ಕಾಮ ವನ್ನು ಮೆಟ್ಟಿ ತುಳಿದು ಬಿಡುವುದರಿಂದ ಕೋಪವನ್ನೂ ಧನವು ರಾಜ ಚೋರಾದಿ ಗಳಿಂದ ನಾಶವಾಗುವುದೆಂದು ತಿಳಿಯುವುದರಿಂದ ಲೋಭವನ್ನೂ, ತತ್ತ್ವನಿಶ್ಚಯ ಜ್ಞಾನದಿಂದ ವೈಷ್ಣವ ಸಿದ್ಧಾಂತದಲ್ಲಿ ಬರುವ ಸಂಶಯ ಮತ್ತು ಭಯಗಳನ್ನೂ, ಬ್ರಹ್ಮತರ್ಕ ಮೊದಲಾದುವುಗಳಲ್ಲಿ ಹೇಳಿರುವ ಯುಕ್ತಿಯಿಂದ ಸಿದ್ಧವಾಗುವ, ನಿತ್ಯಾ ನಿತ್ಯಾದಿ ತತ್ತ್ವ ನಿಶ್ಚಯ ಜ್ಞಾನದಿಂದ ಶೋಕ ಮೋಹಗಳನ್ನೂ, ದೊಡ್ಡವರ ಸೇವೆಯಿಂದ ದಂಭವನ್ನೂ, ಮೌನದಿಂದ ಭಗವದುಪಾಸನಾ ವಿಘ್ನಗಳನ್ನೂ, ಸ್ವರ್ಗ,

ಸ್ವರಾಜ್ಯ ಮೊದಲಾದುವುಗಳ ಕಾಮನೆಗಳನ್ನು ಬಿಡುವುದರಿಂದ ಪಶುಹಿಂಸೆಯನ್ನೂ ಜಯಿಸಬಹುದಾಗಿದೆ.

ಮಂತ್ರ, ಔಷಧಗಳಿಂದ ಉನ್ಮಾದಾದಿ ಭೌತಿಕ ದುಃಖವನ್ನು ಕಳೆದುಕೊಳ್ಳಬಹುದು. ಇಂದ್ರಾದಿಗಳ ಧ್ಯಾನದಿಂದ ಗ್ರಹಪೀಡೆ, ಮನೋರೋಗ, ಅನಾವೃಷ್ಟ್ಯಾದಿ ದುಃಖವನ್ನು ನೀಗಬಹುದು ಅಷ್ಟಾಂಗಯೋಗ ಮತ್ತು ವಾಯುವಶೀಕರಣದಿಂದ ಬಿಕ್ಕಳಿಕೆ ಮೊದಲಾದ ದೇಹದ ದುಃಖವನ್ನು ಕಳೆದುಕೊಳ್ಳಬಹುದು. ಸತ್ಪುರುಷರ ಸೇವೆಯಿಂದ ಅಜ್ಞಾನವನ್ನು ನೀಗಬಹುದು. ಸತ್ವಗುಣ ವೃದ್ಧಿಯಿಂದ ರಜಸ್ತಮೋಗುಣಗಳನ್ನೂ, ಭಗವನ್ನಿಷ್ಠೆಯಿಂದ ದೊರೆತ ಸೂಕ್ಷ್ಮ ಸತ್ವಗುಣದಿಂದ (ವೈರಾಗ್ಯದಿಂದ) ಸ್ಥೂಲ ಸತ್ವಗುಣವನ್ನು ಜಯಿಸಬಲ್ಲನು. ಬಹುಮಾತಿನಿಂದೇನು ? ಈಗ ಹೇಳಲ್ಪಟ್ಟ ಸಕಲ ದುಃಖಗಳನ್ನೂ **ಹರಿಗುರುಭಕ್ತಿ**ಯಿಂದ ಜಯಿಸಬಲ್ಲನು.

ಜ್ಞಾನದೀಪವನ್ನು ಬೆಳಗಿಸಿ ಭಗವಂತನನ್ನು ತೋರುವ ಗುರುವನ್ನು ಮೀರಿ ನಡೆಯುವವನ ವಿದ್ಯೆಯು ಗಜಸ್ನಾನದಂತೆ ನಿರರ್ಥಕವೇ ಸರಿ.

ಈ ಶ್ರೀಕೃಷ್ಣನು ಸಾಕ್ಷಾದ್ವಿಷ್ಣುವೆಂದು ತಿಳಿ. ಬ್ರಹ್ಮಾದಿ ದೇವವಂದ್ಯನೂ, ಸನಕಾದಿ ಯೋಗಿಜನ ವಿಚಾರ ವಿಷಯನೂ ಆದ ಈ ರಮೇಶನನ್ನು ಲೋಕದ ಜನರು ತಮ್ಮಂತೆ ಸಾಮಾನ್ಯ ಮನುಜನೆಂದು ತಿಳಿದಿರುವರು.

ಇಂದ್ರಿಯಜಯಕ್ಕೆ ಸರ್ವವೇದೋಕ್ತ ಕರ್ಮಗಳು, ಯಜ್ಞ, ತಪೋದಾನಾದಿಗಳು ಸಾಧನೆಗಳಾಗಿರುವಾಗ ಇಂದ್ರಿಯ ಜಯವನ್ನು ಪಡೆಯದಿದ್ದರೆ ಸಕಲವೂ ವ್ಯರ್ಥ.

ಚಿತ್ತವನ್ನು ಹತ್ತಿಕ್ಕಿ ಜಯಿಸಬೇಕೆಂಬ ಧೀರನು ದುಷ್ಟಸಂಗವನ್ನೂ, ದುಷ್ಪರಿಗ್ರಹವನ್ನೂ ಬಿಟ್ಟು ಒಬ್ಬಂಟಿಗನಾಗಿ ಸಂಚರಿಸುತ್ತಾ ಭಿಕ್ಷಾಟನೆ ಮಾಡುತ್ತಿರಬೇಕು. ಮಿತವಾಗಿ ಆಹಾರವನ್ನು ಸ್ವೀಕರಿಸಬೇಕು. ಸಮವಾದ ಸ್ಥಳದಲ್ಲಿ ಸ್ಥಿರಾಸನವನ್ನು ಹಾಕಿ ಕುಳಿತು ಸಮಕಾಯನಾಗಿ "ಓಂ" ಎಂಬ ಪ್ರಣವ ಮಂತ್ರದಿಂದ ಪ್ರಾಣಾಯಾಮವನ್ನು ಮಾಡಬೇಕು. ಮನಸ್ಸಿನಲ್ಲಿರುವ ಕಾಮವಾಸನೆಗಳು ತೊಲಗಿಹೋಗುವತನಕ ನಾಸಾಗ್ರವನ್ನು ನೋಡುತ್ತ ಪ್ರಾಣಾಪಾನಗಳನ್ನು ನಿರೋಧಿಸಬೇಕು. ಹೀಗೆ ಮಾಡಿದರೆ ಕೆಲವು ದಿವಸಗಳಲ್ಲಿ ಕಟ್ಟಿಗೆ ಹಾಕದಿದ್ದರೆ ಬೆಂಕಿ ತಾನಾಗಿ ಶಾಂತವಾಗುವಂತೆ ಮನಸ್ಸು ಶಾಂತವಾಗುವುದು. ಆಗ ಚಿತ್ತವು ಬ್ರಹ್ಮಾನಂದ ಮಗ್ನವಾಗಿ ಸ್ವಲ್ಪವೂ ಚಲಿಸದೆ ಹರಿಯ ಗುಣಗಳನ್ನೇ ಚಿಂತಿಸುವುದು.

ಗೃಹಸ್ಥನಾಗಿದ್ದು ಆ ಆಶ್ರಮವನ್ನು ಬಿಟ್ಟು ಯತಿಯಾಗಿ ತಿರುಗಿ ಮನೆಯನ್ನು ಸೇರಿದವನು ಪಾಪಿ, ನಿರ್ಲಜ್ಜನೂ ಆಗಿ ನರಕದಲ್ಲಿ ಬೀಳುವನು. ಮಲ, ಕ್ರಿಮಿ

ಮತ್ತು ಭಸ್ಮವಾಗುವ ಶರೀರವೇ ಜೀವನಲ್ಲ, ಶರೀರವೇ ತಾವೆಂದು ತಿಳಿದು ಹೊಗಳಿಸಿಕೊಳ್ಳುವವರು ಅಸುರರೇ ಸರಿ.

ವಿಹಿತಕರ್ಮ ತ್ಯಾಗಿಯಾದ ಗೃಹಸ್ಥನು, ವ್ರತವನ್ನು ಬಿಟ್ಟ ಬ್ರಹ್ಮಚಾರಿಯು, ಊರೊಳಗೇ ಇರುವ ವಾನಪ್ರಸ್ಥಿಯು ಮತ್ತು ಇಂದ್ರಿಯಲೋಲುಪನಾಗಿರುವ ಯತಿಯು ಇವರನ್ನು ಆಶ್ರಮಾಭಾಸರು ಅಂದರೆ ನಕಲು ಆಸಾಮಿಗಳೆಂದೆನ್ನುವರು. ಇವರು ವರ್ಣವನ್ನೂ, ಆಶ್ರಮವನ್ನೂ ಕೆಡಿಸುವ ನೀಚರಾಗಿರುವರು. ಆಹಾ ! ನಮ್ಮ ಸ್ವಾಮಿಯಾದ ನಾರಾಯಣನ ಬಂಧಕಶಕ್ತಿಯ ಮಹಿಮೆಯು ಆಶ್ಚರ್ಯ ! ಎಂದು ಇಂತಹ ಆಶ್ರಮ ಭ್ರಷ್ಟರನ್ನು ನೋಡಿ ಶ್ರೀಶನಿಗೆ ಕೈಮುಗಿಯಬೇಕು. ಶ್ರೀಹರಿಯು ತನ್ನ ಬಿಂಬನೂ, ಸ್ವಾಮಿಯೂ ಎಂದು ತಿಳಿದವನಾಗಿದ್ದರೆ ಇಂದ್ರಿಯ ಲಂಪಟನಾಗಿ ದೇಹವನ್ನು ಕೊಬ್ಬಿಸಿ ಬೆಳೆಸುತ್ತಿದ್ದನೆ ?

ಶರೀರವೇ ರಥ. ಇಂದ್ರಿಯಗಳೇ ಕುದುರೆಗಳು. ಮನಸ್ಸೇ ಕಡಿವಾಣ. ವಿಷಯಗಳೇ ರಸ್ತೆಗಳು. ಬುದ್ಧಿಯೇ ಸಾರಥಿ. ಚಿತ್ತವೇ ಈಶನು ಕುಳಿತಿರುವ ಎತ್ತರವಾದ ಪೀಠ. ಜೀವನೇ ರಥಿಕನು. ಪ್ರಾಣಾಪಾನಾದಿ ಹತ್ತು ಪ್ರಾಣಗಳೇ ರಥದ ಅಚ್ಚು. ಧರ್ಮ ಮತ್ತು ಅಧರ್ಮಗಳೇ ಚಕ್ರಗಳು. ಅಭಿಮಾನಿಯಾದ ರಥಿಕಜೀವನಿಗೆ "ಓಂ" ಎಂಬ ಪ್ರಣವವೇ ಬಿಲ್ಲು. ಜೀವನ ಜ್ಞಾನಮಯ ಚಿತ್ತವೇ ಬಾಣ. ಅದರ ಗುರಿ ಪರಬ್ರಹ್ಮ. ಗೆಲ್ಲಬೇಕಾದ ಜೀವನ ಶತ್ರುಗಳು ರಾಗ, ದ್ವೇಷ, ಲೋಭ, ಶೋಕ, ಮೋಹ, ಭಯ, ಮದ, ದುರಭಿಮಾನಗಳು, ಹಸಿವು, ಬಾಯಾರಿಕೆ. ಇದರಲ್ಲಿ ಕೆಲವರು ರಾಜಸರು, ಕೆಲವರು ತಾಮಸರಿರುವರು. ಇದನ್ನರಿತು ಜೀವನು ತನಗೆ ಮನುಜದೇಹ ಬಂದಾಗ, ಅದು ಗಟ್ಟಿಮುಟ್ಟಾಗಿರುವಾಗ, ತಡಮಾಡದೆ ಮಹಾತ್ಮರ ಚರಣಸೇವೆಯೆಂಬ ನಿಶ್ಚಿತವಾದ ಜ್ಞಾನಖಡ್ಗವನ್ನು ಹಿಡಿದುಕೊಂಡು ಶ್ರೀಹರಿಯ ಅನುಗ್ರಹ ಬಲದಿಂದ ರಾಗಾದಿ ಶತ್ರುಗಳನ್ನು ಕೊಂದು ವಿಷಯಾಲಂಬುದ್ಧಿಯ ರಾಜ್ಯವನ್ನು ಗೆದ್ದು ಸಂಸಾರ ದೂರನಾಗಬೇಕು.

ಈ ತತ್ತ್ವವನ್ನು ತಿಳಿಯದೆ ಇಂದ್ರಿಯವಶನಾಗಿ ರಾಗಾಂಧನಾಗುವ ಜೀವನನ್ನು ಇಂದ್ರಿಯಗಳೆಂಬ ಕುದುರೆಗಳು ದಾರಿತಪ್ಪಿಸಿ, ಸಂಸಾರ ಗಹನವನ್ನು ಹೊಕ್ಕು ವಿಷಯ ಚೋರರ ಕೈಗೆ ಒಪ್ಪಿಸಿಬಿಡುವುವು. ಅವರು ಈ ಜೀವನನ್ನೂ, ಅವನ ಸಾರಥಿಯನ್ನೂ, ಕುದುರೆಗಳನ್ನೂ ಸಂಸಾರವೆಂಬ ಹಾಳುಬಾವಿಯಲ್ಲಿ ಕೆಡಹಿ ಮೃತ್ಯುವಿಗೆ ತುತ್ತಾಗಿಸುವರು.

ಪ್ರವೃತ್ತ ಮತ್ತು ನಿವೃತ್ತಗಳೆಂಬ ಎರಡು ಬಗೆಯಾದ ಕರ್ಮಗಳು ವೇದಗಳಲ್ಲಿ ಹೇಳಲ್ಪಟ್ಟಿವೆ. ಪ್ರವೃತ್ತ ಕರ್ಮ ಮಾಡುವವನು ಸತ್ತು ಮತ್ತೆ ಹುಟ್ಟುವನು. ನಿವೃತ್ತ ಕರ್ಮಿಯು ತಿರುಗಿ ಹುಟ್ಟದೆ ಮುಕ್ತನಾಗುವನು.

ಹಿಂಸಾಮಯವೂ, ದ್ರವ್ಯಮಯವೂ, ಕಾಮ್ಯವೂ ಆದ ಪ್ರವೃತ್ತ ಕರ್ಮದಿಂದ ಮೋಕ್ಷಕ್ಕೆ ವಿರುದ್ಧವಾದ ಫಲವು ಬರುವುದು. ಇದು ಅಗ್ನಿಹೋತ್ರ, ದರ್ಶ, ಪೂರ್ಣಮಾಸ, ಚಾತುರ್ಮಾಸ್ಯ, ಪಶುಬಂಧ ಎಂದು ಅನೇಕ ಬಗೆಯಾಗಿ "ಇಷ್ಟ" ಎನಿಸಿದೆ. ಹುತ ಎಂದರೆ ವೈಶ್ವದೇವ, ಪ್ರಹುತ ಎಂದರೆ ಬಲಿಹರಣ, ಪೂರ್ತ ಎಂದರೆ ದೇವಾಲಯ, ಆರಾಮ, ಕೂಪ, ಫಲಪುಷ್ಪವನ ಮುಂತಾದುವುಗಳ ನಿರ್ಮಾಣ, ಪುರೋಡಾಶಾದಿ ದ್ರವ್ಯದಿಂದ ಬಂದ ಅಪೂರ್ವಫಲ ಅಥವಾ ವಿಪ್ರರಿಗೆ ಮಾಡಿದ ಅನ್ನದಾನದ ಫಲ ಇವೆಲ್ಲ ಪೂರ್ತವೆನಿಸುವುದು. ಈ ಇಷ್ಟಾಪೂರ್ತಗಳು ಸಕಾಮಗಳಾದರೆ ಪಿತೃಯಾನವು ದೊರೆಯುವುದು. ಕಾಮ್ಯ ಕರ್ಮಿಯು ಧೂಮ, ರಾತ್ರಿ, ಕೃಷ್ಣಪಕ್ಷ, ದಕ್ಷಿಣಾಯನ, ಚಂದ್ರಲೋಕಗಳನ್ನೂ ಹಾಗೂ ತದಭಿಮಾನಿ ದೇವತೆಗಳನ್ನೂ ಹೊಂದಿ ಕರ್ಮಫಲವು ಕ್ಷೀಣವಾದಾಗ ಮತ್ತೆ ಭೂಮಿಯಲ್ಲಿ ಹುಟ್ಟುವನು. ಆಗ ಓಷಧಿ, ತಂದೆ, ತಾಯಿ ಎಂಬ ಮಾರ್ಗದಿಂದ ಹಿಂತಿರುಗಿ ಬಂದು ಹುಟ್ಟುವನು. ಇದೇ ಪಿತೃಯಾನವು. ಕಾಮ್ಯಕರ್ಮಿಯು ಪುಣ್ಯವಿಶೇಷವುಳ್ಳವನಾದರೆ ಇನ್ನೆಲ್ಲಿಯೂ ಹುಟ್ಟದೆ ಬ್ರಾಹ್ಮಣ ಕುಲದಲ್ಲಿಯೇ ಹುಟ್ಟುವನು.

ಅರ್ಚಿರಾದಿ ಮಾರ್ಗವನ್ನು ಹೇಳುವೆನು ಕೇಳು :–

ಕ್ರಿಯಾಭಿಮಾನಿ ದೇವತೆಗಳು ಜ್ಞಾನೇಂದ್ರಿಯಾಭಿಮಾನಿ ದೇವತೆಗಳ ಅಧೀನರು. ಇಂದ್ರಿಯಾಭಿಮಾನಿ ದೇವತೆಗಳೆಲ್ಲರೂ ಮನೋಭಿಮಾನಿ ಇಂದ್ರನ ಅಧೀನರು. ಇಂದ್ರನು ವೇದಾಭಿಮಾನಿನಿ ಪಾರ್ವತಿಯ ಅಧೀನನು. ಪಾರ್ವತಿಯು ಅ – ಉ – ಮ ಎಂಬ ವರ್ಣತ್ರಯಾತ್ಮಕನಾದ ರುದ್ರನ ಅಧೀನಳು. ಓಂಕಾರದ ಅವಯವಾಭಿಮಾನಿ ರುದ್ರದೇವರು ಪ್ರಣವಾಭಿಮಾನಿಯಾದ ಶೇಷದೇವರ ಅಧೀನನು. ಶೇಷದೇವರು ಬಿಂದು ಮತ್ತು ನಾದ ನಿಯಾಮಕರಾದ ಭಾರತಿ ಮತ್ತು ಸರಸ್ವತಿಯರ ಅಧೀನರು. ಭಾರತೀ ಸರಸ್ವತಿಯರು ಪ್ರಾಣದೇವರು–ವಿರಿಂಚ ಇವರಿಬ್ಬರ ಅಧೀನರು. ವಿರಿಂಚನು ಶ್ರೀಹರಿಯ ಅಧೀನನು. ಇವರೆಲ್ಲ ಈ ಕ್ರಮದಲ್ಲಿ ಲಯವನ್ನು ಹೊಂದುವರು. ಹೀಗೆ ಜ್ಞಾನಿಯು ತನ್ನ ಉತ್ಕ್ರಮಣ ಕಾಲದಲ್ಲಿ ಚಿಂತಿಸಿ ದೇಹವನ್ನು ಬಿಡುವನು. ಅವನು ತೆರಳುವ ಅರ್ಚಿರಾದಿ ಮಾರ್ಗದ ವಿವರಣೆ :–

ಅಗ್ನಿ, ಸೂರ್ಯ, ದಿವಾದೇವತೆ, ಪ್ರವಹವಾಯು, ಶುಕ್ಲಪಕ್ಷಾಭಿಮಾನಿ, ಪೂರ್ಣಿಮಾಭಿಮಾನೀ, ಉತ್ತರಾಯಣ, ಸಂವತ್ಸರಗಳ ಅಭಿಮಾನಿ ದೇವತೆಗಳು, ಇಂದ್ರಾದಿ ದೇವತೆಗಳು ಇವರು ಕರೆದುಕೊಂಡು ಹೋಗುವ ಅರ್ಚಿರಾದಿ ಮಾರ್ಗವನ್ನು ಅನುಸರಿಸಿ ಜ್ಞಾನಿಯು ಹೋಗುವನು. ಇದನ್ನೇ ದೇವಯಾನವೆಂಬುವರು. ಈ ಮಾರ್ಗದಲ್ಲಿ ಹೋಗುವವರು ಕ್ರಮವಾಗಿ ಸುಖಾಭಿವೃದ್ಧಿಯನ್ನೂ ಹೊಂದುತ್ತ

ಕೊನೆಗೆ ಪರಮಾತ್ಮನ ಲೋಕವನ್ನು ಸೇರಿ ಪೂರ್ಣಾನಂದ ಸ್ವರೂಪರಾಗುವರು ಅವರು ಹಿಂತಿರುಗಿ ಬರುವುದಿಲ್ಲ. ಮುಕ್ತರಾಗಿ ಬಿಡುವರು.

ಈ ದೇವಯಾನ ಮತ್ತು ಪಿತೃಯಾನಗಳೆರಡನ್ನೂ ಚೆನ್ನಾಗಿ ಶಾಸ್ತ್ರವಿಚಾರ ಮಾಡಿ ತಿಳಿದವನು ದೇಹ ಬಂಧನದಲ್ಲಿದ್ದರೂ ಅಜ್ಞಾನಿಗಳಂತಿರದೆ ಶ್ರೀಹರಿಜ್ಞಾನಿ ಯಾಗುವನು. ಪ್ರಳಯ, ಸೃಷ್ಟಿಕಾಲಗಳಲ್ಲಿ ಹಾಗೂ ಮುಕ್ತಿಯಲ್ಲಿಯೂ ಶಶ್ವದೇಕ ಪ್ರಕರನಾಗಿರುವ, ಜನರಿಗೆ ಜನನ ಮತ್ತು ಮರಣಗಳನ್ನುಂಟು ಮಾಡುವ, ಅಂತರ್ಬ ಹಿವ್ರ್ಯಾಪ್ತನಾದ, ಬಂಧ ಮತ್ತು ಮೋಕ್ಷ ಕಾರಣನಾದ ನಾರಾಯಣನಿಗೆ ಎಲ್ಲವೂ ಅಧೀನವೆಂದು ತಿಳಿದು ಜ್ಞಾನಿಯು ಮುಕ್ತನಾಗುವನು.

ಈ ದೇಹವು ಅರ್ಥಕ್ರಿಯಾಕಾರಿ ಅಂದರೆ ಸುಖ ದುಃಖಾದಿಗಳನ್ನುಂಟು ಮಾಡುವ ಶಕ್ತಿವುಳ್ಳದ್ದು. ಆದ್ದರಿಂದ ಸತ್ಯವಾಗಿದೆ. ಜೀವನಿಗೆ ಇದರಿಂದಲೇ ಜ್ಞಾನಕ್ರಿಯೆಗಳು ನಡೆಯುತ್ತವೆ. ಈಶ್ವರನ ಪ್ರತಿಬಿಂಬನಾದ ಜೀವನು ಎಂಬ ತತ್ತ್ವವು ಸತ್ಯವಾಗಿರುವಂತೆ ಘಟಪಟಾದಿ ಇಂದ್ರಿಯ ಗೋಚರವಾದ ಜಗತ್ತೂ ಕೂಡ ಅರ್ಥಕ್ರಿಯಾಕಾರಿಯಾಗಿ ಒಂದು ಪ್ರಯೋಜನವನ್ನು ಉದ್ದೇಶಿಸಿ ಪರಮಾತ್ಮ ನಿಂದ ರಚಿತವಾಗಿರುವ ಪ್ರಯುಕ್ತ ಸತ್ಯವಾಗಿಯೇ ಇದೆ. ಎಂದಿಗೂ ಮಿಥ್ಯೆಯಲ್ಲ. ಶ್ರೀಹರಿಯ ಪ್ರೇರಣೆಯಿಲ್ಲದೆ ಪೃಥ್ವ್ಯಾದಿಗಳಿಗೆ ಯಾವ ಪ್ರವೃತ್ತಿಯೂ ಹುಟ್ಟ ಲಾರದು. ಸೇರುವುವಾಗಲಿ, ಅಗಲುವುದಾಗಲಿ, ವಿಕಾರವಾಗಲಿ ಪೃಥಿವೀ–ಜಲ– ಅಗ್ನಿಗಳಿಗೆ ಸ್ವಾತಂತ್ರ್ಯವಿಲ್ಲ. ಪೃಥಿವೀಮೊದಲಾದ ಭೂತಗಳು ಗಂಧಾದಿ ಅವಯವಗಳುಳ್ಳದ್ದಾಗಿವೆ. ದಾರಗಳಿಲ್ಲದೆ ಬಟ್ಟೆಯಿರಲಾರದು. ಅದರಂತೆ ಗಂಧ ವಿಲ್ಲದೆ ಪೃಥಿವಿಯು ಇರಲಾರದು–ಎಂದು ಸಿದ್ಧವಾಗುವುದು. ಆದ್ದರಿಂದ ಪೃಥಿವೀ ಗಂಧಗಳಿಗಿರುವ ಅಂಗಾಂಗೀ ಭಾವವೂ ಕೂಡ ಶ್ರೀನಾರಾಯಣನ ಕಟಾಕ್ಷಪ್ರಾಪ್ತ ವೆಂದೇ ತಿಳಿಯಬೇಕು.

ಕಪ್ಪೆಚಿಪ್ಪನ್ನು ನೋಡಿ ರಜತ ಸಾದೃಶ್ಯವಿರುವುದರಿಂದ ಬೆಳ್ಳಿಯೆಂಬ ಭ್ರಮೆ ಬರುವುದು ನಿಜ. ಆದರೆ ಸಾದೃಶ್ಯವು ಯಾವಾಗಲೂ ಭೇದ ಘಟಿತವಾಗಿದೆ. ಎರಡು ಸತ್ಯ ವಸ್ತುಗಳ ಜ್ಞಾನದಿಂದ ಸಾದೃಶ್ಯವು ತೋರುವುದು. ಅದರಿಂದ ಅಜ್ಞಾನಿಗೆ ಭ್ರಮೆ ಬರುವುದು. ಅದರಂತೆ ಜೀವನು ಅನಾದಿಕಾಲದಿಂದಲೂ ಪರಮಾತ್ಮ ಸದೃಶನೂ, ಅವನ ಅಧೀನನೂ ಆಗಿದ್ದರೂ ಅವಿದ್ಯೆಯಿಂದ ತಾನು ಸ್ವತಂತ್ರನೆಂದು ಭ್ರಾಂತನಾಗುವನು. ಶ್ರೀಹರಿಯೇ ಎಚ್ಚರ, ಕನಸು, ನಿದ್ರೆ ಮುಂತಾದುವುಗಳಿಗೆ ಸ್ವತಂತ್ರ ಪ್ರೇರಕನು. ಶ್ರೀಹರಿಯೇ ಸರ್ವೋತ್ತಮನು, ಜೀವ ಜಡಭಿನ್ನನು. ಹೀಗೆ ತಿಳಿಯುವುದೇ ಯಥಾರ್ಥಜ್ಞಾನ. ಇದನ್ನು ಶ್ರೀಹರಿಯ ಅನುಗ್ರಹದಿಂದ ಪಡೆದವನು ನಿರ್ದೋಷನೂ, ಸ್ವಯೋಗ್ಯ ಪೂರ್ಣನೂ ಆಗಿ ಮುಕ್ತನಾಗುವನು.

ಜ್ಞಾನಿಯು ಭಾವಾದ್ವೈತ, ಕ್ರಿಯಾದ್ವೈತ, ದ್ರವ್ಯಾದ್ವೈತಗಳೆಂಬ ಭಾವನೆಗಳನ್ನು ಹೊಂದಿ, ಆವಿರ್ಭೂತ ಸ್ವರೂಪಜ್ಞಾನಾನಂದನಾಗಿ, ಜಾಗ್ರದಾದಿ ಅವಸ್ಥೆಗಳನ್ನು ದಾಟಿ ಸುಖಿಸುವನು.

**ಭಾವಾದ್ವೈತ :–** ಪಟತಂತುಗಳು ಕಾರ್ಯಕಾರಣಗಳೆನಿಸುವಂತೆ ಈ ಜಗತ್ತು ಕಾರ್ಯತ್ಮಕವೂ, ಕಾರಣಾತ್ಮಕವೂ ಆಗಿದೆ. ಈ ಉಭಯ ವಿಧ ಜಗತ್ತು ತಾನಾಗಿ ಕಾರ್ಯವೂ ಆಗದು, ಕಾರಣವೂ ಆಗದು ಅವೆಲ್ಲ ಶ್ರೀಹರಿಯ ಅಧೀನಗಳಾಗಿವೆ. ಕಾರಣದಲ್ಲಿ ಜನಕಶಕ್ತಿಯನ್ನು ಕೊಟ್ಟು ಕಾರಣನಾಗಿಯೂ, ಕಾರ್ಯದಲ್ಲಿ ಪರಿಣಾಮ ಶಕ್ತಿಯನ್ನು ಕೊಟ್ಟು ಕಾರ್ಯನಾಗಿಯೂ ಶ್ರೀಹರಿಯು ನೆಲೆಸಿರುವನು–ಎಂಬ ಜ್ಞಾನವು ಭಾವಾದ್ವೈತವೆನಿಸುವುದು.

**ಕ್ರಿಯಾದ್ವೈತ :–** ಗುಣಪೂರ್ಣನಾದ ನಾರಾಯಣನ ಚರಣಾರವಿಂದದಲ್ಲಿ ಮನಸ್ಸು, ವಚನ, ಶರೀರಗಳಿಂದ ಭಕ್ತಿಪೂರ್ವಕವಾಗಿ ಮಾಡಿದ ಸಕಲ ಶುಭಕರ್ಮಗಳ ಫಲವನ್ನೂ ಅರ್ಪಿಸುವುದೇ ಕ್ರಿಯಾ ದ್ವೈತವೆನಿಸುವುದು.

**ದ್ರವ್ಯಾದ್ವೈತ :–** ತಾನು, ತನ್ನ ದಾರಾ ಪುತ್ರಾದಿಗಳು, ಧನ ಆರಾಮಾದಿ ಸರ್ವವೂ ಸದಾ ಈಶಾಧೀನ ಹಾಗೂ ಸಕಲ ಜೀವರೂ ಶ್ರೀಶಾಧೀನರು. ಅವರ ಅರ್ಥಕಾಮಾದಿಗಳೆಲ್ಲವೂ ಆ ಪ್ರಭುವಿನ ಅಧೀನವಾಗಿವೆ ಎಂದು ತಿಳಿಯುವುದೇ ದ್ರವ್ಯಾದ್ವೈತವೆನಿಸುವುದು.

ಶ್ರೀಹರಿಗುರುಗಳಲ್ಲಿ ಭಕ್ತಿಯುಳ್ಳ ಮನುಷ್ಯನು ಗೃಹಸ್ಥನೇ ಆಗಿದ್ದರೂ ವೇದ ವಿಹಿತಗಳಾದ, ಆಪತ್ಕಾಲ ಅನಾಪತ್ಕಾಲಗಳಲ್ಲಿ ವಿಹಿತಗಳಾದ ತನ್ನಾಶ್ರಮೋಚಿತ ಪೂಜೆ, ಉಪಾಸನೆಗಳಿಂದ ಶ್ರೀಹರಿಯನ್ನು ಸೇವಿಸುತ್ತಾ ಇದ್ದರೆ ಅವನು ಅಪರೋಕ್ಷ ಜ್ಞಾನವನ್ನು ಹೊಂದಿ ಕೊನೆಗೆ ಮೋಕ್ಷವನ್ನು ಹೊಂದುವನು.

ಧರ್ಮರಾಜನೇ ! ನೀನು ಶ್ರೀಕೃಷ್ಣಪಾದಪಂಕೇರುಹಸೇವಾಪುಣ್ಯದಿಂದ ದಿಕ್ಪಾಲಕರನ್ನೂ ಗೆದ್ದುಬಿಟ್ಟೆ, ರಾಜಸೂಯವನ್ನು ಮಾಡಿದೆ. ಸಕಲ ಸಂಕಟ ಗಳಿಂದಲೂ ಪಾರಾದೆ. ಮಹಾಮಹಿಮನಾದ ನಮ್ಮ ಕೃಷ್ಣನ ಭಕ್ತರೆಲ್ಲರೂ ದೊಡ್ಡವರೇ. ಅವರ ಸೇವೆಯು ಮಹಾಫಲಕಾರಿಯಾಗುವಂತೆ ಅವರ ದ್ರೋಹವೂ ಅಷ್ಟೇ ಅನರ್ಥಕಾರಿ.

ನಾನು ಪೂರ್ವಬ್ರಹ್ಮಕಲ್ಪದಲ್ಲಿ ಉಪಬರ್ಹಣನೆಂಬ ಗಂಧರ್ವನಾಗಿದ್ದೆನು. ರೂಪ, ಸೌಕುಮಾರ್ಯ, ಮಾಧುರ್ಯ, ಸೌಗಂಧ್ಯಾದಿ ಗುಣಭರಿತನಾಗಿ ಗಂಧರ್ವರಿಗೆಲ್ಲ ಅಚ್ಚುಮೆಚ್ಚಾಗಿದ್ದೆ. ಸ್ತ್ರೀಯರಲ್ಲಿಯೇ ನನ್ನ ಓಡಾಟ, ಆಟಪಾಟ ಕುಣಿತಗಳು.

ಆದ್ದರಿಂದ ಸುಂದರ ತರುಣೀ ಲಂಪಟನಾಗಿದ್ದೆ. ಒಂದುಸಲ ವಿಶ್ವಸೃಜ್ಞಾನಿಗಳು ದೇವ ಸತ್ರಯಾಗದಲ್ಲಿ ಗಾಯನಕ್ಕಾಗಿ ಕರೆಸಿದರು. ನಾನು ಪ್ರಮದೆಯರಿಂದ ಕೂಡಿ ಸಭೆ ಯಲ್ಲಿ ಕುಳಿತು, ದೇವರ ನಾಮವನ್ನು ಹಾಡದೆ ಶೃಂಗಾರಪದಗಳನ್ನು ಹಾಡಿಬಿಟ್ಟೆ. ಅದು ದೇವಹೇಲನವಾಗಿ ಹೋಯಿತು. ಮಹಾತ್ಮರು ಅದನ್ನು ಕಂಡು ಕುಪಿತರಾಗಿ "ಎಲ ದುಷ್ಟನೇ ! ಮದಮತ್ತನಾಗಿ ನಮ್ಮನ್ನು ತಿರಸ್ಕರಿಸಿದ ನೀನು ಶೂದ್ರನಾಗಿ ಹುಟ್ಟು" ಎಂದು ಶಪಿಸಿದರು. ಅದರಂತೆ ನಾನು ದಾಸೀಪುತ್ರನಾಗಿ ಹುಟ್ಟಿದೆ. ಆದರೆ ಆಜನ್ಮದಲ್ಲಿಯೂ ಶ್ರೀಹರಿಯ ಅನುಗ್ರಹದಿಂದ ನನಗೆ ಬ್ರಹ್ಮಜ್ಞಾನಿಗಳ ಸೇವೆಯು ದೊರಕಿತು. ಆ ಮಹತ್ಸೇವಾಫಲದಿಂದ ಈಗ ಬ್ರಹ್ಮದೇವರ ಪುತ್ರ ನಾಗಿರುವೆನು.

ಧರ್ಮರಾಜನೇ ! ನಿನಗೆ ಗೃಹಸ್ಥಧರ್ಮವನ್ನು ವರ್ಣಿಸಿರುವೆನು. ಇದು ಪಾಪನಾಶಕವೂ, ಶ್ರೀಹರಿಯ ಪ್ರೀತಿಸಾಧಕವೂ ಆಗಿದೆ. ಗೃಹಸ್ಥನು ಈ ರೀತಿ ನಡೆದರೆ ಒಳ್ಳೆಯ ಸಂನ್ಯಾಸಿಗಳಿಗೆ ದೊರೆಯುವ ಮೋಕ್ಷವು ದೊರೆತು ಸುಖಿ ಯಾಗಿರುವನು.

ಧರ್ಮರಾಜನೇ ! ಲೋಕದಲ್ಲಿ ನಿಮಗಿಂತ ಧನ್ಯರು ಯಾರು ? ನಿಮ್ಮ ಮನೆಯಲ್ಲಿ ಗೋವಿಂದನು ಇರುವುದರಿಂದ ಲೋಕಪಾವನರಾದ ಜ್ಞಾನಿಗಳು ತಾವಾಗಿ ನಿಮ್ಮ ಮನೆಗೆ ಬರುತ್ತಿರುವರು. ಹಾಗೆ ಬಂದವರಿಗೆ ಹರಿದರ್ಶನ ಭಾಗ್ಯವು ದೊರೆಯುವುದು ಪರಬ್ರಹ್ಮನು ಮನುಜರೂಪದಿಂದ ಅವತರಿಸಿ ಶ್ರೀಕೃಷ್ಣನೆಂದು ಪ್ರಖ್ಯಾತನಾಗಿರುವನು. ಬ್ರಹ್ಮಾದಿಗಳೂ ಕೂಡ ಇವನ ಅನಂತ ಕಲ್ಯಾಣ ಗುಣಾತ್ಮಕ ದಿವ್ಯರೂಪವನ್ನು ಅರಸಿ ಅರಸಿ ಪೂರ್ಣವಾಗಿ ಕಾಣಲಾರದೆ ಭಕ್ತಿಯಿಂದ ತಲೆಬಾಗಿ ನಮಿಸುವರು. ಸನಕಾದಿಗಳಿಂದ ಜಿಜ್ಞಾಸ್ಯನೂ, ನಿರ್ದೋಷನೂ, ಪ್ರಾಕೃತಶರೀರ ರಹಿತನೂ, ಸುಖಜ್ಞಾನಭರಿತನೂ ಆದ ಶ್ರೀಹರಿಗೆ ನಮಸ್ಕಾರ !

ಶ್ರೀಕೃಷ್ಣನು ನಿಮ್ಮಲ್ಲಿ ಮಾಡಿದ ಅನುಗ್ರಹವನ್ನು ನೋಡಿ ಆನಂದಾಶ್ಚರ್ಯ ರಸಮಗ್ನನಾಗಿರುವೆನು. ಇವನು ನಿಮಗೆ ಪ್ರಿಯಮಿತ್ರನೂ, ದೂತನೂ, ಬಂಧುವೂ, ಭಾವನೂ, ಸ್ವಾಮಿಯೂ, ಶಾಸಕನೂ, ಗುರುವೂ ಮತ್ತು ಪೂಜಕನೂ ಆಗಿ ವಿಶೇಷ ಫಲವನ್ನು ನಿಮಗೆ ದಯಪಾಲಿಸಿದನು. ಇವನನ್ನು ಜ್ಞಾನದಿಂದಲೇ ಪೂಜಿಸಬೇಕು. ವಿರಕ್ತಿಯಿಂದಲೇ ಭಜಿಸಬೇಕು. ಭಕ್ತಿಯಿಂದಲೇ ಭಾವಿಸಬೇಕು. ನೀನು ಕೇಳಿದ್ದಕ್ಕೆ ನಾನು ಹೇಳಿದ ಭಾಗವತಫಲವನ್ನು ಈ ಕೃಷ್ಣನಿಗೇ ಸಮರ್ಪಿಸಿ ನಮಸ್ಕರಿಸುವೆನು !!!

**ಶುಕ :–** ಧರ್ಮರಾಜನು ನಾರದರಿಂದ ಧರ್ಮಗಳನ್ನು ಕೇಳಿ ತೃಪ್ತನಾಗಿ ಭಕ್ತಿಯಿಂದ ಶ್ರೀಕೃಷ್ಣನನ್ನೂ ಬಳಿಕ ನಾರದರನ್ನೂ ಪೂಜಿಸಿದನು. ನಾರದರು

ಶ್ರೀಕೃಷ್ಣ ಮತ್ತು ಧರ್ಮರಾಜನ ಅನುಮತಿಯನ್ನು ಪಡೆದು ಹೊರಟುಹೋದರು ಧರ್ಮರಾಜನು ಶ್ರೀಕೃಷ್ಣನೇ ಪರಬ್ರಹ್ಮನೆಂದು ಕೇಳಿ "ಇವನು ನಮ್ಮ ಜೊತೆಯಲ್ಲಿಯೇ ಇರುವನಲ್ಲ !" ಎಂದು ಆಶ್ಚರ್ಯಪಟ್ಟನು

ಶ್ಲೋಕ ॥ ಇತಿ ದಾಕ್ಷಾಯಣೀನಾಂ ತೇ ಪೃಥಗ್ವಂಶಾಃ ಪ್ರಕೀರ್ತಿತಾಃ
ದೇವಾಸುರಮನುಷ್ಯಾದ್ಯಾ ಲೋಕಾ ಯತ್ರ ಚರಾಚರಾಃ ॥ ೪೮/೧೬ ॥

ಪರೀಕ್ಷಿದ್ರಾಜನೇ ! ಯಾವ ವಂಶಗಳಲ್ಲಿ ಸುರಾಸುರ ನರಾದಿಗಳೂ, ಅವರ ವಂಶಗಳಾದ ಸ್ಥಾವರ ಜಂಗಮಗಳು ಹುಟ್ಟಿದುವೋ ಆ ದಕ್ಷಪುತ್ರಿಯರ ವಂಶಗಳನು ಈಗ ಹೇಳಿದ ಪ್ರಕಾರ ಶಾಖೋಪಶಾಖಾ ಭೇದದಿಂದ ವರ್ಣಿಸಿರುವೆನು.

## ಹದಿನಾರನೆಯ ಅಧ್ಯಾಯ ಮುಗಿದುದು

## ಸಪ್ತಮಸ್ಕಂಧ ಸಮಾಪ್ತ

# ಅಷ್ಟಮಸ್ಕಂಧಾರಂಭ

**ರಾಜೋವಾಚ :–**

ಶ್ಲೋಕ ॥ ಸ್ವಾಯಂಭುವಸ್ಯೇಹ ಮನೋರ್ವಂಶೋಯಂ ವಿಸ್ತರಾತ್ ಶ್ರುತಃ ।
ಯತ್ರ ವಿಶ್ವಸೃಜಾಂ ಸರ್ಗೋ ಮನೂನನ್ಯಾನ್ ವದಸ್ವ ನಃ ॥೧॥

ಶುಕಾಚಾರ್ಯರೇ! ನಾಲ್ಕನೆಯ ಸ್ಕಂಧದ ಆರಂಭದಲ್ಲಿ ಸ್ವಾಯಂಭುವ ಮನುವಿನ ವಂಶವನ್ನು ವಿಸ್ತಾರವಾಗಿ ಕೇಳಿದೆನು. ಹಾಗೂ ಆ ಮನ್ವಂತರದಲ್ಲಿ ಮರೀಚಿ ಮೊದಲಾದ ಪ್ರಜೇಶ್ವರರಿಂದ ಆಕೂತ್ಯಾದಿ ಮನುರಾಜನ ಪುತ್ರಿಯರಲ್ಲಿ ಹುಟ್ಟಿದ ಪುತ್ರ ಪೌತ್ರಾದಿಗಳ ವಿಷಯವನ್ನೂ ಕೇಳಿದೆ. ಈಗ ಇತರ ಮನುಗಳ ಚರಿತ್ರೆಯನ್ನೂ, ಆಯಾ ಮನ್ವಂತರಗಳಲ್ಲಿ ಮಾಡಿದ ಶ್ರೀಹರಿಯ ಅವತಾರ ಚರಿತ್ರೆಗಳನ್ನೂ ತಿಳಿಸಿ.

**ಶುಕ :–** ಸ್ವಾಯಂಭುವಿನ ಮನ್ವಂತರದಲ್ಲಿ ಅವತರಿಸಿದ ಯಜ್ಞನಾಮಕ ಹರಿಯ ಚರಿತ್ರೆಯನ್ನು ಈಗ ಹೇಳುವೆನು. ಸ್ವಾಯಂಭುವನು ವಿರಕ್ತನಾಗಿ ಸಾಮ್ರಾಜ್ಯಾಧಿಪತ್ಯವನ್ನು ಬಿಟ್ಟು ಪತ್ನಿಯಾದ ಶತರೂಪಾ ದೇವಿಯೊಡನೆ ಹೊರಟು ಬಂದು ಸುನಂದಾನದಿಯ ದಡದಲ್ಲಿ ನೂರುವರ್ಷ ಪರ್ಯಂತ, ಒಂದೇಕಾಲಿನಿಂದ ನಿಂತುಕೊಂಡು ಘೋರ ತಪಸ್ಸನ್ನು ಮಾಡುತ್ತ ಶ್ರೀ ಪರಮಾತ್ಮನನ್ನು ಸ್ತುತಿಸಿದನು :

"ಶ್ರೀ ಪರಮಾತ್ಮನಿಂದಲೇ ಪ್ರೇರಿತನಾದ ಸೂರ್ಯನು ಜಗತ್ತನ್ನು ಬೆಳಗಿಸು ತ್ತಾನೆ. ಜೀವರಿಗೆ ಮೋಕ್ಷಸಾಧಕವಾದ ಜ್ಞಾನವೂ ಶ್ರೀಹರಿಯಿಂದಲೇ ಉಂಟಾಗು ವುದು. ಸೂರ್ಯನು ನಿದ್ರಿಸುವಾಗಲೂ ಅವನ ಅಂತರ್ಯಾಮಿಯಾದ ನಾರಾಯಣನು ಎಚ್ಚತ್ತೇ ಇರುವನು. ಸೂರ್ಯನೂ ಅವನ ನಿಯಾಮಕನಾದ ನಾರಾಯಣನನ್ನು ಸಂಪೂರ್ಣವಾಗಿ ತಿಳಿಯಲಾರನು. ಪರಮಾತ್ಮನು ಸೂರ್ಯನನ್ನು ಚೆನ್ನಾಗಿ ತಿಳಿದಿರುವನು.

ಶ್ಲೋಕ ॥ ಆತ್ಮಾವಾಸ್ಯಮಿದಂ ವಿಶ್ವಂ ಯಜ್ಜಗತ್ಯಾಂ ಜಗನ್ಮನಃ ।
ತೇನ ತ್ಯಕ್ತೇನ ಭುಂಜೀಥಾ ಮಾಗೃಧಃ ಕಸ್ಯಚಿದ್ಧನಂ ॥೧೦/ಅ. ೧॥

ವಾಸುದೇವನು ಜೀವರ ಪ್ರವೃತ್ತಿಗಾಗಿ ಸಕಲರಲ್ಲಿಯೂ ಪ್ರವೇಶಿಸಿರುವನು. ಅಷ್ಟೇ ಅಲ್ಲ. ಈಶ್ವರಾಧೀನವಾದ ಪ್ರಕೃತಿಯಲ್ಲಿ ಸ್ಥಾವರ ಜಂಗಮಾತ್ಮಕವಾದ

ಜಗತ್ತು ಆಶ್ರಯಿಸಿದೆ. (ಇದರಿಂದ ಜೀವ ಮತ್ತು ಜಡವೆಲ್ಲವೂ ಅಸ್ವತಂತ್ರಗಳು ಎಂದು ಭಾವ.) ಮನಸ್ಸೇ ! ಈಶ್ವರನೇ ಸ್ವತಂತ್ರನಾದ ಕಾರಣ ಅವನು ಕೊಟ್ಟಿರು ವಷ್ಟರಲ್ಲಿಯೇ ತೃಪ್ತನಾಗಿ ಬದುಕು. ಯಾವ ರಾಜಾದಿಗಳಿಂದಲೂ ಧನವನ್ನು ಬಯಸಬೇಡ. ಕಸ್ಯ ಅಂದರೆ ಪರಮಾನಂದ ರೂಪಿಯಾದ ಶ್ರೀಹರಿಯ, ಚಿದ್ಧನಂ ಅಂದರೆ ಜ್ಞಾನಾನಂದಾದಿ ಗುಣವೆಂಬ ಧನವನ್ನು ಬಯಸಬೇಡ. ಅಂದರೆ ಐಕ್ಯ ನಾಗುವೆನೆಂಬ ಅಪೇಕ್ಷೆ ಅನರ್ಥಕರವೆಂದು ಭಾವ.

ಶ್ರೀಹರಿಯು ಸಕಲವನ್ನೂ ಪ್ರತ್ಯಕ್ಷವಾಗಿ ತಿಳಿಯುವನು. ಅವನ ಪ್ರಸಾದ ವಿಲ್ಲದೆ ಅವನನ್ನು ತಿಳಿಯಲಾಗುವುದಿಲ್ಲ. ಜನರೇ ! ಅಕ್ಷೀಣ ಜ್ಞಾನಿಯೂ, ಸರ್ವತ್ರ ವ್ಯಾಪ್ತನೂ, ಪೂರ್ಣಾನಂದನೂ ಆದ ಶ್ರೀಹರಿಯನ್ನು ಭಜಿಸಿರಿ !

ಶ್ರೀಹರಿಯು ಉತ್ಪತ್ತಿನಾಶರಹಿತನು. ಅವನ ಹೊರತು ಸ್ವತಂತ್ರನು ಮತ್ತೊಬ್ಬನಿಲ್ಲ. ಅವನಿಗಿಂತ ಉತ್ತಮನೂ ಇಲ್ಲ. ಅವನು ಸರ್ವತ್ರವ್ಯಾಪ್ತನಾಗಿರು ವುದರಿಂದ ಅವನಿಗೆ ಒಳಗೆ ಹೊರಗೆ ಎಂಬುದಿಲ್ಲ. ಅವನಿಂದಲೇ ಈ ಜಗತ್ತಿಗೆ ಸೃಷ್ಟ್ಯಾದಿಗಳು. ವಿಶ್ವಸತ್ತೆ ಅಂದರೆ ಸ್ಥಿತಿಯೂ ಅವನ ಅಧೀನ. ಇಂತಹ ಹರಿಯೇ ಸತ್ಯಶಬ್ದ ವಾಚ್ಯನಾದ ಪರಬ್ರಹ್ಮನು.

ಪರಬ್ರಹ್ಮನಾಮಕ ಹರಿಯು ಲಯಕಾಲದಲ್ಲಿ ಜಗತ್ತನ್ನು ತನ್ನ ಉದರದಲ್ಲಿ ಸ್ಥಾಪಿಸಿರುವನು. ಸೃಷ್ಟಿಕಾಲದಲ್ಲಿ ಜಗತ್ತಿನೊಳಗೆ ಪ್ರವಿಷ್ಟನಾಗುವುದರಿಂದ ಜಗತ್ತನ್ನೇ ಶರೀರವಾಗಿ ಉಳ್ಳವನು ಎನಿಸುವನು. ಶ್ರೀಹರಿಯು ಪುರುಹೂತನು. ಅಂದರೆ ಬಹುನಾಮಗಳನ್ನುಳ್ಳವನು. ಈಶನು, ಸತ್ಯಂ ಅಂದರೆ ಸಾಧುಗುಣ ಪೂರ್ಣನು. ಪರಂಜ್ಯೋತಿ ಅಂದರೆ ಮುಕ್ತಪ್ರಾಪ್ಯ ಪರಂಜ್ಯೋತಿ ಶಬ್ದವಾಚ್ಯನು. ಸೂರ್ಯನೂ ಪರಂಜ್ಯೋತಿ ಅಲ್ಲವೆ ? ಎಂದು ಕೇಳಬಹುದು. ಆದರೆ ಶ್ರೀಹರಿಯು ಅಜಃ ಅಂದರೆ ಹುಟ್ಟಿಲ್ಲದವನು. ಪುರಾಣಃ ಅಂದರೆ ಅಂತರ್ಯಾಮಿಯು. ರಮಾದೇವಿ ಯಿಂದ ಪ್ರೇರಿತವಾದ ಜಡಪ್ರಕೃತಿಯಿಂದ ಚತುರ್ಮುಖಾದಿ ಜೀವರ ಸೃಷ್ಟಿಯೇ ಮೊದಲಾದ ಎಂಟಕ್ಕೂ ಸ್ವತಂತ್ರಕರ್ತನು. ಪ್ರಕೃತಿಬದ್ಧನಾಗದೇ ಪ್ರಳಯದಲ್ಲಿ ಸೃಷ್ಟ್ಯಾದಿ ವ್ಯಾಪಾರರಹಿತನಾಗಿರುವನು.

ಇಂತಹ ಪರಮಾತ್ಮನನ್ನು ಹೊಂದಲು ಸಾಧನವೇನೆಂದರೆ :– ಲೋಕಸಂಗ್ರಹ ಕ್ಕಾಗಿ ಋಷಿಗಳು ಮೊದಲು ದುಷ್ಕರ್ಮ ಪರಿಹಾರಕ್ಕಾಗಿ ಕರ್ಮವನ್ನು ಮಾಡುವರು ಎಂದು ತಿಳಿದು ಪುರುಷನು ಜ್ಞಾನವನ್ನು ಹೊಂದಬೇಕೆಂದು ಬಯಸಿ ಜ್ಯೋತಿಷ್ಟೋ ಮಾದಿ ಕರ್ಮವನ್ನು ಮಾಡಿ ದುಷ್ಕರ್ಮಗಳನ್ನು ಕಳೆದುಕೊಂಡು, ನಿಷ್ಕಾಮ ಕರ್ಮ ವನ್ನು ಮಾಡಿ ಜ್ಞಾನವನ್ನು ಪಡೆಯುವನು. ಜ್ಞಾನಿಗಳು ಮಾತ್ರವೇ ಲೋಕಸಂಗ್ರಹ

ಕ್ಕಾಗಿ ಕರ್ಮ ಮಾಡುವವರೆಂದಲ್ಲ. ಶ್ರೀ ಪರಮಾತ್ಮನೂ ಮಾಡುವನೆಂದು ಹೇಳು ತ್ತಾರೆ :– ಶ್ರೀಹರಿಯು ಸ್ವರೂಪಾನಂದಾದ್ಯನುಭವ ಲಾಭದಿಂದ ಅವಾಪ್ತ ಸಮಸ್ತ ಕಾಮನಾಗಿದ್ದರೂ, ಲೋಕ ಸಂಗ್ರಾಹಾರ್ಥವಾಗಿ ಕರ್ಮವನ್ನು ಸ್ವತಃ ಮಾಡುತ್ತಾ ಜ್ಞಾನಿಗಳಿಂದಲೂ ಮಾಡಿಸುತ್ತಾ ನಿಷ್ಕಾಮ ಕರ್ಮವನ್ನು ಮೂಢರಿಗೆ ಶಿಕ್ಷಿಸುವನು. ಇಂತಹ ಪ್ರಭುವನ್ನು ಮರೆಹೋಗುವೆನು.

ಈ ಪ್ರಕಾರ ಸ್ತುತಿಸತಕ್ಕ ಸ್ವಾಯಂಭುವನನ್ನು ಅಸುರರೂ, ಯಾತುಧಾನರೂ ತಿನ್ನಬೇಕೆಂದು ಓಡಿಬಂದರು. ಆಗ ಆಕೂತಿಯ ಪುತ್ರನೆನಿಸಿದ ಯಜ್ಞನಾಮಕ ಹರಿಯು ಯಾಮರೆಂಬ ದೇವತೆಗಳಿಂದ ಸಹಿತವಾಗಿ ಬಂದು ಆ ಅಸುರರನ್ನೆಲ್ಲ ಸಂಹರಿಸಿ, ಇಂದ್ರಪದವಿಯನ್ನಾಳುತ್ತ ಸ್ವರ್ಗವನ್ನೂ ರಕ್ಷಿಸಿದನು.

ಒಂದನೆಯ ಮನ್ವಂತರದಲ್ಲಿ ಸ್ವಾಯಂಭುವನೇ ಮನುವು. ಪ್ರಿಯವ್ರತ, ಉತ್ತಾನಪಾದರೆಂಬುವರೇ ಆ ಮನುವಿನ ಮಕ್ಕಳು. ಯಾಮಾದಿಗಳೇ ದೇವತೆಗಳು. ಮರೀಚಿ ಮೊದಲಾದವರೇ ಸಪ್ತಋಷಿಗಳು. ಆ ಮನ್ವಂತರದಲ್ಲಿ ಹರಿಯ ಅವತಾರ ಯಜ್ಞನಾಮಕನು.

ಎರಡನೆಯ ಮನ್ವಂತರದಲ್ಲಿ ಅಗ್ನಿಪುತ್ರನಾದ ಸ್ವಾರೋಚಿಷನು ಮನುವು. ದ್ಯುಮಂತ, ಸುಷೇಣ, ರೋಚಿಷ್ಮತ್ ಮೊದಲಾದವರು ಮನುಪುತ್ರರು. ಮುಖ್ಯ ವಾಯುದೇವರ ಅವತಾರನಾದ ರೋಚನ ಎಂಬುವನು ಇಂದ್ರನು. ಊರ್ಜಸ್ತಂಭನೇ ಮೊದಲಾದವರು ಸಪ್ತರ್ಷಿಗಳು. ತುಷಿತಾದಿಗಳು ದೇವತೆಗಳು. ವೇದಶಿರಸ್ಸೆಂಬ ಋಷಿಯಿಂದ ಅವನ ಪತ್ನಿಯಾದ ತುಷಿತಾ ಎಂಬುವಳಲ್ಲಿ ವಿಭು ನಾಮಕನಾಗಿ ಹರಿಯು ಅವತರಿಸಿದನು. ಈ ವಿಭುವಿನ ಬ್ರಹ್ಮಚರ್ಯೆಯನ್ನೇ ಎಂಭತ್ತು ಸಾವಿರ ಋಷಿಗಳು ಅನುಸರಿಸುತ್ತಿದ್ದರು.

ಮೂರನೆಯ ಮನ್ವಂತರದಲ್ಲಿ ಪ್ರಿಯವ್ರತನಪುತ್ರ ಉತ್ತಮನು ಮನುವು. ಪವನ, ಸೃಂಜಯಾದಿಗಳು ಮನುಪುತ್ರರು. ವಸಿಷ್ಠರ ಪುತ್ರರಾದ ಪ್ರಮದಾದಿಗಳು ಸಪ್ತರ್ಷಿಗಳು. ಸತ್ಯ ಮೊದಲಾದವರು ದೇವತೆಗಳು. ಸತ್ಯಜಿತ್ ಎಂಬುವನು ಇಂದ್ರನು. ಯಮಧರ್ಮ ಮತ್ತು ಸೂನೃತಾದೇವಿ ಎಂಬ ದಂಪತಿಗಳಲ್ಲಿ ಸತ್ಯಸೇನ ಎಂಬ ನಾಮದಿಂದ ಹರಿಯು ಅವತರಿಸಿ ಯಕ್ಷರಾಕ್ಷಸರನ್ನು ಸಂಹರಿಸಿದನು.

ನಾಲ್ಕನೆಯ ಮನ್ವಂತರದಲ್ಲಿ ಉತ್ತಮನ ತಮ್ಮನಾದ ತಾಪಸನು ಮನುವು. ಪೃಥು, ಖ್ಯಾತಿ, ನರ ಮೊದಲಾದವರು ಹತ್ತುಮಂದಿ ಮನುವಿನ ಮಕ್ಕಳು. ಸತ್ಯಕಾದಿ ಗಳು ದೇವತೆಗಳು. ಅಶ್ವಿನೀ ದೇವತೆಗಳಲ್ಲಿ ಒಬ್ಬನಾದ ನಾಸತ್ಯನೆಂಬುವನು ತ್ರಿಶಿಖ

ನಾಮಕ ಇಂದ್ರನು. ಜ್ಯೋತಿರ್ವ್ಯೋಮಾದಿಗಳು ಸಪ್ತಋಷಿಗಳು. ಹರಿಮೇಧನೆಂಬ ನಾಮಾಂತರವುಳ್ಳ ಪ್ರಿಯವ್ರತರಾಜನಿಗೆ ಹರಿಣೀ ಎಂಬ ಅವನ ಪತ್ನಿಯಲ್ಲಿ ಹರಿ ನಾಮಕನಾಗಿ ಭಗವಂತನು ಅವತರಿಸಿ ಗಜೇಂದ್ರನನ್ನು ಮೊಸಳೆಯಿಂದ ಬಿಡಿಸಿ ರಕ್ಷಿಸಿದನು.

## ಮೊದಲನೆಯ ಅಧ್ಯಾಯ ಮುಗಿದುದು

ಶುಕ :– ತ್ರಿಕೂಟವೆಂಬ ಪರ್ವತವು ಕ್ಷೀರಸಮುದ್ರದ ಮಧ್ಯದಲ್ಲಿದೆ. ಅದಕ್ಕೆ ಬೆಳ್ಳಿ, ಕಬ್ಬಿಣ ಮತ್ತು ಬಂಗಾರದ ಮೂರು ಶಿಖರಗಳಿವೆ. ಅದರ ತಗ್ಗು ಜಾಗದಲ್ಲಿ ಋತುಮಂತವೆಂಬ ವರುಣನ ಉದ್ಯಾನವಿದೆ. ಆ ಉದ್ಯಾನದಲ್ಲಿ ಕುಮುದಾದಿ ಪುಷ್ಪಗಳ ವಾಸನೆಯಿಂದ ಕೂಡಿದ ಒಂದು ಸರೋವರವಿದೆ. ಆ ವನದಲ್ಲಿ ಪರಿವಾರ ಸಹಿತವಾದ ಒಂದು ಸಲಗವಿತ್ತು. ಅದನ್ನು ಕಂಡರೆ ಹುಲಿ ಸಿಂಹಗಳೇ ಹೆದರಿ ಓಡುತ್ತಿದ್ದವು. ಒಂದುದಿನ ಬೇಸಿಗೆಯ ಬೇಗೆಯಿಂದ ಬಾಯಾರಿ ಈ ಸಲಗವು ಪರಿವಾರದೊಂದಿಗೆ ಸರೋವರಕ್ಕೆ ಬಂದು ನೀರನ್ನು ಕುಡಿದು ನೀರಿನಲ್ಲಿ ಕ್ರೀಡಿಸು ತ್ತಿದ್ದಾಗ ದೈವಪ್ರೇರಣೆಯಿಂದ ಒಂದು ದೊಡ್ಡ ಮೊಸಳೆಯು ಆ ಆನೆಯ ಕಾಲನ್ನು ಹಿಡಿದುಬಿಟ್ಟಿತು. ಆ ಗಜರಾಜನು ಅದರಿಂದ ಬಿಡಿಸಿಕೊಳ್ಳಲು ಶಕ್ತನಾಗಲಿಲ್ಲ. ಪರಿವಾರದ ಆನೆಗಳು ಎಷ್ಟು ಪ್ರಯತ್ನಪಟ್ಟರೂ ಮೊಸಳೆಯು ಗಜರಾಜನ ಕಾಲನ್ನು ಬಿಡಲಿಲ್ಲ. ಆನೆ ಮತ್ತು ಮೊಸಳೆಗಳೆರಡೂ ಪರಸ್ಪರ ಸೆಳೆದಾಡುವುದರಲ್ಲಿ ಸಾವಿರ ವರ್ಷಗಳು ಕಳೆದುವು. ಆನೆಗೆ ಬಲ ಕುಗ್ಗಿತು. ನೀರೊಳಗಿರುವುದರಿಂದ ಮೊಸಳೆಗೆ ಬಲ ಹೆಚ್ಚುತ್ತ ಬಂದಿತು. ಕೊನೆಗೆ ಆ ಗಜರಾಜನಿಗೆ ಜಾತಿಸ್ಮರಣೆ ಬಂದಿತು. ತನಗೆ ರಕ್ಷಕರಾರೂ ಇಲ್ಲವೆಂದು ನಿಶ್ಚಯಿಸಿ ಭಕ್ತರ ವಿಪತ್ಪರಿಹಾರಕನಾದ ಶ್ರೀ ಪರಮಾತ್ಮ ನನ್ನು ಶರಣು ಹೊಂದಬೇಕೆಂಬ ಜ್ಞಾನವು ಉದಯವಾಯಿತು.

## ಎರಡನೆಯ ಅಧ್ಯಾಯ ಮುಗಿದುದು

ಗಜೇಂದ್ರನು ಸ್ಥಿರಮನಸ್ಕನಾಗಿ ಪೂರ್ವಜನ್ಮದಲ್ಲಿ ಗುರ್ವಾದಿಗಳಿಂದ ಉಪದಿಷ್ಟ ವಾಗಿದ್ದು ಸ್ಮರಣೆಗೆ ಬಂದ ಮಂತ್ರವನ್ನು ಜಪಿಸಿದನು :–

ಓಂ ನಮೋ ಭಗವತೇ ತಸ್ಮೈ ಯತ ಏತಚ್ಚಿದಾತ್ಮಕಂ ।
ಪುರುಷಾಯಾದಿಬೀಜಾಯ ಪರೇಶಾಯ ಚ ಧೀಮಹಿ ॥೨॥

ಅರ್ಥ :– ಯಾವನಿಂದ ಚೇತನಸಮುದಾಯವು ಅಭೀಷ್ಟವನ್ನು ಹೊಂದು ವುದೋ ಅಂತಹ ಪೂರ್ಣಷಡ್ಗುಣನೂ, ಮೂಲಕಾರಣನೂ, ರಮಾದಿನಿಯಾಮಕನೂ ಆದ ವಾಸುದೇವನಿಗೆ ನಮಸ್ಕಾರ ! ಅವನನ್ನು ಧ್ಯಾನಿಸುವೆವು.

ಚೇತನರೂಪವಾದ ಜಗತ್ತು ಯಾವನೊಳಗೆ ದೇಹಲಯವನ್ನು ಹೊಂದು ವುದೋ, ಯಾವನಿಂದಲೇ ಜಗತ್ತು ಹುಟ್ಟುವುದೋ ಮತ್ತು ರಕ್ಷಿತವಾಗುವುದೋ, ಯಾವನು ಸ್ವತಂತ್ರನಾಗಿ ಜಗತ್ತು ಪ್ರವರ್ತಿಸುವಂತೆ ಮಾಡುವನೋ, ಯಾವನು ಮುಕ್ತಾಮುಕ್ತ ಪ್ರಪಂಚಕ್ಕಿಂತ ಉತ್ತಮನೋ ಅಂತಹ ಶ್ರೀನಾರಾಯಣನನ್ನು ಶರಣು ಹೊಂದುವೆನು.

ಪ್ರಳಯ ಕಾಲದಲ್ಲಿ ತನ್ನ ಉದರದಲ್ಲಿಟ್ಟಿರುವ ಜಗತ್ತನ್ನು ನೋಡಬಲ್ಲವನೂ, ಸೃಷ್ಟಿ ಮತ್ತು ಸುಷುಪ್ತಿ ಕಾಲದಲ್ಲಿ ಜೀವರಿಗೆ ಕಾಣಿಸದಿರುವವನೂ, ತಾನು ಮಾತ್ರ ಈ ಜಗತ್ತೆಲ್ಲವನ್ನೂ ಸರ್ವದಾ ನೋಡುತ್ತಿರುವವನೂ, ತನಗೆ ತಾನೇ ಕಾರಣನೂ, ಅನನ್ಯಾಧೀನಸತ್ತೆ ಉಳ್ಳವನೂ, ಬ್ರಹ್ಮಾದಿಗಳ ಸೃಷ್ಟ್ಯಾದಿ ಕಾರಣನೂ ಮತ್ತು ಶ್ರೀತತ್ತ್ವಕ್ಕಿಂತ ಉತ್ತಮನೂ ಆಗಿರುವ ನಾರಾಯಣನು ನನ್ನನ್ನು ರಕ್ಷಿಸಲಿ !

ಕಾಲಕನಾಮಕ ಹರಿಯಿಂದ ಕಾರ್ಯಗಳಾದ ಲೋಕಗಳೇ ಮುಂತಾದುವು ಅವುಗಳಿಗೆ ಕಾರಣವಾದ ಪ್ರಕೃತಿಯಲ್ಲಿ ಲಯವಾಗಿ, ದುರ್ಗಾದೇವಿಯಿಂದ ಉಂಟಾದ ಅಂಧಕಾರದಲ್ಲಿ ಅದರ ಸಂಪರ್ಕವಿಲ್ಲದೆ ಶ್ರೀಹರಿಯು ಪ್ರಕಾಶಿಸುತ್ತಿರುವನು. ಇವನ ಸ್ವರೂಪವನ್ನು ದೇವತೆಗಳು, ಋಷಿಗಳು ಯಾರೂ ಪೂರ್ಣವಾಗಿ ತಿಳಿಯಲಾರರು. ಇಂತಹ ದುರ್ಜ್ಞೇಯ ಚರಿತ್ರನಾದ ಶ್ರೀಹರಿಯು ನನ್ನನ್ನು ರಕ್ಷಿಸಲಿ !

ಮನನಶೀಲ ಋಷಿಗಳು ಮಹಾಮಂಗಳಪ್ರದನಾದ ಇವನ ಸ್ವರೂಪವನ್ನು ಕಾಣಬೇಕೆಂದು ಬಯಸಿ ಪತ್ನೀಪುತ್ರಾದಿಗಳಲ್ಲಿನ ಮಮತೆಯನ್ನು ಬಿಟ್ಟು ಧ್ಯಾನಿಸು ತ್ತಾರೆ. ಹೀಗೆ ಜ್ಞಾನಿಧ್ಯೇಯನಾದ, ಸೂರ್ಯಾಂತರ್ಯಾಮಿಯಾದ ಶ್ರೀಹರಿಯು ನನ್ನನ್ನು ರಕ್ಷಿಸಲಿ !

ಶ್ರೀಹರಿಗೆ ಪ್ರಾಕೃತ ದೇಹಯೋಗವಿಲ್ಲ. ಕ್ಲೇಶಪ್ರದ ಕರ್ಮವಿಲ್ಲ. ಸ್ವರೂಪ ವನ್ನು ಸಂಪೂರ್ಣವಾಗಿ ತಿಳಿಸುವ ನಾಮಗಳಿಲ್ಲ. ಅಜ್ಞಾನ ಮತ್ತು ದುಃಖಾದಿಗಳಿಲ್ಲ. ಹೀಗಿದ್ದರೂ ಸಜ್ಜನರಿಗೆ ಸುಖವುಂಟು ಮಾಡುವುದಕ್ಕಾಗಿ, ಸ್ವೇಚ್ಛೆಯಿಂದ ರಾಮ ಕೃಷ್ಣಾದಿ ರೂಪದಿಂದವತರಿಸಿ ಪಾಲನಾದಿಗಳನ್ನು ಮಾಡುವನು. ಇಂತಹ ಭಗವಂತ ನಿಗೆ ನಮಸ್ಕಾರ !

ಬ್ರಹ್ಮಾದಿ ಮುಕ್ತಸ್ವಾಮಿಯೂ, ದೇಶಕಾಲ ಅಪರಿಚ್ಛಿನ್ನ ಶಕ್ತನೂ ಆದ ಪರಬ್ರಹ್ಮನಿಗೆ ನಮಸ್ಕಾರ ! ಪ್ರಾಕೃತ ಭೌತಿಕ ರೂಪರಹಿತ, ಅಪ್ರಾಕೃತ ನಿತ್ಯ ರೂಪ, ಅದ್ಭುತಕರ್ಮ ಮಾಡತಕ್ಕ ಶ್ರೀಹರಿಗೆ ನಮಸ್ಕಾರ ! ಸ್ವಪ್ರಕಾಶ, ಸಾಕ್ಷಾತ್ತಾಗಿ

ಸರ್ವವೀಕ್ಷಕ, ಚೇತನೋತ್ತಮ, ವಾಕ್, ಮನಸ್ಸು-ಚಿತ್ತಗಳಿಗೆ ಸಂಪೂರ್ಣವಾಗಿ ಗೋಚರಿಸದವನೂ ಆದ ಹರಿಗೆ ನಮಸ್ಕಾರ !

ನಿವೃತ್ತಿಧರ್ಮಕ್ಕೆ ಫಲವಾದ ಜ್ಞಾನಕ್ಕೇ ಗೋಚರ, ಮೋಕ್ಷಸ್ವಾಮಿ, ಪ್ರಾಕೃತ ಶರೀರದಿಂದ ಭೋಗ್ಯವಲ್ಲದ ಸುಖಜ್ಞಾನರೂಪಿಯೂ ಆದ ಹರಿಗೆ ನಮಸ್ಕಾರ !

ಶಾಂತನೆನಿಸಿದ ಸತ್ವಪ್ರವರ್ತಕ ವಾಸುದೇವ, ಘೋರನೆನಿಸಿದ ರಜಃಪ್ರವರ್ತಕ ಸಂಕರ್ಷಣ, ಮೂಢನೆನಿಸಿದ ತಮಃಪ್ರವರ್ತಕ ವರಾಹಾದಿರೂಪ, ಜ್ಞಾನಾನಂದಾದಿ ಗುಣಗಳನ್ನೂ ಸೃಷ್ಟ್ಯಾದಿ ಕರ್ಮಗಳನ್ನೂ ಉಳ್ಳವನು, ನಿರ್ವಿಶೇಷ ಅಂದರೆ ಸರ್ವೋತ್ತಮರಹಿತನು, ಜ್ಞಾನಘನ ಎಂದರೆ ಪೂರ್ಣಜ್ಞಾನ ಸ್ವರೂಪನೂ ಆದ ಶ್ರೀಹರಿಗೆ ನಮಸ್ಕಾರ !

ಅವ್ಯಕ್ತಾದಿ ತತ್ತ್ವಜ್ಞ, ಸರ್ವವ್ಯಾಪಿ, ಸಾಕ್ಷಿ, ಪೂರ್ಣಷಡ್ಗುಣ, ಜೀವಾಶ್ರಯ, ಜಡಚೇತನ ಪ್ರಕೃತಿಗಳಿಗಾಧಾರನಾದ ಶ್ರೀಹರಿಗೆ ನಮಸ್ಕಾರ ! ಇಂದ್ರಿಯ ಶಬ್ದಾದಿ ವಿಷಯಗಳ ಸಾಕ್ಷಾದ್ವೀಕ್ಷಕ, ಸರ್ವಜೀವ ಜ್ಞಾನಗಳಿಗೂ ಕಾರಣ, ದುರ್ಜನ ಸಂಗ ರಹಿತ, ನಿರ್ದುಷ್ಟಪ್ರಕಾಶ ರೂಪನೂ ಆದ ನಿನಗೆ ನಮಸ್ಕಾರ !

ಜಡಚೇತನ ಜಗತ್ಕರ್ತ, ಶರಣ ಸರ್ವದುಃಖ ಪರಿಹಾರಕ, ವೇದಾದಿ ಮುಖ್ಯ ತಾತ್ಪರ್ಯ ವಿಷಯ, ಮುಕ್ತಿಪ್ರದ, ಮುಕ್ತಾಶ್ರಯನಾದ ನಾರಾಯಣ! ನಮಸ್ಕಾರ !

ಸತ್ವಾದಿ ಗುಣವೆಂಬ ಅರಣಿಯಲ್ಲಿ ಅಡಗಿರುವ ಜ್ಞಾನವೆಂಬ ಅಗ್ನಿರಕ್ಷಕ ಮತ್ತು ವ್ಯಂಜಕ, ತ್ರಿಗುಣಗಳು ಉದ್ರೇಕ ಹೊಂದಿದರೂ ಮನೋವಿಕಾರವಿಲ್ಲದವನು, ವೈರಾಗ್ಯಭಕ್ತಿಸಹಿತವಾದ ಅಂತಃಕರಣವುಳ್ಳ ಯೋಗಿಗಳಿಂದ ಹೃದಯದಲ್ಲಿ ಧ್ಯಾನಿ ಸಲ್ಪಡುವವನು, ಜ್ಞಾನಮಯ ಶರೀರ, ಸರ್ವಸ್ವಾಮಿಯೂ ಆದ ನಾರಾಯಣನಿಗೆ ನಮಸ್ಕಾರ !

ನಾಲ್ಕು ಪುರುಷಾರ್ಥಗಳನ್ನು ಬಯಸುವವರು ನಿನ್ನನ್ನು ಭಜಿಸಿ, ನಿನ್ನ ಪ್ರಸಾದ ದಿಂದಲೇ ತಮ್ಮ ಅಭೀಷ್ಟವನ್ನು ಹೊಂದುವರು. ಮತ್ತು ಪುತ್ರಾದಿಗಳನ್ನು ಬಯಸು ವವರೂ ನಿನ್ನನ್ನೇ ಭಜಿಸಿ ಪುತ್ರರನ್ನು ಹೊಂದುವರು. ಭಕ್ತರಿಗೆ ಜ್ಞಾನಾನಂದಾತ್ಮಕ ದೇಹವನ್ನು ಕೊಡತಕ್ಕ ಅಪಾರಕರುಣೆಯುಳ್ಳ ನಾರಾಯಣನಾದ ನೀನು ಈ ದೇಹದ ಬಾಧೆಯನ್ನು ತಪ್ಪಿಸಿ ಬಳಿಕ ಈಪಾರ್ಥಿವ ದೇಹದಿಂದ ಬಿಡುಗಡೆ ಮಾಡು ಸ್ವಾಮಿ !

ಏಕಾಂತಭಕ್ತರು ಮೋಕ್ಷವನ್ನೂ ಒಲ್ಲದೆ ಅತ್ಯಾಶ್ಚರ್ಯಕರ, ಮಹಾಮಂಗಳ ಪ್ರದವಾದ ನಿನ್ನ ಚರಿತ್ರೆಯನ್ನು ಗಾನಮಾಡುತ್ತ ಆನಂದಪಡುವರು. ಅಂತಹ ಪರೇಶನನ್ನು ಸ್ತುತಿಸುವೆನು.

ಚತುರ್ವಿಧ ನಾಶರಹಿತ, ಪರಬ್ರಹ್ಮನಾಮಕ, ಚತುರ್ಮುಖಾದಿ ಮುಕ್ತ ಸ್ವಾಮಿ, ಯತ್ನಕ್ಕೆ ಲೇಶವೂ ಒಲಿಯದವ, ಮನೋನಿಗ್ರಹ ಮತ್ತು ಭಕ್ತ್ಯಾದಿಗಳಿಗೆ ಒಲಿಯುವವ, ಇಂದ್ರಿಯಗಳಿಗೆ ಅಗೋಚರ, ಅಣುವಿಗೆ ಅಣು, ಮಹತ್ತಿಗೆ ಮಹತ್, ದೂರದಲ್ಲಿರುವಂತೆ ಹತ್ತಿರದಲ್ಲಿಯೂ ಇರುವವನು, ಅನಂತ, ಆದ್ಯ ಮತ್ತು ಪರಿಪೂರ್ಣನಾಗಿರುವ ನಾರಾಯಣನನ್ನು ಸ್ತುತಿಸುವೆನು.

ಜಡಪ್ರಕೃತಿಭಿನ್ನವಾದ ಜಗತ್ತನ್ನು ಪುರುಷರೂಪದಿಂದ ಸೃಷ್ಟಿಸಿದವನೂ, ಚತುರ್ಮುಖ, ಪಂಚಮುಖ ಮುಂತಾದ ಭಿನ್ನಭಿನ್ನ ಆಕಾರಗಳನ್ನೂ, ವಿರಿಂಚ–ರುದ್ರ ಮೊದಲಾದ ನಾಮಗಳನ್ನೂ ಜೀವರಿಗೆ ಕೊಟ್ಟವನೂ, ವಾಕ್ಕಿನಿಂದ ವೇದಗಳನ್ನು ವ್ಯಕ್ತಮಾಡಿದವನು, ಸತ್ವಾದಿ ಗುಣಗಳಿಂದ ಆಗುವ ಸೃಷ್ಟ್ಯಾದಿ ಪ್ರವಾಹವು ಸಂತತ ಕಾರ್ಯೋನ್ಮುಖವಾಗುವಂತೆ ಮಾಡುವವನು. ಹಾಗೂ ಸ್ವಕಾರಣದೊಳಗೇ ಜಗತ್ತು ಲೀನವಾಗುವಂತೆ ಮಾಡುವವನು ಶ್ರೀನಾರಾಯಣನು.

ಬ್ರಹ್ಮಾದಿ ದೇಹಗಳನ್ನು ಸೃಷ್ಟಿಸುವ ಶ್ರೀಹರಿಯು ಸುರಾಸುರ ನರಪಶ್ವಾದಿ ಯಾವ ಜಾತಿಗೂ ಸೇರಿದವನಲ್ಲ. ನಿಯತ ಸ್ತ್ರೀಯಾಕಾರ ರಹಿತನಾದ್ದರಿಂದ ಸ್ತ್ರೀ ಜಾತಿಗೆ ಸೇರಿದವನಲ್ಲ. ಸರ್ವಥಾ ನಪುಂಸಕಾಕಾರವಿಲ್ಲದವನಾದ್ದರಿಂದ ಷಂಢನಲ್ಲ. ನಿಯತ ಪುಲ್ಲಿಂಗವಿಲ್ಲವಾದ್ದರಿಂದ ಪುರುಷನಲ್ಲ. ಕ್ರಿಮಿಯಲ್ಲ. ಕಾಣಿಸುವ ಯಾವ ವಸ್ತುವಿನ ರೂಪಾದ್ಯಾಕಾರನಲ್ಲ. ಪಾಪಪುಣ್ಯಾದಿ ಲಕ್ಷಣನಲ್ಲ. ಮೂರ್ತಾಮೂರ್ತ ವಸ್ತುಗಳಲ್ಲ. ಇವೆಲ್ಲಕ್ಕಿಂತಲೂ ವಿಲಕ್ಷಣನೂ, ಪ್ರಧಾನನೂ ಆಗಿರುವ ಭಗವಂತನು ನನ್ನನ್ನು ಸಂಸಾರದಿಂದ ತಪ್ಪಿಸಿ ರಕ್ಷಿಸಲು ಆವಿರ್ಭವಿಸಲಿ. ಈ ಮೊಸಳೆಯ ಬಾಯಿಯಿಂದ ಬಿಡುಗಡೆ ಹೊಂದಿ ಈ ಆನೆಯ ದೇಹದಲ್ಲಿಯೇ ಬಹುಕಾಲ ಬದುಕಬೇಕೆಂದು ಬಯಸುವುದಿಲ್ಲ. ಈ ಆನೆಯ ದೇಹವು ಅವಿವೇಕ ಮತ್ತು ಅಜ್ಞಾನಮಯವಾಗಿದೆ. ಇಂತಹ ಈ ದೇಹದಿಂದ ಫಲವೇನು ? ಅಪರೋಕ್ಷಜ್ಞಾನವಾಗದೆ ಲಿಂಗದೇಹವು ಹೋಗುವುದೇ ಇಲ್ಲವಾದ್ದರಿಂದ ಈ ಲಿಂಗದೇಹದ ನಾಶವನ್ನು ಬಯಸುವೆನು.

ಜಗದುತ್ಪಾದಕನೂ, ನಿಯಮನಕ್ಕಾಗಿ ಸರ್ವ ವಸ್ತುಗಳೊಳಗೆ ಪ್ರವೇಶಿಸಿರುವನೂ, ಜಗದ್ಭಿನ್ನನೂ, ಸರ್ವ ಜಗತ್ತನ್ನೂ ತಿಳಿದವನೂ, ಜಗತ್ಸ್ವಾಮಿಯೂ, ಅಜನೂ, ಮುಖ್ಯಪ್ರಾಪ್ಯನೂ ಆದ ನಾರಾಯಣನಿಗೆ ನಮೋ ನಮಃ !

ಜನರು ಯಾವನ ಬಂಧಕಶಕ್ತಿಯಿಂದ ಮರುಳಾಗಿ, ತಾವೇ ಸ್ವತಂತ್ರಕರ್ತರೆಂಬ ಬುದ್ಧಿಯಿಂದ ತಮ್ಮನ್ನೂ, ಪರಮಾತ್ಮನನ್ನೂ ತಿಳಿಯುವುದಿಲ್ಲವೋ ಅಂತಹ ಅನಂತ

ಮಹಿಮೆಯುಳ್ಳ ಶ್ರೀಹರಿಯನ್ನು ನಮಿಸುವೆನು. ಅನಂತನನ್ನು ಸಂಪೂರ್ಣವಾಗಿ ಸ್ತುತಿಸಲಾರೆನು.

**ಶುಕ :–** ಹೀಗೆ ಗಜೇಂದ್ರನು ಸ್ತುತಿಮಾಡುತ್ತಿರುವಾಗ ಅವನ ದುಃಖವನ್ನು ಪರಿಹರಿಸಲು ಬ್ರಹ್ಮನಾಗಲಿ, ಶಿವನಾಗಲಿ, ಇಂದ್ರಾದಿ ದೇವತೆಗಳಲ್ಲಿ ಯಾರೇ ಆಗಲಿ ಗಜೇಂದ್ರನ ಹತ್ತಿರ ಸುಳಿಯಲಿಲ್ಲ. ಕಾರಣವೇನೆಂದರೆ :– 1) ಬ್ರಹ್ಮಾದಿ ದೇವತೆಗಳ ಹೆಸರನ್ನಾಗಲೀ, ಹಂಸವಾಹನ, ನಂದಿವಾಹನ, ಐರಾವತವಾಹನ ಎಂಬ ಆಯಾ ದೇವತೆಗಳಿಗೆ ಸೇರಿದ ವಾಹನ, ಆಯುಧಗಳ ಹೆಸರನ್ನಾಗಲೀ ಹೇಳದೆ ನಾರಾಯಣನಿಗೆ ಮಾತ್ರವೇ ಸಲ್ಲುವ ವಿಶೇಷಣಗಳನ್ನು ಗಜೇಂದ್ರನು ಹೇಳುತ್ತಿರುವಾಗ ಯಾವ ದೇವತೆಯು ಕಾಣಿಸಿಕೊಂಡರೂ ಅವನು ತಾನೇ ನಾರಾಯಣನೆಂದು ಒಪ್ಪಿಕೊಂಡಂತಾಗುವುದು, ಆದ್ದರಿಂದ ಯಾವ ದೇವತೆಯೂ ಸುಳಿಯಲಿಲ್ಲ. 2) ಗಜೇಂದ್ರನು ಪರದೇವತೆಯಾದ ಶ್ರೀಹರಿಯನ್ನು ಒಂದೇ ಮನಸ್ಸಿನಿಂದ ಧ್ಯಾನಿಸುತ್ತಿದ್ದಾಗ ಬ್ರಹ್ಮದೇವರೇ ಬಂದರೂ ಗಜೇಂದ್ರನಿಂದ ಆಚರಿಸಲ್ಪಡುತ್ತಿದ್ದ ಹರಿಯ ಧ್ಯಾನವೆಂಬ ಪೂಜೆಗೆ ವಿಘ್ನವುಂಟಾಗುವುದು. ಅದು ಮಹಾಪರಾಧವಾದ್ದರಿಂದ ಯಾವ ದೇವತೆಯೂ ಅಲ್ಲಿ ಸುಳಿಯಲಿಲ್ಲ.

ಆಗ ಮನುವಾಗಿ ಅವತರಿಸಿದ್ದ ತಾಪಸನಾಮಕನೂ, ಬ್ರಹ್ಮಾದಿಗಳಿಗೆ ಸ್ವಾಮಿಯೂ ಆದ ಶ್ರೀಮನ್ನಾರಾಯಣನು ಗಜೇಂದ್ರನಿದ್ದ ಸ್ಥಳದಲ್ಲಿಯೇ ಪ್ರಕಟನಾದನು. ಅಂದರೆ ಗಗನದಲ್ಲಿ ಗರುಡನ ಮೇಲೆ ಕುಳಿತು ಚಕ್ರಪಾಣಿಯಾಗಿ ಗಜೇಂದ್ರನನ್ನು ರಕ್ಷಿಸಲು ಸಿದ್ಧನಾಗಿದ್ದ ಶ್ರೀಹರಿಯನು ಗಜೇಂದ್ರನು ನೋಡಿ ಕೂಡಲೇ ಸೊಂಡಿಲಿನಿಂದ ಸರೋವರದಲ್ಲಿದ್ದ ಕಮಲಪುಷ್ಪವೊಂದನ್ನು ಕಿತ್ತು ಎತ್ತಿ ಹಿಡಿದು **"ನಾರಾಯಣ ಅಖಿಲಗುರೋ ಭಗವನ್ನಮಸ್ತೇ"** ಎಂದು ಗದ್ಗದ ಸ್ವರದಿಂದ ಪ್ರಯಾಸಪಟ್ಟು ಕೂಗಿಕೊಂಡನು. ಶ್ರೀಹರಿಯು ಗರುಡನಿಂದಿಳಿದು "ಅಜಸ್ಸನ್" – ಪಾದಚಾರಿಯಾಗಿ ಓಡಿಬಂದು ಮೊಸಳೆ ಸಹಿತವಾದ ಆ ಆನೆಯನ್ನು ಮೇಲಕ್ಕೆತ್ತಿ ಸರೋವರದ ದಡದಲ್ಲಿಟ್ಟು ಬಳಿಕ ಚಕ್ರದಿಂದ ಮೊಸಳೆಯನ್ನು ಕತ್ತರಿಸಿ, ಆಗ ಬಂದಿದ್ದ ವಿಪತ್ತಿನಿಂದ ಗಜೇಂದ್ರನನ್ನು ಸಂರಕ್ಷಿಸಿದನು !!!

ಈ ಸಂದರ್ಭವನ್ನು ವಿಮರ್ಶಿಸಿದರೆ ಶ್ರೀಹರಿಗೆ ತನ್ನ ಭಕ್ತರಲ್ಲಿ ಎಂತಹ ಕಾರುಣ್ಯವಿದೆ ಎಂಬುದು ಸ್ಪಷ್ಟವಾಗಿ ತಿಳಿದುಬರುವುದು. ಶ್ರೀಮದ್ವ್ಯಾಸರಾಜರು ಈ ವಿಷಯವನ್ನು ಬಹುಸುಂದರ ಸುಳಾದಿಯಲ್ಲಿ ಅಪ್ಪಣೆ ಕೊಡಿಸಿರುವರು :–

**ಏಕತಾಳ ಸುಳಾದಿ**

ಕರಿ ಹರಿಯೆನಲಾ ಸುಪ್ತಿಯನು ತಳ್ಳಿ
ಸಿರಿಯ ಸಾರೆನುತ ಉರಗಮಂಚದಿಂ ಧುಮುಕಿ

ಕರವಿತ್ತ ವಿರಿಂಚನ ಕೈಲಾಗು (ಹಸ್ತಲಾಘವ) ವೊಲ್ಲದೆ
ಭರದಿ ಹನುಮನಿತ್ತ ಹಾವಿಗೆಯನು ದಾಂಟಿ
ಗರುಡನೊದಗುತಿರೆ ತಿರುಗಿ ನೋಡದೆ ಬಂದ
ಕರುಣವ ತೋರೆನಗೆ ನಮೋ ನಮೋ ನಮೋ ಸಿರಿಕೃಷ್ಣ      ೫

**ಮೂರನೆಯ ಅಧ್ಯಾಯ ಮುಗಿದುದು.**

**ಶುಕ :–** ಆಗ ಬ್ರಹ್ಮಾದಿ ದೇವತೆಗಳೂ, ಗಂಧರ್ವಾದಿಗಳೂ ಗಜೇಂದ್ರನನ್ನು ಶ್ರೀಹರಿಯು ಕಾಪಾಡಿದುದನ್ನು ನೋಡಿ ಸ್ತುತಿಸಿ ಸುಮವರ್ಷಗರೆದರು. ದೇವ ದುಂದುಭಿಗಳು ಮೊಳಗಿದುವು. ಗಂಧರ್ವರು ಮತ್ತು ಅಪ್ಸರೆಯರು ಗಾನನರ್ತನ ಗಳನ್ನು ಮಾಡಿದರು. ದೇವಲಋಷಿಗಳಿಂದ ಮೊಸಳೆಯಾಗುವಂತೆ ಶಾಪವನ್ನು ಹೊಂದಿದ್ದ **ಹೂಹೂ** ಗಂಧರ್ವನು ಶಾಪದಿಂದ ಮುಕ್ತನಾಗಿ, ಶ್ರೀಹರಿಯನ್ನು ಸ್ತುತಿಸಿ, ಅನುಮತಿ ಪಡೆದು ತನ್ನ ಲೋಕಕ್ಕೆ ಹೊರಟುಹೋದನು. ಗಜೇಂದ್ರನು ಶ್ರೀಹರಿಯ ಹಸ್ತಸ್ಪರ್ಶದಿಂದ ಅಜ್ಞಾನವನ್ನು ನೀಗಿ ಸಾರೂಪ್ಯ ಅಂದರೆ ಚತುರ್ಬಾಹು ಗಳನ್ನುಳ್ಳವನಾದನು.

ಪರೀಕ್ಷಿದ್ರಾಜನೇ ! ಗಜೇಂದ್ರನಿಗೆ ಸಾರೂಪ್ಯವು ಬರಲು ಕಾರಣವನ್ನು ತಿಳಿಸುವೆನು ಕೇಳು :– ಪೂರ್ವದಲ್ಲಿ ವೈಷ್ಣವನಾದ ಇಂದ್ರದ್ಯುಮ್ನನೆಂಬ ರಾಜನು ಪಾಂಡ್ಯದೇಶವನ್ನು ಆಳುತ್ತಿದ್ದನು. ಆತನು ಒಂದುಬಾರಿ ಮಲಯ ಪರ್ವತದಲ್ಲಿ ಮೌನಿಯಾಗಿ ಶ್ರೀಹರಿಯನ್ನು ಪೂಜಿಸುತ್ತಿದ್ದನು. ಅಲ್ಲಿಗೆ ಹರೀಚ್ಛೆಯಂತೆ ಅಗಸ್ತ್ಯರು ಶಿಷ್ಯರಿಂದ ಸಹಿತವಾಗಿ ಬಂದರು. ರಾಜನು ಅವರನ್ನು ನೋಡಿಯೂ ಎದ್ದು ಅರ್ಘ್ಯಪಾದ್ಯಾದಿ ಉಪಚಾರವನ್ನು ಮಾಡದೆ ಸುಮ್ಮನಿದ್ದನು. ಇದನ್ನು ನೋಡಿ ಕುಪಿತರಾದ ಅಗಸ್ತ್ಯರು "ಈ ದುರಾತ್ಮನು ಬಂದ ಬ್ರಾಹ್ಮಣರಿಗೆ ಅವಮಾನ ಮಾಡಿ ಆನೆಯಂತೆ ಮದಿಸಿರುವನು. ಆದ್ದರಿಂದ ಇವನಿಗೆ ಆನೆಯ ಜನ್ಮ ಬರಲಿ" ಎಂದು ಶಪಿಸಿ ಹೊರಟುಹೋದರು. ಬಳಿಕ ರಾಜನು ಋಷಿಗಳ ಶಾಪಕ್ಕೆ ತನ್ನ ಪ್ರಾರಬ್ಧಕರ್ಮವೇ ಕಾರಣವೆಂದು ನಿಶ್ಚಯಿಸಿ, ಆನೆಯಾಗಿ ಹುಟ್ಟಿದ್ದನು. ಆದರೆ ತಾನು ಮಾಡಿದ್ದ ಶ್ರೀಹರಿಯ ಪೂಜಾಪ್ರಭಾವದಿಂದ ಆನೆಯ ಜನ್ಮದಲ್ಲಿಯೂ ಅಂತ್ಯ ಕಾಲದಲ್ಲಿ ಶ್ರೀಪರಮಾತ್ಮನ ಸ್ಮರಣೆಯು ತಪ್ಪಲಿಲ್ಲ. ಶ್ರೀಹರಿಯು ಗಜೇಂದ್ರನ ಶಾಪವನ್ನು ತಪ್ಪಿಸಿ ಪಾರ್ಷದ್ಯಗಣಕ್ಕೆ ಸೇರಿಸಿಕೊಂಡು ಅವನೊಡನೆ ದೇವತೆಗಳಿಂದ ಸ್ತುತ್ಯನಾಗಿ ಗರುಡನನ್ನೇರಿ ತನ್ನ ಸ್ಥಾನಕ್ಕೆ ಹೊರಟುಹೋದನು. ಗಜೇಂದ್ರ ಮೋಕ್ಷ ವನ್ನು ಕೇಳುವವರಿಗೆ ಯಶಸ್ಸು ಬರುವುದು. ಪಾಪ ಪರಿಹಾರವಾಗುವುದು. ದುಃಸ್ವಪ್ನಾದಿಗಳು ನಾಶವಾಗುವುವು. ಆದ್ದರಿಂದ ಶ್ರೇಯಸ್ಕಾಮಿಗಳು ಬೆಳಗ್ಗೆ

ಎದ್ದೊಡನೆಯೇ ದುಃಸ್ವಪ್ನಾದಿಗಳ ಪರಿಹಾರಕ್ಕಾಗಿ ಗಜೇಂದ್ರ ಮೋಕ್ಷವನ್ನು ಪಠಿಸ ಬೇಕು.

**ಶ್ರೀಹರಿ** :– ಗಜೇಂದ್ರ ! ಯಾರು ನನ್ನನ್ನೂ. ನಿನ್ನನ್ನೂ, ಕ್ಷೀರಸಮುದ್ರಾದಿ ಗಳನ್ನೂ, ಗರುಡ ಶೇಷಾದಿಗಳನ್ನೂ, ನಾರದ, ಪ್ರಹ್ಲಾದಾದಿಗಳು, ಶ್ರೀಹರಿಯ ಅವತಾರ ಮತ್ತು ಹರಿಯು ಮಾಡುವ ವ್ಯಾಪಾರಗಳನ್ನು ಬ್ರಾಹ್ಮೀ ಮುಹೂರ್ತ ದಲ್ಲೆದ್ದು ಸ್ಮರಿಸುವರೋ ಅವರು ಸಕಲ ಪಾಪಗಳಿಂದಲೂ ಮುಕ್ತರಾಗುವರು, ನೀನು ಗೈದ ಸ್ತೋತ್ರದಿಂದ ನನ್ನನ್ನು ಕೊಂಡಾಡಿ ನಮಿಸುವವರಿಗೆ ನಿರ್ಮಲವಾದ ಬುದ್ಧಿಯನ್ನು ಕೊಡುತ್ತೇನೆ. (ಹೀಗೆ ಹೇಳಿ ಪಾಂಚಜನ್ಯ ಶಂಖವನ್ನೂದಿ, ಬ್ರಹ್ಮಾದಿ ಗಳನ್ನು ಸಂತೋಷಪಡಿಸಿ, ಗರುಡಾರೂಢನಾಗಿ ಹೊರಟುಹೋದನು.)

## ನಾಲ್ಕನೆಯ ಅಧ್ಯಾಯ ಮುಗಿದುದು

**ಶುಕ** :– ಐದನೆಯ ಮನ್ವಂತರದಲ್ಲಿ ತಾಪಸನ ತಮ್ಮನಾದ ರೈವತನು ಮನುವು. ಬಲಿ, ವಿಂಧ್ಯಾದಿಗಳು ಅವನ ಮಕ್ಕಳು. ದಸ್ರುವೆಂಬ ಅಶ್ವಿನೀ ದೇವತೆಯು ವಿಭುನಾಮಕ ಇಂದ್ರನು. ಭೂತ, ರಯಾದಿ ನಾಮಕರು ದೇವತೆಗಳು ಹಿರಣ್ಯರೋಮಾದಿಗಳು ಸಪ್ತ ಋಷಿಗಳು. ಶುಭ್ರನೆಂಬ ಋಷಿಯ ಪತ್ನಿಯಾದ ವಿಕುಂಠಾದೇವಿಯಲ್ಲಿ ಶ್ರೀಪರಮಾತ್ಮನು ವೈಕುಂಠ ನಾಮಕನಾಗಿ ಅವತರಿಸಿ ತನ್ನ ಪತ್ನಿಯಾದ ಲಕ್ಷ್ಮೀದೇವಿಯ ಪ್ರೀತಿಗಾಗಿ ವೈಕುಂಠವನ್ನು ವಿಸ್ತರಿಸಿದನು.

ಆರನೆಯ ಮನ್ವಂತರಕ್ಕೆ ಚಾಕ್ಷುಷನೆಂಬುವನು ಮನು. ಪುರುಷ, ಸುದ್ಯುಮ್ನಾದಿ ಗಳು ಮನುಪುತ್ರರು. ಮಂದದ್ರುತ ಅಥವಾ ಮಂದ್ರದ್ಯುಮ್ನನೆಂಬುವನು ಇಂದ್ರನು. ಆರ್ಯ ಮೊದಲಾದವರು ದೇವತೆಗಳು. ವೈರಾಜ, ಹರಿ, ಮದ್ವಿರಕಾದಿಗಳು ಸಪ್ತ ಋಷಿಗಳು. ವೈರಾಜ ಋಷಿಯಿಂದ ಸಂಭೂತಿಯೆಂಬ ಪತ್ನಿಯಲ್ಲಿ ಶ್ರೀಹರಿಯು **ಅಜಿತ** ನಾಮಕನಾಗಿ ಅವತರಿಸಿದನು. ಅವನೇ ಸಮುದ್ರ ಮಥನ ಮಾಡಿ ಅಮೃತ ವನ್ನು ದೇವತೆಗಳಿಗೆ ಕೊಟ್ಟನು. ಅವನೇ ಕೂರ್ಮರೂಪವನ್ನು ತಾಳಿ ಮಂದರ ಪರ್ವತವನ್ನು ಧರಿಸಿದನು.

**ಪರೀಕ್ಷಿತ್** :– ಮುನಿಗಳೇ ! ಸಮುದ್ರ ಮಥನಕಥೆಯನ್ನು ವಿಸ್ತಾರವಾಗಿ ವರ್ಣಿಸಿರಿ.

**ಶುಕ** :– ರಾಜೇಂದ್ರನೇ ! ಯುದ್ಧದಲ್ಲಿ ದೈತ್ಯರಿಂದ ಪೀಡಿತರಾದ ದೇವತೆ ಗಳು ಮೃತಪ್ರಾಯರಾಗಿ ನೆಲಕ್ಕುರುಳಿದರು. ಮತ್ತು ದುರ್ವಾಸರಿಂದ ದತ್ತವಾದ

ಹರಿಯು ಧರಿಸಿದ್ದ ಪುಷ್ಪಮಾಲಿಕೆಯನ್ನು ಇಂದ್ರನು ತಿರಸ್ಕರಿಸಿ ಆನೆಯ ಕುಂಭ ಸ್ಥಳದಲ್ಲಿಟ್ಟನು. ಐರಾವತವು ಅದನ್ನು ನೆಲಕ್ಕೆ ಹಾಕಿ ಹೊಸಗಿಬಿಟ್ಟಿತು. ಇದನ್ನು ನೋಡಿದ ದುರ್ವಾಸರು ಕೋಪದಿಂದ "ಲೋಕಪಾಲಕರೊಡನೆ ರಾಜ್ಯೈಶ್ವರ್ಯ ಭ್ರಷ್ಟನಾಗು" ಎಂದು ಶಪಿಸಿದರು. ಆಗ ಮೂರು ಲೋಕವೂ ಐಶ್ವರ್ಯಭ್ರಷ್ಟವಾಯಿತು. ಯಾಗಾದಿ ಕ್ರಿಯೆಗಳು ನಿಂತುಹೋದವು ಬಳಿಕ ಮಹೇಂದ್ರವರುಣಾದಿಗಳು ಮೇರುವಿನಲ್ಲಿನ ಬ್ರಹ್ಮದೇವರ ಅರಮನೆಗೆ ಹೋಗಿ, ಬ್ರಹ್ಮದೇವರಿಗೆ ನಮಿಸಿ ತಮಗೆ ಬಂದ ವಿಪತ್ತನ್ನು ವಿಜ್ಞಾಪಿಸಿಕೊಂಡರು.

**ಬ್ರಹ್ಮ** :- ದೇವತೆಗಳಿರಾ ! ನಾನು, ರುದ್ರ, ನೀವು ಮನುಷ್ಯಾದಿಗಳೆಲ್ಲರೂ ಶ್ರೀಹರಿಯ ಭಿನ್ನಾಂಶರು. ಅಂದರೆ ಶ್ರೀಹರಿಯ ಶಕ್ತಿಯಲ್ಲಿನ ಒಂದು ಭಾಗದಿಂದ ಹುಟ್ಟಿದವರು. ಈಗ ನಾವೆಲ್ಲರೂ ಶ್ರೀಹರಿಯನ್ನೇ ಶರಣು ಹೊಂದೋಣ. ದೇವತೆ ಗಳು ಭಕ್ತ್ಯಾದಿ ಸದ್ಗುಣಗಳನ್ನು ಅಧಿಕವಾಗಿ ಉಳ್ಳವರಾದುದರಿಂದ ಶ್ರೀಹರಿಯು ನಮ್ಮನ್ನು ಕೈಬಿಡದೆ ಆದರಿಸುವನು. ದೈತ್ಯರಲ್ಲಿ ದೋಷವು ಹೆಚ್ಚಾಗಿರುವುದರಿಂದ ಅವರನ್ನು ಕೊಲ್ಲುವನು. ಇಷ್ಟೇ ಹೊರತು ಹರಿಯು ತನ್ನ ಪ್ರಯೋಜನಕ್ಕಾಗಿ ರಕ್ಷಿಸಿ, ಶಿಕ್ಷಿಸುವವನಲ್ಲ. ಸೃಷ್ಟ್ಯಾದಿಗಳನ್ನು ಮಾಡಲು ತ್ರಿಗುಣಗಳನ್ನು ನಿಮಿತ್ತ ವಾಗಿಟ್ಟುಕೊಳ್ಳುವನು. ದೇವತೆಗಳ ಶ್ರೇಯಸ್ಸಿಗೆ ಸತ್ವಗುಣವನ್ನು ಉದ್ರೇಕಗೊಳಿ ಸಿರುವ ಶ್ರೀಹರಿಯು ಜಗತ್ತನ್ನು ಸುಭದ್ರವಾಗಿಟ್ಟಿರುವ ಕಾಲವಿದು. ಆದ್ದರಿಂದ ಅವನಲ್ಲಿ ಮರೆಹೊಕ್ಕು ಪ್ರಾರ್ಥಿಸೋಣ. ಅವನು ದೇವತೆಗಳ ಪ್ರಿಯನಾದಕಾರಣ ನಮಗೆ ಸುಖವನ್ನುಂಟು ಮಾಡುವನು.

(ಹೀಗೆ ಹೇಳಿ ಕ್ಷೀರಸಮುದ್ರದ ಬಳಿಗೆ ಬಂದು ಶ್ರೀಹರಿಯನ್ನು ಸ್ತುತಿಸುವರು :-)

"ನಿರ್ವಿಕಾರನು, ಅಬಾಧಿತಸ್ವರೂಪನು, ಅಪರಿಚ್ಛಿನ್ನನು, ಆದ್ಯನು ಅಂದರೆ ಉಪಜೀವ್ಯನು ಹೃದ್ಗುಹೆಯಲ್ಲಿ ನಿಯಾಮಕನು, ಭಿನ್ನಾವಯವರಹಿತನು, ಪ್ರತ್ಯಕ್ಷ-ಆಗಮ-ವಿರುದ್ಧಯುಕ್ತಿಗಳಿಗೆ ಅಗೋಚರನು, ಮನೋವೇಗವನ್ನು ಮೀರಿರುವನು, ವಾಕ್ಕಿಗೆ ಸಂಪೂರ್ಣವಾಗಿ ಅಗೋಚರನು ಮತ್ತು ವರೇಣ್ಯನೂ ಅಂದರೆ ಭಜ ನೀಯನೂ ಆದ ದೇವೋತ್ತಮನೇ ! ನಿನಗೆ ವಂದನೆ ! ಇಂದ್ರಿಯ-ಮನಸ್ಸು-ಬುದ್ಧಿ-ದೇಹ ಇವೆಲ್ಲವನ್ನೂ ತಿಳಿದವನು, ಇಂದ್ರಿಯಗಳಿಗೆ ವಿಷಯ ಸಂಪರ್ಕಮಾಡಿ ವಿಷಯಗಳ ಜ್ಞಾನವನ್ನು ಹುಟ್ಟಿಸುವವನು, ನಿದ್ರಾರಹಿತನು, ಲಿಂಗಶರೀರವಿಲ್ಲದವನು ವಿಷಯಾಕಾಂಕ್ಷಿಯಾದ್ದರಿಂದ ಗೃಧ್ರನೆನಿಸುವ ಜೀವನ ಸ್ವರ್ಗ ನರಕಗಳಿಗೆ ಕಾರಣನು, ಅಜ್ಞಾನ ಮತ್ತು ಪರೋಕ್ಷಜ್ಞಾನಗಳಿಲ್ಲದವನು, ಚತುರ್ವಿಧನಾಶರಹಿತನು,

ತ್ರಿಯುಗನು ಮತ್ತು ಸುಖಸ್ವರೂಪನೂ ಆದ ನಾರಾಯಣನನ್ನು ಶರಣು ಹೊಂದುವೆವು.

ಜಗತ್ತು ಪ್ರವಾಹ ರೂಪದಿಂದ ತಿರುಗುವ ಕಾರಣ ಚಕ್ರವೆನಿಸಿದೆ. ಇದು ವಿಷ್ಣುವಿನ ಅಧೀನದಲ್ಲಿರತಕ್ಕದ್ದು. ಜಡಪ್ರಕೃತಿಗೆ ಒಡೆಯಳಾದ ಚಿತ್ಪ್ರಕೃತಿಯೆನಿಸಿದ ಲಕ್ಷ್ಮೀದೇವಿಯಿಂದಲೂ, ಜಡಪ್ರಕೃತಿ ಮತ್ತು ತ್ರಿಗುಣಗಳಿಂದ ಈ ಜಗತ್ತು ಪ್ರೇರಿಸಲ್ಪಡುತ್ತಿರುವುದು. ಅಂತಃಕರಣವೇ ಪ್ರಧಾನವಾಗಿ ಉಳ್ಳ ಇದು ಹತ್ತು ಇಂದ್ರಿಯಗಳು ಮತ್ತು ಐದು ಶಬ್ದಾದಿ ವಿಷಯಗಳು ಸೇರಿ ಒಟ್ಟು ಹದಿನೈದು ಅರೆ ಕಾಲುಗಳುಳ್ಳದ್ದು. ಶೀಘ್ರವಾಗಿ ಭ್ರಮಣವುಳ್ಳದ್ದು. ತ್ರಿಗುಣಗಳೇ ಜಗತ್ತೆಂಬ ಚಕ್ರದ ಬಂಡಿಕಣ್ಣುಗಳು. ದೇವ, ದಾನವ, ಗಂಧರ್ವ ತಿರ್ಯಕ್ ನರ, ಪಿಶಾಚ, ರಾಕ್ಷಸ ಮತ್ತು ಸ್ಥಾವರ ಎಂಬ ಎಂಟು ದಳಗಳುದ್ದು. ಇಂತಹ ಜಗತ್ತೆಂಬ ಚಕ್ರಕ್ಕೆ ಅಚ್ಚಿನಂತೆ ಶ್ರೀ ಹರಿಯು ಆಧಾರನಾಗಿರುವನು ಎಂದು ಜ್ಞಾನಿಗಳು ಹೇಳುವರು. ಇಂತಹ ನಿರ್ವಿಕಾರ ನಾದ ಶ್ರೀಹರಿಯನ್ನು ಮೊರೆ ಹೋಗುವೆನು.

ಪ್ರಣವ ಪ್ರತಿಪಾದ್ಯ, ಅಜ್ಞಾನರಹಿತ, ಅಜ್ಞಾನನಾಶಕ, ಲೋಕವಿಲಕ್ಷಣ, ಪ್ರಯತ್ನಕ್ಕೆ ಒಲಿಯದವನು. ಅಂತಪಾರವರ್ಜಿತ ಜೀವನನ್ನು ವಾಹನ ಮಾಡಿಕೊಂಡು ನಿಯಮಿಸುತ್ತಿರುವವನು. ಮತ್ತು ಭಕ್ತಿಪೂರ್ವಕ ಜ್ಞಾನಿಗಳು ಮಾಡುವ ಧ್ಯಾನಕ್ಕೆ ಗೋಚರನು. ಇಂತಹ ಹರಿಯನ್ನು ನಮಿಸುವೆನು.

ಜೀವರು ಯಾವನ ಮಾಯೆ (ಇಚ್ಛೆ)ಯಿಂದ ಜ್ಞಾನಗಮ್ಯನಾದ ಅವನ ವಿಷಯದಲ್ಲಿ ಮೋಹಿತರಾಗುವರೋ, ಯಾವನ ಅನುಗ್ರಹವಿಲ್ಲದೆ ಮಾಯೆಯನ್ನು ದಾಟಲು ಅಸಾಧ್ಯವೋ, ಯಾವನು ರಮಾದಿ ಚೇತನರಿಗಿಂತ ಉತ್ತಮವೆನಿಸಿ, ಅವರ ಗುಣಗಳಿಗೆ ನಿಯಾಮಕನೋ, ಮುಕ್ತರಿಗೆ ಸ್ವಾಮಿಯಾಗಿ, ಸರ್ವಪ್ರಾಣಿಗಳಲ್ಲಿಯೂ ಅವರವರ ಯೋಗ್ಯತೆಯನ್ನು ಅನುಸರಿಸಿ ಯಾವನು ಸಂಚರಿಸುವನೋ ಅಂತಹ ಶ್ರೀಹರಿಯನ್ನು ನಮಿಸುವೆನು.

ಶ್ರೀಹರಿಯೇ ! ನಿನ್ನ ಕೃಪೆಯಿಂದ ಜ್ಞಾನಿಗಳಾಗಿರುವ ನಾವೇ ಬ್ರಹ್ಮಾಂಡದ ಒಳಗೂ, ಹೊರಗೂ. ವ್ಯಾಪಿಸಿರುವ ಸೂಕ್ಷ್ಮವಾದ ನಿನ್ನ ಚಿದಾನಂದಾಕೃತಿಯನ್ನು ಸಂಪೂರ್ಣವಾಗಿ ತಿಳಿಯಲಾರೆವೆಂದಮೇಲೆ ನಿತ್ಯ ಸಂಸಾರಿಗಳೂ, ತಮೋಯೋಗ್ಯರೂ ನಿನ್ನ ಸ್ವರೂಪವನ್ನು ಹೇಗೆ ತಾನೆ ತಿಳಿಯಬಲ್ಲರು ?

ಜರಾಯುಜಾದಿ ನಾಲ್ಕು ಬಗೆಯ ಜೀವರ ಸೃಷ್ಟಿಯುಳ್ಳ ಭೂಮಿಯು ನಿನ್ನ ಪಾದವು, ವಿರಾಟ್ಪುರುಷನೂ, ಸ್ವತಂತ್ರನೂ, ಮಹತ್ತಾದ ವಿವಿಧಭವನ (ಅವತಾರ) ಉಳ್ಳವನೂ, ಗುಣಪೂರ್ಣನೂ ಆದ ಶ್ರೀಹರಿಯೆ ! ಪ್ರಸನ್ನನಾಗು !

ಯಾವನ ರೇತಸ್ಸಿನಿಂದ ಉತ್ಪನ್ನವಾದ ಉತ್ಕೃಷ್ಟ ಶಕ್ತಿಯುಳ್ಳ ಜಲದಿಂದ ಮೂರು ಲೋಕದ ಜನರೂ ಉಪಜೀವಿಸಿಕೊಂಡು ಶರೀರಪುಷ್ಟಿಯಿಂದ ಅಭಿವೃದ್ಧಿರಾಗುತ್ತಾರೆಯೋ ಅಂತಹ ಅಪಾರ ಐಶ್ವರ್ಯವುಳ್ಳ ಪರಬ್ರಹ್ಮನು ನಮಗೆ ಪ್ರಸನ್ನನಾಗಲಿ !

ವರುಣಾದಿ ದೇವತೆಗಳಿಗೆ ಶಕ್ತಿ, ಅನ್ನ ಮತ್ತು ಆಯುಷ್ಯಗಳನ್ನು ಕೊಡತಕ್ಕ ಚಂದ್ರನನ್ನು ಮನಸ್ಸಿನಿಂದ ಹುಟ್ಟಿಸಿದ ಶ್ರೀಹರಿಯು ಪ್ರಸನ್ನನಾಗಲಿ !

ಹುಟ್ಟಿರುವುದನ್ನೆಲ್ಲ ತಿಳಿದು ಯಾಗಾದಿ ಸರ್ವಕರ್ಮ ನಿರ್ವಹಣೆಗಾಗಿ ಉತ್ಪತ್ತಿಯುಳ್ಳವನಾಗಿ, ಉದರದೊಳಗೆ ನಾಲ್ಕು ಬಗೆಯ ಅನ್ನಗಳನ್ನು ಜೀರ್ಣಮಾಡಿ, ಆಯಾ ಭಾಗಕ್ಕೆ ಸೇರಿಸುವ, ಪರಮಾತ್ಮನ ಮುಖದಿಂದ ಹುಟ್ಟಿರುವ, ಅಗ್ನಿದೇವತೆಗೆ ಪ್ರೇರಕನಾಗಿ, ಭಕ್ತ್ಯಾದಿ ಮಹದೈಶ್ವರ್ಯವುಳ್ಳ ಶ್ರೀಪರಮಾತ್ಮನು ಪ್ರಸನ್ನನಾಗಲಿ !

ಉತ್ತರಾಯಣದಲ್ಲಿ ಮುಕ್ತಿಯನ್ನು ಹೊಂದತಕ್ಕವರಿಗೆ ಮಾರ್ಗದೇವತೆಯೂ, "ಆಕೃಷ್ಣೇನ ರಜಸಾ ವರ್ತಮಾನಃ" ಇತ್ಯಾದಿ ವೇದೋಕ್ತ ಮಂತ್ರ ಪ್ರತಿಪಾದ್ಯನೂ, ಪರಮಾತ್ಮನು ವ್ಯಕ್ತವಾಗತಕ್ಕ ಸ್ಥಾನನೂ, ತನ್ನಲ್ಲಿರುವ ಭಗವಂತನ ಧ್ಯಾನಾದಿಗಳನ್ನು ಮಾಡುವವರಿಗೆ ಮೋಕ್ಷಕ್ಕೆ ಕಾರಣನೂ ಆದ ಸೂರ್ಯನನ್ನು ಕಣ್ಣಿನಿಂದ ಹುಟ್ಟಿಸಿದ ನಾರಾಯಣನು ನಮಗೆ ಪ್ರಸನ್ನನಾಗಲಿ !

ಚೇತನರ ಜೀವಧಾರಣೆಯ ವ್ಯಾಪಾರಕ್ಕೆ ಕಾರಣನೂ, ಸಹನೆ–ಬಲ–ನಿರೋಧ ಶಕ್ತಿಗಳನ್ನು ಕೊಡುವವನೂ, ಆಯುಃಪ್ರದನೂ, ದೇಹಧಾರಕನೂ, ಜೀವರಿಗೆ ಚಕ್ರವರ್ತಿಯಾಗಿ ಅವರಿಂದ ಅನುಸರಿಸಲ್ಪಡತಕ್ಕವನೂ ಆದ ಪ್ರಾಣನ ಜನಕನಾಗಿ ಆವನ ಪ್ರಾಣಾದಿಗಳಿಗೆ ನಿಯಾಮಕನಾಗಿರುವುದೇ ಮೊದಲಾದ ಮಹದೈಶ್ವರ್ಯವುಳ್ಳ ಶ್ರೀಹರಿಯು ನಮಗೆ ಪ್ರಸನ್ನನಾಗಲಿ !

ಕಿವಿಯಿಂದ ದಿಕ್ಕುಗಳನ್ನೂ ತದಭಿಮಾನಿ ಚಂದ್ರಾದಿಗಳನ್ನು ಹುಟ್ಟಿಸಿದವನೂ, ಹೃದಯದಿಂದ ಇಂದ್ರಿಯಗಳನ್ನೂ ತದಭಿಮಾನಿಗಳನ್ನೂ ಮತ್ತು ನಾಭಿಯಿಂದ ಅಂತರಿಕ್ಷ ತದಭಿಮಾನಿಗಳನ್ನೂ ಹುಟ್ಟಿಸಿ ತನ್ನಿಯಾಮಕನೂ, ಸ್ವಾಮಿಯೂ ಆಗಿರುವ ತನ್ನ ಶರೀರದಂತಿರುವ ಪೃಥಿವಿಗ ಬಂಧುವಾಗಿರುವ ಶ್ರೀಹರಿಯು ಪ್ರಸನ್ನನಾಗಲಿ !

ತನ್ನ ಶಕ್ತಿ (ಬಲ) ಯಿಂದ ಶಚೀಪತಿಯನ್ನೂ, ಇಚ್ಛಾವಿಶೇಷದಿಂದ ದೇವತೆಗಳನ್ನೂ, ಕೋಪದಿಂದ ರುದ್ರನನ್ನೂ, ಬುದ್ಧಿಯಿಂದ ವಿರಿಂಚನನ್ನೂ, ಇಂದ್ರಿಯಗಳಿಂದ ಸಪ್ತ ಛಂದಸ್ಸುಗಳನ್ನೂ, ಜನನೇಂದ್ರಿಯದಿಂದ ಪ್ರಜೇಶ್ವರರನ್ನೂ ಹುಟ್ಟಿಸಿದ ಮಹಾಶಕ್ತಿವಂತನಾದ ಶ್ರೀಹರಿಯು ನಮಗೆ ಪ್ರಸನ್ನನಾಗಲಿ !

ಯಾವನ ವಕ್ಷಸ್ಥಳದಿಂದ ಸಂಪತ್ ಶೋಭೆಯೂ, ಛಾಯೆಯಿಂದ ಪಿತೃಗಳೂ. ಸ್ತನದಿಂದ ಧರ್ಮ ಮತ್ತು ಯಮನೂ, ಬೆನ್ನಿನಿಂದ ಅಧರ್ಮ ಮತ್ತು ನಿರ್ಋತಿಯೂ, ಶಿರಸ್ಸಿನಿಂದ ಸ್ವರ್ಗವೂ. ಕ್ರೀಡೆಯಿಂದ ಅಪ್ಸರೆಯರೂ ಹುಟ್ಟಿದರೋ ಅಂತಹ ಮಹಾವಿಭೂತಿಯು ನಮಗೆ ಪ್ರಸನ್ನನಾಗಲಿ !

ಮುಖ, ಬಾಹು, ತೊಡೆ ಮತ್ತು ಪಾದಗಳಿಂದ ಬ್ರಾಹ್ಮಣಾದಿ ನಾಲ್ಕು ವರ್ಣಗಳನ್ನೂ ಮತ್ತು ಅವರ ವೃತ್ತಿಗಳನ್ನೂ ಹುಟ್ಟಿಸಿದ ಮಹಾವಿಭೂತಿಯು ಪ್ರಸನ್ನನಾಗಲಿ !

ಕೆಳತುಟಿಯಿಂದ ಲೋಭ ಮತ್ತು ತದಭಿಮಾನಿಯನ್ನೂ, ಮೇಲಿನ ತುಟಿಯಿಂದ ಪ್ರೀತಿಕಾಂತಿಗಳನ್ನೂ ತದಭಿಮಾನಿಗಳನ್ನೂ, ನಾಸಿಕದಿಂದ ತೃಣಾದಿಗಳನ್ನೂ ತದಭಿಮಾನಿಗಳನ್ನೂ, ಸ್ಪರ್ಶದಿಂದ ಸ್ತ್ರೀ ವಿಷಯೇಚ್ಛೆಯನ್ನೂ, ಹುಬ್ಬುಗಳಿಂದ ಯಮನನ್ನೂ, ರೆಪ್ಪೆಗಳಿಂದ ಮೃತ್ಯುವನ್ನೂ ಹುಟ್ಟಿಸಿದ ಮಹಾವಿಭೂತಿಯಾದ ಶ್ರೀಹರಿಯು ಪ್ರಸನ್ನನಾಗಲಿ !

ಪಂಚಭೂತ, ಆಯುಷ್ಯ, ಪುಣ್ಯಪಾಪ, ಭಕ್ಷ್ಯಾದಿಗಳು, ಸ್ವಭಾವ, ಜೀವ ಮುಂತಾದುವುಗಳೆಲ್ಲವನ್ನೂ ಶ್ರೀಹರಿಯ ಸ್ವರೂಪಭೂತವಾದ ಇಚ್ಛೆಯು ಉದಾಸೀನ ಮಾಡಿದ ಕೂಡಲೇ ಅವು ಕೆಲಸಕ್ಕೆ ಬಾರದವುಗಳಾಗಿ ನಾಶವಾಗುವುವು. ಅವನ ರೂಪವು ಈ ಬಗೆಯಾಗಿದೆ ಎಂದು ಚಿಂತಿಸುವುದಕ್ಕೆ ಅಶಕ್ಯವಾಗಿದೆ. ಅವನು ತತ್ತ್ವಜ್ಞಾನ ಯೋಗ್ಯರಿಗೆ ಜ್ಞಾನಪ್ರದನು. ಇಂತಹ ಐಶ್ವರ್ಯಪೂರ್ಣನಾದ ಶ್ರೀ ನಾರಾಯಣನು ನಮಗೆ ಪ್ರಸನ್ನನಾಗಲಿ !

ಸರ್ವೋತ್ತಮಗಳೂ, ಅಘಟಿತ ಘಟಕಗಳೂ ಆಗಿರುವ ಸ್ವರೂಪಶಕ್ತಿಗಳನ್ನುಳ್ಳವನೂ, ನಿತ್ಯಾವಿರ್ಭೂತಾನಂದವುಳ್ಳವನೂ, ಪ್ರಾಕೃತ ವಿಷಯಗಳ ಪ್ರವರ್ತಕನಾಗಿದ್ದರೂ ನಿರ್ದೋಷನಾದ್ದರಿಂದ ದುಃಖಾನುಭವರಹಿತನೂ ಮತ್ತು ಸ್ವರೂಪಭೂತೈಶ್ವರ್ಯವಂತನೂ ಆದ ಹರಿಗೆ ನಮಸ್ಕಾರ ! ನಿನ್ನ ದಿವ್ಯ ಮಂಗಳವಿಗ್ರಹದ ದರ್ಶನವನ್ನು ಕೊಡು !

ಅಸುರಾದಿಗಳಿಂದ ಜಗತ್ತಿಗೆ ದುಃಖವಾದಾಗ ರಾಮಕೃಷ್ಣಾದಿ ರೂಪಗಳಿಂದ ಅವತರಿಸಿ, ರಾವಣಾದಿ ದುಷ್ಟರನ್ನು ಸಂಹರಿಸಿ ಅಪಾರ ಪರಾಕ್ರಮವನ್ನು ತೋರಿಸುವ ಸ್ವಾಮಿಯು ನೀನು. ಈಗ ದರ್ಶನ ಕೊಡು !

ವಿಷಯಕಾಮಿಗಳು ಕರ್ಮಗಳನ್ನು ಮಾಡಿ ಬಳಲುವರು. ದೇಹಶ್ರಮ, ದ್ರವ್ಯನಾಶ, ಅಲ್ಪಫಲ ಮತ್ತು ವಿರುದ್ಧ ಫಲಗಳಿಗೆ ಕಾಮ್ಯಕರ್ಮವೇ ಕಾರಣ.

ನಿನಗೆ ಸಮರ್ಪಿಸುವ ಕರ್ಮಗಳು ಎಂದಿಗೂ ವಿಫಲವಾಗುವುದಿಲ್ಲವಾಗಿ ದರ್ಶನವನ್ನು ಕೊಡು !

ನಿಷ್ಕಾಮ ಕರ್ಮವು ಅಂಗನ್ಯೂನವಾದರೂ ಈಶ್ವರನಿಗೆ ಅರ್ಪಿತವಾದರೆ ಅವು ಸಫಲಗಳೇ ಆಗುವುವು. ಏಕೆಂದರೆ ಇಂತಹ ಕರ್ಮಗಳನ್ನು ಸ್ವೀಕರಿಸುವವನು ಪರಮಾತ್ಮನು. ಅವನು ಪ್ರಿಯಕರನೂ, ಅನಿಮಿತ್ತ ಬಂಧುವೂ ಆಗಿರುವನು.

ವೃಕ್ಷದ ಬುಡಕ್ಕೆ ನೀರೆರೆದರೆ ಚಿಕ್ಕದೊಡ್ಡ ಕೊಂಬೆಗಳಿಗೆಲ್ಲ ತೃಪ್ತಿಯಾಗಿ ಅಂಕುರ, ಫಲಪುಷ್ಪ ಸಮೃದ್ಧಿ ಫಲವುಂಟಾಗುವುದು. ಅದರಂತೆ ವ್ಯಾಪ್ತನಾದ ಶ್ರೀಹರಿಯನ್ನು ಆರಾಧಿಸಿದರೆ ಅವನ ಅಂಗಾಶ್ರಿತರಾದ ಬ್ರಹ್ಮಾದಿ ದೇವತೆಗಳಿಗೂ, ಆರಾಧಕನಿಗೂ ತೃಪ್ತಿಯುಂಟಾಗುವುದು. ಅದರಿಂದ ಅವನಿಗೆ ಮುಕ್ತಿಯು ದೊರೆಯುವುದು.

ಶ್ಲೋಕ ॥ ನಮಸ್ತುಭ್ಯಂ ಅನಂತಾಯ ದುರ್ವಿತರ್ಕ್ಯಾತ್ಮಕರ್ಮಣೇ ।
ನಿರ್ಗುಣಾಯ ಗುಣೇಶಾಯ ಸತ್ವಸ್ಥಾಯ ಚ ಸಾಂಪ್ರತಂ ॥50/5॥

ಅಪರಿಚ್ಛಿನ್ನನೂ, ಊಹಿಸಲೂ ಶಕ್ಯವಲ್ಲದ ದೇಹ ಮತ್ತು ಕರ್ಮಗಳುಳ್ಳವನೂ, ತ್ರಿಗುಣರಹಿತನೂ, ತ್ರಿಗುಣಗಳನ್ನು ಸೃಷ್ಟ್ಯಾದಿಗಳಿಗಾಗಿ ಪ್ರೇರಿಸುವವನೂ, ಸ್ವಾಮಿಯೂ, ಈಗ ಪಾಲನೆಗಾಗಿ ಸತ್ವಗುಣ ಪ್ರವರ್ತಕನೂ ಆಗಿರುವ ಶ್ರೀಹರಿಗೆ ನಮಸ್ಕಾರ !

## ಐದನೆಯ ಅಧ್ಯಾಯ ಮುಗಿದುದು

ಶುಕ :– ಕೋಟಿ ಸೂರ್ಯಪ್ರಕಾಶನಾದ ಶ್ರೀಹರಿಯು ಪ್ರಕಟನಾದನು.

ಬ್ರಹ್ಮ :– ಅಜನೂ, ಸೃಷ್ಟ್ಯಾದಿ ಕರ್ತನೂ, ಜ್ಞಾನಾದಿರೂಪನೂ, ಶರೀರಾಭಿಮಾನದಿಂದ ಬರದಿರುವವನೂ, ಸುಖಸಮುದ್ರನೂ, ಅಣುವಿಗೆ ಅಣು-ಮಹತ್ತಿಗೆ ಮಹತ್ತೂ, ಅಳತೆಗೆ ಸಿಗದಿರುವ ದೇಹವುಳ್ಳವನೂ, ಅಘಟಿತ ಘಟಕ ಶಕ್ತನೂ ಆದ ನಿನಗೆ ನಮಸ್ಕಾರ ! ಸಕಲಾಧಾರಕನೇ ! ಪುರುಷೋತ್ತಮನಾದ ಈ ನಿನ್ನರೂಪವನ್ನು ಪುರುಷಾರ್ಥಾಪೇಕ್ಷಿಗಳೂ, ವೇದೋಕ್ತಕರ್ಮಮಾಡತಕ್ಕವರೂ, ಪಂಚರಾತ್ರೋಕ್ತ್ಯಾದಿಗಳಲ್ಲಿ ಉಕ್ತವಾದಂತೆ ನಡೆಯತಕ್ಕವರೂ ಆದ ಸಜ್ಜನರು ಸ್ತುತಿಸುವರು. ವಿಶ್ವಮೂರ್ತಿಯೇ ! ಸಮಾಧಿ ಮುಂತಾದ ಸಾಧನದಿಂದ ನಿನ್ನಲ್ಲಿ ಆಶ್ರಯವನ್ನು ಮಾಡಿರುವ ತ್ರಿಲೋಕಸಹಿತವಾದ ನಮ್ಮನ್ನು ಏಕಕಾಲದಲ್ಲಿ ನಾನು ನೋಡುತ್ತಿರುವೆನು. ನೀನು ನಮ್ಮನ್ನು ರಕ್ಷಿಸು. ಜಗತ್ತಿನ ಸೃಷ್ಟಿ, ಸ್ಥಿತಿ ಮತ್ತು

ಲಯಕರ್ತನೂ ನೀನೇ. ಕುಂಬಾರ, ನೀರು ಮುಂತಾದುವುಗಳಿದ್ದರೂ, ಮಣ್ಣಿಲ್ಲ ದಿದ್ದರೆ ಗಡಿಗೆ ಹೇಗೆ ಆಗುವುದಿಲ್ಲವೋ ಹಾಗೆ ನೀನಿಲ್ಲದೆ ಈ ಜಗತ್ತಿನ ಸೃಷ್ಟಿಯು ದುರ್ಘಟವೇ ಸರಿ. ಅಂದಮಾತ್ರಕ್ಕೆ ಹರಿಯಾದ ನೀನು ಉಪಾದಾನನಲ್ಲ. ಸ್ವತಂತ್ರನು. ಉಭಯ ಪ್ರಕೃತಿಗಿಂತ ಉತ್ತಮನು. ಸರ್ವವೂ ನಿನ್ನ ಅಧೀನ ವಾಗಿರುವುದರಿಂದ ಅಶೇಷವೂ ನೀನೇ. ನೀನೇ ಸರ್ವಾಧಾರನಾದ್ದರಿಂದ ಸಕಲದರ ನಾಮವೂ ನಿನಗಿದೆ.

ಜಗತ್ತಿಗೆ ಉಪಾದಾನವಾದ ಜಡಪ್ರಕೃತಿಯು ನಿನ್ನಾಧೀನವಾಗಿರುವುದರಿಂದ ನಿನ್ನದು ಎಂದು ಅಭಿಮತವು. ಈ ಜಡಪ್ರಕೃತಿಯಿಂದ ಜಗತ್ತನ್ನು ಸೃಷ್ಟಿಸಿ ಅದರ ಪ್ರವೃತ್ತಿಗಾಗಿ ಅದರೊಳಗೆ ಪ್ರವೇಶಿಸಿರುವೆ. ಇದಕ್ಕೆ ಯೋಗಿಪ್ರತ್ಯಕ್ಷವೇ ಪ್ರಮಾಣ.

ಕಾಷ್ಠಮಥನದಿಂದ ಅಗ್ನಿಯೂ, ಆಕಳನ್ನು ಕರೆಯುವುದರಿಂದ ಹಾಲೂ. ದೊರೆಯುವುದು. ಭೂಮಿಯ ವ್ಯವಸಾಯ ಮಾಡಿದರೆ ಬೆಳೆ ದೊರೆಯುವುದು. ಬಾವಿ ತೋಡಿದರೆ ನೀರು ದೊರೆಯುವುದು. ಹೀಗೆ ತಿಳಿಯುವಂತೆ ವಿವೇಕಿಗಳು ಬುದ್ಧಿಸಾಧನೆಯಿಂದ ಗುಣಗಳು ಮತ್ತು ಅವುಗಳ ಕಾರ್ಯಗಳಲ್ಲಿಯೂ ಇರುವ ನೀನು ಭಿನ್ನನೂ, ನಿರ್ಲಿಪ್ತನೂ ಆಗಿ ನೆಲೆಸಿರುವುದನ್ನು ತಿಳಿಯುವರು. ಮತ್ತು ಇತರರಿಗೆ ಹಾಗೆಯೇ ಹೇಳುವರು. ಇಂತಹ ನಿನ್ನ ದರ್ಶನದಿಂದ ನಾವು ಸುಖಿ ಗಳಾದೆವು. ಇಲ್ಲಿ ಬಂದಿರುವ ನಮ್ಮ ಉದ್ದೇಶವನ್ನು ನೀನೇ ಈಡೇರಿಸಬೇಕು. ನಾನು, ಶಿವ ಮೊದಲಾದವರೆಲ್ಲ ನಿನ್ನ ಭಿನ್ನಾಂಶರಾಗಿ, ನಿನ್ನಿಂದಲೇ ಸೃಷ್ಟರಾಗಿ, ನಿನಗೆ ಕಿಂಕರರಾಗಿ, ನಿನ್ನಪ್ಪಣೆಯಂತೆ ಸೃಷ್ಟ್ಯಾದಿ ವ್ಯಾಪಾರ ಮಾಡುತ್ತಿರುವೆವು. ನಮಗೆ ಸುಖವಾಗಬೇಕಾದರೆ ನಾವೇನು ಮಾಡಬೇಕೆಂದು ಅಪ್ಪಣೆ ಕೊಡು ಸ್ವಾಮಿ !

**ಭಗವಂತ :–** ದೇವತೆಗಳಿರಾ ! ನಿಮಗೆ ಮಂಗಳಕರವಾದ ಸ್ಥಿತಿ ಬರುವ ವರೆಗೆ ಬಲಿ ಮೊದಲಾದ ದೈತ್ಯರೊಡನೆ ಸಂಧಿಯನ್ನು ಮಾಡಿಕೊಳ್ಳಿ, ಹಾವು ಇಲಿ ಯೊಡನೆ ಸಂಧಿಮಾಡಿಕೊಂಡಂತೆ ಕಾರ್ಯವಾಸಿಗಳು ಶತ್ರುಗಳನ್ನಾದರೂ ಅನುಸರಿಸಿ ಸಂಧಿಯನ್ನು ಮಾಡಿಕೊಳ್ಳಬೇಕು. ಅಮೃತವನ್ನು ಪಡೆಯಲು ಯತ್ನಿಸಿರಿ. ಅಮೃತ ವನ್ನು ಕುಡಿದವನು ಜರಾಮರಣ ರಹಿತನಾಗುವನು. ನೀವೂ ಅದರಂತೆ ಆಗಲು ಮಂದರ ಪರ್ವತವನ್ನು ಕಡಗೋಲನ್ನಾಗಿ, ವಾಸುಕಿಯನ್ನು ಹಗ್ಗವನ್ನಾಗಿ ಮಾಡಿ ಕೊಂಡು, ನನ್ನ ಸಹಾಯದಿಂದ ನೀವೂ ದೈತ್ಯರೂ ಸೇರಿ ಕ್ಷೀರಸಮುದ್ರವನ್ನು ಮಥನ ಮಾಡಿರಿ. ಆದರಿಂದ ದೈತ್ಯರು ಕ್ಲೇಶವನ್ನೂ, ನೀವು ಸುಖವನ್ನೂ ಹೊಂದುವಿರಿ. ಈ ಕಾರ್ಯ ಆಗುವವರೆಗೂ ದೈತ್ಯರು ಹೇಳಿದುದನ್ನು ಅನುಮೋದಿ ಸಿರಿ. ಸಾಮೋಪಾಯದಿಂದ ಆಗುವ ಕಾರ್ಯವು ದ್ವೇಷ ಮತ್ತು ಕೋಪಗಳಿಂದ ಸರ್ವಥಾ ಆಗಲಾರದು. ಮಥನ ಕಾಲದಲ್ಲಿ ವಿಷವು ಹುಟ್ಟುವುದು. ಅದಕ್ಕೆ

ಭಯಪಡದಿರಿ. ಹಾಗೆಯೇ ಸಮುದ್ರದಲ್ಲಿ ಹುಟ್ಟುವ ವಸ್ತುಗಳಲ್ಲಿ ಕಾಮ, ಲೋಭ ಮುಂತಾದುವುಗಳನ್ನು ಮಾಡಬಾರದು.

(ಹೀಗೆ ಹೇಳಿ ಹರಿಯು ಇಮ್ಮರೆಯಾದನು ಅವನಿಗೆ ನಮಿಸಿ ದೇವತೆಗಳು ಬಲಿಯ ಬಳಿಗೆ ಬಂದು ಅವನಿಗೆ ಸಮುದ್ರಮಥನದ ವಿಷಯವನ್ನು ತಿಳಿಸಿದರು. ಸಂಧಿ ಮತ್ತು ವಿಗ್ರಹಗಳನ್ನು ಚೆನ್ನಾಗಿ ತಿಳಿದ ಬಲಿಯು ವಿಧೇಯರಾಗಿ ಬಂದ ದೇವತೆಗಳನ್ನು ನೋಡಿ, ಅವರನ್ನು ಕೊಲ್ಲಲು ಬಂದ ದೈತ್ಯರನ್ನು ತಡೆದು ಸಮಾಧಾನ ಮಾಡಿದನು. ದೇವತೆಗಳು ಪುರುಷೋತ್ತಮನು ಹೇಳಿದುದನ್ನು ತಿಳಿಸಿದಾಗ ಬಲಿ, ಶಂಬರ, ಅರಿಷ್ಟನೇಮಿ ಮೊದಲಾದವರಿಗೆ ಸಂಮತವಾಯಿತು. ಎಲ್ಲರೂ ಸೇರಿ ಮಂದರ ಪರ್ವತವನ್ನು ಕಿತ್ತು, ಸ್ವಲ್ಪದೂರ ಸಾಗಿಸುವುದರೊಳಗೆ ಭಾರವನ್ನು ಹೊರ ಲಾರದೆ ಕೆಳಕ್ಕೆ ಎತ್ತಿಹಾಕಿದರು. ದೇವಾದಿಗಳು ಗಿರಿಯ ಕೆಳಗೆ ಸಿಕ್ಕಿ ಪುಡಿಪುಡಿ ಯಾದರು. ಶ್ರೀಹರಿಯು ಗರುಡನನ್ನೇರಿ ಅಲ್ಲಿಗೆ ಬಂದು, ಕೃಪಾದೃಷ್ಟಿಯಿಂದ ಆ ದೇವಾದಿಗಳನ್ನು ಬದುಕಿಸಿ, ಒಂದೇ ಕೈಯಿಂದ ಗಿರಿಯನ್ನೆತ್ತಿ ಗರುಡನ ಮೇಲಿಟ್ಟು, ತಾನೂ ಅವನ ಮೇಲೆ ಕುಳಿತು ಸುರಾಸುರರೊಡನೆ ಕ್ಷೀರಸಮುದ್ರದ ಬಳಿಗೆ ಬಂದು, ಅದರ ಮಧ್ಯೆ ಗಿರಿಯನ್ನಿಟ್ಟು ಗರುಡನನ್ನು ಹೊರಡೆಂದು ಹೇಳಿದನು. ಗರುಡನು ಸ್ವಸ್ಥಾನಕ್ಕೆ ತೆರಳಿದನು.

## ಆರನೆಯ ಅಧ್ಯಾಯ ಮುಗಿದುದು

ವಾಸುಕಿಗೆ ಅಮೃತದಲ್ಲಿ ಭಾಗವನ್ನು ಕೊಡುವುದಾಗಿ ಒಪ್ಪಿಸಿ, ಅವನನ್ನು ಹಗ್ಗದಂತೆ ಮಂದರ ಪರ್ವತಕ್ಕೆ ಸುತ್ತಿ ಕ್ಷೀರಸಮುದ್ರವನ್ನು ಕಡೆಯಲು ಆರಂಭಿ ಸಿದರು. ಶ್ರೀಹರಿಯು ದೇವತೆಗಳ ಪಕ್ಷದಲ್ಲಿ ಮುಂದೆ ನಿಂತು ಸರ್ಪದ ಮುಖಭಾಗ ವನ್ನು ಹಿಡಿದನು. ದೈತ್ಯರು ಸರ್ಪದ ಬಾಲವನ್ನು ಹಿಡಿಯಲು ಒಪ್ಪಲಿಲ್ಲ, ಆಗ ಶ್ರೀಹರಿಯು ಬಾಲವನ್ನು ಹಿಡಿದು ದೇವತೆಗಳಿಂದ ಸಹಿತನಾಗಿ ಮಥಿಸಲಾರಂಭಿ ಸಿದನು. ಸರ್ಪದ ಮುಖವನ್ನು ಹಿಡಿದವರು ಅದರ ವಿಷದ ಸೋಂಕಿನಿಂದ ದೈತ್ಯರು ಭಂಗಪಟ್ಟರು. ಹರಿಯು ಆ ದುಃಖವನ್ನು ಪರಿಹರಿಸಿದನು. ಗಿರಿಯು ನೀರಿನಲ್ಲಿ ಮುಳುಗಿಹೋಯಿತು. ಎಲ್ಲರೂ ಖಿನ್ನರಾದರು. ಶ್ರೀಪರಮಾತ್ಮನು ಬಂದ ವಿಘ್ನ ವನ್ನು ತಿಳಿದು ಕೂರ್ಮಾವತಾರವನ್ನು ಮಾಡಿ ಬೆನ್ನಿನ ಮೇಲೆ ಗಿರಿಯನ್ನು ಹೊತ್ತು ಕೊಂಡು ಮೇಲಕ್ಕೆ ಬಂದನು. ತಿರುಗಿ ಮಥನಕಾರ್ಯವು ಆರಂಭವಾಯಿತು. ಕೂರ್ಮನ ಬೆನ್ನು ಲಕ್ಷಯೋಜನ ವಿಸ್ತಾರವಾದುದು. ಅವನು ಹೊತ್ತಿದ್ದ ಗಿರಿಯು ಮೇಲೆ ಕೆಳಗೆ ಹೋಗುತ್ತ ಅಲ್ಲಾಡಿತು. ಶ್ರೀಹರಿಯು **ಅಜಿತ** ರೂಪದಿಂದ ಸಾವಿರ ಬಾಹುಗಳುಳ್ಳವನಾಗಿ ಪರ್ವತವನ್ನು ಆಕ್ರಮಿಸಿ ಬ್ರಹ್ಮಾದಿಗಳಿಂದ ಸ್ತುತ್ಯನಾಗಿ

ನಿಂತನು. ದೇವಾಸುರರು, ಮಂದರಗಿರಿ, ವಾಸುಕಿ ಇವರೊಳಗೆ ಪ್ರವೇಶಿಸಿದ ಪರಮಾತ್ಮನ ಅನುಗ್ರಹದಿಂದ ದೇವಾಸುರರು ಅಭಿವೃದ್ಧಿ ಬಲವುಳ್ಳವರಾಗಿ ಸಮುದ್ರ ವನ್ನು ಕಡೆದರು. ಸರ್ಪದ ಮುಖಭಾಗವನ್ನು ಹಿಡಿದಿದ್ದ ರಾಕ್ಷಸರು ಅದರ ವಿಷದ ತಾಪವನ್ನು ತಡೆಯಲಾರದೆ ಬಳಲಿದರು, ಸುರರೂ ತಾಪದಿಂದ ದುಃಖಿತರಾದರು. ಆಗ ಹರಿಯ ಅಧೀನಗಳಾದ ಮೇಘಗಳು ತಾಪಪರಿಹಾರಕ್ಕಾಗಿ ತುಂತುರು ಮಳೆ ಯನ್ನು ಸುರಿಸಿದುವು. ತಂಗಾಳಿ ಬೀಸಿತು. ಇದರಿಂದ ದೈತ್ಯಾದಿಗಳೆಲ್ಲರೂ ಸುಧಾರಿಸಿ ಕೊಂಡರು, ಸಮುದ್ರವನ್ನು ಎಷ್ಟು ಕಡೆದರೂ ಅಮೃತವು ಹುಟ್ಟಲಿಲ್ಲ. ಆಗ ಅಜಿತ ಭಗವಂತನು ತಾನೊಬ್ಬನೇ ಸರ್ಪದ ಮುಖ ಬಾಲಗಳನ್ನು ಹಿಡಿದು ರಭಸದಿಂದ ಸಮುದ್ರವನ್ನು ಕಡೆದನು. ಆಗ ಹಾಲಾಹಲವೆಂಬ ವಿಷವು ಹುಟ್ಟಿತು. ಅದು ಅಸಹ್ಯ ವೀರ್ಯವುಳ್ಳುದು. ಪ್ರತಿದಿಕ್ಕಿಗೂ ಹಬ್ಬುತ್ತಿದೆ. ಇದನ್ನು ನೋಡಿ ಭೀತರಾದ ದೇವತೆಗಳು ರಕ್ಷಿಸೆಂದು ಶಿವನ ಮರೆಹೊಕ್ಕರು.

**ದೇವತೆಗಳು :–** ಇಂದ್ರಾದಿಗಳಿಗೆ ಪ್ರಭುವೆ ! ಪ್ರಮಥನಾಥನೆ ! ಸ್ಥಾವರ ಪ್ರಾಣಿಗಳ ಸೃಷ್ಟಿಕರ್ತನೆ ! ಮಹಾದೇವನೆ ! ನಿನ್ನಲ್ಲಿ ಮರೆಹೊಕ್ಕಿರುವೆವು. ವಿಷದ ಭಯದಿಂದ ನಮ್ಮನ್ನು ಕಾಪಾಡು ! ಶಿವಾಂತರ್ಯಾಮಿ ನಾರಾಯಣನೇ ! ಬ್ರಹ್ಮ ರುದ್ರಾದಿ ಜಗತ್ತಿಗೆ ಬಂಧಮೋಕ್ಷಗಳನ್ನು ಕೊಡಲು ನೀನೊಬ್ಬನೇ ಸಮರ್ಥನು. ಆದ್ದರಿಂದಲೇ ಸ್ವಪುರುಷಾರ್ಥಾಸಕ್ತರಾದ ವಿವೇಕಿಗಳು ಸಾಂಸಾರಿಕ ಕ್ಲೇಶ ಪರಿಹಾರಕನೂ, ಹಿತೋಪದೇಶಕನೂ ಆದ ನಿನ್ನನ್ನೇ ಅರ್ಚಿಸುತ್ತಾರೆ. ನೀನು ಸೃಷ್ಟ್ಯಾದಿಗಳನ್ನು ಮಾಡಲಿಚ್ಛಿಸಿದಾಗ ವಿರಿಂಚನಲ್ಲಿ ಬ್ರಹ್ಮನಾಮಕ ರೂಪದಿಂದಿದ್ದು ಸೃಷ್ಟಿಯನ್ನೂ, ಸಾಕ್ಷಾದ್ವಿಷ್ಣುರೂಪದಿಂದ ಸ್ಥಿತಿಯನ್ನೂ, ಶಿವನಲ್ಲಿ ಶಿವನಾಮಕ ರೂಪದಿಂದಿದ್ದು, ಲಯವನ್ನೂ ಮಾಡುವೆ. ವಿಷ್ಣುವೇ ! ಅತಿ ರಹಸ್ಯನಾದ ಪರಬ್ರಹ್ಮನು ನೀನೇ. ದೇವ, ದಾನವ, ಮಿಶ್ರಜೀವರನ್ನು ಸೃಷ್ಟಿಸುವವನೂ ನೀನೇ. ಸೃಷ್ಟ್ಯಾದಿಗಳಿಗೆ ಕಾರಣಗಳಾದ ನಾನಾ ಶಕ್ತಿಗಳಿಂದ ಪ್ರಕಾಶಿಸುವವನೂ ನೀನೇ ! ಆದಾನಾದಿ ಕರ್ತನೂ, ಜಗನ್ನಿಯಾಮಕನೂ ನೀನೇ ! ಋಗಾದಿ ಶಾಸ್ತ್ರ ಪ್ರತಿ ಪಾದ್ಯನೂ, ಮಹತ್ತತ್ತ್ವ ಮುಂತಾದ ತತ್ತ್ವಗಳ ಸತ್ತಾಪ್ರದನೂ, ಆಯಾ ತತ್ತ್ವಗಳ ಸ್ವಭಾವಪ್ರವರ್ತಕನೂ, ಸಂಹಾರಕರ್ತನೂ, ಜ್ಞಾನಸ್ವರೂಪನೂ, ಆನಂದರೂಪನೂ, ಏಕಪ್ರಕಾರನೂ, ಸರ್ವಾಧಾರಕನೂ ಮತ್ತು ಪ್ರಣವ ಪ್ರತಿಪಾದ್ಯನೂ ನೀನೇ !

ಜಗನ್ಮಂಗಳನೇ ! ಅಗ್ನಿಯು ನಿನ್ನ ಮುಖದಿಂದಲೂ, ಪೃಥಿವಿಯು ನಿನ್ನ ಪಾದಗಳಿಂದಲೂ, ಕಾಲವು ನಿನ್ನ ಗಮನದಿಂದಲೂ, ದಿಕ್ಕುಗಳು ಸರ್ವಾಂತರ್ಯಾಮಿ ಯಾದ ನಿನ್ನ ಕಿವಿಗಳಿಂದಲೂ, ವರುಣನು ನಿನ್ನ ಜಿಹ್ವೆಯಿಂದಲೂ ಹುಟ್ಟಿ, ಆಯಾ ಅವಯವಗಳನ್ನೇ ಆಶ್ರಯಿಸಿರುವರು. ಭಗವಂತನೇ ! ಅಂತರಿಕ್ಷವು ನಿನ್ನ ನಾಭಿ

ಯೆಂದೂ, ವಾಯುವು ನಿನ್ನ ಶ್ವಾಸವೆಂದೂ, ಸೂರ್ಯನು ನಿನ್ನ ಕಣ್ಣುಗಳೆಂದೂ, ಜಲವು ನಿನ್ನ ರೇತಸ್ಸೆಂದೂ ಜ್ಞಾನಿಗಳು ಕರೆಯುತ್ತಾರೆ. ನಿನ್ನ ದೇಹವೇ ಮುಕ್ತಾಮುಕ್ತರಿಗಾಶ್ರಯವಾಗಿದೆ. ಬ್ರಹ್ಮದೇವರು ನಿನ್ನ ಚಿತ್ತ. ಚಂದ್ರನು ನಿನ್ನ ಮನಸ್ಸು. ಸ್ವರ್ಗಲೋಕವು ನಿನ್ನ ಶಿರಸ್ಸು. ಸಪ್ತ ಸಮುದ್ರಗಳೂ ನಿನ್ನ ಉದರ ಪರ್ವತಗಳು ನಿನ್ನ ಅಸ್ಥಿಗಳು. ಓಷಧಿ ಲತೆಗಳು ನಿನ್ನ ರೋಮಗಳು. ಗಾಯತ್ರೀ ಮೊದಲಾದ ಏಳು ಛಂದಸ್ಸುಗಳು ನಿನ್ನ ತ್ವಗಾದಿ ಸಪ್ತಧಾತುಗಳು. ಯಮನು ನಿನ್ನ ಹೃದಯವು.

ಶ್ರೀಹರಿಯ ಪ್ರತಿಮೆಯಾದ ಪಾರ್ವತೀರಮಣನೇ ! ನಿನ್ನ ಐದು ಮುಖಗಳಿಂದ ಕ್ರಮವಾಗಿ ೧) "ಸದ್ಯೋ ಜಾತಂ ಪ್ರಪದ್ಯಾಮಿ" ೨) "ವಾಮದೇವಾಯ ನಮೋ ಜ್ಯೇಷ್ಠಾಯ" ೩) "ಅಘೋರೇಭ್ಯೋಽಥ ಘೋರೇಭ್ಯೋ ಘೋರತರೇಭ್ಯಃ" ೪) "ತತ್ಪುರುಷಾಯ ವಿದ್ಮಹೇ" ೫) "ಈಶಾನಃ ಸರ್ವವಿದ್ಯಾನಾಂ" ಎಂಬ ಐದು ಉಪನಿಷತ್ತುಗಳು ಪ್ರಕಟವಾಗಿರುವುವು. ಈ ಐದು ಮಂತ್ರಗಳ ಪದಚ್ಛೇದದಿಂದ ಮೂವತ್ತೆಂಟು ಕಲಾರೂಪ ಮಂತ್ರಗಳು ಉತ್ಪನ್ನಗಳಾಗಿವೆ. ಶಿವನಾಮಕನೂ, ನಿನ್ನ ಅಂತರ್ಯಾಮಿಯಾದ ಪರಮಾತ್ಮನೆಂಬ ವಸ್ತುವೂ ಮತ್ತು ಸ್ವಯಂಜ್ಯೋತಿ ಶಬ್ದವಾಚ್ಯನೂ ಆದ ವಿಷ್ಣುವಿನ ಆಶ್ರಯವನ್ನು ನೀನು ಅವನ ಅನುಗ್ರಹದಿಂದ ಹೊಂದಿರುವೆ. ರುದ್ರನೇ ! ಅಧರ್ಮಾಭಿಮಾನಿ ನಿರ್ಋತಿಯು ನಿನ್ನ ಛಾಯಾಶ್ರಿತನು, ಸೃಷ್ಟ್ಯಾದಿಗಳಿಗೆ ಕಾರಣಗಳಾದ ಗುಣತ್ರಯವೂ ನಿನ್ನ ಮೂರು ಕಣ್ಣುಗಳು. ಸ್ವಾಯಂಭುವನು ಪಾಶುಪತಾದಿ ಶಾಸ್ತ್ರಕರ್ತನಾದ ನಿನ್ನ ದೃಷ್ಟಿಯನ್ನು ಆಶ್ರಯಿಸಿರುವನು. ನಾರದರು ನಿನ್ನ ಇಚ್ಛೆಯನ್ನು ಅನುಸರಿಸಿ ನಡೆಯುವರು. ಕೈಲಾಸಪಾಲಕನೇ ! ಲೋಕಪಾಲಕರಾದ ವಿರಿಂಚಾದಿಗಳೂ, ಮುಕ್ತಾಮುಕ್ತ ದೇವಶ್ರೇಷ್ಠರೂ, ನಿನ್ನ ಹೃದಯದಲ್ಲಿರುವ ಪರಮಾತ್ಮತತ್ತ್ವವನ್ನು ಸಂಪೂರ್ಣವಾಗಿ ತಿಳಿಯಲಾರರು. ಪರಮಾತ್ಮನಾದ ಶ್ರೀಹರಿಗೆ ತ್ರಿಗುಣಗಳು ಬಂಧಕಗಳಲ್ಲ. ಅವನು ಗುಣಪೂರ್ಣನು. ಅವನಿಗೂ ಅವನ ಅವತಾರಗಳಿಗೂ, ಅವನ ಗುಣಕರ್ಮಗಳಿಗೂ, ಅವಯವಗಳಿಗೂ ಪರಸ್ಪರ ಭೇದವಿಲ್ಲ.

ರುದ್ರಾಂತರ್ಗತ ನಾರಾಯಣನೇ ! ನಿನ್ನಿಂದ ಸೃಷ್ಟವಾದ ಜಗತ್ತನ್ನು ಪ್ರಳಯ ಕಾಲದಲ್ಲಿ ನಿನ್ನ ಮೂರನೆಯ ಕಣ್ಣಾದ ಅಗ್ನಿನೇತ್ರದ ಜ್ವಾಲೆಯಿಂದ ಸುಟ್ಟು ಬೂದಿ ಮಾಡುವೆಯಾದ್ದರಿಂದ ಪ್ರಾಣಿಹಿಂಸಕರಾದ ಮನ್ಮಥ, ದಕ್ಷಯಜ್ಞ, ತ್ರಿಪುರಾಸುರರು ಕಾಲಹರನಾದ ಶಿವ ಇವರೆಲ್ಲರನ್ನೂ ನಾಶಮಾಡತಕ್ಕ ನಿನ್ನನ್ನು ಸ್ತುತಿಸಲು ಶಕ್ಯವಿಲ್ಲ.

ರುದ್ರನೇ ! ಜ್ಞಾನಿಗಳೂ, ಹಿತೋಪದೇಶಕರೂ ಆದವರು ನಿನ್ನನ್ನು ಧ್ಯಾನ ಮಾಡುವರಾದುದರಿಂದ ನೀನು ಕಾಮುಕನೂ ಅಲ್ಲ, ಕ್ರೂರಿಯೂ ಅಲ್ಲ. ನೀನು

ಶಾಂತನೂ, ತಪಸ್ವಿಯೂ ಆಗಿರುವುದರಿಂದ ಕ್ರೂರವಾದ ಆಕಾರವೂ ನಿನಗಿಲ್ಲ. ಮೂರ್ಖರು ಇದನ್ನು ವಿಚಾರಮಾಡದೆ ನಿನ್ನನ್ನು ಕಾಮುಕನೆಂದೂ, ಕ್ರೂರಾಕಾರನೆಂದೂ ಬೊಗಳುವರು. ಮಹಾದೇವ ! ನಿನ್ನ ವ್ಯಾಪಾರವನ್ನು ತಿಳಿಯುವುದು ಕಷ್ಟ. ಮೂರ್ತಾಮೂರ್ತ ಜಗತ್ತಿಗಿಂತ ಉತ್ತಮನಾದ ನಿನ್ನನ್ನು ಸನಕಾದಿಗಳೇ ಪೂರ್ಣವಾಗಿ ತಿಳಿಯಲಾರರೆಂದ ಬಳಿಕ ಬ್ರಹ್ಮಸೃಷ್ಟಿ ಪ್ರವಾಹದಲ್ಲಿ ಬಿದ್ದಿರುವ ನಾವು ನಿನ್ನನ್ನು ಸ್ತುತಿಸಲು ಶಕ್ತರೇನು ? ನಿನ್ನಲ್ಲಿ ನಮಗಿರುವ ಭಕ್ತಿಪ್ರಕಟನೆಗೆ ಮಾತ್ರ ನಾವು ನಿನ್ನನ್ನು ಸ್ತುತಿಸುತ್ತಿರುವೆವು. ಮಹೇಶ್ವರನೇ ! ನಿನ್ನ ಹೃದಯದಲ್ಲಿರುವ ಶಿವನಾಮಕ ನಾರಾಯಣನೇ ಸರ್ವೋತ್ತಮನೆಂದು ನೋಡುತ್ತಿರುವೆವು. ಅವನಿಗಿಂತ ಮಿಗಿಲಾದವನನ್ನು ನಾವು ನೋಡುತ್ತಿಲ್ಲ. ವಿಚಾರಮಾಡದೇ ಇದ್ದರೆ ನಿನ್ನ ಚರಿತ್ರೆಯು ತಿಳಿಯುವುದಿಲ್ಲ. ಇಂತಹ ನಿನ್ನ ಜನ್ಮವು ಜನರ ಸುಖಕ್ಕಾಗಿರುವುದು. ಆದ್ದರಿಂದ ನಮ್ಮನ್ನು ವಿಷದ ವಿಪತ್ತಿನಿಂದ ತಪ್ಪಿಸಿ ಕಾಪಾಡು !

**ಶುಕ :–** ಪರೀಕ್ಷಿದ್ರಾಜನೇ ! ಹೀಗೆ ಇಂದ್ರಾದಿ ದೇವತೆಗಳು ಸ್ತುತಿಸಲಾಗಿ ಸರ್ವಪ್ರಾಣಿಗಳಿಗೂ ಉಪಕಾರಿಗಳಾದ ರುದ್ರದೇವರು ಪ್ರಜೆಗಳ ಕ್ಲೇಶಗಳನ್ನು ನೋಡಿ **ವ್ಯಸನಂ** (ವಿ+ಅಸನಂ) ಅಂದರೆ ವಿಷ್ಣುವಿಗೆ ಈ ವಿಪತ್ತನ್ನು ಪರಿಹರಿಸುವ ಶಕ್ತಿಯಿದ್ದರೂ ನನಗೆ ಕೀರ್ತಿ ಕೊಡಬೇಕೆಂದು ಅವನು ಉದಾಸೀನನಾಗಿರುವನೆಂಬುದನ್ನು ಕಂಡುಕೊಂಡು ಕೃಪೆಯುಳ್ಳವನಾಗಿ ಗಿರಿಜೆಯನ್ನು ಕುರಿತು ಮಾತಾಡುತ್ತಾರೆ :–

**ಶಿವ :–** ಭವಾನಿಯೇ ! ವಿಷದಿಂದ ಪ್ರಜೆಗಳು ಕಷ್ಟಪಡುತ್ತಿರುವುದನ್ನು ನೋಡಲಾರೆನು. ಈ ಪ್ರಜೆಗಳ ಭಯವನ್ನು ಪರಿಹರಿಸಿ ಕಾಪಾಡುವುದು ನನ್ನ ಕರ್ತವ್ಯವಾಗಿದೆ. ಶಕ್ತನು ಶರಣಾಗತರನ್ನು ರಕ್ಷಿಸಿದಾಗಲೇ ಅವನಲ್ಲಿರುವ ಶಕ್ತಿಯು ಸಫಲ. ದುರ್ಜನರು ಮೋಹಿತರಾಗಿ ಒಬ್ಬರನ್ನೊಬ್ಬರು ಕೊಲ್ಲಲೆಣಿಸುವರು. ಸಜ್ಜನನಾದರೋ ನಶ್ವರವಾದ ಪ್ರಾಣವನ್ನು ತೆತ್ತಾದರೂ ಪ್ರಾಣಿಗಳನ್ನು ರಕ್ಷಿಸುವನು. ಪ್ರಾಣಿಗಳಲ್ಲಿ ದಯೆತೋರುವವನ ವಿಷಯದಲ್ಲಿ ಅಂತರ್ಯಾಮಿಯಾದ ಶ್ರೀಹರಿಯು ಸಂತೋಷಪಡುವನು. ಅವನು ಸಂತುಷ್ಟನಾದರೆ ನಮಗೆ ಮುಕ್ತಿಯಾಗಿ ನಾವೆಲ್ಲ ಆನಂದಪಡುವೆವು. ಆದ್ದರಿಂದ ನಾನು ಈಗಲೇ ಆ ವಿಷವನ್ನು ಕುಡಿಯುವೆನು.

**ಶುಕ :–** ಶಿವನ ಸಾಮರ್ಥ್ಯವನ್ನು ಚೆನ್ನಾಗಿ ತಿಳಿದಿರತಕ್ಕ ಪಾರ್ವತಿಯು ಅದನ್ನು ಅನುಮೋದಿಸಿದಳು. (ಮುಂದೆ ಹೇಳುವ ಸಂಗತಿಯು ಶ್ರೀಮಧ್ವಾಚಾರ್ಯರ ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿಯೂ, ಪದ್ಮಪುರಾಣದಲ್ಲಿಯೂ ಇದೆ.) ಮೊದಲು ಪ್ರಜೆಗಳಿಂದ ಪ್ರಾರ್ಥಿತರಾಗಿದ್ದ ವಾಯುದೇವರು ವಿಷವನ್ನು ಸುವರ್ಣ ಪಾತ್ರೆಯಲ್ಲಿ ತುಂಬಿಸಿ ಕುಡಿದರು. ಇದಕ್ಕೆ ಆಧಾರ :–

"ವಾಯುರಸ್ಮಾ ಉಪಾಮಂಥತ್ ಪಿನಷ್ಟಿಸ್ಮಾಕುನನ್ನಮಾ ।
ಕೇಶೀ ವಿಷಸ್ಯ ಪಾತ್ರೇಣ ಯದ್ರುದ್ರೇಣಾಪಿಬತ್ಸಹ"

— ಋಗ್ವೇದ, 10ನೆ ಮಂಡಲ, 136ನೆಯ ಸೂಕ್ತ, 7ನೆ ಮಂತ್ರ.

ಉಳಿದ ವಿಷದ ಗಸ್ಟನ್ನು ಕೈಗಳಿಂದ ತಿಕ್ಕಿ ಅದರ ಶಕ್ತಿಯನ್ನು ಕಡಿಮೆಮಾಡಿ ವಾಯುದೇವರು ರುದ್ರದೇವರಿಗೆ ಕೊಟ್ಟರು. ಕಲಿಯಿಂದ ಅಭಿಮನ್ಯಮಾನವಾದ ಆ ವಿಷವನ್ನು ಅತಿಸ್ವಲ್ಪ ಕುಡಿದರೂ ಶಿವನ ಕಂಠದಲ್ಲಿ ನೀಲರೂಪವನ್ನು ಮಾಡಿ ತನ್ನ ಸಾಮರ್ಥ್ಯವನ್ನು ತೋರಿಸಿತು. ರುದ್ರನ ಈ ಅದ್ಭುತ ಕಾರ್ಯವನ್ನು ಕೇಳಿ ಪ್ರಜೆಗಳೂ, ಪಾರ್ವತಿಯೂ, ಚತುರ್ಮುಖನೂ ಮತ್ತು ಭಗವಂತನೂ ಕೊಂಡಾಡಿದರು. ರುದ್ರನು ವಿಷವನ್ನು ಕುಡಿಯುವಾಗ ಕೈಯಿಂದ ಬಿದ್ದ ವಿಷದ ಬಿಂದುಗಳನ್ನು ಹಾವು, ಚೇಳು ಮುಂತಾದ ವಿಷಜಂತುಗಳೂ, ವಿಷದ ದಂತಗಳುಳ್ಳ ಹುಲಿ ಮೊದಲಾದುವೂ ಮತ್ತು ವಿಷವೃಕ್ಷಗಳೂ ಸ್ವೀಕರಿಸಿದುವು.

## ಏಳನೆಯ ಅಧ್ಯಾಯ ಮುಗಿದುದು

ದೇವದೈತ್ಯರು ತಿರುಗಿ ಸಮುದ್ರವನ್ನು ಕಡೆದರು. ಕಾಮಧೇನುವು ಹುಟ್ಟಿತು. ಅದನ್ನು ಋಷಿಗಳು ಯಜ್ಞಕಾರ್ಯಕ್ಕಾಗಿ ಸ್ವೀಕರಿಸಿದರು. ಬಳಿಕ ಉಚ್ಚೈಃಶ್ರವಸ್ಸು ಹುಟ್ಟಿತು. ಅದನ್ನು ಬಲಿಯು ಸ್ವೀಕರಿಸಿದನು. ಐರಾವತ, ಪಾರಿಜಾತ ಮತ್ತು ಅಪ್ಸರಸ್ತ್ರೀಯರೂ ಹುಟ್ಟಿದರು. ಆಮೇಲೆ ಶ್ರೀಪರಮಾತ್ಮನ ಅನಾದಿ ಪತ್ನಿಯಾದ ಲಕ್ಷ್ಮೀದೇವಿಯು ಪ್ರಾದುರ್ಭವಿಸಿದಳು. ದೇವಾಸುರಮನುಷ್ಯಾದಿಗಳೆಲ್ಲರೂ ಅವಳನ್ನೇ ನೋಡುತ್ತಿದ್ದರು.

ಇಂದ್ರನು ಅವಳಿಗೆ ಆಸನವನ್ನೂ, ನದಿಗಳು ಸುವರ್ಣ ಕಲಶಗಳಿಂದ ನಿರ್ಮಲ ಜಲವನ್ನೂ, ಭೂದೇವಿಯು ಅಭಿಷೇಕಕ್ಕೆ ಬೇಕಾದ ಸಕಲ ವಸ್ತುಗಳನ್ನೂ, ಗೋವುಗಳು ಪಂಚಗವ್ಯಾದಿಗಳನ್ನೂ, ವಸಂತನು ಫಲಪುಷ್ಪಗಳನ್ನೂ ತಂದುಕೊಟ್ಟರು. ಋಷಿಗಳು ಅಭಿಷೇಕ ಮಾಡಿದರು. ಗಂಧರ್ವರು ಗಾನಮಾಡಿದರು. ಮೇಘದೇವತೆಗಳು ಮೃದಂಗಾದಿ ವಾದ್ಯಗಳನ್ನು ಬಾರಿಸಿದರು. ಅಪ್ಸರೆಯರು ನರ್ತಿಸಿದರು. ವರುಣನು ಪೀತಾಂಬರವನ್ನೂ ಮತ್ತು ವೈಜಯಂತಿ ಎಂದರೆ ನಾಲ್ಕು ಎಳೆಗಳುಳ್ಳ ಹಾರವನ್ನೂ ತಂದುಕೊಟ್ಟನು. ಬ್ರಹ್ಮಾದಿ ದೇವತೆಗಳು ಕಮಲ ಮುಂತಾದ

ಪದಾರ್ಥಗಳನ್ನು ತಂದೊಪ್ಪಿಸಿ ತಮ್ಮ ತಮ್ಮ ಸೇವೆಯನ್ನು ಅರ್ಪಿಸಿದರು. ಲಕ್ಷ್ಮೀ ದೇವಿಯು ಕೈಲಿ ನೈದಿಲೆಯ ಹಾರವನ್ನು ಹಿಡಿದು, ಲೋಕವನ್ನು ಅನುಕರಿಸುತ್ತಾ ಗಂಧರ್ವ, ಯಕ್ಷ, ಅಸುರ, ಸಿದ್ಧ ಚಾರಣ ಮತ್ತು ದೇವತೆಗಳೇ ಮೊದಲಾದವರನ್ನು ನೋಡಿದಳು. ಅವರಲ್ಲಿ ಒಬ್ಬೊಬ್ಬರಿಗೂ ಒಂದೊಂದು ದೋಷವಿದೆ. ಪಾರತಂತ್ರ್ಯಾದಿ ದೋಷರಹಿತನೂ, ಗುಣಪೂರ್ಣನೂ, ಸ್ಥಿರಭರ್ತೃಸ್ಥಾನನೂ ಆದವನು ಯಾರೂ ಕಾಣಿಸಲಿಲ್ಲ. ಲಕ್ಷ್ಮೀದೇವಿಯು ಮೊದಲಿಗೇ ವಿಷ್ಣುವನ್ನೇ ಆಶ್ರಯಿಸಿಬಿಟ್ಟಿದ್ದರೆ ಇತರರೆಲ್ಲರೂ ದೋಷವುಳ್ಳವರು, ಶ್ರೀವಿಷ್ಣುವೊಬ್ಬನೇ ನಿರ್ದೋಷಿ–ಸರ್ವೋತ್ತಮನು ಎಂಬ ಪ್ರಸಿದ್ಧಿ ಬರುತ್ತಿರಲಿಲ್ಲವಾಗಿ ಇತರರ ದೋಷಗಳನ್ನು ಹೇಳುತ್ತಾಳೆ :–

(ದುರ್ವಾಸಾದಿ ಋಷಿಗಳು) ಶರೀರ ಶೋಷಣೆಯೆಂಬ ತಪಸ್ಸನ್ನುಳ್ಳವರು. ಆದರೆ ಕೋಪವನ್ನು ಜಯಿಸಲಿಲ್ಲ (ಬೃಹಸ್ಪತ್ಯಾದಿಗಳು) ಕೆಲವರಿಗೆ ಜ್ಞಾನವಿದ್ದರೂ ಫಲಾಕಾಂಕ್ಷಾರಹಿತವಾಗಿಲ್ಲ. "ಪ್ರಜಾಪತಿಃ ಸ್ವಾಂದುಹಿತರಮಭ್ಯಧ್ಯಾಯತ್" ಎಂಬ ಶ್ರುತಿಯಲ್ಲಿ ಹೇಳಿರುವಂತೆ ಬ್ರಹ್ಮನು ಮಗಳನ್ನೇ ಕಾಮಿಸಿದ್ದರಿಂದ ಅವನು ಕಾಮ ವನ್ನು ಜಯಿಸಲಿಲ್ಲ. ಶ್ರೀವಿಷ್ಣುವಿನ ಅನುಗ್ರಹದಿಂದ ಅಧಿಕಾರದ ಪದವಿಯನ್ನು ಹೊಂದಿರುವುದರಿಂದ ರುದ್ರೇಂದ್ರಾದಿಗಳೂ ನಿರ್ದೋಷರಲ್ಲ. ಯಮಾದಿಗಳಲ್ಲಿ ಧರ್ಮವಿದ್ದರೂ ಪ್ರಾಣಿಗಳಲ್ಲಿ ದಯೆಯು ಇಲ್ಲ. ಕುಬೇರಾದಿಗಳೂ ದ್ರವ್ಯದಾನ ಮಾಡುತ್ತಾರೆ. ಆ ದ್ರವ್ಯವು ಮುಕ್ತಿಗೆ ಕಾರಣವಲ್ಲ. ಇಂದ್ರಾದಿಗಳಲ್ಲಿ ಐಶ್ವರ್ಯ ವಿದ್ದರೂ ಅದು ಅವರ ಸ್ವಂತ ಸಂಪಾದನೆಯಲ್ಲ. ಪರಮಾತ್ಮನ ಸಂಕಲ್ಪದಿಂದ ಬಂದಿರುವುದು. ಸರ್ವಚೇತನರಲ್ಲಿಯೂ ಕೋಪತಾಪಾದಿ ದೋಷಗಳು ಇಲ್ಲದವರು ಶ್ರೀಮನ್ನಾರಾಯಣನ ಹೊರತು ಇನ್ನೊಬ್ಬನಿಲ್ಲವೇ ಇಲ್ಲ. ಮಾರ್ಕಂಡೇಯ ಮೊದಲಾದ ಕೆಲವರಿಗೆ ದೀರ್ಘಾಯುಷ್ಯವೇನೋ ಇದೆ. ಆದರೆ ಸತ್ಸ್ವಭಾವವಿಲ್ಲ. ಕೆಲವರು ಸತ್ ಶೀಲವಂತರಾದರೂ ಅವರಿಗೆ ಆಯುಷ್ಯವು ಸ್ಥಿರವೆಂಬ ನಿಶ್ಚಯವಿಲ್ಲ. ಇವೆರಡನ್ನೂ ಉಳ್ಳವನು ಸ್ಮಶಾನವಾಸಾದಿ ಅಮಂಗಳ ನಡವಳಿಕೆಗಳಿಂದ ಗರ್ಹಿತ ನಾಗಿರುವನು. ಆದ್ದರಿಂದ **ಶ್ರೀಮನ್ನಾರಾಯಣನ** ಹೊರತು ಉಳಿದವರೆಲ್ಲರೂ ದೋಷಿಗಳೇ ಆದ್ದರಿಂದ ಇವರಾರೂ ಯೋಗ್ಯರಲ್ಲ. ನಾರಾಯಣನು ಸ್ವರಮಣ ನಾದ್ದರಿಂದ ತನ್ನ ಸುಖಕ್ಕಾಗಿ ನನ್ನನ್ನು ಅಪೇಕ್ಷಿಸುವವನಲ್ಲ.

ಶ್ಲೋಕ

ಏವಂ ವಿಮೃಶ್ಯಾವ್ಯಭಿಚಾರಸದ್ಗುಣಂ ವರಂ ನಿಜೈಕಾಶ್ರಯಿಸದ್ಗುಣಾಶ್ರಯಂ ।
ವವ್ರೇ ವರಂ ಸರ್ವಗುಣೈರಪೇಕ್ಷಿತಂ ರಮಾ ಮುಕುಂದಂ ನಿರಪೇಕ್ಷಮೀಪ್ಸಿತಂ ೨೩/೮

ಹೀಗೆ ಲಕ್ಷ್ಮೀದೇವಿಯು ಅಲ್ಲಿದ್ದವರ ದೋಷಗಳನ್ನು ವಿಚಾರ ಮಾಡಿ ಅವರೆಲ್ಲ ರನ್ನೂ ಬಿಟ್ಟು ದೋಷಲೇಶವೂ ಇಲ್ಲದವನೂ, ಸ್ವತಂತ್ರನೂ, ಸೌಂದರ್ಯಾದಿಗಳಿಂದ

ವರಣೀಯನೂ, ತನಗೆ ಅತ್ಯಂತ ಪ್ರಿಯನೂ ಆಗಿರುವ ಶ್ರೀ ನಾರಾಯಣನನ್ನು ಪತಿಯನ್ನಾಗಿ ವರಿಸಿದಳು.

ಆವನ ಕೊರಳಿಗೆ ವರಣಮಾಲೆ ಹಾಕಿ ಅವನ ಸಮೀಪದಲ್ಲಿ ನಿಂತಳು. ಶ್ರೀ ಪರಮಾತ್ಮನು ಲಕ್ಷ್ಮೀದೇವಿಗೆ ತನ್ನ ವಕ್ಷಸ್ಥಳವನ್ನು ಸ್ಥಾನವನ್ನಾಗಿ ಕೊಟ್ಟನು. ಲಕ್ಷ್ಮಿಯು ಚತುರ್ಮುಖಾದಿಗಳಿಂದ ಯುಕ್ತವಾದ ಮೂರು ಲೋಕಗಳಲ್ಲಿದ್ಧ ಸಜ್ಜನರನ್ನು ದಯಾದೃಷ್ಟಿಯಿಂದ ನೋಡಿದ ಕಾರಣ ಅವರೆಲ್ಲರೂ ಐಶ್ವರ್ಯವಂತರಾದರು. ಬ್ರಹ್ಮಾದಿಗಳು ಹೂಮಳೆಗರೆದು ಸ್ತುತಿಸಿದರು. ದೇವಾದಿಗಳು ಸುಖವನ್ನು ಹೊಂದಿದರು. ದೈತ್ಯದಾನವರೆಲ್ಲರೂ ಬಲಹೀನರಾಗಿ ಉತ್ಸಾಹರಹಿತರಾದರು.

ಬಳಿಕ ಸಮುದ್ರದಲ್ಲಿ ವಾರುಣೀದೇವಿಯಿಂದ ಅಭಿಮನ್ಯಮಾನೆವಾದ ಸುರೆಯು ಹುಟ್ಟಿತು. ಅದನ್ನು ಭಗವಂತನ ಅನುಮತಿಯನ್ನು ಪಡೆದು ಅಸುರರು ಸ್ವೀಕರಿಸಿದರು. ತಿರುಗಿ ಸಮುದ್ರವನ್ನು ಕಡೆಯಲು ಆರಂಭಿಸಿದರು. ಆಗ ಶ್ರೀವಿಷ್ಣುವಿನ ಸ್ವರೂಪನೂ ವೈದ್ಯಶಾಸ್ತ್ರಪ್ರವರ್ತಕನೂ ಆದ ಧನ್ವಂತರಿಯು ಕೈಯ್ಯಲ್ಲಿ ಅಮೃತಕಲಶವನ್ನು ಹಿಡಿದುಕೊಂಡು ಸಮುದ್ರದಿಂದ ಮೇಲೆದ್ದು ಬಂದನು. ಅಸುರರು ಅಮೃತ ಕಲಶವನ್ನು ಬಲತ್ಕಾರದಿಂದ ಕಿತ್ತುಕೊಂಡು ಓಡಿಬಿಟ್ಟರು. ಶ್ರೀಹರಿಯು ಮಹಾಸಮರ್ಥನಾಗಿದ್ದರೂ ದೈತ್ಯರು ಸತ್ಯದಿಂದ ಚ್ಯುತರಾಗಲಿ ಎಂದೇ ತಾನಾಗಿ ಅವರಿಗೆ ಅಮೃತ ಕಲಶವನ್ನು ಕೊಟ್ಟುಬಿಟ್ಟನು. ದೇವತೆಗಳು ದೀನರಾಗಿ ಹರಿಯಲ್ಲಿ ಮರೆ ಹೊಕ್ಕರು. ಅವರಿಗೇ ಅಮೃತವು ದೊರೆಯುವಂತೆ ಮಾಡುವುದಾಗಿ ಹರಿಯು ಅಭಯವನ್ನು ಕೊಟ್ಟನು. ಅಸುರರು ಅಮೃತವನ್ನು ಕುಡಿಯಲು ನಾನು ತಾನೆಂದು ಪರಸ್ಪರ ಕಲಹ ಮಾಡಿದರು. ದುರ್ಬಲರಾದ ದೈತ್ಯರು ಅಮೃತವನ್ನು ಕುಡಿಯಬೇಕೆಂಬ ಆಶೆಗಾಗಿ "ದೇವತೆಗಳೂ ಸಮವಾಗಿ ಕಷ್ಟಪಟ್ಟಿರುವುದರಿಂದ ಅಮೃತದ ಭಾಗವು ಅವರಿಗೂ ಸಲ್ಲಬೇಕಾದುದು ನ್ಯಾಯ" ಎಂದು ಅಮೃತಕಲಶವನ್ನು ಹಿಡಿದಿದ್ದ ಪ್ರಬಲರಾದವರನ್ನು ಕುರಿತು ಹೇಳಿದರು. (ಅಮೃತವು ದುರ್ಬಲರಿಗೆ ದೊರೆತಿದ್ದರೆ ಈ ನ್ಯಾಯವನ್ನು ಹೇಳುತ್ತಿರಲಿಲ್ಲ.) ಇದನ್ನು ನೋಡಿ ಶ್ರೀಹರಿಯು ಮೋಹಿನೀರೂಪವನ್ನು ಧರಿಸಿದನು ಇದನ್ನು ಲಕ್ಷ್ಮೀದೇವಿಯು ನೋಡಿ ಹೀಗೆ ಹೇಳಿದಳು :—

ತನ್ನ ಸೌಂದರ್ಯದಿಂದುನ್ನಂತಮಯವಾದ, ಲಾ
ವಣ್ಯಾದಿ ಮೆರೆವ ನಿಜಪತಿಯ
ಹೆಣ್ಣು ರೂಪವ ಕಂಡು ಕನ್ಯೆ ಮಹಲಕ್ಷುಮಿ ಇವ
**ಗೆನ್ನಿರ್‍ಯಾಕೆಂದು** ಬೆರಗಾದಳು ॥೯೯॥

ಶ್ರೀವಾದಿರಾಜರು ಲಕ್ಷ್ಮೀ ಶೋಭನ ಹಾಡಿನಲ್ಲಿ ಹೀಗೆ ಹೇಳಿರುವರು. ಈ ಮಾತಿನ ಭಾವವು ಮೋಹಿನೀರೂಪದ ವರ್ಣನೆಯ ಪರಾಕಾಷ್ಠವನ್ನು ತಿಳಿಸುವುದು.

ದೈತ್ಯರು ಮೋಹಿನಿಯ ರೂಪವನ್ನು ನೋಡಿ ಮೋಹಿಸಿ "ನೀನಾರು ? ಎಲ್ಲಿಂದ ಬಂದಿರುವೆ ? ಉದ್ದೇಶವೇನು ? ನೀನು ಇನ್ನೂ ಕನ್ಯೆಯಾಗಿಯೇ ಇರುವೆ ಯೆಂದು ಭಾವಿಸುವೆವು. ದೈವವೇ ನಿನ್ನನ್ನು ನಮ್ಮ ಬಳಿಗೆ ಕಳುಹಿಸಿರಬಹುದು. ನೀನೀಗ ಕಲಹವಾಗದಂತೆ ಮಧ್ಯಸ್ಥಳಾಗಿ ಅಮೃತವನ್ನು ಹಂಚು" ಎಂದರು. ಮೋಹಿನಿಯು "ಪಂಡಿತರು ಸ್ವೇಚ್ಛಾಚಾರಿಣಿಯಲ್ಲಿ ವಿಶ್ವಾಸ ಮಾಡಲಾರರು. ನೀವು ಕಶ್ಯಪರ ಪುತ್ರರಾಗಿ ಸ್ವೈರಿಣಿಯಾದ ನನ್ನಲ್ಲಿ ಹೇಗೆ ವಿಶ್ವಾಸ ಮಾಡುವಿರಿ?" ಎಂದಳು. ಅವಳ ಪರಿಹಾಸ ಪೂರ್ವಕವಾದ ಛದ್ಮವಚನದಿಂದ ಮೋಹಿತರಾದ ದೈತ್ಯರು ಅಮೃತ ಕಲಶವನ್ನು ಅವಳ ಕೈಲಿಟ್ಟರು. ತಾನು ನ್ಯಾಯವಾಗಿಯೋ ಅನ್ಯಾಯವಾಗಿಯೋ ಅಮೃತವನ್ನು ಹಂಚಿದರೆ ಆಕ್ಷೇಪಿಸಕೂಡದೆಂದೂ, ಅದಕ್ಕೊಪ್ಪಿದರೆ ಹಂಚುವು ದಾಗಿಯೂ ಮೋಹಿನಿಯು ಹೇಳಲು, ಹಾಗೆಯೇ ಆಗಲೆಂದು ದೈತ್ಯರು ಒಪ್ಪಿದರು. ಸುರಾಸುರರು ಉಪವಾಸವಿದ್ದು ಸ್ನಾನದಾನಾದಿಗಳನ್ನು ಮಾಡಿ, ವಿಪ್ರರ ಆಶೀರ್ವಾದ ವನ್ನು ಪಡೆದು ದರ್ಭೆಯ ಮೇಲೆ ಕುಳಿತರು. ಸ್ವಾಭಾವಿಕವಾಗಿ ಕ್ರೂರರಾದ ದೈತ್ಯರಿಗೆ ಅಮೃತವನ್ನು ಕೊಡುವುದು ಹಾವಿಗೆ ಹಾಲೆರದಂತೆ ಅನ್ಯಾಯವೆಂದು ತಿಳಿದು ಶ್ರೀ ಹರಿಯು ದೇವತೆಗಳನ್ನೂ, ಅಸುರರನ್ನೂ ಬೇರೆ ಬೇರೆ ಕೂಡಿಸಿ, ದುಷ್ಟರಾದ ದೈತ್ಯ ರನ್ನು ವಂಚಿಸಿ, ಯೋಗ್ಯರಾದ ದೇವತೆಗಳಿಗೆ ಮಾತ್ರ ಅಮೃತಪಾನ ಮಾಡಿಸಿದನು. ದೈತ್ಯರು ಮಾತುಕೊಟ್ಟಿದ್ದರಿಂದ ಅದಕ್ಕೆ ಕಟ್ಟುಬಿದ್ದು, ತಮಗೆ ಅಮೃತವು ದೊರೆ ಯದೇ ಹೋದರೂ ಹೆಂಗುಸಿನೊಡನೆ ಜಗಳವಾಡುವುದು ನಿಂದಾಸ್ಪದವೆಂದು ತಿಳಿದು ಸುಮ್ಮನಿದ್ದರು. ವಿಪ್ರಚಿತ್ತಿಯೆಂಬ ದಾನವ ಮತ್ತು ಅವನ ಪತ್ನಿಯಾದ ಸಿಂಹಿಕೆ ಎಂಬುವಳಲ್ಲಿ ಹುಟ್ಟಿದ್ದ ಸ್ವರ್ಭಾನುವೆಂಬ ದೈತ್ಯನು ದೇವತೆಗಳ ಸಾಲಿನಲ್ಲಿ ಬಂದು ಕುಳಿತಿದ್ದನು. ಇವನು ಅಮೃತಪಾನ ಮಾಡುವ ವರವನ್ನು ಬ್ರಹ್ಮದೇವರಿಂದ ಪಡೆ ದಿದ್ದನು. ಮೋಹಿನೀರೂಪದ ಶ್ರೀಹರಿಯು ಬ್ರಹ್ಮದೇವರ ವರವನ್ನು ಸತ್ಯ ಮಾಡು ವುದಕ್ಕಾಗಿ ದೈತ್ಯನಾದ ರಾಹುವಿನ ಕೈಗೆ ಅಮೃತಬಿಂದುವನ್ನು ಹಾಕಿದನು. ದೈತ್ಯನು ಅದನ್ನು ಕುಡಿದನು. ಸೂರ್ಯಚಂದ್ರರು ಅದನ್ನು ಸೂಚಿಸಿದೊಡನೆ ಶ್ರೀಹರಿಯು ಚಕ್ರ ದಿಂದ ಆ ದೈತ್ಯನ ಕುತ್ತಿಗೆಯನ್ನು ಕತ್ತರಿಸಿದನು. (ಅಷ್ಟು ಹೊತ್ತಿಗೆ ಅಮೃತ ಬಿಂದು ವಿನ ಸಂಬಂಧವು ಆ ದೈತ್ಯನ ರುಂಡ ಮುಂಡಗಳಿಗೆ ಆಗಿ ಅವು ಮೃತ್ಯುರಹಿತವಾದುವು ಶ್ರೀಹರಿಯು ಅವನ ಮುಂಡವನ್ನು ಶುದ್ಧೋದಕ ಸಮುದ್ರದಲ್ಲಿ ಹಾಕಿದನು. ಅದು ಕೊಳೆತು ಹೋಗದೆ ಈಗಲೂ ದೃಢವಾಗಿದೆ. ಜರಾಮರಣರಹಿತವಾದ ರಾಹುವಿನ ರುಂಡದಲ್ಲಿ ರಾಹುಕೇತುಗಳೆಂಬ ಇಬ್ಬರು ದೈತ್ಯರು ಇರುವರು. ಅವರಲ್ಲಿ "ಶಿರಸ್ತು ತಸ್ಯ ಗ್ರಹತಾಮವಾಪ ಸುರೈಃ ಸಮಾವಿಷ್ಟಮಥೋಸಬಾಹುಃ" ದೇವತೆಗಳು ಪ್ರವಿಷ್ಟ ರಾಗಿರುವರು. ಅವರಿಗೆ ರಾಹು ಕೇತುಗಳೆಂದೇ ಹೆಸರು. ಅವರೆಲ್ಲರೂ ಕರ್ಮಜ ದೇವತೆಗಳೆಂದು ವಿಜಯದಾಸರೂ ಹೇಳಿರುವರು. ಅವರನ್ನೇ ಗ್ರಹಗಳಾಗಿ ಪೂಜಿಸು ವರು. ದೈತ್ಯ ರಾಹು ಕೇತುಗಳು ಸೂರ್ಯ ಚಂದ್ರರನ್ನು ಗ್ರಹಿಸಲು ಹೋಗುವುದರಿಂದ

'ಗ್ರಹ'ವೆನಿಸಿದರು ವೇದೋಕ್ತವಾದ ಹೋಮ, ಜಪ ಮೊದಲಾದ ಸತ್ಕರ್ಮಕ್ಕೆ ಅವರು ಭಾಗಿಗಳಲ್ಲ.)

ದೇವತೆಗಳು ಅಮೃತಪಾನಮಾಡಿದ ಮೇಲೆ ಎಲ್ಲರೂ ನೋಡುತ್ತಿರುವಂತೆ ಶ್ರೀ ಹರಿಯು ಮೋಹಿನೀರೂಪವನ್ನು ತ್ಯಜಿಸಿ ನಿಜರೂಪದಿಂದ ನಿಂತನು.

ಶ್ರೀಪುರಂದರದಾಸರು ಮೋಹಿನೀರೂಪದ ಶ್ರೀ ಹರಿಯನ್ನು ಕೊಂಡಾಡುವರು :–

ಭೈರವಿರಾಗ ಅಟತಾಳ

ಇಂಥ ಹೆಣ್ಣಿನ ನಾನೆಲ್ಲಿ ಕಾಣೆನು । ಹೊಂತಕಾರಿ (ವೀರ, ವಿವೇಕಿ, ಧೂರ್ತ) ಕಾಣಿರೊ ॥ಪ॥ ಸಂತತ ಸುರರಿಗೆ ಪಿಯೂಷ ಉಣಿಸಿದ । ಪಂಙ್ತ್ಯೊಳಗೆ ಪರವಂಚನೆ ಮಾಡಿದ ॥ಅ॥ ಮಂದರಗಿರಿ ತಂದು ಸಿಂಧುವಿನೊಳಗಿಟ್ಟು । ಚಂದದಿ ಕಡೆದು ಅಮೃತವ ತೆಗೆದು । ಇಂದು ಮುಖಿಯೆ ನೀ ಬಡಿಸೆಂದು ಕೊಟ್ಟರೆ । ದಂಧನೆಯನು ಮಾಡಿ ದೈತ್ಯರವಂಚಿಸಿದ ॥೧॥ ವಿಶ್ವಾಸದಿಂದಲಿ ಅಸುರಗೆ ವರವಿತ್ತು । ತ್ರಿಶೂಲಧರ ಓಡಿ ಬಳಲುತಿರೆ । ನಸುನಗುತಲಿ ಬಂದು ಭಸ್ಮಾಸುರನಿಗೆ । ವಿಷಯದಾಸೆಯ ತೋರಿ ಭಸ್ಮವ ಮಾಡಿದ ॥ ೨ ॥

ವಸುಧೆಯೊಳಗೆ ಹೆಣ್ಣು ಒಸಗೆಯಾಗದ ಮುನ್ನ । ಬಸುರಿಲ್ಲದೆ ಬೊಮ್ಮನ ಪಡೆದಿಹಳು । ಕುಸುಮನಾಭ ಶ್ರೀಪುರಂದರವಿಠಲನ । ಪೆಸರ ಪೊತ್ತಿಹಳು ಈ ಹೊಸ ಕನ್ನಿಕೆಯು ॥ ೩ ॥

ಹೀಗೆ ದೇವತೆಗಳೂ, ಅಸುರರೂ ಸೇರಿ ಬಹುಶ್ರಮದಿಂದ ಸಮುದ್ರವನ್ನು ಕಡೆದು ಅಮೃತವನ್ನು ಪಡೆದರೂ ದೇವತೆಗಳು ಶ್ರೀಪರಮಾತ್ಮನ ಪಾದಾರವಿಂದವನ್ನು ಆಶ್ರಯಿಸುತ್ತಿರುವ ಕಾರಣ ಶ್ರೀಹರಿಯು ಅವರಿಗೆ ಮಾತ್ರ ಅಮೃತವನ್ನು ಕೊಟ್ಟನು. ದೈತ್ಯರು ಪರಮಾತ್ಮನಿಗೆ ವಿರೋಧಿಗಳಾದ್ದರಿಂದ ಅವರಿಗೆ ಅಮೃತವು ದೊರೆಯಲಿಲ್ಲ. ಅಂದಬಳಿಕ ಮೋಕ್ಷಾಪೇಕ್ಷಿಗಳು ಶ್ರೀಹರಿಯನ್ನೇ ಸೇವಿಸಬೇಕು.

## ಎಂಟನೆಯ ಅಧ್ಯಾಯ ಮುಗಿದುದು

ಶ್ರೀಹರಿಯು ದೇವತೆಗಳಿಗೆ ಅಮೃತಪಾನ ಮಾಡಿಸಿ ಬಳಿಕ ಗರುಡಾರೂಢನಾಗಿ ಕಣ್ಮರೆಯಾದನು. ಅಮೃತವು ದಕ್ಕದೆ ಬಹಳಶ್ರಮವಾದುದನ್ನು ನೋಡಿ ದೈತ್ಯರು ಕುಪಿತರಾಗಿ ದೇವತೆಗಳೊಡನೆ ಯುದ್ಧಮಾಡಿದರು. ಬಲಿರಾಜನು ಮಯನಿರ್ಮಿತ ವಿಮಾನದಲ್ಲಿ ಕುಳಿತು ಯುದ್ಧಕ್ಕೆ ಬಂದನು. ದೇವೇಂದ್ರನೂ ಐರಾವತವನ್ನೇರಿ ಬಂದು ಯುದ್ಧಕ್ಕೆ ನಿಂತನು. ಇವನಿಗೂ ಬಲಿಗೂ ಭಯಂಕರ ಯುದ್ಧವಾಯಿತು.

ಬಲಿಯು ಹಿಡಿದ ಆಯುಧಗಳನ್ನೆಲ್ಲ ಇಂದ್ರನು ಕತ್ತರಿಸುತ್ತಾ ಬಂದನು. ಬಲಿಯು ಕಣ್ಮರೆಯಾಗಿ, ರಾಕ್ಷಸ ಮಾಯೆಯಿಂದ ಪರ್ವತಾದಿಗಳನ್ನು ಸೃಷ್ಟಿಸಿ ದೇವತೆಗಳನ್ನು ನೋಯಿಸಿದನು. ದೇವತೆಗಳು ಆಸುರೀಮಾಯೆಗೆ ತಕ್ಕ ಪ್ರತೀಕಾರವನ್ನು ಅರಿಯದೆ ಭಗವಂತನನ್ನು ಧ್ಯಾನಿಸಿದರು. ಆಗ ವಿಶ್ವಪಾಲಕ ಶ್ರೀಹರಿಯು ಕಾಣಿಸಿಕೊಂಡನು. ಕೂಡಲೇ ಅಸುರರ ಮಾಯೆಯಿಂದ ಸೃಷ್ಟವಾಗಿದ್ದ ಪರ್ವತವೃಕ್ಷಾದಿಗಳು ಅದೃಶ್ಯವಾದುವು. ಇದೇನೂ ಆಶ್ಚರ್ಯವಲ್ಲ. ಏಕೆಂದರೆ "ಹರಿ ಸ್ಮೃತಿಃ ಸರ್ವ ವಿಪದ್ವಿಮೋಕ್ಷಣೀ" - ಹರಿಸ್ಮರಣೆಯು ಸಕಲ ವಿಪತ್ತುಗಳನ್ನೂ ಪರಿಹರಿಸುವುದು.

ಕಾಲನೇಮಿಯೆಂಬ ಭಯಂಕರನಾದ ದೈತ್ಯನು ಶೂಲವನ್ನು ಹರಿಯ ಮೇಲೆ ಪ್ರಯೋಗಿಸಿದನು. ಹರಿಯು ಆ ಶೂಲವನ್ನು ಕೈಲಿ ಹಿಡಿದು ಅದರಿಂದಲೇ ವಾಹನ ಸಹಿತನಾದ ಕಾಲನೇಮಿಯನ್ನು ಕೊಂದುಬಿಟ್ಟನು. ಬಳಿಕ ಬಲಿಷ್ಠರಾದ ಮಾಲಿ ಮತ್ತು ಸುಮಾಲಿ ಎಂಬ ಇಬ್ಬರು ವೀರರು ಬಂದು ಭಯಂಕರವಾದ ಗದೆಯನ್ನು ಗರುಡನ ಮೇಲೆ ಒಗೆದರು. ಆ ಗದೆಯು ಗರುಡನಿಗೆ ತಾಕುವುದರೊಳಗಾಗಿ ಶ್ರೀಹರಿಯು ಚಕ್ರದಿಂದ ಆ ಗದೆಯನ್ನೂ ಮಾಲಿಸುಮಾಲಿಗಳ ತಲೆಗಳನ್ನೂ ಕತ್ತರಿಸಿಬಿಟ್ಟನು. ಬಳಿಕ ಮಾಲ್ಯವಂತನೆಂಬ ಪರಾಕ್ರಮಿಯು ಬಂದು ಗದೆಯನ್ನು ಪ್ರಯೋಗಿಸಿದನು. ಶ್ರೀಹರಿಯು ಆ ಮಾಲ್ಯವಂತನನ್ನೂ ಸಂಹರಿಸಿಬಿಟ್ಟನು.

ವಿಶೇಷ :– ವೈವಸ್ವತಮನ್ವಂತರದಲ್ಲಿ ಕಾಲನೇಮಿಯೇ ಮೊದಲಾದ ವೀರರು ಯುದ್ಧ ಮಾಡಿದರೆಂದು ಪುರಾಣವು ಹೇಳುತ್ತಿರುವುದು. ಸತ್ತವರು ಹೇಗೆ ಬಂದರೆಂಬ ಸಂದೇಹವು ಬರುವುದು. ಶ್ರೀಮದಾಚಾರ್ಯರು ತಾತ್ಪರ್ಯವನ್ನು ಹೇಳಿ ಆ ಸಂದೇಹವನ್ನು ಪರಿಹರಿಸಿರುವರು :– ಚಾಕ್ಷುಷಮನ್ವಂತರದಲ್ಲಿಯೂ ಸಮುದ್ರ ಮಥನವು ನಡೆದು ಬಳಿಕ ದೇವಾಸುರರಿಗೆ ಯುದ್ಧವು ನಡೆಯಿತು. ಆಗಿನ ಯುದ್ಧದಲ್ಲಿ ಸತ್ತ ಕಾಲನೇಮಿಯೇ ಮೊದಲಾದವರನ್ನು ಶುಕ್ರಾಚಾರ್ಯರು ಬದುಕಿಸಿದ್ದರು. ಆದ್ದರಿಂದ ವೈವಸ್ವತಮನ್ವಂತರದಲ್ಲಿ ತಿರುಗಿ ಸಮುದ್ರಮಥನವು ನಡೆದು ಬಳಿಕ ದೇವಾಸುರರ ಯುದ್ಧವಾಯಿತು. ಆಗ ಬದುಕಿದ್ದ ಕಾಲನೇಮಿ ಮೊದಲಾದ ವೀರರು ಯುದ್ಧ ಮಾಡಿ ಮಡಿದರು.

## ಒಂಭತ್ತನೆಯ ಅಧ್ಯಾಯ ಮುಗಿದುದು

ಶ್ರೀಹರಿಯ ಕೃಪೆಯಿಂದ ಚೇತರಿಸಿಕೊಂಡ ದೇವತೆಗಳು ತಿರುಗಿ ಯುದ್ಧಕ್ಕೆ ನಿಂತರು. ಆಗ ದೇವೇಂದ್ರನು ಬಲಿಯ ಮೇಲೆ ವಜ್ರಾಯುಧವನ್ನು ಪ್ರಯೋಗಿಸಲು ಅದನ್ನು ತನ್ನ ಕೈಲಿ ಹಿಡಿದುದನ್ನು ಕಂಡು ಅಸುರರು 'ಅಯ್ಯೋ!' ಎಂದು ಕೂಗಿಕೊಂಡರು.

**ಇಂದ್ರ :–** ಕರ್ತವ್ಯಜ್ಞಾನರಹಿತನಾದ ಬಲಿಯೇ ! ಮಾಯಾ ಯುದ್ಧದಿಂದ ನಮ್ಮನ್ನು ಗೆಲ್ಲಲು ಬಯಸಿದೆಯಲ್ಲವೆ ? ಕಪಟಿಗಳನ್ನು ಅವರ ಪದವಿಯಿಂದ ತಪ್ಪಿಸಿ ಪಾತಾಳಕ್ಕೆ ತಳ್ಳಬಲ್ಲೆ. ನಿನ್ನ ತಲೆಯನ್ನು ವಜ್ರದಿಂದ ಹಾರಿಸುವೆನು ಸಪರಿವಾರನಾಗಿ ಯುದ್ಧ ಮಾಡಲು ಯತ್ನಿಸು.

**ಬಲಿ :–** ಇಂದ್ರನೇ ! ಯುದ್ಧವನ್ನು ಮಾಡುವವರಿಗೆ ಕೀರ್ತಿ, ಜಯಾಪಜಯ ಗಳು ಕಾಲನಾಮಕ ಹರಿಯ ಅಧೀನವಾಗಿಯೇ ಬರುವುವು. ಜ್ಞಾನಿಗಳು ಹರಿಯು ಸ್ವತಂತ್ರನೆಂದು ತಿಳಿದಿರುವುದರಿಂದ ಜಯವಾದರೆ ಹಿಗ್ಗದೆ, ಅಪಜಯವಾದರೆ ಕುಗ್ಗದೆ ನಿರ್ವಿಕಾರರಾಗಿರುವರು. ನೀನು ಇದನ್ನು ತಿಳಿಯದಿರುವುದರಿಂದ ವಿಲಪಿಸುತ್ತಿರುವೆ. ಜಯಾದಿಗಳನ್ನು ಸಂಪಾದಿಸುವ ವಿಷಯದಲ್ಲಿ ಜೀವನೇ ಸ್ವತಂತ್ರನೆಂದು ತಿಳಿದ ನಿನ್ನಂತಹ ಮೂಢರನ್ನು ಕಂಡು ಜ್ಞಾನಿಗಳು "ವೃಥಾ ಕೆಟ್ಟು ಹೋಗುವರಲ್ಲಾ" ಎಂದು ವಿಷಾದಪಡುವರು. ''ಕಪಟಿ, ಕೊಲ್ಲುವೆನು" ಇತ್ಯಾದಿ ನೀನು ಆಡಿದ ಮಾತುಗಳನ್ನು ಕೇಳಿ ಕೊರಗುವವನಾನಲ್ಲ. (ಹೀಗೆ ಬಲಿಯು ತಿರಸ್ಕರಿಸಿ ಬಾಣ ಗಳನ್ನು ಬಿಟ್ಟನು. ಇಂದ್ರನು ವಜ್ರಾಯುಧದಿಂದ ಹೊಡೆದೊಡನೆ ಬಲಿಯು ವಾಹನ ದೊಡನೆ ನೆಲದ ಮೇಲೆ ಬಿದ್ದನು ಆಗ ಬಲಿಯ ಮಿತ್ರನಾದ ಜಂಭಾಸುರನು ಸಿಂಹವನ್ನೇರಿ ಬಂದು ಗದೆಯಿಂದ ಇಂದ್ರನನ್ನೂ, ಐರಾವತವನ್ನೂ ಹೊಡೆದನು. ಇಂದ್ರನು ವಜ್ರಾಯುಧದಿಂದ ಜಂಭನ ತಲೆಯನ್ನು ಕತ್ತರಿಸಿದನು ಅದನ್ನು ನಾರದ ರಿಂದ ಕೇಳಿದ ನಮುಚಿ, ಬಲ, ಪಾಕರೆಂಬ ಮೂವರು ದೈತ್ಯರೂ ಬಂದು ಬಾಣ ಗಳಿಂದ ಹೊಡೆದರು. ಇಂದ್ರನು ವಜ್ರಾಯುಧದಿಂದ ಬಲ ಮತ್ತು ಪಾಕರೆಂಬ ದೈತ್ಯರಿಬ್ಬರನ್ನೂ ಕೊಂದನು. ನಮುಚಿಯು ಶೂಲವನ್ನೆಸೆದನು. ಇಂದ್ರನು ಅದನ್ನು ಪುಡಿಪುಡಿಮಾಡಿ ವಜ್ರವನ್ನು ಪ್ರಯೋಗಿಸಿದನು. ಆದರೆ ಅದು ನಮುಚಿಯ ಚರ್ಮವನ್ನೂ ಹರಿಯಲಾಗಲಿಲ್ಲ. ಇಂದ್ರನು ಹೆದರಿ "ವೃತ್ರನನ್ನು ಕೊಂದ ವಜ್ರವು ವ್ಯರ್ಥವಾಯಿತಲ್ಲ ! ದಧೀಚಿಮುನಿಗೂ ಸಿದ್ಧಿಯ ಸಾಮರ್ಥ್ಯವಿಲ್ಲವೆಂದಾ ಯಿತಲ್ಲ." ಎಂದು ದುಃಖಿಸಿದನು. ಆಗ ವಾಯುದೇವರು ''ಇಂದ್ರನೇ ! ಈ ದಾನ ವನು ಹಸಿಯ ಮತ್ತು ಒಣಗಿದ ಪದಾರ್ಥದಿಂದ ತನಗೆ ಸಾವಿಲ್ಲದಂತೆ ನನ್ನಿಂದ ವರವನ್ನು ಪಡೆದಿರುವನು. ಆದ್ದರಿಂದ ಈ ನಮುಚಿಯನ್ನು ಕೊಲ್ಲಲು ಬೇರೆ ಉಪಾಯ ವನ್ನು ಆಲೋಚಿಸು" ಎಂದು ಅಶರೀರವಾಣಿಯನ್ನು ನುಡಿದರು. ಇದನ್ನು ಕೇಳಿದ ಇಂದ್ರನು ನೊರೆಯಿಂದ ನಮುಚಿಯ ತಲೆಯನ್ನು ಕತ್ತರಿಸಿದನು. ಆಗ ಮುನಿಗಳು ಸ್ತುತಿಸಿದರು. ಪುಷ್ಪವೃಷ್ಟಿಯಾಯಿತು. ವಾಯು, ಅಗ್ನಿ ಮೊದಲಾದ ದೇವತೆಗಳು ದೈತ್ಯರನ್ನು ಖಂಡಾಪಟ್ಟೆ ಸಂಹರಿಸಿದರು. ಆಗ ಬ್ರಹ್ಮದೇವರಿಂದ ಕಳುಹಿಸಲ್ಪಟ್ಟ ನಾರದರು ಬಂದು ದೈತ್ಯರ ನಾಶವನ್ನು ನೋಡಿ ಕೊಲ್ಲಬೇಡಿರೆಂದು ದೇವತೆಗಳನ್ನು ತಡೆದರು. ದೇವತೆಗಳು ನಾರದರ ಮಾತನ್ನು ಕೇಳಿ ಯುದ್ಧವನ್ನು ನಿಲ್ಲಿಸಿ

ಸ್ವರ್ಗಕ್ಕೆ ಹೊರಟು ಹೋದರು. ಗಂಧರ್ವಾದಿ ಭೃತ್ಯರೂ ಅವರನ್ನು ಹಿಂಬಾಲಿಸಿ ಹೊರಟು ಹೋದರು. ಹತಶೇಷದೈತ್ಯರು ನಾರದರ ಅನುಮತಿಯಂತೆ ಅಪತ್ತನ್ನು ಹೊಂದಿದ್ದ ಬಲಿಚಕ್ರವರ್ತಿಯನ್ನು ಎತ್ತಿಕೊಂಡು ಅಸ್ತಪರ್ವತಕ್ಕೆ ಹೋದರು. ಅಲ್ಲಿ ಶುಕ್ರಾಚಾರ್ಯರು ಮೃತಸಂಜಿವಿನೀ ವಿದ್ಯೆಯಿಂದ ಮೃತರಾಗಿದ್ದ ದೈತ್ಯರನ್ನೆಲ್ಲ ಬದುಕಿಸಿ ಮೂರ್ಛಿತನಾಗಿದ್ದ ಬಲಿ ರಾಜನನ್ನು ಹಸ್ತ ಸ್ಪರ್ಶಮಾತ್ರದಿಂದ ಸ್ಮೃತಿ ಹೊಂದುವಂತೆ ಮಾಡಿದರು. ಎಚ್ಚೆತ್ತ ಬಲಿ ರಾಜನು ಜಯಾಪಜಯಗಳು ಶ್ರೀಹರಿಯ ಅಧೀನಗಳೆಂದು ತಿಳಿದು ತನ್ನ ಸೋಲಿಗಾಗಿ ಖೇದವನ್ನು ಪಡದೇ ಇದ್ದನು.

ಶ್ರೀವಿಷ್ಣುವು ಮೋಹಿನೀರೂಪದಿಂದ ದೈತ್ಯ ದಾನವರನ್ನು ಮೋಹಗೊಳಿಸಿ ದೇವತೆಗಳಿಗೆ ಅಮೃತವನ್ನು ಕೊಟ್ಟನೆಂಬ ವೃತ್ತಾಂತವನ್ನು ರುದ್ರದೇವರು ಕೇಳಿ, ಆ ಮೋಹಿನೀರೂಪವನ್ನು ನೋಡಬೇಕೆಂದು ಗಿರಿಜಾಸಹಿತನಾಗಿ ವೃಷಭವನ್ನೇರಿ ಭೂತ ಗಣಗಳೊಡನೆ ವಿಷ್ಣುಲೋಕಕ್ಕೆ ಹೋದನು. ಹರಿಯು ಬಂದ ಹರನನ್ನು ಸತ್ಕರಿಸಿದನು. ಹರನು ಹರಿಯನ್ನು ಪೂಜಿಸಿ

**ಶಿವ :–** ದೇವದೇವನೇ ! ಜಗದ್ವ್ಯಾಪಿಯೇ ! ಜಗದೀಶನೇ ! ನೀನು ಸರ್ವಪದಾರ್ಥಗಳಿಗೂ ಸ್ವತಂತ್ರಕಾರಣನು. ಆದಾನಾದಿಕರ್ತನು. ಏಕಾಂತಿಗಳಾದ ಸನಕಾದಿಗಳು ಯಾವ ಫಲವನ್ನೂ ಬಯಸದೆ ನಿನ್ನನ್ನೇ ಭಜಿಸುವರು. ನೀನೇ ಪರಬ್ರಹ್ಮನು. ಗುಣಪೂರ್ಣನು. ನಾಶರಹಿತನು. ಸಮಾಧಿಕರಹಿತನು, ಜಡ ಚೇತನ ಭಿನ್ನ. ತ್ರಿಗುಣರಹಿತನು. ಶೋಕರಹಿತನು. ಕೇವಲಾನಂದ ಸ್ವರೂಪನು. ಜನ್ಮಾದಿ ಆರು ವಿಕಾರರಹಿತನು. ಜಗತ್ತಿನ ಜನ್ಮ ಮೊದಲಾದ ಎಂಟು ವ್ಯಾಪಾರಕ್ಕೂ ಕರ್ತನು. ಜಗದಂತರ್ನಿಯಾಮಕನು. ಅಧ್ಯಕ್ಷನು. ಸೃಷ್ಟ್ಯಾದಿಗಳಿಗೆ ಪ್ರಕೃತ್ಯಾದಿಗಳನ್ನು ಕುರಿಯದೆ ಸ್ವೇಚ್ಛೆಯಿಂದಲೇ ಜಗತ್ತನ್ನು ನಿರ್ಮಿಸಲು ಸಮರ್ಥನು. ಒಡವೆಯ ರೂಪದಲ್ಲಿರುವ ಬಂಗಾರವೂ ಮೂಲಬಂಗಾರವೂ ಒಂದೇ ವಸ್ತು, ಭೇದ ವಿಲ್ಲ. ಅದರಂತೆ ಕಾರ್ಯಕಾರಣಗಳಲ್ಲಿ ನೆಲೆಸಿರುವ ನಿನ್ನ ರೂಪಗಳಿಗೆ ಪರಸ್ಪರ ಭೇದ ವಿಲ್ಲ. ನಿನ್ನ ಹೊರತು ಅನ್ಯನುಶಕ್ತನಲ್ಲ. ಪಾಮರರು ಮಿಥ್ಯಾಜ್ಞಾನದಿಂದ ನಿನ್ನಲ್ಲಿ ಭೇದವನ್ನು ಕಲ್ಪಿಸುವರು. ಅಜ್ಞಾನಾದಿ ಉಪಾಧಿ (ಕಾರಣ) ನಿನಗಿದ್ದಿದ್ದರೆ ಅದರಿಂದ ಔಪಾಧಿಕ ಭೇದವುಳ್ಳವನೆಂದು ಶಂಕಿಸಬಹುದಾಗಿತ್ತು. ನೀನು ಕೇವಲ ಆನಂದ ಸ್ವರೂಪನೆಂದು ನಿರ್ಧರಿಸಲ್ಪಟ್ಟಿರುವುದರಿಂದ ನೀನು ಔಪಾಧಿಕಭೇದವುಳ್ಳವನಲ್ಲವೇ ಅಲ್ಲ.

ವೇದಾಂತಿಗಳು ನಿನ್ನನ್ನು ಬ್ರಹ್ಮನೆಂದೂ, ಮೀಮಾಂಸಕರು ಧಾರಕನಾದ್ದರಿಂದ ಧರ್ಮನೆಂದೂ, ಪೌರಾಣಿಕರು ಅಥವಾ ಸಾಂಖ್ಯರು ಪ್ರಕೃತಿ ಪುರುಷರಿಂದ ಭಿನ್ನ

ನಾದ ನಿನ್ನನ್ನು ಪುರುಷೋತ್ತಮನೆಂದೂ, ಪಾಂಚರಾತ್ರಿಕರು ವಿಮಲೋತ್ಕರ್ಷಣೀತ್ಯಾದಿ ಸ್ವರೂಪಭೂತ ಒಂಭತ್ತು ಶಕ್ತಿಯುಕ್ತ ಪರಮಪುರುಷನೆಂದೂ, ಏಕಾಂತ ಭಕ್ತರು ಚತುರ್ವಿಧ ನಾಶರಹಿತನೂ, ಸ್ವತಂತ್ರನೂ ಆದ ಮಹಾಪುರುಷನೆಂದೂ ಹೇಳುವರು.

ನಾನು, ಚತುರ್ಮುಖ, ಮರೀಚಿ-ಮೊದಲಾದವರು ಸಾತ್ವಿಕಸ್ವಭಾವದವರು. ಹಾಗಿದ್ದರೂ ನಿನ್ನ ಮೋಹಕಶಕ್ತಿಯಿಂದ ಅಪಹೃತಅಂತಃಕರಣವುಳ್ಳವರಾಗಿ ನಿನ್ನ ವ್ಯಾಪಾರಗಳನ್ನು ಚೆನ್ನಾಗಿ ತಿಳಿಯಲಾರೆವು. ಹೀಗಿರುವಾಗ ಸದಾ ರಾಜಸತಾಮಸಸ್ವಭಾವದವರು ನಿನ್ನನ್ನು ತಿಳಿಯಲಾರರು ಎಂದು ಹೇಳಬೇಕಾದುದೇ ಇಲ್ಲ. ಬ್ರಹ್ಮಾದಿ ಅವಿಜ್ಞಾತಸ್ವರೂಪಿಯಾದ ನೀನು ಜಗತ್ತಿನ ಸೃಷ್ಟಿ, ಸ್ಥಿತಿ, ನಾಶಗಳನ್ನು ಮಾಡುತ್ತಾ, ಪ್ರಾಣಿಗಳಿಗೆ ಅಭೀಷ್ಟಗಳನ್ನು ಕೊಟ್ಟು ಬಂಧಮೋಕ್ಷಗಳನ್ನೆಸಗುವೆ.

ವಾಯುವು ಸರ್ವತ್ರ ವ್ಯಾಪಿಸಿ ಸಂಪರ್ಕ ಹೊಂದದೆ ಭಿನ್ನನಾಗಿರುವಂತೆ, ನೀನು ಜಗತ್ತೆಲ್ಲವನ್ನೂ ವ್ಯಾಪಿಸಿ, ನಿರ್ಲಿಪ್ತನಾಗಿ, ಭಿನ್ನವಾಗಿರುವೆ. ಇಂತಹ ಜ್ಞಾನವೇ ನಿನ್ನ ಸ್ತೋತ್ರ.

ಶ್ರೀಹರೇ ! ಗುಣಪೂರ್ಣಗಳಾದ ನಿನ್ನ ಅವತಾರಗಳನ್ನು ನೋಡಿರುವೆನು. ನಿನ್ನ ಸ್ತ್ರೀರೂಪವನ್ನು ನೋಡಿಲ್ಲ. ಅದನ್ನು ನೋಡಬೇಕೆಂದೇ ನಾನಿಲ್ಲಿಗೆ ಬಂದಿರುವೆನು.

**ಶ್ರೀಹರಿ .–** ಶಂಕರನೇ ! ಅಯೋಗ್ಯರಾದ ದೈತ್ಯರನ್ನು ವಂಚಿಸಿ ದೇವತೆಗಳಿಗೆ ಅಮೃತವನ್ನು ಹಂಚುವುದಕ್ಕಾಗಿ ಧರಿಸಿದ್ದ ಸ್ತ್ರೀರೂಪವನ್ನು ನಿನಗೆ ತೋರಿಸುವೆನು.

(ಹೀಗೆ ಹೇಳಿ ಅಂತರ್ಧಾನವನ್ನು ಹೊಂದಿದನು. ಗಿರಿಜೆಯ ಸಹಿತನಾಗಿ ಶಿವನು ಎಲ್ಲ ದಿಕ್ಕುಗಳನ್ನೂ ನೋಡುತ್ತಿರುವಷ್ಟರಲ್ಲಿಯೇ ಉಪವನದಲ್ಲಿ ಚೆಂಡಾಡುತ್ತ ವಿನೋದದಿಂದ ಸಂಚರಿಸುತ್ತಿರುವ ಜಗನ್ಮೋಹಕಳಾದ ಸುಂದರಿಯನ್ನು ನೋಡಿ ಶಿವನು ಕೂಡಲೇ, ಮೋಹಪರವಶನಾಗಿ ಹತ್ತಿರದಲ್ಲಿದ್ದ ಪಾರ್ವತಿ, ಪ್ರಮಥಗಣಗಳನ್ನೂ ಗಣನೆ ಮಾಡದೆ ಮೋಹಿನಿಯ ಬಳಿಗೆ ಓಡಿಹೋದನು. ಮೋಹಿನಿಯು ಕದಲಿದ ವಸ್ತ್ರಳಾಗಿ ಮರಗಳ ಮರೆಯಲ್ಲಿ ಅವಿತಿಟ್ಟುಕೊಂಡರೂ ರುದ್ರನು ಬೆನ್ನಟ್ಟಿ ಹೋದನು ಆಗ ಅವನ ವೀರ್ಯವು ಸ್ಖಲನವಾಯಿತು. ಅದು ಬಿದ್ದ ಸ್ಥಳಗಳು ಬೆಳ್ಳಿ ಮತ್ತು ಚಿನ್ನದ ಗಣಿಗಳಾದುವು. ರುದ್ರವೀರ್ಯ ಸಂಬಂಧವನ್ನು ಹೊಂದಿದ ನದಿ,

ಸರೋವರ, ವನ, ಪರ್ವತ ಮತ್ತು ಉಪವನಗಳು ಪುಣ್ಯ ಸ್ಥಳಗಳಾಗಿ ಪ್ರಸಿದ್ಧ ಗಳಾದುವು. ಅಲ್ಲಲ್ಲಿ ಋಷಿಗಳು ವಾಸಿಸುತ್ತ ಅಲ್ಲಿ ಸಂನಿಹಿತನಾದ ರುದ್ರದೇವರನ್ನು ಉಪಾಸಿಸುತ್ತಿರುವರು.

ಹೀಗೆ ತನ್ನ ವೀರ್ಯವು ಸ್ಖಲನಸವಾದೊಡನೆ ರುದ್ರನು ಹರಿಯ ಮಾಯೆಯಿಂದ ಮೋಹಿತನಾದೆನೆಂದು ತಿಳಿದು ನಾಚಿ ಶಾಂತಮನಸ್ಕನಾದನು.

(ಹೀಗೆ ನಡೆದ ಕಥೆಯು ಇರುವಾಗ ರುದ್ರವೀರ್ಯದಿಂದ ಮೋಹಿನಿಯಲ್ಲಿ ಅಯ್ಯಪ್ಪ ಸ್ವಾಮಿಯು ಹುಟ್ಟಿದನೆಂಬುದು ತಾಮಸಕಥೆ. ನಿತ್ಯನರಕವಾಗಲು ಈ ಸುಳ್ಳುಕಥೆಯು ಹಬ್ಬಿದೆಯೆಂದು ತಿಳಿಯಬೇಕು.)

ಬಳಿಕ ಶ್ರೀಹರಿಯು ನಿಜರೂಪದಿಂದ ನಿಂತನು.

**ಶ್ರೀಹರಿ :** ರುದ್ರನೇ ! ನಾನು ನಿನ್ನನ್ನು ಮಾಯೆಯಿಂದ ಮೋಹಗೊಳಿಸಿದಗೂ ನೀನು ದೈವವಶದಿಂದ ಅದನ್ನು ದಾಟಿ ವಿವೇಕವನ್ನು ಹೊಂದಿದೆ. ಬೇರೆ ಯಾರೂ ನಿನ್ನಂತೆ ಸುಲಭವಾಗಿ ಕಾಮಾದಿಗಳನ್ನು ಜಯಿಸಲಾರರು.

**ಶಿವ :–** (ಹರಿಗೆ ನಮಿಸಿ ಕೈಲಾಸಕ್ಕೆ ಬಂದು) ಗೌರಿಯೇ ! ಜ್ಞಾನಿಯಾದ ನನ್ನನ್ನು ಮರುಳುಗೊಳಿಸಿದ ಶ್ರೀಹರಿಯ ಮಾಯೆ (ಶಕ್ತಿ)ಯನ್ನು ನೋಡಿದೆ ಯಲ್ಲವೆ ? ನಾನೇ ಹೀಗಾದ ಮೇಲೆ ಬೇರೆಯವರು ಆ ಮಾಯೆಯನ್ನು ಹೇಗೆ ಅತಿ ಕ್ರಮಿಸಿಯಾರು ? ಹಿಂದೆ ನಾನು ಸಾವಿರಾರು ವರ್ಷಗಳ ಕಾಲ ತಪಸ್ಸನ್ನು ಮಾಡಿ ಬಂದಾಗ ನೀನು "ಇದುವರೆಗೆ ತಾವು ಯಾರನ್ನು ಕುರಿತು ಉಪಾಸನೆ ಮಾಡಿದಿರಿ ? ಅವನು ಎಂತಹವನು ?" ಎಂದು ಕೇಳಿದ್ದಿಯಲ್ಲವೆ ? ನನ್ನ ಉಪಾಸ್ಯ ಮೂರುತಿ ಯಾದ ಪುರಾಣ ಪುರುಷನು ಮೋಹಿನೀ ರೂಪವನ್ನು ತಾಳಿದ ಶ್ರೀಹರಿಯೇ. ಅವನು ಮೀರಿದ ಕಾಲವನ್ನು ತನ್ನ ವಶದಲ್ಲಿಟ್ಟುಕೊಂಡಿರುವನು. ವೇದಗಳಿಂದ ಸಂಪೂರ್ಣ ವಾಗಿ ಪ್ರತಿಪಾದಿಸಲ್ಪಡದಿರುವವನು.

**ಶುಕ :–** ಪರೀಕ್ಷಿದ್ರಾಜನೇ ! ಕೂರ್ಮರೂಪವನ್ನೂ, ಅಜಿತರೂಪವನ್ನೂ ತಾಳಿ ಶ್ರೀಹರಿಯು ಮಾಡಿದ ವ್ಯಾಪಾರಗಳನ್ನು ನಿನಗೆ ತಿಳಿಸಿದೆನು. ಉತ್ತಮ ಶ್ಲೋಕನಾದ ಶ್ರೀಹರಿಗುಣವರ್ಣನೆಯಲ್ಲಿ ಸ್ವಲ್ಪವನ್ನು ವಿವರಿಸುವುದರಿಂದಲೇ ಸಂಸಾರದಲ್ಲಿ ಸುತ್ತುವುದು ತಪ್ಪಿಹೋಗುವುದರಿಂದ ನಿರಂತರ ಇದನ್ನು ಕೇಳುತ್ತಾ, ಕೀರ್ತಿಸುತ್ತಾ ಇರುವವರ ಒಳ್ಳೆಯ ಪ್ರಯತ್ನವು ಎಂದಿಗೂ ವ್ಯರ್ಥವಾಗದೆ ಸಫಲವೇ ಆಗುವುದು.

ಶ್ಲೋಕ ॥ ಅಸದವಿಷಯಮಂಘ್ರಿಂ ಭಾವಗಮ್ಯಂ ಪ್ರಪನ್ನಾನಮೃತಮಮರ ವರ್ಯಾನಾಶಯತ್ ಸಿಂಧುಮಥ್ಯಂ । ಕಪಟಯುವತಿವೇಷೋ ಮೋಹಯನ್ ಯಃ ಸುರಾರೀನ್ ತಮಹಮುಪಸೃತಾನಾಂ ಕಾಮಪೂರಂ ನತೋಽಸ್ಮಿ ॥46/11॥

ಅರ್ಥ .– ದುರುಳರಿಗೇ ದೂರನು, ತನ್ನವರ ಭಕ್ತಿಗೆ ವಶನು, ದೇವತೆಗಳಿಗೆ ಸಮುದ್ರಮಥನದಲ್ಲಿ ಹುಟ್ಟಿದ ಅಮೃತಪಾನಮಾಡಿಸಿದವನು, ಸ್ತ್ರೀ ವೇಷವನ್ನು ತಾಳಿ ಅಸುಗರಿಗೆ ಮೋಹವನ್ನುಂಟುಮಾಡಿದವನೂ, ಶರಣಾಗತರ ಅಭೀಷ್ಟವನ್ನು ಪೂರ್ಣಮಾಡಿತಕ್ಕವನೂ ಆದ ಶ್ರೀಹರಿಯನ್ನು ವಂದಿಸುವೆನು.

ಮೋಹಿನೀ ಅವತಾರವನ್ನು ವರ್ಣಿಸುವ ಶ್ರೀಪಾದರಾಜರ ಪದ :–

ಮೋಹನರಾಗ ಆದಿತಾಳ

ವೃಷಭನೇರಿದ ವಿಷಧರನ್ಯಾರೇ ಪೇಳಮ್ಮಯ್ಯ
ಹಸುಳೆ ಪಾರ್ವತಿಯ ತಪಸಿಗೆ ಮೆಚ್ಚಿದ । ಜಟಾಮಂಡಲಧಾರಿ ಕಾಣಮ್ಮ

ಕೈಲಾಸಗಿರಿಯ ದೊರೆಯಿವನಮ್ಮ — ಅದು ಅಲ್ಲದೆ ಕೇಳೆ
ಬೈಲು ಸ್ಮಶಾನದಿ ಮನೆಯಿವಗಮ್ಮ — ಸಂಕರ್ಷಣನೆಂದು
ಕೇಳೆ ಮಹಿಯೊಳು ಜನ ಪೊಗಳುವರಮ್ಮ — ಇದು ನೈಜವಮ್ಮ ॥
ನಾಲಗೆ ಸಾಸಿರ ಫಣಿಭೂಷಣ ನಮ್ಮ । ರಮೆಯರಸಗೆ ಇವ ಮೊಮ್ಮಗನಮ್ಮ ೧

ಬಾಲೆ ದಾಕ್ಷಾಯಣಿ ಪತಿ ಇವನಮ್ಮ — ಮಾಘನ ಯಾಗದಲಿ
ಬ್ಹಾಳ ಕೃತ್ಯಗಳನು ನಡೆಸಿದನಮ್ಮ—ಸಾಗರದಲಿ ಹುಟ್ಟಿದ
ಕಾಳ ಕೂಟವ ಭಕ್ಷಿಸಿದನಮ್ಮ—ರಾಮನ ದಯೆಯಮ್ಮ ॥
ಮೇಲೆ ಉಳಿಯಲು ಶೇಷಗರಳವು । ನೀಲಕಂಠನೆಂದೆನಿಸಿದನಮ್ಮ ೨

ಹರನೊಂದಿನ ವೈಕುಂಠಕೆ ಬರಲು—ತಾತಗೆ ವಂದಿಸುತ
ತರುಣೀರೂಪವ ನೋಡೇನೆನಲು—ಹರದಿ ಕುಳ್ಳಿರಲು ॥
ಕರುಣೆಗಳರಸನು ಹರನಮೊಗವ ನೋಡಿ । ಅರಣೋದಯಕೆ ಬಾರೆಂದು ಕಳುಹಿದ ೩

ಅರುಣೋದಯಕೆ ಗಂಗಾಧರ ಬರಲು—ಹದಿನಾರು ವರ್ಷದ
ತರುಣೀರೂಪದಿ ಹರಿ ವನದೊಳಗಿರಲು—ಚರಣನಖಾಗ್ರದಿ
ಧರಣೀ ಬರೆಯುತ್ತ ನಿಂತಿರಲು—ಸೆರಗ ಪಿಡಿಯೆ ಬರಲು ॥
ಕರದಿ ಶಂಖಗದೆ ಚಕ್ರವ ತೋರಲು । ಹರನು ನಾಚಿ ತಲೆತಗ್ಗಿಸಿ ನಿಂತ ೪

ಮಂಗಳಾಂಗನೆ ಮಾರಜನಕ—ನಾಮಾಡಿದ ತಪ್ಪ
ಹಿಂಗದೆ ಕ್ಷಮಿಸೊ ಯದುಕುಲ ತಿಲಕ—ವಕ್ಷದಲೊಪ್ಪುವ ನಿ
ನ್ನಂಗನೆ ಅರಿಯಳು ನಖಿಮುಹಿಮಾಂಕ—ಹೀಗೆನುತಲಿ ತವಕ ॥
ರಂಗವಿಠಲನ ಪದಂಗಳ ಪಿಡಿದು ಸಾಷ್ಟಾಂಗವೆರಗಿ ಕೈಲಾಸಕೆ ನಡೆದ ॥ ೫

## ಹನ್ನೊಂದನೆಯ ಅಧ್ಯಾಯ ಮುಗಿದುದು

**ಶುಕ .–** ರಾಜನೇ ! ಈಗ ಏಳನೆಯ ಮನ್ವಂತರ ನಡೆಯುತ್ತಿರುವುದು. ಇದರ ಮನು **ವೈವಸ್ವತನು**. ಅವನು ಸೂರ್ಯನ ಮಗನಾದ ಶ್ರಾದ್ಧದೇವನು. ಅವನಿಗೆ ಇಕ್ಷ್ವಾಕು, ನಭ, ಧೃಷ್ಟ, ಶರ್ಯಾತಿ, ನರಿಷ್ಯಂತ, ನಾಭಾಗ, ದಿಷ್ಟ, ಕರೂಷ, ವೃಷಧ್ರ ಮತ್ತು ವಸುಮಾನ್ ಎಂಬ ಹತ್ತು ಮಂದಿ ಪುತ್ರರು. ಆದಿತ್ಯರು, ವಸುಗಳು, ರುದ್ರರು, ವಿಶ್ವೇದೇವತೆಗಳು, ಮರುದ್ಗಣಗಳು, ಅಶ್ವಿನೀ ದೇವತೆಗಳು ಮತ್ತು ಋಭುಗಳು ಎಂಬುವರು ದೇವತೆಗಳು. ಪುರಂದರನು ಇಂದ್ರನು ಕಶ್ಯಪ, ಅತ್ರಿ, ವಸಿಷ್ಠ, ವಿಶ್ವಾಮಿತ್ರ, ಗೌತಮ, ಜಮದಗ್ನಿ ಮತ್ತು ಭರದ್ವಾಜರೆಂಬುವರು ಸಪ್ತರ್ಷಿಗಳು. ಹರಿಯು ಕಶ್ಯಪರಿಂದ ಅದಿತಿಯಲ್ಲಿ **ವಾಮನ ರೂಪಿಯಾಗಿ** ಅವತರಿಸಿರುವನು.

**ಎಂಟನೆಯ ಮನ್ವಂತರ :–** ಸೂರ್ಯನಿಂದ ಸಂಜ್ಞಾದೇವಿಯಲ್ಲಿ ಹುಟ್ಟಿದ **ಸಾವರ್ಣಿಯು** ಈ ಮನ್ವಂತರಕ್ಕೆ ಮನುವಾಗುವನು. ನಿರ್ಮೋಹ ಮೊದಲಾದವರು ಮನುಪುತ್ರರು. ಸುತಪಸ, ವಿರಜ, ಅಮಿತಪ್ರಜರೆಂಬುವರು ದೇವತೆಗಳು. ವಿರೋಚನನ ಮಗನಾದ ಬಲಿಯು ಇಂದ್ರನು. ಗಾಲವ, ದೀಪ್ತಿಮಂತ, ಪರಶುರಾಮ, ಅಶ್ವತ್ಥಾಮ, ಕೃಪ, ಋಷ್ಯಶೃಂಗ ಮತ್ತು ಶುಕನಾದ ನನ್ನ ತಂದೆ ವೇದವ್ಯಾಸ ದೇವರು ಸಪ್ತಋಷಿಗಳು. ಈ **ಸಾವರ್ಣಿ** ಮನ್ವಂತರದಲ್ಲಿ ದೇವಗುಹ್ಯನೆಂಬ ಋಷಿಗೆ ಸರಸ್ವತಿಯೆಂಬ ಭಾರ್ಯೆಯಲ್ಲಿ **ಸಾರ್ವಭೌಮರಿಗೆ** ಅಧಿಪತಿಯಾದ **ಪ್ರಭು** ನಾಮಕನಾಗಿ ಶ್ರೀಹರಿಯು ಅವತರಿಸಿ ಪುರಂದರನಿಂದ ಸ್ವರ್ಗವನ್ನು ತೆಗೆದುಕೊಂಡು ಬಲಿರಾಜನಿಗೆ ಕೊಡುವನು.

**ಒಂಭತ್ತನೆಯ ಮನ್ವಂತರ :–** ವರುಣಪುತ್ರ **ದಕ್ಷಸಾವರ್ಣಿಯು** ಮನುವು. ಭೂತಕೇತು ಮೊದಲಾದವರು ಮನುಪುತ್ರರು. ಪರಾ ಮರೀಚಿ ಗರ್ಭಾದಿಗಳು ದೇವತೆಗಳು. ಅದ್ಭುತನೆಂಬುವನು ಇಂದ್ರನು. ದ್ಯುತಿಮಂತ ಮೊದಲಾದವರು ಸಪ್ತರ್ಷಿಗಳು. ಆಯುಷ್ಮಂತನೆಂಬುವನಿಂದ ಅಂಬುಧಾರೆಯೆಂಬ ಅವನ ಪತ್ನಿಯಲ್ಲಿ ಶ್ರೀಹರಿಯು **ಋಷಭ** ರೂಪದಿಂದ ಅವತರಿಸುವನು.

**ಹತ್ತನೆಯ ಮನ್ವಂತರ** :– ಉಪಶ್ಲೋಕನ ಪುತ್ರ **ಬ್ರಹ್ಮಸಾವರ್ಣಿ** ಯೆಂಬುವನು ಮನು. ಭೂರಿಷೇಣ ಮೊದಲಾದವರು. ಮನುಪುತ್ರರು. ಸುವಾಸನ ಮೊದಲಾದವರು ದೇವತೆಗಳು. ಹವಿಷ್ಮಂತ ಮೊದಲಾದವರು ಸಪ್ತರ್ಷಿಗಳು. ಶಂಭುಯೆಂಬುವನು ಇಂದ್ರನು. ವಿಷ್ವಕ್ಸೇನ ಮತ್ತು ವಿಷೂಚಿ ಎಂಬ ದಂಪತಿಗಳಲ್ಲಿ ಶ್ರೀನಾರಾಯಣನು **ಶಾಂತ** ನಾಮಕನಾಗಿ ಅವತರಿಸುವನು.

**ಹನ್ನೊಂದನೆಯ ಮನ್ವಂತರ** .– ಧರ್ಮಸಾವರ್ಣಿಯು ಮನುವು. ಸತ್ಯಧರ್ಮಾದಿ ಗಳು ಆ ಮನುವಿನ ಮಕ್ಕಳು. ವಿಹಂಗಮಾದಿಗಳು ದೇವತೆಗಳು. ವೈಧೃತಿಯೆಂಬು ವನು ಇಂದ್ರ. ಅರುಣಾದಿಗಳು ಸಪ್ತರ್ಷಿಗಳು. ಆರ್ಯಕ ಮತ್ತು ವೈಧೃತಾ ಎಂಬ ದಂಪತಿಗಳಲ್ಲಿ ಶ್ರೀಹರಿಯು **ಧರ್ಮಸೇತು** ಎಂಬ ನಾಮದಿಂದ ಅವತರಿಸಿ ತ್ರಿಲೋಕ ಪಾಲನೆ ಮಾಡುವನು.

**ಹನ್ನೆರಡನೆಯ ಮನ್ವಂತರ** :– ಮನುವು **ರುದ್ರಸಾವರ್ಣಿ**. ದೇವವಂತ, ಉಪದೇವ, ದೇವಶ್ರೇಷ ಮೊದಲಾದವರು ಮನುಪುತ್ರರು. ಋತಧಾಮನು ಇಂದ್ರನು. ಹರಿತಾದಿಗಳು ದೇವತೆಗಳು. ತಪೋಮೂರ್ತಿ, ತಪಸ್ಸು, ಅಗ್ನೀಧ್ರಕ ಮೊದಲಾದವರು ಸಪ್ತರ್ಷಿಗಳು. ಸತ್ಯಮಹ – ಸೂನೃತೆಯೆಂಬ ದಂಪತಿಗಳಲ್ಲಿ ಶ್ರೀಹರಿಯು **ಸ್ವಧಾಮಾ** ಎಂಬ ಹೆಸರಿನಿಂದವತರಿಸಿ ಆ ಮನ್ವಂತರವನ್ನು ಪಾಲಿಸು ವನು,

**ಹದಿಮೂರನೆಯ ಮನ್ವಂತರ** :– ದೇವ ಸಾವರ್ಣಿಯು ಮನುವು. ಚಿತ್ರ ಸೇನ, ವಿಚಿತ್ರ ಮೊದಲಾದವರು ಮನುಪುತ್ರರು. ಸುಕರ್ಮ, ಸುತ್ರಾಮ ಮೊದಲಾದ ವರು ದೇವತೆಗಳು. ದಿವಸ್ಪತಿಯೆಂಬುವನು ಇಂದ್ರನು. ನಿರ್ಮೋಕ, ತತ್ತ್ವದರ್ಶ ಮೊದಲಾದವರು ಸಪ್ತರ್ಷಿಗಳು. ಆಗ ಭಗವಂತನು ದೇವಹೋತ್ರನೆಂಬುವನಿಗೆ ಬೃಹತಿಯೆಂಬ ಭಾರ್ಯೆಯಲ್ಲಿ **ಯೋಗೇಶ್ವರ** ಎಂಬ ನಾಮದಿಂದ ಹರಿಯು ಅವತರಿಸಿ ಇಂದ್ರನಿಗೆ ಐಶ್ವರ್ಯಾದಿಗಳನ್ನು ಕೊಟ್ಟು ಸಂರಕ್ಷಿಸುವನು

**ಹದಿನಾಲ್ಕನೆಯ ಮನ್ವಂತರ** :– ಇಂದ್ರಸಾವರ್ಣಿಯೆಂಬುವನು ಮನುವು. ಜಂತು, ಭೀರವ, ವರ್ಯ ಮೊದಲಾದವರು ಮನುಪುತ್ರರು. ವಿಚಿತ್ರರು, ಚಾಕ್ಷುಷರು ಎಂಬುವರು ದೇವತೆಗಳು. ಶುಚಿಯೆಂಬುವನು ಇಂದ್ರನು. ಅಗ್ನಿ ಬಾಹು, ಶುಚಿ, ಶುದ್ಧ ಮತ್ತು ಮಾಗಧ ಮೊದಲಾದವರು ಸಪ್ತರ್ಷಿಗಳು. ಆಗ ಶ್ರೀಹರಿಯು ನಾರಾಯಣ ಅಥವಾ ಸತ್ರಾಯಣ ಎಂಬುವನಿಗೆ ವಿನತೆಯೆಂಬ ಭಾರ್ಯೆಯಲ್ಲಿ **ಬೃಹದ್ಭಾನು** ಎಂಬ ಹೆಸರಿನಿಂದ ಅವತರಿಸಿ ಯಜ್ಞ ಸಮೂಹಗಳನ್ನು ವಿಸ್ತರಿಸುವನು.

ಪರೀಕ್ಷಿದ್ರಾಜನೇ ! ನಿನಗೆ ಭೂತ, ಭವಿಷ್ಯದ್ವರ್ತಮಾನ ಕಾಲಗಳಲ್ಲಿ ನಡೆಯುವ ಹದಿನಾಲ್ಕು ಮನ್ವಂತರಗಳನ್ನೂ ವಿವರಿಸಿರುವೆನು. ಕೃತಾದಿ ನಾಲ್ಕುಯುಗಗಳು ಸಾವಿರ ಬಾರಿ ತಿರುಗಿ ಬರುವಷ್ಟರಲ್ಲಿ ಬ್ರಹ್ಮದೇವರಿಗೆ ಒಂದು ಹಗಲು ಕಳೆಯುವುದು. ಈ ಹಗಲಿನಲ್ಲಿ ಹದಿನಾಲ್ಕು ಮನ್ವಂತರಗಳೂ ಕಳೆಯುವುವು.

## ಹನ್ನೆರಡನೆಯ ಅಧ್ಯಾಯ ಮುಗಿದುದು

**ಪರೀಕ್ಷಿತ್ :–** ಆಚಾರ್ಯರೇ ! ಹರಿಯು ಹದಿನಾಲ್ಕು ಮನ್ವಂತರಗಳಲ್ಲಿಯೂ ಮಾಡಿದ ಕಾರ್ಯಗಳೇನು ? ಮನುಗಳು, ಮನುಪುತ್ರರು, ಇಂದ್ರರು, ಸಪ್ತರ್ಷಿಗಳಾದಿಯಾಗಿ ಎಲ್ಲರೂ ಮಾಡುವ ಕಾರ್ಯಗಳೇನು ? ಅವರು ಯಾರಿಂದ ನಿಯಮ್ಯರಾಗಿ ಕರ್ಮ ಮಾಡುವರು ?

**ಶುಕ :–** ಮನ್ವಾದಿಗಳೆಲ್ಲರೂ ಯಜ್ಞಮೊದಲಾದ ಭಗವಂತನ ಅವತಾರರೂಪಗಳಿಂದ ನಿಯಮ್ಯರಾಗಿ ಅವರವರಿಗೆ ವಹಿಸಿದ, ಲೋಕರಕ್ಷಣರೂಪ ಕಾರ್ಯಗಳನ್ನು ನಿರ್ವಹಿಸುವರು. ದೈನಂದಿನ ಅಂತಿಮ ಮಹಾಯುಗದ ಕೊನೆಯಲ್ಲಿ ಪ್ರವರ್ತಕರಿಲ್ಲದೆ ನಷ್ಟಪ್ರಾಯಗಳಾದ ವೇದಗಳನ್ನು ಋಷಿಗಳು ತಮ್ಮ ತಪಃಪ್ರಭಾವದಿಂದ ತಿಳಿದು ಜಗತ್ತಿನಲ್ಲಿ ತಿರುಗಿ ಪ್ರಚಾರಮಾಡುವರು. ಆಯಾ ಕಾಲದ ಮನುವಿನ ಪುತ್ರರು ಮನುವಿನಿಂದ ಸ್ಥಾಪಿತವಾದ ಧರ್ಮಗಳನ್ನು ಲೋಪವಾಗದಂತೆ ಕಾಪಾಡುತ್ತ ಬರುತ್ತಾರೆ. ದೇವತೆಗಳು ಯಜ್ಞಭಾಗಗಳನ್ನು ಭುಜಿಸುವರು. ಇಂದ್ರರು ಪರಮಾತ್ಮನಿಂದ ದತ್ತವಾದ ಸಂಪತ್ತನ್ನು ಅನುಭವಿಸುತ್ತ ಮೂರು ಲೋಕಗಳನ್ನೂ ವೃಷ್ಟ್ಯಾದಿಗಳಿಂದ ರಕ್ಷಿಸುವರು. ಶ್ರೀಹರಿಯು ಕಪಿಲ ಮುಂತಾದ ಅವತಾರಗಳಿಂದ ಪ್ರತಿಯುಗದಲ್ಲಿಯೂ, ಜ್ಞಾನೋಪದೇಶವನ್ನೂ, ವ್ಯಾಸಾದಿಅವತಾರಗಳಿಂದ ಕರ್ಮಯೋಗವನ್ನೂ, ದತ್ತ ಮೊದಲಾದ ಅವತಾರಗಳಿಂದ ಅಣಿಮಾದಿ ಸಾಧನವನ್ನೂ, ಬ್ರಹ್ಮಾದಿಗಳಲ್ಲಿದ್ದುಕೊಂಡು ಸೃಷ್ಟ್ಯಾದಿಗಳನ್ನೂ ಮಾಡುತ್ತಾನೆ. ಇಂದ್ರಾದಿಗಳಲ್ಲಿ ಸಂನಿಹಿತನಾಗಿ ಕಳ್ಳರನ್ನೂ ಮತ್ತು ಅಸುರರನ್ನೂ ಸಂಹರಿಸುವನು. ನರಸಿಂಹಾದಿರೂಪದಿಂದ ಸಮಸ್ತರನ್ನೂ ನಾಶಮಾಡುವನು. ರಾಜನೇ ! ಸಾತ್ವಿಕರಾದ ಋಷ್ಯಾದಿಗಳಿಗೆ ಗೋಚರಿಸುವನು. ದುರ್ಮತಾವಲಂಬಿಗಳಿಗೆ ಗೋಚರಿಸುವವನಲ್ಲ. ಹದಿನಾಲ್ಕು ಮನ್ವಂತರಗಳ ಕಾಲವೇ ದೈನಂದಿನ ಕಲ್ಪವೆನಿಸುತ್ತದೆ.

## ಹದಿಮೂರನೆಯ ಅಧ್ಯಾಯ ಮುಗಿದುದು

**ಪರೀಕ್ಷಿತ್ :–** ಸರ್ವ ಅಭೀಷ್ಟಗಳನ್ನೂ ಪಡೆದಿರತಕ್ಕ ಶ್ರೀಪರಮಾತ್ಮನು

ಬಲಿರಾಜನಲ್ಲಿ ಮೂರಡಿ ಭೂಮಿಯನ್ನು ಏಕೆ ಯಾಚಿಸಿದನು ? ಬಲಿಯು ದಾನ ಕೊಟ್ಟ ಮೇಲೂ ಅವನನ್ನೇಕೆ ಬಂಧಿಸಿದನು ?

**ಶುಕ :–** ಇಂದ್ರನಿಂದ ಪರಾಜಿತನಾದ ಬಲಿಯು ಶುಕ್ರಾಚಾರ್ಯರ ಅನುಗ್ರಹ ದಿಂದ ಬದುಕಿ ಅವರ ಸೇವೆಯನ್ನು ಸಂತೋಷದಿಂದ ಮಾಡಿದನು. ಅದರಿಂದ ಪ್ರೀತ ರಾದ ಶುಕ್ರಾಚಾರ್ಯರು, ತಿರುಗಿ ಸ್ವರ್ಗಾಧಿಪತ್ಯವನ್ನು ಪಡೆಯಬೇಕೆಂದು ಬಯಸಿದ ಬಲಿಯಿಂದ ವಿಶ್ವಜಿತ್ ಯಾಗವನ್ನು ಮಾಡಿಸಿದರು. ಹವಿರ್ಭಾಗದಿಂದ ತೃಪ್ತನಾದ ಅಗ್ನಿದೇವನು ಬಲಿರಾಜನಿಗೆ ಸುವರ್ಣ ರಥ, ಇಂದ್ರಾಶ್ವಗಳಂತಿರುವ ಅಶ್ವಗಳು, ಸಿಂಹಧ್ವಜ, ಬಿಲ್ಲು, ಬತ್ತಳಿಕೆಗಳು ಮತ್ತು ದಿವ್ಯ ಕವಚ ಇವನ್ನು ಹೋಮ ಗುಂಡದ ಮೂಲಕ ಕೊಟ್ಟನು. ಆಗ ಪಿತಾಮಹನಾದ ಪ್ರಹ್ಲಾದನು ಅಮ್ಲಾನ ಪುಷ್ಪ ಮಾಲೆ ಯನ್ನೂ, ಶುಕ್ರಾಚಾರ್ಯರು ಶಂಖವನ್ನೂ ಕೊಟ್ಟರು. ಬಲಿಯು ಆ ರಥವನ್ನು ಹತ್ತಿ ಸೈನ್ಯ ಸಮೇತನಾಗಿ ಬಂದು ಅಮರಾವತಿಗೆ ಮುತ್ತಿಗೆ ಹಾಕಿ ಶಂಖವನ್ನೂದಿ ದನು. ಇಂದ್ರನು ಬಲಿಯ ಉದ್ಯೋಗವನ್ನು ತಿಳಿದು ದೇವತೆಗಳೊಡಗೂಡಿ ಬಂದು ಬೃಹಸ್ಪತ್ಯಾಚಾರ್ಯರಲ್ಲಿ ವಿಜ್ಞಾಪಿಸಿಕೊಂಡನು.

**ಇಂದ್ರ :–** ಪೂಜ್ಯರೇ ! ಪರಾಜಿತನಾಗಿದ್ದ ಬಲಿಯು ತಿರುಗಿ ಯುದ್ಧಕ್ಕೆ ಬಂದಿರುವನು. ಅವನಪರಾಕ್ರಮವು ಈಗ ದುರ್ಜಯವಾಗಿದೆ. ಇಂತಹ ಸಾಮರ್ಥ್ಯವು ಅವನಿಗೆ ಹೇಗೆ ಬಂದಿತು ?

**ಬೃಹಸ್ಪತಿ :–** ದೇವೇಂದ್ರನೇ ! ವೇದಜ್ಞರಾದ ಶುಕ್ರಾಚಾರ್ಯರು ತಮ್ಮ ಶಿಷ್ಯನಾದ ಬಲಿರಾಜನಿಗೆ ಸಹಿಸಲು ಅಶಕ್ಯವಾದ ಪರಾಕ್ರಮವನ್ನು ಹೊಂದುವಂತೆ ಅನುಗ್ರಹಿಸಿರುವರು. ಈಗ ಶ್ರೀಹರಿಯ ಹೊರತು ಮತ್ತಾರೂ ಬಲಿಯನ್ನು ಧಿಃಕರಿಸಲಾರರು. ಆದ್ದರಿಂದ ನೀವು ಈಗ ಯುದ್ಧವನ್ನು ಮಾಡದೆ ಸ್ವರ್ಗವನ್ನು ತ್ಯಜಿಸಿ ಕೊಂಚ ಕಾಲ ಬೇರೆ ಸ್ಥಳದಲ್ಲಿ ಅಡಗಿರಿ. ಕಾಲಾಂತರದಲ್ಲಿ ಬಲಿಯು ಈ ಶುಕ್ರಾಚಾರ್ಯರನ್ನು ಅವಮಾನಪಡಿಸಿ, ಅವರ ಶಾಪಕ್ಕೆ ಗುರಿಯಾಗಿ, ಸಕುಟುಂಬನಾಗಿ ನಷ್ಟನಾಗುವನು.

**ಶುಕಾಚಾರ್ಯರು :–** ಅದರಂತೆ ಇಂದ್ರಾದಿಗಳು ಸದ್ದುಗದ್ದಲವಿಲ್ಲದೆ ಸ್ವರ್ಗ ವನ್ನು ಖಾಲಿ ಮಾಡಿ ರೂಪಾಂತರದಿಂದ ಬೇರೆ ಸ್ಥಳಕ್ಕೆ ಹೊರಟು ಹೋದರು. ಬಲಿಯು ನಿರಾಯಾಸವಾಗಿ ಸ್ವರ್ಗಾಧಿಪತ್ಯವನ್ನು ಹೊಂದಿ ಮೂರು ಲೋಕಗಳನ್ನೂ ವಶಪಡಿಸಿಕೊಂಡನು. ನಿರಹಂಕಾರಿಯೂ, ಭಕ್ತಿಯಿಂದ ಗುರುಗಳನ್ನು ಅನುಸರಿಸು ತ್ತಿರುವವನೂ ಆದ ಬಲಿರಾಜನಲ್ಲಿ ವಾತ್ಸಲ್ಯವಿಟ್ಟ ಶುಕ್ರಾಚಾರ್ಯರು ಬಲಿಗೆ ಇಂದ್ರ ಪದವಿಯು ಸ್ಥಿರಪಡುವಂತೆ ಮಾಡಲು ಅವನಿಂದ ನೂರು ಅಶ್ವಮೇಧಗಳನ್ನು

ಮಾಡಿಸಿದರು. ಬಲಿಯು ಮೂರು ಲೋಕಗಳಲ್ಲಿಯೂ ತನ್ನ ಕೀರ್ತಿಯನ್ನು ಹರಡಿ, ತಾನು ಧನ್ಯನೆಂದು ತಿಳಿದು ಬ್ರಾಹ್ಮಣರ ಕೃಪೆಯಿಂದ ದೊರೆತ ಸಮೃದ್ಧೈಶ್ವರ್ಯವನ್ನು ಅನುಭವಸುತ್ತಿದ್ದನು.

## ಹದಿನಾಲ್ಕನೆಯ ಅಧ್ಯಾಯ ಮುಗಿದುದು

ಇಂದ್ರಾದಿಗಳು ರಾಜ್ಯಭ್ರಷ್ಟರಾದುದನ್ನೂ ದೈತ್ಯರು ಸ್ವರ್ಗದ ರಾಜ್ಯವನ್ನು ಅಪಹರಿಸಿದುದನ್ನೂ ನೋಡಿ ದೇವತೆಗಳಿಗೆ ತಾಯಿಯಾದ ಅದಿತಿಯು ದುಃಖಿಸುತ್ತಿದ್ದಳು. ಆಗ ಕಶ್ಯಪರು ಅಲ್ಲಿಗೆ ಬಂದರು.

**ಕಶ್ಯಪ :-** ಪ್ರಿಯೇ ! ನಿನ್ನ ಮುಖವು ಕುಂದಿರುವುದೇಕೆ ? ಗೋಬ್ರಾಹ್ಮಣರಿಗೂ, ಧರ್ಮಕ್ಕೂ, ಪ್ರಜೆಗಳಿಗೂ ಅಮಂಗಳವೇನೂ ಇಲ್ಲವಷ್ಟೆ ? ಅತಿಥಿಗಳು ಸತ್ಕೃತರಾಗದೆ ಕುಪಿತರಾಗಿ ಹಿಂತಿರುಗಿರುವರೆ ? ಸಕಾಲದಲ್ಲಿ ಅಗ್ನಿಯನ್ನು ಆರಾಧಿಸಿದೆಯಾ ಅಥವಾ ಇಲ್ಲವೆ ? ನಿನ್ನ ಮಕ್ಕಳು ಕುಶಲಿಗಳೇ ! ವ್ಯಾಕುಲಚಿತ್ತಳಂತೆ ಕಾಣುತ್ತಿರುವೆ. ಕಾರಣವೇನು ?

**ಅದಿತಿ :-** ಗೋಬ್ರಾಹ್ಮಣರಿಗೆ ಯಾವ ಹಾನಿಯೂ ಆಗಿಲ್ಲ. ಪ್ರಜೆಗಳು ಯಾವ ಭಂಗವನ್ನೂ ಹೊಂದದೆ ಸುಖವಾಗಿರುವರು. (ಇದಕ್ಕೆ ಆಳುತ್ತಿರುವ ಬಲಿರಾಜನು ದೇವತೆ ಮತ್ತು ಧರ್ಮಿಷನಾಗಿರುವುದು ಕಾರಣವಾಗಿದೆ.) ಅಗ್ನಿ ಮತ್ತು ಅತಿಥಿಗಳು ಸತ್ಕೃತರಾಗಿರುವರು. ತಮ್ಮ ಪಾದಸ್ಮರಣೆಯಿಂದ ಯಾವುದಕ್ಕೂ ಲೋಪವುಂಟಾಗಿಲ್ಲ. ಈಗ ಅಸುರರಿಗೆ ಅಭಿವೃದ್ಧಿಯ ಕಾಲ. ಶ್ರೀಹರಿಯು ಅವರ ಅಭಿಲಾಷೆಯನ್ನು ಪೂರೈಸಿರುವನು. ಆದರೆ ಸವತಿಯ ಮಕ್ಕಳಾದ ದೈತ್ಯರು ದೇವತೆಗಳ ರಾಜ್ಯವನ್ನೂ, ಐಶ್ವರ್ಯಗಳನ್ನೂ ಆಕ್ರಮಿಸಿ ದೇವತೆಗಳನ್ನು ದೇಶಭ್ರಷ್ಟರನ್ನಾಗಿ ಮಾಡಿರುವರು. ಇದರಿಂದ ನಾನು ದುಃಖಸಾಗರದಲ್ಲಿ ಮುಳುಗಿರುವೆನು. ನನ್ನ ಮಕ್ಕಳು ಅವರ ರಾಜ್ಯವನ್ನೂ, ಐಶ್ವರ್ಯಾದಿಗಳನ್ನೂ ತಿರುಗಿ ಸಂಪಾದಿಸುವುದಕ್ಕೆ ಉಪಾಯವನ್ನು ಚಿಂತಿಸಿ ನಮಗೆ ಕ್ಷೇಮವನ್ನುಂಟು ಮಾಡಬೇಕು.

**ಕಶ್ಯಪ :-** ದೇವಿಯೇ ! ಶ್ರೀವಿಷ್ಣುವಿನ ಇಚ್ಛಾಶಕ್ತಿ ಆಶ್ಚರ್ಯಕರ. ಆ ಇಚ್ಛಾಶಕ್ತಿಯಿಂದಲೇ ಚೇತನರು "ನನ್ನ ಮಕ್ಕಳು, ನನ್ನ ಮನೆ, ನನ್ನ ದೇಹ" ಎಂಬ ಭ್ರಾಂತಿಗೆ ಗುರಿಯಾಗುವರು. ಜಡಚೇತನರು ಅತ್ಯಂತ ಭಿನ್ನರು. ಜಡದೇಹನಿಮಿತ್ತ ಬಂದಿರುವ ಪತಿ, ಪುತ್ರಾದಿ ಸಂಬಂಧವೆಲ್ಲ ಜೀವರ ಸ್ವರೂಪಕ್ಕಿಲ್ಲ. ಆದ್ದರಿಂದ 'ನಾನು ಇವರಿಗೆ ತಾಯಿ, ಇವರೆಲ್ಲ ನನ್ನ ಮಕ್ಕಳು' ಎಂಬ ಮಮತೆಗೆ ಅಜ್ಞಾನವೇ

ಕಾರಣ. ನೀನು ದುಃಖಿಸುವುದು ಸರಿಯಲ್ಲ. ಆದರೂ ನಿನ್ನ ಮಕ್ಕಳಿಗೆ ಶ್ರೇಯಸ್ಸಾಗ ಬೇಕೆಂದಿದ್ದರೆ ಜಗದ್ಗುರುವಾದ ವಾಸುದೇವನನ್ನು ಸೇವಿಸು. ದಯಾಳುವಾದ ಆ ಸ್ವಾಮಿಯು ನಿಖಿಲ ಅಭೀಷ್ಟಗಳನ್ನೂ ಅನುಗ್ರಹಿಸುವನು.

**ಅದಿತಿ :–** ಪೂಜ್ಯರೇ ! ಯಾವ ಪ್ರಕಾರ ಶ್ರೀಹರಿಯನ್ನು ಉಪಾಸಿಸಬೇಕು ?

**ಕಶ್ಯಪ :–** ಪ್ರಿಯೇ ! ಹಿಂದೆ ಸಂತಾನವನ್ನು ಹೊಂದಲು ಇಚ್ಛಿಸಿ ಬ್ರಹ್ಮದೇವರನ್ನು ಕೇಳಿದಾಗ ಅವರು ನನಗೆ ಹೇಳಿದ ವ್ರತವನ್ನು ನಿನಗೆ ತಿಳಿಸುವೆನು ಕೇಳು :–

ಫಾಲ್ಗುಣ ಶುಕ್ಲಪಕ್ಷದಲ್ಲಿ ಹನ್ನೆರಡು ದಿನಗಳವರೆಗೆ ಪಯೋವ್ರತವನ್ನು ಮಾಡುತ್ತಾ ಶ್ರೀಹರಿಯನ್ನು ಪೂಜಿಸದರೆ ಅವನು ಪ್ರಸನ್ನನಾಗುವನು ವ್ರತದ ವಿಧಾನವಿದು :–

ಅಮಾವಾಸ್ಯೆ ಕಾಡುಹಂದಿ ತೋಡಿದ ಮಣ್ಣನ್ನು ಮೈಗೆ ಹಚ್ಚಿಕೊಂಡು ನದ್ಯಾದಿಗಳಲ್ಲಿ ಸ್ನಾನ ಮಾಡಬೇಕು. ನಿತ್ಯ ನೈಮಿತ್ತಿಕ ಕರ್ಮಮಾಡಿದ ಮೇಲೆ ಪ್ರತಿಮಾದಿಗಳಲ್ಲಿ ಪರಮಾತ್ಮನನ್ನು ಪೂಜಿಸಿ 108 ಬಾರಿ ದ್ವಾದಶಾಕ್ಷರ ಮಂತ್ರವನ್ನು ಜಪಿಸುತ್ತ 'ನಮಸ್ತುಭ್ಯಂ' ಇತ್ಯಾದಿ ಮಂತ್ರಗಳಿಂದ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಬೇಕು. ಹೀಗೆ ಪಾಡ್ಯದಿಂದಾರಂಭಿಸಿ ಹನ್ನೆರಡು ದಿನಗಳ ಪರ್ಯಂತ ಪ್ರತಿನಿತ್ಯವೂ ತ್ರಿಕಾಲ ಸ್ನಾನ, ಬ್ರಹ್ಮಚರ್ಯ ಪರಿಪಾಲನೆ, ಕೆಟ್ಟಮಾತನ್ನಾಡದಿರುವುದು, ಸ್ತ್ರೀಸಂಭೋಗಾದಿ ಪರಿತ್ಯಾಗ, ಭಗವದಾರಧನೆ, ಹೋಮ, ಪೂಜೆ, ಬ್ರಾಹ್ಮಣ ಸಂತರ್ಪಣೆ, ನರ್ತನ, ಗಾನ, ವಾದ್ಯಾದಿಗಳ ಸೇವೆಯನ್ನು ಶಕ್ತ್ಯನುಸಾರ ಮಾಡುತ್ತ, ತ್ರಯೋದಶೀ ದಿನ ಸದ್ಬ್ರಾಹ್ಮಣರನ್ನು ಕರೆಸಿ, ಅವರಿಂದ ಪಂಚಾಮೃತ ಅಭಿಷೇಕಾದಿಗಳನ್ನು ಮಾಡಿಸಿ, ತುಪ್ಪ–ಬೆಲ್ಲ ಸಹಿತವಾದ ಪಾಯಸವನ್ನು ಸಮರ್ಪಿಸಿ, ಮಹಾ ಪೂಜೆಯನ್ನೂ, ಹೋಮಾದಿಗಳನ್ನೂ ಮಾಡಿಸಬೇಕು. ಬಳಿಕ ಆಚಾರ್ಯರನ್ನು ಗೋದಾನ ವಸ್ತ್ರಾದಿಗಳಿಂದ ಸಂತೋಷ ಪಡಿಸಿ, ಗುರು–ಋತ್ವಿಕ್–ಸದ್ಬ್ರಾಹ್ಮಣರು ಇವರಿಗೆ ದಾನ ದಕ್ಷಿಣೆಗಳನ್ನು ಕೊಟ್ಟು ಭೋಜನ ಮಾಡಿಸಬೇಕು.

ಪ್ರಿಯೆ ! ಬ್ರಹ್ಮದೇವರು ಹೇಳಿದ ಪಯೋವ್ರತವನ್ನು ನಿನಗೆ ಹೇಳಿರುವೆನು. ಈ ವ್ರತವನ್ನು ಮಾಡುತ್ತ ಶ್ರೀಹರಿಯನ್ನು ಭಜಿಸುತ್ತಿರು. ಅದರಿಂದ ಶ್ರೀಭಗವಂತನು ಪ್ರಸನ್ನನಾಗಿ ವರಗಳನ್ನು ಕೊಡುವನು.

**ಹದಿನೈದನೆಯ ಅಧ್ಯಾಯ ಮುಗಿದುದು**

**ಶುಕ** :— ಅದಿತಿಯು ಜಿತೇಂದ್ರಿಯಳಾಗಿ ಏಕಾಗ್ರತೆಯಿಂದ ಶ್ರೀಹರಿಯನ್ನು ಧ್ಯಾನಿಸುತ್ತ ಪಯೋವ್ರತವನ್ನು ಮಾಡಿದಳು. ಆದರಿಂದ ಸಂತುಷ್ಟನಾದ ವಾಸುದೇವನು ಶಂಖಚಕ್ರಾದ್ಯಾಯುಧಗಳನ್ನು ಧರಿಸಿ ಅದಿತಿಗೆ ಪ್ರತ್ಯಕ್ಷನಾದನು. ಅದಿತಿಯು ಭಕ್ತಿಯಿಂದ ನಮಿಸಿ,

**ಅದಿತಿ** :— ನಾರಾಯಣ ! ನೀನು ಸರ್ವಯಜ್ಞಗಳಿಗೂ ಸ್ವಾಮಿಯು, ಉದ್ದೇಶ್ಯನೂ ಆಗಿರುವೆ. ನೀನು ಗುಣಗಳಿಂದ ಚ್ಯುತಿಯಿಲ್ಲದವನು. ನಿನ್ನ ಪಾದವು ಗಂಗೆಯನ್ನು ಸೃಷ್ಟಿಸಿತು ನಿನ್ನ ಕೀರ್ತಿಯು ಲೋಕವನ್ನು ಪಾವನಮಾಡಿತು. ನಿನ್ನ ನಾಮವನ್ನು ಕೇಳುವವರಿಗೆ ಮಂಗಳವಾಗುವುದು: ಶರಣಾಗತರ ದುಃಖ ಪರಿಹಾರಕ್ಕಾಗಿಯೇ ನೀನು ಅವತಾರಗಳನ್ನು ಮಾಡುವೆ. ನಮಗೆ ಸುಖವನ್ನುಂಟು ಮಾಡು. ನೀನು ವಿಶ್ವನಾಮಕನು. ಸೃಷ್ಟ್ಯಾದಿ ಕರ್ತನು. ಗುಣತ್ರಯವನ್ನು ಸ್ವೇಚ್ಛೆಯಿಂದಲೇ ಸ್ವೀಕರಿಸಿ ಸೃಷ್ಟ್ಯಾದಿಗಳನ್ನು ಮಾಡುವೆ. ನಿನ್ನಸ್ವರೂಪವು ಚ್ಯುತಿರಹಿತವಾದುದು. ಸದಾ ಅಭಿವ್ಯಕ್ತವಾದ ಸಂಪೂರ್ಣಜ್ಞಾನದಿಂದ ಅಜ್ಞಾನವನ್ನು ಓಡಿಸಿರುವವನು. ನಿನಗೆ ನಮಸ್ಕಾರ ! ಹೇ ಅನಂತನೇ ! ಪ್ರಸನ್ನನಾದ ನೀನು ಆಯುಷ್ಯ, ಬ್ರಾಹ್ಮಣಾದಿ ಶರೀರ, ಅಸದೃಶ ಸಂಪತ್ತು, ಅಂತರಿಕ್ಷ-ರಸಾತಳಾದಿ ಸ್ಥಾನಗಳು, ಅಣಿಮಾದಿಸಿದ್ಧಿಗಳು, ಧರ್ಮಾರ್ಥಕಾಮಗಳು ಮತ್ತು ಸುಜ್ಞಾನ ಇವೆಲ್ಲವನ್ನೂ ಕೊಡುವೆ. ಹೀಗಿರುವಾಗ ನಿನ್ನನ್ನೇ ಮರೆಹೊಕ್ಕವರ ವ್ಯಥೆಯನ್ನು ನೀನು ಪರಿಹರಿಸುವುದಿಲ್ಲವೆ ? ಪರಿಹರಿಸಿಯೇ ತೀರುವೆ.

**ಭಗವಂತ** :— ದೇವಮಾತೆ ! ನಿನ್ನ ಮಕ್ಕಳು ದುರ್ಮದರಾದ ದೈತ್ಯರನ್ನು ಸೋಲಿಸಿ ಹಿಂದಿನಂತೆ ಜಯ, ರಾಜ್ಯ ಮತ್ತು ಸಂಪತ್ತು ಇವನ್ನು ಹೊಂದಿ ನನ್ನನ್ನು ಉಪಾಸಿಸುತ್ತಿರಬೇಕೆಂದು ನೀನು ಬಯಸುತ್ತಿರುವೆ. ಆದರೆ ಈಗ ದೈತ್ಯರನ್ನು ಸೋಲಿಸುವುದು ಅಸಾಧ್ಯ. ಅದಕ್ಕಾಗಿ ಬೇರೆ ಉಪಾಯವನ್ನು ಯೋಚಿಸಿರುವೆನು. ನೀನು ನನ್ನನ್ನು ಭಜಿಸಿದುದಕ್ಕಾಗಿ ಅಂಶದಿಂದ ನಿನ್ನ ಮಗನಾಗಿ ಹುಟ್ಟಿ ನಿನ್ನ ಮಕ್ಕಳನ್ನು ರಕ್ಷಿಸುತ್ತೇನೆ.

**ಅದಿತಿ** :— ನೀನು ಬೃಹದ್ರೂಪನು. ನನ್ನ ಹೊಟ್ಟೆ ಚಿಕ್ಕದು. ನಿನ್ನನ್ನು ನಾನು ಹೇಗೆ ಧರಿಸಬಲ್ಲೆನು ?

**ಭಗವಂತ** :— ನೀನು ಯೋಚಿಸಬೇಡ. ನಾನು ನಿನ್ನ ಹೊಟ್ಟೆಯಲ್ಲಿ ಸೂಕ್ಷ್ಮರೂಪದಿಂದ ಇದ್ದು ನನ್ನನ್ನೂ, ನಿನ್ನನ್ನೂ ಧರಿಸುವೆನು. ನಿನ್ನ ಗಂಡನಲ್ಲಿ ನಾನು ಸಂನಿಹಿತನಾಗಿರುವೆನು–ಎಂದು ಧ್ಯಾನಿಸುತ್ತ ನಿನ್ನ ಪತಿಯನ್ನು ಸೇವಿಸು. ಇದನ್ನು ನೀನು ಬೇರೆ ಯಾರಿಗೂ ತಿಳಿಸದಿದ್ದರೆ ಬೇಗ ಫಲವನ್ನು ಹೊಂದುವೆ.

ಶುಕ : ಹರಿಯು ಹೀಗೆ ಹೇಳಿ ಕಣ್ಮರೆಯಾದನು. ಕಶ್ಯಪರು ಯೋಗಿಗಳಾದುದರಿಂದ ತಾವು ಕುಳಿತಲ್ಲಿಂದಲೇ ಇದೆಲ್ಲವನ್ನೂ ನೋಡಿ ತಿಳಿದರು. ಅದಿತಿಯು ಹರಿಯ ಅಪ್ಪಣೆಯಂತೆ ಪತಿಯನ್ನು ಭಕ್ತಿಯಿಂದ ಸೇವಿಸುತ್ತಾ ಇದ್ದಳು. ಕಶ್ಯಪರು ಧ್ಯಾನದಿಂದ ಶ್ರೀಪರಮಾತ್ಮನು ತನ್ನಲ್ಲಿ ಪ್ರವೇಶಿಸಿರುವುದನ್ನು ತಿಳಿದು ಅದಿತಿಯಲ್ಲಿ ವೀರ್ಯವನ್ನಿಟ್ಟರು. ಚತುರ್ಮುಖ ಬ್ರಹ್ಮದೇವರು ಅದಿತಿಯ ಗರ್ಭದಲ್ಲಿ ಶ್ರೀಹರಿಯು ಇರುವುದನ್ನು ತಿಳಿದು ಉಪನಿಷತ್ತಿನಲ್ಲಿ ಹೇಳಿರುವ ಗೋಪ್ಯನಾಮಗಳಿಂದ ಹರಿಯನ್ನು ಹೀಗೆ ಸ್ತುತಿಸುವರು :–

ಬ್ರಹ್ಮ :– ಉತ್ಕೃಷ್ಟರಮಾದಿಸ್ತುತ್ಯನೂ, ಉತ್ಕೃಷ್ಟಪಾದವಿಕ್ಷೇಪವುಳ್ಳವನೂ ಬ್ರಾಹ್ಮಣಾದಿಗಳಲ್ಲಿ ಪೂರ್ಣದಯೆಯುಳ್ಳವನೂ, ಕ್ರೀಡಾದಿಗುಣವಂತನೂ, ತ್ರಿಗುಣ ಪ್ರವರ್ತಕನೂ, ಆದ ನಿನಗೆ ನಮಸ್ಕಾರ ! ಭಗವಂತನೆ ! ಜಯಜಯ ! ಪೃಶ್ನಿಪುತ್ರ, ದೇವ, ವೇದಗಳಲ್ಲಿ ಪ್ರಕಾಶಮಾನ, ಜ್ಞಾನಸ್ವರೂಪ, ಗುಣತ್ರಯ ನಿಯಾಮಕ, ತ್ರಿಧಾಮ, ಗರುಡವಾಹನ, ಸ್ವಾಮಿಯೇ ! ನೀನೇ ಜಗಜ್ಜನ್ಮಾದಿ ಕಾರಣನೆಂದು ಜ್ಞಾನಿಗಳು ಹೇಳುವರು. ಪ್ರವಾಹವು ತನ್ನಲ್ಲಿ ಬಿದ್ದ ತೃಣಾದಿಗಳನ್ನು ದಡಕ್ಕೆ ಒಯ್ಯುವಂತೆ ಕಾಲನಾಮಕನಾದ ನೀನು ಜಗತ್ತನ್ನು ನಿನ್ನ ಉದರದಲ್ಲಿಡುವೆ.

## ಹದಿನಾರನೆಯ ಅಧ್ಯಾಯ ಮುಗಿದುದು

ಹೀಗೆ ಬ್ರಹ್ಮದೇವರು ಸ್ತುತಿಸಲಾಗಿ ಶ್ರೀಪರಮಾತ್ಮನು ನಾಲ್ಕು ತೋಳುಗಳಲ್ಲಿ ಶಂಖ, ಚಕ್ರ, ಗದಾ, ಪದ್ಮಗಳನ್ನು ಧರಿಸಿ, ಭಾದ್ರಪದ ಮಾಸ, ಶುಕ್ಲ ಪಕ್ಷ, ವಿಜಯ ದ್ವಾದಶೀ ಎಂದು ಕರೆಸುವ ಶ್ರವಣಯುಕ್ತ ದ್ವಾದಶೀ, ಅಭಿಜಿತ್ ಅಂದರೆ ಶ್ರವಣ ನಕ್ಷತ್ರ ಮೊದಲನೆಯ ಪಾದದಲ್ಲಿ ಅವತರಿಸಿದನು. ಆಗ ಪ್ರಜೆಗಳೆಲ್ಲರೂ ಸಂತುಷ್ಟರಾದರು. ದೇವತೆಗಳು ಶಂಖವನ್ನೂದಿದರು. ಅಪ್ಸರೆಯರು ನರ್ತಿಸಿದರು. ಮುನ್ಯಾದಿಗಳು ಸ್ತುತಿಸಿದರು. ಪುಷ್ಪವೃಷ್ಟಿಯಾಯಿತು. ಅದಿತಿಯು ಸಂತೋಷಪಟ್ಟಳು. ಕಶ್ಯಪರು ಜಯಜಯವೆಂದರು. ತಂದೆ ತಾಯಿಗಳು ನೋಡುತ್ತಿರುವಂತೆಯೇ ಶ್ರೀಹರಿಯು ವಾಮನರೂಪಿಯಾದನು. ಈ ರೂಪವನ್ನು ನೋಡಿ ಭೃಗುಮೊದಲಾದವರು ಕಶ್ಯಪರನ್ನು ಮುಂದಿಟ್ಟುಕೊಂಡು ಜಾತಕರ್ಮಾದಿಗಳನ್ನು ಮಾಡಿದರು. ಉಪನಯನವೂ ಆಯಿತು. ಸೂರ್ಯನು ಸಾವಿತ್ರಿಯನ್ನೂ, ಗುರುವು ಜನಿವಾರವನ್ನೂ, ಕಶ್ಯಪರು ಮೌಂಜಿ (ದರ್ಭೆಯ ಉಡಿದಾರ)ಯನ್ನೂ, ಭೂದೇವಿಯು ಅಜಿನವನ್ನೂ, ಚಂದ್ರನು ದಂಡವನ್ನೂ, ಅದಿತಿಯು ಕೌಪೀನ ಸಹಿತ ಆಚ್ಛಾದನವಸ್ತ್ರವನ್ನೂ, ಸ್ವರ್ಗಾಭಿಮಾನಿಯು ಛತ್ರವನ್ನೂ, ಬ್ರಹ್ಮದೇವರು ಕಮಂಡಲುವನ್ನೂ, ಸಪ್ತರ್ಷಿಗಳು ದರ್ಭೆ ಪವಿತ್ರಗಳನ್ನೂ, ಸರಸ್ವತಿಯು ಜಪಸರವನ್ನೂ ಮತ್ತು ಕುಬೇರನು ಭಿಕ್ಷಾಪಾತ್ರೆ

ಯನ್ನೂ ಕೊಟ್ಟರು. ಪಾರ್ವತಿಯು ಭಿಕ್ಷೆಯನ್ನು ನೀಡಿದಳು. ಬಳಿಕ ವಾಮನದೇವರು ಅಗ್ನಿಕಾರ್ಯವನ್ನು ಮುಗಿಸಿದನು. ಬಲಿಯು ಯಜ್ಞ ಮಾಡುತ್ತಿರುವ ವಾರ್ತೆಯನ್ನು ಕೇಳಿ ವಾಮನನು ಆ ಯಜ್ಞಶಾಲೆಯನ್ನು ಕುರಿತು ಹೊರಟು ಬಂದನು. ನರ್ಮದಾ ನದಿಯ ಉತ್ತರ ತೀರದಲ್ಲಿರುವ ಭೃಗುವತ್ಸ ಎಂಬ ಕ್ಷೇತ್ರದಲ್ಲಿ ಯಜ್ಞವು ನಡೆಯುತ್ತಿತ್ತು. ಅಲ್ಲಿಗೆ ಬಂದ ವಾಮನದೇವರನ್ನು ನೋಡಿ ಶುಕ್ರಾಚಾರ್ಯರೇ ಮೊದಲಾದವರು ಆಶ್ಚರ್ಯಚಕಿತರಾಗಿ ಈತನು ಸೂರ್ಯನೋ ಅಥವಾ ಅಗ್ನಿಯೋ ? ಎಂದು ಸಂಶಯಗ್ರಸ್ತರಾದರು. ವಾಮನನು ಅಜಿನ, ದಂಡ, ಕಮಂಡಲು, ಛತ್ರದೊಡನೆ ಯಜ್ಞಶಾಲೆಯೊಳಗೆ ಪ್ರವೇಶಿಸಿದನು. ಅವನ ತೇಜಸ್ಸಿನಿಂದ ತಿರಸ್ಕೃತರಾದ ವಿಪ್ರರೆಲ್ಲರೂ ಎದ್ದು ನಿಂತು ಗೌರವಿಸಿದರು. ಬಲಿರಾಜನು ಆ ವಟುವಿಗೆ ಆಸನಕೊಟ್ಟು, ಕುಶಲ ಪ್ರಶ್ನೆ ಮಾಡಿ, ಪಾದಗಳನ್ನು ತೊಳೆದು, ಅತ್ಯಂತ ಮಂಗಳಕರವಾದ ಆ ಪಾದ ಜಲವನ್ನು ತನ್ನ ತಲೆಯ ಮೇಲೆ ಪ್ರೋಕ್ಷಿಸಿಕೊಂಡನು.

**ಬಲಿ :–** ಬ್ರಾಹ್ಮಣೋತ್ತಮನೇ ! ನಿಮಗೆ ಸ್ವಾಗತ ! ನಮಸ್ಕಾರ ! ತಮ್ಮಾಗಮನದಿಂದ ಪಿತೃಗಳು ತೃಪ್ತರಾದರು, ಕುಲವು ಪಾವನವಾಯಿತು. ನನ್ನ ಯಜ್ಞವು ಸಾಂಗವಾಗಿ ನಡೆದು ಸಫಲವಾಯಿತು. ತಮ್ಮ ಪಾದಸ್ಪರ್ಶಗಿಂದ ಈ ಭೂಮಿಯು ಪವಿತ್ರವಾಯಿತು. ವಟುವೆ ! ಯಾಚಿಸಲು ಬಂದ ಹಾಗಿದೆ. ಭೂಮಿ, ಗೋವು, ಹಿರಣ್ಯ, ಮನೆ ಮತ್ತು ಗ್ರಾಮಾದಿಗಳು ಯಾವುದು ಬೇಕೋ ಅದನ್ನು ಸಂಕೋಚ ಪಡದೆ ಕೇಳಿದರೆ ಅದನ್ನು ಕೊಟ್ಟುಬಿಡುವೆನು.

**ಹದಿನೇಳನೆಯ ಅಧ್ಯಾಯ ಮುಗಿದುದು**

**ವಾಮನ :–** ರಾಜನೇ ! ನಿನ್ನ ಮಾತು ಸತ್ಯವೂ, ಕುಲೋಚಿತವೂ, ಧರ್ಮಯುಕ್ತವೂ ಆಗಿದೆ. ನಿನ್ನ ಕುಲದಲ್ಲಿ ದುರ್ಬಲನಾಗಲಿ, ಲೋಭಿಯಾಗಲಿ, ದೀನವಾಗಲಿ ಹುಟ್ಟಲಿಲ್ಲ. ಕೊಡುವೆನೆಂದು ಮಾತು ಕೊಟ್ಟು ಅದನ್ನು ತಪ್ಪಿದವನಾಗಲಿ, ದಾನ ಮಾಡದವನಾಗಲಿ ಯಾವನೂ ಇಲ್ಲ. ಗಗನದಲ್ಲಿನ ಶಶಿಯಂತೆ ನಿನ್ನ ಪಿತಾಮಹನಾದ ಪ್ರಹ್ಲಾದನು ನಿರ್ದೋಷವಾದ ಕೀರ್ತಿಯಿಂದ ವಿರಾಜಿಸುತ್ತಿರುವನು. ಅಂದ ಬಳಿಕ ನಿನ್ನ ವಂಶದ ಮಹಿಮೆಯನ್ನು ಹೇಳಬೇಕಾದುದೇನು ? ಹಿರಣ್ಯಾಕ್ಷ ಮತ್ತು ಹಿರಣ್ಯಕಶಿಪು ಇವರು ಮಹಾಪರಾಕ್ರಮಿಗಳಾಗಿ ದಿಗ್ವಿಜಯ ಮಾಡುವಾಗ ಪ್ರತಿಭಟರೇ ಅವರಿಗೆ ದೊರೆಯಲಿಲ್ಲ. ನಿನ್ನ ತಂದೆಯಾದ ವಿರೋಚನನು ಯಾಚಕರಾಗಿ ಬಂದ ವಿಪ್ರವೇಷಧಾರಿಗಳಾದ ದೇವತೆಗಳಿಗೆ ತನ್ನ ಆಯುಷ್ಯವನ್ನೇ ಕೊಟ್ಟು ದೇಹ ಬಿಟ್ಟನು. ನೀನೂ ಮಹಾತ್ಮರಿಂದ ಅನುಷ್ಠಿತಗಳಾದ ಧರ್ಮಗಳನ್ನು ಅನುಷ್ಠಿಸುತ್ತಿ

ರುವೆ. ಇಂತಹ ನಿನ್ನಿಂದ ಈ ನನ್ನ ಪಾದದ ಅಳತೆಯಲ್ಲಿ ಮೂರಡಿಗಳ ನೆಲವನ್ನು ಮಾತ್ರ ಬೇಡುವೆನು. ದಾನಶೂರನೂ, ಜಗತ್ಪ್ರಭುವೂ ಆದ ನಿನ್ನಿಂದ ಬೇರೆ ಯಾವುದನ್ನೂ ಅಪೇಕ್ಷಿಸುವುದಿಲ್ಲ. ಅಗತ್ಯವಿದ್ದಷ್ಟು ಬೇಡಿದರೆ ಪಾಪವು ಬರಲಾರದು.

**ವಿಶೇಷ :–** ಇಲ್ಲಿ 'ಅಗತ್ಯವಿದ್ದಷ್ಟು' ಎಂಬ ಮಾತು ಬಂದಿದೆ. ಭೂಮಿಯ ಅಗತ್ಯ ಯಾರಿಗೆ ? ವಾಮನ ದೇವರಿಗಂತೂ ಇಲ್ಲ, ಆದರೆ ಲೋಕ ಶಿಕ್ಷೆಗಾಗಿ ವಾಮನಪುರಾಣದಲ್ಲಿ ಹೀಗೆ ಹೇಳಿದೆ .–

**ಶ್ಲೋಕ ॥ ಗುರೋರ್ಮೇ ದೀಯತಾಂ ಗುರುಃ ತಸ್ಯಾಸ್ತ್ಯಗ್ನಿಪರಿಗ್ರಹಃ**
**ನ ಸ ಧಾರಯತೇ ಭೂಮ್ಯಾಂ ಪಾರಕ್ಯಾಯಾಂ ಚ ಪಾವಕಂ ॥**

**ಅರ್ಥ :–** ನನಗೆ ಗುರು ಭರದ್ವಾಜರು. ಅವರ ಗುರು ಬೃಹಸ್ಪತ್ಯಾಚಾರ್ಯರು. ಬಲಿಯು ದೇವತೆಗಳ ಸ್ವತ್ತನ್ನೆಲ್ಲ ಅಪಹರಿಸಿರುವುದರಿಂದ ಬೃಹಸ್ಪತಿಗಳಿಗೆ ಧಾರ್ಯಾಗ್ನಿಯನ್ನಿಡಲು ಸ್ವಂತವಾದ ಅಂಗೈಯಗಲ ಭೂಮಿಯಿಲ್ಲ. ಅವರು ಕಂಡವರ ಭೂಮಿಯಲ್ಲಿ ಅಗ್ನಿಯನ್ನಿಟ್ಟು ಪೂಜಿಸುವವರಲ್ಲ. ಸ್ವಂತಭೂಮಿಯನ್ನು ಸಂಪಾದಿಸಿ ಕೊಡೆಂದು ತಮ್ಮ ಶಿಷ್ಯನಿಗೆ ಹೇಳಿದರು. ಅವರ ಶಿಷ್ಯನಾದ ನನಗೆ ತಮ್ಮ ಗುರುಗಳಿಗೆ ಕೊಡಬೇಕಾದ ದಕ್ಷಿಣೆಯನ್ನೇ ನನಗೆ ಕೊಟ್ಟರೆ ನೀನು ಗುರುದಕ್ಷಿಣೆಯನ್ನು ಕೊಟ್ಟಂತಾಗುವುದೆಂದು ಹೇಳಿದ್ದರಿಂದ ತನಗೆ ಭೂಮಿಯು ಅಗತ್ಯವಾಯಿತೆಂದು ವಾಮನದೇವರು ಹೇಳಿದರೆಂದು ಇಲ್ಲಿ ತಿಳಿಯಬೇಕು.

**ಬಲಿ :–** ಇಡೀ ದ್ವೀಪವನ್ನೇ ದಾನ ಮಾಡಲು ಸಮರ್ಥನಾದ ನನ್ನನ್ನು ಮಧುರವಾದ ವಾಕ್ಯದಿಂದ ಸಂತೋಷಪಡಿಸಿ ಮೂರಡಿ ನೆಲವನ್ನು ಮಾತ್ರ ಯಾಚಿಸಿದೆಯಾದ್ದರಿಂದ ಸ್ವಪ್ರಯೋಜನವನ್ನು ತಿಳಿಯಲು ನೀನು ಶಕ್ತನಲ್ಲ. ನನ್ನಲ್ಲಿ ಬಂದು ಬೇಡಿದವರಿಗೆ ಬೇಕಾದಷ್ಟು ಕೊಟ್ಟು ಬಿಡುವೆನು. ಅವರು ಇನ್ನೊಬ್ಬರ ಬಳಿ ಸರ್ವಥಾ ಬೇಡಬಾರದು. (ಬಲಿಯ ಈ ಮಾತಿನಿಂದ ದಾನ ಮಾಡಲು ತಾನು ಸ್ವತಂತ್ರನೆಂಬ ಅಹಂಕಾರವಿದೆಯೆಂಬುದು ತಿಳಿದು ಬರುವುದು.) ವಟುವೇ ! ನೀನು ಬದುಕಿರುವವರೆಗೂ ಸುಖವಾಗಿ ಜೀವನ ನಡೆಸುವುದಕ್ಕೆ ಬೇಕಾದಷ್ಟು ಭೂಮಿಯನ್ನು ಕೇಳು. ಸಂತೋಷವಾಗಿ ಕೊಡುವೆನು.

**ವಾಮನ :–** ರಾಜನೇ ! ಆಶೆಗೆ ಮಿತಿಯಿಲ್ಲ. ಮೂರು ಲೋಕಗಳಲ್ಲಿರುವುದನ್ನೆಲ್ಲ ಕೊಟ್ಟರೂ ತೃಪ್ತಿಯಾಗಲಾರದು. ಮೂರಡಿ ನೆಲದಿಂದ ತೃಪ್ತನಾಗದವನು ಜಂಬೂದ್ವೀಪವನ್ನು ಕೊಟ್ಟರೂ ಅದರಿಂದ ತೃಪ್ತನಾಗಲಾರನು. ಪೃಥು ಮೊದಲಾದವರು ಸಪ್ತದ್ವೀಪಗಳಿಗೆ ಅಧಿಪತಿಗಳಾದರೂ, ತೃಪ್ತಿಯನ್ನು ಹೊಂದಲಿಲ್ಲವಷ್ಟೆ ? ಯದೃಚ್ಛಾಲಾಭದಿಂದ ತೃಪ್ತನಾದವನು ಸುಖಿಯಾಗುವನು. ಆತನ ಬ್ರಹ್ಮತೇಜಸ್ಸು

ಅಭಿವೃದ್ಧವಾಗುವುದು. ಅಸಂತೋಷದಿಂದ ತಿರುತಿರುಗಿ ಸಂಸಾರವೂ, ಸಂತೋಷ ದಿಂದ ಮುಕ್ತಿಯೂ ಲಭಿಸುತ್ತದೆ. ಮೂರಡಿ ನೆಲವೇ ಸಾಕು. ಅಷ್ಟರಿಂದಲೇ ಕೃತ ಕೃತ್ಯನಾಗುವೆನು.

**ಶುಕ :–** ಬಲಿಯು ಇದನ್ನು ಕೇಳಿ ನಗುತ್ತ 'ಬ್ರಾಹ್ಮಣನೇ ! ಹಾಗಿದ್ದರೆ ನೀನು ಕೇಳಿದಷ್ಟನ್ನೇ ಕೊಡುವೆನು. ಸ್ವೀಕರಿಸು'—ಎಂದು ಹೇಳಿ ದಾನ ಮಾಡಲು ಜಲವ ಪಾತ್ರೆಯನ್ನು ಕೈಗೆತ್ತಿಕೊಂಡನು. ಶುಕ್ರಾಚಾರ್ಯರು ಹರಿಯು ಮಾಡಬೇಕೆಂದಿ ರುವುದನ್ನು ತಿಳಿದು ಬಲಿಯನ್ನು ಕುರಿತು ಹೇಳುವರು :-

**ಶುಕ್ರಾಚಾರ್ಯರು :–** ರಾಜನೇ ! ಇವನು ಪೂರ್ಣೈಶ್ವರ್ಯವಂತನಾದ ಸಾಕ್ಷಾ ನ್ನಾರಾಯಣನು. ದೇವತೆಗಳ ಇಷ್ಟವನ್ನು ಪೂರ್ಣ ಮಾಡುವುದಕ್ಕಾಗಿ ಕಶ್ಯಪರಿಂದ ಅದಿತಿಯಲ್ಲಿ ಅವತರಿಸಿ ವಟುವೇಷದಿಂದ ಇಲ್ಲಿಗೆ ಬಂದಿರುವನು. ಇವನ ಅಳತೆಗೆ ಸಿಗದ ರೂಪದ ಮೂರುಪಾದ ಭೂಮಿಯನ್ನು ನೀನು ಕೊಡಲಾರೆ. ಬಂಧನಕ್ಕೆ ಗುರಿಯಾಗಿ ಸ್ವಸ್ಥಾನದಿಂದ ಭ್ರಷ್ಟನಾಗುವೆ. ಇದರಿಂದ ದೈತ್ಯರಿಗೆ ಮಹಾ ಅನರ್ಥ ವಾಗುವುದು. ಇವನು ನಿನ್ನ ಪದವಿ, ಸಂಪತ್ತು ಮೊದಲಾದುವನ್ನೆಲ್ಲ ಕಿತ್ತುಕೊಂಡು ದೇವೇಂದ್ರನಿಗೆ ಕೊಡುವನು. ನೀನಿವನಿಗೆ ಬೇಡಿದಷ್ಟನ್ನು ಕೊಡುವೆನೆಂದು ಮಾತನ್ನು ಕೊಡಬಹುದೆ ? ಇವನು ವ್ಯಾಪ್ತ ದೇಹವುಳ್ಳವನು. ಬ್ರಹ್ಮಾಂಡಪರ್ಯಂತವಾಗಿ ಆಕ್ರಮಿಸುವನು. ಎಲ್ಲವೂ ಹೋದ ಮೇಲೆ ಇರುವುದಕ್ಕೆ ನೆಲೆಯಿಲ್ಲದೆ, ತಿನ್ನುವುದಕ್ಕೆ ಅನ್ನವೂ ಇಲ್ಲದೆ ನೀನು ಮುಂದೆ ಹೇಗೆ ಬದುಕುವೆ ? ಇದರ ಮೇಲೆ ಕೊಟ್ಟ ಮಾತೂ ಹೋಗಿ ನೀನು ಸುಳ್ಳುಗಾರನೆನಿಸುವೆ. ಹೇಗೆಂದರೆ ಇರುವ ಲೋಕಗಳನ್ನೆಲ್ಲ ಇವನು ಎರಡು ಪಾದಗಳಿಂದಲೇ ಆಕ್ರಮಿಸುವನು. ಮೂರನೆಯ ಪಾದಕ್ಕೆ ಸ್ಥಳವಿರು ವುದಿಲ್ಲ. ಪ್ರತಿಜ್ಞಾಭ್ರಷ್ಟನಾಗಿ ನರಕಕ್ಕೆ ಬೀಳುವೆ. ಜೀವನಕ್ಕೆ ಭಂಗ ತರುವ ದಾನ ವನ್ನು ಯಾರೂ ಹೊಗಳುವುದಿಲ್ಲ. ಜೀವನಕ್ಕೆ ಕಾರಣವಾದ ಧನವಿದ್ದರೇ ದಾನ, ಯಜ್ಞ, ತಪಸ್ಸು ಮೊದಲಾದುವನ್ನು ಮಾಡಲಿಕ್ಕೆ ಬರುವುದು. ಇದನ್ನು ತಿಳಿದ ವಿವೇಕಿಯು ಸಂಪಾದಿಸಿರುವ ದ್ರವ್ಯವನ್ನು ಪುಣ್ಯಸಂಪಾದನೆಗೆ, ಕೀರ್ತಿಗೆ, ವಿಹಿತ ವಿಷಯಭೋಗಕ್ಕೆ, ಪತ್ನ್ಯಾದಿಗಳಿಗೆ ಹಂಚುವುದಕ್ಕೆ ಮತ್ತು ಕೋಶಾಭಿವೃದ್ಧಿಗೆ ಐದು ಭಾಗ ಮಾಡಿದರೆ ಈ ಲೋಕ–ಪರಲೋಕಗಳಲ್ಲಿ ಸುಖವಾಗಿರುವನು. ಆದಕಾರಣ ಸರ್ವಸ್ವವನ್ನೂ ಕೊಟ್ಟರೆ ಅನರ್ಥಕ್ಕೆ ಗುರಿಯಾಗುವೆ. ಕೊಡುವೆನೆಂದು ಹೇಳಿ, ಇಲ್ಲವೆಂದು ಸುಳ್ಳನ್ನು ಹೇಗೆ ಹೇಳಲಿ ? ಎಂದು ನೀನು ಕೇಳಬಹುದು. ವೃಕ್ಷವು ಚೆನ್ನಾಗಿದ್ದರೇನೇ ಹೂವು ಹಣ್ಣುಗಳನ್ನು ಬಿಡುತ್ತದೆ. ಬೇರು ಒಣಗಿ ಹೋದರೆ ಯಾವುದೂ ದೊರೆಯುವುದಿಲ್ಲ. ಅದರಂತೆ ಎಲ್ಲವನ್ನೂ ಕೊಡುವೆನೆಂದು ಹೇಳದೇ ಇದ್ದರೆ ಜೀವಿಸುತ್ತ ಸಂಪಾದಿಸಬಹುದು. ಸರ್ವವನ್ನೂ ಕೊಟ್ಟರೆ ಬದುಕಿಗೇ

ಸಂಚುಕಾರವು ಬಂದು ಮುಂದೆ 'ಕೊಡುವೆನು' ಎಂಬ ಸೊಲ್ಲೇ ಅಡಗಿ ಹೋಗುವುದು. ಆದ್ದರಿಂದ ತನ್ನ ದೇಹಪೋಷಣೆಗೆ ಬೇಕಾದಷ್ಟು ಇಟ್ಟುಕೊಂಡು ಕೇಳಿದವರಿಗೆ ದಾನ ಮಾಡಬೇಕು. ದೇಹಪೋಷಣೆಗೂ ಇಟ್ಟುಕೊಳ್ಳದೆ ದಾನ ಕೊಡುವುದು ಸರ್ವಥಾ ಯುಕ್ತವಲ್ಲ. ಅಲ್ಲದೆ ಜೀವನಕ್ಕೆ ಬೇಕಾದಷ್ಟು, ದಾನಕ್ಕೆ ತಕ್ಕಷ್ಟು ಇದ್ದರೂ ಇಲ್ಲ ವೆಂದು ಹೇಳುವುದು ಅಸತ್ಯವು. ಹಾಗೆ ಸುಳ್ಳನ್ನು ಹೇಳುವವನು ಜೀವನ್ಮೃತನೂ, ಅಪಯಶಸ್ಸುಳ್ಳವನೂ ಆಗುವನು. ರಾಜನೇ ! ಕಾಮುಕಸ್ತ್ರೀಯರಲ್ಲಿಯೂ, ಪರಿಹಾಸ ಗಳಲ್ಲಿಯೂ, ವಿವಾಹ ವಿಷಯದಲ್ಲಿಯೂ, ತನ್ನ ಬದುಕಿಗಿಲ್ಲದೆ ಪ್ರಾಣಾಪಾಯದ ವಿಷಯದಲ್ಲಿಯೂ, ಗೋಬ್ರಾಹ್ಮಣರಹಿಂಸಾವಿಷಯದಲ್ಲಿಯೂ, ಹೇಳುವ ಸುಳ್ಳಿ ನಿಂದ ದೋಷವು ಬರುವುದಿಲ್ಲ. ಆದ್ದರಿಂದ ನೀನು ಸುಖವಾಗಿ ಬಾಳಬೇಕಾದರೆ ಕೊಟ್ಟಮಾತನ್ನು ನಡೆಸದೇ ಹೋದರೂ ನೀನಗೆ ದೋಷವು ಬರುವುದಿಲ್ಲ.

**ವಿಶೇಷ :-** ವಾಮನದೇವರು ಮಾಡಬೇಕೆಂದಿದ್ದ ವ್ಯಾಪಾರವು ಶುಕ್ರಾ ಚಾರ್ಯರಿಗೆ ಗೋತ್ತಾಗುವಂತೆ ಪ್ರೇರಿಸಿದ್ದರಿಂದ ಅಸುರರು ಪುರೋಹಿತರಾದ ಶುಕ್ರಾಚಾರ್ಯರನ್ನು ತಮ್ಮ ಹಿತೈಷಿಗಳೆಂದು ತಿಳಿಯಲು ಅವಕಾಶವಾಯಿತು. ಮತ್ತು ವಾಮನನು ದೇವರೆಂದು ತಿಳಿದು ಬಲಿರಾಜನು ದಾನಮಾಡಿ ಧನ್ಯನಾಗಲು ಅವಕಾಶವಾಯಿತು.

## ಹದಿನೆಂಟನೆಯ ಅಧ್ಯಾಯ ಮುಗಿದುದು

**ಬಲಿ :-** ಗುರುಗಳೇ ! ಅರ್ಥ, ಕಾಮ, ಕೀರ್ತಿ, ಜೀವನ ಇದಕ್ಕೆ ಭಂಗ ಬರದಂತೆ ಪ್ರವರ್ತಿಸುವುದು ಗೃಹಸ್ಥರ ಮುಖ್ಯ ಧರ್ಮವೆಂದು ನೀವು ಹೇಳಿದುದು ಸತ್ಯವೇ. ಆದರೆ ಪ್ರಹ್ಲಾದನ ಮೊಮ್ಮಗನಾಗಿ ವಿಪ್ರರಿಗೆ ಕೊಡುವೆನೆಂದು ಮಾತು ಕೊಟ್ಟು, ದ್ರವ್ಯ ಮತ್ತು ಬದುಕುವ ಆಶೆಯಿಂದ ಈಗ ಇಲ್ಲವೆಂದು ಹೇಗೆ ನಿರಾಕರಿಸಲಿ ? ಭೂದೇವಿಯು "ಸುಳ್ಳು ಹೇಳುವುದಕ್ಕಿಂತ ನೀಚವಾದ ಅಧರ್ಮವು ಬೇರೊಂದಿಲ್ಲ. ಪರ್ವತಾದಿಗಳ ಭಾರವನ್ನಾದರೂ ಹೊರಬಲ್ಲೆನು. ಸುಳ್ಳುಗಾರ ರನ್ನು ಮಾತ್ರ ಹೊರಲಾರೆನು" ಎಂದು ಒಮ್ಮೆ ಹೇಳಿರುವಳು. ಆಡಿದ ಮಾತಿಗೆ ತಪ್ಪಿ, ಬ್ರಾಹ್ಮಣರನ್ನು ವಂಚಿಸುವುದರಿಂದ ನಾನು ಭಯಪಡುವಂತೆ ನರಕಕ್ಕೂ, ದಾರಿದ್ರ್ಯಾದಿಗಳಿಗೂ, ಸ್ಥಾನ ಭ್ರಂಶಕ್ಕೂ ಮತ್ತು ಕೊನೆಗೆ ಮರಣಕ್ಕೂ ಭಯಪಡು ವವನಲ್ಲ. ದಧೀಚಿ ಋಷಿಯು ದೇವತೆಗಳಿಗಾಗಿ ಪ್ರಾಣವನ್ನು ತೆತ್ತನು. ಶಿಬಿಯು ಕಪೋತ ರಕ್ಷಣೆಗಾಗಿ ತನ್ನ ದೇಹವನ್ನೇ ಗಿಡುಗನಿಗೆ ಕೊಟ್ಟುಬಿಟ್ಟನು. ಹೀಗೆ ಪ್ರಾಣವನ್ನು ತೆತ್ತ ದಾನಶೂರರ ಇದಿರಿಗೆ ಭೂಮ್ಯಾದಿಗಳನ್ನು ಕೊಡುವುದೇನೂ ಆಶ್ಚರ್ಯವಲ್ಲ. ಏಕಛತ್ರಾಧಿಪತಿಗಳಾಗಿದ್ದ ನನ್ನ ಪಿತಾಮಹ, ಪ್ರಪಿತಾಮಹಾದಿಗಳು

ರಾಜ್ಯಭೋಗಗಳನ್ನು ಬಿಟ್ಟು ಹೋದರೂ ಧೀರರು ಎಂಬ ತಮ್ಮ ಕೀರ್ತಿಯನ್ನು ಕಳೆದುಕೊಳ್ಳಲಿಲ್ಲ. ಹಿಂದೆ ಯುದ್ಧದಲ್ಲಿ ದೇಹತ್ಯಾಗ ಮಾಡಿದ ರಾಜರು ಎಷ್ಟೋ ಮಂದಿ ಉಂಟು. ಸತ್ಪಾತ್ರಕ್ಕೆ ದಾನಮಾಡಿದವರು ವಿರಳ. ಧನತ್ಯಾಗವು ದೇಹತ್ಯಾಗಕ್ಕಿಂತ ಅತಿ ದುಷ್ಕರ ಮತ್ತು ಅಧಿಕಕೀರ್ತಿಕರ. ಅದನ್ನು ನಾನು ಅವಶ್ಯ ಮಾಡುವೆನು. ವಾಮನನು ವಿಷ್ಣುವೇ ಆಗಿರಲಿ, ಶತ್ರುವೇ ಆಗಿರಲಿ. ಅವನಿಗೆ ಇಷ್ಟವಾದುದನ್ನು ಕೊಡುವುದರಿಂದ ಬರುವ ದಾರಿದ್ರ್ಯವೆಂಬ ನಾಶವು ಈ ಲೋಕ ಪರಲೋಕ ಸುಖ ಸಾಧನವೇ ಆಗುವುದು. ಆದ್ದರಿಂದ ಇವನಿಗೆ ದಾನ ಮಾಡಿಯೇ ತೀರುವೆನು.

ಈ ವಟುವು ನಿರಪರಾಧಿಯಾದ ನನ್ನನ್ನು ಅಧರ್ಮದಿಂದ ಬಂಧಿಸಿದರೂ, ಇವನು ಬ್ರಾಹ್ಮಣ ಶರೀರವನ್ನು ತಾಳಿ ಬಂದಿರುವುದರಿಂದ ಇವನನ್ನು ನಾನು ಸಂಹರಿಸುವುದಿಲ್ಲ. ಇವನು ವಿಷ್ಣುವೇ ಆಗಿದ್ದ ಪಕ್ಷದಲ್ಲಿ ಅವನಿಗೆ ಯುದ್ಧ ಮಾಡಿಯೇ ರಾಜ್ಯವನ್ನು ಅಪಹರಿಸಬೇಕೆಂದಿದ್ದರೆ ನನ್ನನ್ನು ಕೊಂದು ಭೂಮಿಯನ್ನು ತೆಗೆದುಕೊಳ್ಳಲಿ. ಇಲ್ಲವೇ ನನ್ನಿಂದ ಹತನಾಗಿ ಬೀಳಲಿ. ಈ ಎರಡು ಪಕ್ಷದಲ್ಲಿಯೂ ನನಗೆ ಕೀರ್ತಿ ಬರುವುದು.

(ಬಲಿಯು ಕರ್ಮಜದೇವತೆಯಾಗಿದ್ದರೂ, ಹರಿಯು ಭೀತನೆಂದೂ, ಹೋಗುವನೆಂದೂ ಹೇಳಿರುವುದರಿಂದ ಅವನಿಗೆ ಆಗಾಗ ಅಸುರಾವೇಶ ಬರುತ್ತದೆಂದೂ, ಪ್ರಹ್ಲಾದನಾದರೋ ಸದಾ ಹರಿಭಕ್ತಿಯುಳ್ಳ ವಾಯುದೇವರ ಆವೇಶವುಳ್ಳವನಾದುದರಿಂದ, ಅವನಿಗೆ ಎಂದೆಂದೂ ಅಸುರಾವೇಶ ಬರುವುದಿಲ್ಲವೆಂಬ ತಾತ್ಪರ್ಯವನ್ನು ಬ್ರಹ್ಮಾಂಡ ಪುರಾಣವು ಹೇಳುತ್ತದೆ :–)

ಶ್ಲೋಕ॥ ಬಲಿರಪ್ಯಸುರಾವೇಶಾತ್ ಸ್ತುವನ್ನಪಿ ಜನಾರ್ದನಂ ।
ಪ್ರಾಕ್ಷಿಪತ್ಯಂತರಾಕ್ಷ್ಯಾಪಿ ಪ್ರಹ್ಲಾದೋ ನಿತ್ಯಭಕ್ತಿಮಾನ್ ॥

ಶುಕ್ರ :– ಸ್ವಹಿತಜ್ಞಾನರಹಿತನೇ ! ಪಂಡಿತನೆಂಬ ಅಹಂಕಾರವು ನಿನಗೆ ಬಂದಿದೆ. ನಿಜವಾಗಿ ನಿನಗೇನೂ ತಿಳಿದಿಲ್ಲ. ಶಠನಾಗಿರುವೆ. ನಮ್ಮನ್ನು ಲಕ್ಷ್ಯ ಮಾಡದೆ ನಮ್ಮ ಅಪ್ಪಣೆಯನ್ನು ಮೀರಿ ನಡೆಯುತ್ತಿರುವೆ. ಈಗಲೇ ನಿನಗೆ ತ್ರೈಲೋಕ್ಯಾಧಿಕಾರವು ತಪ್ಪಿ ಹೋಗಲಿ !

ಶುಕ :– ಹೀಗೆ ಗುರುಗಳಿಂದ ಶಾಪವನ್ನು ಹೊಂದಿದರೂ ಬಲಿರಾಜನು ಸತ್ಯವನ್ನು ಬಿಡಲಿಲ್ಲ. ಆದ್ದರಿಂದಲೇ ಅವನು ಸಜ್ಜನನು. ಬಲಿಯಪತ್ನಿಯಾದ ವಿಂಧ್ಯಾವಳಿಯು ಜಲವೆರೆಯುತ್ತಿರಲು ಮಹಾನುಭಾವನಾದ ಬಲಿಯು ವಾಮನನ ಪಾದವನ್ನು ತೊಳೆದು ಆ ತೀರ್ಥವನ್ನು ತಲೆಯ ಮೇಲೆ ಪ್ರೋಕ್ಷಿಸಿಕೊಂಡನು. ಗಗನದಲ್ಲಿ

ದೇವಗಂಧರ್ವಾದಿಗಳು ಪುಷ್ಪವೃಷ್ಟಿಯನ್ನು ಮಾಡಿ ಕೊಂಡಾಡಿದರು. ಬಲಿಯು ಭೂಮಿಯನ್ನು ದಾನಮಾಡಿದನು. ಕೂಡಲೇ ವಾಮನರೂಪವು ಅತ್ಯಾಶ್ಚರ್ಯಕರ ವಾಗಿ ಬೆಳೆಯಲಾರಂಭಿಸಿತು ಆ ರೂಪದಲ್ಲಿ ಭೂಮಿ, ಆಕಾಶ, ದಿಕ್ಕುಗಳು, ಅತಲಾದಿ ಏಳು ಲೋಕಗಳು, ಏಳು ಸಮುದ್ರಗಳೂ ಮತ್ತು ದೇವಮುನಿ ಮನುಷ್ಯಾದಿ, ಸರ್ವವೂ ಕಾಣಿಸಿಕೊಂಡವು. ಅಲ್ಲದೆ ವಾಮನನ ಶರೀರದಲ್ಲಿ ಋತ್ವಿಕ್, ಪುರೋಹಿತಾದಿಗಳಿಂದ ಸಹಿತನಾದ ಬಲಿಚಕ್ರವರ್ತಿಯು ಗುಣತ್ರಯಾತ್ಮಕವಾದ ಸಕಲ ಪ್ರಪಂಚವನ್ನೂ ಕಂಡನು. ಅಲ್ಲದೆ ಪರಮಾತ್ಮನ ಅಂಗಾಲಿನಲ್ಲಿ ರಸಾತಳಾದಿ ಬಿಲಗಳನ್ನೂ, ಪಾದದಲ್ಲಿ ಭೂಲೋಕವನ್ನೂ, ಹೀಗೆ ಪ್ರತಿ ಅವಯವಗಳಲ್ಲಿಯೂ ಆಶ್ರಯವನ್ನು ಹೊಂದಿರುವ ವಸ್ತುಗಳನ್ನು ಕಂಡನು. ಒಟ್ಟಿನಲ್ಲಿ ಚೇತನಾಚೇತ ನಾತ್ಮಕವಾದ ಜಗತ್ತೆಲ್ಲವೂ ಏಕಕಾಲದಲ್ಲಿ ಬಲಿಗೆ ಕಾಣಿಸಿದುವು. ಬಲಿಯ ಹೊರತು ಅಸುರರೆಲ್ಲರೂ ತ್ರಿವಿಕ್ರಮನ ದೇಹದಲ್ಲಿ ಮೂರು ಲೋಕಗಳನ್ನೂ ನೋಡಿ ಮೂರ್ಛಾಕ್ರಾಂತರಾದರು. ಆಗ ಸುದರ್ಶನ ಚಕ್ರ, ಶಾರ್ಙ್ಗಧನುಸ್ಸು, ಪಾಂಚಜನ್ಯ ಶಂಖ, ಕೌಮೋದಕೀಗದೆ, ನಂದಕಖಡ್ಗ, ಶತಚಂದ್ರವೆಂಬ ಗುರಾಣಿ, ಅಕ್ಷಯ ಬಾಣಗಳುಳ್ಳ ಬತ್ತಳಿಕೆಗಳು ಭಗವಂತನಲ್ಲಿ ಕಾಣಿಸಿಕೊಂಡವು. ಅಷ್ಟದಿಕ್ಪಾಲಕರೂ, ಸುನಂದಾದಿದ್ವಾರಪಾಲಕರೂ ವಾಮನದೇವರನ್ನು ಸೇವಿಸುತ್ತಿದ್ದರು. ಆಗ ತ್ರಿವಿಕ್ರಮದೇವನು ಕಿರೀಟ, ಕುಂಡಲ, ಹಾರ ಮತ್ತು ಕೇಯೂರಾದ್ಯಾಭರಣಗಳಿಂದ ಅಲಂಕೃತನಾಗಿ ಶೋಭಿಸುತ್ತಿದ್ದನು. ಹೀಗೆ ಐಶ್ವರೂಪವನ್ನು ಪ್ರಕಟಿಸಿದ ಪರಮಾತ್ಮನು ಬಲಿಯಿಂದ ಧಾರಾಪೂರ್ವಕವಾಗಿ ದತ್ತವಾದ ಭೂಲೋಕವನ್ನೆಲ್ಲ ಒಂದು ಹೆಜ್ಜೆಯಿಂದಲೂ, ಶರೀರದಿಂದ ಆಕಾಶವನ್ನೂ ಬಾಹುಗಳಿಂದ ದಿಕ್ಕುಗಳನ್ನೂ, ಎರಡನೆಯ ಹೆಜ್ಜೆಯಿಂದ ದ್ಯುಲೋಕವನ್ನು ಮೀರಿ ಮೇಲೆ ಮೇಲೆ ಹೋಗುತ್ತಿದ್ದು ಮಹರ್ಲೋಕ, ಜನ, ತಪೋಲೋಕಗಳನ್ನೂ ದಾಟಿ ಸತ್ಯಲೋಕವನ್ನು ಆಕ್ರಮಿಸಿ ಬಿಟ್ಟನು. ಮೂರನೆಯ ಹೆಜ್ಜೆಗೆ ಬಲಿಯ ಸ್ಥಳವು ಅಣುಮಾತ್ರವೂ ಉಳಿಯ ದಂತಾಯಿತು.

## ಹತ್ತೊಂಭತ್ತನೆಯ ಅಧ್ಯಾಯ ಮುಗಿದುದು

ತ್ರಿವಿಕ್ರಮನ ಪಾದವು ಸತ್ಯಲೋಕಕ್ಕೆ ಮುಟ್ಟಿದೊಡನೆಯೆ ನಖಚಂದ್ರಕಾಂತಿ ಯನ್ನು ಕಂಡ ಬ್ರಹ್ಮನು, ಮರೀಚ್ಯಾದಿಗಳು, ಸನಕಾದಿಗಳು ಮತ್ತು ವೇದಾದಿ ವಿದ್ಯಾ ಭಿಮಾನಿ ದೇವತೆಗಳೂ ಇದಿರುಗೊಂಡು ನಮಸ್ಕರಿಸಿದರು. ಬ್ರಹ್ಮದೇವರು ಅರ್ಘ್ಯ ಪಾದ್ಯಾದ್ಯುಪಚಾರಗಳಿಂದ ಪೂಜಿಸಿ, ಭಕ್ತಿಯಿಂದ ಸ್ತುತಿಸಿದರು. ಅವನು ಕಮಂಡಲು

ಜಲದಿಂದ ತ್ರಿವಿಕ್ರಮನ ಪಾದವನ್ನು ತೊಳೆದರು. ಆ ಪಾದತೀರ್ಥವೇ ಸ್ವರ್ಗಂಗಾ ನದಿಯಾಗಿ ಹೊರಟು ಮೂರು ಲೋಕಗಳನ್ನೂ ಪಾವನ ಮಾಡುತ್ತ ಭೂಲೋಕದಲ್ಲಿ ಗಂಗಾ ಎಂದು ಪ್ರಸಿದ್ಧವಾಯಿತು. ಬಳಿಕ ಬ್ರಹ್ಮಾದಿ ದೇವತೆಗಳು ತಮ್ಮ ಭೃತ್ಯರೊಡಗೂಡಿ ತಮಗೆ ಸ್ವಾಮಿಯಾದ ತ್ರಿವಿಕ್ರಮನಿಗೆ ಪೂಜಾಸಾಧನಗಳನ್ನು ತಂದು ಜಲ, ಪುಷ್ಪ, ಮಾಲಿಕೆ, ಗಂಧ, ಧೂಪ, ದೀಪ, ಅರಳು, ಸ್ತೋತ್ರ, ಜಯಜಯ ಶಬ್ದ, ನರ್ತನ, ವಾದ್ಯ, ಗಾನ, ಶಂಖಭೇರಿ ಧ್ವನಿಗಳಿಂದ ಪೂಜೆಯನ್ನು ಸಲ್ಲಿಸಿದರು. ಆಗ ಜಾಂಬುವಂತರು ಭೇರಿಯ ಧ್ವನಿಗಳಿಂದ ನಾನಾದಿಕ್ಕುಗಳಲ್ಲಿ ಜಯಘೋಷ ಮಾಡುತ್ತಿದ್ದರು.

ಇತ್ತ ಭಗವಂತನು ವಟುವಾಗಿ ಬಂದು ಮೂರು ಹೆಜ್ಜೆ ಭೂಮಿಯನ್ನು ಅಪಹರಿಸಿದುದನ್ನು ಕಂಡ ದೈತ್ಯಾದಿಗಳು ಕುಪಿತರಾಗಿ "ಇವನು ನಿಜವಾದ ಬ್ರಾಹ್ಮಣನಲ್ಲ. ವಿಷ್ಣುವೇ ದೇವಕಾರ್ಯ ಸಾಧನೆಗಾಗಿ ವಿಪ್ರವೇಷದಿಂದ ನಮ್ಮನ್ನು ವಂಚಿಸಿ, ಸತ್ಯಸಂಧನೂ, ಬ್ರಾಹ್ಮಣ ಪ್ರಿಯನೂ, ದಯಾಳುವೂ, ಎಲ್ಲಕ್ಕಿಂತ ಹೆಚ್ಚಾಗಿ ಯಜ್ಞದೀಕ್ಷಿತನೂ ಆದ ನಮ್ಮ ಪ್ರಭುವಾದ ಬಲಿ ರಾಜನ ಸರ್ವಸ್ವವನ್ನೂ ಅಪಹರಿಸಿರುವನು. ಈತನನ್ನು ಕೊಲ್ಲುವುದೇ ನಮ್ಮ ಮುಖ್ಯಧರ್ಮ. ಇದರಿಂದ ನಮ್ಮ ಸ್ವಾಮಿ ಭಕ್ತಿಯನ್ನು ತೋರಿಸಿ, ಸ್ವಾಮಿಯ ಸೇವೆಯನ್ನು ಮಾಡಿದಂತಾಗುವುದು ಎಂದು ಹೇಳುತ್ತಾ ಮೇಲೆ ಬೀಳಲು ಓಡಿ ಬಂದರು. ಅವರನ್ನು ನೋಡಿ ಜಯವಿಜಯಾದಿಗಳು, ವಿಷ್ವಕ್ಸೇನ ಮತ್ತು ಗರುಡಾದಿಗಳು ಆಯುಧಪಾಣಿಗಳಾಗಿ ದೈತ್ಯರನ್ನು ಕೊಲ್ಲುತ್ತ ಬಂದರು. ಆಗ ಬಲಿಯು ತನ್ನವರ ಕೊಲೆಯನ್ನು ನೋಡಿ, ಶುಕ್ರಚಾರ್ಯರ ಶಾಪವನ್ನು ಸ್ಮರಿಸಿ

**ಬಲಿ** :– ವಿಪ್ರಚಿತ್ತಿಯೇ ! ರಾಹುವೇ ! ಭೃತ್ಯರೇ ! ನನ್ನ ಮಾತನ್ನು ಕೇಳಿ ! ಈಗ ಯುದ್ಧವನ್ನು ಮಾಡಬೇಡಿ. ನಮಗೆ ಕಾಲವು ಪ್ರತಿಕೂಲವಾಗಿದೆ. ಶ್ರೀ ಭಗವಂತನೇ ಪ್ರತಿಕೂಲನಾಗಿರುವಾಗ ನಮ್ಮ ಪ್ರಯತ್ನವೆಲ್ಲವೂ ವ್ಯರ್ಥವಾಗುವುವು. ದೇಹ ಬಲ, ಸಾಮಾದ್ಯುಪಾಯಗಳು ಇವುಗಳಿಂದ ಕಾಲಗತಿಯನ್ನು ಮೀರಲು ಯಾರಿಗೂ ಸಾಧ್ಯವಿಲ್ಲ. ಶ್ರೀಹರಿಯು ದೇವತೆಗಳಿಗೆ ಅನುಕೂಲನಾಗಿ, ಅವರಿಗೆ ಜಯವನ್ನುಂಟುಮಾಡುತ್ತಿರುವನು. ದೈವವು ನಮಗೆ ಅನುಕೂಲವಾಗುವ ಕಾಲವನ್ನು ನಿರೀಕ್ಷಿಸುತ್ತಿರಬೇಕು.

(ಇದನ್ನು ಕೇಳಿದ ದೈತ್ಯರು ಓಡಿ ಹೋಗಿ ರಸಾತಳವನ್ನು ಸೇರಿದರು. ಇಷ್ಟರಲ್ಲಿ ಗರುಡನು ಭಗವಂತನ ಅಭಿಪ್ರಾಯವನ್ನು ತಿಳಿದು ಸೋಮಪಾನ ದಿನದಲ್ಲಿ ಬಲಿಯನ್ನು ವರುಣಪಾಶಗಳಿಂದ ಕಟ್ಟಿಹಾಕಿದನು. ಆಗ ಎಲ್ಲೆಲ್ಲೂ ಹಾಹಾಕಾರ

ವುಂಟಾಯಿತು. ವರುಣಪಾಶಬದ್ಧನೂ, ದಾನಮಾಡಿ ಸರ್ವಸ್ವವನ್ನು ಕಳೆದುಕೊಂಡಿದ್ದರೂ ಧೀರನೂ, ಉತ್ಸಾಹಿಯೂ ಆಗಿರತಕ್ಕ ಬಲಿಯನ್ನು ನೋಡಿ)

**ವಾಮನ :–** ಅಸುರಾ ! ಮೂರಡಿ ನೆಲವನ್ನು ಕೊಡುವುದಾಗಿ ನೀನು ವಾಗ್ದಾನ ಮಾಡಿರುವೆ. ನಿನ್ನ ಭೂಮಿಯೆಲ್ಲವೂ ಎರಡೇ ಹೆಜ್ಜೆಗಳಾಯಿತು. ಇನ್ನೊಂದು ಹೆಜ್ಜೆ ಇಡಲಿಕ್ಕೆ ಬೇಕಾದ ಸ್ಥಳವನ್ನು ಕಲ್ಪಿಸಿಕೊಡು. ಮಾತಿಗೆ ತಪ್ಪಿದರೆ ನರಕವಾಗುತ್ತದೆ. ಆದ್ದರಿಂದ ನೀನು ಕೆಲವು ವರ್ಷಗಳವರೆಗೆ ನರಕವಾಸವನ್ನು ಅನುಭವಿಸಬೇಕಾಗುವುದು.

## ಇಪ್ಪತ್ತನೆಯ ಅಧ್ಯಾಯ ಮುಗಿದುದು

**ಬಲಿರಾಜ :–** ರಮಾಬ್ರಹ್ಮಾದಿಗಳಿಗಿಂತ ಸರ್ವೋತ್ತಮನಾದ ಶ್ರೀಹರಿಯೇ ! ಬ್ರಹ್ಮಾದಿಸ್ತುತ್ಯನೇ ! ಕೊಡುವೆನೆಂದು ಪ್ರತಿಜ್ಞೆ ಮಾಡಿದ ನನ್ನ ಮಾತು ಸುಳ್ಳಾಗಲು ಅವಕಾಶ ಕೊಡುವುದಿಲ್ಲ. ನಿಜಮಾಡುವೆನು. ಮೂರನೆಯ ಹೆಜ್ಜೆಯನ್ನು ನನ್ನ ತಲೆಯ ಮೇಲಿಟ್ಟು ಅಳೆದುಕೋ! ನಾನು ನರಕಕ್ಕೂ ರಾಜ್ಯವು ಕೈತಪ್ಪಿ ಹೋದುದಕ್ಕೂ ವರುಣಪಾಶ ಬಂಧನಕ್ಕೂ, ಮಹಾದುಃಖಕ್ಕೂ, ನೀನು ನಿಗ್ರಹಿಸಿದುದಕ್ಕೂ ಹೆದರುವವನಲ್ಲ. ಸುಳ್ಳುಗಾರ, ಅಸಾಧು ಎಂಬ ಅಪವಾದಕ್ಕೆ ಬಹಳ ಭಯಪಡುವೆನು.

ನನಗೆ ನೀನು ಪರಮ ಹಿತೈಷಿ. ಆದುದರಿಂದ ನೀನು ಶಿಕ್ಷಿಸಿದುದರಿಂದ ನಾನು. ಶ್ಲಾಘ್ಯನೆನಿಸಿದೆ. ಮತ್ತು ಶ್ರೇಯಸ್ಸಿಗೆ ಭಾಗಿಯಾದೆ. ದಾನಮಾಡಲು ನಾನು ಸ್ವತಂತ್ರನೆಂದೂ, ನನ್ನ ಸಮಾನ ದಾನಶೂರನಾರೂ ಇಲ್ಲವೆಂದೂ ನನಗೆ ಬಂದಿದ್ದ ಮದವನ್ನು ನಾಶಮಾಡುವ ಶಿಕ್ಷೆಯನ್ನು ಕೊಟ್ಟು ಜ್ಞಾನದೃಷ್ಟಿಯನ್ನು ದಯೆಪಾಲಿಸಿರುವೆಯಾದ್ದರಿಂದ ನೀನು ನಮಗೆ ಪರಮಗುರುವು. ಹಿಂದೆ ಅಸುರ ಜಾತಿಯಲ್ಲಿ ಹುಟ್ಟಿ ದೈತ್ಯಾವೇಶಕ್ಕೆ ಗುರಿಯಾಗಿ ವೈರಭಕ್ತಿಯನ್ನು ಮಾಡಿ ಬಹುಮಂದಿ ಮೋಕ್ಷವನ್ನು ಪಡೆದರು. ಹೀಗೆ ದೈತ್ಯಾವೇಶವುಳ್ಳ ಸುಜೀವರ ಸ್ವಾಭಾವಿಕವಾದ ಭಕ್ತಿಗೆ ಮೆಚ್ಚಿ ಅವರಿಗೆ ಮೋಕ್ಷವನ್ನು ಕೊಟ್ಟ ನೀನೇ ನನ್ನನ್ನೂ ಶಿಕ್ಷಿಸಿ ವರುಣಪಾಶದಿಂದ ಬಿಗಿಸಿದೆಯಾಗಿ ನಾನು ನಾಚಿಕೆ ಪಡಲು ಕಾರಣವೇ ಇಲ್ಲ. ಅದಕ್ಕಾಗಿ ದುಃಖಿಸುವುದೂ ಇಲ್ಲ. ನನ್ನ ಅಜ್ಜನಾದ ಪ್ರಹ್ಲಾದನು ತನ್ನ ತಂದೆಯಿಂದ ಬಹುವಾಗಿ ಹಿಂಸಿಸಲ್ಪಟ್ಟರೂ, ದೇಹಾದಿಗಳೆಲ್ಲ ಅಸಾರಗಳು ಮತ್ತು ಅನಿತ್ಯಗಳು ಎಂದು ನಿಶ್ಚಯಿಸಿ, ಸರ್ವಪ್ರಕಾರದಿಂದಲೂ ನಿನ್ನನ್ನೇ ಭಜಿಸಿ, ಜ್ಞಾನಭಕ್ತಿವೈರಾಗ್ಯಾದಿಗಳನ್ನು ಸಂಪಾದಿಸಿ, ನಿನ್ನ ಪರಮಾನುಗ್ರಹದಿಂದ ಉತ್ತಮಗತಿಯನ್ನು ಹೊಂದಿರುವನು. ಅಂತಹ ಪಿತಾಮಹನ ಭಾಗ್ಯದಿಂದಲೇ, ಪೂರ್ವಾರ್ಜಿತ ಪುಣ್ಯದ ಫಲವಾಗಿ ನಿನ್ನ

ಪಾದವನ್ನು ಹೊಂದಿದೆನು. ಸ್ವಾಮಿಯೇ ! ಎಲ್ಲವನ್ನೂ ಕಿತ್ತುಕೊಂಡು 'ನನ್ನದು' ಎಂಬ ಅಭಿಮಾನವನ್ನು ನೀನು ಬಿಡಿಸಿ ಪರಮೋಪಕಾರವನ್ನು ಮಾಡಿರುವೆ.

**ಶುಕ** :– ಆ ಸಮಯಕ್ಕೆ ಪ್ರಹ್ಲಾದನು ಅಲ್ಲಿಗೆ ಬಂದನು. ಬಲಿಯು ಅವನಿಗೆ ತಲೆಯನ್ನು ಬಗ್ಗಿಸಿ ನಮಸ್ಕಾರವನ್ನು ಮಾಡಿದನು. ತಾನು ಅಹಂಕಾರ ಪಟ್ಟೆನಲ್ಲಾ ! ಎಂಬ ನಾಚಿಕೆಯಿಂದ ಅವನು ಬಗ್ಗಿಸಿದ ತಲೆಯನ್ನು ಎತ್ತಲಿಲ್ಲ. ಪ್ರಹ್ಲಾದನು ವಾಮನದೇವರ ದರ್ಶನದಿಂದ ಸಂತುಷ್ಟನಾಗಿ ಅವನಿಗೆ ನಮಿಸಿ ಹೀಗೆ ಸ್ತುತಿಸುತ್ತಾನೆ :–

**ಪ್ರಹ್ಲಾದ** :– ದೇವಾ ! ಬಲಿಗೆ ನೀನು ಕೊಟ್ಟಿದ್ದ ದೇವಲೋಕವು ನಿನ್ನದೇ ಹೊರತು ಇವನದಲ್ಲ. ನಿನ್ನದನ್ನು ಈಗ ಅವನಿಂದ ಕಿತ್ತುಕೊಂಡೆ ಭ್ರಾಂತಿಯನ್ನುಂಟು ಮಾಡತಕ್ಕ ರಾಜ್ಯಲಕ್ಷ್ಮಿಯು ಇವನ ಕೈತಪ್ಪಿದ್ದರಿಂದ, ಭ್ರಾಂತನಾಗಿ ಹಾಳಾಗುವುದು ತಪ್ಪಿ ಇವನೀಗ ಬದುಕಿದನು. ಇದರಿಂದ ನೀನಿವನಿಗೆ ಮಹತ್ತರ ಅನುಗ್ರಹವನ್ನೇ ಮಾಡಿದೆಯೆಂದು ಭಾವಿಸುವೆನು, **ಎಷ್ಟೇ ವಿದ್ವಾಂಸನಾದರೂ ಸಂಪತ್ತು ಬಂತೆಂದರೆ ಅದರಿಂದ ಭ್ರಾಂತನಾಗುವನು.** ಅದರಿಂದ ತಾನೇ ಸ್ವತಂತ್ರನೆಂದು ತಿಳಿಯುವನು. ನೀನು ಸ್ವತಂತ್ರನೆಂದು ತಿಳಿಯುವುದೇ ಇಲ್ಲ. ಆದ್ದರಿಂದ ಬಲಿಗೆ ಮಹೋಪಕಾರವನ್ನು ಮಾಡಿ ಕರುಣಿಸಿದ, ಕರ್ಮ ಸಾಕ್ಷಿಯಾದ ನಾರಾಯಣನಿಗೆ ನಮಸ್ಕಾರ !

**ವಿಂಧ್ಯಾವಳಿ** :– ಸ್ವಾಮಿಯೇ ! ಜಗತ್ತಿನ ಸೃಷ್ಟಿಸ್ಥಿತಿಲಯವನ್ನು ನೀನು ಆನಂದೋದ್ರೇಕದಿಂದ ಮಾಡುತ್ತಿರುವೆ. ಅಸುರ ಸ್ವಭಾವದವರು ಈ ಜಗತ್ತಿಗೆ ತಾನೇ ಧಣಿಗಳೆಂದು ಹೊರಟವರು. ಅಂದರೆ ನನ್ನ ಪತಿಯು ನಿನಗೆ ದಾನಮಾಡಲು ತಾನೇ ಸ್ವತಂತ್ರನೆಂದೂ, ಮೂರನೆಯ ಹೆಜ್ಜೆಗೆ ತನ್ನ ದೇಹವನ್ನೇ ಸಮರ್ಪಿಸಿ ಸತ್ಯವನ್ನುಳಿಸಿಕೊಳ್ಳಲು ಸ್ವಂತಂತ್ರನೆಂದೂ ತಿಳಿದು ನಿರ್ಲಜ್ಜನಾದನು. ಆದ್ದರಿಂದ ನನ್ನ ಪತಿಗೆ ಬಂದಿರುವ ತಾನು ಸ್ವತಂತ್ರನೆಂಬ ಅಜ್ಞಾನವನ್ನು ಪರಿಹರಿಸಿ ಪಾಲಿಸು.

**ಬ್ರಹ್ಮದೇವರು** :– ದೇವೋತ್ತಮನೇ ! ಬಲಿಯು ಭಕ್ತನು. ಬಂಧನಕ್ಕೆ ಅರ್ಹನಲ್ಲ. ಭಕ್ತಿಯಿಂದ ನಿನ್ನ ಪಾದಕ್ಕೆ ಜಲವನ್ನು, ಅರ್ಘ್ಯಜಲವನ್ನೂ ಸಮರ್ಪಿಸಿದವನೂ, ನಿನ್ನ ಪೂರ್ಣಾನುಗ್ರಹಕ್ಕೆ ಪಾತ್ರನಾಗಿ ಮೋಕ್ಷವನ್ನು ಹೊಂದಲು ಅರ್ಹನಾಗಿರುವನು. ತ್ರೈಲೋಕ್ಯವನ್ನೇ ಭಕ್ತಿಯಿಂದ ನಿನಗೆ ಅರ್ಪಿಸಿರುವನು. ಆದ್ದರಿಂದ ಈತನನ್ನು ವರುಣಪಾಶದಿಂದ ಬಿಡಿಸು.

**ವಾಮನ** :– ಬ್ರಹ್ಮನೇ ! ನಾನು ಯಾರನ್ನು ಅನುಗ್ರಹಿಸಬೇಕೆಂದು ಬಯಸುವೆನೋ ಮೊದಲು ಅವನ ದ್ರವ್ಯಾದಿಗಳನ್ನು ಕಿತ್ತುಕೊಳ್ಳುವೆನು. ಏಕೆಂದರೆ

ದ್ರವ್ಯಾದಿಗಳಿಂದ ಮತ್ತನಾದರೆ ನನ್ನನ್ನೂ, ನನ್ನ ಭಕ್ತರನ್ನೂ ಅವಮಾನಿಸುವನು. ಆದ್ದರಿಂದ ಅಂತಹವನ ದ್ರವ್ಯಾದಿಗಳನ್ನು ಅಪಹರಿಸಿ ನಮ್ಮಲ್ಲಿ ಅವನಿಗೆ ಭಕ್ತಿಯನ್ನು ಹುಟ್ಟಿಸಬೇಕಾಗುತ್ತದೆ. ಅನಾದ್ಯನಂತಕಾಲದಿಂದಲೂ ಜೀವನು ಪರತಂತ್ರನು. ಅವನು ಪೂರ್ವಾರ್ಜಿತಕರ್ಮಗಳಿಂದ ಕೃಮಿ, ಪಶ್ವಾದಿ ಯೋನಿಗಳಲ್ಲಿ ಹುಟ್ಟಿ ಸಾಯುತ್ತಾ ಇರುವನು. ಒಮ್ಮೊಮ್ಮೆ ಪುಣ್ಯವಶದಿಂದ ಮನುಷ್ಯಜನ್ಮವನ್ನು ಹೊಂದುವನು. ಆಜನ್ಮದಲ್ಲಿ ಸತ್ಕುಲಪ್ರಸೂತಿ, ವರ್ಣಾಶ್ರಮೋಚಿತವಾದ ಕರ್ಮ, ತಾರುಣ್ಯ, ಸೌಂದರ್ಯ ಶಾಸ್ತ್ರಜನ್ಯಜ್ಞಾನ, ಐಶ್ವರ್ಯ ಮತ್ತು ಧನ ಇವೇ ಮುಂತಾದುವು ಇದ್ದರೂ ಮೋಹವನ್ನು ಹೊಂದದೆ ಇದ್ದರೆ ನನ್ನ ಅನುಗ್ರಹವು ಅವನಿಗಿದೆ ಎಂದು ತಿಳಿಯಬೇಕು. ಈ ಬಲಿಯು ಬಂಧಾದಿಗಳನ್ನು ಹೊಂದಿದರೂ ನನ್ನ ಸರ್ವೋತ್ತಮತ್ವಾದಿಗಳಲ್ಲಿ ಮೋಹವನ್ನು ಹೊಂದಲಿಲ್ಲ. ಆದ್ದರಿಂದ ಯಾವುದು ನನ್ನ ಅನುಗ್ರಹವಿಲ್ಲದಿದ್ದರೆ ಜಯಿಸಲು ಶಕ್ಯವಿಲ್ಲವೋ ಅಂತಹ ಮೋಹನಶಕ್ತಿಯನ್ನೂ, ಜಡಪ್ರಕೃತಿ ಮೊದಲಾದುವುಗಳ ವಿಕಾರಗಳನ್ನೂ ಇವನು ಜಯಿಸಿರುವನು. ಆದ್ದರಿಂದ ಈ ಬಲಿಯು ದಾನವದೈತ್ಯರಲ್ಲಿ ಶ್ರೇಷ್ಠನಾಗಿ ಮಹಾ ಯಶಸ್ಸಿಗೆ ಪಾತ್ರನಾಗಿರುವನು. ಇವನು ಕ್ಷಣ ಮಾತ್ರದಲ್ಲಿ ರಾಜ್ಯಭ್ರಷ್ಟನಾದನು. ಗರುಡಾದಿ ಶತ್ರುಗಳಿಂದ ತಿರಸ್ಕೃತನಾದನು. ವರುಣಪಾಶದಿಂದ ಬದ್ಧನಾದನು. ಜ್ಞಾತಿಗಳೆಲ್ಲ ಬಿಟ್ಟುಹೋದರು. ತೀವ್ರ ವೇದನೆಗೆ ಗುರಿಯಾದನು. ಪುರೋಹಿತರಾದ ಶುಕ್ರಾಚಾರ್ಯರು ಹೆದರಿಸಿ ಶಾಪವನ್ನು ಕೊಟ್ಟರು. ಇಂಥ ಕ್ಷೀಣತೆ (ವಿಪತ್ತು)ಗಳು ಒಟ್ಟಿಗೆ ಒಂದೇ ಸಲಕ್ಕೆ ಬಂದರೂ "ಮೂರು ಹೆಜ್ಜೆ ನೆಲವನ್ನು ಕೊಡುವೆನು" ಎಂಬ ಮಾತಿಗೆ ತಪ್ಪಲಿಲ್ಲ. ಧರ್ಮವನ್ನು ಮೀರಲಿಲ್ಲ. ಇವನ ಭಕ್ತಿಗೆ ಮೆಚ್ಚಿದೆನು. ಮುಂದೆ ಬರುವ ಸಾವರ್ಣಿಮನ್ವಂತರದಲ್ಲಿ ಇವನಿಗೆ ಇಂದ್ರ ಪದವಿಯನ್ನು ಕೊಟ್ಟಿರುವೆನು. (ಇದು ಬಲಿಯು ಹರಿಗೆ ಮಾಡಿದ ದಾನದ ಫಲಲ್ಲವ. ಮುಕ್ತಿಯಲ್ಲಿ ಆನಂದಾತಿಶಯವೇ ಅದರ ಫಲವೆಂದು ಶಾಸ್ತ್ರವು ವಿಧಿಸುವುದು.) ಅದುವರೆಗೆ ವಿಶ್ವಕರ್ಮ ವಿರಚಿತ ಸುತಳ ಲೋಕದಲ್ಲಿ ವಾಸಮಾಡಲಿ. ಆ ಲೋಕದಲ್ಲಿ ಆಧಿ, ವ್ಯಾಧಿ, ಶ್ರಮಾದಿಗಳು ಯಾವುವೂ ಇಲ್ಲ. ಸಮೃದ್ಧ ಸಂಪತ್ತು ಇರುವುದು.

ಬಲಿರಾಜನೇ ! ನೀನು ನಿನ್ನ ಜ್ಞಾತಿಗಳೊಡನೆ ಸುತಲ ಲೋಕಕ್ಕೆ ಹೋಗು. ನಿನಗೆ ಮಂಗಳವಾಗಲಿ ! (ಶ್ರದ್ಧಾಭಕ್ತಿಗಳಿಲ್ಲದೆ ಶಾಸ್ತ್ರೋಕ್ತಗಳಾದ ಕರ್ಮಗಳನ್ನು ಮಾಡುವವನ ಪುಣ್ಯಗಳೆಲ್ಲ ನಿನಗೆ ಬಂದು ಅವುಗಳ ಫಲವಾದ ಸುಖವನ್ನು ಹೊಂದು.) ಅಲ್ಲಿ ವಾಸ ಮಾಡುವ ನಿನಗೆ ಇಂದ್ರಾದಿಗಳು, ತಿರಸ್ಕರಿಸಿ ತೊಂದರೆಗಳನ್ನು ಕೊಡುವುದಿಲ್ಲ. ನಿನ್ನಾಜ್ಞೆಯನ್ನು ಮೀರುವ ದೈತ್ಯಾದಿಗಳನ್ನು ನನ್ನ ಚಕ್ರವು ಸಂಹರಿಸುವುದು. ನಿನ್ನನ್ನೂ, ನಿನ್ನ ಭೃತ್ಯರನ್ನೂ, ಭೋಗ್ಯವಸ್ತುಗಳನ್ನೂ, ಸಕಲ ಅಪಾಯಗಳನ್ನೂ ತಪ್ಪಿಸಿ ರಕ್ಷಿಸುತ್ತಿರುವೆನು. ಯಾವಾಗಲೂ ನಿನ್ನ ಅರಮನೆಯ ಬಾಗಿಲನ್ನು ಕಾಯುತ್ತ ನಿನ್ನ ಬಳಿಯಲ್ಲಿಯೇ ಇರುವೆನು. ಯಾವಾಗಲೂ ನನ್ನನ್ನು ನೀನು ನೋಡುತ್ತಿರುವೆ.

ಅದರಿಂದ ದಾನವ ದೈತ್ಯರ ಸಂಗದಿಂದ ನಿನಗೆ ಬರುವ ಆ ಸುರ ಸ್ವಭಾವವು ತತ್‌ಕ್ಷಣ ದಲ್ಲಿಯೇ ನಾಶವಾಗುವುದು.

## ಇಪ್ಪತ್ತೊಂದನೆಯ ಅಧ್ಯಾಯ ಮುಗಿದುದು

**ಬಲಿ :–** ದೇವ ! ನಿನ್ನ ವಾತ್ಸಲ್ಯವನ್ನು ನಾನೇನೆಂದು ಹೇಳಲಿ ? ನಾನು ಅಸುರಜಾತಿಯವನು. ರಾಜಸನು. ಅಧಮನು. ಇಂತಹವನಿಗೆ ಲೋಕಪಾಲಕರಾದ ದೇವತೆಗಳಿಗೂ ಅಪೂರ್ವವಾದ ಅನುಗ್ರಹವನ್ನು ಮಾಡಿದೆಯಲ್ಲ !!

**ಶುಕ :–** ಹೀಗೆ ಬಲಿಯು ಹೇಳಿ ವರುಣ ಪಾಶದಿಂದ ಬಿಡುಗಡೆ ಹೊಂದಿ ಶ್ರೀಹರಿಗೆ ನಮಿಸಿ ಬಳಿಕ ಬ್ರಹ್ಮರುದ್ರರಿಗೂ ನಮಿಸಿ, ತನ್ನ ಭೃತ್ಯರಿಂದೊಡಗೂಡಿ ಸುತಳ ಲೋಕಕ್ಕೆ ಹೋಗಿ ಅಲ್ಲಿನೆಲೆಸಿದನು. ವಾಮನದೇವರು ಕೃಪೆಮಾಡಿ ದೇವೇಂದ್ರ ನಿಗೆ ಸ್ವರ್ಗಾಧಿಪತ್ಯವನ್ನು ಕೊಟ್ಟು ಅದಿತಿಯ ಬಯಕೆಯನ್ನೂ ಪೂರೈಸಿ, ಉಪೇಂದ್ರ ನಾಗಿ ಸಕಲ ಜಗತ್ತನ್ನೂ ಪೋಷಿಸುತ್ತಿದ್ದನು, ಪ್ರಹ್ಲಾದನು ಭಗವಂತನ ಅನುಗ್ರಹ ದಿಂದ ವರುಣಪಾಶದಿಂದ ಮುಕ್ತನಾದ ತನ್ನ ಪೌತ್ರನನ್ನು ನೋಡಿ ಸಂತೋಷಿಸಿ ಭಕ್ತಿನಮ್ರನಾಗಿ.

**ಪ್ರಹ್ಲಾದ :–** ವಾಮನದೇವ ! ಬಲಿರಾಜನಿಗೆ ಅವನ ಯೋಗ್ಯತೆಗೆ ತಕ್ಕಂತೆ ನೀನು ಮಾಡಿದ ಅನುಗ್ರಹವನ್ನು ಲಕ್ಷ್ಮಿಯಾಗಲಿ, ಬ್ರಹ್ಮನಾಗಲಿ ಹೊಂದಲಿಲ್ಲ. (ಅಂದರೆ ಅವರ ಯೋಗ್ಯತೆ ಬಹಳ ದೊಡ್ಡದಾದ್ದರಿಂದ ಅವರು ಅತ್ಯಂತ ಅತಿಶಯ ಅನುಗ್ರಹಕ್ಕೆ ಪಾತ್ರರಾದವರು ಎಂದು ಭಾವ) ಇನ್ನು ಇತರರ ಪಾಡೇನು ? ಬ್ರಹ್ಮಾದಿ ಗಳಿಂದಲೇ ನಮಸ್ಕರಿಸಲ್ಪಡತಕ್ಕ ನೀನು ಅಸುರ ಜಾತಿಯವರಾದ ನಮಗೆ ದ್ವಾರ ಪಾಲಕನಾಗಿರುವೆ. ಬ್ರಹ್ಮಾದಿಗಳು ನಿನ್ನ ಪಾದಸೇವೆಯಿಂದ ಸತ್ಯಲೋಕಾದಿಗಳ ಸಂಪತ್ತನ್ನು ಅನುಭವಿಸುವಂತೆ ಮಾಡಿದ ನೀನು ಸರ್ವತ್ರ ಸಮನಾಗಿದ್ದರೂ ನಿನ್ನ ವ್ಯಾಪಾರಗಳು ಆಶ್ಚರ್ಯಕರಗಳಾಗಿವೆ. ಹೇಗೆಂದರೆ ಸಮದೃಷ್ಟಿಯಾಗಿದ್ದರೂ ವಿಷಮ ನಾಗಿರುವೆ. ಸರ್ವಸ್ವಾಮಿಯಾದರೂ ಭಕ್ತರಿಗೆ ಮಾತ್ರ ಪ್ರಿಯನಾಗಿ ಕಲ್ಪವೃಕ್ಷದಂತೆ ನಿನ್ನಾಶ್ರಿತರಿಗೆ ಮಾತ್ರ ಫಲವನ್ನು ಕೊಡುವೆ.

**ವಾಮನ :–** ವತ್ಸಪ್ರಹ್ಲಾದ ! ನಿನಗೆ ಮಂಗಳವಾಗಲಿ ! ನಿನ್ನ ಪೌತ್ರ ನೊಡನೆ ಸುತಲ ಲೋಕಕ್ಕೆ ಹೋಗು. ನೀನು ಸಂತೋಷದಿಂದ ಅಲ್ಲಿದ್ದು ನಿನ್ನ ಬಂಧು ಗಳೆಲ್ಲರನ್ನೂ ಸಂತೋಷಪಡಿಸುತ್ತಿರು. ಗದಾಪಾಣಿಯಾಗಿ ಬಾಗಿಲಲ್ಲಿರುವ ನನ್ನನ್ನು ನಿತ್ಯವೂ ನೋಡುತ್ತಿರು. ನನ್ನ ದರ್ಶನದಿಂದ ಸಂತೋಷವನ್ನು ಹೊಂದಿ ಸಕಲ

ಪ್ರಾರಬ್ಧ ಕರ್ಮವನ್ನೂ ಕಳೆದುಕೊಳ್ಳುವೆ. "ಯದ್ಯದ್ವೈಧಸಮಾತ್ಮನೇದಮನಘ ಯಚ್ಛಾಂತಿಮೇ ಚಾಂತಿಮೇ"— ವಾಮನಪುರಾಣ.

**ಅರ್ಥ** :— ಬ್ರಹ್ಮಕರಾರ್ಚಿತ ಮೂಲರಾಮದೇವರನ್ನು ಕೊನೆಯ ಯುಗ ಅಂದರೆ ಕಲಿಯುಗದಲ್ಲಿ, ಕೊನೆಯ ಅವತಾರ ಅಂದರೆ ಶ್ರೀರಾಘವೇಂದ್ರನಾಮಕ ಅವತಾರದಲ್ಲಿ ಕೊನೆಯ ಆಶ್ರಮ ಅಂದರೆ ಯತ್ಯಾಶ್ರಮದಲ್ಲ ಪೂಜಿಸು.

**ಶುಕ** :— ಪ್ರಹ್ಲಾದನು ಭಗವಂತನಾಜ್ಞೆಯನ್ನು ಶಿರಸಾ ವಹಿಸಿ, ಬಲಿ ಯೊಡನೆ ವಾಮನದೇವರಿಗೆ ಪ್ರದಕ್ಷಿಣೆನಮಸ್ಕಾರಗಳನ್ನು ಮಾಡಿ ಸ್ವಾಮಿಯ ಅನುಜ್ಞೆ ಯನ್ನು ಪಡೆದು, ಸಕಲ ಅಸುರಸೇನೆಗಳಿಗೆ ಅಧಿಪತಿಯಾಗಿ ಮಹಾಬಿಲವನ್ನು ಸೇರಿದನು.

**ವಾಮನ** :— ಶುಕ್ರಾಚಾರ್ಯರೇ ! ನೀವು ಬಲಿಯಿಂದ ಮಾಡಿಸುತ್ತಿದ್ದ ಯಜ್ಞದ ಉಳಿದ ಕರ್ಮಗಳನ್ನು ಮಾಡಿ, ಅದನ್ನು ಮುಗಿಸಿಬಿಡಿ. ಕರ್ಮಗಳಲ್ಲಿ ಉಂಟಾದ ದೋಷಗಳನ್ನು ಬ್ರಾಹ್ಮಣರು ನೋಡಿದ ಮಾತ್ರಕ್ಕೆ ವಿಹಿತ ಫಲಪ್ರದ ಗಳಾಗುವುವು.

**ಶುಕ್ರಾಚಾರ್ಯರು** :– ದೇವ ! ಯಜ್ಞ ಸ್ವಾಮಿಯೂ, ಯಜ್ಞನಾಮಕನೂ, ಪೂರ್ಣಷಡ್ಗುಣನೂ, ಸಕಲ ಕರ್ಮಫಲದಾತೃವೂ ಆಗಿರುವ ನೀನೇ ಇಲ್ಲಿದ್ದ ಮೇಲೆ, ನಿನ್ನನ್ನು ಪೂಜಿಸಿ ಸಂತೋಷಪಡಿಸಿರುವ ಬಲಿಯ ಯಜ್ಞಕ್ಕೆ ಲೋಪಬರುವುದು ಹೇಗೆ ? 'ಅಚ್ಯುತಾನಂತ ಗೋವಿಂದ' ಎಂಬ ನಿನ್ನ ನಾಮತ್ರಯ ಸಂಕೀರ್ತನ ಮಂತ್ರದಿಂದಲೇ ಮಂತ್ರ, ತಂತ್ರ, ದೇಶ, ಕಾಲ, ಹೋಮದ್ರವ್ಯ ಇವುಗಳಲ್ಲಿ ಯಾವ ನ್ಯೂನತೆಯಿದ್ದರೂ ಅವೆಲ್ಲವೂ ಪರಿಹಾರವಾಗುವುವು. ಹಾಗಿದ್ದರೂ ನಿನ್ನ ಅಪ್ಪಣೆ ಪ್ರಕಾರ ಯಜ್ಞವನ್ನು ಮುಗಿಸುವೆನು. ನಿನ್ನಾಜ್ಞಾನಪರಿಪಾಲನೆಯೇ ಪುರುಷನಿಗೆ ಶ್ರೇಯಸ್ಸಾಧನವು.

**ಶುಕ** :— ಹೀಗೆ ಹೇಳಿ ಶುಕ್ರಾಚಾರ್ಯರು ಆ ಯಜ್ಞವನ್ನು ಸಾಂಗವಾಗಿ ಮುಗಿಸಿದರು.

ಹೀಗೆ ಶ್ರೀಹರಿಯು ಯಾಚಿಸಿ ಶತ್ರುಗಳಿಂದ ಅಪಹೃತವಾಗಿದ್ದ ತ್ರೈಲೋಕ್ಯ ರಾಜ್ಯವನ್ನು ಅಣ್ಣನಾದ ಇಂದ್ರನಿಗೆ ಕೊಟ್ಟನು. ಆಗ ಬ್ರಹ್ಮದೇವರು ಸುರ, ಋಷಿ, ಪಿತೃ, ರಾಜ, ಮನು, ದಕ್ಷಾದಿಗಳು, ರುದ್ರ, ಸನತ್ಕುಮಾರ ಇವರೊಡನೆ ಬಂದು ಅದಿತಿ ಕಶ್ಯಪರ ಸಂತೋಷಕ್ಕಾಗಿಯೂ, ಸಕಲಪ್ರಾಣಿಗಳ ಕ್ಷೇಮಕ್ಕಾಗಿಯೂ, ವಾಮನ ದೇವರನ್ನು ಸಕಲ ಲೋಕಪಾಲಕರಿಗೂ, ಲೋಕಗಳಿಗೂ ಅಧಿಪತಿಯನ್ನಾಗಿ

ಮಾಡಿದರು. ಇದನ್ನು ನೋಡಿ ಸರ್ವರೂ ಸಂತೋಷಪಟ್ಟರು. ಬಳಿಕ ಇಂದ್ರನು ಬ್ರಹ್ಮದೇವರಿಂದ ಅನುಮತಿಯನ್ನು ಪಡೆದು ವಿಮಾನದಲ್ಲಿ ವಾಮನದೇವರನ್ನು ಕೂಡಿಸಿಕೊಂಡು ಸ್ವರ್ಗಕ್ಕೆ ಕರೆದುಕೊಂಡು ಹೋದನು. ಅಲ್ಲಿ ಸರ್ವರೂ ಸ್ವಾಮಿಯನ್ನು ಪೂಜಿಸಿ ಆರತಿ ಮಾಡಿದರೆಂದು ಶ್ರೀವ್ಯಾಸರಾಜರು ಪದವನ್ನು ಮಾಡಿರುವರು.

ರಾಗ ಝಾಪುತಾಳ

ಕರ್ಪೂರದಾರತಿಯ ತಂದೆತ್ತಿರೆ–ಚೆಲ್ವ
ಸುಪ್ರಕಾಶಗೆ– ಸುಜನರ ಕಾಯ್ವಗೆ—ಪಾಂಡವ ಭಾವಗೆ–ದೇವರ ದೇವಗೆ ಪ
ನಿರ್ಜರೇಂದ್ರನ—ಬಲಿ ಗರ್ಜಿಸುತಿರೆ ಕಂಡು । ಅರ್ಜುನಪ್ರಿಯ ತಾನು ಕುಬ್ಜನಾಗಿ
ಹೆಜ್ಜೆ ಭೂಮಿಯ ಬೇಡಿ ಬಲಿಯ ಗರ್ವನು
ನಿರ್ಜಿಸಲು ಬಂದ ವಾಮನಗೆ—ನಿಸ್ಸೀಮನಿಗೆ—ಪೂರ್ಣಕಾಮನಿಗೆ ೧

ನಳಿನನಾಭನೆ ಎಂದು ತಿಳಿದು ಬೇಗನೆ ಬಲಿ । ಕಳದಿಯ ಕರೆದುದಕವ ತರಿಸಿ
ಚೆಲುವ ಪಾದವ ತೊಳೆದಿಳೆಯ ದಾನವ ಮಾಡೆ ।
ನಳಿನಜಾಂಡಕ್ಕಾಗಿ ಬೆಳೆದವಗೆ—ಬಹು ತಳೆದವಗೆ—ಭೂಮಿ ಅಳೆದವಗೆ ೨

ಬಲಿಯ ಭಕ್ತಿಗೆ ಮೆಚ್ಚಿ ಚೆಲುವ ಉಡುಪಿಯ ಕೃಷ್ಣ । ಉಳಿದ ಭೂಮಿಯ ತೋರೆನ್ನುತ ನುಡಿಯೆ ಸಲೆ ನಾಚಿಕೆಯಿಂದ ತನ್ನಳಿದುಕೋ ಎನ್ನೆ ।
ತಲೆಯ ಮೆಟ್ಟಿದ ಬಹು ವಿಕ್ರಮಗೆ—ಪರಾಕ್ರಮಗೆ—ತ್ರಿವಿಕ್ರಮಗೆ ೩

ದೇವೇಂದ್ರನು ವಾಮನ ದೇವರ ಸಹಾಯದಿಂದ ನಿರ್ಭಯನಾಗಿ ತ್ರೈಲೋಕ್ಯವನ್ನು ರಕ್ಷಿಸುತ್ತ ಸುಖವಾಗಿದ್ದನು. ಬ್ರಹ್ಮಾದಿಗಳು ವಾಮನಚರಿತ್ರೆಯನ್ನು ಗಾನಮಾಡುತ್ತ ಸ್ವಸ್ಥಾನವನ್ನು ಸೇರಿದರು.

ಪರೀಕ್ಷಿದ್ರಾಜನೇ ! ವಾಮನನ ಗುಣಗಳನ್ನು ಪೂರ್ಣವಾಗಿ ಗಣನೆ ಮಾಡಲು ಯಾರಿಗೂ ಶಕ್ಯವಿಲ್ಲ. ವಾಮನಾವತಾರದ ಚರಿತ್ರೆಯನ್ನು ಭಕ್ತಿಯಿಂದ ಕೀರ್ತಿಸಿದರೆ ಉಕ್ತ ಕರ್ಮಗಳ ಪೂರ್ಣಫಲವು ಬರುವುದೆಂದು ಜ್ಞಾನಿಗಳು ಹೇಳುವರು.

### ಇಪ್ಪತ್ತೆರಡನೆಯ ಅಧ್ಯಾಯ ಮುಗಿದುದು

**ಪರೀಕ್ಷಿತ್ :–** ಮತ್ಸ್ಯಾವತಾರದ ಕಥೆಯನ್ನು ಕೇಳಲಿಚ್ಛಿಸುವೆನು, ಶ್ರೀಹರಿಯು ನಿಂದ್ಯವಾದ ಮತ್ಸ್ಯರೂಪವನ್ನು ಧರಿಸಲು ಕಾರಣವೇನು ?

**ಶುಕ :-** ಪರಮಾತ್ಮನಿಗೆ ಜೀವರಂತೆ ಕರ್ಮಾಧೀನ ಶರೀರವಿಲ್ಲದಿದ್ದರೂ ಗೋಬ್ರಾಹ್ಮಣ, ದೇವತೆ, ಸಜ್ಜನ, ವೇದ, ಧರ್ಮಾರ್ಥಗಳು ಇವುಗಳ ರಕ್ಷಣೆ ಮಾಡಲು ಸ್ವೇಚ್ಛೆಯಿಂದ ಮೀನು ಮೊದಲಾದುವುಗಳ ಶರೀರದಂತಿರುವ, ಜ್ಞಾನಾ ನಂದಮಯವಾದ ದೇಹಗಳನ್ನು ಪ್ರಕಟಿಸುತ್ತಾನೆ. ಶ್ರೀಪರಮಾತ್ಮನು ದೇವತೆ ಮನುಷ್ಯ ಮೊದಲಾದ ಜಾತಿಗಳಲ್ಲಿಯೂ, ನೀಚವಾದ ಮೀನು, ಆಮೆ, ಹಂದಿ ಮೊದಲಾದ ಜಾತಿಗಳಲ್ಲಿಯೂ ಅವತರಿಸುವುದಕ್ಕಾಗಿ ಆಯಾ ಉದರಗಳಲ್ಲಿ ಸಂಚರಿ ಸುತ್ತಿದರೂ, ಸತ್ವಾದಿ ಗುಣಗಳ ಸಂಪರ್ಕವಿಲ್ಲದವನಾದುದರಿಂದ ಆಯಾ ಪ್ರಾಣಿಗಳ ನಿಚೋಚ್ಚತೆಗಳನ್ನು ಹೊಂದುವುದಿಲ್ಲ. ಆತನು ಸ್ವತಂತ್ರನು. ಜ್ಞಾನನಂದಾದಿ ಸಕಲ ಕಲ್ಯಾಣಗುಣಗಳಿಗೂ ಆಶ್ರಯನು.

ಬ್ರಹ್ಮನ ಕಳೆದ ದೈನಂದಿನ ಕಲ್ಪದ ಕೊನೆಯಲ್ಲಿ ನೈಮಿತ್ತಿಕ ಪ್ರಳಯವು ಸಂಭವಿ ಸಿತು. ಆ ಪ್ರಳಯೋದಕದಲ್ಲಿ ಭೂರಾದಿ ಲೋಕಗಳೆಲ್ಲ ಮುಳುಗಿ ಹೋದುವು. ಆಗ ಮಲಗುವುದಕ್ಕೆ ಇಚ್ಛಿಸಿದ ಬ್ರಹ್ಮದೇವರ ಮುಖದಿಂದ ಹೊರಬಿದ್ದ ವೇದಗಳನ್ನು (ಅದರ ಅಭಿಮಾನಿ ದೇವತೆಗಳನ್ನು) ಹಯಗ್ರೀವಾಸುರನು ಅಪಹರಿಸಿದನು. ಅದನ್ನು ಕಂಡ ಶ್ರೀಹರಿಯು ಆ ಅಸುರನ ಸಂಹಾರಕ್ಕಾಗಿ ಮತ್ಸ್ಯರೂಪವನ್ನು ತಾಳಿದನು. ಮತ್ತು ಹಯಗ್ರೀವಾಸುರನನ್ನು ಕೊಂದು ವೇದಗಳನ್ನು ಬ್ರಹ್ಮದೇವರಿಗೆ ತಂದು ಕೊಟ್ಟನು.

ಚಾಕ್ಷುಷ ಮನ್ವಂತರದಲ್ಲಿ ಸತ್ಯವ್ರತನೆಂಬ ರಾಜರ್ಷಿಯು ಶ್ರೀನಾರಾಯಣನಲ್ಲಿ ಭಕ್ತಿಯುಕ್ತನಾಗಿ ಜಲಾಶಯದ ತೀರದಲ್ಲಿ ತಪಸ್ಸನ್ನು ಮಾಡುತ್ತಿದ್ದನು. ಈ ಸತ್ಯ ವ್ರತರಾಜನೇ ಮುಂದಿನ ವೈವಸ್ವತಮನ್ವಂತರದಲ್ಲಿ ವೈವಸ್ವತನು ಎಂದು ಪ್ರಸಿದ್ಧ ನಾಗುವ ಶ್ರಾದ್ಧದೇವನು. ಅವನು ಒಮ್ಮೆ ಕೃತಮಾಲಾ ನದಿಯಲ್ಲಿ ಜಲತರ್ಪಣ ವನ್ನು ಮಾಡುತ್ತಿದ್ದಾಗ ಬೊಗಸೆಯ ನೀರಿನಲ್ಲಿ ಪುಟ್ಟ ಮೀನು ಒಂದು ಸೇರಿತು. ಆ ಮೀನಿನ ಮರಿಯನ್ನು ನದಿಯ ಜಲದಲ್ಲಿ ಬಿಟ್ಟುಬಿಟ್ಟನು.

**ಮತ್ಸ್ಯ :-** ರಾಜನೇ ! ಸಣ್ಣ ಮೀನುಗಳನ್ನು ನುಂಗುವ ದೊಡ್ಡ ಮೀನುಗಳಿಂದ ಭಯಪಟ್ಟಿರುವ ನನ್ನನ್ನು ದೀನವತ್ಸಲನಾದ ನೀನು ಈ ನೀರಿನಲ್ಲಿ ಹೇಗೆ ಬಿಡುತ್ತೀಯೆ ?

**ಶುಕ :-** ಈ ಮೀನೇ ದೇವರೆಂದು ತಿಳಿಯದೆ ಆ ರಾಜನು ಹೇಗಾದರೂ ಅಪಾಯದಿಂದ ಈ ಮೀನುಮರಿಯನ್ನು ತಪ್ಪಿಸಿ ರಕ್ಷಿಸಬೇಕೆಂದು ನಿಶ್ಚಯಿಸಿ ಕಮಂಡಲು ಜಲದಲ್ಲಿ ಅದನ್ನಿಟ್ಟುಕೊಂಡು ತನ್ನಾಶ್ರಮಕ್ಕೆ ತಂದನು. ಆ ಮತ್ಸ್ಯವು ಒಂದು ರಾತ್ರಿಯಲ್ಲಿ ದೊಡ್ಡದಾಗಿ ಬೆಳೆದು "ರಾಜನೇ ! ಇಲ್ಲಿ ವಾಸವನ್ನು

ಮಾಡಲಾರೆನು. ವಿಶಾಲವಾದ ಸ್ಥಳವನ್ನು ಕಲ್ಪಿಸು" ಎಂದು ಹೇಳಿದಾಗ ರಾಜನು ದೊಡ್ಡ ಕಡಾಯಿಯಲ್ಲಿ ಬಿಟ್ಟನು. ಮೀನು ಒಂದು ಮುಹೂರ್ತದಲ್ಲಿ ಮೂರು ಮೊಳ ಉದ್ದಕ್ಕೆ ಬೆಳೆಯಿತು. ಅಲ್ಲಿಯೂ ಸ್ಥಳವು ಸಾಲದೆಂದು ಮತ್ತೆ ಆ ಮೀನು ಹೇಳಿದಾಗ ರಾಜನು ಅದನ್ನು ಸರೋವರದಲ್ಲಿ ಬಿಟ್ಟನು. ಅಲ್ಲಿಯೂ ಅದು ಬೆಳೆಯಲು ಸಮುದ್ರ ದಲ್ಲಿ ಅದನ್ನು ಬಿಟ್ಟನು. ಆಗ ಆ ಮತ್ಸ್ಯವು "ರಾಜನೇ! ಇಲ್ಲಿರುವ ಮೊಸಳೆ ಮುಂತಾದುವು ನನ್ನನ್ನು ತಿಂದು ಬಿಡುವುವು. ಈ ಸಮುದ್ರದಲ್ಲಿ ಬಿಡಬಹುದೆ?" ಎಂದಿತು. ಮತ್ಸ್ಯರೂಪೀ ಹರಿಯಿಂದ ಮೋಹಗೊಂಡು ರಾಜನು ಮಾತಾಡುತ್ತಾನೆ.

**ಸತ್ಯವ್ರತ :–** ಮತ್ಸ್ಯರೂಪದಿಂದ ನಮ್ಮನ್ನು ಮರುಳು ಮಾಡುತ್ತಿರುವ ನೀನು ಯಾರು? ಆಶ್ಚರ್ಯಕರಶಕ್ತಿಯುಳ್ಳ ಇಂತಹ ಮೀನನ್ನು ನಾನಿದುವರೆಗೆ ಕಂಡದ್ದೂ ಇಲ್ಲ. ಕೇಳಿದ್ದೂ ಇಲ್ಲ. ಹೀಗೆ ಬೆಳೆದ ನೀನು ಜಂತುವಲ್ಲ. ನಿಜವಾಗಿಯೂ ನೀನು ಭಗವಚ್ಛಬ್ದವಾಚ್ಯನೂ, ಭಕ್ತರಿಗೆ ಇಷ್ಟಪ್ರದನೂ, ಚತುರ್ವಿಧನಾಶ ರಹಿತನೂ ಆದ ನಾರಾಯಣನೇ ಸರಿ. ನನ್ನಂತಹ ಪ್ರಾಣಿಗಳಿಗೆ ಅನುಗ್ರಹಿಸುವುದ ಕ್ಕಾಗಿ ನೀನು ಮತ್ಸ್ಯರೂಪವನ್ನು ಧರಿಸಿರುವೆ. ಸಂದೇಹವೇ ಇಲ್ಲ. ಪುರುಷೋ ತ್ತಮನೇ! ಸೃಷ್ಟ್ಯಾದೀಶ್ವರನೇ! ದೇಶಕಾಲಗುಣವ್ಯಾಪ್ತನೇ! ನಾರಾಯಣನೇ! ನಿನಗೆ ನಮಸ್ಕಾರ! ಶರಣಾಗತರಾದ ನಮಗೆ ಮುಖ್ಯಸ್ವಾಮಿಯೂ, ಆಶ್ರಯನೂ ನೀನೇ. ಲೀಲೆಯಿಂದ ಮಾಡಿದ ಸಕಲ ಅವತಾರಗಳೂ ಪ್ರಾಣಿಗಳ ಐಶ್ವರ್ಯಾದಿ ಅಭಿ ವೃದ್ಧಿಗೆ ಕಾರಣಗಳಾಗುತ್ತವೆ. ಈ ಮತ್ಸ್ಯಾವತಾರ ಯಾವ ಕಾರ್ಯಕ್ಕಾಗಿ ಆಗಿದೆ? ಆ ಪ್ರಯೋಜನವನ್ನು ತಿಳಿಯಲು ಬಯಸುವೆನು. ನೀನು ಅನಿಮಿತ್ತೋಪಕಾರಿಯಾದ್ದ ರಿಂದ ಅತಿಪ್ರಿಯಸ್ವರೂಪನು. ಭಕ್ತರಲ್ಲದವರಿಗೆ ನಿನ್ನ ಪಾದ ಸೇವೆಯು ದೊರೆಯದು. ದೊರೆತರೂ ಅವರಿಗೆ ವ್ಯರ್ಥ. ಸಜ್ಜನರಿಗೆ ಅದು ಸಾರ್ಥಕ. ಇದಕ್ಕೆ ನಾನೇ ಸಾಕ್ಷಿ. ನಿನ್ನ ಪಾದಸೇವೆ ಮಾಡಿದ ನಮಗೆ ಲೋಕ ವಿಲಕ್ಷಣವೂ, ಜಗದುತ್ಪಾದನ ಸಮರ್ಥ ವಾದುದರಿಂದ ಆಶ್ಚರ್ಯಕರವೂ ಆದ ಈ ಮತ್ಸ್ಯರೂಪವನ್ನು ನನಗೆ ತೋರಿಸಿರುವೆ.

**ಶ್ರೀ ಭಗವಾನ್ :–** ಅರಿಮರ್ದನನಾದ ಸತ್ಯವ್ರತನೇ! ಇಂದಿನಿಂದ ಏಳ ನೆಯ ದಿನದಲ್ಲಿ ಮೂರು ಲೋಕಗಳೂ ಪ್ರಳಯೋದಕದಲ್ಲಿ ಮುಳುಗುತ್ತಿರುವಾಗ, ನನ್ನಿಂದ ಪ್ರೇರಿತವಾದ ಒಂದು ಹಡಗು ನಿನ್ನ ಸಮೀಪಕ್ಕೆ ತಾನಾಗಿ ತೇಲಿ ಬರುವುದು. ನೀನು ಅನೇಕಬಗೆಯ ಬೀಜಗಳನ್ನೂ, ವ್ರೀಹಿಯವಾದಿಗಳನ್ನೂ ಸಂಗ್ರಹಿಸಿ ಕೊಂಡಿದ್ದು ಅವುಗಳನ್ನು ತುಂಬಿಡು. ಸಪ್ತರ್ಷಿಗಳಿಂದ ಸಹಿತನಾಗಿ ಆ ಹಡಗಿನಲ್ಲಿ ಕುಳಿತು ಆ ಋಷಿಗಳ ತೇಜಸ್ಸಿನ ಬೆಳಕಿನಿಂದಲೇ ಪ್ರಳ ಯೋದಕದಲ್ಲಿ ಸಂಚರಿಸುತ್ತಿರು. ಚಂಚಲವಾದ ಹಡಗಿನ ಬಳಿಗೆ ನಾನು ಬರುವೆನು. ನನ್ನ ಶೃಂಗಕ್ಕೆ ಆ ಹಡಗನ್ನು ಹಗ್ಗದಂತಿರುವ ದೊಡ್ಡ ಸರ್ಪದಿಂದ ಕಟ್ಟಿಡು. ಆಗ ಆ ಹಡಗು ಸ್ಥಿರವಾಗಿ ನಿಲ್ಲುವುದು. ನಾನು ಹಡಗನ್ನು ಎಳೆದುಕೊಂಡು ಮನ್ವಂತರ

ಪ್ರಳಯವು ಮುಗಿಯುವವರೆಗೂ ಆ ಜಲದಲ್ಲಿ ಸಂಚರಿಸುವೆನು. ಆಗ ನೀನು ನನ್ನ ಅನುಗ್ರಹದಿಂದ ಪರಬ್ರಹ್ಮನಾದ ನನ್ನ ಮಹಿಮೆಯನು ತಿಳಿಯುವೆ.

**ಶುಕ :–** ಇಷ್ಟು ಹೇಳಿ ಭಗವಂತನು ಕಣ್ಮರೆಯಾದನು. ಸತ್ಯವ್ರತನು ಶ್ರೀ ಹರಿಯನ್ನು ಧ್ಯಾನಿಸುತ್ತ ಕುಳಿತನು. ಏಳುದಿನಗಳು ಕಳೆದಾಗ ಮಹಾಮೇಘಗಳು ಮಳೆಯನ್ನು ಸುರಿಸಿದುವು. ಪ್ರಳಯ ಸಮುದ್ರದಲ್ಲಿ ನಾವೆಯೊಂದು ತೇಲಿ ಬಂದಿತು. ರಾಜನು ಬೀಜಾದಿಗಳನ್ನು ಅದರಲ್ಲಿ ತುಂಬಿ, ಸಪ್ತರ್ಷಿಗಳೊಡನೆ ಅದರಲ್ಲಿ ಕುಳಿತನು. ಋಷಿಗಳ ಮಾತಿನಂತೆ ಸತ್ಯವ್ರತನು ಭಗವಂತನನ್ನು ಧ್ಯಾನಿಸಿದನು. ಆಗ ಮತ್ಸ್ಯ ರೂಪಿಯಾದ ಶ್ರೀಹರಿಯು ಕಾಣಿಸಿಕೊಂಡನು. ರಾಜನು ಮೀನಿನ ಕೊಂಬಿಗೂ, ಹಡಗಿಗೂ ಸರ್ಪವನ್ನು ಬಿಗಿದನು. ಮತ್ತು ಹೀಗೆ ಸ್ತುತಿಸಿದನು :–

**ಸತ್ಯವ್ರತ :–** ಅಜ್ಞಾನವು ಪರಮಾತ್ಮನ ಜ್ಞಾನವನ್ನು ಆವರಿಸಿರುವುದರಿಂದ ಜೀವರು ತಮ್ಮ ಹಾಗೂ ಪರಮಾತ್ಮನ ಸ್ವರೂಪವನ್ನು ಅರಿಯದೆ ಸಂಸಾರದಲ್ಲಿ ಸುತ್ತಿ ಸುತ್ತಿ ನರಳುತ್ತಿರುವರು. ಯಾವನ ಅನುಗ್ರಹದಿಂದ ಶ್ರೇಷ್ಠ ಜನ್ಮವನ್ನು ಹೊಂದಿ ಅವನನ್ನು ಪಡೆಯುವರೋ ಅಂತಹ ಮುಖ್ಯ ಗುರುವಾದ ನೀನು ನಮಗೆ ಮುಕ್ತಿಯನ್ನು ಕೊಡು !

ಅಜ್ಞಾನಿಗಳು ದುಃಖಕರಗಳಾದ ಕರ್ಮಗಳನ್ನು ಮಾಡಿ ಸುಖವನ್ನು ಬಯಸುವರು. ಆದರೆ ದುಃಖವೇ ಬರುವುದು. ವಿಷಯೇಚ್ಛೆಯನ್ನು ಬಿಟ್ಟು ನಿನ್ನ ಪಾದಸೇವೆಯನ್ನು ಮಾಡಿದರೆ ದುಷ್ಕರ್ಮ ಸಂಬಂಧವಾದ ದುರ್ಬುದ್ಧಿಯು ಹೋಗಿ, ಕರ್ಮವೂ ನಿರ್ಮಲವಾಗಿ, ಸುಜ್ಞಾನವೂ ಬರುವುದು. ಹೀಗೆ ಅನುಗ್ರಹಿಸುವ ನೀನು ನಮ್ಮ ಅಜ್ಞಾನವನ್ನು ಕಳೆದು ಕರ್ಮದ ಫಲವು ಬರದಂತೆ ಅದನ್ನು ತಡೆದು ಅನುಗ್ರಹಿಸು.

ಬಂಗಾರವು ಅಗ್ನಿಪುಟದಿಂದ ಹತ್ತು ಬಗೆಯ ದೋಷಗಳನ್ನು ಕಳೆದುಕೊಂಡು ಅಪರಂಜಿಯಾಗುವಂತೆ ಅಧಿಕಾರಿಯ ಸೇವೆಯನ್ನು ಕೈಗೊಂಡು, ಅವನ ಅಜ್ಞಾನವನ್ನು ಕಳೆದು ಶುದ್ಧನನ್ನು ಮಾಡಿ ಜ್ಞಾನಾನಂದವನ್ನು ಅವನಿಗೆ ಅನುಗ್ರಹಿಸುವ, ಮಹಾಜ್ಞಾನಿಯಾದ ನೀನು ನಮಗೆ ಮುಕ್ತಿಯನ್ನು ಅನುಗ್ರಹಿಸು.

ನಿನ್ನ ಹಾಗೆ ಯಾವ ದೇವತೆಯಾಗಲೀ, ಗುರುಜನರಾಗಲೀ ಮಹಾಫಲವನ್ನುಂಟು ಮಾಡಲಾರರು ಸರ್ವರಿಗೂ ಸ್ವಾಮಿಯಾದ ನಿನ್ನನ್ನೇ ಮರೆಹೋಗುವೆನು.

ಕುರುಡನಿಗೆ ಕಣ್ಣುಳ್ಳವನು ದಾರಿ ತೋರಿಸಬೇಕು. ಅಜ್ಞಾನಿಗಳಿಗೆ ಜ್ಞಾನಿಯು ಉಪದೇಶಿಸಬೇಕು. ಪ್ರಾಪ್ಯೋತ್ತಮನನ್ನು ತಿಳಿಯಲು ಬಯಸುತ್ತಿರುವ ನಮಗೆ ನೀನೇ ಜ್ಞಾನೋಪದೇಶಮಾಡಿ ಅನುಗ್ರಹಿಸಬೇಕು.

ಅಜ್ಞಾನಿಯಾದ ಗುರುವು ಪಾಮರರಿಗೆ ಜೀವಪರಮಾತ್ಮರು ಒಂದೇ ಎಂದು ಉಪದೇಶಿಸುವನು. ನೀನಾದರೋ ಮುಕ್ತಿಯೋಗ್ಯರು ವೈಕುಂಠವನ್ನು ಹೊಂದುವು ದಕ್ಕೆ ಸಾಧನವಾದ **ಹರಿಯು ಸರ್ವೋತ್ತಮನು** ಎಂಬ ತತ್ತ್ವವನ್ನು ಉಪದೇಶಿಸುವೆ.

ನೀನು ಅನಿಮಿತ್ತೋಪಕಾರಿಯು. ಸತಿಸುತಾದಿಗಳಿಗಿಂತ ಶ್ರೇಷ್ಠನು ಮತ್ತು ಪ್ರೇಷ್ಠನು. ವಿಷಯ ಸುಖಗಳಿಗೂ ನೀನೇ ನಿಯಾಮಕನು. ಪೂರ್ಣಾನಂದನು. ಜ್ಞಾನೋಪದೇಶಕನು. ಸರ್ವಜ್ಞನು. ಅವರವರ ಅಭೀಷ್ಟಗಳನ್ನು ಸಲ್ಲಿಸುವವನು. ನೀನು ದೂರದಲ್ಲಿರದೆ ಹೃದಯದಲ್ಲಿಯೇ ಇದ್ದರೂ ವಿಷಯ ಲಂಪಟರಾಗಿ, ಜ್ಞಾನ ಶೂನ್ಯರಾಗಿರುವವರು ನಿನ್ನನ್ನು ತಿಳಿಯುವುದಿಲ್ಲ. ದೇವೋತ್ತಮನೂ, ಭಜನೀಯನೂ, ಪುರುಷಾರ್ಥಪ್ರದಾನಸಮರ್ಥನೂ ಆದ ನಿನ್ನಲ್ಲಿ ಜ್ಞಾನಲಾಭಕ್ಕಾಗಿ ನಾನು ಮರೆಹೊಕ್ಕಿರುವೆನು. ಭಗವಂತನೆ ! ಪರಮಾರ್ಥಪ್ರಕಾಶಗಳಾದ "ಮನ್ಮನಾ ಭವ, ಮದ್ಭಕ್ತಃ, ಮದ್ಯಾಜೀ, ಮಾಂ ನಮಸ್ಕುರು" ಇತ್ಯಾದಿರೂಪ ವಾಕ್ಯಗಳಿಂದ ನನ್ನ ಅಹಂಕಾರಾದಿಗಳನ್ನು ಪರಿಹರಿಸಿ ನಿನ್ನ ಸ್ವರೂಪವನ್ನು ತೋರಿಸು.

**ಶುಕ :–** ಹೀಗೆ ಪ್ರಾರ್ಥಿಸಲಾಗಿ ಮತ್ಸ್ಯದೇವನು, ಪ್ರಳಯ ಸಮುದ್ರದಲ್ಲಿ ವಿಹರಿಸುತ್ತ ಆ ರಾಜನಿಗೆ ರಹಸ್ಯ ಪ್ರಮೇಯವನ್ನು ಉಪದೇಶಿಸಿದನು ಜ್ಞಾನ–ಭಕ್ತಿ –ಕರ್ಮಗಳ ಸಾಧನೆಗಳನ್ನು ತಿಳಿಸುವ ಶ್ರೇಷ್ಠ ಮತ್ಸ್ಯಪುರಾಣವನ್ನು ಹೇಳಿದನು. ಹಾಗೂ ಗೋಪ್ಯವಾದ ತನ್ನ ಸ್ವರೂಪವನ್ನೂ ರಾಜನ ಯೋಗ್ಯತೆಗೆ ತಕ್ಕಂತೆ ಪೂರ್ಣ ವಾಗಿ ಉಪದೇಶಿಸಿದನು. ಸಂಶಯಕ್ಕೆ ಸ್ವಲ್ಪವೂ ಎಡೆಗೊಡದ ರೀತಿಯಲ್ಲಿ ಮತ್ಸ್ಯ ಮೂರುತಿಯು ಹೇಳಿದ ಪರಬ್ರಹ್ಮತತ್ತ್ವವನ್ನು ಸತ್ಯವ್ರತರಾಜನು ಸಪ್ತರ್ಷಿಗಳ ಸಹಿತವಾಗಿ ಶ್ರವಣ ಮಾಡಿದನು. ಜ್ಞಾನವಿಜ್ಞಾನಗಳನ್ನು ಹೊಂದಿದ ಆವನು ಮತ್ಸ್ಯ ರೂಪೀಶ್ರೀಹರಿಯ ಪ್ರಸಾದದಿಂದ ಈಗಿನ ವೈವಸ್ವತಮನ್ವಂತರಕ್ಕೆ ಮನುವಾದನು.

ಸತ್ಯವ್ರತರಾಜನ ಪ್ರಶ್ನೆ ಮತ್ಸ್ಯದೇವರ ಉತ್ತರವಾದ ಈ ಇತಿಹಾಸವನ್ನು ಶ್ರದ್ಧೆಯಿಂದ ಕೇಳತಕ್ಕವರು ಪಾಪಗಳಿಂದ ಮುಕ್ತರಾಗುವರು ಪ್ರತಿನಿತ್ಯವೂ ಮತ್ಸ್ಯಾ ವತಾರ ಚರಿತ್ರೆಯನ್ನು ಶ್ರದ್ಧೆಯಿಂದ ಕೇಳತಕ್ಕವನು ತನ್ನ ಮನೋರಥಗಳೆಲ್ಲವನ್ನೂ ಹೊಂದಿ, ವೈಕುಂಠವನ್ನು ಸೇರುವನು.

ಶ್ಲೋಕ

**ಪ್ರಳಯ ಪಯಸಿ ಧಾತುಃ ಸುಪ್ತಶಕ್ತೇಃ ಮುಖೇಭ್ಯಃ ಶ್ರುತಿಗಣ ಮುಪ ನೀಶಂ ಪ್ರತ್ಯುಪಾದತ್ತ ಹತ್ವಾ ।**

**ದಿತಿಜಮಕಥಯದ್ಯೋ ಬ್ರಹ್ಮ ಸತ್ಯವ್ರತಾಯ ತಮಹಮಖಿಲಹೇತುಂ ಜಿಹ್ಮಮೀನಂ ನತೋಽಸ್ಮಿ ॥ 61/23 ॥**

ಅರ್ಥ – ದಿನ ಪ್ರಳಯದಲ್ಲಿ ಶಕ್ತಿಯನ್ನು ಒಳಗೆ ಅಡಗಿಸಿಕೊಂಡು ಮಲಗಿದ ಬ್ರಹ್ಮದೇವರ ಬಾಯಿಂದ ಹೊರಟ ವೇದಗಳನ್ನು ಕದ್ದ ಹಯಗ್ರೀವಾಸುರನನ್ನು ಕೊಂದು ವೇದಗಳನ್ನು ತಂದು ತಿರುಗಿ ಬ್ರಹ್ಮದೇವರಿಗೆ ಕೊಟ್ಟವನೂ, ಚಾಕ್ಷುಷ ಮನ್ವಂತರ ಪ್ರಳಯದಲ್ಲಿ ಸತ್ಯವ್ರತರಾಜನಿಗೆ ಬ್ರಹ್ಮಸ್ವರೂಪವನ್ನು ಉಪದೇಶಿಸಿದ ವನೂ, ಜಗಜ್ಜನ್ಮಾದಿಕಾರಣನೂ, ಜಿಹ್ಮಮೀನಂ = ಸ್ವೇಚ್ಛೆಯಿಂದಲೇ ಮತ್ಸ್ಯರೂಪ ವನ್ನು ತಾಳಿದವನೂ ಆದ ಶ್ರೀಹರಿಯನ್ನು ನಾನು ನಮಸ್ಕರಿಸುವೆನು.

**ಇಪ್ಪತ್ತನಾಲ್ಕನೆಯ ಅಧ್ಯಾಯ ಮುಗಿದುದು**

**ಅಷ್ಟಮಸ್ಕಂಧ ಸಮಾಪ್ತ**

# ನವಮ ಸ್ಕಂಧ

**ರಾಜೋವಾಚ :–** ಮನ್ವಂತರಾಣಿ ಸರ್ವಾಣಿ ತ್ವಯೋಕ್ತಾನಿ ಶ್ರುತಾನಿ ಮೇ ।
ವೀರ್ಯಾಣ್ಯನಂತವೀರ್ಯಸ್ಯ ಹರೇಸ್ತತ್ರ ಕೃತಾನಿ ಚ ॥ ೧ ॥

**ಪರೀಕ್ಷಿತ್ :–** ಮುನಿಯೇ ! ತಮ್ಮಿಂದ ಹದಿನಾಲ್ಕು ಮನ್ವಂತರಗಳ ಚರಿತ್ರೆಗಳನ್ನೂ, ಆಯಾ ಮನ್ವಂತರಗಳಲ್ಲಿ ಶ್ರೀಹರಿಯು ಮಾಡಿದ ಅಸಾಧಾರಣ ವ್ಯಾಪಾರಗಳನ್ನೂ ಕೇಳಿದೆನು. ವೈವಸ್ವತಮನುವಿಗೆ ಇಕ್ಷ್ವಾಕು ಮೊದಲಾದ ಪುತ್ರರಿದ್ದರೆಂದು ಹೇಳಿದಿರಿ. ಆ ರಾಜರ ಮತ್ತು ಅವರ ನಂತರ ಬಂದ ರಾಜರ ಚರಿತ್ರೆಗಳನ್ನು ತಿಳಿಸಿರಿ.

**ಶುಕ :–** ವೈವಸ್ವತಮನುವಿನ ವಂಶಾನುಕ್ರಮವನ್ನು ಸಂಕ್ಷೇಪವಾಗಿ ಹೇಳುವೆನು ಕೇಳು :– ಶ್ರೀಹರಿಯು ಸೃಷ್ಟಿಯ ಕಾಲಬಂದಾಗ 24 ತತ್ತ್ವಗಳನ್ನೂ ಅದರಿಂದ ಬ್ರಹ್ಮಾಂಡವನ್ನೂ ಸೃಷ್ಟಿಸಿ, ಅದರೊಳಗಿನ ಗರ್ಭೋದಕದಲ್ಲಿ ಮಲಗಿದನು. ಅವನ ನಾಭಿಯಿಂದ ಸುವರ್ಣಮಯ ಕಮಲವೂ ಅದರಿಂದ ಬ್ರಹ್ಮದೇವರೂ ಹುಟ್ಟಿದರು. ಬ್ರಹ್ಮನಿಂದ ಮರೀಚಿ, ಮರೀಚಿಯಿಂದ ಕಶ್ಯಪರು ಹುಟ್ಟಿದರು. ಕಶ್ಯಪರಿಗೆ ಅದಿತಿಯಲ್ಲಿ ಹುಟ್ಟಿದ ಸೂರ್ಯನಿಗೆ ಸಂಜ್ಞಾದೇವಿಯಲ್ಲಿ ಶ್ರಾದ್ಧದೇವನಾದ ವೈವಸ್ವತ ಮನು, ಅವನಿಗೆ ಶ್ರದ್ಧಾದೇವಿಯಲ್ಲ ಇಕ್ಷ್ವಾಕು, ನೃಗ, ಶರ್ಯಾತಿ, ದಿಷ್ಟ, ಧೃಷ್ಟ, ಕರೂಷಕ, ನರಿಷ್ಯಂತ, ಪೃಷಧ್ರ, ನಾಭಾಗ ಮತ್ತು ನಭರೆಂಬ ಹತ್ತು ಮಂದಿ ಮಕ್ಕಳು ಹುಟ್ಟಿದರು. ಇವರು ಹುಟ್ಟುವುದಕ್ಕಿಂತ ಮೊದಲು ವೈವಸ್ವತಮನುವಿಗೆ ಬಹುಕಾಲ ಮಕ್ಕಳಿರಲಿಲ್ಲವೆಂಬುದಕ್ಕಾಗಿ ವಸಿಷ್ಠರು ಸಂತಾನವಾಗಲೆಂದು ಮಿತ್ರಾವರುಣನಾಮಕ ಇಷ್ಟಿಯನ್ನ ಮಾಡಿದರು. ಮನುಪತ್ನಿ ಶ್ರದ್ಧಾದೇವಿಯು ತನಗೆ ಹೆಣ್ಣುಮಗುವು ಹುಟ್ಟುವಂತೆ ಅನುಗ್ರಹಿಸಬೇಕೆಂದು ಹೋತೃವನ್ನು ಬೇಡಿದಳು. ಅವನು ಆಗಲೆಂದು ಹಾಗೆಯೇ ಹೋಮ ಮಾಡಿದ್ದರಿಂದ 'ಇಳೆ' ಎಂಬ ಕನ್ಯೆಯು ಹುಟ್ಟಿದಳು. ಆಗ ಮನುವು "ಗುರುಗಳೇ ! ನನ್ನ ಸಂಕಲ್ಪಕ್ಕೆ ವಿರುದ್ಧವಾಗಿ ಹೆಣ್ಣುಮಗುವು ಹುಟ್ಟಲು ಕಾರಣವೇನು ?" ಎಂದು ಕೇಳಿದನು. ವಸಿಷ್ಠರು ಅವನ ಪತ್ನಿಯು ಹಾಗೆ ಬೇಡಿದುದನ್ನು ತಿಳಿಸಿ, ತಮ್ಮ ತಪಃಶಕ್ತಿಯಿಂದ ಹೆಣ್ಣನ್ನು ಗಂಡು ಮಾಡುವುದಾಗಿ ತಿಳಿಸಿ, ಆ ಮಗು ಗಂಡಾಗುವಂತೆ ಅನುಗ್ರಹಿಸಬೇಕೆಂದು ಶ್ರೀಪರಮಾತ್ಮನನ್ನು ಸ್ತುತಿಸಿದರು. ಶ್ರೀಹರಿಯು ಸಂತುಷ್ಟನಾಗಿ ಇಳೆಯನ್ನು ಸುದ್ಯುಮ್ನ

ನಾಮಕ ಗಂಡು ಮಗುವನ್ನಾಗಿ ಮಾಡಿದನು. ಸುದ್ಯುಮ್ನನು ಮೇರುಬುಡದಲ್ಲಿರುವ ಇಳಾಖಂಡದ ಸುಕುಮಾರವೆಂಬ ವನಕ್ಕೆ ಪ್ರವೇಶಿಸಿದನು. ಆ ವನವು ಪಾರ್ವತೀ ಪರಮೇಶ್ವರರು ರಹಸ್ಯವಾಗಿ ಸುರತಸುಖವನ್ನು ಅನುಭವಿಸುವ ಸ್ಥಳವಾಗಿತ್ತು. ಆದ್ದರಿಂದ ಆ ಸ್ಥಳಕ್ಕೆ ಬರುವ ಪುರಷಜಾತಿಯ ಪಶು, ಪಕ್ಷಿ ಮಾನವರೆಲ್ಲ ಸ್ತ್ರೀಯ ರಾಗಲಿ-ಎಂಬ ಶಿವನ ಶಾಪವಿತ್ತು. ಈ ಕಾರಣದಿಂದ ಸುದ್ಯುಮ್ನಾದಿಗಳು ಸ್ತ್ರೀಯ ರಾದರು. ಅವರೆಲ್ಲ ಚಿಂತಾಕ್ರಾಂತರಾದರು.

## ಮೊದಲನೆಯ ಅಧ್ಯಾಯ ಮುಗಿದುದು

ಪರೀಕ್ಷಿದ್ರಾಜನು ಮಾಡಿದ ಪ್ರಶ್ನೆಗೆ ಶುಕರು ಸುಕುಮಾರ ವನಕ್ಕೆ ಬರುವವರು ಹೆಣ್ಣಾಗಲೆಂದು ಶಿವನು ಕೊಟ್ಟಿದ್ದ ಶಾಪವನ್ನು ವಿವರಿಸಿದರು. ವನದಲ್ಲಿ ಸಂಚರಿ ಸುತ್ತಿದ್ದ ಇಳೆಯನ್ನು ನೋಡಿ ಬುಧನು ಮೋಹಿಸಿ ಅವಳಲ್ಲಿ ಪುರೂರವಸ್ಸೆಂಬ ಮಗನನ್ನು ಪಡೆದನು. ಬಳಿಕ ಸುದ್ಯುಮ್ನನು ತನ್ನ ದುಸ್ಥಿತಿಗೆ ಚಿಂತಿಸಿ ವಸಿಷ್ಠರನ್ನು ಧ್ಯಾನಿಸಿದನು. ವಸಿಷ್ಠರು ಶಿವನನ್ನು ಧ್ಯಾನಿಸಿ ಸ್ತುತಿಸಿದರು. ಶಿವನು ಸಂತುಷ್ಟ ನಾಗಿ ಸುದ್ಯುಮ್ನನು ಒಂದು ತಿಂಗಳು ಪುರುಷನಾಗಿಯೂ, ಮತ್ತೊಂದು ತಿಂಗಳು ಸ್ತ್ರೀಯಾಗಿಯೂ ಇರಲಿ ಎಂದು ಆಜ್ಞಾಪಿಸಿದನು. ಹೀಗೆ ವಸಿಷ್ಠರ ಅನುಗ್ರಹದಿಂದ ಗಂಡುಸಾದ ಸುದ್ಯುಮ್ನನು ರಾಜ್ಯವನ್ನು ಪಾಲಿಸುತ್ತಿದ್ದನು. ಅವನು ಸ್ತ್ರೀಯಾ ದಾಗ ಪ್ರಜೆಗಳಿಗೆ ತೃಪ್ತಿಯಾಗುತ್ತಿರಲಿಲ್ಲ. ಸುದ್ಯುಮ್ನನಿಗೆ ಉತ್ಕಲ, ಗಯ ಮತ್ತು ವಿಮಲ ಎಂಬ ಮೂವರು ಪುತ್ರರಾದರು. ಪ್ರತಿಷ್ಠಾನಪುರಕ್ಕೆ ರಾಜನಾದ ಸುದ್ಯುಮ್ನನು ಮುದುಕನಾದೊಡನೆ ಪುರೂರವಸ್ಸಿಗೆ ಆ ರಾಜ್ಯವನ್ನೊಪ್ಪಿಸಿ ವನಕ್ಕೆ ಹೋದನು.

## ಎರಡನೆಯ ಅಧ್ಯಾಯವು ಮುಗಿದುದು

ಸುದ್ಯುಮ್ನನು ಕಾಡಿಗೆ ಹೋದ ಮೇಲೆ ವೈವಸ್ವತಮನುವು ಪುತ್ರವಂತನಾಗಲು ಯಮುನಾತೀರದಲ್ಲಿ ಒಂದು ವರ್ಷ ತಪಸ್ಸನ್ನು ಮಾಡಿ ಶ್ರೀಹರಿಯನ್ನು ಆರಾಧಿಸುತ್ತ ಲಿದ್ದನು. ಶ್ರೀಹರಿಯ ಅನುಗ್ರಹದಿಂದ ಇಕ್ಷ್ವಾಕು ಮೊದಲಾದ ಹತ್ತುಮಂದಿ ಪುತ್ರರನ್ನು ಪಡೆದನು. ಅವರಲ್ಲಿ ಎಂಟನೆಯ ಮಗನಾದ - ಪೃಷಧ್ರನು ವಸಿಷ್ಠರ ಆಜ್ಞಾಪ್ರಕಾರ ವನದಲ್ಲಿ ಗೋವುಗಳನ್ನು ರಕ್ಷಿಸುತ್ತ, ರಾತ್ರಿಕಾಲಗಳಲ್ಲಿ ಖಡ್ಗಪಾಣಿ ಯಾಗಿ ವೀರಾಸನವೆಂಬ ವ್ರತವುಳ್ಳವನಾಗಿದ್ದನು. ಒಂದು ರಾತ್ರಿ ಮಳೆಯು ಸುರಿ ಯುತ್ತಿತ್ತು. ಆಗ ಒಂದು ಹುಲಿಯು ಕೊಟ್ಟಿಗೆಯನ್ನು ಹೊಕ್ಕಿತು. ಮಲಗಿದ್ದ ಗೋವುಗಳು ಬೆದರಿ ಕೊಟ್ಟಿಗೆಯಲ್ಲಿ ಅತ್ತಿತ್ತ ಅಡರುತ್ತ ಕೂಗಲಾರಂಭಿಸಿದುವು.

ವೃಷಧ್ರನು ಕತ್ತಿ ಹಿಡಿದು ಬಂದು ಹುಲಿಯೆಂಬ ಭಾವನೆಯಿಂದ ಒಂದು ಕಪಿಲಾ ಗೋವಿನ ತಲೆಯನ್ನು ಕತ್ತರಿಸಿ ಬಿಟ್ಟನು, ಆ ಕತ್ತಿಯು ಹುಲಿಯ ಕಿವಿಗೂ ತಗುಲಿ, ಆದು ಹೆದರಿ ದಾರಿ ಉದ್ದಕ್ಕೂ ರಕ್ತವನ್ನು ಸುರಿಸುತ್ತ ಓಡಿಹೋಯಿತು. ಪೃಷಧ್ರನು ಹುಲಿಯು ಸತ್ತಿತೆಂದು ನಿರ್ಧರಿಸಿಕೊಂಡನು. ಬೆಳಗಾಗ ನೋಡುತ್ತಾನೆ ಗೋವು ಸತ್ತು ಬಿದ್ದಿದೆ. ಅದನ್ನು ನೋಡಿ ಪಾಪದ ಭಯದಿಂದ ದುಃಖಿಸಿದನು. ಇದನ್ನು ವಸಿಷ್ಠರು ತಿಳಿದು ಶೂದ್ರನಾಗೆಂದು ಶಪಿಸಿದರು. ಶಾಪಹೊಂದಿದ ಪೃಷಧ್ರನು ಊರ್ಧ್ವರೇತಸ್ಕನಾಗಿ, ಮುನಿವ್ರತನಿಷ್ಠನಾಗಿ, ಶ್ರೀಹರಿಯಲ್ಲಿಯೇ ಮನಸ್ಸನ್ನಿಟ್ಟು ಜಡನೋ ಮೂಕನೋ, ಕುರುಡನೋ ಎಂಬಂತಿದ್ದು ಭಗವಂತನನ್ನು ಧ್ಯಾನಿಸುತ್ತ ಭೂಮಿಯಲ್ಲಿ ಸಂಚರಿಸುತ್ತಿದ್ದು, ಕೊನೆಗೆ ಕಾಡುಗಿಚ್ಚಿನಿಂದ ದಗ್ಧನಾಗಿ ಪರಬ್ರಹ್ಮ ನನ್ನು ಹೊಂದಿದನು.

ಕರೂಷನೆಂಬ ಮನುವಿನ ಆರನೆಯ ಮಗನಿಗೆ ಕಾರೂಶರೆಂದು ಪ್ರಸಿದ್ಧರಾದ ಮಕ್ಕಳು ಹುಟ್ಟಿ ಉತ್ತರಾಪಥವೆಂಬ ದೇಶವನ್ನು ಧರ್ಮದಿಂದ ಆಳುತ್ತಿದ್ದರು.

ಧೃಷ್ಟನೆಂಬ ಐದನೆಯ ಮಗನಿಗೆ ಧಾರ್ಷ್ಟರೆಂಬ ಮಕ್ಕಳಾದರು. ಅವರು ಕ್ಷತ್ರಿಯ ಧರ್ಮವನ್ನು ಬಿಟ್ಟು ಪರಬ್ರಹ್ಮನನ್ನು ಧ್ಯಾನಿಸುತ್ತ ಬ್ರಾಹ್ಮಣರಾದರು.

ನಭಗನೆಂಬ ಮನುವಿನ ಹತ್ತನೆಯ ಮಗನಿಗೆ ಸ್ವಾತಿಮೂಲನೂ, ಅವನಿಗೆ ವಸುವೂ, ಅವನಿಗೆ ಪ್ರತೀಕನೂ, ಅವನಿಗೆ ಓಘವಂತನೆಂಬ ಮಗನೂ, ಓಘವತಿ ಯೆಂಬ ಮಗಳೂ ಹುಟ್ಟಿದರು. ಓಘವತಿಯನ್ನು ಸುದರ್ಶನನೆಂಬುವನು ಮದುವೆ ಯಾದನು.

ನರಿಷ್ಯಂತನೆಂಬ, ಮನುವಿನ ಏಳನೆಯ ಮಗನಿಗೆ. ಚಿತ್ರಸೇನ, ಅವನಿಗೆ ದಕ್ಷ, ಮೀಢ್ವಾನ್, ಕೂರ್ಚ, ಇಂದ್ರಸೇನ, ವೀತಿಹೋತ್ರ, ಸತ್ಯಶ್ರವ, ಉರುಶ್ರವ, ದೇವದತ್ತ ಎಂದು ಕ್ರಮವಾಗಿ ಒಬ್ಬರಿಗೆ ಒಬ್ಬ ಮಗನಾಗಿ ಹುಟ್ಟಿದರು. ದೇವದತ್ತ ನಿಗೆ ಅಗ್ನಿಯೇ ಮಗನಾಗಿ ಹುಟ್ಟಿ ಕಾನೀನಋಷಿಯೆಂದು ಪ್ರಸಿದ್ಧನಾದ ಜಾತು ಕರ್ಣ್ಯ ಋಷಿಯಾದನು. ಅವನಿಂದ ಬ್ರಹ್ಮಕುಲವುಂಟಾಯಿತು. ಅದು ಅಗ್ನಿ ವೇಶ್ಯಾಯನ ಎಂದು ಪ್ರಸಿದ್ಧವಾಯಿತು.

ಮನುವಿನ ನಾಲ್ಕನೆಯ ಮಗನು ದಿಷ್ಟ. ಅವನಿಗೆ ನಾಭಾಗನೆಂಬಮಗನು ಹುಟ್ಟಿ ದನು. ಆತನು ವ್ಯಾಪಾರಗಳಿಂದ ವೈಶ್ಯನಾದನು. ಅವನಿಗೆ ಭಲಂದನ, ವತ್ಸ ಪ್ರೀತಿ, ಪ್ರಾಂಶು, ಪ್ರಮಿತಿ, ಖನಿತ್ರ, ಚಾಕ್ಷುಷ, ವಿವಿಂಶತಿ, ರಂಭ, ಖನಿನೇತ್ರ ಕರಂಧಮ, ಅವಿಕ್ಷಿತ ಮತ್ತು ಮರುತ್ ಇವರು ಕ್ರಮವಾಗಿ ಒಬ್ಬರಿಂದ ಒಬ್ಬರು ಹುಟ್ಟಿದರು. ಮರುತ್ ಚಕ್ರವರ್ತಿಯಾಗಿ ಅಂಗಿರಾಋಷಿಗಳ ಪುತ್ರ ಸಂವರ್ತರೆಂಬ

ಯೋಗೀಶ್ವರರಿಂದ ಅನೇಕ ಯಜ್ಞಗಳನ್ನು ಮಾಡಿದನು. ಅತನ ಯಜ್ಞದ ಸಾಧನಗಳೆಲ್ಲ ಸುವರ್ಣಮಯಗಳಾಗಿದ್ದುದರಿಂದ ಈತನಂತೆ ಹೀಗೆ ಯಜ್ಞಮಾಡಿದವರಾರೂ ಇಲ್ಲ. ಈ ಯಜ್ಞದಲ್ಲಿ ಮರುತ್ತುಗಳು ಅಥವಾ ದೇವತೆಗಳು ಅಡಿಗೆಯನ್ನು ಮಾಡಿ ಬಡಿಸುತ್ತಿದ್ದರು. ಸಭೆಯಲ್ಲಿ ಕುಳಿತು ಸಕಲವನ್ನೂ ವಿಚಾರಮಾಡುತ್ತಿದ್ದವರು ವಿಶ್ವೇದೇವತೆಗಳು.

ಮರುದ್ರಾಜನಿಗೆ ದಮನ, ಅವನಿಗೆ ರಾಜ್ಯವರ್ಧನ, ಸುಧೃತಿ, ನರ, ಕೇವಲ, ಬಂಧುಮಂತ, ವೇಗವಂತ, ತೃಣಬಿಂದು ಎಂಬುವರು ಕ್ರಮವಾಗಿ ಒಬ್ಬರಿಂದ ಒಬ್ಬರು ಹುಟ್ಟಿದರು. ತೃಣಬಿಂದುವನ್ನು ಅಲಂಬುಸೆ ಎಂಬ ಅಪ್ಸರೆಯು ತಾನಾಗಿ ಬಂದು ವರಿಸಿದ್ದಳು. ಅವಳಲ್ಲಿ ತೃಣಬಿಂದುವಿಗೆ ವಿಶಾಲ, ಶೂನ್ಯ ಬಂಧು ಮತ್ತು ಧೂಮ್ರಕೇತುವೆಂಬ ಮೂವರು ಪುತ್ರರೂ, ಇಲಿಬಿಲೆಯೆಂಬ ಪುತ್ರಿಯೂ ಹುಟ್ಟಿದರು. ವಿಶಾಲನು ವಂಶೋದ್ಧಾರಕನಾಗಿ ವೈಶಾಲೀ ಪಟ್ಟಣವನ್ನು ನಿರ್ಮಿಸಿದನು. ಇಲಿಬಿಲೆಯನ್ನು ಪುಲಸ್ತ್ಯರ ಪುತ್ರ ವಿಶ್ರವಸ್ಸುಯೆಂಬ ಋಷಿಯು ಮದಿವೆಯಾಗಿ ಅವಳಲ್ಲಿ ಕುಬೇರನೆಂಬ ಪುತ್ರನನ್ನು ಪಡೆದನು. ತೃಣಬಿಂದುವಿನ ಪುತ್ರ ವಿಶಾಲನಿಗೆ ಹೇಮಚಂದ್ರನು ಪುತ್ರನು. ಅವನಿಗೆ ಧೂಮ್ರಾಕ್ಷ, ಅವನಿಗೆ ಸಹದೇವ, ಅವನಿಗೆ ಕೃಶಾಶ್ವ, ಅವನಿಗೆ ಸೋಮದತ್ತ ಎಂಬ ಪುತ್ರರಾದರು. ಸೋಮದತ್ತನು ಅನೇಕ ಯಜ್ಞಗಳನ್ನು ಮಾಡಿ ಮುಕ್ತನಾದನು. ಸೋಮದತ್ತನಿಗೆ ಸುಮತಿಯು ಪುತ್ರ. ಅವನಿಗೆ ಜನಮೇಜಯನು ಮಗನು. ಈ ರಾಜರೆಲ್ಲ ತೃಣಬಿಂದುವಿನ ಯಶಸ್ಸನ್ನು ವೃದ್ಧಿಗೊಳಿಸುತ್ತ ವಿಶಾಲನ ವಂಶದಲ್ಲಿ ಜನಿಸಿದ ರಾಜರೆಂದು ಪ್ರಖ್ಯಾತರಾದರು.

## ಮೂರನೆಯ ಅಧ್ಯಾಯ ಮುಗಿದುದು

## ಶರ್ಯಾತಿಯ ಚರಿತ್ರೆ

ವೈವಸ್ವತ ಮನುವಿನ ಮೂರನೆಯ ಮಗನೇ ಶರ್ಯಾತಿರಾಜನು. ಇವನು ವಿಶೇಷವಾಗಿ ವೇದಾರ್ಥ ಜ್ಞಾನಿಯಾಗಿದ್ದನು. ಶರ್ಯಾತಿ ರಾಜನು ಒಮ್ಮೆ ತನ್ನ ಮಗಳಾದ ಸುಕನ್ಯೆ ಮತ್ತು ಪರಿವಾರದೊಡನೆ ಚ್ಯವನರ ಆಶ್ರಮಕ್ಕೆ ಬಂದನು. ಅವನ ಮಗಳು ಸುಕನ್ಯೆಯು ಸಖಿಯರೊಡನೆ ಆ ವನದಲ್ಲಿ ತಿರುಗುತ್ತ ಅಲ್ಲಿ ಒಂದು ಕಡೆಯಿದ್ದ ದೊಡ್ಡ ಹುತ್ತದಲ್ಲಿ ಕಾಣಿಸಿದ ತೇಜೋರೂಪೀ ಕಣ್ಣುಗಳೆರಡನ್ನು ಮುಳ್ಳಿನಿಂದ ಚುಚ್ಚಿಬಿಟ್ಟಳು. ಆದರಿಂದ ರಕ್ತಪ್ರವಾಹವು ಹರಿಯಲಾರಂಭಿಸಿತು. ಆಗಲೇ ಆ ರಾಜನ ಸೈನಿಕರೆಲ್ಲರಿಗೂ ಮಲಮೂತ್ರಗಳು ಬಂದಾದುವು. ಶರ್ಯಾತಿಯು "ಚ್ಯವನರಿಗೆ ಯಾರು ಅಪರಾಧವನ್ನು ಮಾಡಿರುವಿರಿ" ಎಂದನು. ಸುಕನ್ಯೆಯು ತಾನು ಮಾಡಿದುದನ್ನು

ಮುಚ್ಚಿಟ್ಟುಕೊಳ್ಳದೆ ಹೇಳಿಬಿಟ್ಟಳು. ಶರ್ಯಾತಿಯು ಚ್ಯವನರನ್ನು ಪ್ರಸನ್ನೀಕರಿಸಿ ಕೊಂಡು, ಅವರ ಅಭಿಪ್ರಾಯದಂತೆ ಸುಕನ್ಯೆಯನ್ನು ಆ ವೃದ್ಧನಾದ ಋಷಿಗೆ ಮದಿವೆ ಮಾಡಿಕೊಟ್ಟು ಊರಿಗೆ ಹಿಂತಿರುಗಿದನು, ಸುಕನ್ಯೆಯು ಜರಠಪತಿಯೆಂದು ಉದಾಸೀನ ಮಾಡಿ ತಿರಸ್ಕರಿಸದೆ ಪತಿಯೇ ಪರದೈವವೆಂದು ಭಾವಿಸುತ್ತ ಸೇವೆಯಿಂದ ಆತನನ್ನು ಸಂತೋಷಪಡಿಸುತ್ತಿದ್ದಳು. ಒಮ್ಮೆ ಅಶ್ವಿನೀದೇವತೆಗಳು ಬರಲು, ಚ್ಯವನರು ಅವ ರನ್ನು ಅತ್ಯಾದರದಿಂದ ಉಪಚರಿಸಿ "ಸುರ ವೈದ್ಯರೇ ! ನನಗೆ ತಾರುಣ್ಯವನ್ನು ಅನು ಗ್ರಹಿಸಿರಿ. ಸೋಮಪಾನಕ್ಕೆ ಅನರ್ಹರಾದ ನಿಮ್ಮನ್ನು ಅರ್ಹರನ್ನಾಗಿ ಮಾಡುವೆನು" ಎಂದರು. ಅಶ್ವಿನಿಗಳು ಸಂತುಷ್ಟರಾಗಿ ಸಿದ್ಧಪುರುಷರಿಂದ ನಿರ್ಮಿತವಾಗಿದ್ದ ಸರೋವರ ದಲ್ಲಿ ಮುಳುಗಬೇಕೆಂದು ಚ್ಯವನರಿಗೆ ತಿಳಿಸಿದರು. ಅಶ್ವಿನಿಗಳು ಮತ್ತು ಚ್ಯವನರು ಒಟ್ಟಿಗೆ ಆ ಸರೋವರದಲ್ಲಿ ಮುಳುಗಿ ಮೇಲೆದ್ದಾಗ ಸೂರ್ಯನಂತೆ ಹೊಳೆಯುತ್ತ ಹದಿ ನಾರು ವರುಷದ ಯುವಕರಂತೆ ರೂಪವುಳ್ಳವರಾಗಿ ಆ ಮೂವರೂ ಕಾಣಿಸಿಕೊಂಡರು. ಆಗ ಸುಕನ್ಯೆಯು ಮೂವರಲ್ಲಿ ತನ್ನ ಪತಿಯು ಯಾರು ಎಂಬುದನ್ನು ತಿಳಿಯಲಾರದೆ ಅಶ್ವಿನಿಗಳಲ್ಲಿಯೇ ಮರೆಹೊಕ್ಕು ಧ್ಯಾನಿಸಿದಳು. ಅವಳ ಪಾತಿವ್ರತ್ಯಕ್ಕೆ ಮೆಚ್ಚಿದ ಅಶ್ವಿನಿಗಳು ಯೌವನದ ಪತಿಯನ್ನು ತೋರಿಸಿ, ಅವಳಿಗೊಪ್ಪಿಸಿ ಹೊರಟು ಹೋದರು.

ಕೆಲವು ಕಾಲ ಕಳೆದ ಮೇಲೆ ಶರ್ಯಾತಿರಾಜನು ಯಾಗವನ್ನು ಮಾಡಬೇಕೆಂದು ಅದಕ್ಕಾಗಿ ಅಳಿಯನನ್ನು ಕರೆಯಲು ಬಂದನು. ಮಗಳ ಮಗ್ಗುಲಿನಲ್ಲಿ ದಿವ್ಯಪುರು ಷನು ಕುಳಿತಿರುವುದನ್ನು ನೋಡಿ "ಮಗಳೇ ! ಮುದಿ ಗಂಡನನ್ನು ಬಿಟ್ಟು ಜಾರನನ್ನು ಹೊಂದಿ ಹುಟ್ಟಿದ, ಮೆಟ್ಟಿದ ಎರಡು ಕುಲಗಳನ್ನೂ ನರಕಕ್ಕೆ ತಳ್ಳಿದೆಯಾ" ಎಂದು ಕೇಳಿದನು ಸುಕನ್ಯೆಯು "ಜನಕನೇ! ಭೃಗುಪುತ್ರರಾದ ಚ್ಯವನರೇ ಇವರು"ಎಂದು ಹೇಳಿ ದೇವವೈದ್ಯರು ಮಾಡಿದ ಮಹೋಪಕಾರದ ಸಂಗತಿಯನ್ನೆಲ್ಲ ಹೇಳಿದಳು. ತಂದೆಯು ಆಶ್ಚರ್ಯವನ್ನು ಹೊಂದಿ ಪತಿವ್ರತೆಯಾದ ಮಗಳಿಗೆ ತಂದೆಯೆನಿಸಿ ತಾನು ಧನ್ಯನಾದೆ ನೆಂದು ಬಹಳವಾಗಿ ಸಂತೋಷಪಟ್ಟನು. ಬಳಿಕ ಮಗಳು ಮತ್ತು ಅಳಿಯನನ್ನು ಕರೆದು ಕೊಂಡು ತನ್ನ ಪಟ್ಟಣಕ್ಕೆ ಬಂದು ಯಾಗವನ್ನು ಮಾಡಲು ಆರಂಭಿಸಿದನು. ಚ್ಯವನರು ಆ ಯಾಗದಲ್ಲಿ ಅಶ್ವಿನೀದೇವತೆಗಳಿಗೆ ಸೋಮಭಾಗವನ್ನು ಕೊಡಿಸಿದರು. ಅವರ ಮಹಿಮೆಯನ್ನು ಪ್ರಸಿದ್ಧಿಪಡಿಸಲು ದೇವೇಂದ್ರನು ಕುಪಿತನೋಪಾದಿಯಲ್ಲಿ ವಜ್ರಾ ಯುಧವನ್ನೆತ್ತಿದನು. ಚ್ಯವನರು ಅವನ ತೋಳುಗಳನ್ನು ಸ್ತಂಭಿಸಿಬಿಟ್ಟರು. ಬಳಿಕ ಸರ್ವ ದೇವತೆಗಳೂ ಅಶ್ವಿನೀದೇವತೆಗಳಿಗೆ ಸೋಮ ರಸದ ಆಹುತಿಯನ್ನು ಕೊಡ ಬಹುದೆಂದು ಒಪ್ಪಿಕೊಂಡರು.

ಶರ್ಯಾತಿರಾಜನಿಗೆ ಉತ್ತಾನಬರ್ಹಿ, ಆನರ್ತ ಮತ್ತು ಭೂರಿಷೇಣರೆಂಬ ಮೂವರು ಪುತ್ರರಾದರು.

ಆನರ್ತನಿಗೆ ರೇವತನು ಮಗನು. ಆತನು ತಪಸ್ಸನ್ನು ಮಾಡಿ ಶ್ರೀಹರಿಯನ್ನು ಮೆಚ್ಚಿಸಿ ಪಶ್ಚಿಮಸಮುದ್ರದಲ್ಲಿ ದ್ವಾರಕಿಯನ್ನು ಸಂಪಾದಿಸಿ ಅಲ್ಲಿದ್ದುಕೊಂಡು ಆನರ್ತದೇಶವನ್ನಾಳುತ್ತಬಂದನು. ಮುಂದೆ ಶ್ರೀಕೃಷ್ಣನು ಈ ಪಟ್ಟಣವನ್ನು ಬಡಾವಣೆ ಮಾಡಿಸಿರುವನು.

ರೇವತನಿಗೆ ಕಕುದ್ಮಿಮೊದಲಾದ ನೂರುಮಂದಿ ಪುತ್ರರೂ, ರೇವತಿಯೆಂಬ ಪುತ್ರಿಯೂ ಹುಟ್ಟಿದರು. ರೇವತನು ತನ್ನ ಮಗಳಾದ ರೇವತಿಗೆ ವರನಾರೆಂಬು ದನ್ನು ಬ್ರಹ್ಮದೇವರಿಂದ ತಿಳಿಯಬೇಕೆಂದು ಮಗಳೊಡನೆ ಸತ್ಯಲೋಕಕ್ಕೆ ಹೋದನು. ಆ ವೇಳೆಯಲ್ಲಿ ಹಾಹಾ, ಹೂ ಹೂ ಎಂಬ ಗಂಧರ್ವರ ಗಾನವು ಆ ಸಭೆಯಲ್ಲಿ ನಡೆ ಯುತ್ತಿದ್ದಿತು. ಕ್ಷಣಕಾಲ ರೇವತನು ಅಲ್ಲಿ ನಿಂತು ಬ್ರಹ್ಮದೇವರನ್ನು ಕುರಿತು ತನ್ನ ಮಗಳಿಗೆ ವರನಾರೆಂದು ಕೇಳಿದನು.

**ಬ್ರಹ್ಮ :–** (ನಗುತ್ತಾ) ರಾಜನೇ ! ಈ ಲೋಕಕ್ಕೆ ಬಂದ ನಿನಗೆ ಕ್ಷಣವೆಂದು ತೋರಿದರೂ, ಭೂಲೋಕದಲ್ಲಿ 27 ಮಹಾಯುಗಗಳು ಕಳೆದು ಹೋಗಿವೆ. ಈಗ ದ್ವಾರಕಿಯಲ್ಲಿ ಶೇಷಾಂಶನಾದ ಬಲರಾಮದೇವನೆಂಬ ವರನಿರುವನು. ಅವನಿಗೆ ನಿನ್ನ ಮಗಳನ್ನು ಕೊಟ್ಟು ಮದಿವೆಮಾಡು.

ಅದರಂತೆ ರೇವತನು ದ್ವಾರಕಿಗೆ ಬಂದು ಬಲರಾಮನಿಗೆ ತನ್ನ ಮಗಳಾದ ರೇವತಿಯನ್ನು ಕೊಟ್ಟು ಮದಿವೆಮಾಡಿ ತಪಸ್ಸಿಗಾಗಿ ಬದರಿಗೆ ಹೋದನು.

## ನಾಲ್ಕನೆಯ ಅಧ್ಯಾಯ ಮುಗಿದುದು

ದಿಷ್ಟಪುತ್ರ ನಾಭಾಗನೆಂಬುವನಿಂದ ಭಿನ್ನನಾದ ನಾಭಾಗನೆಂಬುವನು ವೈವಸ್ವತ ಮನುವಿನ ಒಂಭತ್ತನೆಯ ಪುತ್ರನು. ಅವನು ನೈಷ್ಠಿಕ ಬ್ರಹ್ಮಚಾರಿಯೆಂದು ತಿಳಿದು ಅವನ ಸಹೋದರರು ಅವನಿಗೆ ರಾಜ್ಯದ ಭಾಗವನ್ನು ಕೊಡದೆ ತಾವೇ ಹಂಚಿಕೊಂಡು ಬಿಟ್ಟರು. ನಾಭಾಗನು ಗುರುಕುಲದಿಂದ ಬಂದು ತನ್ನ ಭಾಗವನ್ನು ಕೊಡಿರೆಂದು ತನ್ನ ಸಹೋದರರನ್ನು ಕೇಳಿದನು. ಅವರೆಲ್ಲರು ತಂದೆಯನ್ನು ಕೇಳುವಂತೆ ಹೇಳಿದರು. ನಾಭಾಗನು ತಂದೆಯ ಬಳಿಗೆ ಬಂದು ಭಾಗವನ್ನು ಸಹೋದರರು ಕೊಡಲಿಲ್ಲವೆಂದು ಹೇಳಿದನು.

**ವೈವಸ್ವತಮನು :–** ಮಗನೇ ! ಅದನ್ನು ಅಪೇಕ್ಷಿಸಬೇಡ. ನೀನು ಬದುಕು ವುದಕ್ಕೆ ಉಪಾಯವನ್ನು ಹೇಳುವೆನು ಕೇಳು. ಆಂಗಿರಸರು ಸಮೀಪದಲ್ಲಿಯೇ ಸತ್ರಯಾಗವನ್ನು ಮಾಡುತ್ತಿರುವರು. ಅವರು ಆರನೆಯ ದಿನ ಮಾಡತಕ್ಕ ವೈಶ್ವ

ದೇವಕರ್ಮಗಳಲ್ಲಿ ಹೇಳತಕ್ಕ ಎರಡು ಸೂಕ್ತಗಳನ್ನು ಮರೆತಿರುವರು. ಅಲ್ಲಿಗೆ ನೀನು ಹೋಗಿ ಆ ಎರಡುಸೂ ್ತಗಳನ್ನು ಅವರಿಗೆ ಹೇಳು. ಅವರು ಸ್ವರ್ಗಕ್ಕೆ ಹೋಗು ವಾಗ ಯಾಗದಲ್ಲಿ ಉಳಿದ ಧನವನ್ನೆಲ್ಲ ನಿನಗೆ ಕೊಟ್ಟು ಹೋಗುವರು.

ನಾಭಾಗನು ಅದರಂತೆ ಮಾಡಿದನು. ಋಷಿಗಳು ಯಾಗದಲ್ಲಿ ಉಳಿದ ಧನ ವೆಲ್ಲವನ್ನೂ ನಾಭಾಗನಿಗೇ ಕೊಟ್ಟು ಸ್ವರ್ಗಕ್ಕೆ ಹೊರಟು ಹೋದರು. ನಾಭಾಗನು ಆ ಧನವನ್ನು ಸ್ವೀಕರಿಸುತ್ತಿದ್ದಾಗ ಒಬ್ಬ ಪುರುಷನು ಬಂದು 'ಇದು ನನ್ನ ಭಾಗ'ವೆಂದನು. ನಾಭಾಗನು ಋಷಿಗಳು ನನಗೇ ಕೊಟ್ಟಿರುವುದರಿಂದ ನಿನ್ನದು ಹೇಗಾದೀತು ? ನನ್ನದೇ' ಎಂದು ಹೇಳಿದನು. ಕೊನೆಗೆ ಆ ಪುರುಷನು 'ಸುಮ್ಮನೆ ವಿವಾದವೇಕೆ ? ನಿಮ್ಮ ತಂದೆಯು ಹೇಳಿದಂತೆ ಕೇಳೋಣ' ಎಂದನು. ನಾಭಾಗನು ತಂದೆಯ ಬಳಿಗೆ ಬಂದು ವಿವಾದಾಂಶವನ್ನು ತಿಳಿಸಲು, ವೈವಸ್ವತಮನುವು 'ಮಗನೇ ! ಯಜ್ಞದಲ್ಲಿ ಉಳಿದ ದ್ರವ್ಯವೆಲ್ಲವೂ ರುದ್ರಭಾಗವೆಂದು ಋಷಿಗಳು ತೀರ್ಮಾನಿಸಿರುವರು' ಎಂದನು. ನಾಭಾಗನು ರುದ್ರದೇವರ ಬಳಿಗೆ ಬಂದು ಸಾಷ್ಟಾಂಗವೆರಗಿ "ಮಹಾದೇವ ! ಸ್ವಿಷ್ಟ ಕೃತ್ (ಯಜ್ಞಶಿಷ್ಟ) ಎಲ್ಲ ನಿನ್ನ ಭಾಗವೇ ಎಂದು ನಮ್ಮ ತಂದೆಯು ಆಜ್ಞಾಪಿ ಸಿರುವನು. ನನ್ನ ಅಪರಾಧವನ್ನು ಕ್ಷಮಿಸು. ಇವೆಲ್ಲವನ್ನೂ ನೀನೇ ಸ್ವೀಕರಿಸು" ಎಂದನು.

**ಶಿವ :–** ನಿಮ್ಮ ತಂದೆಯು ನಿಜವನ್ನು ಹೇಳಿರುವನು. ನೀನೂ ಸತ್ಯ ವಾದುದನ್ನೇ ಹೇಳಿರುವೆ. ಆದುದರಿಂದ ವೈಶ್ವದೇವ ಸೂಕ್ತ ದ್ರಷ್ಟ ್ರವಾದ ನಿನಗೆ ಬ್ರಹ್ಮವಿಷಯಕ ಶಾಸ್ತ್ರವನ್ನು ಉಪದೇಶಿಸುವೆನು. ಹಾಗೂ ಯಜ್ಞದಲ್ಲಿ ಉಳಿದಿರುವ ಈ ಧನವೆಲ್ಲವನ್ನೂ ನೀನೇ ಸ್ವೀಕರಿಸು.

**ಶುಕ :–** ಶಿವನು ಹೀಗೆ ಹೇಳಿ ಕಣ್ಮರೆಯಾದನು. ಈ ನಾಭಾಗನ ಚರಿತ್ರೆ ಯನ್ನು ಪ್ರಾತಃಸಾಯಂಕಾಲಗಳಲ್ಲಿ ಭಕ್ತಿಯಿಂದ ಸ್ಮರಿಸತಕ್ಕವನು ಶ್ರೀಭಗವಂತನ ಜ್ಞಾನವನ್ನು ಹೊಂದಿ ಕೊನೆಗೆ ಶ್ರೀಹರಿಯನ್ನೇ ಹೊಂದಿಬಿಡುವನು.

**ಐದನೆಯ ಅಧ್ಯಾಯ ಮುಗಿದುದು**

## ಅಂಬರೀಷನ ಚರಿತ್ರೆ

ನಾಭಾಗನಿಗೆ ಅಂಬರೀಷನು ಮಗನು. ಅವನು ಏಳುದ್ವೀಪಗಳ ಸಹಿತವಾದ ಯಾವತ್ತು ಭೂಮಿಯನ್ನೂ, ಕೋಶಾದಿ ಸಂಪತ್ತನ್ನೂ, ರಾಜವೈಭವಾದಿಗಳನ್ನೂ ಹೊಂದಿದ್ದರೂ, ಇವೆಲ್ಲ ನಶ್ವರಗಳೆಂದು ತಿಳಿದು, ವಾಸುದೇವನಲ್ಲಿಯೂ, ಅವನ

ಭಕ್ತರಲ್ಲಿಯೂ ಶ್ರೇಷ್ಠವಾದ ಭಕ್ತಿಯನ್ನು ಹೊಂದಿ, ಶ್ರೀಕೃಷ್ಣನ ಪಾದಾರವಿಂದ ಗಳಲ್ಲಿಯೇ ಮನಸ್ಸನ್ನು ಸ್ಥಿರವಾಗಿ ನಿಲ್ಲಿಸಿದ್ದನು. ಸರಸ್ವತೀನದೀತೀರದಲ್ಲಿ ವಸಿಷ್ಠಾದಿಋಷಿಗಳ ಸಹಾಯದಿಂದ ಬಹು ದಕ್ಷಿಣೆಗಳುಳ್ಳ ಅಶ್ವಮೇಧ ಯಜ್ಞ ಗಳನ್ನು ಮಾಡಿ, ಪರಮಾತ್ಮನನ್ನು ಪೂಜಿಸಿದನು. ಅವನ ಪ್ರಜೆಗಳು ಅತಿಶಯ್ಯ ಸುಖವನ್ನು ಹೊಂದಿದುದರಿಂದ ಯಾರೂ ಸ್ವರ್ಗಾದಿಗಳನ್ನು ಅಪೇಕ್ಷಿಸುತ್ತಿರಲಿಲ್ಲ. ಸರ್ವ‌ಇಂದ್ರಿಯಗಳಿಂದಲೂ ಪರಮಾತ್ಮನನ್ನು ಭಜಿಸುತ್ತಿದ್ದ ಅಂಬರೀಷನ ಭಕ್ತಿಗೆ ಮೆಚ್ಚಿ ಶ್ರೀಪರಮಾತ್ಮನು ಅವನ ರಕ್ಷಣೆಗಾಗಿ ಸುದರ್ಶನಚಕ್ರವನ್ನೇ ಅನುಗ್ರಹಿಸಿ ದ್ದನು. ಆ ರಾಜನು ಮಾಡಿದ ಯಜ್ಞಗಳಲ್ಲಿ ದೇವತೆಗಳು ಸಾಕ್ಷಾತ್ತಾಗಿ ಬಂದು ತಮ್ಮ ಹವಿರ್ಭಾಗವನ್ನು ಸ್ವೀಕರಿಸುತ್ತಿದ್ದರು. ಆದ್ದರಿಂದ ಅಂಬರೀಷನೆಂಬ ನಾಮವು ಅನ್ವರ್ಥಕವಾಗಿದ್ದಿತು.

1) "ಅಂಬಾದಿಕಂ ರೀಷಂ ನಶ್ವರಮಿತಿ ಜ್ಞಾನಮಸ್ಯಾಸ್ತಿ" — ತಾಯಿ ಮುಂತಾದ ಬಂಧುಗಳೆಲ್ಲರೂ ನಶ್ವರರು ಎಂಬ ಜ್ಞಾನವುಳ್ಳವನು ಅಂಬರೀಷನು.
2) "ಅಂಬರವತ್ ಈಷಾ ಇಚ್ಛಾ ಯಸ್ಯ ಸಃ" — ಆಕಾಶದಂತೆ ಜ್ಞಾನಿಯು.
3) "ಅಂ ಬ್ರಹ್ಮ, ತಸ್ಯಬರಿಃವರಿ : ವರುಣಂ ತತ್ರ ಈಷಾ ಇಚ್ಛಾ ಯಸು ಸಃ" — ಪರಬ್ರಹ್ಮನ ಭಜನೆಯಲ್ಲಿ ಇಚ್ಛೆಯುಳ್ಳವನು ಅಂಬರೀಷನು

ಅಂಬರೀಷರಾಜನು ಸಪತ್ನೀಕನಾಗಿ ಪ್ರತಿಪಕ್ಷದಲ್ಲಿಯೂ ದಶಮ್ಯಾದಿ ದಿನ ತ್ರಯದ ವ್ರತವನ್ನು ಮಾಡುತ್ತಿದ್ದು, ಪ್ರತಿವರ್ಷವೂ ಕಾರ್ತಿಕ, ಶ್ರಾವಣ, ಮಾಘಮಾಸಗಳ ಪೈಕಿ ಯಾವುದಾದರೂ ಒಂದು ಮಾಸದಲ್ಲಿ ವಿಶೇಷವಾಗಿ ಉತ್ಸವ ವನ್ನು ಅಂದರೆ ಮಂಟಪ ನಿರ್ಮಾಣ, ಹರಿಪೂಜೆ, ಬ್ರಾಹ್ಮಣ ಸಂತರ್ಪಣೆ ಮುಂತಾ ದುವನ್ನು ಮಾಡಿ ಹರಿದಿನ ವ್ರತವನ್ನು ಮುಗಿಸಿ, ತಿರುಗಿ ಆರಂಭಿಸುತ್ತಿದ್ದನು. ಒಮ್ಮೆ ಕಾರ್ತಿಕಶುದ್ಧ ಏಕಾದಶೀ ಉಪವಾಸ ಮಾಡಿ, ದ್ವಾದಶಿಯ ದಿನ ಯಮುನೆ ಯಲ್ಲಿ ಸ್ನಾನಮಾಡಿ, ಮಧುವನದಲ್ಲಿ ಮಹಾವೈಭವದಿಂದ ಶ್ರೀಹರಿಯ ಪೂಜೆ ಯನ್ನು ಮಾಡಿ ಬ್ರಾಹ್ಮಣರಿಗೆ ಆರುನೂರು ಕೋಟಿ ಗೋವುಗಳನ್ನು ದಾನಮಾಡಿ, ಭೋಜನ ಮಾಡಿಸಿ, ತಾನೂ ಪಾರಣೆ ಮಾಡಲು ಸಿದ್ಧನಾದನು. ಅದೇ ಸಮಯಕ್ಕೆ ದುರ್ವಾಸರು ಅಲ್ಲಿಗೆ ಅತಿಥಿಯಾಗಿ ಬಂದರು. ಅವರನ್ನು ಪೂಜಿಸಿದ ರಾಜನು ಅಲ್ಲಿಯೇ ಭೋಜನ ಮಾಡಬೇಕೆಂದು ಪ್ರಾರ್ಥಿಸಿಕೊಂಡನು. ದುರ್ವಾಸರು ಒಪ್ಪಿ ಸ್ನಾನ ಮತ್ತು ನಿತ್ಯಕರ್ಮಗಳನ್ನು ಮಾಡಲು ಯಮುನೆಗೆ ಹೋಗಿ ಅವುಗಳನ್ನೆಲ್ಲ ಪೂರೈಸಿಕೊಂಡು ಜಲದಲ್ಲಿ ಮುಳುಗಿ ಪರಬ್ರಹ್ಮನನ್ನು ಧ್ಯಾನಿಸುತ್ತಾ ಇದ್ದುಬಿಟ್ಟರು. ಅಷ್ಟರಲ್ಲಿ ದ್ವಾದಶೀ ತಿಥಿಯು ಅರ್ಧಮುಹೂರ್ತ ಮಾತ್ರ ಉಳಿದಿತ್ತು. ಶ್ರೀಹರಿಗೆ

ಪ್ರಿಯವಾದ ದ್ವಾದಶೀತಿಥಿಯಲ್ಲಿಯೇ ಪಾರಣೆ ಮಾಡದಿದ್ದರೆ ವ್ರತಭಂಗವಾಗುವುದು. ಆಮಂತ್ರಿತ ಬ್ರಾಹ್ಮಣರನ್ನು ಬಿಟ್ಟು ಊಟಮಾಡುವುದು ಧರ್ಮವಿರುದ್ಧವು— ಎಂದು ಸ್ಮೃತಿಯ ವಚನವಿದೆ. ಆದ್ದರಿಂದ ಜಲಪಾನದಿಂದ ಸಕಾಲದಲ್ಲಿ ಪಾರಣೆ ಮಾಡಿದಂತಾಗಿ ವ್ರತಭಂಗವಾಗುವುದಿಲ್ಲ. ಮತ್ತು ಭೋಜನಮಾಡಿದಂತೆಯೂ ಆಗುವು ದಿಲ್ಲವಾಗಿ ಅತಿಥಿಯನ್ನು ತಿರಸ್ಕರಿಸಿದಂತಾಗುವುದಿಲ್ಲ. ಹೀಗೆ ವಿಚಾರ ಮಾಡಿ ಅಂಬರೀಷರಾಜನು ಜಲಪಾನಮಾಡಿ ದುರ್ವಾಸರ ಬರುವಿಕೆಯನ್ನೇ ನಿರೀಕ್ಷಿಸು ತ್ತಿದ್ದನು.

ಅಷ್ಟರಲ್ಲಿ ದುರ್ವಾಸರು ಬಂದು, ರಾಜನು ಮಾಡಿದ ಜಲಪಾರಣೆಯನ್ನು ತಿಳಿದು ಕೋಪಗೊಂಡು "ನನ್ನನ್ನು ಆಮಂತ್ರಿಸಿ, ನನ್ನನ್ನು ಬಿಟ್ಟು ಪಾರಣೆಯನ್ನು ಮಾಡಿರುವೆಯಾದ್ದರಿಂದ ರಾಜನೇ ! ಈಗಲೇ ಅದಕ್ಕೆ ತಕ್ಕಪ್ರತಿಫಲವನ್ನು ತೋರಿ ಸುವೆನು" ಎಂದು ಹೇಳಿ ತಮ್ಮ ಜಟೆಯನ್ನು ಕಿತ್ತು ರಾಜನ ಸಂಹಾರಕ್ಕೆ ಒಂದು ಭೂತವನ್ನು ನಿರ್ಮಿಸಿದರು. ಆಗ ಅಂಬರೀಷನು ಭೂತವನ್ನು ನೋಡಿ ಹೆದರದೆ ಭಕ್ತಿ ಯಿಂದ ಶ್ರೀಹರಿಯನ್ನು ಧ್ಯಾನಿಸುತ್ತ ಕದಲದೆ ನಿಂತಲ್ಲೇ ನಿಂತುಬಿಟ್ಟನು. ಅಂಬ ರೀಷನನ್ನು ರಕ್ಷಿಸುವುದಕ್ಕಾಗಿ ಪರಮಾತ್ಮನು ಸುದರ್ಶನಚಕ್ರವನ್ನು ಕಳುಹಿಸಿದನು. ಅದು ಬಂದು ತಕ್ಷಣ ಆ ಭೂತವನ್ನು ನಾಶಮಾಡಿ, ದುರ್ವಾಸರನ್ನು ದಹಿಸುವುದ ಕ್ಕಾಗಿ ಅವರ ಬೆನ್ನಟ್ಟಿ ಬಂದಿತು. ಆಗ ದುರ್ವಾಸರು ಹೆದರಿ ಪ್ರಾಣರಕ್ಷಣೆಗಾಗಿ ಓಡ ಲಾರಂಭಿಸಿದರು. ಅವರು ಹೋದಕಡೆಯಲ್ಲೆಲ್ಲ ಚಕ್ರವು ಬೆನ್ನಟ್ಟಿ ಬರುತ್ತಿತ್ತು ಭೂಮಿ, ಸ್ವರ್ಗ, ಸಮುದ್ರ ಪಾತಾಳ ಮೊದಲಾದ ಲೋಕಗಳಿಗೆಲ್ಲ. ಓಡಿ ಹೋದರು ಚಕ್ರವು ಬಿಡದೆ ಅವರನ್ನು ಹಿಂಬಾಲಿಸಿತು. ಕೊನೆಗೆ ದುರ್ವಾಸರು ಸತ್ಯಲೋಕಕ್ಕೆ ಹೋಗಿ ಬ್ರಹ್ಮದೇವರಲ್ಲಿ ಮರೆಹೊಕ್ಕರು.

ಬ್ರಹ್ಮ :- ಶ್ರೀಹರಿಯು ಈ ಚಕ್ರದಿಂದ ನಿನ್ನ ಮಾತ್ರವೇ ಅಲ್ಲ ನಮ್ಮನ್ನೂ ಸಂಹರಿಸುವನು. ನಾನು, ಶಿವ, ದಕ್ಷ, ಇಂದ್ರಾದಿಗಳೆಲ್ಲರೂ ಶ್ರೀಹರಿಯ ಅಪ್ಪಣೆ ಯನ್ನು ತಲೆಯ ಮೇಲೆ ಹೊತ್ತು ಅವನಲ್ಲಿಯೇ ಶರಣಾಗತರಾಗಿರುವೆವು. ಆದ್ದರಿಂದ ಹರಿಭಕ್ತ ದ್ರೋಹಿಯಾದ ನಿನ್ನನ್ನು ರಕ್ಷಿಸಲು ನಾವಾರೂ ಸಮರ್ಥರಲ್ಲ.

ಬಳಿಕ ದುರ್ವಾಸರು ಚಕ್ರದ ತಾಪವನ್ನು ಸಹಿಸಲಾರದೆ ಕೈಲಾಸಕ್ಕೆ ಹೋಗಿ ಶಿವನನ್ನು ಮರೆಹೊಕ್ಕರು.

ಶಿವ :— ಕಂದ ದುರ್ವಾಸನೇ ! ನಾವಾರೂ ನಿನ್ನನ್ನು ರಕ್ಷಿಸಲು ಸಮರ್ಥ ರಲ್ಲ. ಸೃಷ್ಟಿಲಯಾದಿಗಳೆಲ್ಲ ಶ್ರೀಹರಿಯ ಅಧೀನಗಳು. ಬ್ರಹ್ಮಾಂಡ ಕೋಟಿಗಳೆಲ್ಲ ಆ ಶ್ರೀಹರಿಯನ್ನು ಆಶ್ರಯಿಸಿವೆ. ಇಂತಹ ಸರ್ವಸ್ವಾಮಿಯಾದ ನಾರಾಯಣನೇ ನಿನ್ನ ವಿಪತ್ತನ್ನು ಪರಿಹರಿಸಲು ಸಮರ್ಥನೇ ಹೊರತು ಮತ್ತಾರೂ ಸಮರ್ಥರಲ್ಲ. ಬ್ರಹ್ಮ

ದೇವರು, ನಾನು ಮೊದಲಾದವರು ಜ್ಞಾನಿಗಳಾದರೂ ಹರಿಯ ಇಚ್ಛಾವರಣಬದ್ಧ ರಾಗಿ ಅವನ ಮಹಿಮೆಯನ್ನು ಸಂಪೂರ್ಣವಾಗಿ ತಿಳಿಯಲಾರೆವು. ನೀನು ಶ್ರೀಹರಿಗೇ ಶರಣು ಹೋಗು. ಅವನೇ ನಿನಗೆ ಸುಖವುಂಟು ಮಾಡುವನು.

(ದುರ್ವಾಸರು ಇನ್ನೆಲ್ಲಿಗೂ ಹೋಗುವ ಆಶೆಯನ್ನು ಬಿಟ್ಟು ವೈಕುಂಠಕ್ಕೆ ಹೋಗಿ ಶ್ರೀಹರಿಯ ಪಾದಗಳ ಮೇಲೆ ಬಿದ್ದು)

**ದುರ್ವಾಸ :** ಅಚ್ಯುತಾನಂತನೇ ! ಸುಜನೇಷ್ಟಪ್ರಭುವೇ ! ಸರ್ವವಶೀ ಕರಣ ಶಕ್ತನೇ ! ಅಪರಾಧಿಯಾದ ನನ್ನನ್ನು ರಕ್ಷಿಸು. ದೇವ ! ನಿನ್ನ ಮಹಿಮೆಯನ್ನು ಅರಿಯದೆ ನಿನ್ನ ಭಕ್ತನಿಗೆ ಕೇಡು ಮಾಡಲು ಯೋಚಿಸಿದೆನು. ಈ ಪಾಪಕ್ಕೆ ಪ್ರಾಯ ಶ್ಚಿತ್ತ ಮಾಡು. ನರಕದಲ್ಲಿ ನರಳುವವನೂ ನಿನ್ನ ನಾಮೋಚ್ಚಾರಣೆ ಮಾಡಿ ನರಕ ದಿಂದ ಪಾರಾಗುವನೆಂದ ಬಳಿಕ ನಿನ್ನ ಸಾಕ್ಷಾದ್ದರ್ಶನವು ಸಕಲ ಪಾಪಗಳನ್ನೂ ಪರಿ ಹರಿಸುವುದೇನು ದೊಡ್ಡದು ? ನನ್ನ ಪಾಪವನ್ನು ಪರಿಹರಿಸಿ ಕಾಪಾಡು ! ಎಂದು ಬೇಡುವೆನು.

**ಶ್ರೀಭಗವಾನ್ :–** ನಾನು ಭಕ್ತಪರಾಧೀನನು. ನನಗೆ ಪ್ರಿಯರಾದ ಭಕ್ತರು ನನ್ನ ಮನಸ್ಸನ್ನು ತಮ್ಮ ವಶಮಾಡಿಕೊಂಡಿರುವರು. ಭಕ್ತರನ್ನು ಬಿಟ್ಟು ಬದುಕಲು ನಾನಿಚ್ಛಿಸುವುದಿಲ್ಲ. ಇನ್ನು ಲಕ್ಷ್ಮಿಯ ವಿಷಯದಲ್ಲಿ ಹೇಳುವುದೇನು ? ಭಕ್ತರಿಗೆ ನಾನೇ ಗತಿ. ಪತ್ನೀಪುತ್ರದ್ರವ್ಯಾದಿಗಳನ್ನು ಬಿಟ್ಟು ನನ್ನನ್ನೇ ಶರಣು ಹೊಂದಿರುವ ನನ್ನ ಭಕ್ತರನ್ನು ನಾನು ಹೇಗೆ ತಾನೇ ಉಪೇಕ್ಷಿಸಲಿ ? ಸಮದರ್ಶಿಗಳೂ, ಸಾಧುಗಳೂ ಆದ ನನ್ನ ಭಕ್ತರು ನನ್ನನ್ನು ವಶಮಾಡಿಕೊಳ್ಳುವರು. ಅವರಿಗೆ ನಾನು ಮುಕ್ತಿಯನ್ನು ಕೊಟ್ಟರೂ ಅವರು ಅದನ್ನು ಒಲ್ಲರು ! ಇನ್ನು ಸ್ವರ್ಗಾದಿಗಳನ್ನು ಅವರು ಬಯಸು ವರೆ ? ಜ್ಞಾನಿಗಳಿಗೆ ನಾನು ಪ್ರಿಯ. ನನಗೆ ಜ್ಞಾನಿಗಳು ಪ್ರಿಯರು. ವಿಪ್ರನೇ ! ನೀನೂ ಶರಣಾಗತನಾಗಿರುವುದರಿಂದ ನಿನ್ನ ರಕ್ಷಣೋಪಾಯವನ್ನು ಹೇಳುವೆನು ಕೇಳು ! ಭಕ್ತಾಗ್ರೇಸರನಾದ ಅಂಬರೀಷನ ಬಳಿಗೇ ಹೋಗಿ ಕ್ಷಮೆಯನ್ನು ಬೇಡು ! ತಾಪವು ಶಾಂತವಾಗಿ ನಿನಗೆ ಕ್ಷೇಮವುಂಟಾಗುವುದು.

**ಶುಕ :–** ಹರಿಯು ಹೇಳಿದಂತೆ ದುರ್ವಾಸರು ಬಂದು ಅಂಬರೀಷನ ಪಾದ ವನ್ನು ಹಿಡಿದು ಸ್ತುತಿಸಲಾರಂಭಿಸಿದರು. ರಾಜನು ಲಜ್ಜಿತನಾಗಿ, ದುರ್ವಾಸರಿಗೆ ಬಂದ ದುಃಖವನ್ನು ನೋಡಿ ಸಹಿಸಲಾರದೆ ಚಕ್ರವನ್ನು ಸ್ತುತಿಸುತ್ತಾನೆ :–

ಸುದರ್ಶನವೆ ! ಪಂಚಭೂತ, ಶಬ್ದಾದಿಗಳು, ಸೂರ್ಯಾದಿ ಇಂದ್ರಿಯಾಭಿಮಾನಿ ಗಳು ಇವರೆಲ್ಲರ ಸತ್ತೆಯೂ ನಿನ್ನಾಧೀನವಾಗಿರುವುದು. ಅವರು ನಿನ್ನ ಶಕ್ತಿಯಿಂದಲೇ

ಅವರವರ ಕಾರ್ಯಗಳನ್ನು ಮಾಡುತ್ತಿರುವರು. ಸಹಸ್ರ ದಳಗಳುಳ್ಳ, ಹರಿ ಪ್ರಿಯನಾದ ನಿನಗೆ ನಮಸ್ಕಾರ ! ಸರ್ವಾಸ್ತ್ರಘಾತಿಯೂ, ಅನ್ನಪತಿಯೂ ಆದ ನೀನು ದುರ್ವಾಸ ಬ್ರಾಹ್ಮಣನಿಗೆ ಮಂಗಳವನ್ನುಂಟು ಮಾಡು ! ನೀನೇ ಧರ್ಮ, ಸತ್ಯ, ಯಜ್ಞ, ಯಜ್ಞ ಭೋಕ್ತೃ, ಲೋಕಪಾಲಕನು, ಸರ್ವಸ್ವಾಮಿಯು ಮತ್ತು ಚಕ್ರಕ್ಕೆ ಒಲವನ್ನು ಕೊಡುವವನೂ ಆಗಿರುವೆ. ಸಕಲ ಧರ್ಮಮರ್ಯಾದಾ ಸ್ಥಾಪಕನೂ, ಅಧರ್ಮಿಷ್ಠರಾದ ಅಸುರದಾಹಕನೂ, ತ್ರೈಲೋಕ್ಯ ರಕ್ಷಕನೂ, ಅತ್ಯುಜ್ವಲ ತೇಜಸ್ವಿಯೂ, ಮನೋ ವೇಗವುಳ್ಳವನೂ ಮತ್ತು ಅದ್ಭುತಕರ್ಮನೂ ಆದ ನಿನಗೆ ನಮಸ್ಕಾರ ! ವೇದಪ್ರತಿ ಪಾದ್ಯನೇ ! ದೇದೀಪ್ಯಮಾನತೇಜಸ್ಸಿನಿಂದ ಅಜ್ಞಾನಾಂಧಕಾರವನ್ನು ನಾಶಮಾಡ ತಕ್ಕವನೂ, ಮಹಾತ್ಮರ ದೃಷ್ಟಿ ಮತ್ತು ಪ್ರಕಾಶಗಳೆರಡನ್ನೂ ಸ್ತಂಭನ ಮಾಡತಕ್ಕ ವನೂ, ಯಾರಿಂದಲೂ ನಿರಾಕರಿಸಲು ಅಶಕ್ಯವಾದ ಮಹಿಮೆಯುಳ್ಳವನೂ ಆಗಿರುವೆ. ಜಗದ್ರಕ್ಷಕ ಸುದರ್ಶನನೆ ! ಶ್ರೀಹರಿಯು ಸಜ್ಜನರಕ್ಷಣೆಗಾಗಿಯೂ, ದುರ್ಜನರ ಶಿಕ್ಷೆ ಗಾಗಿಯೂ ನಿನ್ನನ್ನು ನಿಯಮಿಸಿರುವನು ಭಕ್ತರ ಅಪರಾಧವನ್ನು ಸಹಿಸತಕ್ಕ ನೀನು ನಮ್ಮ ವಂಶಕ್ಕೆ ಭಾಗ್ಯವನ್ನುಂಟುಮಾಡತಕ್ಕವನೂ, ಶರಣಾಗತನೂ ಆದ ಬ್ರಾಹ್ಮಣ ನನ್ನು ರಕ್ಷಿಸಿ ಅನುಗ್ರಹಿಸು. ನಾನು ಮಾಡಿದ ದಾನ, ಯಜ್ಞ, ಸ್ವಧರ್ಮ ಇವುಗಳಿಂದ ಶ್ರೀಹರಿಯು ಸಂತುಷ್ಟನಾಗಿದ್ದರೆ, ನಮ್ಮ ವಂಶವು ಬ್ರಾಹ್ಮಣರನ್ನು ಹರಿಯ ಪ್ರತಿಮೆ ಗಳೆಂದು ಭಾವಿಸಿದ್ದರೆ ದುರ್ವಾಸರು ಸಂತಾಪರಹಿತರಾಗಿರಲಿ. ಶ್ರೀಹರಿಯು ಗುಣ ಪೂರ್ಣನು, ಸಕಲ ಸ್ವಾಮಿಯು ಎಂಬ ಜ್ಞಾನದಿಂದ, ನಾನು ಮಾಡಿದ ಭಕ್ತಿಯಿಂದ ಭಗವಂತನು ಪ್ರೀತನಾಗಿದ್ದ ಪಕ್ಷದಲ್ಲಿ ಈ ಬ್ರಾಹ್ಮಣನು ಸಂತಾಪರಹಿತನಾಗಲಿ.

**ಶುಕ** :– ಹೀಗೆ ಅಂಬರೀಷನು ಸ್ತುತಿಸಲಾಗಿ, ಆಕ್ಷಣವೇ ಸುದರ್ಶನವು ಶಾಂತವಾಯಿತು. ದುರ್ವಾಸರು ಚಕ್ರದ ಬೇಗೆಯಿಂದ ಮುಕ್ತರಾಗಿ, ಅಂಬರೀಷ ನನ್ನು ಆಶೀರ್ವದಿಸಿ "ಹರಿಭಕ್ತರ ಮಹಿಮೆಯನ್ನು ಈಗ ಕಂಡೆನು. ನಾನು ಅಪರಾಧವನ್ನು ಮಾಡಿದ್ದರೂ ಅದನ್ನು ಗಮನಿಸದೆ ನನ್ನ ಪ್ರಾಣಗಳನ್ನುಳಿಸಿದೆ" ಎಂದು ಹೊಗಳಿದರು. ಅದುವರೆಗೂ ಭೋಜನವನ್ನು ಮಾಡದೆ ಉಪವಾಸವಿದ್ದ ಅಂಬರೀಷನು ದುರ್ವಾಸರಿಗೆ ಭೋಜನವನ್ನು ಮಾಡಿಸಿ ತೃಪ್ತಿಗೊಳಿಸಿದನು.

**ದುರ್ವಾಸರು** :– ರಾಜನೇ ! ಊಟ ಮಾಡೇಳು ! ನಿನ್ನ ದರ್ಶನ, ಸ್ಪರ್ಶನ, ಮಧುರಾಲಾಪ ಮುಂತಾದುವುಗಳಿಂದ ಪ್ರೀತನಾದೆನು. ನಿನ್ನ ಆತಿಥ್ಯದಿಂದ ಮತ್ತು ನಿನ್ನ ಜ್ಞಾನದಿಂದ ಸಂತುಷ್ಟನಾದೆನು. ನಿನ್ನ ಸತ್ಕರ್ಮಗಳನ್ನು ಸ್ವರ್ಗದಲ್ಲಿರುವ ದೇವತಾಸ್ತ್ರೀಯರೂ ಮತ್ತು ಭೂಮಿಯಲ್ಲಿರುವ ಸಜ್ಜನರೂ ಹೊಗಳುವರು.

**ಶುಕ** :– ಹೀಗೆ ಹೇಳಿ ರಾಜನ ಅನುಮತಿಯನ್ನು ಪಡೆದು ದುರ್ವಾಸರು ಬ್ರಹ್ಮಲೋಕಕ್ಕೆ ಹೊರಟು ಹೋದರು. ಒಂದು ವರುಷ ಜಲಪಾನದಿಂದಲೇ ಇದ್ದ

ಅಂಬರೀಷನು ಬಳಿಕ ಶೇಷಾನ್ನವನ್ನುಂಡು ವಿಪ್ರವ್ಯಸನ ಪರಿಹಾರಕ್ಕೆ ಮತ್ತು ತನಗೆ ಧೈರ್ಯಾದಿಗಳುಂಟಾದುದಕ್ಕೆಲ್ಲ ಭಗವದನುಗ್ರಹವೇ ಕಾರಣವೆಂದು ತಿಳಿದನು. ಪರೀಕ್ಷಿದ್ರಾಜನೇ ! ಅನೇಕ ಗುಣಗಳುಳ್ಳ ಅಂಬರೀಷರಾಜನು ಬ್ರಹ್ಮಾದಿನಿಯಾಮಕನೂ, ಮುಕ್ತಿಪ್ರದನೂ ಆದ ವಾಸುದೇವನಲ್ಲಿ ಅಶ್ವಮೇಧಾದಿಕರ್ಮಗಳನ್ನು ಅರ್ಪಿಸಿ ಭಕ್ತಿಯನ್ನು ಚೆನ್ನಾಗಿ ಹೊಂದಿದನು. ಮುಂದೆ ರಾಜ್ಯವನ್ನು ಪುತ್ರರಿಗೊಪ್ಪಿಸಿ ಹರಿಯಲ್ಲಿ ಚಿತ್ತವಿಟ್ಟು ವನಕ್ಕೆ ಹೋಗಿ ಧ್ಯಾನಾಸಕ್ತನಾದನು.

ಮಹಾಪುಣ್ಯಪ್ರದವಾದ ಅಂಬರೀಷೋಪಾಖ್ಯಾನವನ್ನು ಹೇಳುವವನೂ, ಧ್ಯಾನಿಸುವವನೂ ಭಗವದ್ಭಕ್ತನಾಗುವನು.

## ಆರನೆಯ ಅಧ್ಯಾಯ ಮುಗಿದುದು

ಅಂಬರೀಷನಿಗೆ ವಿರೂಪ, ಕೇತುಮಾನ್ ಮತ್ತು ಶಂಭು ಎಂಬ ಮೂವರು ಪುತ್ರರು. ವಿರೂಪನಿಗೆ ಪೃಷದಶ್ವನು ಮಗನು. ಅವನ ಮಗ ರಥೀತರ. ಅವನಿಗೆ ಮಕ್ಕಳಿಲ್ಲ. ಸಂತಾನಕ್ಕಾಗಿ ಅಂಗಿರಾಋಷಿಗಳನ್ನು ಪ್ರಾರ್ಥಿಸಿದನು. ಅವರು ನಿಯೋಗ ಪದ್ಧತಿಯಿಂದ ಮಕ್ಕಳನ್ನು ಹುಟ್ಟಿಸಿದರು. ಆ ಮಕ್ಕಳು ರಥೀತರನ ಹೆಂಡತಿಯಲ್ಲಿ ಹುಟ್ಟಿದ್ದರಿಂದ ರಥೀತರಗೋತ್ರದವರೆಂದೂ, ಅಂಗಿರಸ್ಸಿನಿಂದ ಹುಟ್ಟಿದ್ದರಿಂದ ಆಂಗೀರಸರೆಂದೂ ಪ್ರಸಿದ್ಧರಾದರು.

ವೈವಸ್ವತನು ಸೀನುವಾಗ ಅವನ ಮೂಗಿನಿಂದ ಇಕ್ಷ್ವಾಕು ಹುಟ್ಟಿದನು. ಅವನಿಗೆ ವಿಕುಕ್ಷಿ, ನಿಮಿ, ದಂಡ ಇವರೇ ಮೊದಲಾದ ನೂರುಮಂದಿ ಮಕ್ಕಳಾದರು. ಒಂದು ದಿನ ಇಕ್ಷ್ವಾಕುವು ಅಷ್ಟಕಶ್ರಾದ್ಧಕ್ಕೆ ಮಾಂಸವನ್ನು ತರುವಂತೆ ತನ್ನ ಪುತ್ರನಾದ ವಿಕುಕ್ಷಿಗೆ ಅಪ್ಪಣೆ ಮಾಡಿದನು ಅವನು ಕಾಡಿನಲ್ಲಿ ಮೃಗಗಳನ್ನು ಕೊಂದು, ಆಯಾಸ ಮತ್ತು ಹಸಿವೆಯಿಂದ ಬಳಲಿ ಶ್ರಾದ್ಧಾರ್ಹವಾದ ಮೊಲದಮಾಂಸವನ್ನು ತಿಂದು ಉಳಿದುದನ್ನು ತಂದೆಗೆ ತಂದು ಕೊಟ್ಟನು. ವಸಿಷ್ಠರು ಪರಿಶುದ್ಧಿಗಾಗಿ ಮಾಂಸ ಪ್ರೋಕ್ಷಣೆಯ ಕಾಲದಲ್ಲಿ ಅದನ್ನು ಉಚ್ಛಿಷ್ಟವೆಂದು ಹೇಳಿದರು. ಇಕ್ಷ್ವಾಕುವು ಕುಪಿತನಾಗಿ ವಿಕುಕ್ಷಿಯನ್ನು ದೇಶದಿಂದ ಹೊರಗೆ ಹಾಕಿದನು. ಮುಂದೆ ಇಕ್ಷ್ವಾಕುವು ಯೋಗದಿಂದ ದೇಹವನ್ನು ಬಿಟ್ಟು ಪರಬ್ರಹ್ಮನನ್ನು ಹೊಂದಿದನು.

ವಿಕುಕ್ಷಿಯು ರಾಜನಾಗಿ ಭಗವತ್ಪ್ರೀತಿಗಾಗಿ ಅನೇಕ ಯಾಗಗಳನ್ನು ಮಾಡುತ್ತ **ಶಶಾದ**ನೆಂದು ಪ್ರಸಿದ್ಧನಾಗಿದ್ದನು. ಅವನಿಗೆ ಪುರಂಜಯನೆಂಬ ಮಗನಾದನು. ದೇವತೆಗಳಿಗೂ, ದೈತ್ಯರಿಗೂ ಯುದ್ಧ ನಡೆದಾಗ ಪುರಂಜಯನು ವೃಷಭರೂಪಿಯಾದ

ಇಂದ್ರನ ಹೆಗಲ ಮೇಲೆ ಕುಳಿತು ದೈತ್ಯರನ್ನು ಕೊಂದು ಅವರ ಸರ್ವ ಆಸ್ತಿಯನ್ನೂ ಇಂದ್ರನಿಗೆ ಕೊಟ್ಟನು. ಇದರಿಂದ ಅವನು ಇಂದ್ರವಾಹ. ಕಕುತ್ಸ್ಥನೆಂದು ಪ್ರಸಿದ್ಧನಾದನು. ಈ ಪುರಂಜಯನಿಗೆ ಅನೇನಸ್ಸು ಮಗನು. ಅವನ ಮಗ ಪೃಥು. ಅವನ ಪುತ್ರ ವಿಶ್ವಗಂಧಿ. ತತ್ಸುತ ಚಂದ್ರ. ತತ್ಸುತ ಯುವನಾಶ್ವ. ಅವನ ಮಗ ಶಾವಸ್ತೀ ಪಟ್ಟಣವನ್ನು ನಿರ್ಮಿಸಿದ ಶಾವಸ್ತಿ. ಅವನ ಮಗ ಬೃಹದಶ್ವ. ಅವನ ಮಗನೇ ಕುವಲಯಾಶ್ವ. ಇವನಿಗೆ ಇಪ್ಪತ್ತೊಂದು ಸಾವಿರ ಮಂದಿ ಮಕ್ಕಳು. ಈ ಪುತ್ರರೊಡನೆ ಕುವಲಯಾಶ್ವನು ದುಂಧು ಎಂಬ ಅಸುರನನ್ನು ಕೊಂದುದರಿಂದ 'ದುಂಧುಮಾರನೆಂದು ಪ್ರಸಿದ್ಧನಾದನು. ದೃಢಾಶ್ವ, ಕಪಿಲಾಶ್ವ ಮತ್ತು ಭದ್ರಾಶ್ವ ಎಂಬ ಮೂವರು ಪುತ್ರರಪಿನಾ ಉಳಿದವರೆಲ್ಲ ದುಂಧುವಿನ ಮುಖಾಗ್ನಿಯಿಂದ ದಗ್ಧರಾದರು. ಹರ್ಯಶ್ವನು ದೃಢಾಶ್ವನ ಮಗನು. ಅವನಿಗೆ ನಿಕುಂಭ. ಅವನಿಗೆ ಬರ್ಹಣಾಶ್ವ. ಅವನಿಗೆ ಕೃಶಾಶ್ವ. ಅವನಿಗೆ ಸೇನಜಿತ್. ಅವನಿಗೆ ಯುನಾಶ್ವನು ಮಗನು. ಯುವನಾಶ್ವನು ಮಕ್ಕಳಿಲ್ಲದ ದುಃಖದಿಂದ ನೂರಾರು ಮಂದಿ ಪತ್ನಿಯರೊಡನೆ ಕಾಡಿಗೆ ಹೋದನು. ಅಲ್ಲಿದ್ದ ಋಷಿಗಳು ಯುವನಾಶ್ವನಿಗೆ ಪುತ್ರನಾಗಲಿ ಎಂದು ಇಂದ್ರ ದೇವತಾಕವಾದ ಪುತ್ರೇಷ್ಟಿಯನ್ನು ನಡೆಸುತ್ತಿದ್ದರು. ಒಂದು ದಿನ ರಾತ್ರಿ ಯುವನಾಶ್ವನು ಬಾಯಾರಿ ಋಷಿಗಳ ಯಜ್ಞ ಶಾಲೆಗೆ ಪ್ರವೇಶಿಸಿ, ಬ್ರಾಹ್ಮಣರೆಲ್ಲರೂ ನಿದ್ರಿಸುತ್ತಿರಲು, ಗರ್ಭೋತ್ಪತ್ತಿಗೆ ಮಂತ್ರಿಸಿಟ್ಟದ್ದ, ಯುವನಾಶ್ವನ ಪತ್ನಿಯರಿಗೆ ಕೊಡಬೇಕೆಂದಿಟ್ಟಿದ್ದ ಮಂತ್ರಜಲವನ್ನು ಕುಡಿದು ಬಿಟ್ಟನು. ಬೆಳಗಾಗ ಮುನಿಗಳು ಬರಿಯದಾದ ಕಲಶವನ್ನು ನೋಡಿ, ರಾಜನೇ ಕುಡಿದಿರುವನೆಂದು ತಿಳಿದು 'ದೈವ ಬಲವೇ ಬಲವು ಪುರುಷ ಬಲವು ಬಲವಲ್ಲ' ಎಂದು ಹೇಳುತ್ತ ವಿಸ್ಮಿತರಾಗಿ ಶ್ರೀಹರಿಗೆ ಕೈಮುಗಿದರು. ಜನನ ಕಾಲವು ಬಂದಾಗ ಆ ಯುವನಾಶ್ವನ ಹೊಟ್ಟೆಯ ಬಲ ಭಾಗವನ್ನು ಭೇದಿಸಿಕೊಂಡು ಶಿಶುವು ಹೊರಕ್ಕೆ ಬಂದಿತು. ಸ್ತನ್ಯಪಾನಕ್ಕಾಗಿ ಅಳುತ್ತಿರುವ ಶಿಶುವನ್ನು ನೋಡಿ 'ಇದು ಯಾವ ಸ್ತ್ರೀಯ ಸ್ತನ್ಯಪಾನವನ್ನು ಮಾಡಿ ಬದುಕಬೇಕು ಎಂದು ಮುನಿಗಳು ಚಿಂತಿಸುತ್ತಿರಲು, ಆಯಾಗದಿಂದ ಆರಾಧಿತನಾದ ಇಂದ್ರನು ಬಂದು 'ಮಗುವೆ! ಅಳಬೇಡ **ಮಾಂಧಾತಃ** = ನನ್ನನ್ನು ಕುಡಿ' ಎಂದು ಹೇಳಿ ತನ್ನ ಅಮೃತ ಸ್ರಾವಿಯಾದ ತೋರಬೆರಳನ್ನು ಮಗುವಿನ ಬಾಯಲ್ಲಿಟ್ಟನು. ಅದನ್ನು ಚೀಪಿ ಅಮೃತಪಾನವನ್ನು ಮಾಡಿದ ಮಗುವಿಗೆ **ಮಾಂಧಾತಾ** ಎಂಬ ಹೆಸರಾಯಿತು. ಯುವನಾಶ್ವನ ಹೊಟ್ಟೆಯು ಸೀಳಿಹೋಗಿದ್ದರೂ ಋಷಿ, ದೇವತೆಗಳ ಅನುಗ್ರಹದಿಂದ ಸಾಯದೆ ಬದುಕಿಕೊಂಡನು. ಅವನು ಕಾಲಾಂತರದಲ್ಲಿ ತಪಸ್ಸಿದ್ಧಿಯನ್ನು ಹೊಂದಿ ಮೃತನಾದನು. ಮಾಂಧಾತೃವು ಮುಂದೆ ರಾವಣಾದಿಗಳಿಗೂ ಭಯವನ್ನುಂಟು ಮಾಡುವುದರಿಂದ ಇಂದ್ರನು ಅವನಿಗೆ '**ತ್ರಸದಸ್ಯು**' ಎಂಬ ಬಿರುದು ಕೊಟ್ಟನು. ಮಾಂಧಾತೃ ಸಪ್ತದ್ವೀಪವತೀಭೂಮಿಗೆ ಚಕ್ರವರ್ತಿಯಾಗಿ ಬಹು

ದಕ್ಷಿಣೆಗಳುಳ್ಳ ಅನೇಕ ಯಜ್ಞಗಳನ್ನು ಮಾಡಿ ಪರಮಾತ್ಮನನ್ನು ಸಂತೋಷಪಡಿಸಿದನು. ಶಶಬಿಂದುವಿನ ಮಗಳಾದ ಬಿಂದುಮತಿಯನ್ನು ಮದಿವೆಯಾಗಿ, ಅವಳಲ್ಲಿ ಪುರಕುತ್ಸ, ಅಂಬರೀಷ ಮತ್ತು ಮುಚುಕುಂದರೆಂಬ ಮೂರು ಮಂದಿ ಗಂಡುಮಕ್ಕಳನ್ನೂ ಐವತ್ತು ಮಂದಿ ಹೆಣ್ಣುಮಕ್ಕಳನ್ನೂ ಪಡೆದನು.

ಒಮ್ಮೆ ಸೌಭರಿಮುನಿಗಳು ಯಮುನೆಯಲ್ಲಿ ಮಿಂದು ತಪಸ್ಸನ್ನು ಮಾಡುತ್ತಿದ್ದಾಗ ನೀರಿನಲ್ಲಿ ಗಂಡು ಹೆಣ್ಣು ಮೀನುಗಳು ಸೇರಿ ಸಂಭೋಗದ ಸುಖವನ್ನು ಅನುಭವಿಸುತ್ತಿರುವುದನ್ನು ಕಂಡು. ಸಂಭೋಗೇಚ್ಛೆಯಿಂದ ಮಾಂಧಾತೃವಿನ ಬಳಿಗೆ ಹೋಗಿ ಒಬ್ಬ ಮಗಳನ್ನು ತನಗೆ ಮದಿವೆ ಮಾಡಿಕೊಡೆಂದು ಕೇಳಿದರು. ಇವರು ಮುದುಕರೆಂದು ಭಾವಿಸಿ ರಾಜನು ತನ್ನ ಮಕ್ಕಳಲ್ಲಿ ಯಾವಳು ತಮ್ಮನ್ನು ವರಿಸುವಳೋ ಅವಳನ್ನು ಕೊಡುವುದಾಗಿ ಹೇಳಿದನು. ಈ ಮುದುಕನಾದ ಸೌಭರಿಯನ್ನು ಯಾವಳೂ ವರಿಸಲಾರಳೆಂದು ತಿಳಿದು ರಾಜನು ಹೀಗೆ ಹೇಳಿದನು. ಸೌಭರಿಯು ಒಂದು ಕೋಣೆಯಲ್ಲಿ ತಮ್ಮ ಅಣಿಮಾದಿ ಸಿದ್ಧಿಯಿಂದ ಸುಂದರ ಯುವಕನ ರೂಪವನ್ನು ತಾಳಿ ಕುಳಿತರು. ರಾಜಪುತ್ರಿಯರು ಬಂದು ನೋಡಿ ಎಲ್ಲರೂ ಅವರನ್ನೇ ಮದಿವೆಯಾಗಬೇಕೆಂದು ಕಲಹವಾಡಿದರು. ಕೊನೆಗೆ ರಾಜನು ತನ್ನ ಐವತ್ತು ಮಂದಿ ಹೆಣ್ಣುಮಕ್ಕಳನ್ನೂ ಸೌಭರಿಮುನಿಗಳಿಗೇ ದಾನಮಾಡಿದನು. ಆ ಮುನಿಯು ತನ್ನ ಅಣಿಮಾದಿ ಸಿದ್ಧಿಯಿಂದ ರಾಜವೈಭವಕ್ಕೆ ಸಮನಾದ ಗೃಹ, ಆರಾಮಾದಿಗಳನ್ನು ನಿರ್ಮಿಸಿ ಐವತ್ತು ಮಂದಿ ರಾಜಪುತ್ರಿಯರೊಡನೆ ಬಹುಕಾಲ ಕ್ರೀಡಿಸುತ್ತಿದ್ದನು. ಕೊನೆಗೆ ವಿರಕ್ತನಾಗಿ ಗೃಹಾದಿಗಳನ್ನು ಬಿಟ್ಟು, ಕಾಡಿಗೆ ಹೋಗಿ ಕಠಿಣತಪಸ್ಸನ್ನು ಮಾಡಿ ಇಷ್ಟಿಯ ಅಗ್ನಿಯಿಂದ ದೇಹವನ್ನು ದಹಿಸಿ ಸಾಯುಜ್ಯಮೋಕ್ಷವನ್ನು ಹೊಂದಿದನು. ಅವನ ಪತ್ನಿಯರೆಲ್ಲರೂ ಸಹಗಮನದಿಂದ ಪತಿಯನ್ನು ಅನುಸರಿಸಿದರು.

ಮಾಂಧಾತೃವಿನ ಮಗನಾದ ಅಂಬರೀಷನನ್ನು ಅವನ ಮಾತಾಮಹನಾದ ಶಶಬಿಂದುವು ಪುತ್ರಭಾವದಿಂದ ಸ್ವೀಕರಿಸಿದ್ದನು. ಅಂಬರೀಷನಿಗೆ ಯುವನಾಶ್ವನು ಮಗನು. ಅವನಿಗೆ ಹರಿತನೆಂಬುವನು ಪುತ್ರ.

ಮಾಂಧಾತೃವಿನ ಇನ್ನೊಬ್ಬ ಮಗನಾದ ಪುರುಕುತ್ಸನು ಸರ್ಪಜಾತಿಯ ಕನ್ಯೆಯಾದ ನರ್ಮದೆಯೆಂಬುವಳನ್ನು ಮದಿವೆಯಾಗಿ, ರಸಾತಳಕ್ಕೆ ಹೋಗಿ ನಾಗಲೋಕಕ್ಕೆ ಕೆಡಕು ಮಾಡುತ್ತಿದ್ದ ಗಂಧರ್ವರನ್ನು ಕೊಂದು ಉಪಕಾರ ಮಾಡಿದನು. ಆಗ ನಾಗರು 'ಪುರುಕುತ್ಸನ ವಿಕ್ರಮವನ್ನು ಕೇಳಿದವರಿಗೆ ವಿಷಸರ್ಪದ ಭಯವು ಹೋಗಲಿ' ಎಂಬ ವರವನ್ನು ಅವನಿಗೆ ಕೊಟ್ಟರು. ಪುರುಕುತ್ಸನಿಗೆ ತ್ರಸದಸ್ಯುವು ಮಗನು.

ಅವನಿಗೆ ಅನರಣ್ಯನು ಮಗನು. ಅವನಿಗೆ ಹರ್ಯಶ್ವನು, ಅವನಿಗೆ ಅರುಣನು, ಅವನಿಗೆ ತ್ರಿಬಂಧುರನು, ಅವನಿಗೆ ಸತ್ಯವ್ರತನು ಮಗನು. ಅವನೇ ತ್ರಿಶಂಕು. ವಸಿಷ್ಠರಿಂದ ಚಂಡಾಲನಾಗೆಂಬ ಶಾಪವನ್ನು ಹೊಂದಿ ವಿಶ್ವಾಮಿತ್ರರ ಪ್ರಭಾವದಿಂದ ಸಶರೀರನಾಗಿ ಸ್ವರ್ಗಕ್ಕೆ ಹೋದನು. ದೇವತೆಗಳು ಅವನನ್ನು ಅಲ್ಲಿಂದ ತಳ್ಳಿದರು. ತಲೆಕೆಳಕಾಗಿ ಬೀಳುತ್ತ ಅವನು ವಿಶ್ವಾಮಿತ್ರರನ್ನು ಮರೆಯಿಡಲು ಅವರು ತಮ್ಮ ತಪಃಪ್ರಭಾವದಿಂದ ಸ್ವರ್ಗವೊಂದನ್ನು ಕಲ್ಪಿಸಿ, ಅದಕ್ಕೆ ಅವನನ್ನೇ ಇಂದ್ರನನ್ನಾಗಿ ಮಾಡಿ ಕೆಳಗೆ ಬೀಳದಂತೆ ನಿಲ್ಲಿಸಿದರು. ಈಗಲೂ ಅವನು ನಕ್ಷತ್ರರೂಪದಿಂದ ಕಾಣುತ್ತಿರುವನು. ಈ ತ್ರಿಶಂಕುವಿನ ಮಗನೇ ಹರಿಶ್ಚಂದ್ರನು.

ಹರಿಶ್ಚಂದ್ರನು ಮಾಡಿದ ರಾಜಸೂಯಯಾಗದಲ್ಲಿ ವಿಶ್ವಾಮಿತ್ರರು ದಕ್ಷಿಣೆಯನ್ನು ತೆಗೆದುಕೊಳ್ಳುವ ನೆಪದಲ್ಲಿ ಅವನ ಸರ್ವಸ್ವವನ್ನೂ ಅಪಹರಿಸಿದರು. ಆಗ ವಸಿಷ್ಠರು ವಿಶ್ವಾಮಿತ್ರರನ್ನು ಬಕಪಕ್ಷಿಯಾಗೆಂದು ಶಪಿಸಿದರು. ವಿಶ್ವಾಮಿತ್ರರೂ ವಸಿಷ್ಠರನ್ನು ಪಕ್ಷಿಯಾಗೆಂದು ಶಪಿಸಿದರು. ಪಕ್ಷಿಗಳ ರೂಪದ ಇವರಿಬ್ಬರಿಗೆ ಬಹುಕಾಲ ಯುದ್ಧವು ನಡೆಯಿತು.

ಶ್ರುತಿಬ್ರಾಹ್ಮಣ, ಐದು ಮತ್ತು ಏಳರ ಅಧ್ಯಾಯಗಳಲ್ಲಿ ಉಕ್ತವಾದ ಹರಿಶ್ಚಂದ್ರನ ಚರಿತ್ರೆಯನ್ನು ಹೇಳುತ್ತಾರೆ :-

ಹರಿಶ್ಚಂದ್ರನು ತನಗೆ ಮಗನಾದರೆ ಅವನನ್ನು ಪಶುಮಾಡಿ ಯಜ್ಞಮಾಡುವುದಾಗಿ ಹರಸಿಕೊಂಡನು. ವರುಣನು ಅವನಿಗೊಬ್ಬ ಮಗನಾಗುವಂತೆ ಕರುಣಿಸಿದನು. ಆ ಮಗನೇ ರೋಹಿತನೆಂಬುವನು. ವರುಣನು ಬಂದು ಆ ಮಗುವನ್ನು ಬಲಿಕೊಂಡೆಂದು ಕೇಳಿದನು. ರಾಜನು ಹತ್ತುದಿನ ಕಳೆದಮೇಲೆ ಕೊಡುವೆನೆಂದನು. ಅದು ಕಳೆದಮೇಲೆ ವರುಣನು ಬಂದು ನಿರ್ಬಂಧಿಸಿದನು. ಹರಿಶ್ಚಂದ್ರನು ಮಗುವಿಗೆ ಹಲ್ಲುಹುಟ್ಟಿದ ಮೇಲೆ ಯಾಗಮಾಡಿ ಬಲಿಕೊಡುವುದಾಗಿ ಹೇಳಿದನು. ವರುಣನು ಅದಕ್ಕೂ ಒಪ್ಪಿ ಮಗುವಿಗೆ ಹಲ್ಲು ಹುಟ್ಟಿದಮೇಲೆ ಬಂದು ಕೇಳಿದನು. ರಾಜನು ಹುಟ್ಟಿದ ಹಲ್ಲು ಬಿದ್ದಮೇಲೆ ಯಾಗಮಾಡುವುದಾಗಿ ಮಗನಲ್ಲಿನ ಮೋಹದಿಂದ ಬೇರೆ ಬೇರೆ ನೆಪಗಳನ್ನು ಹೇಳುತ್ತ ಕಾಲವನ್ನು ತಳ್ಳಿದನು. ರೋಹಿತನು ದೊಡ್ಡವನಾದ ಮೇಲೆ, ತನ್ನ ವಿಚಾರದಲ್ಲಿ ತಂದೆಯು ಮಾಡಿದ್ದ ಪ್ರತಿಜ್ಞೆ (ಹರಕೆ) ಯನ್ನು ತಿಳಿದು ಬಿಲ್ಲಿನೊಡನೆ ಕಾಡಿಗೆ ಓಡಿಹೋದನು. ಇದರಿಂದ ಕುಪಿತನಾದ ವರುಣನು ಹರಿಶ್ಚಂದ್ರನಿಗೆ ಮಹೋದರ ರೋಗವನ್ನುಂಟುಮಾಡಿದನು. ತಂದೆಗೆ ರೋಗ ಬಂದಿರುವುದನ್ನು ತಿಳಿದ ರೋಹಿತನು ಅವನನ್ನು ನೋಡಲು ಪಟ್ಟಣಕ್ಕೆ ಹೊರಟನು. ಮಧ್ಯಮಾರ್ಗದಲ್ಲಿ ಇಂದ್ರನು ಬಂದು "ಕುಮಾರ ! ಈಗ ನೀನು ಪಟ್ಟಣಕ್ಕೆ ಹೋಗುವುದು

ಯೋಗ್ಯವಲ್ಲ. ನೀನು ಪುಣ್ಯತೀರ್ಥಗಳಲ್ಲಿ ಸ್ನಾನಮಾಡುತ್ತ ಕ್ಷೇತ್ರ ಮೂರ್ತಿಗಳನ್ನು ಸಂದರ್ಶನ ಮಾಡಿ ಭೂಪ್ರದಕ್ಷಿಣೆ ಮಾಡುತ್ತ ಬಂದರೆ ನಿಮ್ಮ ತಂದೆಯ ರೋಗವು ಪರಿಹಾರವಾಗುವುದು" ಎಂದು ಹೇಳಿ ಅವನನ್ನು ತಡೆದನು. ರೋಹಿತನು ಅದರಂತೆ ಕೆಲವು ವರ್ಷಗಳ ಕಾಲ ತೀರ್ಥಯಾತ್ರೆ ಮಾಡುತ್ತ ಬಂದನು. ಹೀಗೆ ರೋಹಿತನು ಪ್ರತಿವರುಷವೂ ತಂದೆಯನ್ನು ನೋಡಬೇಕೆಂದು ಹೊರಟಾಗಲೆಲ್ಲ ಇಂದ್ರನು ವೃದ್ಧ ಬ್ರಾಹ್ಮಣನ ವೇಷದಿಂದ ಬಂದು ಅವನನ್ನು ತಡೆಯುತ್ತಿದ್ದನು. ಹೀಗೆ ಐದು ವರ್ಷಗಳು ಕಳೆದುವು. ಆರನೆಯ ವರ್ಷ ರೋಹಿತನು ತೀರ್ಥಯಾತ್ರೆಯ ವ್ರತವನ್ನು ಮುಗಿಸಿ ಪಟ್ಟಣಕ್ಕೆ ಹಿಂತಿರುಗುವಾಗ ಅಜೀಗರ್ತಋಷಿಯಿಂದ ಅವನ ಮಧ್ಯಮ ಪುತ್ರನಾದ ಶುನಃಶೇಫನೆಂಬುವನನ್ನು ನೂರು ಗೋವುಗಳನ್ನು ಕೊಟ್ಟು ಕ್ರಯಕ್ಕೆ ತೆಗೆದುಕೊಂಡು ತಂದೆಯ ಬಳಿಗೆ ಬಂದು ತನ್ನ ಬದಲಿಗೆ ಆ ಋಷಿಪುತ್ರನನ್ನು ಪಶುವನ್ನಾಗಿ ಮಾಡಿ ಯಾಗವನ್ನು ಮಾಡೆಂದು ಹೇಳಿ ನಮಿಸಿದನು. ಹರಿಶ್ಚಂದ್ರನು ಶುನಃಶೇಫನನ್ನು ಬಲಿಯ ಪಶುವನ್ನಾಗಿ ಮಾಡಿ, ಹಿಂಸಾರೂಪವಾದ ಯಜ್ಞದಿಂದ ವರುಣಾದಿ ದೇವತೆಗಳಿಗೆ ಹವಿಸ್ಸನ್ನು ಅರ್ಪಿಸಿ ರೋಗದಿಂದ ಮುಕ್ತನಾದನು. ಆ ಯಜ್ಞದಲ್ಲಿ ವಿಶ್ವಾಮಿತ್ರನು ಹೋತೃ ಜಮದಗ್ನಿಯು ಅಧ್ವರ್ಯು. ಅಯಾಸ್ಯ ಋಷಿಯು ಉದ್ಗಾತೃ. ವಸಿಷ್ಠರು ಬ್ರಹ್ಮ. ವಿಶ್ವಾಮಿತ್ರರು ಉಪದೇಶ ಮಾಡಿದ ಇಂದ್ರ ಮತ್ತು ವಿಷ್ಣುವಿನ ಸಂಬಂಧವಾದ ಋಕ್ಕುಗಳನ್ನು ಬಲಿಯ ಕಂಬಕ್ಕೆ ಕಟ್ಟಲ್ಪಟ್ಟಿದ್ದ ಶುನಃಶೇಫನು ಹೇಳಲು ಸಂತುಷ್ಟನಾದ ದೇವೇಂದ್ರನು ಶುನಃಶೇಫನನ್ನು ಬಲಿಯಿಂದ ಬಿಡಿಸಿ ಬಂಗಾರದ ತೇರನ್ನು ಅವನಿಗೆ ಕೊಟ್ಟನು. ಶುನಃಶೇಫನ ಮಹಿಮೆಯನ್ನು 14ನೆಯ ಅಧ್ಯಾಯದಲ್ಲಿ ತಿಳಿಸುವೆನು. ಹರಿಶ್ಚಂದ್ರನು ಸಜ್ಜನರಿಗೆ ಹಿತವನ್ನು ಮಾಡುವುದರಲ್ಲಿ ಅವನಿಗಿರುವ ದಾರ್ಢ್ಯವನ್ನೂ ಮತ್ತು ಸನ್ಮಾರ್ಗವನ್ನು ಬಿಡದ ಧೈರ್ಯವನ್ನೂ ನೋಡಿದ ವಿಶ್ವಾಮಿತ್ರರು ಪ್ರೀತರಾಗಿ ಅವನಿಗೆ ಜ್ಞಾನೋಪದೇಶವನ್ನು ಮಾಡಿದರು ಹರಿಶ್ಚಂದ್ರನು ಮೃತನಾಗುವಾಗ ಹೀಗೆ ಲಯಚಿಂತನೆಯನ್ನು ಮಾಡಿದನು :- ಮನಸ್ಸು ಪೃಥುವಿಯಲ್ಲಿ ಲಯವಾಗುವುದು. ಅದೇ ಕ್ರಮದಲ್ಲಿ ಮಹತ್ತತ್ತ್ವವು ಪ್ರಕೃತಿಯಲ್ಲಿ ಸೇರುವುದು. ಹೀಗೆಂದು ಲಯಚಿಂತನೆಮಾಡಿ ಶ್ರೀಹರಿಯನ್ನು ಅಪರೋಕ್ಷೀಕರಿಸಿ, ಸಂಸಾರದಲ್ಲಿ ಅಭಿಮಾನವನ್ನು ಬಿಟ್ಟು ಅವಿದ್ಯಾಬಂಧನದಿಂದ ಮುಕ್ತನಾಗಿ, ಸತ್ಯಲೋಕದಲ್ಲಿ ಮುಕ್ತಸದೃಶನಾಗಿ ವಾಸಮಾಡಿದನು.

**ಏಳನೆಯ ಅಧ್ಯಾಯ ಮುಗಿದುದು**

ರೋಹಿತನಿಗೆ ಹರಿತನು ಮಗನು. ಅವನ ಮಗನು ಚಂಪನು. ಅವನೇ ಚಂಪಾನಗರಿಯನ್ನು ನಿರ್ಮಿಸಿದನು. ಅವನ ಮಗ ಸುದೇವ. ಅವನ ಮಗ ವಿಜಯ. ಅವನ ಮಗ ತರುಕ. ಅವನ ಸುತ ವೃಕ. ಅವನ ಮಗ ಬಾಹುಕ. ಬಾಹುಕನ

ರಾಜ್ಯವನ್ನು ಶತ್ರುಗಳು ಅಪಹರಿಸಿದರು. ಬಾಹುಕನು ತನ್ನ ಇಬ್ಬರು ಪತ್ನಿಯ ರೊಡನೆ ಕಾಡಿಗೆ ಹೋಗಿ, ಅಲ್ಲಿಯೇ ಕಾಲ ಕಳೆದು ವೃದ್ಧನಾಗಿ ಮರಣವನ್ನು ಹೊಂದಿದನು. ಅವನ ಪಟ್ಟದರಾಣಿಯು ಸಹಗಮನಕ್ಕೆ ಸಿದ್ಧಳಾದಾಗ ಔರ್ವ ಮುನಿಗಳು ಗರ್ಭಿಣಿಯವಳಾದ್ದರಿಂದ ಕೂಡದೆಂದು ತಡೆದರು. ಅವಳ ಸವತಿಯು ವಿಷವನ್ನು ಹಾಕಿದಳು. ಔರ್ವರ ತಪಸ್ಸಿದ್ಧಿಯಿಂದ ರಾಣಿಯು ಸಾಯದೆ ಬದುಕಿದ್ದು, ವಿಷಸಹಿತವಾದ ಗಂಡುಮಗುವನ್ನು ಹೆತ್ತಳು. ಆ ಮಗುವಿಗೆ ಸಗರನೆಂದೇ ಹೆಸ ರಾಯಿತು ಅವನು ಚಕ್ರವರ್ತಿಯಾದನು. ಅವನ ಮಕ್ಕಳೇ ಭೂಮಿಯನ್ನು ಬಗೆದು ತಗ್ಗುಮಾಡಿದ್ದರಿಂದ ಸಮುದ್ರದ ಪಾತ್ರವು ವಿಸ್ತಾರವಾಗಿ ಅವರಿಗೆ ಕೀರ್ತಿಬಂದಿತು.

ಔರ್ವರು ಸಗರನಿಗೆ ಆಗ್ನೇಯಾಸ್ತ್ರವನ್ನೂ, ಇತರ ಅಸ್ತ್ರಗಳನ್ನೂ, ಉಪದೇಶಿ ಸಿದರು. ಸಗರನು ತನ್ನ ತಂದೆಯನ್ನು ಸೋಲಿಸಿದ್ದ ತಾಲಜಂಘ, ಯವನ, ಶಕ, ಹೈಹಯ, ಬರ್ಬರ ಎಂಬ ದುಷ್ಟರನ್ನು ಸೋಲಿಸಿ, ವಸಿಷ್ಠರ ಆಜ್ಞೆಯಂತೆ ಅವರನ್ನು ಕೊಲ್ಲದೆ, ವಿಕೃತವೇಷವುಳ್ಳವರನ್ನಾಗಿ ಮಾಡುವುದರ ಮೂಲಕ ಜಾತಿಭ್ರಷ್ಟರನ್ನಾಗಿ ಮಾಡಿದನು. ಅಂದರೆ ಕೆಲವರ ತಲೆಯಲ್ಲಿದ್ದ ಶಿಖೆಯನ್ನು ತೆಗೆಸಿ ಮುಂದುಗಡೆ ಕೂದಲು ಬಿಡುವಂತೆಯೂ, ಕೆಲವರ ತಲೆಯನ್ನು ಬೋಳನ್ನಾಗಿಯೂ, ಕೆಲವರನ್ನು ದಿಗಂಬರರನ್ನಾಗಿಯೂ, ಕೆಲವರನ್ನು ಉತ್ತರೀಯ ರಹಿತರನ್ನಾಗಿಯೂ ಮಾಡಿದನು. ಇದರಿಂದ ಅವರೆಲ್ಲರೂ ಹಿಂದು ಧರ್ಮಬಾಹಿರರಾದರು ಎಂದು ತಾತ್ಪರ್ಯ. ಔರ್ವ ಮುನಿಗಳ ಆದೇಶದಂತೆ 99 ಅಶ್ವಮೇಧಗಳನ್ನುಮಾಡಿ ನೂರನೆಯ ಅಶ್ವಮೇಧವನ್ನು ಮಾಡುತ್ತಿರುವಾಗ, ದೇವೇಂದ್ರನು ಯಜ್ಞಾಶ್ವವನ್ನು ಅಪಹರಿಸಿದನು. ಸಗರನಿಗೆ ಗರುಡನ ಸಹೋದರಿ ಸುಮತಿಯೆಂಬುವಳೂ, ಕೇಶಿನಿಯೆಂಬುವಳೂ ಇಬ್ಬರು ಹೆಂಡಂತಿಯರು. ಸುಮತಿಗೆ ಅರವತ್ತುಸಾವಿರ ಪುತ್ರರಾದರು. ಸಗರನು ಆ ಮಕ್ಕಳಿಗೆ ಯಾಗದ ಕುದುರೆಯನ್ನು ಹುಡುಕಿ ತರುವಂತೆ ಅಪ್ಪಣೆ ಮಾಡಿದನು. ಹರಿವಂಶದ ವಚನಾನುಸಾರ ಅಷ್ಟುಮಂದಿ ಪುತ್ರರ ಒಳಗೂ ಶ್ರೀಹರಿಯ ಆವೇಶ ವಿದ್ದಿತು. ಆದ್ದರಿಂದ ಮಹಾಬಲಿಷ್ಠರಾದ ಅವರೆಲ್ಲರೂ ಸೇರಿ ಭೂಮಿಯನ್ನು ಬಗೆದು ಈಶಾನ್ಯ ದಿಕ್ಕಿನಲ್ಲಿ ಲೋಕಶಿಕ್ಷಾರ್ಥವಾಗಿ ತಪಸ್ಸನ್ನು ಮಾಡುತ್ತಿದ್ದ ಕಪಿಲ ದೇವರ ಬಳಿಯಲ್ಲಿ ಇಂದ್ರನಿಂದ ಸ್ಥಾಪಿತವಾಗಿದ್ದ ಯಜ್ಞಾಶ್ವವನ್ನು ಕಂಡರು. ಅವರು ಕಪಿಲ ಪರಮಾತ್ಮನೇ ಯಜ್ಞಾಶ್ವಚೋರನೆಂದು ಅನ್ಯಥಾ ತಿಳಿದು ಅವನನ್ನು ಕೊಂದು ಬಿಡಬೇಕೆಂದು ಅವನ ಮೇಲೆ ಬೀಳಲು ಬಂದರು. ಕಪಿಲದೇವನು ಕಣ್ಣನ್ನು ತೆರೆದನು. ಸಗರನ ಆ ಪುತ್ರರೆಲ್ಲರೂ ತಮ್ಮ ದೋಷದಿಂದಲೇ ದಗ್ಧರಾದರು. ಹೀಗೆ ತಿಳಿಯದೆ ಕಪಿಲನ ಕೋಪಾಗ್ನಿಯಿಂದ ಸಗರನ ಪುತ್ರರು ದಗ್ಧರಾದರೆಂದು ಹೇಳು ವವರು ಮೂಢರೆಂದೇ ತಿಳಿಯಬೇಕು. ಏಕೆಂದರೆ ಕಪಿಲ ಪರಮಾತ್ಮನು ತ್ರಿಗುಣ ಶೂನ್ಯನು. ಜಗತ್ತನ್ನೇ ಪಾವನ ಮಾಡುವ ಪವಿತ್ರಮೂರ್ತಿಯು. ಇಂತಹವನಿಗೆ

ತಮೋಗುಣದ ಕಾರ್ಯವಾದ ಕೋಪವು ಎಲ್ಲಿಂದ ಬಂದೀತು ? ನೆಲದ ಧೂಳಿ ಆಕಾಶಕ್ಕೆ ಅಂಟದಿರುವಂತೆ ಮಾಧವನಿಗೆ ಕೋಪವು ಅಸಂಭಾವಿತವು. ಕಪಿಲದೇವ ರಿಂದ ರಚಿತವಾಗಿರುವ ಸಾಂಖ್ಯಶಾಸ್ತ್ರವೇ (ಅಧ್ಯಯನವೇ) ಭವಮೋಚಕವಾಗಿರು ವಾಗ, ಶುದ್ಧ ಜ್ಞಾನಸ್ವರೂಪನಾದ ಕಪಿಲಭಗವಂತನಿಗೆ ಕೋಪವುಂಟುಮಾಡುವ ಬುದ್ಧಿಯು ಹುಟ್ಟುವುದೆಂದರೇನು ? ಆದ್ದರಿಂದ ಕಪಿಲನು ಕುಪಿತನಾದನೆಂಬುದು ಸುಳ್ಳು. ಸಗರನ ಅರವತ್ತುಸಾವಿರಮಕ್ಕಳೂ ತಮ್ಮ ಪೂರ್ವಕರ್ಮ ದೋಷ ದಿಂದಲೇ ಸತ್ತರು.

ಸಗರನ ಮತ್ತೊಬ್ಬ ಪತ್ನಿ ಕೇಶಿನಿಯಲ್ಲಿ ಅಸಮಂಜಸನೆಂಬ ಮಗನು ಹುಟ್ಟಿ ದ್ದನು. ಅವನಿಗೆ ಅಂಶುಮಂತನೆಂಬ ಪುತ್ರನು ಹುಟ್ಟಿದ್ದನು. ಅಸಮಂಜಸನು ಪೂರ್ವ ಜನ್ಮದಲ್ಲಿ ಯೋಗಭ್ರಷ್ಟನಾಗಿದ್ದನು. ಈ ಜನ್ಮದಲ್ಲಿ ಜಾತಿಸ್ಮರವುಂಟಾಗಿ, ಲೋಕದ ಸಂಗವನ್ನು ಬಿಟ್ಟಿದ್ದನು. ಯೋಗಪೂರ್ತಿಗಾಗಿ ವನಕ್ಕೆ ಹೋಗಬೇಕೆಂದೂ, ತಂದೆಯು ತನಗೆ ರಾಜ್ಯವನ್ನು ಕೊಡದೆ ಕಾಡಿಗೆ ದೂಡಲಿ ಎಂದು ನಿಶ್ಚಯಿಸಿ, ಅದಕ್ಕಾಗಿ ಅಯೋಧ್ಯೆಯಲ್ಲಿದ್ದ ಪ್ರಜೆಗಳ ಮಕ್ಕಳನ್ನೆಲ್ಲ ಸರಯೂನದಿಗೆ ಎಸೆಯುತ್ತ ಬಂದನು. ಪ್ರಜೆಗಳು ತಮ್ಮ ರಾಜನಾದ ಸಗರನ ಮುಂದೆ ಗೋಳಾಡಿದರು. ಸಗರನು ಅಸ ಮಂಜಸನನ್ನು ಕಾಡಿಗೆ ಓಡಿಸಿಬಿಟ್ಟನು. ಅಸಮಂಜಸನು ಯೋಗಬಲದಿಂದ ನದಿಗೆಸೆ ದಿದ್ದ ಎಲ್ಲ ಬಾಲಕರನ್ನೂ ಬದುಕಿಸಿ ಅವರವರ ತಂದೆ ತಾಯಿಗಳಿಗೆ ತಲುಪಿಸಿ, ಕಾಡಿಗೆ ಹೋಗಿ ಧ್ಯಾನ ಮಾಡಿ ಕೃತಾರ್ಥನಾದನು. ಅವನ ಮಗ ಅಂಶುಮಂತನನ್ನು ಸಗರನು ಅಶ್ವಾನ್ವೇಷಣೆಗೆ ಕಳುಹಿಸಿದನು. ಅಂಶುಮಂತನು ಕುದುರೆಯನ್ನು ಹುಡುಕುತ್ತ ಬಂದು ಕಪಿಲದೇವರನ್ನೂ, ತನ್ನ ಚಿಕ್ಕಪ್ಪಂದಿರ ಬೂದಿ ರಾಶಿಯನ್ನೂ ನೋಡಿ ಕಪಿಲ ದೇವರಿಗೆ ವಂದಿಸಿ ಸ್ತುತಿಸಿದನು :—

ದೇವ ! ರಾಜಸರು ಧರ್ಮಾರ್ಥಕಾಮಗಳಲ್ಲಿಯೇ ದೃಷ್ಟಿಯಿಟ್ಟು ಸ್ವರ್ಗಾದಿಗಳನ್ನು ಹೊಂದುವರು. ಮೋಕ್ಷವನ್ನು ಹೊಂದುವುದೇ ಇಲ್ಲ. ತಾಮಸರು ಹೃದಯಸ್ಥ ವಿಷ್ಣುವನ್ನರಿಯದೆ ಮಿಥ್ಯಾಜ್ಞಾನಿಗಳಾಗಿ ಅಂಧಂತ ಮಸ್ಸಿನಲ್ಲಿ ಬಿದ್ದು ವಿಶೇಷ ದುಃಖವನ್ನು ಹೊಂದುವರು. ಸನಂದನಾದಿ ಸಾತ್ವಿಕರು ನಿನ್ನನ್ನು ಪಾಸಿಸಿ, ಮಿಥ್ಯಾ ಜ್ಞಾನವನ್ನು ಕಳೆದುಕೊಂಡು ಮುಕ್ತರಾಗುವರು, ಬ್ರಹ್ಮಾದಿಗಳೂ ನಿನ್ನನ್ನು ಸಂಪೂರ್ಣವಾಗಿ ತಿಳಿಯಲಾರರು. ಮೂಢನಾದ ನಾನು ಹೇಗೆ ತಿಳಿಯಬಲ್ಲೆನು ? ಸಾಮಾನ್ಯ ಜ್ಞಾನವೂ ಇಲ್ಲದ ನಾನು ನಿನ್ನನ್ನು ಹೇಗೆ ಚಿಂತಿಸಲಿ ? ಸ್ವಾಮಿಯೇ ! ನೀನು ಪೂರ್ಣ ಷಡ್ಗುಣನು. ಪ್ರಾಕೃತ ನಾಮರೂಪ ರಹಿತನು. ತ್ರಿಗುಣ, ತದ್ವ್ಯಾಪಾರ, ಲಿಂಗಶರೀರ ಇವುಗಳಿಲ್ಲದವನು. ಬ್ರಹ್ಮಾದಿ ಗಳಿಂದಲೂ, ಪರಮಾಣ್ವಾದಿಗಳಿಂದಲೂ ಅತ್ಯಂತ ಭಿನ್ನನು. ಲೋಕಾನುಗ್ರಹಕ್ಕಾಗಿ

ಅವತರಿಸುವೆಯೋ ಹೊರತು ಕರ್ಮದಿಂದ ಹುಟ್ಟುವವನಲ್ಲ. ಇಂತಹ ಮಹಾಮಹಿಮ ನಿಗೆ ನಮಸ್ಕಾರ ! ನಿನ್ನಿಂದಲೇ ಪ್ರಾಕೃತ ದೇಹಧಾರಿಗಳಾದ ಮನುಷ್ಯರು ಲೋಭಾದಿ ಗಳಿಂದ ಭ್ರಾಂತರಾಗಿ ಸತಿ ಸುತ ಮನೆಮಠ ಧನಾದಿಗಳೆಲ್ಲ ಸ್ಥಿರಗಳೆಂದು ನಂಬಿ ಅವು ಗಳನ್ನು ರಕ್ಷಿಸಲು ತೊಳಲುತ್ತಿರುವರು. ದೇವ ! ನಿನ್ನ ದರ್ಶನದಿಂದ ಪುತ್ರಮಿತ್ರಕಳ ತ್ರಾದಿಗಳಲ್ಲಿದ್ದ ಸ್ನೇಹವು ನಾಶವಾಯಿತು.

**ಕಪಿಲ :–** ವತ್ಸ ! ನಿನ್ನ ತಾತನ ಯಜ್ಞಾಶ್ವವನ್ನು ತೆಗೆದುಕೊಂಡು ಹೋಗು. ಈ ಭಸ್ಮರಾಶಿಯ ಮೇಲೆ ಗಂಗಾಪ್ರವಾಹವು ಹರಿದಾಗಲೇ ನಿನ್ನ ಚಿಕ್ಕಪ್ಪಂದಿರ ಉದ್ಧಾರ. ಬೇರೆ ಮಾರ್ಗವೇ ಇಲ್ಲ.

**ಶುಕ :–** ಅಂಶುಮಂತನು ಕಪಿಲದೇವರಿಗೆ ನಮಿಸಿ ಕುದುರೆಯನ್ನು ತಂದು ತಾತನಿಗೊಪ್ಪಿಸಿದನು. ಸಗರನು ಯಜ್ಞಶೇಷವನ್ನು ಮುಗಿಸಿ, ಅಂಶುಮಂತನಿಗೆ ಪಟ್ಟ ಗಟ್ಟಿ, ವಿರಕ್ತನಾಗಿ ಔರ್ವರ ಉಪದೇಶಾನುಸಾರ ಶ್ರೀಹರಿಯನ್ನು ಧ್ಯಾನಿಸಿ ಮುಕ್ತ ನಾದನು. ಅಂಶುಮಂತನು ಗಂಗೆಯನ್ನು ತರಿಸಲು ಬಹುಕಾಲ ತಪಸ್ಸನ್ನು ಮಾಡುತ್ತ ಲಿದ್ದು ಮೃತನಾದನು. ಅವನ ಮಗ ದಿಲೀಪನೂ ತಂದೆಯಂತೆ ತಪಸ್ಸನ್ನು ಮಾಡುತ್ತ ಲಿದ್ದು ಮೃತನಾದನು. ದಿಲೀಪನ ಪುತ್ರ ಭಗೀರಥನು ಉಗ್ರತಪಸ್ಸನ್ನು ಮಾಡಿದನು. ಗಂಗೆಯು ಪ್ರತ್ಯಕ್ಷಳಾಗಿ "ರಾಜನೇ ! ನಾನು ಆಕಾಶದಿಂದ ಭೂಮಿಗೆ ಬೀಳುವಾಗ ನನ್ನ ವೇಗವನ್ನು ಧರಿಸುವವರು ಯಾರು ? ತಡೆಯುವವರು ಇಲ್ಲದಿದ್ದರೆ ಭೂಮಿ ಯನ್ನು ಭೇಧಿಸಿಕೊಂಡು ರಸಾತಳಕ್ಕೆ ಹೋಗಿ ಬಿಡುವೆನು. ಇದರಿಂದ ನಿನ್ನ ಬಯ ಕೆಯು ಕೈಗೂಡುವುದಿಲ್ಲ. ಇದಕ್ಕೆ ಉಪಾಯವನ್ನು ಯೋಚಿಸು. ಇನ್ನೊಂದು ಅನರ್ಥ ವಿದೆ. ನಾನು ಭೂಲೋಕದಲ್ಲಿ ಹರಿದರೆ ಸ್ನಾನ ಮಾಡುವವರು ತಮ್ಮ ಪಾಪವನ್ನು ನನ್ನಲ್ಲಿ ಬಿಟ್ಟು ಶುದ್ಧರಾಗುತ್ತಾರೆ. ನಾನು ಆ ಪಾಪಗಳನ್ನು ಕಳೆದುಕೊಳ್ಳುವ ಬಗೆ ಹೇಗೆ ? ಅದನ್ನೂ ವಿವೇಚಿಸು" ಎಂದಳು.

**ಭಗೀರಥ :–** ಗಂಗಾಭವಾನಿಯೆ ! ಸಾಧುಗಳ ಹೃದಯದಲ್ಲಿ ಶ್ರೀಹರಿಯ ಸಂನಿಧಾನವಿರುವುದರಿಂದ ಪಾಪಿಗಳ ಪಾಪವನ್ನು ಪರಿಹರಿಸುತ್ತ ಪಾವನರಾಗಿಯೇ ಇರುವಾಗ ಪದ್ಮನಾಭನ ಪಾದಪದ್ಮದ ಸಂಬಂಧವುಳ್ಳ ನಿನಗೆ ಪಾಪಿಗಳು ಬಿಟ್ಟ ಪಾಪಗಳನ್ನೆಲ್ಲ ಪರಿಹರಿಸುವ ಶಕ್ತಿಯು ಇದೆಯೆಂದು ಹೇಳಬೇಕೇನು ? ಜ್ಞಾನಿಗಳು ನಿನ್ನ ಪಾಪಗಳನ್ನು ಕಳೆಯುವರು. ಇನ್ನು ನಿನ್ನ ವೇಗವನ್ನು ತಡೆಯಲು ರುದ್ರ ದೇವರು ಶಕ್ತರು.

(ಭಗೀರಥನು ತಪಸ್ಸಿನಿಂದ ಶಿವನನ್ನು ಸಂತೋಷಪಡಿಸಿದನು. ತುಷ್ಟನಾದ ರುದ್ರನು ಗಂಗೆಯು ಶ್ರೀಹರಿಯ ಪಾದೋದ್ಭವೆಯಾದಕಾರಣ ಪರಮಪಾವನೆ

ಯೆನಿಸಿಕೊಂಡ ಅವಳನ್ನು ತನ್ನ ಜಟಾಜೂಟದಲ್ಲಿ ಧರಿಸಿದನು. ಭಗೀರಥನು ತನ್ನ ರಥವನ್ನು ಹತ್ತಿ ಹೊರಟ ತಕ್ಷಣವೇ ಗಂಗೆಯು ಅವನ ಹಿಂದೆಯೇ ಹರಿದು ಬಂದು ಆ ಭಸ್ಮರಾಶಿಯ ಮೇಲೆ ಹರಿದಳು. ಗಂಗಾಜಲ ಸ್ಪರ್ಶಮಾತ್ರದಿಂದ ಸಗರಪುತ್ರರು ಕಪಿಲನ ಅಪರಾಧರೂಪ ದಂಡದಿಂದ ಹತರಾಗಿದ್ದರೂ, ಸ್ವರ್ಗವನ್ನು ಹೊಂದಿದರು. ಅಂದಬಳಿಕ ಶ್ರದ್ಧೆಯಿಂದ ಗಂಗೆಯನ್ನು ಸೇವಿಸುವವರು ಸ್ವರ್ಗವನ್ನು ಹೊಂದುವ ರೆಂಬುದೇನಾಶ್ಚರ್ಯ ?

ಭಗೀರಥನಿಗೆ ಶ್ರುತನು ಪುತ್ರನು. ಅವನಿಗೆ ನಾಭ. ಅವನಿಗೆ ವಶ. ಅವನಿಗೆ ಸಿಂಧುದ್ವೀಪ. ಅವನಿಗೆ ಅಯುತಾಯು. ಅವನಿಗೆ ನಳರಾಜನ ಸ್ನೇಹಿತನಾದ ಋತಪರ್ಣನು ಮಗನು. ಅವನಿಗೆ ಸರ್ವಕಾಮ, ಅವನಿಗೆ ಸುದಾಸ. ಅವನ ಮಗನೇ ಮದಯಂತಿಯ ಪತಿಯಾದ ಸೌದಾಸನು, ಸೌದಾಸನನ್ನು ಮಿತ್ರಸಹನೆಂದೂ ಮತ್ತು ಕಲ್ಮಾಷಪಾದನೆಂದೂ ಕರೆಯುವರು. ಇವನು ವಸಿಷ್ಠರಿಂದ ಶಾಪವನ್ನು ಹೊಂದಿ ರಾಕ್ಷಸನಾಗಿ ಅಪುತ್ರವಂತನೂ ಆದನು. ಹೇಗೆಂದರೆ ಸೌದಾಸನು ಬೇಟೆಗೆ ಹೋಗಿದ್ದಾಗ ಒಬ್ಬ ರಾಕ್ಷಸನನ್ನು ಕೊಂದನು. ಆ ರಾಕ್ಷಸನ ತಮ್ಮನು ರಾಜನಿಗೆ ಪ್ರತೀಕಾರ ಮಾಡಬೇಕೆಂದು ಅವನ ಅಡಿಗೆಯವನ ವೇಷವನ್ನು ಹಾಕಿ, ರಾಜನ ಮನೆಯ ಶ್ರಾದ್ಧದೂಟಕ್ಕೆ ಬಂದ ವಸಿಷ್ಠರಿಗೆ ಮನುಷ್ಯಮಾಂಸವನ್ನು ಬಡಿಸಿದನು. ಇದನ್ನು ನೋಡಿ ವಸಿಷ್ಠರು ಕುಪಿತರಾಗಿ, ರಾಕ್ಷಸನಾಗೆಂದು ರಾಜನನ್ನು ಶಪಿಸಿದರು. ಬಳಿಕ ಇದೆಲ್ಲ ರಾಕ್ಷಸನ ಕುತಂತ್ರವೆಂದೂ, ರಾಜನ ತಪ್ಪಿಲ್ಲವೆಂದೂ ವಸಿಷ್ಠರಿಗೆ ತಿಳಿದು ಬಂತು. ಆಗ ಅವರು ರಾಜನಿಗೆ ಹನ್ನೆರಡು ವರುಷಗಳ ಕಾಲ ಮಾತ್ರ ರಾಜನಲ್ಲಿ ರಾಕ್ಷಸವ್ಯಾಪಾರವಿರಲೆಂದೂ ಬಳಿಕ ಅದು ಪರಿಹಾರವಾಗಲೆಂದೂ ಅನುಗ್ರಹಿಸಿದರು. ರಾಜನು ಕುಪಿತನಾಗಿ ಅಭಿಮಂತ್ರಿತ ಜಲವನ್ನು ವಸಿಷ್ಠರ ಮೇಲೆ ಹಾಕಿ, ಅವರನ್ನು ಸುಟ್ಟುಬಿಡಬೇಕೆಂದು ಸಿದ್ಧನಾದಾಗ ರಾಜಪತ್ನಿಯಾದ ಮದಯಂತಿಯು ತಡೆದಳು. ರಾಜನು ಆ ಜಲವು ಬಿದ್ದರೆ ಪ್ರಾಣಿಗಳಿಗೆ ಅಪಾಯವೆಂದು ತಿಳಿದು ತನ್ನ ಪಾದದ ಮೇಲೆ ಅದನ್ನು ಚೆಲ್ಲಿಕೊಂಡನು. ಅದರಿಂದ ಅವನು ಕಲ್ಮಾಷಪಾದನಾದನು. ರಾಜನು ರಾಕ್ಷಸನಾಗಿದ್ದಾಗ ಕಾಡಿನಲ್ಲಿ ಭೋಗಪಡುತ್ತಿದ್ದ ಮುನಿದಂಪತಿಗಳಲ್ಲೈಕ ಮುನಿಯನ್ನು ತಿನ್ನಬೇಕೆಂದು ಹಿಡಿದನು. ಮುನಿಪತ್ನಿಯು "ನೀನು ಇಕ್ಷ್ವಾಕುವಂಶದ ಮಹಾರಥನು. ಮದಯಂತಿಯ ಪತಿಯು. ನೀನು ಸಹಜ ರಾಕ್ಷಸನಲ್ಲ. ವಿಪ್ರವಧೆಯು ಯುಕ್ತವಲ್ಲ. ಮಕ್ಕಳನ್ನು ಪಡೆಯಲಿಚ್ಛಿಸುವ ನನಗೆ ಸುರತಸುಖದಿಂದ ತೃಪ್ತನಾಗದ ನನ್ನ ಪತಿ ಯನ್ನು ಕೊಂದು ತಿನ್ನುವುದಾದರೆ ಮೊದಲು ನನ್ನನ್ನು ತಿಂದುಬಿಡು" ಎಂದು ಪ್ರಾರ್ಥಿಸಿದಳು. ಆದರೂ ಸೌದಾಸನು ಆ ಮುನಿಯನ್ನು ಕೊಂದು ತಿಂದುಬಿಟ್ಟನು. ಇದನ್ನು ಕಂಡ ಮುನಿಪತ್ನಿಯು "ಪಾಪಿಷ್ಠನೇ ! ಕಾಮಾರ್ತಳಾದ ನನ್ನ ಪತಿಯನ್ನು ಕೊಂದಕಾರಣ ಸುರತಸುಖವನ್ನು ಅನುಭವಿಸುವ ಕಾಲದಲ್ಲಿಯೇ ನಿನಗೆ ಮರಣ

ಬರಲಿ'' ಎಂದು ಶಪಿಸಿ ಸಹಗಮನ ಮಾಡಿ ಪತಿಯ ಲೋಕವನ್ನು ಹೊಂದಿದಳು. ಹನ್ನೆರಡುವರುಷ ಕಳೆದು ರಾಜನಿಗೆ ರಾಕ್ಷಸಭಾವವು ಹೋಯಿತು. ಅವನು ಅರಮನೆಗೆ ಬಂದು ಪತ್ನಿಯೊಡನೆ ಭೋಗಿಸಲು ಸಿದ್ಧನಾದಾಗ ಮದಯಂತಿಯು ಮುನಿಪತ್ನಿಯ ಶಾಪವನ್ನು ತಿಳಿಸಿ ತಡೆದಳು. ರಾಜನಿಗೆ ಸಂತಾನವಿಲ್ಲದಾಯಿತು. ಅವನು ವಸಿಷ್ಠರನ್ನು ಪ್ರಾರ್ಥಿಸಿದನು. ನಿಯೋಗವನ್ನು ಅನುಸರಿಸಿ ವಸಿಷ್ಠರು ಮದಯಂತಿಯಲ್ಲಿ ಗರ್ಭವನ್ನಿಟ್ಟರು. ಏಳು ವರ್ಷಗಳಾದರೂ ಪುತ್ರನನ್ನು ಅವಳು ಪ್ರಸವಿಸಲಿಲ್ಲ. ಮದಯಂತಿಯು ಕಲ್ಲಿನಿಂದ ಹೊಟ್ಟೆಯನ್ನು ಚಚ್ಚಿಕೊಂಡಳು. ಮಗುವು ಹುಟ್ಟಿತು. ಅದು ಅಶ್ಮಘಾತದಿಂದ ಹುಟ್ಟಿದ ಕಾರಣ **ಅಶ್ಮಕನೆಂದೇ** ಪ್ರಸಿದ್ಧವಾಯಿತು. ಅಶ್ಮಕನ ಮಗ ಮೂಲಕನು. ಪರಶುರಾಮದೇವರು ಕ್ಷತ್ರಿಯರನ್ನು ಕೊಲ್ಲುತ್ತ ಬರುತ್ತಿದ್ದಾಗ ಅಂತಃಪುರದ ಸ್ತ್ರೀಯರು ಈ ಮೂಲಕನನ್ನು ಗೋಪ್ಯವಾಗಿಟ್ಟು ರಕ್ಷಿಸಿದಕಾರಣ **ನಾರೀಕವಚನೆಂದೂ**, ಪರಶುರಾಮನಿಂದ ಕ್ಷತ್ರಿಯಕುಲವು ನಶಿಸುತ್ತಿದ್ದಾಗ ಆ ವಂಶಕ್ಕೆ ಇವನೇ ಮೂಲನಾದ್ದರಿಂದ **ಮೂಲಕನೆಂದೂ** ಪ್ರಸಿದ್ಧನಾದನು. ಮೂಲಕನ ಮಗ ದಶರಥನು. ಅವನ ಮಗ ಪಲಬಿಲನು. ಅವನ ಮಗನು ಖಟ್ವಾಂಗನು.

ಖಟ್ವಾಂಗಚಕ್ರವರ್ತಿಯು ದೇವತೆಗಳಿಂದ ಪ್ರಾರ್ಥಿತನಾಗಿ ದುರ್ಜಯರಾದ ದೈತ್ಯರನ್ನು ಸಂಹರಿಸಿದನು. ಸಂತುಷ್ಟರಾದ ದೇವತೆಗಳು ವರವನ್ನು ಕೇಳೆಂದರು. ಖಟ್ವಾಂಗನು ತನಗೆ ಆಯುಃಪ್ರಮಾಣವು ಎಷ್ಟೆಂಬುದನ್ನು ತಿಳಿಸಬೇಕೆಂದು ಬೇಡಿದನು. ದೇವತೆಗಳು ಇನ್ನೊಂದು ಮುಹೂರ್ತ ಮಾತ್ರ ಬದುಕಿರುವೆಯೆಂದು ಹೇಳಿದರು. ಒಡನೆ ಖಟ್ವಾಂಗನು ದೇವತೆಗಳು ಕೊಟ್ಟ ವಿಮಾನದಲ್ಲಿ ಕುಳಿತು ನಿಮಿಷ ಮಾತ್ರದಲ್ಲಿ ತನ್ನ ಪಟ್ಟಣಕ್ಕೆ ಬಂದು, ವಿರಕ್ತನಾಗಿ ಶ್ರೀ ಪರಮಾತ್ಮನನ್ನು ಶರಣು ಹೊಂದಿ ಹೀಗೆ ಚಿಂತಿಸಿದನು :–

"ನನಗೆ ಬ್ರಹ್ಮಕುಲಕ್ಕಿಂತ ಪ್ರಾಣ, ಸತಿ, ಸುತ, ರಾಜ್ಯ ಮತ್ತು ಸಂಪದಾದಿಗಳು ಯಾವುವೂ ಪ್ರಿಯಗಳಲ್ಲ. ಬಾಲ್ಯದಲ್ಲಿಯೂ ನನ್ನ ಬುದ್ಧಿ ಮತ್ತು ಮನಸ್ಸು ಅಧರ್ಮದಲ್ಲಿ ಆಸಕ್ತವಾಗಿಛಲಿಲ್ಲ. ಭಗವಂತನಿಗಿಂತ ಸರ್ವೋತ್ತಮವಾದ ವಸ್ತುವನ್ನು ಕಾಣಲಾರೆನು. ಎಲ್ಲ ವಸ್ತುಗಳೂ ಭಗವಂತನ ಅಧೀನಗಳೆಂದೇ ತಿಳಿಯುವೆನು. ದೇವತೆಗಳು ಬೇಕಾದ ವರಗಳನ್ನು ಕೊಡುವೆವೆಂದು ಹೇಳಿದರೂ ಭಗವದ್ಧ್ಯಾನಾದಿಗಳಿಂದ ಬೇರೆಯಾದ ಯಾವ ಬಯಕೆಯೂ ನನಗಿಲ್ಲ. ಪ್ರಿಯನೂ, ಸ್ವಾಮಿಯೂ ಆದ ಶ್ರೀಹರಿಯು ತಮ್ಮ ಹೃದಯದಲ್ಲಿ ನೆಲೆಸಿದ್ದರೂ, ವಿಷಯಾಸಕ್ತರಾಗದ ದೇವತೆಗಳೇ ಭಗವಂತನ ಮಹಿಮೆಗಳನ್ನು ಪೂರ್ಣವಾಗಿ ತಿಳಿಯಲಾರರು. ನಮ್ಮಂತಹವರು ತಿಳಿಯಬಲ್ಲೆವೆ ? ಬಹುಮಾತುಗಳಿಂದೇನು ? ನನ್ನ ಸಿದ್ಧಾಂತವು ಹೀಗಿದೆ :–

ದೇಹೇಂದ್ರಿಯಾದಿಗಳಲ್ಲಿ ಮಮತೆಯನ್ನು ಬಿಟ್ಟು ಶ್ರೀ ಪರಮಾತ್ಮನನ್ನೇ ಶರಣು ಹೊಂದುವೆನು." ಹೀಗೆ ಖಟ್ವಾಂಗನು ನಿಶ್ಚಯಿಸಿ ಸರ್ವವಸ್ತುವಿನಲ್ಲಿಯೂ ಮಮತಾ ಭಿಮಾನವನ್ನು ಬಿಟ್ಟು, ಸರ್ವೋತ್ತಮನಾದ ನಾರಾಯಣನನ್ನು ಆಶ್ರಯಿಸಿ ಉತ್ತಮ ಗತಿಯನ್ನು ಹೊಂದಿದನು.

ಖಟ್ವಾಂಗನ ಮಗನು ದೀರ್ಘಬಾಹುವು. ಅವನ ಮಗನೇ ರಘು. ಅವನ ಮಗನು ಅಜನು. ಅವನ ಮಗನು ದಶರಥನು. ಅವನಿಗೆ ರಾಮ, ಲಕ್ಷ್ಮಣ, ಭರತ, ಶತ್ರುಘ್ನರೆಂಬ ನಾಲ್ವರು ಮಕ್ಕಳಾದರು. ದೇವತೆಗಳ ಪ್ರಾರ್ಥನಾನುಸಾರವಾಗಿ ಸಾಕ್ಷಾತ್ ವಾಸುದೇವನೇ ರಾಮನಾಗಿ ಅವತರಿಸಿದನು. ಸಂಕರ್ಷಣಪರಮಾತ್ಮನು ಶೇಷಾವತಾರಿಯಾದ ಲಕ್ಷ್ಮಣನಲ್ಲಿಯೂ, ಪ್ರದ್ಯುಮ್ನದೇವರು ಚಕ್ರಾಭಿಮಾನಿ ಕಾಮನ ಅವತಾರನಾದ ಭರತನಲ್ಲಿಯೂ, ಅನಿರುದ್ಧನಾಮಕ ಭಗವಂತನು ಶಂಖಾಭಿ ಮಾನಿಯಾದ, ಕಾಮಪುತ್ರ ಅನಿರುದ್ಧನ ಅವತಾರನಾದ ಶತ್ರುಘ್ನನಲ್ಲಿಯೂ ಪ್ರವೇಶಿ ಸಿರುವನು. ಶ್ರೀರಾಮನ ಚರಿತ್ರೆಯನ್ನು ನೀನು ಋಷಿಗಳಿಂದ ಅನೇಕ ಬಾರಿ ಕೇಳಿ ದ್ದರೂ ಸಂಕ್ಷೇಪವಾಗಿ ನಾವು ಹೇಳುವುದನ್ನು ಕೇಳು.

(ಒಂದೇ ಶ್ಲೋಕದಲ್ಲಿ ರಾಮಾಯಣವನ್ನು ಹೇಳಿರುವರು. ಪಾರಾಯಣ ಮಾಡುವವರಿಗಾಗಿ ಇಲ್ಲಿ ಬರೆದಿದೆ.)

॥ ಶ್ಲೋಕ ॥

ಗುರ್ವರ್ಥೇ ತ್ಯಕ್ತರಾಜ್ಯೋ ವ್ಯಚರದನುವನಂ ಪದ್ಮಪದ್ಭ್ಯಾಂ ಪ್ರಿಯಾಯಾಃ
ಪಾಣಿಸ್ಪರ್ಶಾಕ್ಷಮಾಭ್ಯಾಂ ಮೃಜಿತಪಥಿರುಜೋ ಯೋ ಹರೀಂದ್ರಾನುಜಾಭ್ಯಾಂ ।
ವೈರೂಪ್ಯಾಚ್ಛೂರ್ಪಣಖ್ಯಾಃ ಪ್ರಿಯವಿರಹರುಷಾರೋಪಿತಭ್ರೂವಿಜೃಂಭಃ
ತ್ರಸ್ತಾಬ್ಧಿರ್ಬದ್ಧಸೇತುಃ ಖಲದವದಹನಃ ಕೋಸಲೇಂದ್ರೋಽವತೀರ್ಣಃ ॥86/8॥

ಶ್ರೀಹರಿಯು ಕೋಸಲದೇಶದಲ್ಲಿ ರಾಮನಾಗಿ ಅವತರಿಸಿ, ತಂದೆಯ ಮಾತನ್ನು ನಡೆಸುವುದಕ್ಕಾಗಿ ರಾಜ್ಯವನ್ನು ಬಿಟ್ಟು ಕಾಡಿಗೆ ಹೋಗಿ, ತನ್ನ ಪ್ರಿಯೆಯಾದ ಸೀತಾ ದೇವಿಯ ಹಸ್ತಸ್ಪರ್ಶವನ್ನೂ ಸಹಿಸಲಾರದಷ್ಟು ಕೋಮಲಗಳಾಗಿರುವ ತನ್ನ ಪಾದ ಗಳಿಂದಲೇ ಅಲ್ಲಲ್ಲಿ ಸಂಚರಿಸಿದನು. ಹನುಮಂತ ಮತ್ತು ಲಕ್ಷ್ಮಣರಿಂದ ಕೂಡಿ ಮಾರ್ಗದಲ್ಲಿದ್ದ ಕ್ಲೇಶಗಳನ್ನು ಪರಿಹರಿಸಿದನು. ಶೂರ್ಪಣಖಿಯ ನಾಸಿಕಾಛೇದದಿಂದ ಕುಪಿತನಾದ ರಾವಣನು ತನ್ನ ಪ್ರಿಯೆಯನ್ನು ಅಪಹರಿಸಿಕೊಂಡುಹೋಗಲು ಆ ಸೀತೆಯ ವಿರಹದುಃಖದಿಂದ ದುಷ್ಟರಲ್ಲಿ ಕುಪಿತನಾಗಿ ಹುಬ್ಬುಗಳನ್ನು ಹಾರಿಸಿ ವಿಕಾಸ ವನ್ನುಂಟುಮಾಡುತ್ತ ಹನುಮಂತನಿಂದ ಲಂಕೆಯಲ್ಲಿನ, ಆವಿಃ—ಸ್ಥಿತಿಯನ್ನು ಕೇಳಿ

ಸಮುದ್ರಕ್ಕೆ ಸೇತುವೆಯನ್ನು ಕಟ್ಟಿ ಲಂಕೆಯನ್ನು ಸೇರಿ ದುಷ್ಟರಾದ ರಾವಣಾದಿ ರಾಕ್ಷಸರೆಂಬ ವನಕ್ಕೆ ಕಾಡ್ಗಿಚ್ಚಾಗಿ ಅವರೆಲ್ಲರನ್ನೂ ಸಂಹರಿಸಿದನು. ಇಂತಹ ಕೋಸಲೇಂದ್ರನಾದ ಶ್ರೀರಾಮನು ನಮ್ಮನ್ನು ಕಾಪಾಡಲಿ !

## ವಿವರವಾದ ರಾಮಾಯಣ

ಶ್ರೀರಾಮನು ವಿಶ್ವಾಮಿತ್ರರ ಯಾಗರಕ್ಷಣೆಗಾಗಿ ಬಂದು ತಾನೊಬ್ಬನೇ ಸುಬಾಹು ಮೊದಲಾದ ರಾಕ್ಷಸರನ್ನು ಸಂಹರಿಸಿದನು. ಮಿಥಿಲಾಪಟ್ಟಣಕ್ಕೆ ಬಂದು ಮುನ್ನೂರುಮಂದಿ ಬಲಾಢ್ಯರಿಂದ ತರಲ್ಪಟ್ಟ ಶಿವನ ಬಿಲ್ಲನ್ನು ಲೀಲೆಯಿಂದ ಮುರಿದು ಸೀತಾನಾಮಕ ಲಕ್ಷ್ಮಿಯನ್ನು ಹೊಂದಿ ಊರಿಗೆ ಹೊರಟನು. ಮಧ್ಯ ಮಾರ್ಗದಲ್ಲಿ ಭೇಟಿಯಾದ ಕ್ಷತ್ರಕುಲಾಂತಕ ಪರಶುರಾಮನ ಗರ್ವವನ್ನು ಮುರಿದನು. (ಇದು ಮೋಹಕವಚನ. ಭೂಮಿಯಲ್ಲಿ ಗರ್ವಿಗಳಾದ ಕ್ಷತ್ರಿಯರನ್ನೆಲ್ಲ ಕೊಂದು ಸಜ್ಜನರಿಗೆ ಮಂಗಳವನ್ನುಂಟುಮಾಡಿದ ಪರಶುರಾಮನೂ, ರಾಮನೂ ಒಂದಾಗಿ ಅಭೇದವನ್ನು ತೋರಿಸಿ ತಿರುಗಿ ಬೇರೆಯಾಗಿ ಭಗವಂತನು ತೋರಿದನು.) ಸತ್ಯಕ್ಕೆ ಕಟ್ಟುಬಿದ್ದು, ತಂದೆಯು ಸ್ತ್ರೀಜಿತನಾಗಿ, ರಾಮನಿಗೆ ವನವಾಸಮಾಡೆಂದು ಅಪ್ಪಣೆ ಮಾಡಿದರೆ, ಶ್ರೀರಾಮನು ತಂದೆಗೆ ಗೌರವವನ್ನು ಕೊಡುವುದಕ್ಕಾಗಿ ಅಪ್ಪಣೆಯನ್ನು ಶಿರಸಾವಹಿಸಿ, ಸರ್ವಸ್ವವನ್ನೂ ತ್ಯಜಿಸಿ ಸೀತಾಸಹಿತನಾಗಿ ದಂಡಕಾರಣ್ಯಕ್ಕೆ ತೆರಳಿದನು.

ತನ್ನನ್ನು ಕಾಮಿಸಿ ನಿರ್ಬಂಧಪಡಿಸಿದ ಶೂರ್ಪಣಖಿಯ ಮೂಗನ್ನು ಲಕ್ಷ್ಮಣ ನಿಂದ ಛೇದನಮಾಡಿಸಿ, ವಿರೂಪಮಾಡಿ ಕಳುಹಿಸಿದನು. ಖರ, ತ್ರಿಶರ ಮತ್ತು ದೂಷಣರೆಂಬ ಶೂರ್ಪಣಖಿಯ ಬಂಧುಗಳು ಹದಿನಾಲ್ಕು ಸಾವಿರ ರಾಕ್ಷಸಯೋಧ ರೊಡನೆ ಯುದ್ಧಕ್ಕೆ ಬರಲು, ಅವಾರಣೀಯ ಕೋದಂಡಪಾಣಿಯಾದ ಶ್ರೀರಾಮನು ಅವರೆಲ್ಲರನ್ನೂ ಸಂಹರಿಸಿ, ಕಾಡಿನಲ್ಲಿ ಸಂಚರಿಸುತ್ತ, ಅಸುರರನ್ನು ಮೋಹಿಸುವುದ ಕ್ಕಾಗಿ ಹಸಿವು, ಬಿಸಿಲು ಮುಂತಾದುವುಗಳಿಂದ ಪೀಡಿತನಾಗಿ ದುಃಖಪಟ್ಟವನಂತೆ ತೋರಿಸಿದನು. ರಾವಣನು ತಂಗಿಯಿಂದ ಸೀತೆಯ ಸೌಂದರ್ಯವನ್ನು ಕೇಳಿ ಕಾಮ ಮೋಹಿತನಾಗಿ, ಸೀತೆಯನ್ನು ಕದ್ದು ತರುವುದಕ್ಕೆ ಮಾರೀಚನ ಸಹಾಯವನ್ನು ಬೇಡಿದನು. ಮಾರೀಚನು ಕಾಂಚನಮೃಗ ರೂಪವನ್ನುತಾಳಿ ಬರಲು ಶ್ರೀರಾಮನು ಅವನನ್ನು ಕೊಂದನು. ಶ್ರೀರಾಮನಿಲ್ಲದಿರುವಾಗ ರಾವಣನು ಸನ್ಯಾಸಿಯ ವೇಷ ದಿಂದ ಬಂದು ಸೀತಾಕೃತಿಯನ್ನು ಅಪಹರಿಸಿದನು. ರಾಮನು ನಿರ್ದುಃಖಿಯಾದರೂ ದುಃಖಿಯೆಂದು ಅಜ್ಞರು ತಿಳಿಯುವ ಹಾಗೆ ತೋರಿಸುತ್ತ ಲಕ್ಷ್ಮಣನೊಡನೆ ವನ ವನದಲ್ಲಿ ಸೀತೆಯನ್ನು ಹುಡುಕುತ್ತಾ ಅಲೆದಾಡಿದನು. ರಾಮನು ತಾನು ಆನಂದ ಪೂರ್ಣನಾದರೂ, ಸ್ತ್ರೀಯರಲ್ಲಿ ಮೋಹವುಳ್ಳವರಿಗೆ ಇಂತಹ ದುಃಖವೆಂಬುದನ್ನು

ಶಿಕ್ಷಿಸುತ್ತಿದ್ದನೇ ಹೊರತು ಅವನಿಗೆ ಲೇಶವೂ ದುಃಖವಿಲ್ಲ. ಶ್ರೀರಾಮನು ಸಮುದ್ರ ತೀರವನ್ನು ಸೇರಿ, ಸಮುದ್ರರಾಜನನ್ನು ಕುರಿತು ಮೂರುದಿವನ ತಪಸ್ಸನ್ನು ಮಾಡಿದನು. ಅವನು ಪ್ರತ್ಯಕ್ಷನಾಗಲಿಲ್ಲ. ಭಗವಂತನು ರೋಷವನ್ನು ಪ್ರಕಟಿಸಿದನು. ಅವನ ದೃಷ್ಟಿಯಿಂದ ಸಮುದ್ರದ ನೀರು ಶೋಷಿಸುತ್ತ ಬಂದಿತು. ಜಲಚರಗಳು ಒದ್ದಾಡಿದುವು. ಮೊರೆತವು ಅಡಗಿತು. ಕೂಡಲೇ ಸಮುದ್ರರಾಜನು ಪೂಜಾದ್ರವ್ಯ ದೊಡನೆ ಬಂದು ರಾಮನಲ್ಲಿ ಮರೆಹೋದನು.

**ವರುಣ :–** ಪೂರ್ಣನೇ ! ನಿರ್ವಿಕಾರನೂ, ಪುರಾತನಪುರುಷನೂ, ಜಗ ದೀಶ್ವರನೂ ಆದ ನಿನ್ನನ್ನು ಮಂದರಾದ ನಾವು ತಿಳಿಯಲಾರೆವು. ಸತ್ವಗುಣದಿಂದ ಸುರರನ್ನೂ, ರಜೋಗುಣದಿಂದ ಮಾನವರನ್ನೂ, ತಮೋಗುಣದಿಂದ ರಾಕ್ಷಸಾದಿ ಗಳನ್ನೂ ನೀನು ಸೃಷ್ಟಿಸುವೆ. ಹೀಗೆ ಜಗತ್ಕರ್ತನು ನೀನೇ ಹೊರತು ಇನ್ನಾರೂ ಅಲ್ಲ. ತ್ರಿಗುಣಗಳಿಗೆ ನಿಯಾಮಕನಾದ್ದರಿಂದ ಗುಣಗಳ ಲೇಪ ನಿನಗಿಲ್ಲ. ದೇವ ! ನಿನ್ನಿಚ್ಛಾನುಸಾರ ಸಮುದ್ರವನ್ನು ದಾಟಬಹುದು. ನಿನಗೆ ಅಸಾಧ್ಯವಾದುದು ಯಾವುದೂ ಇಲ್ಲ. ಪಾಪಿರಾವಣನನ್ನು ಕೊಂದು ಪತ್ನಿಯನ್ನು ಕರೆದುಕೊಂಡು ಬಾ ! ನಿನ್ನ ಕೀರ್ತಿವಿಸ್ತಾರಕ್ಕಾಗಿ ಸೇತುವೆಯನ್ನು ಕಟ್ಟಿಸು. ದಿಗ್ವಿಜಯಿಗಳಾದ ರಾಜರೆಲ್ಲ ನಿನ್ನ ಈ ಮಹಾಕಾರ್ಯವನ್ನು ನೋಡಿ ಆಶ್ಚರ್ಯದಿಂದ ನಿನ್ನನ್ನು ಹೊಗಳುವರು.

**ಶುಕ :–** ವರುಣನ ಪ್ರಾರ್ಥನೆಯಂತೆ ಶ್ರೀರಾಮನು ಸಮುದ್ರಕ್ಕೆ ಸೇತುವೆ ಯನ್ನು ಕಟ್ಟಿಸಿದನು. ಶ್ರೀರಾಮನು ಎಲ್ಲರೊಡನೆ ಹಿಂದೆ ಹನುಮಂತನಿಂದ ದಗ್ಧ ವಾಗಿದ್ದ ಲಂಕೆಯ ಬಳಿಗೆ ಬಂದನು. ಕಪಿಗಳು ಲಂಕೆಯನ್ನು ಮುತ್ತಿ ಮಂದಿರ ಮೊದಲಾದುವುಗಳನ್ನು ಧ್ವಂಸಮಾಡಿದರು. ರಾವಣನು ಅವರನ್ನು ತಡೆದು, ಅವರೊ ಡನೆ ಯುದ್ಧವನ್ನು ಮಾಡಲು ಕುಂಭ, ನಿಕುಂಭ, ತನ್ನ ಪುತ್ರರಾದ ಧೂಮ್ರಾಕ್ಷ, ದುರ್ಮುಖ, ಸುರಾಂತಕ ಮತ್ತು ನರಾಂತಕರೇ ಮೊದಲಾದ ವೀರರನ್ನೂ, ಸೇನಾಪತಿ ಪ್ರಹಸ್ತ, ಅತಿಕಾಯ, ವಿಕಂಪನಾದಿಗಳನ್ನೂ, ಇತರ ಭಟರನ್ನೂ ಕಳುಹಿಸಿದನು. ಇವರಲ್ಲರೂ ಬಂದು ಯುದ್ಧಮಾಡಿ ಹತರಾದ ಬಳಿಕ, ರಾವಣನು ಕುಂಭಕರ್ಣನನ್ನು ಕಳುಹಿಸಿದನು ಶ್ರೀರಾಮನು ಅವನನ್ನು ಕೊಂದನು. ತಿರುಗಿಬಂದ ವೀರರಾಕ್ಷಸರನ್ನು ರಾಮನಿಂದ ರಕ್ಷಿತರಾದ ಲಕ್ಷ್ಮಣ, ಅಂಗದ, ಸುಗ್ರೀವಾದಿಗಳು ಕೊಂದರು. ತಿರುಗಿ ಬಂದ ವೀರರಾಕ್ಷಸರನ್ನು ರಾಮನಿಂದ ರಕ್ಷಿತರಾದ ಲಕ್ಷ್ಮಣ, ಅಂಗದ, ಸುಗ್ರೀವಾದಿ ಗಳು ಕೊಂದರು. ಕೊನೆಗೆ ರಾವಣನು ಪುಷ್ಪಕವಿಮಾನವೇರಿ ಯುದ್ಧಕ್ಕೆ ಬಂದು ರಾಮ ನನ್ನಿದಿರಿಸಿದನು. ರಾಮನು ಆಗ ಇಂದ್ರನಿಂದ ಕಳುಹಿಸಲ್ಪಟ್ಟು ಮಾತಲಿಯಿಂದ ತರ ಲ್ಪಟ್ಟ ರಥವನ್ನೇರಿದನು. ರಾವಣನು ಅರ್ಧಚಂದ್ರಬಾಣಗಳನ್ನು ಪ್ರಯೋಗಿಸಿದನು.

ಆಗ ರಾಮನು "ರಾಕ್ಷಸಾಧಮನೇ ! ಸೀತೆಯನ್ನು ಕದ್ದು ತಂದಿರುವೆ. ಅದಕ್ಕಾಗಿ ನಾಚಿಕೆಯಿಲ್ಲದೆ ನಿಂತಿರುವೆ. ಅದಕ್ಕೆ ತಕ್ಕ ಫಲವನ್ನುಂಟು ಮಾಡುವೆನು" ಎಂದು ಹೇಳಿ ಬಾಣವನ್ನು ಬಿಟ್ಟು ರಾವಣನನ್ನು ಕೊಂದನು. ರಾವಣನ ಕಡೆಯವರು ಹಾಹಾ ಕಾರ ಮಾಡಿದರು. ಮಂಡೋದರಿ ಮೊದಲಾದ ಸ್ತ್ರೀಯರು ಮರುಗುತ್ತ ಓಡಿ ಬಂದು ತಮ್ಮ ತಮ್ಮ ಪತಿಗಳ ಮೃತದೇಹಗಳನ್ನಾಲಿಂಗಿಸಿಕೊಂಡು "ನಾಥ ! ನಾವು ಹತ ರಾದೆವು. ಲಂಕೆಯು ಅರಣ್ಯಪ್ರಾಯವಾಯಿತು. ಇನ್ನು ಯಾರನ್ನು ಮರೆ ಹೋಗೋಣ ? ಸೀತೆಗೆ ಮಹಾಪರಾಧವನ್ನು ಮಾಡಿದ ಪ್ರಯುಕ್ತ ಇಂತಹ ದುಸ್ಥಿ ತಿಯು ಉಂಟಾಯಿತು" ಎಂದು ಬಹುವಿಧವಾಗಿ ಪ್ರಲಾಪಿಸಿದರು. ರಾಮನ ಆಜ್ಞೆ ಯಂತೆ ವಿಭೀಷಣನು ಆ ಸ್ತ್ರೀಯರನ್ನು ಸಮಾಧಾನಗೊಳಿಸಿ ರಾವಣಾದಿಗಳ ಪ್ರೇತ ಕಾರ್ಯಗಳನ್ನು ಮಾಡಿದನು. ಅಶೋಕವನದಿಂದ ಬಂದ ಸೀತೆಯು ರಾಮನನ್ನು ನೋಡಿ ಆನಂದಿಸಿದಳು. ಶ್ರೀರಾಮನು ಅವಳಲ್ಲಿ ದಯೆ ತೋರಿದನು. ವಿಭೀಷಣನಿಗೆ ಲಂಕಾ ರಾಜ್ಯವನ್ನೂ, ದಿನಕಲ್ಪ ಪೂರ್ತಿ ಆಯುಷ್ಯವನ್ನೂ ಕೊಟ್ಟು ಪುಷ್ಪಕ ವಿಮಾನದಲ್ಲಿ ಸೀತೆಯನ್ನು ಹತ್ತಿಸಿ ಲಕ್ಷ್ಮಣ, ವಿಭೀಷಣ, ಸುಗ್ರೀವಾದಿಗಳೊಡನೆ ವಿಮಾನದಲ್ಲಿ ಕುಳಿತು ಅಯೋಧ್ಯೆಗೆ ಹೊರಟನು ದಾರಿಉದ್ದಕ್ಕೂ ಲೋಕಪಾಲಕರು ಪುಷ್ಪವನ್ನು ಮಳೆಗರೆಯುತ್ತ, ಶ್ರೀರಾಮನ ಚರಿತ್ರೆಯನ್ನು ಕೀರ್ತಿಸುತ್ತ ಬಂದರು. ಇತ್ತ ಭರತನು ರಾಮಾಗಮನವನ್ನು, ನಿರೀಕ್ಷಿಸುತ್ತ ಗೋಮೂತ್ರಸಹಿತವಾದ ಯವಾನ್ನವನ್ನು ಉಣ್ಣುತ್ತ ಜಟಾವಲ್ಕಲ ಧಾರಿಯಾಗಿ ಬಹುದುಃಖಿಯಾಗಿರುವನು ಎಂದು ಶ್ರೀ ರಾಮನು ಕೇಳಿ ಪರಮಾನಂದಭರಿತನಾಗಿರಲು, ಭರತನು ರಾಮನ ಪಾದುಕೆಗಳನ್ನು ತಲೆಯ ಮೇಲಿಟ್ಟುಕೊಂಡು ಮಂತ್ರಿ, ಪುರೋಹಿತರು ಮತ್ತು ಪ್ರಜೆಗಳೊಡನೆ ಬಂದು ಪಾದುಕೆಗಳನ್ನು ಸ್ವಾಮಿಯ ಪಾದಗಳಿಗೆ ತೊಡಿಸಿ ನಮಿಸಿದನು. ಪ್ರಜೆಗಳೆಲ್ಲರೂ ಶ್ರೀ ರಾಮನಿಗೆ ನಮಸ್ಕರಿಸಿದರು. ಬಹುಕಾಲದಿಂದ ಅಗಲಿದ್ದ ಶ್ರೀರಾಮಚಂದ್ರನನ್ನು ನೋಡಿ ಪುಷ್ಪವೃಷ್ಟಿ ಮಾಡಿ ಆನಂದದಿಂದ ಕುಣಿದಾಡಿದರು.

ಶ್ರೀರಾಮನು ಉತ್ಸವದಿಂದ ಅಯೋಧ್ಯೆಯನ್ನು ಪ್ರವೇಶಿಸಿ ಬರುತ್ತಿದ್ದಾಗ ಭರತನು ಪಾದುಕೆಗಳನ್ನೂ, ವಿಭೀಷಣನು ಚಾಮರವನ್ನೂ, ಸುಗ್ರೀವನು ವ್ಯಜನ ವನ್ನೂ, ಹನುಮಂತದೇವನು ಛತ್ರವನ್ನೂ, ಶತ್ರುಘ್ನನು ಬಿಲ್ಲು ಬತ್ತಳಿಕೆಗಳನ್ನೂ, ಸೀತಾದೇವಿಯು ತೀರ್ಥಕಮಂಡಲುವನ್ನೂ, ಅಂಗದನು ಖಡ್ಗವನ್ನೂ, ಜಾಂಬು ವಂತನು ಸುವರ್ಣಾಲಂಕೃತ ಗುರಾಣಿಯನ್ನೂ ಹಿಡಿದುಕೊಂಡು ಶ್ರೀರಾಮನೊಂದಿಗ ಬರುತ್ತಿದ್ದಾರೆ. ಪುಷ್ಪಕವಿಮಾನದಲ್ಲಿ ಕುಳಿತು ಸ್ತುತ್ಯನಾಗುತ್ತ ಬರತಕ್ಕ ಶ್ರೀರಾಮನು ರಾಜವೈಭವದಿಂದ ಅಯೋಧ್ಯೆಯ ರಾಜಬೀದಿಗಳಲ್ಲಿ ಬಂದು ವಸಿಷ್ಠಾದಿ ಗುರು ಗಳಿಗೂ, ಕೈಕೇಯಿ ಮೊದಲಾದ ಮಲತಾಯಿಯರಿಗೂ, ತಾಯಿಯಾದ ಕೌಸಲ್ಯೆಗೂ ನಮಸ್ಕರಿಸಿ, ಇತರರನ್ನು ಯಥಾಯೋಗ್ಯವಾಗಿ ಬಹುಮಾನಿಸಿದನು. ಕೌಸಲ್ಯಾದಿ

ಮಾತೆಯರು ಮಕ್ಕಳನ್ನು ನೋಡಿ ಆನಂದಬಾಷ್ಪವನ್ನು ಸುರಿಸುತ್ತ ದುಃಖವನ್ನು ಕಳೆದುಕೊಂಡರು.

ವಸಿಷ್ಠರು ಶ್ರೀರಾಮನಿಗೆ ಪಟ್ಟಾಭಿಷೇಕವನ್ನು ಮಾಡಿದರು ಶ್ರೀರಾಮನು ಪ್ರಜೆಗಳನ್ನು ಯೋಗ್ಯರೀತಿಯಿಂದ ರಕ್ಷಿಸುತ್ತಿದ್ದನು ಪ್ರಜೆಗಳು ಶ್ರೀರಾಮನನ್ನು ತಂದೆಯಂತೆ ಭಾವಿಸುತ್ತಿದ್ದರು. ತ್ರೇತಾಯುಗವಾದರೂ ಕೃತಯುಗದಂತೆ ಸಂಪೂರ್ಣ ಧರ್ಮವೇ ನಡೆಯುತ್ತಿತ್ತು. ಶ್ರೀರಾಮನು ರಾಜ್ಯವಾಳುತ್ತಿದ್ದಾಗ ಆಧಿ, ವ್ಯಾಧಿ, ಮುಪ್ಪು, ಹಸಿವು ಮೊದಲಾದ ಯಾವ ದುಃಖಾದಿಗಳೂ ಕಾಣುತ್ತಿರಲಿಲ್ಲ. ಶ್ರೀ ರಾಮನು ಏಕಛತ್ರಾಧಿಪತಿಯಾಗಿದ್ದು ವರ್ಣಾಶ್ರಮ ಧರ್ಮಗಳನ್ನು ಪ್ರಜೆಗಳಿಗೆ ನಿಯಮಿಸುತ್ತ, ತಾನೂ ಲೋಕ ಶಿಕ್ಷೆಗಾಗಿ ಕ್ಷತ್ರಿಯ ಧರ್ಮವನ್ನು ಅನುಸರಿಸುತ್ತಾ ಇದ್ದನು. ಸೀತಾದೇವಿಯು ವಿನಯಾದಿಗುಣಗಳಿಂದ ಪತಿದೇವನ ಮನಸ್ಸನ್ನು ವಶ ಪಡಿಸಿಕೊಂಡು ವಿಶೇಷವಾಗಿ ಪತಿಯ ಪ್ರೀತಿಗೆ ಪಾತ್ರಳಾಗಿದ್ದಳು.

## ಎಂಟನೆಯ ಅಧ್ಯಾಯ ಮುಗಿದುದು

ಶ್ರೀರಾಮನು ರಾಜ್ಯವಾಳುತ್ತಿದ್ದಾಗ ವಸಿಷ್ಠಾದಿಗಳ ಸಹಾಯದಿಂದ ನಡೆಸಿದ ಯಜ್ಞಗಳಲ್ಲಿ ತನ್ನ ಸ್ವರೂಪನಾದ ಪರಮಾತ್ಮನನ್ನೇ ಪೂಜಿಸುತ್ತಿದ್ದನು. ಯಜ್ಞದಲ್ಲಿ ಹೋತೃವಿಗೆ ಪೂರ್ವದಿಕ್ಕಿನ ಭೂಮಿಯನ್ನೂ, ಉದ್ಗಾತೃವಿಗೆ ಉತ್ತರದಿಕ್ಕಿನ ಭೂಮಿ ಯನ್ನೂ, ಋತ್ವಿಕ್ಕಿಗೆ ದಕ್ಷಿಣದಿಕ್ಕಿನ ಭೂಮಿಯನ್ನೂ, ಅಧ್ವರ್ಯುವಿಗೆ ಪಶ್ಚಿಮ ದಿಕ್ಕಿನ ಭೂಮಿಯನ್ನೂ, ಆಚಾರ್ಯರಿಗೆ ನಾಲ್ಕು ದಿಕ್ಕುಗಳ ಮಧ್ಯದಲ್ಲಿರತಕ್ಕ ಭೂಮಿ ಯನ್ನೂ ದಕ್ಷಿಣೆಯಾಗಿ ಕೊಟ್ಟು, ಮೈಮೇಲಿನ ಎರಡು ಬಟ್ಟೆಗಳನ್ನು ಬಿಟ್ಟು ಉಳಿದ ಅಲಂಕಾರಗಳನ್ನೆಲ್ಲ ದಾನಮಾಡಿದನು. ಸೀತೆಯು ಮಾಂಗಲ್ಯವೊಂದನ್ನು ಬಿಟ್ಟು ಉಳಿದ ಆಭರಣಗಳನ್ನೆಲ್ಲ ದಾನಮಾಡಿದಳು. ಋತ್ವಿಜರೆಲ್ಲರೂ ತಮಗೆ ದಾನವಾಗಿ ಬಂದ ಭೂಭಾಗಗಳನ್ನೆಲ್ಲ ಶ್ರೀರಾಮನಿಗೆ ಸಮರ್ಪಿಸಿ" ವಿಶ್ವೇಶ್ವರನೇ! ನೀನು ಮೋಕ್ಷ ವನ್ನೇ ಕೊಡುವವನಾದುದರಿಂದ ನಮಗೆ ಸರ್ವಾಭೀಷ್ಟವನ್ನೂ ಕೊಟ್ಟಂತಾಯಿತು. ನೀನು ಸಾಕ್ಷಾತ್ಪರಮಪುರುಷನು, ಸರ್ವಕಾಮಪೂರ್ಣನು, ನಿನಗೆ ನಮಸ್ಕಾರ! " ಎಂದು ಸ್ತುತಿಸಿದರು. ಶ್ರೀರಾಮನು ಸೀತಾಸಮೇತನಾಗಿ ಸುಖದಿಂದ ರಾಜ್ಯ ಭಾರವನ್ನು ಮಾಡುತ್ತಿದ್ದಾಗ ಒಂದುದಿವಸ ಲೋಕವೃತ್ತಾಂತವನ್ನು ತಿಳಿಯಲು ರಾತ್ರಿಯಲ್ಲಿ ಗುಪ್ತವೇಷದಿಂದ ಶ್ರೀರಾಮನೇ ಸಂಚರಿಸುತ್ತಿದ್ದಾಗ ಒಂದು ಮನೆಯಲ್ಲಿ ಗಂಡಹೆಂಡತಿಯರಿಗೆ ಜಗಳವಾಗುತ್ತಿತ್ತು, ಗಂಡನು " ಕೇವಲ ಸ್ತ್ರೀಕಾಮುಕನಾದ ರಾಮನು ರಾವಣನ ಮನೆಯಲ್ಲಿದ್ದ ಸೀತೆಯನ್ನು ತಿರುಗಿ ಪರಿಗ್ರಹಿಸಿದಂತೆ ಸರ್ವಥಾ, ಪರಪುರುಷನ ಮನೆಯಲ್ಲಿ ಇಚ್ಛಾನುಸಾರ ವಾಸಮಾಡಿದ ದುಷ್ಟೆಳಾದ ನಿನ್ನನ್ನು

ಸ್ವೀಕರಿಸಲಾರೆ" ಎಂದು ಹೇಳುತ್ತಿದ್ದನು. ಇದನ್ನು ಕೇಳಿ ರಾಮನು ಲೋಕಾಪವಾದಕ್ಕೆ ಹೆದರಿ ಗರ್ಭಿಣಿಯಾಗಿದ್ದ ಸೀತೆಯನ್ನು ಬಿಟ್ಟುಬಿಟ್ಟನು

ಅವಳು ವಾಲ್ಮೀಕಾಶ್ರಮಕ್ಕೆ ಹೋಗಿ ಸಕಾಲದಲ್ಲಿ ಕುಶ ಮತ್ತು ಲವ ನಾಮಕ ಅವಳಿ ಗಂಡುಮಕ್ಕಳನ್ನು ಹೆತ್ತಳು. ವಾಲ್ಮೀಕಿಗಳು ಆ ಮಕ್ಕಳಿಗೆ ಜಾತಕರ್ಮಾದಿ ಸಂಸ್ಕಾರಗಳನ್ನು ಮಾಡಿದರು. ಲಕ್ಷ್ಮಣನಿಗೆ ಅಂಗದ, ಚಕ್ರಕೇತು ಎಂಬ ಇಬ್ಬರು ಮಕ್ಕಳೂ, ಭರತನಿಗೆ ದಕ್ಷ ಮತ್ತು ಪುಷ್ಕಳ ಎಂಬ ಇಬ್ಬರು ಪುತ್ರರೂ, ಶತ್ರುಘ್ನನಿಗೆ ಸುಬಾಹು ಮತ್ತು ಶ್ರುತಸೇನ ಎಂಬಿಬ್ಬರು ಗಂಡುಮಕ್ಕಳೂ ಹುಟ್ಟಿದರು.

ರಾಮನ ಅಪ್ಪಣೆ ಪ್ರಕಾರ ದಿಗ್ವಿಜಯಕ್ಕೆ ಹೊರಟ ಭರತನು ಗಂಧರ್ವನಿಂದ ಹುಟ್ಟಿದ್ದ ಮೂರುಕೋಟಿ ಅಸುರರನ್ನು ಸಂಹರಿಸಿ ಅವರ ಸರ್ವಸ್ವವನ್ನೂ ರಾಮನಿಗೆ ತಂದು ಅರ್ಪಿಸಿದನು.

ಶತ್ರುಘ್ನನು ಮಧುದೈತ್ಯನ ಪುತ್ರ ಲವಣಾಸುರನನ್ನು ಕೊಂದು ಮಧುವನದಲ್ಲಿ ಮಧುರಾಪುರಿಯನ್ನು ನಿರ್ಮಿಸಿದನು.

ರಾಮನಿಂದ ತ್ಯಕ್ತಳಾದ ಸೀತಾದೇವಿಯು ತನ್ನಿಬ್ಬರು ಮಕ್ಕಳನ್ನೂ ವಾಲ್ಮೀಕಿಗಳಿಗೆ ಒಪ್ಪಿಸಿ, ಪತಿವಿಯೋಗವನ್ನು ಸಹಿಸಲಾರದೆ ಶ್ರೀರಾಮನ ಪಾದಾರವಿಂದಗಳನ್ನೆ ಧ್ಯಾನಿಸುತ್ತ ಭೂಮಿಯೊಳಗೆ ಪ್ರವೇಶಿಸಿದಳು. ಲೋಕದೃಷ್ಟಿಯಿಂದ, ರಾಮನನ್ನು ಅಗಲಿದವಳಂತೆ ತೋರಿಸಿದ ಸೀತೆಯನ್ನು ಶ್ರೀರಾಮನು ಸ್ಮರಿಸುವವನಂತೆ ನಟಿಸುತ್ತಿದ್ದನು. ಸೀತಾದೇವಿಯು ಭೂಮಿಯೊಳಗೆ ಹೋದಮೇಲೆ ಶ್ರೀರಾಮನು ಏಳುನೂರು ವರ್ಷಗಳವರೆಗೆ ಬ್ರಹ್ಮಚರ್ಯವನ್ನಾಚರಿಸುತ್ತ ಇರುವವನಂತೆ ತೋರಿಸುತ್ತಿದ್ದನು. ಶ್ರೀರಾಮನು ಸೀತಾವಿಯೋಗವಿಲ್ಲದಂತೆ ಸಂಚರಿಸುತ್ತ ನಕ್ಷತ್ರಮಾನ ರೀತ್ಯಾ ಹದಿಮೂರು ಸಾವಿರ ವರ್ಷಗಳಕಾಲ ಭೂಮಂಡಲವನ್ನು ಬ್ರಹ್ಮಲೋಕಕ್ಕೆ ಸಮಾನವಾಗಿ ಮಾಡಿ, ರಾಜ್ಯವಾಳುತ್ತ ಸೀತಾಸಹಿತನಾಗಿಯೇ ಅಖಂಡವಾಗಿ ಅಗ್ನಿಹೋತ್ರವನ್ನು ಮಾಡುತ್ತಿದ್ದನು. ಇದು ಜ್ಞಾನಿಗಳಿಗೆ ಮಾತ್ರ ಗೋಚರಿಸುತ್ತಿತ್ತು. ತನ್ನನ್ನು ಸ್ಮರಿಸುವವರ ಹೃದಯದಲ್ಲಿ ಶ್ರೀರಾಮನು ತನ್ನ ಒಂದು ರೂಪವನ್ನಿಟ್ಟು ವೈಕುಂಠಕ್ಕೆ ಹೊರಟುಹೋದನು.

ಶ್ರೀರಾಮನು ಮಾಡಿದ ಸಮುದ್ರಬಂಧನ ಮತ್ತು ರಾಕ್ಷಸಾದಿಗಳ ಸಂಹಾರ ಮುಂತಾದುವು ಅವನಿಗೇನೂ ಅಶಕ್ಯಗಳಲ್ಲವಾದ್ದರಿಂದ ಆಶ್ಚರ್ಯಗಳಲ್ಲ. ಕಾಡುಕಪಿಗಳು ಭಗವಂತನಾದ ಅವನಿಗೆ ಸಹಾಯಕರೇನು ? ನಿರ್ದೋಷ, ಪಾಪಪರಿಹಾರಕ ಸರ್ವತ್ರವ್ಯಾಪ್ತವಾದ ಯಾವನ ಯಶಸ್ಸನ್ನು ರಾಜರ ಸಭೆಗಳಲ್ಲಿ ಋಷಿಗಳು ಈಗಲೂ

ಕೊಂಡಾಡುತ್ತಿರುವರೋ, ಯಾವಾತನ ಪಾದಪದ್ಮಗಳನ್ನು ಇಂದ್ರ, ಕುಬೇರಾದಿ ದೇವತೆಗಳು ತಲೆಯಮೇಲೆ ಧರಿಸುತ್ತಿರುವರೋ ಅಂತಹ ಶ್ರೀರಾಮನ ಪಾದಪದ್ಮಗಳನ್ನು ಶರಣು ಹೊಂದುವೆವು ! ಶ್ರೀರಾಮನನ್ನು ನವವಿಧ ಭಕ್ತಿಗಳಿಂದ ಸೇವಿಸಿದ ಪ್ರಜೆಗಳು ಅವನನ್ನು ಹಿಂಬಾಲಿಸಿ ಮುಕ್ತಿಯನ್ನು ಪಡೆದರು.

ಪರೀಕ್ಷಿದ್ರಾಜನೇ ! ಪ್ರಮಾದದಿಂದ ಹಿಂಸಾಕರ್ಮವನ್ನು ಮಾಡುತ್ತಿರುವವನೂ ಶ್ರದ್ಧೆಯಿಂದ ಶ್ರೀರಾಮನ ಚರಿತ್ರೆಯನ್ನು ಶ್ರವಣಮಾಡುತ್ತ, ಮನಸ್ಸಿನಿಂದ ಧ್ಯಾನಿಸುತ್ತಾ, ನಾಲಗೆಯಿಂದ ಕೀರ್ತಿಸುತ್ತ, ರಾಮನನ್ನು ಮನಸ್ಸಿನಲ್ಲಿಯೇ ಇಡುವ ಅಧಿಕಾರಿಯಾದರೆ ಅವನೂ ಸಂಸಾರಕ್ಕೆ ಕಾರಣವಾದ ಕರ್ಮಬಂಧವನ್ನು ನೀಗಿ ಮುಕ್ತನಾಗುತ್ತಾನೆ.

**ಪರೀಕ್ಷಿತ್ :–** ಶ್ರೀರಾಮನು ತನ್ನ ತಮ್ಮಂದಿರೇ ಮೊದಲಾದವರ ವಿಷಯದಲ್ಲಿ ಹೇಗೆ ನಡೆದುಕೊಂಡನು ?

**ಶುಕ :–** ಪಟ್ಟಾಭಿಷೇಕವಾದಮೇಲೆ ಶ್ರೀರಾಮನು ತನ್ನ ಸಹೋದರರಿಗೆ ದಿಗ್ವಿಜಯಕ್ಕೆ ಆಜ್ಞಾಪಿಸಿದನು. ಅದರಂತೆ ಅವರು ದಿಗ್ವಿಜಯ ಮಾಡುತ್ತಿದ್ದರು.

**ಪರೀಕ್ಷಿತ್ .–** ತಮ್ಮಂದಿರೂ, ಪಟ್ಟಣಿಗರೂ, ಪ್ರಜೆಗಳೂ ಶ್ರೀರಾಮನ ವಿಷಯದಲ್ಲಿ ಹೇಗೆ ನಡೆಯುತ್ತಿದ್ದರು ?

**ಶುಕ :–** ಶ್ರೀರಾಮನು ತನ್ನ ದರ್ಶನವನ್ನು ಕೊಟ್ಟು ಅತ್ಯಾನಂದವನ್ನುಂಟು ಮಾಡುತ್ತ, ಸಹೋದರಾದಿ ಸರ್ವಭಕ್ತರ ಮೇಲೆ ದಯೆಯಿಂದ ರಾಜಮಾರ್ಗದ ಸರ್ವ ಬೀದಿಗಳಲ್ಲಿಯೂ ಸಂಚರಿಸುತ್ತಿದ್ದನು. ಅವನು ಬರುವಾಗ ಪ್ರತಿ ಬೀದಿಯನ್ನೂ ಅಲಂಕರಿಸಿ ಅವನಿಗೆ ಪಟ್ಟಣಿಗರು ಮೊದಲಾದವರು ಕೈಗಾಣಿಕೆಗಳನ್ನು ಒಪ್ಪಿಸಿ "ಶ್ರೀರಾಮನೇ ! ವರಾಹರೂಪದಿಂದ ಉದ್ಧರಿಸಿದ ಭೂಮಿಯನ್ನು ಬಹುಕಾಲದವರೆಗೆ ಪರಿಪಾಲಿಸುತ್ತ ಭಕ್ತರನ್ನು ಉದ್ಧರಿಸು !'' ಎಂದು ಹೇಳುತ್ತ ಮಂಗಳಾಶಾಸನವಮಾಡುತ್ತಿದ್ದರು. ಹೆಣ್ಣುಮಕ್ಕಳು ಉಪ್ಪರಿಗೆಯನ್ನೇರಿ ಪುಷ್ಪವೃಷ್ಟಿಯನ್ನು ಮಾಡುತ್ತಿದ್ದರು.

**ಪರೀಕ್ಷಿತ್ :–** ಶ್ರೀರಾಮನು ಸೀತೆಯಿಂದ ಕೂಡಿ ತನ್ನ ಅರಮನೆಯಲ್ಲಿ ಹೇಗಿರುತ್ತಿದ್ದನು ?

**ಶುಕ :–** ಶ್ರೀರಾಮನು ಇಕ್ಷ್ವಾಕು ಮೊದಲಾದ ರಾಜರು ಸೇವಿಸುತ್ತಿದ್ದ ಅನರ್ಘ್ಯ ರತ್ನಾದಿಗಳಿಂದ ಯುಕ್ತವಾದ ಅರಮನೆಯಲ್ಲಿ ಮಹಾರಾಜ ವೈಭವದಿಂದ

ಪ್ರವೇಶಿಸಿ ಸೀತಾಸಮೇತನಾಗಿ ಬಹುಕಾಲದವರೆಗೆ ಪರಮಾನಂದವನ್ನು ಅನುಭವಿಸುತ್ತಿದ್ದನು. ಧರ್ಮಕ್ಕೆ ಲೋಪವಿಲ್ಲದ ಭೋಗಗಳನ್ನು ಅನುಭವಿಸುತ್ತ ಸಕಲ ಪ್ರಜೆಗಳನ್ನೂ ಆನಂದಪಡಿಸುತ್ತ ಸಾಮ್ರಾಜ್ಯವನ್ನು ಆಳುತ್ತಿದ್ದನು.

**ಒಂಭತ್ತನೆಯ ಅಧ್ಯಾಯ ಮುಗಿದುದು**

ಶ್ರೀರಾಮನ ಜ್ಯೇಷ್ಠ ಪುತ್ರ ಕುಶನಿಂದ ಅತಿಥಿ, ನಿಷಧ, ನಭ, ಪುಂಡರೀಕ, ಕ್ಷೇಮಧನ್ವ, ದೇವಾನೀಕ, ಅಹೀನ, ಪಾರಿಪಾತ್ರ, ಬಲಸ್ಥಲ, ವಜ್ರನಾಭ, ಅರ್ಕಸಂಭವ, ಸ್ವಗುಣ, ವಿಧೃತ, ಹಿರಣ್ಯನಾಭ ಇವರು ಕ್ರಮವಾಗಿ ಒಬ್ಬರಿಂದ ಒಬ್ಬರು ಹುಟ್ಟಿದರು. ಹಿರಣ್ಯ ನಾಭನು ಜೈಮಿನಿಗಳ ಶಿಷ್ಯನಾಗಿ ಯೋಗಾಚಾರ್ಯ ನೆನಿಸಿದನು. ಮತ್ತು ಯಾಜ್ಞವಲ್ಕ್ಯರಿಗೆ ಅಜ್ಞಾನ ನಾಶಕವೂ, ಮೋಕ್ಷ ಸಾಧಕವೂ ಆದ ಭಗವದ್ವಿಷಯಸಂಬಂಧಿಯೋಗವನ್ನು ಉಪದೇಶಿಸಿದನು. ಹಿರಣ್ಯನಾಭನಿಗೆ ಪುಣ್ಯ, ಧ್ರುವಸಂಧಿ, ಸುದರ್ಶನ, ಅಗ್ನಿವರ್ಣ, ಶೀಘ್ರ, ಮರುತ್ತು ಹೀಗೆ ಕ್ರಮವಾಗಿ ಒಬ್ಬರಿಂದ ಒಬ್ಬರು ಹುಟ್ಟಿದರು. ಮರುತ್ತು ಯೋಗಿಯಾಗಿ ಈಗಲೂ ಕಲಾಪಗ್ರಾಮದಲ್ಲಿ ತಪಸ್ವಿಯಾಗಿರುವನು. ಅವನು ಮುಂದೆ ಕಲಿಯುಗದ ಕೊನೆಯಲ್ಲಿ ನಷ್ಟವಾಗಿರುವ ಸೂರ್ಯವಂಶವನ್ನು ತಿರುಗಿ ಅಭಿವೃದ್ಧಿಗೊಳಿಸುವನು. ಮರುತ್ತಿಗೆ ಸುಶ್ರುತನೂ ಅವನಿಗೆ ಸೂಧಿಯೂ, ಅವನಿಗೆ ಮರ್ಷಣನೂ, ಅವನಿಗೆ ಮಹಸ್ವಾನನೂ, ಅವನಿಗೆ ವಿಶ್ವಸಾಹ್ವನೂ, ಆತನಿಗೆ ಬೃಹದ್ಬಲನೂ ಮಕ್ಕಳಾಗಿ ಹುಟ್ಟಿದರು. ಬೃಹದ್ಬಲನನ್ನು ನಿಮ್ಮ ತಂದೆ ಅಭಿಮನ್ಯುವು ರಣದಲ್ಲಿ ಕೊಂದನು. ಇನ್ನು ಮುಂದೆ ಇಕ್ಷ್ವಾಕು ವಂಶದಲ್ಲಿ ಹುಟ್ಟಿದವರನ್ನು ಹೇಳುವೆನು ಕೇಳು. ಬೃಹದ್ಬಲನಿಗೆ ಬೃಹದ್ರಣ, ಉರುಕ್ಷಯ, ವತ್ಸಪ್ರೀತಿ... ಕುಣಕ, ಸುರಥ, ಸುಮಿತ್ರ ಹೀಗೆ ಕ್ರಮವಾಗಿ ಒಬ್ಬರಿಂದ ಒಬ್ಬರು ಪುತ್ರರಾಗಿ ಹುಟ್ಟುವರು. ಬೃಹದ್ಬಲನ ವಂಶದಲ್ಲಿ ಹುಟ್ಟುವ ರಾಜರಲ್ಲಿ **ಸುಮಿತ್ರನೇ** ಕೊನೆಯುವನು. ಕಲಿಯುಗದಲ್ಲಿ ಈ ಸುಮಿತ್ರ ರಾಜನವರೆಗೇ ಇಕ್ಷ್ವಾಕುವಂಶವಿರುವುದು.

**ಹತ್ತನೆಯ ಅಧ್ಯಾಯ ಮುಗಿದುದು**

**ಶುಕ** :– ಇಕ್ಷ್ವಾಕುವಿನ ಜ್ಯೇಷ್ಠ ಪುತ್ರನಾದ ವಿಕುಕ್ಷಿಯ ವಂಶವನ್ನು ಹೇಳಿದ್ದಾಯಿತು. ಇಕ್ಷ್ವಾಕುವಿನ ಮಗ ನಿಮಿರಾಜನ ವಂಶಾನುಕ್ರಮವನ್ನು ಹೇಳುವೆನು ಕೇಳು :–

ನಿಮಿರಾಜನು ಸತ್ರಯಾಗವನ್ನಾರಂಭಿಸಿದ್ದನು. ಮೊದಲೇ ವಸಿಷ್ಠರನ್ನು ಋತ್ವಿಜರಾಗಬೇಕೆಂದು ಬೇಡಿದಾಗ ಅವರು ಇಂದ್ರನ ಯಾಗಕ್ಕೆ ಪುರೋಹಿತರಾಗಲು

ಮೊದಲೇ ಒಪ್ಪಿಕೊಂಡಿರುವುದರಿಂದ ಆ ಯಾಗವು ಮುಗಿದ ಕೂಡಲೇ ಬರುವುದಾಗಿಯೂ, ಅಲ್ಲಿಯವರೆಗೆ ಕಾದಿರಬೇಕೆಂದು ಹೇಳಿದರು. ಶರೀರವು ನಶ್ವರವಾದುದರಿಂದ ಬೇಗ ಯಾಗವನ್ನು ಆರಂಭಿಸಬೇಕೆಂದು ನಿಮಿರಾಜನು ನಿಶ್ಚಯಿಸಿ, ವಸಿಷ್ಠರನ್ನು ಕಾಯದೆ ಯಾಗವನ್ನು ಆರಂಭಿಸಿಬಿಟ್ಟನು. ವಸಿಷ್ಠರು ಇಂದ್ರನ ಯಾಗವನ್ನು ಪೂರೈಸಿಕೊಂಡು ಕೂಡಲೇ ಬಂದು ನೋಡುತ್ತಾರೆ , ನಿಮಿಯು ಯಾಗವನ್ನು ಆರಂಭಿಸಿಬಿಟ್ಟಿದ್ದನು. ವಸಿಷ್ಠರಿಗೆ ಕೋಪವು ಬಂದಿತು. ನಿಮಿಯ ದೇಹವು ಬಿದ್ದು ಹೋಗಲಿ ಎಂದು ಶಪಿಸಿದರು. ಆಗ ನಿಮಿಯೂ ಕೂಡ ಪೌರೋಹಿತ್ಯದಿಂದ ಹಣ ದೊರೆಯುವುದೆಂಬ ದುರಾಶೆಯಿಂದ ಧರ್ಮವನ್ನು ತಿಳಿಯದೇ ಹೋದ ವಸಿಷ್ಠನ ದೇಹವೂ ಬಿದ್ದು ಹೋಗಲಿ ಎಂದು ಪ್ರತಿ ಶಾಪವನ್ನು ಕೊಟ್ಟನು. ಕೂಡಲೇ ಇಬ್ಬರೂ ಮೃತರಾದರು.. ಮಿತ್ರಾವರುಣರು (ಮಿತ್ರ ಮತ್ತು ವರುಣರಿಬ್ಬರು) ಊರ್ವಶಿಯನ್ನು ನೋಡಿದ ಕೂಡಲೇ ಮೋಹಿತರಾಗಿ ಅವರ ರೇತಸ್ಸು ಸ್ಖಲನವಾಯಿತು. ಅದನ್ನು ಒಂದು ಕುಂಭದಲ್ಲಿರಿಸಿದರು. ಅದರಿಂದ ವಸಿಷ್ಠರೂ ಮತ್ತು ಅಗಸ್ತ್ಯರೂ ಹುಟ್ಟಿದರು. ಇತ್ತ ನಿಮಿಯ ಪುರೋಹಿತರು ನಿಮಿಯ ಮೃತದೇಹವನ್ನು ಸುಗಂಧ ತೈಲದೊಳಗಿಟ್ಟು ಸತ್ರಯಾಗವನ್ನು ಮುಗಿಸಿ, ಯಾಗಕ್ಕಾಗಿಬಂದ ದೇವತೆಗಳನ್ನು ಕುರಿತು "ಸುರರೆ ! ನೀವು ಸಂತುಷ್ಟರಾಗಿದ್ದರೆ ಈ ದೇಹವು ಸಜೀವವಾಗಲಿ" ಎಂದು ಕೇಳಿಕೊಂಡರು. ಆಗ ಸೂಕ್ಷ್ಮದೇಹದಲ್ಲಿದ್ದ ನಿಮಿಯು "ದೇವತೆಗಳಿರಾ ! ಜ್ಞಾನಿಗಳು ದೇಹ ಸಂಬಂಧವನ್ನು ಅಪೇಕ್ಷಿಸದೆ ಶ್ರೀಹರಿಯ ಪಾದಪದ್ಮವನ್ನು ಭಜಿಸುತ್ತಾರೆ. ಆದ್ದರಿಂದ ದುಃಖಶೋಕ ಮತ್ತು ಭಯಗಳಿಗೆ ಕಾರಣವಾದ ಬಿದ್ದು ಹೋಗುವ ದೇಹವನ್ನು ಸ್ವೀಕರಿಸಲು ನನಗೆ ಇಚ್ಛೆಯಿಲ್ಲ" ಎಂದನು. ಆಗ ದೇವತೆಗಳು ಹಾಗಿದ್ದರೆ ನಿಮಿಯ ಇಷ್ಟದಂತೆ ಅವನು ಸ್ಥೂಲದೇಹವಿಲ್ಲದೆ ಸೂಕ್ಷ್ಮದೇಹದಿಂದ ಪ್ರಾಣಿಗಳ ಕಣ್ಣುಗಳಲ್ಲಿ ವಾಸ ಮಾಡುತ್ತಿರಲಿ. ಇದರಿಂದ ನಿಮಿಯೂ ಜೀವಿಸಿ, ನಿಮ್ಮಿಷ್ಟವೂ ಪೂರೈಸಿದಂತಾಗುವುದು" ಎಂದು ವರವಿತ್ತು ಹೊರಟುಹೋದರು. ಬಳಿಕ ಋಷಿಗಳು ನಿಮಿಗೆ ಸಂತತಿಯಿಲ್ಲದಿರುವುದರಿಂದ ರಾಜ್ಯವು ಅನಾಯಕವಾಗುವುದೆಂದು ಭಯಪಟ್ಟು, ನಿಮಿಯ ಮೃತಶರೀರವನ್ನು ಮಂತ್ರವನ್ನು ಹೇಳುತ್ತ ಮಥನ ಮಾಡಿದರು. ಆಗ ಆ ದೇಹದಿಂದ ಒಬ್ಬನು ಹುಟ್ಟಿದನು. ಅವನು ಲೋಕವಿಲಕ್ಷಣವಾಗಿ ಹುಟ್ಟಿದ್ಧರಿಂದ (ಜನನಾತ್ ಜನಕಃ) ಜನಕನೆಂದೂ, ಜೀವರಹಿತದೇಹದಲ್ಲಿ ಹುಟ್ಟಿದ್ದರಿಂದ ವಿದೇಹನೆಂದೂ, (ಮಥನಾತ್ ಮಿಥಿಲಃ) ಮಥನ ಮಾಡಿದಾಗ ಹುಟ್ಟಿದ್ದರಿಂದ ಮಿಥಿಲನೆಂದೂ ಪ್ರಸಿದ್ಧನಾದನು. ಇವನೇ ಮಿಥಿಲಾಪಟ್ಟಣವನ್ನು ನಿರ್ಮಿಸಿದವನು ವಿದೇಹರಾಜನಿಗೆ ಉದಾವಸು, ನಂದಿವರ್ಧನ, ಸುಕೇತು, ದೇವರಾತಃ ಬೃಹದ್ರಥ, ಮಹಾವೀರ್ಯ, ಸುಧೃತ್, ಧೃಷ್ಟಕೇತು, ಹರ್ಯಶ್ವ, ಮರು, ಪ್ರತೀಂಧಕ, ಕೃತರಥ, ದೇವಮೀಢ, ವಿಧೃತ, ಮಹಾಧೃತಿ, ಕೃತಿರಾತ, ಮಹಾರೋಮ, ಸ್ವರ್ಣ

ರೋಮ, ಹ್ರಸ್ವರೋಮ, ಸೀರಧ್ವಜ ಇವರು ಕ್ರಮವಾಗಿ ಒಬ್ಬರಿಂದೊಬ್ಬರು ಹುಟ್ಟಿದರು.

ಸೀರಧ್ವಜನು ಯಾಗ ಮಾಡಬೇಕೆಂದು ಭೂಮಿಯನ್ನು ನೇಗಿಲಿನಿಂದ ಶೋಧಿಸುವಾಗ ನೇಗಿಲಿನ ತುದಿಗೆ ಸಿಕ್ಕಿ ಅಭಿವ್ಯಕ್ತಳಾದವಳೇ ಸೀತಾ ಎನಿಸಿದಳು. ಅದರಿಂದಲೇ ರಾಜನು ಸೀರಧ್ವಜ ಅಂದರೆ ನೇಗಿಲು ಸೀತಾಜನನಕ್ಕೆ ಕಾರಣವಾದುದರಿಂದ ಅದನ್ನೇ ಚಿಹ್ನೆಯಾಗಿ ಉಳ್ಳವನು–ಎಂದು ಪ್ರಸಿದ್ಧನಾದನು.

ಸೀರಧ್ವಜನಿಗೆ ಕುಶಧ್ವಜನು ಮಗನು. ಅವನ ಮಗನು ಧರ್ಮಧ್ವಜನು. ಅವನಿಗೆ ಕೃತಧ್ವಜ ಮತ್ತು ಮಿತಧ್ವಜರೆಂಬ ಇಬ್ಬರು ಮಕ್ಕಳು. ಕೃತಧ್ವಜನಿಗೆ ಕೇಶಿಧ್ವಜನು ಮಗನು. ಮಿತಧ್ವಜನಿಗೆ ಖಾಂಡಿಕ್ಯನು ಮಗನು. ಕೇಶಿಧ್ವಜನು ಬ್ರಹ್ಮವಿದ್ಯೆಯಲ್ಲಿಯೂ, ಖಾಂಡಿಕ್ಯನು ಕರ್ಮಯೋಗದಲ್ಲಿಯೂ ನಿಪುಣರೆನಿಸಿಕೊಂಡರು. ಖಾಂಡಿಕ್ಯನು ಕೇಶಿಧ್ವಜನಿಗೆ ಹೆದರಿ ದೇಶಾಂತರಕ್ಕೆ ಓಡಿ ಹೋದನು. ಕೇಶಿಧ್ವಜನಿಗೆ ಭಾನುಮಂತನೂ, ಅವನಿಗೆ ಶತದ್ಯುಮ್ನ, ಶುಚಿ ಮುಂತಾದವರೂ, ಶುನಕ, ವೀರಹವ್ಯ, ಧೃತಿ, ಬಹುಲಾಶ್ವ, ಧೃತಕೃತಿ, ಮಹಾವಶೀ ಇವರು ಕ್ರಮವಾಗಿ ಒಬ್ಬರಿಂದೊಬ್ಬರು ಮಕ್ಕಳಾಗಿ ಹುಟ್ಟಿದರು. ನಿಮಿಯ ದೇಹದಿಂದ ಹುಟ್ಟಿದ ಜನಕಾದಿಗಳೆಲ್ಲರೂ ಮಿಥಿಲ ದೇಶಾಧಿಪತಿಗಳಾಗಿ, ಬ್ರಹ್ಮವಿದ್ಯೆಯಲ್ಲಿ ಆಸಕ್ತರಾಗಿ, ಗೃಹಸ್ಥಾಶ್ರಮದಲ್ಲಿರುವಾಗಲೂ ಯಾಜ್ಞವಲ್ಕ್ಯರ ಪ್ರಸಾದದಿಂದ ಪರಮಾತ್ಮನಲ್ಲಿಯೇ ಆಸಕ್ತರಾಗಿ ಭಗವದನುಗ್ರಹದಿಂದ ಮೋಕ್ಷವನ್ನು ಹೊಂದಿದರು.

## ಹನ್ನೊಂದನೆಯ ಅಧ್ಯಾಯ ಮುಗಿದುದು

**ಶುಕ :–** ಸೂರ್ಯವಂಶವನ್ನು ವಿವರಿಸಿದ್ದಾಯಿತು. ಈಗ ಚಂದ್ರವಂಶವನ್ನು ವಿವರಿಸುವೆನು ಕೇಳು :– ಶ್ರೀ ನಾರಾಯಣನ ನಾಭಿಕಮಲ ದಿಂದ ಹುಟ್ಟಿದ ಚತುರ್ಮುಖನಿಗೆ ಅತ್ರಿ ಋಷಿಗಳು ಮಗನಾದರು. ಅವರ ಆನಂದಾಶ್ರುಗಳಿಂದ ಚಂದ್ರನು ಹುಟ್ಟಿದನು. ಬ್ರಹ್ಮದೇವರು ಅವನನ್ನು ಓಷಧಿ, ಬ್ರಾಹ್ಮಣರು ಮತ್ತು ನಕ್ಷತ್ರಗಳು ಇವರಿಗೆ ಅಧಿಪತಿಯನ್ನಾಗಿ ಕಲ್ಪಿಸಿದರು. ಚಂದ್ರನು ಮೂರು ಲೋಕಗಳನ್ನೂ ಜಯಿಸಿ ರಾಜಸೂಯ ಯಜ್ಞವನ್ನು ಮಾಡಿದನು. ಅವನು ಗುರುಪತ್ನಿ ತಾರಾದೇವಿಯನ್ನು ದರ್ಪದಿಂದ ಅಪಹರಿಸಿದನು. ಬೃಹಸ್ಪತಿಯು ಎಷ್ಟು ಬೇಡಿದರೂ ಚಂದ್ರನು ತಾರೆಯನ್ನು ಬಿಟ್ಟುಕೊಡಲಿಲ್ಲ. ಅದೇ ನಿಮಿತ್ತದಿಂದ ದೇವತೆಗಳಿಗೂ ದೈತ್ಯರಿಗೂ ದೊಡ್ಡ ಯುದ್ಧಾರಂಭವಾಯಿತು. ಬೃಹಸ್ಪತಿಯು ಮೇಲಿನ ದ್ವೇಷದಿಂದ ಶುಕ್ರಾ

ಚಾರ್ಯರು ದೈತ್ಯದಾನವರೊಡನೆ ಸೇರಿ ಚಂದ್ರನಿಗೆ ಸಹಾಯಕರಾದರು. ಆಗ ಸಮಸ್ತ ಭೂತಗಣಗಳಿಂದ ರುದ್ರದೇವರೂ, ಸರ್ವದೇವತೆಗಳಿಂದ ಸಹಿತನಾದ ದೇವೇಂದ್ರನೂ ಬೃಹಸ್ಪತಿಗೆ ಸಹಾಯಕರಾದರು. ಆಗ ನಡೆದ ಯುದ್ಧದಲ್ಲಿ ಎರಡು ಕಡೆಯ ಸೈನ್ಯಗಳೂ ನಾಶ ಹೊಂದಿದುವು. ಬೃಹಸ್ಪತಿಯ ತಂದೆಯಾದ ಅಂಗಿರಾಋಷಿಯ ಪ್ರಾರ್ಥನಾನುಸಾರ ಬ್ರಹ್ಮದೇವರು ಚಂದ್ರನನ್ನು ಹೆದರಿಸಿ ಗರ್ಭಿಣಿಯಾಗಿದ್ದ ತಾರೆಯನ್ನು ಬೃಹಸ್ಪತಿಗೆ ಕೊಡಿಸಿದರು. ಬೃಹಸ್ಪತಿಯು ತನ್ನ ಪತ್ನಿಯು ಗರ್ಭಿಣಿಯೆಂದು ತಿಳಿದು, "ನೀಚಳೆ ! ಪರಪುರುಷನಿಂದ ಧರಿಸಿದ ಗರ್ಭವನ್ನು ಈಗಲೇ ಬಿಟ್ಟುಬಿಡು. ನಿನ್ನಲ್ಲಿ ಪುತ್ರೋತ್ಪತ್ತಿ ಮಾಡಬೇಕೆಂದು ನಾನು ಬಯಸಿರುವುದರಿಂದ ನಿನ್ನನ್ನು ಭಸ್ಮ ಮಾಡಲಾರೆನು" ಎಂದನು. ಬಹಳ ನಾಚಿದ ತಾರೆಯು ಪರಮ ಸುಂದರನಾದ ಮಗನನ್ನು ಹೆತ್ತಳು. ಆ ಕೂಸನ್ನು ನೋಡಿ ಚಂದ್ರಬೃಹಸ್ಪತಿಗಳಿಬ್ಬರೂ ನನ್ನ ಮಗ, ತನ್ನ ಮಗನೆಂದು ಜಗಳವಾಡಿದರು. ಆಗ ದೇವತೆಗಳು ಯಾರಿಗೆ ಹುಟ್ಟಿದ ಮಗನೆಂದು ತಾರೆಯನ್ನು ಕೇಳಿದರು. ತಾರೆಯು ಚಂದ್ರನಿಂದ ಹುಟ್ಟಿದ ಮಗನೆಂದು ಮೆಲ್ಲಗೆ ಹೇಳಿದಳು. ಬ್ರಹ್ಮದೇವರು ಆ ಕುಮಾರನನ್ನು ಚಂದ್ರನಿಗೊಪ್ಪಿಸಿ **ಬುಧನೆಂದು** ಹೆಸರಿಟ್ಟರು. ಬುಧನಿಂದ ಇಳೆಯಲ್ಲಿ ಪುರೂರವಸ್ಸು ಹುಟ್ಟಿದನು. ಉರ್ವಶಿಯು ಇಂದ್ರಲೋಕದಲ್ಲಿ ನಾರದರಿಂದ ಪುರೂರವಸ್ಸಿನ ಸೌಂದರ್ಯ, ಗುಣ. ಔದಾರ್ಯ ಮತ್ತು ಪರಾಕ್ರಮಗಳನ್ನು ಕೇಳಿ ಅವನನ್ನು ಕಾಮಿಸಿ, ಮನುಷ್ಯ ಸಂಗವಾಗಲಿ ಎಂಬ ಮಿತ್ರಾವರುಣರ ಶಾಪದಿಂದ ಪುರೂರವಸ್ಸಿನ ಬಳಿಗೆ ಬಂದು ನಿರ್ಭಯಳಾಗಿ ನಿಂತಳು. ಇಬ್ಬರಿಗೂ ಪರಸ್ಪರವಾಗಿ ಮೋಹವುಂಟಾಯಿತು.

**ಪುರೂರವಸ್ಸು** :– ಉರ್ವಶೀ ! ನಿನಗೆ ಸುಖಾಗಮನ. ಕುಳಿತುಕೋ. ನಮ್ಮಿಬ್ಬರಿಗೆ ಪ್ರೀತಿಯು ಶಾಶ್ವತವಾಗಿರಲಿ! ನಾವಿಬ್ಬರೂ ಬಹುಕಾಲ ಸುರತಸುಖವನ್ನು ಅನುಭವಿಸುತ್ತಿರೋಣ.

**ಊರ್ವಶಿ** :– ಸುಂದರ ! ಯಾವ ತರುಣಿಯ ಮನಸ್ಸುತಾನೇ ನಿನ್ನಲ್ಲಿ ಆಸಕ್ತವಾಗದೇ ಇದ್ದೀತು ? ಆದರೂ ನನ್ನ ನಿಯಮವಿದು ,– 1) ನನ್ನ ಮಕ್ಕಳಂತೆ ಸಾಕುತ್ತಿರುವ ಈ ಎರಡು ಟಗರುಗಳನ್ನು ನೀನು ರಕ್ಷಿಸುತ್ತಿರಬೇಕು. 2) ಸುರತ ಕಾಲ ಹೊರತು ಬೇರೆ ಕಾಲಗಳಲ್ಲಿ ದಿಗಂಬರನಾಗಿ ನೀನು ನನ್ನ ಕಣ್ಣಿಗೆ ಬೀಳಬಾರದು. ಹಾಗೇನಾದರೂ ಕಾಣಿಸಿಕೊಂಡರೆ ಆ ಕೂಡಲೆ ನಿನ್ನನ್ನು ಬಿಟ್ಟು ಹೊರಟು ಹೋಗುವೆನು.

**ಶುಕ** :– ಪುರೂರವಸ್ಸು ಆ ನಿಯಮಗಳಿಗೊಪ್ಪಿ, ಉರ್ವಶಿಯೊಡನೆ ಬಹಳ ವರ್ಷಗಳವರೆಗೆ ಚೈತ್ರರಥಾದಿ ದೇವೋದ್ಯಾನಗಳಲ್ಲಿ ಯಥೇಚ್ಛವಾಗಿ ಸುರತಸುಖವನ್ನು

ಅನುಭವಿಸುತ್ತಿದ್ದನು. ಹೀಗಿರಲು ಇತ್ತ ಒಂದು ದಿನ ದೇವೇಂದ್ರನು ಸಭೆಯಲ್ಲಿ ಊರ್ವಶಿಯನ್ನು ಕಾಣದೆ ಅವಳನ್ನು ಕರೆ ತರುವಂತೆ ಗಂಧರ್ವರಿಗೆ ಆಜ್ಞಾಪಿಸಿದನು. ಗಂಧರ್ವರು ಅರ್ಧರಾತ್ರಿಯಲ್ಲಿ ಒಂದು ಮಂಚದ ಬಳಿಯಿದ್ದ ಆ ಎರಡು ಟಗರು ಗಳನ್ನೂ ಅಪಹರಿಸಿದರು. ಟಗರುಗಳು ಅರಚಿಕೊಂಡವು. ಇದನ್ನು ಕೇಳಿ ಊರ್ವಶಿಯು ದುಃಖಿಸಿ, ರಾಜನನ್ನು ಹೀಯಾಳಿಸಿದಳು. ಪುರೂರವಸ್ಸು ಬೆತ್ತಲೆಯಾಗಿಯೇ ಖಡ್ಗ ವನ್ನು ಹಿಡಿದು ಹೊರಟನು. ಗಂಧರ್ವರು ಟಗರುಗಳನ್ನು ಅಲ್ಲಿಯೇ ಬಿಟ್ಟು ಮಿಂಚಿ ನಿಂದ ಬೆಳಕನ್ನುಂಟು ಮಾಡಿದರು. ಊರ್ವಶಿಯು ಬೆಳಕಿನಲ್ಲಿ ಪುರೂರವಸ್ಸು ಬೆತ್ತಲೆ ಯಿರುವುದನ್ನು ನೋಡಿಬಿಟ್ಟಳು. ನಿಯಮದಂತೆ ಕಣ್ಮರೆಯಾಗಿ ಅವಳು ಹೊರಟು ಹೋದಳು. ಪುರೂರವಸ್ಸು ಊರ್ವಶಿಯ ವಿಯೋಗವನ್ನು ಸಹಿಸಲಾರದೆ ಹುಚ್ಚ ನಂತಾಗಿ ಭೂಮಿಯಲ್ಲೆಲ್ಲ ಅಲೆಯುತ್ತಿದ್ದನು. ಒಂದು ದಿನ ಕುರುಕ್ಷೇತ್ರದಲ್ಲಿ ಸರಸ್ವತೀ ನದಿಯ ತೀರದಲ್ಲಿ ಐದು ಮಂದಿ ಸಖಿಯರೊಡನೆ ಊರ್ವಶಿಯು ಇದ್ದುದನ್ನು ನೋಡಿ ಸೂಕ್ತವನ್ನು ಹೇಳುತ್ತಾನೆ :–

"ಅಯೇ ಜಾಯೇ ತಿಷ್ಠ ತಿಷ್ಠ ಘೋರೇ" – ಪ್ರಿಯೆ ! ನಿಲ್ಲು ನಿಲ್ಲು. ಭಯಂಕರ ವಿಯೋಗ ದುಃಖದಲ್ಲಿ ಮುಳುಗಿರುವ ನನ್ನನ್ನು ಬಿಟ್ಟು ಹೋಗುವುದು ಸರ್ವಥಾ ಯುಕ್ತವಲ್ಲ. ಈಗಲೂ ನೀನು ಅನುಗ್ರಹಿಸದಿದ್ದರೆ ಇಲ್ಲಿಯೇ ನನ್ನ ದೇಹವು ಬಿದ್ದು ಹೋಗುವುದು. ಆದ ಕಾರಣ ದಯೆಯನ್ನು ತೋರು." ಹೀಗೆ ಕೂಗಿಕೊಂಡನು.

**ಊರ್ವಶಿ** :– ರಾಜನೇ ! ಸಾಯಬೇಡ. ಪುರುಷನಾಗಿರುವೆ. ಧೈರ್ಯದಿಂದಿರು. ಸ್ತ್ರೀಯರು ಸ್ವಾಭಾವಿಕವಾಗಿ ಕ್ರೂರರು. ಸ್ತ್ರೀಯರ ಸಖ್ಯವನ್ನು ಸರ್ವಥಾ ಮಾಡ ಬಾರದು. ಅವರಿಗೆ ಕರುಣೆಯಿಲ್ಲ. ತಮ್ಮ ಅತ್ಯಲ್ಪ ಲಾಭಕ್ಕಾಗಿ ಪತಿಯನ್ನಾಗಲೀ, ಸಹೋದರರನ್ನಾಗಲೀ ಕೊಲ್ಲುವುದಕ್ಕೂ ಹೆದರುವುದಿಲ್ಲ. ಕಪಟವಿಶ್ವಾಸವನ್ನು ತೋರಿ ಅತ್ಯಂತ ಸುಖವನ್ನು ಕೊಡುವರೆಂದು ನಂಬಿಸಿ ಹೊಸಪುರುಷರನ್ನು ಹುಡುಕು ತ್ತಿರುವರು. ಆದ್ದರಿಂದ ಅವರ ಸ್ನೇಹವನ್ನು ಸತ್ಯವೆಂದು ನಂಬಲೇಬಾರದು. ಪ್ರಿಯನೇ ! ಒಂದು ಸಂವತ್ಸರ ಕಳೆದಮೇಲೆ ಒಂದುರಾತ್ರಿ ಇಚ್ಛಾನುಸಾರ ನನ್ನೊಡನೆ ಸುರತಸುಖವನ್ನು ಅನುಭವಿಸುವೆ. ಈಗ ನನ್ನ ಗರ್ಭದಲ್ಲಿರುವ ಮಕ್ಕಳಲ್ಲದೆ ಇನ್ನೂ ಬೇರೆ ಮಕ್ಕಳೂ ನಿನಗಾಗುವರು.

**ಶುಕ** :– ರಾಜನು ಗರ್ಭಿಣಿಯಿವಳೆಂದು ತಿಳಿದು ಪಟ್ಟಣಕ್ಕೆ ಹಿಂತಿರುಗಿ ಬಂದನು. ಒಂದು ವರ್ಷ ಕಳೆಯಿತು. ಪುರೂರವಸ್ಸು ಪ್ಲಕ್ಷತೀರ್ಥದ ಬಳಿ ಊರ್ವಶಿ ಯನ್ನು ಸಂಧಿಸಿ ಆಯು ಶುತಾಯು ಮೊದಲಾದ ಆರುಮಂದಿ ಪುತ್ರರಿಗೆ ತಾಯಿಯಾದ ಆಕೆಯೊಡನೆ ಒಂದು ರಾತ್ರಿ ಸುಖಪಟ್ಟನು. ತಿರುಗಿ ಅವಳು ಬಿಟ್ಟು ಹೋಗುವಳೆಂದು ದುಃಖಿಸುತ್ತಿರುವ ರಾಜನನ್ನು ನೋಡಿ

**ಊರ್ವಶಿ :-** ರಾಜನೇ ! ತ್ರಿಕರಣ ಶುದ್ಧಿಯಿಂದ ಗಂಧರ್ವರನ್ನು ಸ್ತುತಿಸು. ಅವರು ನನ್ನ ಲೋಕಕ್ಕೆ ಬರುವ ಮಾರ್ಗವನ್ನು ತೋರಿಸುವರು.

**ಶುಕ :-** ಅದರಂತೆ ರಾಜನು ಗಂಧರ್ವರನ್ನು ಸ್ತುತಿಸಿದನು.

ಗಂಧರ್ವರು ರಾಜನಿಗೆ ಅಗ್ನಿ ಸ್ಥಾಪನಯೋಗ್ಯವಾದ ಪಾತ್ರವನ್ನು ಕೊಟ್ಟರು. ರಾಜನು ಆ ಸ್ಥಾಲಿಯನ್ನೇ ಊರ್ವಶಿಯೆಂದು ಭಾವಿಸುತ್ತ ಕಾಡಿನಲ್ಲಿ ಸಂಚರಿಸುತ್ತಿದ್ದು ಕೊನೆಗೆ ಇದು ಊರ್ವಶಿಯಲ್ಲ, ಅಗ್ನಿ ಸ್ಥಾಲಿಯೆಂದು ತಿಳಿದನು. ಬಳಿಕ ಆ ಪಾತ್ರೆಯನ್ನು ವನದಲ್ಲಿಟ್ಟು ರಾತ್ರಿ ತನ್ನ ಅರಮನೆಗೆ ಬಂದನು. ಮರುದಿವಸ ತ್ರೇತಾಯುಗ ಆರಂಭದ ಸಮಯವುಂಟಾಗಲು ಊರ್ವಶಿಯನ್ನು ಚಿಂತಿಸುತ್ತಿದ್ದ ರಾಜನ ಮನಸ್ಸಿಗೆ ಅಗ್ನ್ಯಾಧಾನಾದಿ ಸಾಂಗ ಯಜ್ಞಪ್ರಕಾಶಕವಾದ ವೇದ ತ್ರಯವೂ ಹೊಳೆಯಿತು. ಅವನು ಅಗ್ನಿಯ ಪಾತ್ರೆಯನ್ನಿಟ್ಟದ್ದ ಸ್ಥಳಕ್ಕೆ ಹೋಗಿ ಶಮೀವೃಕ್ಷದಿಂದ ಅಧಿಷ್ಠಿತವಾದ ಅಶ್ವತ್ಥವನ್ನು ನೋಡಿ ಅದರಿಂದ ಅರಣಿಗಳನ್ನು ಮಾಡಿ ಊರ್ವಶೀಲೋಕವನ್ನು ಹೊಂದುವ ಇಚ್ಛೆಯಿಂದ ಮಥನ ಮಾಡಿದನು. ಅದರಿಂದ **ದಕ್ಷಿಣಾಗ್ನಿ, ಗಾರ್ಹಪತ್ಯ ಮತ್ತು ಆಹವನೀಯ** ಎಂಬ ಮೂರು ಅಗ್ನಿಗಳು ಹುಟ್ಟಿದುವು. ಆ ಅಗ್ನಿಯನ್ನೇ ಮಗನಾಗಿ ಕಲ್ಪಿಸಿಕೊಂಡು ಅದರಿಂದಲೇ ಪರಮಾತ್ಮನಿಗೆ ಹೋಮವನ್ನು ಅರ್ಪಿಸಿ ಧ್ಯಾನಿಸಿದನು.

ಕೃತಯುಗದಲ್ಲಿ ಮೂಲ ವೇದವು ಒಂದೇ ಇದ್ದಿತು. ಸಕಲವೇದಗಳ ವಚನಗಳಿಗೆ ಪ್ರಧಾನ ಭೂತವಾದ ತ್ರಿಮಾತ್ರಾರೂಪ ಪ್ರಣವವು ಒಂದೇ. ಶ್ರೀನಾರಾಯಣನೊಬ್ಬನೇ ದೇವತೆಯೆಂದು ಪೂಜ್ಯನು. ಬ್ರಹ್ಮಾದಿಗಳನ್ನು **'ಮನು'** ಎಂದು ಕರೆಯುತ್ತಿದ್ದರು. ಅವರು ದೇವತೆಗಳೆಂದು ಪೂಜ್ಯರಲ್ಲ. ಆಕಾಲದಲ್ಲಿ ಶ್ರೀಹರಿಯನ್ನೇ ಅಗ್ನಿಷ್ಟೋಮಾದಿ ಯಜ್ಞಗಳಲ್ಲಿ ಬ್ರಹ್ಮರುದ್ರೇಂದ್ರಾದಿ ನಾಮಗಳಿಂದ ಪೂಜಿಸುತ್ತಿದ್ದರು ಬ್ರಾಹ್ಮಣಾದಿಗಳೆಲ್ಲರೂ ಭಗವದ್ಧ್ಯಾನದಲ್ಲಿಯೇ ಆಸಕ್ತರಾಗಿದ್ದರು. ಪರೀಕ್ಷಿದ್ರಾಜನೇ ! ತ್ರೇತಾರಂಭದಲ್ಲಿ ಅಗ್ನಿಯು ಮೂರು ಪ್ರಕಾರವಾಗಿ ವಿಭಕ್ತವಾಯಿತು. ಪುರೂರವಸ್ಸಿನಿಂದ ನಾಲ್ಕುಪ್ರಕಾರ ವಿಭಾಗವಾಯಿತು. ಪುರೂರವಸ್ಸು ಪುತ್ರರೂಪ ಅಗ್ನಿಯಿಂದಲೂ, ಗಂಧರ್ವರ ಪ್ರಸಾದದಿಂದಲೂ ದೊರೆತ ಊರ್ವಶೀ ಲೋಕವನ್ನು ಸೇರಿ ಬಳಿಕ ಹರಿಯನ್ನು ಭಜಿಸಿ ಮುಕ್ತನಾದನು

## ಹನ್ನೆರಡನೆಯ ಅಧ್ಯಾಯ ಮುಗಿದುದು

ಪುರೂರವಸ್ಸಿನಿಂದ ಊರ್ವಶಿಯಲ್ಲಿ ಆಯು, ಶ್ರುತಾಯು, ಸತ್ಯಾಯು, ರಯ, ವಿಜಯ ಮತ್ತು ಜಯರೆಂಬ ಆರು ಮಕ್ಕಳು ಹುಟ್ಟಿದರು. ಶ್ರುತಾಯುವಿಗೆ ವಸುಮಂತನು ಮಗನು. ಸತ್ಯಾಯುವಿಗೆ ಶ್ರುತಂಜಯನು ಮಗನು. ರಯನಿಗೆ ಅದ್ಭುತನು ಮಗನು. ಜಯನಮಗ ಅಮಿತನು. ವಿಜಯನ ಮಗ ಭೀಮನು.

ಅವನಿಗೆ ಕಾಂಚನನು. ಮಗನು ಕಾಂಚನನ ವಂಶದಲ್ಲಿ ಹೋತ್ರಕ, ಗಂಗೆಯನ್ನು ಆಚ ಮನ ಮಾಡಿ ಕುಡಿದ ಜಹ್ನು, ಪುರು, ಬಲಾಕ, ಅಜಕ, ಕುಶ ಇವರು ಹುಟ್ಟಿದರು. ಕುಶನಿಗೆ ಕುಶಾಂಬು, ಮೂರ್ತಯ, ವಸು, ಕುಶನಾಭರೆಂಬ ನಾಲ್ವರು ಮಕ್ಕಳು. ಕುಶನಪುತ್ರ ಕುಶನಾಭನಿಗೆ ಗಾಧಿಯು ಮಗನು. ಗಾಧಿಗೆ ಕುಶಾಂಬುಜನೆಂದೂ ಹೆಸರು. ಗಾಧಿಯ ಮಗಳು ಸತ್ಯವತಿಯೆಂಬುವಳನ್ನು ಋಚೀಕರು ತಮಗೇ ಕೊಡ ಬೇಕೆಂದು ಬೇಡಿದರು. ಗಾಧಿಯು ತನ್ನ ಮಗಳಿಗೆ ಈ ಋಷಿಯು ತಕ್ಕ ವರನಲ್ಲವೆಂದು ತಿಳಿದು, ಕೊಡಲಾರೆನೆಂದು ಹೇಳಲೂ ಇಷ್ಟವಿಲ್ಲದೆ 'ಬ್ರಾಹ್ಮಣನೇ ! ಚಂದ್ರನಂತೆ ಬೆಳ್ಳಗಿರುವ, ಒಂದು ಕಿವಿಯು ಮಾತ್ರ ಕಪ್ಪಾಗಿರುವ ಸಾವಿರ ಕುದುರೆಗಳನ್ನು ಕನ್ಯಾ ಶುಲ್ಕವಾಗಿ ಕೊಟ್ಟರೆ ಮಾತ್ರ ನನ್ನ ಮಗಳನ್ನು ನಿನಗೆ ಮದಿವೆ ಮಾಡಿಕೊಡುವೆನು' ಎಂದನು. ಜ್ಞಾನಿಗಳಾದ ಋಚೀಕರು ಗಾಧಿಯ ಅಭಿಪ್ರಾಯವನ್ನು ತಿಳಿದು ವರುಣನ ಬಳಿಗೆ ಹೋಗಿ ಉಕ್ತಲಕ್ಷಣಗಳುಳ್ಳ ಸಾವಿರ ಕುದುರೆಗಳನ್ನು ಅವನಿಂದ ಪಡೆದು ತಂದು ಗಾಧಿಗೆ ಕೊಟ್ಟು ಸತ್ಯವತಿಯನ್ನು ಮದಿವೆ ಮಾಡಿಕೊಂಡರು. ಸತ್ಯವತಿ ಮತ್ತು ಅವಳ ತಾಯಿ ಇಬ್ಬರೂ ತಮಗೆ ಪುತ್ರರಾಗುವಂತೆ ಅನುಗ್ರಹಿಸಬೇಕೆಂದು ಬೇಡಿಕೊಂಡರು. ಋಚೀಕರು ಮಂತ್ರಗಳಿಂದ ಎರಡು ಚರುಗಳನ್ನು ಸಿದ್ಧಪಡಿಸಿ ಅವರವರಿಗೆ ತಕ್ಕ ಚರುವಿದೆಂದು ತಿಳಿಸಿ ಸ್ನಾನಕ್ಕೆ ಹೋದರು. ಅವರು ಬರುವುದ ರೊಳಗೆ ಸತ್ಯವತಿಯ ತಾಯಿಯು ತನ್ನ ಮಗಳ ಉದ್ದೇಶವಾಗಿ ಸಿದ್ಧಪಡಿಸಿದ್ದ ಚರುವು ಶ್ರೇಷ್ಠವಾಗಿರಬಹುದೆಂದು ಯೋಚಿಸಿ ಮಗಳನ್ನು ಕೇಳಿಕೊಂಡಳು. ಸತ್ಯವತಿಯು ತನ್ನ ಭಾಗಕ್ಕೆ ಬಂದಿದ್ದ ಚರುವನ್ನು ತಾಯಿಗೆ ಕೊಟ್ಟು ತಾಯಿಗೆ ಮೀಸಲಾಗಿದ್ದ ಚರುವನ್ನು ತಾನು ತಿಂದಳು. ಇದನ್ನು ತಿಳಿದ ಋಚೀಕರು ಕುಪಿತ ರಾಗಿ 'ನಿನ್ನ ಮಗನು ಕ್ಷತ್ರಿಯನಾಗಿ ಸರ್ವಸಂಹಾರಕನಾಗುವನು. ನಿನ್ನ ಸಹೋದ ರನು ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನೆನಿಸುವನು' ಎಂದರು. ಸತ್ಯವತಿಯು ಆಗ ಪತಿ ಯನ್ನು ಬಹಳವಾಗಿ ಪ್ರಾರ್ಥಿಸಿದಳು. ಋಚೀಕರು ಸತ್ಯವತಿಯ ಮಗನು ಶಾಂತ ನಾಗಿರುವನೆಂದೂ, ಪೌತ್ರನು, ಭಯಂಕರನಾಗುವನೆಂದೂ ಹೇಳಿದರು. ಸತ್ಯವತಿ ಯಲ್ಲಿ ಶಾಂತನಾದ ಜಮದಗ್ನಿಯೆಂಬ ಮಗನು ಹುಟ್ಟಿದನು. ಸತ್ಯವತಿಯು ಮಹಾಪುಣ್ಯದಾಯಕವಾದ ಕೌಶಿಕೀ ಎಂಬ ಹೆಸರಿನ ನದಿಯಾದಳು. ಜಮದಗ್ನಿಯು ಇಕ್ಷ್ವಾಕುವಂಶದ ರೇಣು ಎಂಬ ಹೆಸರಿನ ರಾಜನಮಗಳಾದ ರೇಣುಕಾ (ಕಾಮಲೀ) ನಾಮಕ ಕನ್ಯೆಯನ್ನು ಮದಿವೆಯಾದನು. ಅವಳಲ್ಲಿ ವಸುಮಂತಾದಿ ಮಕ್ಕಳು ಹುಟ್ಟಿ ದರು. ಅವರಲ್ಲಿ ಕಿರಿಯವನು ಪರಶುರಾಮದೇವರು. ಪದ್ಮನಾಭನ ಅಂಶನಾದ ಅವನು ಹೈಹಯವಂಶವನ್ನು ನಾಶಪಡಿಸಿದನು. ಇಪ್ಪತ್ತೊಂದು ಬಾರಿ ಕ್ಷತ್ರಿಯ ವಂಶವನ್ನು ನಾಶಪಡಿಸಿದನು.

**ಪರೀಕ್ಷಿತ್ :–** ಅದಕ್ಕೇನು ಕಾರಣ ?

**ಶುಕ** :— ಹೈಹಯದೇಶಾಧಿಪತಿಯಾದ ಕಾರ್ತವೀರ್ಯಾರ್ಜುನನು ದತ್ತ ರೂಪೀ ಶ್ರೀಹರಿಯನ್ನು ಆರಾಧಿಸಿ, ಆತನ ಅನುಗ್ರಹದಿಂದ ಸಾವಿರ ತೋಳು ಗಳನ್ನೂ, ಶತ್ರುವಿಗೆ ಸಹಿಸಲು ಅಶಕ್ಯವಾದ ಪರಾಕ್ರಮವನ್ನೂ, ಮರ್ಯಾದೆ, ಯೋಗಶಕ್ತಿ ಮತ್ತು ಅಣಿಮಾದಿಅಷ್ಟಸಿದ್ಧಿಗಳನ್ನೂ ಪಡೆದನು. ಆದರಿಂದ ನಿರ್ಭಯ ನಾಗಿ, ಚಕ್ರವರ್ತಿಯಾಗಿ ಆಳುತ್ತಿದ್ದನು. ಒಮ್ಮೆ ನರ್ಮದಾನದಿಯಲ್ಲಿ ಅವನು ತನ್ನ ಭುಜಗಳಿಂದ ಪ್ರವಾಹವನ್ನು ಅಡ್ಡಗಟ್ಟಿ ನಿಂತ ಆ ನೀರಿನಲ್ಲಿ ಸ್ತ್ರೀಯರೊಡನೆ ಜಲ ಕ್ರೀಡೆಯಾಡುತ್ತಿದ್ದನು. ಆ ವೇಳೆಯಲ್ಲಿಯೇ ರಾವಣನು ಅದೇ ನದಿಯ ಮೇಲ್ಭಾಗ ದಲ್ಲಿ ಲಿಂಗಪೂಜೆಯನ್ನು ಮಾಡುತ್ತಿದ್ದಾಗ ನದಿಯ ಪ್ರವಾಹವು ಉಕ್ಕಿ ಬಂದು ಆ ಲಿಂಗವನ್ನು ಕೊಚ್ಚಿ ಬಿಟ್ಟಿತು. ರಾವಣನು ಕುಪಿತನಾಗಿ ಬಂದು ಕಾರ್ತವೀರ್ಯ ನನ್ನು ಇದಿರಿಸಿದಾಗ ಅವನಿಗೆ ಸೆರೆ ಸಿಕ್ಕಿ, ಪುಲಸ್ತ್ಯರ ಮಾತಿನಂತೆ ಬಿಡುಗಡೆ ಹೊಂದಿದನು.

ಒಮ್ಮೆ ಕಾರ್ತವೀರ್ಯನು ಜಮದಗ್ನಿಗಳಾಶ್ರಮಕ್ಕೆ ಬಂದನು. ಆ ಋಷಿಗಳು ಕಾಮಧೇನುವಿನ ಸಹಾಯದಿಂದ ಚಕ್ರವರ್ತಿ ಮತ್ತು ಅವನ ಹಿಂದೆ ಬಂದ ಅಪಾರ ಸೈನಿಕರಿಗೆಲ್ಲ ಶ್ರೇಷ್ಠವಾದ ಔತಣಮಾಡಿದರು. ಇದನ್ನು ಕಂಡು ಚಕ್ರವರ್ತಿಗೆ ಕಾಮಧೇನುವಿನ ಮೇಲೆ ಕಣ್ಣು ಬಿದ್ದು ಅದನ್ನು ಕರುಸಹಿತವಾಗಿ ಅವನು ಅಪಹರಿ ಸಿದನು. ಪರಶುರಾಮನು ಆಶ್ರಮಕ್ಕೆ ಬಂದು ಕಾರ್ತವೀರಾರ್ಜುನನ ಅಪಚಾರ ವನ್ನು ಕೇಳಿ ಕುಪಿತನಾಗಿ ಅವನನ್ನು ಕೊಲ್ಲಲು ಪರಶುವನ್ನು ಹಿಡಿದು ಹೊರಟನು. ಚಕ್ರವರ್ತಿಯ ಹದಿನೇಳು ಅಕ್ಷೋಹಿಣೀ ಸೈನ್ಯಗಳು ಪರಶುರಾಮನನ್ನು ಮುತ್ತಲು, ಸ್ವಾಮಿಯು ಅವೆಲ್ಲವನ್ನೂ ಕ್ಷಣಮಾತ್ರದಲ್ಲಿ ಕೊಂದು, ಮೇಲೆ ಬಿದ್ದು ಬಂದು ಯುದ್ಧಮಾಡಿದ ಕಾರ್ತವೀರ್ಯಾರ್ಜುನನನ್ನು ಕೊಂದು ಹಾಕಿದನು. ಅದನ್ನು ಕಂಡ ಚಕ್ರವರ್ತಿಯ ಹತ್ತುಸಾವಿರಮಂದಿಪುತ್ರರು ಹೆದರಿ ಓಡಿ ಹೋದರು. ಪರಶುರಾಮನು ಕರುಸಹಿತವಾದ ಕಾಮಧೇನುವನ್ನು ತಂದು ತಂದೆಗೆ ಅರ್ಪಿಸಿ, ತಾನು ಮಾಡಿದ ಶತ್ರುನಿಗ್ರಹವನ್ನು ತಂದೆಗೂ, ಅಣ್ಣಂದಿರಿಗೂ ತಿಳಿಸಿದನು. ಜಮದಗ್ನಿಗಳು ಕೇಳಿ ವ್ಯಥೆಪಡುತ್ತಾ ಹೇಳುತ್ತಾರೆ :—

**ಜಮದಗ್ನಿ** :— ಮಗನೇ ! ಸರ್ವದೇವತೆಗಳ ಸಂನಿಧಾನವುಳ್ಳ ಚಕ್ರವರ್ತಿ ಯನ್ನು ಕೊಂದು ಪಾಪವನ್ನು ಗಳಿಸಿದೆ. ಬ್ರಾಹ್ಮಣನು ಕ್ಷಮೆಯಿಂದಲೇ ಪೂಜ್ಯನು. ಕ್ಷಮಾವಂತರಿಗೇ ಪರಮಾತ್ಮನು ಪ್ರಸನ್ನನಾಗುವನು. ಪಟ್ಟಾಭಿಷಿಕ್ತನಾದ ರಾಜನ ಸಂಹಾರವು ಬ್ರಹ್ಮಹತ್ಯೆಗಿಂತ ಅಧಿಕವಾದ ಪಾಪ. ನೀನು ಈ ಪಾಪಗಳನ್ನು ಭಗ ವಂತನನ್ನು ಧ್ಯಾನಿಸುತ್ತ ತೀರ್ಥಯಾತ್ರೆಯನ್ನು ಮಾಡಿ, ಯಮನಿಯಮಾದಿಗಳಿಂದ ಕಳೆದುಕೋ.

**ಹದಿನೂರನೆಯ ಅಧ್ಯಾಯ ಮುಗಿದುದು**

ಪರಶುರಾಮದೇವರು ಲೋಕಶಿಕ್ಷೆಗಾಗಿ ತಂದೆಯು ಹೇಳಿದಂತೆ ಒಂದು ವರುಷ ತೀರ್ಥಯಾತ್ರೆ ಮಾಡಿಬಂದರು. ಒಮ್ಮೆ ರೇಣುಕಾದೇವಿಯು ನೀರನ್ನು ತರಲು ಗಂಗಾನದಿಗೆ ಹೋದಾಗ ಅಲ್ಲಿ ಅಪ್ಸರಸ್ತ್ರೀಯರೊಡನೆ ಜಲಕ್ರೀಡೆಯಾಡುತ್ತಿದ್ದ ಚಿತ್ರರಥನೆಂಬ ಗಂಧರ್ವನನ್ನು ನೋಡಿ ಸ್ವಲ್ಪ ಆಶೆಯನ್ನು ಹೊಂದಿ, ಆಶ್ರಮದಲ್ಲಿ ನಡೆಯಬೇಕಾದ ಹೋಮಕಾಲವನ್ನು ಮರೆತು ಅವನನ್ನೇ ನೋಡುತ್ತ ನಿಂತುಬಿಟ್ಟಳು. ಸ್ವಲ್ಪಹೊತ್ತಿನಲ್ಲಿಯೇ ಎಚ್ಚೆತ್ತು ಹೊತ್ತಾದುದನ್ನು ತಿಳಿದು ಗಂಡನ ಶಾಪಕ್ಕೆ ಹೆದರಿ ನೀರನ್ನು ತಂದು, ಗಂಡನ ಇದಿರಿಗೆ ನಡುಗುತ್ತ ನಿಂತಳು. ಜಮದಗ್ನಿಋಷಿಯು ಈಕೆಯ ಮಾನಸವ್ಯಭಿಚಾರವನ್ನು ತಿಳಿದು ಕುಪಿತನಾಗಿ ಈ ಪಾಪಿಷ್ಠೆಯನ್ನು ಕೊಂದು ಬಿಡುವಂತೆ ತನ್ನ ಮಕ್ಕಳಿಗೆ ಅಪ್ಪಣೆ ಮಾಡಿದನು. ಮಕ್ಕಳು ಇದು ಪಾಪಕಾರ್ಯ ವೆಂದು ಭಾವಿಸಿ ಕೊಲ್ಲಲಾರದೆ ನಿಂತುಬಿಟ್ಟರು. ಜಮದಗ್ನಿಯು ಪರಶುರಾಮನಿಗೆ ಅವನ ತಾಯಿಯನ್ನೂ, ತಂದೆಯ ಅಪ್ಪಣೆ ಮೀರಿದ ಸಹೋದರರನ್ನೂ ಕೊಲ್ಲುವಂತೆ ಅಪ್ಪಣೆಮಾಡಿದನು. ಆಗ ಪರಶುರಾಮನು 'ನಾನು ಕೊಲ್ಲದಿದ್ದರೆ ನನಗೂ ತಂದೆಯು ಶಾಪಕೊಡುವನು. ಕೊಂದರೆ ಅವನು ಸಂತುಷ್ಟನಾಗಿ ಸತ್ತವರನ್ನು ಬದುಕಿಸಲು ಸಮರ್ಥನಾಗಿರುವನು' ಎಂದು ತಿಳಿದು ತಂದೆಯ ಆಜ್ಞೆಯನ್ನು ಮೀರಿದ ಸಹೋದರ ರನ್ನೂ, ತಾಯಿಯನ್ನೂ ಕೊಂದುಬಿಟ್ಟನು. ಜಮದಗ್ನಿಋಷಿಯು ಸಂತುಷ್ಟನಾಗಿ ವರವನ್ನು ಕೇಳೆಂದನು. ಬ್ರಹ್ಮಾದಿ ಸರ್ವರಿಗೂ ನಿಯಾಮಕನೂ, ಸರ್ವಸಮರ್ಥನೂ ಆದ ಶ್ರೀ ಪರಶುರಾಮದೇವನು ತಾನು ಅನಂತಶಕ್ತಿಯುಳ್ಳವನಾದರೂ ತಂದೆಯನ್ನು ಪೂಜ್ಯಭಾವನೆಯಿಂದ ಕಾಣಬೇಕೆಂದು ಸಜ್ಜನರ ಶಿಕ್ಷಣಕ್ಕಾಗಿ "ಹತರಾದ ಸೋದರರೂ ತಾಯಿಯೂ ಬದುಕಬೇಕು. ನಾನು ಕೊಂದೆನೆಂಬ ಸ್ಮರಣೆಯು ಅವರಿಗೆ ಎಂದೂ ಬರಬಾರದು" ಎಂಬ ವರವನ್ನು ಕೇಳಿಕೊಂಡನು. ತಂದೆಯು 'ತಥಾಸ್ತು' ಎಂದನು. ಎಲ್ಲರೂ ಬದುಕಿದರು.

ಕಾರ್ತವೀರ್ಯನ ಮಕ್ಕಳು ಸೇಡು ತೀರಿಸಬೇಕೆಂದು ಪರಶುರಾಮನೂ ಮತ್ತು ಅವನ ಸಹೋದರರೂ ಆಶ್ರಮದಲ್ಲಿ ಇಲ್ಲದ ಸಮಯದಲ್ಲಿ ಒಂದು ಯೋಗಶಾಲೆಯಲ್ಲಿ ಭಗವದ್ಧ್ಯಾನದಲ್ಲಿದ್ದ ಜಮದಗ್ನಿಯನ್ನು ಕೊಂದು ಅವನ ತಲೆಯನ್ನು ಒಯ್ದರು. ರೇಣುಕೆಯು 'ರಾಮ ! ರಾಮ ! ಮಹಾಬಾಹುವೇ ! ಎಂದು ಗಟ್ಟಿಯಾಗಿ ಕೂಗಿದಳು. ಪರಶುರಾಮನು ಆಶ್ರಮಕ್ಕೆ ಬಂದು ತಂದೆಯ ಮರಣವನ್ನು ನೋಡಿ, ಆತನ ದೇಹವನ್ನು ರಕ್ಷಿಸುವಂತೆ ತನ್ನ ಸಹೋದರರಿಗೆ ಹೇಳಿ, ಪರಶುವನ್ನು ಹಿಡಿದು ದುಷ್ಟ ಕ್ಷತ್ರಿಯರನ್ನು ನಾಶಮಾಡಬೇಕೆಂದು ನಿಶ್ಚಯಿಸಿ ಹೊರಟನು. ಚಕ್ರವರ್ತಿಯ ರಾಜಧಾನಿಯಾದ ಮಾಹಿಷ್ಮತಿಗೆ ಹೋಗಿ, ಹೈಹಯರೆಲ್ಲರನ್ನೂ ಕತ್ತರಿಸಿ ಕೊಂದು, ಆ ನಗರಿಯ ಮಧ್ಯೆ ಅವರ ತಲೆಬುರುಡೆಗಳನ್ನು ಬೆಟ್ಟದಂತೆ ರಾಶಿಹಾಕಿದನು. ಬ್ರಾಹ್ಮಣದ್ವೇಷಿಗಳಿಗೆ ಭಯವನ್ನು ಉಂಟುಮಾಡತಕ್ಕ ರಕ್ತನದಿಯನ್ನು ಹರಿಸಿದನು

ಮಾಡಿದನು. ಇಪ್ಪತ್ತೊಂದು ಬಾರಿ ಭೂಮಿಯೆಲ್ಲವನ್ನೂ ಸಂಚರಿಸಿ ದುಷ್ಟಕ್ಷತ್ರಿಯರ ವಂಶವನ್ನೆಲ್ಲ ನಿರ್ಮೂಲ ಮಾಡಿ, ಕುರುಕ್ಷೇತ್ರದಲ್ಲಿ ಅವರ ರಕ್ತದಿಂದ ಸ್ಯಮಂತ ಪಂಚಕವೆಂದು ಕರೆಯಲ್ಪಡುವ ಪ್ರದೇಶದಲ್ಲಿ ಒಂಭತ್ತು ಮಡುವುಗಳನ್ನು ಮಾಡಿದನು. ಪರಶುರಾಮದೇವನು ಈ ಹ್ರದಗಳನ್ನು ಮಾಡುತ್ತಿದ್ದಾಗ, ಅವನ ಮಾಯೆಯಿಂದ (ಇಚ್ಛೆಯಿಂದ) ಮೋಹಿತರಾಗಿ ಅವನ ಮಹಿಮೆಯನ್ನು ತಿಳಿಯದ ಪಿತೃಗಳು ಕ್ಷತ್ರಿಯರ ಸಂಹಾರವನ್ನು ನಿಲ್ಲಿಸೆಂದು ತಡೆದರು. ಭಗವಂತನು ತನ್ನಿಚ್ಛೆಯಿಂದ ಜನರನ್ನು ಮೋಹಗೊಳಿಸುತ್ತ, ಪಿತೃಗಳ ಆಜ್ಞೆಯನ್ನು ನೆರವೇರಿಸಿದನೋ ಎನ್ನುವ ಹಾಗೆ ಸಂಹಾರಕಾರ್ಯವನ್ನು ಬಿಟ್ಟು ಕ್ಷತ್ರಿಯರ ವಧೆಯ ಪ್ರಾಯಶ್ಚಿತ್ತಕ್ಕಾಗಿ ತೀರ್ಥಕ್ಷೇತ್ರಗಳನ್ನು ಸಂಚರಿಸಿ ಬಂದನು. ಪುಣ್ಯಪಾಪಗಳ ಪ್ರೇರಕನಾದ ಸ್ವಾಮಿಗೆ ಅವುಗಳ ಲೇಪ ಹೇಗಾಗುವುದು. ?

ಪರಶುರಾಮನು ಮಾಹಿಷ್ಮತಿಯಿಂದ ತಂದೆಯ ಶಿರಸ್ಸನ್ನು ತಂದು ಮುಂಡಕ್ಕೆ ಸೇರಿಸಿ ಅಂತ್ಯೇಷ್ಟಿಯನ್ನು ಮಾಡಿದನು. ಮುಂದೆ ಯಾಗವನ್ನೂ ಮಾಡಿ ಆಗ ಹೋತೃ ವಿಗೆ ಪೂರ್ವದಿಕ್ಕನ್ನೂ, ಉದ್ಗಾತೃವಿಗೆ ಉತ್ತರದಿಕ್ಕನ್ನೂ, ಬ್ರಹ್ಮನಿಗೆ ದಕ್ಷಿಣ ದಿಕ್ಕನ್ನೂ, ಅಧ್ವರ್ಯುವಿಗೆ ಪಶ್ಚಿಮ ದಿಕ್ಕನ್ನೂ, ಇತರ ವಿಪ್ರರಿಗೆ ಆಗ್ನೇಯಾದಿ ಕೋಣದಿಕ್ಕುಗಳನ್ನೂ, ನ್ಯೂನಾತಿರಿಕ್ತಕರ್ಮಗಳ ಸಾಕ್ಷಾದ್ದ್ರಷ್ಟೃವಾದ ಕಶ್ಯಪರಿಗೆ ವಿಂಧ್ಯ ಹಿಮಾಲಯ ಮಧ್ಯಪ್ರದೇಶವಾದ ಆರ್ಯಾವರ್ತದೇಶವನ್ನೂ ಮತ್ತು ಸದಸ್ಯ ರಿಗೆ ಅವಶಿಷ್ಟ ಪ್ರದೇಶಗಳನ್ನೂ ದಕ್ಷಿಣೆಯಾಗಿ ಕೊಟ್ಟನು. ಬಳಿಕ ಸರಸ್ವತಿಯಲ್ಲಿ ಅವ ಭೃತಸ್ನಾನ ಮಾಡಿದನು. ಸಕಲ ಪಾಪಗಳನ್ನೂ ಕಳೆದುಕೊಂಡು ಸೂರ್ಯನಂತೆ ಪ್ರಕಾಶಿ ಸುತ್ತಾನೆಯೋ ಎಂಬಂತೆ ನಟಿಸಿದನು.

ಜಮದಗ್ನಿಯು ಪ್ರಾಕೃತದೇಹವು ಹೋದಮೇಲೆ ಜ್ಯೋತಿರ್ಮಯವಾದ ದೇಹವನ್ನು ಹೊಂದಿ ಸಪ್ತರ್ಷಿಗಳ ಮಂಡಲದಲ್ಲಿ ಏಳನೆಯವನಾಗಿ ಈಗಲೂ ಪ್ರಕಾಶಿಸುತ್ತಿರುವನು.

ಪರಶುರಾಮನು ಮುಂದಿನ ಮನ್ವಂತರದಲ್ಲಿ ವೇದಪ್ರವರ್ತಕರಾದ ಸಪ್ತರ್ಷಿ ಗಳಲ್ಲಿ ಒಬ್ಬನಾಗುವನು. ಈಗ ಶಾಂತಮೂರ್ತಿಯಾಗಿ, ಸಿದ್ಧರು ಮತ್ತು ಗಂಧರ್ವಾದಿ ಗಳಿಂದ ಸ್ತುತಿಸಲ್ಪಡುತ್ತ ಮಹೇಂದ್ರಪರ್ವತದಲ್ಲಿ ನೆಲೆಸಿರುವನು. ಹೀಗೆ ಪರ ಮಾತ್ಮನು ಭೃಗುವಂಶದಲ್ಲಿ ಅವತರಿಸಿ ದುಷ್ಟಕ್ಷತ್ರಿಯರನ್ನು ಸಂಹರಿಸಿ ಭೂಭಾರ ವನ್ನು ಪರಿಹರಿಸಿದನು.

ಅತ್ತ ಗಾಧಿಗೆ ಮಹಾತೇಜಸ್ವಿಯಾದ ವಿಶ್ವಾಮಿತ್ರನು ಜನಿಸಿದನು. ತಪಃಶಕ್ತಿ ಯಿಂದ ಅವನು ಮುಂದೆ ಬ್ರಹ್ಮರ್ಷಿಯಾದನು. ಆತನಿಗೆ ನೂರೊಂದು ಮಂದಿ

ಮಕ್ಕಳು. ಅವರಲ್ಲಿ ಮಧ್ಯಮ ಪುತ್ರನಿಗೆ ಮಧುಛಂದನೆಂದು ಹೆಸರು. ಅವನಿಂದ ಸಹಿತ ರಾದ ಐವತ್ತು ಮಂದಿ ಮಕ್ಕಳು ಮಾಧುಛಂದಸರು ಎಂದು ಹೆಸರುಳ್ಳವರು. ಭೃಗು ವಂಶೋತ್ಪನ್ನನಾದ ಅಜೀಗರ್ತನು ತನ್ನ ಮಧ್ಯಮ ಮಗನಾದ ಶುನಃಶೇಫನನ್ನು ಹರಿ ಶ್ಚಂದ್ರನು ಮಾಡುವ ಯಾಗಕ್ಕೆ ನರಬಲಿಗಾಗಿ ವಿಕ್ರಯಿಸಿದನು. ಶುನಃಶೇಫನು ವಿಶ್ವಾ ಮಿತ್ರನನ್ನು ಪ್ರಾರ್ಥಿಸಲು ಅವನು ಇವನನ್ನು ಪುತ್ರಭಾವದಿಂದ ಸ್ವೀಕರಿಸಿ ತನ್ನ ನೂರೊಂದು ಮಕ್ಕಳನ್ನು ಕುರಿತು "ಈ ಶುನಃಶೇಫನನ್ನು ನಿಮ್ಮೆಲ್ಲರಿಗೂ ಜ್ಯೇಷ್ಠ ನನ್ನಾಗಿ ಒಪ್ಪಿರಿ" ಎಂದು ಹೇಳಿದರು. ಜ್ಯೇಷ್ಠರಾದ ಐವತ್ತು ಮಂದಿಯೂ ಒಪ್ಪ ಲಿಲ್ಲ. ವಿಶ್ವಾಮಿತ್ರನು ಅವರೆಲ್ಲರನ್ನೂ ಮ್ಲೇಚ್ಛರಾಗಿರಿ ! ಎಂದು ಶಪಿಸಿದನು. ಉಳಿದ ಐವತ್ತು ಮಂದಿ ಸಹೋದರರಿಂದ ಸಹಿತನಾದ ಮಧುಛಂದಾನು ಶುನಃ ಶೇಫನನ್ನು ತಮ್ಮ ಜ್ಯೇಷ್ಠಭ್ರಾತೃವೆಂದು ಒಪ್ಪಿಕೊಂಡನು. ವಿಶ್ವಾಮಿತ್ರನು ಅವರೆಲ್ಲರನ್ನೂ ಸತ್ಪುತ್ರವಂತರಾಗಿರಿ ಎಂದು ಆಶೀರ್ವದಿಸಿದನು. ಶುನಃಶೇಫನು ಯಾಗದಲ್ಲಿ ವಿಶ್ವಾ ಮಿತ್ರೋಪದಿಷ್ಟ ಎರಡು ಮಂತ್ರಗಳನ್ನು ಹೇಳಿ ಸ್ತುತಿಸಿದನು. ಅದರಿಂದ ಸಂತುಷ್ಟ ರಾದ ವಿಷ್ಣು ಇಂದ್ರಾದಿ ದೇವತೆಗಳು ಅವನನ್ನು ಕೊಲೆಯಿಂದ ತಪ್ಪಿಸಿ ವಿಶ್ವಾಮಿತ್ರನ ವಶಕ್ಕೆ ಕೊಟ್ಟುದರಿಂದ ಶುನಃಶೇಫನು **ದೇವರಾತ** ಎಂಬ ನಾಮವುಳ್ಳವನಾದನು. ವಿಶ್ವಾಮಿತ್ರಋಷಿಗಳು ಮಧುಛಂದಾದಿಗಳನ್ನು ಕುರಿತು "ಮಕ್ಕಳಿರಾ ! ಕೌಶಿಕವಂಶ ದಲ್ಲಿ ಪ್ರಸಿದ್ಧನಾದ ದೇವರಾತನನ್ನು ನೀವೆಲ್ಲ ಅನುಸರಿಸಿರಿ" ಎಂದು ಹೇಳಿದರು. ವಿಶ್ವಾ ಮಿತ್ರರಿಗೆ ಈ ಮಕ್ಕಳೇ ಅಲ್ಲದೆ ಅಷ್ಟಕ ಮೊದಲಾದ ಬೇರೆ ಮಕ್ಕಳೂ ಇದ್ದಾರೆ. ಹೀಗೆ ಕೌಶಿಕ ಗೋತ್ರವು ನಾನಾ ಪ್ರಕಾರವುಳ್ಳದ್ದಾಗಿ ಆಯಿತು.

ಪುರೂರವಸ್ಸಿನ ಐದನೆಯ ಮಗ ಜಯನ ವಂಶವನ್ನು ಹೇಳಿದ್ದಾಯಿತು. ಈಗ ಪುರೂರವಸ್ಸಿನ ಜ್ಯೇಷ್ಠ ಪುತ್ರನ ವಂಶವನ್ನು ತಿಳಿಸುವೆನು ಕೇಳು :–

ಪುರೂರವಸ್ಸಿನ ಜ್ಯೇಷ್ಠಪುತ್ರ ಆಯುವಿಗೆ ನಹುಷ, ಕ್ಷತ್ರವೃದ್ಧ, ರಜಿ, ರಾಭ ಮತ್ತು ಅನೇನಸ್ಸು ಎಂದು ಐದು ಮಂದಿ ಪುತ್ರರು. ಕ್ಷತ್ರವೃದ್ಧನಿಗೆ ಸುಹೋತ್ರನೂ ಅವನಿಗೆ ಕಾಶ್ಯ, ಕುಶ ಮತ್ತು ಗೃತ್ಸಮದ ಎಂಬ ಮೂವರು ಮಕ್ಕಳಾದರು. ಗೃತ್ಸ ಮದನಿಗೆ ಶುನಕನು ಮಗನು. ಕಾಶ್ಯನಿಗೆ ಕಾಶಿ, ಸುರಾಷ್ಟ್ರ, ದೀರ್ಘತಮ, ಧನ್ವಂತರಿ, ಕೇತುಮಂತ, ಭೀಮರಥ, ದಿವೋದಾಸ, ದ್ಯುಮಂತ ಇವರು ಕ್ರಮವಾಗಿ ಒಬ್ಬರಿಂದ ಮತ್ತೊಬ್ಬರು ಹುಟ್ಟಿದರು. ದ್ಯುಮಂತನಿಗೆ ಪ್ರತರ್ದನ, ಶತ್ರುಜಿತ್, ವತ್ಸ, ಋತ ಧ್ವಜ (ಕುವಲಯಾಶ್ವನೆಂಬ ಹೆಸರೂ ಇದೆ), ಕುವಲಯಾಶ್ವನಿಗೆ ಅಲರ್ಕಮೊದಲಾದ ಅನೇಕ ಮಕ್ಕಳಾದರು. ಅಲರ್ಕನು 66 ಸಾವಿರ ವರ್ಷಗಳ ಕಾಲ ರಾಜ್ಯವಾಳಿದನು. ಅವನಿಗೆ ಸನ್ನತಿ, ಅವನಿಗೆ ಸುನೀಥ, ಅವನಿಗೆ ಸುಕೇತನ, ಅವನಿಗೆ ಧರ್ಮಕೇತು, ಅವ ನಿಗೆ ಸತ್ಯಕೇತು, ಅವನಿಗೆ ಧೃಷ್ಟಕೇತು, ಅವನಿಗೆ ಸುಕುಮಾರ, ಅವನಿಗೆ ವೀತಿಹೋತ್ರ

ಅವನಿಗೆ ಭರ್ಗ, ಅವನಿಗೆ ಭಾರ್ಗಭೂಮಿ ಮಕ್ಕಳಾದರು. ಇವರೆಲ್ಲ ಕ್ಷತ್ರವೃದ್ಧನ ಸಂತತಿಯವರು.

ಆಯುವಿನ ನಾಲ್ಕನೆಯ ಮಗನು ಅನೇನಸ್ಸು. ಅವನಿಗೆ ಶುದ್ಧ, ಅವನಿಗೆ ಶುಚಿ, ಅವನಿಗೆ ತ್ರಿಕಕುತ್, ಅವನಿಗೆ ಶಾಂತರಜಸ್ಸು ಮಗನು.

ಆಯುವಿನ ಮಗ ರಜಿಗೆ ಐನೂರುಮಂದಿ ಮಕ್ಕಳು ರಜಿಯು ದೇವತೆಗಳ ಪ್ರಾರ್ಥನಾನುಸಾರ ದೈತ್ಯರನ್ನು ಕೊಂದು ದೇವೇಂದ್ರನಿಗೆ ಸ್ವರ್ಗವನ್ನು ಕೊಟ್ಟನು. ಆದರೂ ಇಂದ್ರನು ಪ್ರಹ್ಲಾದನಿಗೆ ಹೆದರಿ ರಜಿಗೇ ಸ್ವರ್ಗಾಧಿಪತ್ಯವನ್ನು ಕೊಟ್ಟು ಅವನ ಅಧೀನದಲ್ಲಿಯೇ ಇದ್ದನು. ರಜಿಯು ಮೃತನಾದ ಮೇಲೆ ಇಂದ್ರನು ಸ್ವರ್ಗಾಧಿಪತ್ಯವನ್ನು ಕೊಡಿಯೆಂದು ರಜಿಯ ಐನೂರು ಮಂದಿ ಮಕ್ಕಳನ್ನು ಅನೇಕ ಬಾರಿ ಬೇಡಿದರೂ, ಅವರು ಕೊಡದೆ ತಾವೇ ಆಳುತ್ತ ಯಜ್ಞಭಾಗಗಳನ್ನು ಸ್ವೀಕರಿಸುತ್ತ ಬಂದರು. ಆಗ ದೇವೇಂದ್ರನು ರಜಿಯ ಮಕ್ಕಳಿಗೆ ಅನ್ಯಥಾಜ್ಞಾನವು ಬರುವಂತೆ ಬೃಹಸ್ಪತ್ಯಾಚಾರ್ಯರಿಂದ ಅಭಿಚಾರ ಹೋಮ ಮಾಡಿಸಿದನು. ರಜಿಯ ಪುತ್ರರ ಬುದ್ಧಿ ಭ್ರಂಶವಾಗಿ ನಿಶ್ಶೇಷವಾಗಿಹತರಾದರು.

ಕ್ಷತ್ರವೃದ್ಧನ ಇನ್ನೊಬ್ಬ ಮಗನಾದ ಪ್ರತಿಕ್ಷತ್ರನಿಗೆ, ಸಂಜಯ, ಜಯಕೃತ, ವೀರ್ಯಘನ, ಸಹದೇವ, ಅಹೀನ, ಜಯತ್ಸೇನ, ಸಂಹೃತಿ, ಜಯ, ಕ್ಷತ್ರಧರ್ಮ ಎಂದು ಕ್ರಮವಾಗಿ ಒಬ್ಬರಿಂದ ಮತ್ತೊಬ್ಬರು ಹುಟ್ಟಿದರು. ಮುಂದೆ ನಹುಷನ ಸಂತತಿಯನ್ನು ಹೇಳುವೆನು ಕೇಳು.

## ಹದಿನಾಲ್ಕನೆಯ ಅಧ್ಯಾಯ ಮುಗಿದುದು

ಆಯುವಿನ ಜ್ಯೇಷ್ಠಪುತ್ರನಾದ ನಹುಷನಿಗೆ ಯತಿ, ಯಯಾತಿ, ಸಂಯಾತಿ ಆಯತಿ, ವಿಯತಿ ಮತ್ತು ಕೃತಿ ಎಂದು ಆರು ಮಂದಿ ಪುತ್ರರು. ಯತಿಯು ವಿರಕ್ತನಾದುದರಿಂದ ರಾಜ್ಯವಾಳದೆ ಕಾಡಿಗೆ ಹೋಗಿ ಧ್ಯಾನಾಸಕ್ತನಾದನು. ನಹುಷನು ಕಾರಣಾಂತರದಿಂದ ಇಂದ್ರಪದವಿಯನ್ನು ಹೊಂದಿ, ಶಚಿಯನ್ನು ಬಯಸಿ, ಅಗಸ್ತ್ಯಾದಿಗಳಿಂದ ಶಾಪಹೊಂದಿ ಅಜಗರನಾದನು. ಬಳಿಕ ಯಯಾತಿಯು ರಾಜನಾಗಿ ತನ್ನ ನಾಲ್ಕುಮಂದಿ ಸಹೋದರರಿಗೂ, ನಾಲ್ಕುದಿಕ್ಕುಗಳ ಪ್ರದೇಶದ ಆಧಿಪತ್ಯವನ್ನು ಕೊಟ್ಟು, ದೇವಯಾನಿ ಮತ್ತು ಶರ್ಮಿಷ್ಠೆಯರನ್ನು ಮದುವೆಯಾಗಿ ಧರ್ಮದಿಂದ ರಾಜ್ಯಪಾಲನೆಯನ್ನು ಮಾಡುತ್ತಿದ್ದನು.

**ಪರೀಕ್ಷಿತ್ :–** ದೇವಯಾನಿಯು ಶುಕ್ರಾಚಾರ್ಯರ ಮಗಳಾದ್ದರಿಂದ ಬ್ರಾಹ್ಮಣಸ್ತ್ರೀಯು. ಯಯಾತಿಯು ಕ್ಷತ್ರಿಯನು. ಅವನು ಬ್ರಾಹ್ಮಣಸ್ತ್ರೀಯನ್ನು ಹೇಗೆ ಮದಿವೆಯಾದನು ?

**ಶುಕ :–** ಒಮ್ಮೆ ವೃಷಪರ್ವರಾಜನ ಮಗಳು ಶರ್ಮಿಷ್ಠೆಯು, ತಮ್ಮ ಪುರೋಹಿತರಪುತ್ರಿಯಾದ ದೇವಯಾನಿ ಮತ್ತು ಸಾವಿರಾರು ಮಂದಿ ಸಖಿಯರೊಂದಿಗೆ ಪುರೋದ್ಯಾನದಲ್ಲಿ ವಸ್ತ್ರಗಳನ್ನು ಕಳಚಿಟ್ಟು ಜಲಕ್ರೀಡೆಯಾಡುತ್ತಿದ್ದಳು. ಅದೇ ವೇಳೆ ಶಿವನು ಪಾರ್ವತಿಯೊಡನೆ ಗಗನದಲ್ಲಿ ಹೋಗುತ್ತಿದ್ದನು. ಬಾಲಕಿಯರು ಅದನ್ನು ನೋಡಿ ನಾಚಿ, ಸರೋವರದಿಂದ ಮೇಲಕ್ಕೆ ಬಂದು ತಮ್ಮ ತಮ್ಮ ವಸ್ತ್ರಗಳನ್ನು ಉಟ್ಟುಕೊಂಡರು. ಈ ಗಡಿಬಿಡಿಯಲ್ಲಿ ಶರ್ಮಿಷ್ಠೆಯು ದೇವಯಾನಿಯ ವಸ್ತ್ರವನ್ನುಟ್ಟುಕೊಂಡಳು. ದೇವಯಾನಿಯು ಇದನ್ನು ನೋಡಿ ಕುಪಿತಳಾಗಿ

**ದೇವಯಾನಿ :–** ಸಖಿಯರೇ ! ಶರ್ಮಿಷ್ಠೆಯ ಅಯೋಗ್ಯ ಕಾರ್ಯವನ್ನು ನೋಡಿರಿ. ನನ್ನ ವಸ್ತ್ರವನ್ನು ಅವಳು ಉಡಬಹುದೆ ? ನಾವು ಬ್ರಾಹ್ಮಣರು. ಪರಮಾತ್ಮನ ಮುಖಸ್ಥಾನೀಯರು ಇವಳು ನಮ್ಮಪ್ಪನ ಶಿಷ್ಯನಾದ ವೃಷಪರ್ವನ ಮಗಳು. ಲೇ! ಶರ್ಮಿಷ್ಠೇ ! ದುಷ್ಟಳಾದ ನೀನು ನನ್ನ ಸೀರೆಯನ್ನು ಹೇಗೆ ಉಟ್ಟು ಕೊಂಡೆ ?

**ಶರ್ಮಿಷ್ಠೆ :–** (ಕುಪಿತಳಾಗಿ) ಏನೇಭಿಕ್ಷುಕಿ ! ನಿನ್ನ ಯೋಗ್ಯತೆಯನ್ನರಿಯದೆ ಬೊಗಳುತ್ತಿರುವೆ. ಕಾಗೆಗಳಂತೆ ಅನ್ನಕ್ಕಾಗಿ ನಮ್ಮ ಮನೆಯಲ್ಲಿಯೇ ಕಾಯುತ್ತಿರುವ ನಿನಗೆಷ್ಟು ಸೊಕ್ಕು ?

(ಇತ್ಯಾದಿಯಾಗಿ ನಿಂದಿಸಿ ದೇವಯಾನಿಯನ್ನು ಬೆತ್ತಲೆ ಮಾಡಿ ಬಾವಿಗೆ ತಳ್ಳಿ ಮನೆಗೆ ಹೋದಳು. ಆಗ ಯಯಾತಿಯು ಬೇಟೆಯಾಡುತ್ತ ದೈವೇಚ್ಛೆಯಿಂದ ಬಾಯಾರಿ ಜಲಪಾನಕ್ಕಾಗಿ ಅದೇ ಬಾವಿಯ ಬಳಿಗೆ ಬಂದು ನಗ್ನಳಾಗಿದ್ದ ದೇವಯಾನಿಗೆ ತನ್ನ ಉತ್ತರೀಯನ್ನು ಒಗೆದು, ಕೈ ಹಿಡಿದು ಅವಳನ್ನು ಬಾವಿಯಿಂದ ಮೇಲಕ್ಕೆತ್ತಿದನು.

**ದೇವಯಾನಿ :–** ರಾಜನೇ ! ನನ್ನ ಕೈಹಿಡಿದಿರುವೆ. ದೈವೇಚ್ಛೆಯಿಂದುಂಟಾದ ಪಾಣಿಗ್ರಹಣವಿದು. ಕಚನ ಶಾಪದಿಂದ ನನಗೆ ಬ್ರಾಹಣ್ಮನು ಪತಿಯಾಗುವಂತಿಲ್ಲ. ನೀನೇ ಮದಿವೆಯಾಗು.

**ಶುಕ :–** ಇದು ಶಾಸ್ತ್ರವಿರುದ್ಧವಾದರೂ ದೈವದಿಂದಲೇ ಹೀಗಾಗಿದೆಯೆಂದು ನಿಶ್ಚಯಿಸಿ ಯಯಾತಿಯು ಅವಳ ಮಾತನ್ನೊಪ್ಪಿ ಹೊರಟು ಹೋದನು. ಬಳಿಕ

ದೇವಯಾನಿಯು ಒಬ್ಬ ಸಖಿಯನ್ನು ಕಳುಹಿಸಿ ತಂದೆಯನ್ನು ಬರಮಾಡಿಕೊಂಡು ನಡೆದ ಸಂಗತಿಯನ್ನೆಲ್ಲ ತಿಳಿಸಿದಳು. ಶುಕ್ರಾಚಾರ್ಯರು ಪೌರೋಹಿತ್ಯಕ್ಕಿಂತ ತಿರಿದು ತಿಂದು ಬದುಕುವುದೇ ಲೇಸೆಂದು ನಿಶ್ಚಯಿಸಿ ಮಗಳನ್ನು ಕರೆದುಕೊಂಡು ಆ ಪಟ್ಟಣ ವನ್ನು ಬಿಟ್ಟು ಹೊರಟರು. ಇದನ್ನು ತಿಳಿದು ವೃಷಪರ್ವರಾಜನು ಓಡಿ ಬಂದು ಶುಕ್ರಾಚಾರ್ಯರ ಪಾದಗಳ ಮೇಲೆ ಬಿದ್ದು ಕ್ಷಮೆ ಬೇಡಿದನು. ಶುಕ್ರನು ತನ್ನ ಪ್ರೇಮ ಪುತ್ರಿಯ ಕೋರಿಕೆಗಳನ್ನು ಈಡೇರಿಸುವುದಾದರೆ ಪೌರೋಹಿತ್ಯಕ್ಕೆ ಅಲ್ಲೇ ನಿಲ್ಲುವು ದಾಗಿ ಹೇಳಿದರು. ರಾಜನು ದೇವಯಾನಿಯ ಕೋರಿಕೆಯೇನೆಂದು ಅವಳನ್ನೇ ಕೇಳಿ ದನು. ಅವಳು ತಾನು ಮದಿವೆಯಾಗಿ ಹೋಗು ಕಡೆಯಲ್ಲಿಯೇ ರಾಜಪುತ್ರಿಯು ಸಖಿ ಯರೊಡನೆ ಬಂದು ದಾಸಿಯಾಗಿರಬೇಕೆಂದು ಹೇಳಿದಳು. ರಾಜನ ಅಭಿಪ್ರಾಯದಂತೆ ಅವನ ಮಗಳಾದ ಶರ್ಮಿಷ್ಠೆಯು ಒಪ್ಪಿ ದೇವಯಾನಿಗೆ ದಾಸಿಯಾದಳು. ಯಯಾ ತಿಯು ದೇವಯಾನಿಯನ್ನು ಮದಿವೆಯಾದನು. ದೇವಯಾನಿಯು ದಾಸಿಯಾದ ಶರ್ಮಿಷ್ಠೆಯೊಡನೆ ಯಯಾತಿಯ ಅರಮನೆಗೆ ಬಂದಳು. ಶುಕ್ರಾಚಾರ್ಯರು ಯಯಾತಿಗೆ ಏನೇ ಆದರೂ ಶರ್ಮಿಷ್ಠೆಯನ್ನು ಕೂಡಬಾರದೆಂದು ಕಟ್ಟಪ್ಪಣೆ ಮಾಡಿದ್ದರು. ಒಂದು ದಿವ ದೇವಯಾನಿಗೆ ಮಕ್ಕಳಾದುದನ್ನು ನೋಡಿದ ಶರ್ಮಿಷ್ಠೆಯು ತಾನೂ ಅವಳಂತೆ ಪುತ್ರವತಿಯಾಗಬೇಕೆಂದು ಬಯಸಿ ರಹಸ್ಯದಲ್ಲಿ ಯಯಾತಿಯನ್ನು ಬೇಡಿದಳು. ಆಗ ಋತುಮತಿಯಾಗಿ ಪ್ರಾರ್ಥಿಸತಕ್ಕ ತನ್ನ ಪತ್ನಿಯೇ ಆಗಿರುವ ಶರ್ಮಿಷ್ಠೆಯನ್ನು ನಿರಾಕರಿಸುವುದು ಅಧರ್ಮವೆಂದು ತಿಳಿದು, ಯಯಾತಿಯು ಶುಕ್ರಾಚಾರ್ಯರು ಅವಳ ಸಂಗ ಕೂಡದೆಂದು ಅಪ್ಪಣೆ ಮಾಡಿದ್ದರೂ ದೇವರೇ ಗತಿಯೆಂದು ನಿಶ್ಚಯಿಸಿ ಅವಳೊಡನೆ ಬೆರತು ಗರ್ಭವನ್ನಿಟ್ಟನು. ದೇವಯಾನಿಗೆ ಯದು ಮತ್ತು ತುರ್ವಸು ಎಂಬ ಇಬ್ಬರು ಪುತ್ರರಾದರು. ಶರ್ಮಿಷ್ಠೆಗೆ ದ್ರುಹ್ಯ, ಅನು, ಪೂರು ಎಂಬ ಮೂವರು ಪುತ್ರರಾದರು. ದೇವಯಾನಿಯು ತನ್ನ ಪತಿಯಿಂದಲೇ ಶರ್ಮಿಷ್ಠೆಯು ಪುತ್ರರನ್ನು ಪಡೆದಿರುವಳು ಎಂಬುದನ್ನು ಕೇಳಿ ಕೋಪಗೊಂಡು ತಂದೆಯ ಮನೆಗೆ ಹೊರಟಳು. ಯಯಾತಿಯು ಕಾಮುಕನಾಗಿ ಅಂಗಲಾಚಿಬೇಡಿ ಎಷ್ಟೇ ಸಮಾಧಾನಮಾಡಿದರೂ ದೇವಯಾನಿಯು ಕೇಳದೆ ದಡದಡನೆ ಅಪ್ಪನ ಮನೆಗೆ ಹೊರಟೇ ಹೋದಳು. ಮಗಳಿಂದ ಸಂಗತಿಯನ್ನು ತಿಳಿದ ಶುಕ್ರಾಚಾರ್ಯರು "ರಾಜನೇ ! ಕೊಟ್ಟ ಮಾತನ್ನು ತಪ್ಪಿದ ನಿನಗೆ ಮುಪ್ಪು ಬರಲಿ" ಎಂದು ಶಪಿಸಿದರು. ಯಯಾತಿಯು "ಗುರುವೇ ! ಅಪರಾಧವನ್ನು ಕ್ಷಮಿಸಿ, ನಿಮ್ಮ ಮಗಳಲ್ಲಿ ಕಾಮೋಪಭೋಗದಿಂದ ಇನ್ನೂ ನನಗೆ ತೃಪ್ತಿಯಾಗಿಲ್ಲ. ನನ್ನ ಮುಪ್ಪನ್ನು ಇನ್ನೊಬ್ಬನಿಗೆ ಕೊಟ್ಟು ಅವನ ಯೌವನವನ್ನು ನಾನು ಪಡೆದು ಯಥೇಷ್ಟ ಭೋಗವನ್ನು ಅನುಭವಿಸುವಂತೆ ಅನುಗ್ರಹಿಸಬೇಕು" ಎಂದು ಬೇಡಿದನು. ಶುಕ್ರಾಚಾರ್ಯರು ಹಾಗೆಯೇ ಆಗಲಿಯೆಂದು ಹೇಳಿದರು. ಯಯಾತಿಯು ಮನೆಗೆ ಬಂದು ಯದು, ತುರ್ವಸು, ದ್ರುಹ್ಯ ಮತ್ತು ಅನು ಎಂಬ ತನ್ನ ಮಕ್ಕಳನ್ನು ಕೇಳಿದಾಗ ಮುಪ್ಪನ್ನು ತೆಗೆದುಕೊಳ್ಳಲು ಒಪ್ಪಲಿಲ್ಲ. ಕೊನೆಯಮಗನಾದ ಪೂರುವನ್ನು ಕೇಳಿದಾಗ

ತಂದೆಯ ಆಜ್ಞೆಯನ್ನು ಒಪ್ಪದೇ ಯಾವನಿರುವನು ? ಎಂದು ಹೇಳಿ ತನ್ನ ಯೌವನ ವನ್ನು ಕೊಟ್ಟು ಮುಪ್ಪನ್ನು ಹೊಂದಿದನು. ಬಳಿಕ ಯಯಾತಿಯು ಪ್ರಜೆಗಳನ್ನು ಧರ್ಮದಿಂದ ಪರಿಪಾಲಿಸುತ್ತ, ವಿಷಯಗಳನ್ನು ಬಹುವಾಗಿ ಭೋಗಿಸುತ್ತ ಇದ್ದನು. ಅನೇಕ ಯಾಗಗಳನ್ನು ಮಾಡಿ ಪರಮಾತ್ಮನನ್ನು ಆರಾಧಿಸಿದನು. ಯಾಯತಿಯು ಸಾವಿರ ವರ್ಷಗಳವರೆಗೆ ವಿಷಯಗಳನ್ನು ಎಡೆಬಿಡದೆ ಭೋಗಿಸುತ್ತಿದ್ದರೂ ಕುತ್ಸಿತ ಗಳಾದ ಇಂದ್ರಿಯಗಳನ್ನು ತೃಪ್ತಿ ಬಡಿಸಲು ಶಕ್ತನಾಗಲಿಲ್ಲ.

## ಹದಿನೈದನೆಯ ಅಧ್ಯಾಯ ಮುಗಿದುದು

ಹೀಗೆಯೇ ಭೋಗದಲ್ಲಿ ಕಾಲಕಳೆದರೆ ಮೋಕ್ಷಕ್ಕೆ ಹಾನಿ ಬರುವುದೆಂದು ಯಯಾತಿ ತಿಳಿದು ವಿರಕ್ತನಾಗಿ ದೇವಯಾನಿಗೆ ತನ್ನ ಅನುಭವವನ್ನೇ ಕಥೆಯನ್ನಾಗಿ ಹೇಳಿದನು :–

ಒಂದು ಆಡು ಕಾಡಿನಲ್ಲಿ ಅಲೆಯುತ್ತಿತ್ತು. ಆಗ ಬಾವಿಯಲ್ಲಿ ಬಿದ್ದಿದ್ದ ಒಂದು ಮೇಕೆಯನ್ನು ಕಂಡಿತು. ಕಾಮಾತುರದಿಂದ ಆ ಆಡು ಮೇಕೆಯನ್ನು ಬಾವಿಯಿಂದ ಮೇಲಕ್ಕೆತ್ತಲು ಉಪಾಯವನ್ನು ಆಲೋಚಿಸಿ ಕೊಂಬಿನ ತುದಿಯಿಂದ ತೀರದ ಮಣ್ಣನ್ನು ತೆಗೆದು ಮೇಕೆಯು ಮೇಲಕ್ಕೆ ಬರುವ ದಾರಿ ಮಾಡಿತು. ಮೇಲಕ್ಕೆ ಬಂದ ಮೇಕೆಯು ಅದನ್ನು ಪತಿಯಾಗಿ ವರಿಸಿತು. ಅದನ್ನು ನೋಡಿ ಬೇರೆ ಮೇಕೆಗಳೂ ಆ ಗಂಡನ್ನು ಕಾಮಿಸಿ ವರಿಸಿದುವು. ಆಡು ಎಲ್ಲ ಮೇಕೆಗಳಿಂದ ಕೂಡಿ ಬೇಕಾದ ಹಾಗೆ ರಮಿಸುತ್ತಿದ್ದರೂ ತೃಪ್ತಿ ಹೊಂದಲಿಲ್ಲ. ಅದರಂತೆ ನನ್ನ ಅವಸ್ಥೆಯೂ ಆಗಿದೆ. ನಿನ್ನ ಪ್ರೇಮಪಾಶಕ್ಕೆ ಒಳಗಾಗಿ ಭಗವತ್ಸ್ವರೂಪವನ್ನು ಮರೆತೆನು. ಎಷ್ಟು ಭೋಗಿಸಿದರೂ ತೃಪ್ತಿಯು ಬರುವುದಿಲ್ಲ. ತುಪ್ಪವನ್ನು ಸುರಿದಷ್ಟೂ ಬೆಂಕಿಯು ಉರಿಹೆಚ್ಚುವುದಷ್ಟೆ? ಪ್ರಬಲ ಇಂದ್ರಿಯಗಳ ಸಂಬಂಧವು ವಿದ್ವಾಂಸನನ್ನೂ ವಿಷಯಗಳ ಕಡೆಗೆ ಸೆಳೆದು ಬಿಡುವುವು. ಕಾಮಿತರುಣನು ತಾಯಿ, ತಂಗಿ ಮತ್ತು ಮಗಳ ಜೊತೆಯಲ್ಲಿ ಕೂಡ ಬಾರದು. ಹೀಗೆ ವಿಷಯ ಭೋಗೇಚ್ಛೆಯು ಮಹಾನರ್ಥಪ್ರದವಾದ್ದರಿಂದ ಎಲ್ಲವನ್ನೂ ಬಿಟ್ಟು, ನಿರಹಂಕಾರಿಯಾಗಿ, ಜ್ಞಾನಿಗಳಿಂದ ಸಹಿತನಾಗಿ ತಪಸ್ಸನ್ನು ಮಾಡುವೆನು."

ಹೀಗೆ ಯಯಾತಿಯು ನಿಶ್ಚಯಿಸಿ, ಪೂರುವಿಗೆ ಯೌವನವನ್ನು ಹಿಂತಿರುಗಿಸಿ ಅವನಿಗೆ ಸಾರ್ವಭೌಮಾಧಿಕಾರವನ್ನು ಒಪ್ಪಿಸಿ, ಕಾಡಿಗೆ ಹೋಗಿ ಹರಿಧ್ಯಾನಾಸಕ್ತ ನಾದನು. ದೇವಯಾನಿಯೂ ವಿವೇಕವಂತಳಾಗಿ ಕೃಷ್ಣನನ್ನು ಧ್ಯಾನಿಸುತ್ತ ದೇಹ ಬಿಟ್ಟಳು.

## ಹದಿನಾರನೆಯ ಅಧ್ಯಾಯ ಮುಗಿದುದು

ಪೂರುವಿಗೆ ಜನಮೇಜಯನು ಮಗನು. ಅವನ ಕುಲದಲ್ಲಿ ರಂತಿನಾರನೆಂಬುವನು ಹುಟ್ಟಿದನು. ಅವನ ಮಗ ಅಪ್ರತಿರಥನೆಂಬುವನಿಗೆ ಕಣ್ವಋಷಿ. ಅವನಿಗೆ ಮೇಧಾತಿಥಿ. ಅವನಿಗೆ ಪ್ರಸ್ಕಣ್ವ ಮೊದಲಾದ ಬ್ರಾಹ್ಮಣರು ಹುಟ್ಟಿದರು. ರಂತಿನಾರನ ಇನ್ನೊಬ್ಬ ಮಗ ಸುಮತಿಗೆ ರೈಭ್ಯನು ಮಗನು. ಅವನ ಮಗನೇ ದುಷ್ಯಂತನು. ಅವನು ಕಣ್ವಋಷಿಗಳ ಆಶ್ರಮದಲ್ಲಿದ್ದ ಕ್ಷತ್ರಿಯಕನ್ಯೆಯಾದ ಶಕುಂತಲೆಯನ್ನು ನೋಡಿ ಮೋಹಿಸಿದ. ಕಂಡ ಹೆಣ್ಣು ಮಕ್ಕಳನ್ನು ಮೋಹಿಸುವ ಲಂಡ ಮನಸ್ಸಿನವನಲ್ಲ ಮೋಹಿಸಬೇಕಾದರೆ ಕ್ಷತ್ರಿಯ ಜಾತಿಯ ಹೆಣ್ಣೇ ಅವಳಾಗಿರಬೇಕೆಂದು ನಿಶ್ಚಯಿಸಿ ನೀನಾರೆಂದು ಕೇಳಿದರು. ವಿಶ್ವಾಮಿತ್ರರಿಂದ ಮೇನಕೆಯಲ್ಲಿ ತಾನು ಹುಟ್ಟಿದವಳೆಂದು ಶಕುಂತಳೆಯು ತಿಳಿಸಿಬಿಟ್ಟಳು. ದುಷ್ಯಂತನು ಗಾಂಧರ್ವವಿವಾಹವನ್ನು ಮಾಡಿಕೊಂಡು ಶಕುಂತಲೆಯಲ್ಲಿ ಗರ್ಭವನ್ನಿಟ್ಟು ತನ್ನ ಪಟ್ಟಣಕ್ಕೆ ಹೋದನು. ಶಕುಂತಳೆಯು ಗಂಡು ಮಗುವನ್ನು ಹೆತ್ತಳು. ಆ ಮಗನಲ್ಲಿ ಹರ್ಯಾವೇಶವಿದ್ದುದರಿಂದ ಸಿಂಹ, ರಾಕ್ಷಸಾದಿಗಳನ್ನು ದಮನ ಮಾಡುತ್ತಿದ್ದನು. ಶಕುಂತಳೆ ಮಗನನ್ನು ಕರೆದುಕೊಂಡು ಸಭೆಗೆ ಬಂದಾಗ ರಾಜನು ಅವಳನ್ನು ಸ್ವೀಕರಿಸಲಿಲ್ಲ. ಅಶರೀರವಾಣಿ ನುಡಿಯಿತು :— "ದುಷ್ಯಂತನೇ ! ಇವನು ನಿನ್ನ ಮಗನು. ಶಕುಂತಳೆ ನಿನ್ನ ಧರ್ಮಪತ್ನಿ. ಪರಿಗ್ರಹಿಸು" ರಾಜನು ಇದನ್ನು ಕೇಳಿ ಸತಿಸುತರನ್ನು ಸ್ವೀಕರಿಸಿದನು. ದುಷ್ಯಂತನ ಮಗನು ಮುಂದೆ ಭರತಚಕ್ರವರ್ತಿಯೆಂದು ಪ್ರಸಿದ್ಧನಾದನು. ಅವನು ಬೇಕಾದಷ್ಟು ಯಾಗಗಳನ್ನು ಮಾಡಿ ಶ್ರೀಹರಿಯನ್ನು ಪೂಜಿಸಿದನು. ಇಪ್ಪತ್ತೇಳು ಸಾವಿರ ವರ್ಷಗಳವರೆಗೆ ರಾಜ್ಯ ಪರಿಪಾಲನೆ ಮಾಡಿದನು. ಅವನಿಗೆ ಮೂವರು ಪಟ್ಟದ ರಾಣಿಯರು. ಅವರು ಹೆತ್ತ ಮಕ್ಕಳು ಭರತನಿಗೆ ಸದೃಶರಲ್ಲವೆಂದು ಹೇಳಲು ಅವರನ್ನು ನೆಲದಲ್ಲಿ ಹೂತುಬಿಟ್ಟರು. ಭರತನು ಮರುತ್‌ಸ್ತೋಮ ಎಂಬ ಯಾಗ ಮಾಡಿದನು. ಮರುತ್ತುಗಳು ಪ್ರೀತರಾಗಿ ಭರದ್ವಾಜನೆಂಬ ಮಗುವನ್ನು ಭರತನ ಉಡಿಗೆ ಹಾಕಿದರು. ಬೃಹಸ್ಪತಿಯು ತಮ್ಮ ಉಚಥ್ಯನ ಪತ್ನಿ ಮಮತೆ ಎಂಬುವಳಲ್ಲಿ ಗರ್ಭವಿಡಲು ಹೋದಾಗ ಉದರದಲ್ಲಿದ್ದ ಶಿಶುವು ನಿವಾರಿಸಿತು. ಬೃಹಸ್ಪತಿಯು ಕುರುಡಾಗೆಂದು ಶಪಿಸಿ ವೀರ್ಯವನ್ನಿಟ್ಟನು. ಉದರದಲ್ಲಿದ್ದ ಶಿಶುವು ಆವೀರ್ಯವನ್ನು ಪಾದದಿಂದ ಹೊರಗೆ ಹಾಕಿ ಜನಿಸಿತು. ಹೊರಗೆ ಬಿದ್ದ ಗುರುವಿನ ವೀರ್ಯದಿಂದ ಹುಟ್ಟಿದ ಮಗುವೇ ಭರದ್ವಾಜನು. ವಾಜ— ಸಂತತಿಯನ್ನು ಭರತ್—ಧರಿಸಿದವನು ಎಂದು ಭರದ್ವಾಜಶಬ್ದಾರ್ಥ. ಭರದ್ವಾಜನು ಭರತನ ಪುತ್ರನಾದ ಮೇಲೆ ಅವನಿಗೆ ವಿತಥ ಎಂಬ ಹೆಸರಾಯಿತು.

## ಹದಿನೇಳನೆಯ ಅಧ್ಯಾಯ ಮುಗಿದುದು

ವಿತಥನ ವಂಶದಲ್ಲಿ ಬಂದ ಸಂಕೃತಿಯೆಂಬುವನಿಗೆ ರಂತಿದೇವನು ಮಗನು. ರಂತಿದೇವನು ಸರ್ವವನ್ನೂ ದಾನ ಮಾಡಿ ಕುಟುಂಬದವರೊಡನೆ

48 ದಿನಗಳವರೆಗೆ ಉಪವಾಸವಿದ್ದನು. ಮರುದಿನ ದೈವವಶದಿಂದ ಗೋಧಿ ಪಾಯಸ ಮತ್ತು ನೀರು ದೊರೆಯಿತು. ಅದನ್ನು ಭುಜಿಸಬೇಕೆಂದಾಗ ಶೂದ್ರನೊಬ್ಬನು ಬಂದನು. ಅವನಿಗೆ ತಿನ್ನುವುದರಲ್ಲಿ ಸ್ವಲ್ಪ ಕೊಟ್ಟು, ಉಳಿದುದನ್ನು ಉಣ್ಣಬೇಕೆಂದಾಗ ನಾಯಿಗಳೊಡನೆ ಒಬ್ಬ ಶೂದ್ರನು ಅತಿಥಿಯಾಗಿ ಬಂದನು. ಅವನ ಅಪೇಕ್ಷೆಯಂತೆ ತನ್ನಲ್ಲಿದ್ದ ಆಹಾರಪದಾರ್ಥವನ್ನು ಅರ್ಪಿಸಿ ಅವರ ಅಂತರ್ಗತ ಹರಿಗೆ ನಮಿಸಿದನು. ಉಳಿದುದು ಒಬ್ಬನು ಕುಡಿಯುವಷ್ಟು ನೀರು. ರಂತಿದೇವನು ಆ ನೀರನ್ನು ಕುಡಿಯಲು ಸಿದ್ಧನಾದಾಗ ಗೋಮಾಂಸವನ್ನು ತಿನ್ನುವ ಚಂಡಾಲನು ಬಂದು ನೀರನ್ನು ಬೇಡಿದನು. ಆಗ

**ರಂತಿದೇವ :–** ಅಗಣಿತ ಸಮೃದ್ಧಿ ಸಂಪನ್ನರಾದ ಯೋಗೇಶ್ವರರ ಅಣಿಮಾದಿ ಸಿದ್ಧಿಯನ್ನಾಗಲೀ ಮಹರಾದಿ ಲೋಕವನ್ನಾಗಲೀ, ನಾನು ಅಪೇಕ್ಷಿಸುವುದಿಲ್ಲ. ಹಸಿವು ಬಾಯಾರಿಕೆ ನನಗುಂಟಾದರೂ ನಾನು ಕೊಡುವ ನೀರಿನಿಂದ ಪ್ರಾಣಿಗಳಿಗೆ ದುಃಖ, ಬಾಯಾರಿಕೆ ನಿವಾರಣೆಯಾಗಲಿ. ನೀರನ್ನು ದಾನ ಮಾಡಿದರೆ ನನಗೆ ಹಸಿವು ಮೊದಲಾದುವು ಪರಿಹಾರವಾಗುವುವು. ಇಲ್ಲದಿದ್ದರೆ ಆ ದುಃಖವು ನನಗೆ ಹೋಗುವುದಿಲ್ಲ.

(ಹೀಗೆ ಹೇಳಿ ಉಳಿದಿದ್ದ ನೀರನ್ನು ಅತಿಥಿಗೇ ಕೊಟ್ಟುಬಿಟ್ಟನು. ಆಗ ಹರಿಹರ ಬ್ರಹ್ಮರು ರಂತಿದೇವನ ಧೈರ್ಯವನ್ನು ಪರೀಕ್ಷಿಸಲು ಅತಿಥಿಗಳ ರೂಪದಿಂದ ಬಂದು, ಅವನ ಮನಸ್ಸು ಹರಿಯಲ್ಲಿಯೇ ನಿಲ್ಲುವಂತೆ ಅನುಗ್ರಹಿಸಿ ಹೊರಟು ಹೋದರು. ಇಂತಹ ರಂತಿದೇವನನ್ನು ಅನುಸರಿಸಿದವರೆಲ್ಲರೂ ಹರಿಭಕ್ತರಾದರು.)

ಮನ್ಯುವಿನ ಮಗನು ಗರ್ಗನು. ಅವನ ಸಹೋದರ ಮಹಾವೀರ್ಯ. ಇವರವಂಶದವರು ಬ್ರಾಹ್ಮಣರಾದರು. ಮನ್ಯುವಿನ ಮತ್ತೊಬ್ಬ ಪುತ್ರ ಬೃಹಕ್ಷತ್ರನಿಗೆ ಹೋತ್ರನು ಮಗನು. ಅವನ ಮಗನೇ ಹಸ್ತಿ. ಅವನಿಂದಲೇ ಹಸ್ತಿನಾವತಿಯು ನಿರ್ಮಾಣವಾಯಿತು. ಹಸ್ತಿಯ ಮಗ ಅಜಮೀಢನ ವಂಶದಲ್ಲಿ ಹುಟ್ಟಿದ ನೀಪನಿಗೆ ನೂರು ಮಂದಿ ಮಕ್ಕಳು. ಅವರಲ್ಲಿ ಜ್ಯೇಷ್ಠನು ಅಣುಹನು. ಶುಕನ ಮಗಳು ಸಂಕೃತಿಯು ಅಣುಹನ ಪತ್ನಿ. ಈ ದಂಪತಿಗಳಲ್ಲಿ ಬ್ರಹ್ಮದತ್ತನು ಹುಟ್ಟಿದನು. ಅವನು ರುದ್ರಾಂಶಜೈಗೀಷವ್ಯರ ಉಪದೇಶದಿಂದ ಯೋಗ ಶಾಸ್ತ್ರವನ್ನು ನಿರ್ಮಿಸಿದನು. ಅವನ ಮಗ ವಿಷ್ವಕ್ಸೇನ.

ಹಸ್ತಿಯ ಇನ್ನೊಬ್ಬ ಮಗನು ದ್ವಿಮೀಢ. ಅವನ ವಂಶದಲ್ಲಿ ಬಂದ ಕೃತಿಯೆಂಬುವನು ಹಿರಣ್ಯನಾಭಯೋಗಿಯಿಂದ ಯೋಗ ಶಾಸ್ತ್ರವನ್ನು ತಿಳಿದು, ಪ್ರಾಚ್ಯ ಸಾಮ್ನ ಮೊದಲಾದ ಹನ್ನೆರಡು ಸಂಹಿತೆಗಳನ್ನು ಜನರಿಗೆ ಉಪದೇಶಿಸಿದನು. ಹಸ್ತಿಯ ಮೂರನೆಯ ಮಗ ಪುರುಮೀಢನಿಗೆ ಸಂತಾನವಿಲ್ಲ. ಹಸ್ತಿಯ ಮೊದಲನೆಯ ಮಗ

ಅಜಮೀಢನ ಪತ್ನಿ ನಲಿನಿಯೆಂಬ ಭಾರ್ಯೆಯಲ್ಲಿ ನೀಲನು ಹುಟ್ಟಿದನು. ಅವನ ವಂಶ ದಲ್ಲಿ ಬಂದ ಹರ್ಮ್ಯಾಶ್ವನೆಂಬುವನಿಗೆ ಮುದ್ಗಲ, ಯವೀನರ, ಬೃಹದಿಷು, ಕಾಂಪಿಲ್ಯ ಮತ್ತು ಸಂಜಯ ಎಂಬ ಐದು ಮಂದಿ ಮಕ್ಕಳಾದರು. ಹರ್ಮ್ಯಾಶ್ವನು ತನ್ನ ಐವರು ಮಕ್ಕಳಿಗೆ ದೇಶವನ್ನು ಹಂಚಿ 'ಐದು ದೇಶಗಳನ್ನು ರಕ್ಷಿಸುವುದಕ್ಕೆ ಈ ಪುತ್ರರು ಸಾಕು' ಎಂದು ಹೇಳಿದ್ದರಿಂದ ಮುದ್ಗಲಮೊದಲಾದ್ಯವರಿಗೆ ಪಾಂಚಾಲರೆಂದೇ ಹೆಸರಾಯಿತು. ಮುದ್ಗಲನಿಗೆ ದಿವೋದಾಸನೆಂದೂ, ಅಹಲ್ಯೆಯೆಂದೂ ಇಬ್ಬರು ಮಕ್ಕಳಾದರು. ಅಹಲ್ಯೆಯನ್ನು ಗೌತಮರು ಮದಿವೆಯಾಗಿ ಶತಾನಂದನೆಂಬ ಮಗ ನನ್ನು ಪಡೆದರು. ಶತಾನಂದನಿಗೆ ಶತಧೃತಿಯು ಮಗನು. ಅವನಿಗೆ ಶರದ್ವಾವ ನೆಂಬುವನು ಮಗನು. ಉರ್ವಶಿಯನ್ನು ಕಂಡ ಶರದ್ವಾನನಿಗೆ ವೀರ್ಯವು ಹೊರ ಬಂದು ನೊದೆಹುಲ್ಲಿನ ಮೇಲೆ ಬಿದ್ದಿತು. ಆದರಿಂದ ಒಂದು ಗಂಡು, ಒಂದು ಹೆಣ್ಣು ಹುಟ್ಟಿದುವು. ಶಂತನು ಚಕ್ರವರ್ತಿಯು ಬೇಟೆಗಾಗಿ ಕಾಡಿಗೆ ಬಂದಾಗ ಈ ಅವಳಿ ಮಕ್ಕಳನ್ನು ನೋಡಿ ಕೃಪೆಯಿಂದ ಅರಮನೆಗೆ ತಂದು ಪೋಷಿಸಿದುದರಿಂದ ಗಂಡು ಮಗುವಿಗೆ ಕೃಪನೆಂದೂ, ಹೆಣ್ಣಿಗೆ ಕೃಪೆಯೆಂದೂ ಹೆಸರಾಯಿತು. ಕೃಪೆಯನ್ನು ದ್ರೋಣರು ಮದಿವೆಯಾದರು.

### ಹದಿನೆಂಟನೆಯ ಅಧ್ಯಾಯ ಮುಗಿದುದು

ಪಾಂಚಾಲನಾದ ಮುದ್ಗಲನ ವಂಶದಲ್ಲಿ ಹುಟ್ಟಿದ ಸೋಮಕನಿಗೆ ನೂರು ಮಂದಿ ಮಕ್ಕಳು. ಅವರಲ್ಲಿ ಜಂತುವೆಂಬುವನು ಜ್ಯೇಷ್ಠನು. ಪೃಷತನು ಕನಿಷ್ಠನು. ಪೃಷತನ ಮಗನು ದ್ರುಪದ. ಅವನಿಗೆ ದ್ರೌಪದಿ ಮತ್ತು ಧೃಷ್ಟದ್ಯುಮ್ನಾದಿ ಐವರು ಪುತ್ರರಾದರು. ಧೃಷ್ಟದ್ಯುಮ್ನನಿಗೆ ಧೃಷ್ಟಕೇತುವು ಮಗನು. ಹರ್ಮ್ಯಾಶ್ವನ ವಂಶದವರಾದ ಇವರೆಲ್ಲ ಪಾಂಚಾಲರೆನಿಸಿದರು.

ಅಜಮೀಢನಿಗೆ ಋಕ್ಷ. ಅವನಿಗೆ ಸಂವರಣ ಅವನಿಗೆ ಸೂರ್ಯನ ಮಗಳು ತಪತಿಯು ಪತ್ನಿಯು. ಅವಳಲ್ಲಿ ಕುರುರಾಜನು ಹುಟ್ಟಿದನು. ಅವನ ವಂಶದಲ್ಲಿ ಹುಟ್ಟಿದ ಕೃತಿಯೆಂಬುವನಿಗೆ ಮಗನು ಉಪರಿಚರವಸು. ಅವನಿಗೆ ಇಬ್ಬರು ಹೆಂಡತಿಯರು ಒಬ್ಬಳಲ್ಲಿ ಬೃಹದ್ರಥನೇ ಮೊದಲಾದವರು, ಇನ್ನೊಬ್ಬ ಹೆಂಡತಿಯಲ್ಲಿ ಕುಶಾಂಬು ಮೊದಲಾದ ಚೇದಿ ದೇಶಾಧಿಪತಿಗಳೂ ಮೀನಿನಲ್ಲಿ ಸತ್ಯವತಿ ಮತ್ತು ವಿರಾಟರಾಜನೂ ಹುಟ್ಟಿದರು. ಬೃಹದ್ರಥನ ಒಬ್ಬ ಹೆಂಡತಿಯಲ್ಲಿ ಒಂದು ಕಿವಿ, ಒಂದು ಕಣ್ಣು ಹೀಗೆ ಶರೀರದ ಎರಡು ಹೋಳಾಗಿ ಒಂದು ಮಗು ಹುಟ್ಟಿತು. ಹೊರಗೆ ಬಿಸಾಡಿದ್ದ ಇದನ್ನು ಜರಾ ಎಂಬ ರಾಕ್ಷಸಿಯು 'ಬದುಕು' ಎಂದು ಹೇಳುತ್ತ ನಾಭಿಯಲ್ಲಿ ಜೋಡಿ ಸಲಾಗಿ ಜರಾಸಂಧನೆಂಬ ಮಗನಾದನು. ಅವನ ಮಗನು ಸಹದೇವನು. ಕುರು ರಾಜನ ವಂಶದಲ್ಲಿ ಹುಟ್ಟಿಬಂದ ಪ್ರತೀಪರಾಜನಿಗೆ ದೇವಾಪಿ, ಶಂತನು, ಬಾಹ್ಲೀಕ

ರೆಂಬ ಮೂವರು ಮಕ್ಕಳು, ತೊನ್ನುಳ್ಳವನಾದ್ದರಿಂದ ದೇವಾಪಿಯು ರಾಜನಾಗದೆ ಕಾಡಿಗೆ ಹೋಗಿ ತಪಸ್ಸಿನಲ್ಲಿ ಕಾಲವನ್ನು ಕಳೆದನು. ಪೂರ್ವಜನ್ಮದಲ್ಲಿ ಮಹಾಭಿಷಕ್ಕೆಂದು ಸೂರ್ಯವಂಶರಾಜನಾಗಿ ಪ್ರಸಿದ್ಧನೂ, ವರುಣಾಂಶನೂ ಆದ ಶಂತನು ರಾಜನಾದನು. ಅವನು ತನ್ನ ಕೈಗಳಿಂದ ಯಾರನ್ನು ಮುಟ್ಟುವನೋ ಅವನು ಮುದುಕನಾಗಿದ್ದರೂ ತಾರುಣ್ಯವನ್ನು ಹೊಂದುವನು. ಹೀಗೆ ಸುಖವನ್ನು ದೇಹಕ್ಕೆ ಹೆಚ್ಚಿಸುವುದರಿಂದ **ಶಂತನು** ಎಂದು ಪ್ರಸಿದ್ಧನಾದನು.

ಶಂತನು ರಾಜ್ಯವಾಳುತ್ತಿದ್ದಾಗ ಹನ್ನೆರಡು ವರ್ಷ ಮಳೆಯಿಲ್ಲದೆ ಕ್ಷಾಮವುಂಟಾಯಿತು. ರಾಜನು ಇದಕ್ಕೆ ಕಾರಣವೇನೆಂದು ಜ್ಞಾನಿಗಳನ್ನು ಕೇಳಿದನು. ಅವರು "ನೀನು ಅಣ್ಣನಿಗಿಂತ ಮುಂಚೆ ಮದಿವೆಯಾದಿ. ಆದ್ದರಿಂದ ಮಳೆಯಿಲ್ಲ ನಿಮ್ಮಣ್ಣನಿಗೆ ರಾಜ್ಯವನ್ನು ಕೊಟ್ಟರೆ ಮಳೆಬೆಳೆಯಾಗುವುದು" ಎಂದರು. ಶಂತನು ಕಾಡಿಗೆ ಹೋಗಿ ಅಣ್ಣನಿಗೆ ಪ್ರಜಾಪರಿಪಾಲನೆ ಮಾಡುವುದು ಮುಖ್ಯಧರ್ಮವಾದುದರಿಂದ ಪಟ್ಟಣಕ್ಕೆ ಬಂದು ರಾಜ್ಯವಾಳೆಂದು ಕೇಳಿಕೊಂಡನು. ಆದರೆ ಶಂತನು ಅಣ್ಣನ ಬಳಿಗೆ ಬರುವುದಕ್ಕೆ ಮುಂಚಿತವಾಗಿ ಶಂತನುವಿನ ಮಂತ್ರಿಗಳಲ್ಲಿ ಒಬ್ಬನು ಬಂದು ಬೋಧಿಸಿ ದೇವಾಪಿಯನ್ನು ಪಾಷಂಡಿಯನ್ನಾಗಿ ಮಾಡಿ ರಾಜ್ಯವಾಳಲು ಅನರ್ಹನನ್ನಾಗಿ ಮಾಡು ಎಂದು ಬ್ರಾಹ್ಮಣನನ್ನು ಕಳುಹಿಸಿದ್ದನು. ಆ ಬ್ರಾಹ್ಮಣನು ದೇವಾಪಿಗೆ ವೇದಗಳಲ್ಲಿ ದ್ವೇಷ ಹುಟ್ಟಿಸುವ ಪಾಷಂಡ ಮತವನ್ನು ಉಪದೇಶಿಸಿ ವೇದಮಾರ್ಗದಿಂದ ಭ್ರಷ್ಟನಾಗುವಂತೆ ಮಾಡಿದ್ದನು. ಶಂತನು ಅಣ್ಣನನ್ನು ಕರೆದಾಗ ದೇವಾಪಿಯು "ವೇದವು ಪ್ರಮಾಣವಲ್ಲ. ಅದರಲ್ಲಿ ಹೇಳಿರುವಂತೆ ನಡೆಯಬಾರದು. ಪ್ರಜೆಗಳನ್ನು ಪೀಡಿಸಬೇಕು" ಇತ್ಯಾದಿ ಪ್ರಕಾರ ವೇದ ಮತವನ್ನು ನಿಂದಿಸಿದನು. ಆಗ ಎಲ್ಲ ಬ್ರಾಹ್ಮಣರೂ ದೇವಾಪಿಯು ರಾಜನಾಗಲು ಅರ್ಹನಲ್ಲವೆಂದೂ, ಶಂತನುವೇ ಅರ್ಹನೆಂದು ಹೇಳಿ ಅವನನ್ನೇ ಭೂಪತಿಯಾಗಬೇಕೆಂದು ತೀರ್ಮಾನಿಸಿದರು. ಆಗ ಇಂದ್ರನು ಮಳೆಗರೆದನು. ಸುಭಿಕ್ಷೆಯುಂಟಾಯಿತು.

ದೇವಾಪಿಯು ಮುಂದೆ ಆಸ್ತಿಕನಾಗಿ ಭಗವಧ್ಯಾನವನ್ನು ಮಾಡುತ್ತ ಕಲಾಪ ಗ್ರಾಮದಲ್ಲಿ ವಾಸಮಾಡುತ್ತಿರುವನು. ಕಲಿಯುಗದಲ್ಲಿ ಚಂದ್ರವಂಶವು ನಷ್ಟವಾಗುವುದು. ಕೃತಯುಗಾರಂಭದಲ್ಲಿ ಶ್ರೀಹರಿಯ ಅನುಗ್ರಹದಿಂದ ದೇವಾಪಿಯು ರಾಜನಾಗಿ ತಿರುಗಿ ಚಂದ್ರವಂಶವನ್ನು ಬೆಳೆಸುವನು.

ಪ್ರತೀಪನ ಪುತ್ರನಾದ ಬಾಹ್ಲೀಕ ರಾಜನಿಗೆ ಸೋಮದತ್ತನು ಮಗನು. ಅವನಿಗೆ ಭೂರಿ, ಭೂರಿಶ್ರವಸ್ಸು ಮತ್ತು ಶಲರೆಂಬ ಮೂವರು ಮಕ್ಕಳಾದರು.

ಶಂತನುವಿಗೆ ಗಂಗೆಯಲ್ಲಿ ಭೀಷ್ಮನೂ, ದಾಶಕನ್ಯೆ ಸತ್ಯವತಿಯಲ್ಲಿ ಚಿತ್ರಾಂಗದ ಮತ್ತು ವಿಚಿತ್ರವೀರ್ಯರೆಂಬ ಇಬ್ಬರು ಮಕ್ಕಳೂ ಆದರು. ಚಿತ್ರಾಂಗದನನ್ನು ಅದೇ ಹೆಸರಿನ ಗಂಧರ್ವನು ಸಂಹರಿಸಿದನು. ಸತ್ಯವತಿಯು ಕನ್ಯೆಯಾಗಿದ್ದಾಗಲೇ ಅವಳಲ್ಲಿ ಪರಾಶರರಿಂದ ಶ್ರೀಹರಿಯು ವ್ಯಾಸನಾಮಕನಾಗಿ ಅವತರಿಸಿದನು. ವ್ಯಾಸರಿಂದ ಶುಕನಾದ ನಾನು ಹುಟ್ಟಿದೆನು. ವೇದವ್ಯಾಸರು ಪೈಲ ಮೊದಲಾದ ಶಿಷ್ಯರನ್ನು ಬಿಟ್ಟು, ಈ ಭಾಗವತವನ್ನು ನನಗೆ ಉಪದೇಶಿಸಿದರು.

ಭೀಷ್ಮನು ಸ್ವಯಂವರದಲ್ಲಿ ಕಾಶಿರಾಜನ ಮಕ್ಕಳಾದ ಅಂಬಿಕೆ ಮತ್ತು ಅಂಬಾಲಿಕೆಯೆಂಬ ಇಬ್ಬರು ಹೆಣ್ಣು ಮಕ್ಕಳನ್ನು ಬಲಾತ್ಕಾರದಿಂದ ತಂದು ವಿಚಿತ್ರವೀರ್ಯನಿಗೆ ಮದಿವೆ ಮಾಡಿದನು. ವಿಚಿತ್ರವೀರ್ಯನು ಅತಿ ಸಂಭೋಗ ಪಟ್ಟುದರಿಂದ ಕ್ಷಯರೋಗವು ಬಂದು ಸತ್ತನು.

ಸತ್ಯವತಿಯು ಅಂಬಿಕೆಯನ್ನು ಪುತ್ರವತಿಯಾಗುವಂತೆ ಅನುಗ್ರಹಿಸೆಂದು ಕೇಳಿಕೊಂಡಿದ್ದರಿಂದ ವೇದವ್ಯಾಸರು ನಿಯೋಗ ಪದ್ಧತಿಯನ್ನು ಅನುಸರಿಸಿ, ಸಂಪರ್ಕವಿಲ್ಲದಂತೆ ಅಂಬಿಕೆಯಲ್ಲಿ ಧೃತರಾಷ್ಟ್ರನನ್ನೂ, ಅಂಬಾಲಿಕೆಯಲ್ಲಿ ಪಾಂಡುರಾಜನನ್ನೂ ಅಂಬಿಕೆಯ ದಾಸಿಯಲ್ಲಿ ವಿದುರನನ್ನೂ ಸೃಷ್ಟಿಸಿದರು.

ಧೃತರಾಷ್ಟ್ರನೆಂಬ ಗಂಧರ್ವನ ಅವತಾರವೇ ಧೃತರಾಷ್ಟ್ರನು. ಪರಾವಹನೆಂಬ ಮರುತ್ತೇ ಪಾಂಡುರಾಜನು. ಯಮನೇ ವಿದುರನು. ಧೃತರಾಷ್ಟ್ರನಿಗೆ ಗಾಂಧಾರಿಯಲ್ಲಿ ದುರ್ಯೋಧನಾದಿ ನೂರು ಮಂದಿ ಗಂಡು ಮಕ್ಕಳೂ, ದುಃಶಲೆಯೆಂಬ ಹೆಣ್ಣು ಮಗಳೂ ಹುಟ್ಟಿದರು. ಪಾಂಡುರಾಜನಿಗೆ ತನ್ನ ಪತ್ನಿಯರಲ್ಲಿ ಪುತ್ರರನ್ನು ತಾನೇ ಪಡೆಯುವುದಕ್ಕೆ ಅವಕಾಶವಿಲ್ಲದಂತೆ ಶಾಪವು ಬಂದಿತು. ವರವನ್ನು ಪಡೆದಿದ್ದ ಕುಂತಿಯು ತನ್ನ ಪತಿಯು ಯಾವ ದೇವತೆಯನ್ನು ಪುತ್ರನನ್ನಾಗಿ ಪಡೆಯೆಂದು ಅಪ್ಪಣೆ ಮಾಡಿದನೋ ಅಂತಹ ಯಮನಿಂದ ಯುಧಿಷ್ಠಿರನನ್ನೂ, ಮಹಾವಾಯು ದೇವರಿಂದ ಭೀಮಸೇನ ದೇವರನ್ನೂ, ಇಂದ್ರನಿಂದ ಅರ್ಜುನನ್ನೂ ಪುತ್ರರನ್ನಾಗಿ ಪಡೆದಳು. ಮಾದ್ರಿಯು ಅಶ್ವಿನಿಗಳಿಂದ ನಕುಲ ಸಹದೇವರೆಂಬ ಇಬ್ಬರು ಮಕ್ಕಳನ್ನು ಪಡೆದಳು. ಈ ಐವರಿಗೂ ದ್ರೌಪದಿಯು ಪತ್ನಿಯಾದಳು. ಅವಳಲ್ಲಿ ಯಧಿಷ್ಠಿರನಿಂದ ಪ್ರತಿವಿಂಧ್ಯ, ಭೀಮಸೇನನಿಂದ ಶ್ರುತಸೇನ, ಅರ್ಜುನನಿಂದ ಶ್ರುತಿಕೀರ್ತಿ, ನಕುಲನಿಂದ ಶತಾನೀಕ ಮತ್ತು ಸಹದೇವನಿಂದ ಶ್ರುತಕರ್ಮನೂ ಹುಟ್ಟಿದರು. ಇವರೆಲ್ಲ ವಿಶ್ವೇದೇವತೆಗಳು. ಧರ್ಮರಾಜನ ಪತ್ನಿ ಪೌರವಿಯೆಂಬುವಳಲ್ಲಿ ದೇವಕನೂ, ಭೀಮಸೇನನಿಂದ ಹಿಡಂಬಿಯಲ್ಲಿ ಘಟೋತ್ಕಚನೂ, ಮತ್ತು ಕಾಳಿಯೆಂಬ ಹೆಂಡತಿಯಲ್ಲಿ ಶರ್ವತ್ರಾತನೂ, ಸಹದೇವನ ಪತ್ನಿ ವಿಜಯೆಯೆಂಬುವಳಲ್ಲಿ ಸುಹೋತ್ರನೂ, ನಕುಲನ ಪತ್ನಿ ಕರೇಣುಮತಿ ಯೆಂಬುವಳಲ್ಲಿ

ನಿರಮಿತ್ರನೆಂಬುವನೂ ಹುಟ್ಟಿದರು. ಅರ್ಜುನನಿಗೆ ಉಲೂಪಿಯಲ್ಲಿ ಇರಾವಂತನೂ, ಚಿತ್ರಾಂಗದೆಯಲ್ಲಿ ಬಭ್ರುವಾಹನನೂ, ಸುಭದ್ರೆಯಲ್ಲಿ ಬುಧಾಂಶನಾದ ಅಭಿಮನ್ಯುವೂ ಅವನ ಪತ್ನಿಯಾದ ಉತ್ತರಾದೇವಿಯಲ್ಲಿ ಪರೀಕ್ಷಿದ್ರಾಜನಾದ ನೀನೂ ಹುಟ್ಟಿದಿರಿ.

ನೀನು ಹುಟ್ಟುವಾಗ ಅಶ್ವತ್ಥಾಮನ ಅಸ್ತ್ರದಿಂದ ಮೃತನಾದೆ. ಶ್ರೀಕೃಷ್ಣನು ನಿನ್ನನ್ನು ಬದುಕಿಸಿದನು. ನಿನಗೆ ಜನಮೇಜಯ, ಶ್ರುತಸೇನ, ಭೀಮಸೇನ ಮತ್ತು ಉಗ್ರಸೇನರೆಂಬ ನಾಲ್ವರು ಪುತ್ರರು. ಜನಮೇಜಯನು ನಿನ್ನ ಮರಣವು ತಕ್ಷಕ ನಿಂದಾಯಿತೆಂದು ಸರ್ಪಯಾಗವನ್ನು ಮಾಡುವನು. ಹಾಗೂ ಕಾವಷೇಯರೆಂಬ ಋಷಿಗಳನ್ನು ಪುರೋಹಿತರನ್ನಾಗಿಟ್ಟುಕೊಂಡು ಅಶ್ವಮೇಧ ಮತ್ತು ಇತರ ಯಜ್ಞ ಗಳಿಂದ ಪರಮಾತ್ಮನನ್ನು ಪೂಜಿಸುವನು.

ಜನಮೇಜಯನ ಮಗ ಶತಾನೀಕನು. ಅವನ ವಂಶದಲ್ಲಿ ನೇಮಿಚಕ್ರನೆಂಬುವನು ಹುಟ್ಟುವನು. ಮುಂದೆ ಗಂಗಾಪ್ರವಾಹದಿಂದ ಹಸ್ತಿನಾವತಿಯು ಮುಳುಗುವುದು. ನೇಮಿಚಕ್ರನು ಕೌಶಾಂಬಿಯಲ್ಲಿ ವಾಸಿಸುವನು. ಇವನ ವಂಶದಲ್ಲಿ ನಿಮಿಯೆಂಬುವನು ಹುಟ್ಟುವನು. ಅವನಿಗೆ ಕ್ಷೇಮಕಾಂತನೆಂಬ ಮಗನು ಹುಟ್ಟುವನು. ಬ್ರಾಹ್ಮಣ ವಂಶಕ್ಕೂ, ಕ್ಷತ್ರಿಯರ ವಂಶಕ್ಕೂ ಕಾರಣವಾಗಿಯೂ, ದೇವಋಷಿಗಳಿಂದ ಬಹುಮಾನಿಸಲ್ಪಟ್ಟುದಾಗಿಯೂ ಇರುವ ಚಂದ್ರವಂಶಕ್ಕೆ ಈ ಕಲಿಯುಗದಲ್ಲಿ ಕ್ಷೇಮ ಕಾಂತನೇ ಕೊನೆಯವನು.

ಈ ರಾಜರ ಕೀರ್ತನದಿಂದ ಸಮಸ್ತ ಪಾಪಗಳೂ ನಾಶಹೊಂದುವುವು. ಜರಾಸಂಧ, ಸಹದೇವ ಇತ್ಯಾದಿ ರಾಜರು ಹುಟ್ಟಿದ ಬೃಹದ್ರಥನ ಸಂತತಿಯವರು ಇನ್ನು ಒಂದು ಸಾವಿರ ವರುಷಗಳವರೆಗಿರುವರು.

## ಹತ್ತೊಂಭತ್ತನೆಯ ಅಧ್ಯಾಯ ಮುಗಿದುದು

ಯಯಾತಿಯ ನಾಲ್ಕನೆಯ ಮಗ ಅನು ಎಂಬ ರಾಜನ ವಂಶದಲ್ಲಿ ಹುಟ್ಟಿದ ಬಲಿರಾಜನ ಹೆಂಡತಿಯಲ್ಲಿ ದೀರ್ಘತಪಾ ಎಂಬ ಋಷಿಯಿಂದ ಅಂಗ ವಂಗ ಕಳಿಂಗ ರೆಂಬುವರು ಹುಟ್ಟಿದರು. ಅಂಗರಾಜನ ವಂಶದಲ್ಲಿ ಹುಟ್ಟಿದ ಮಿತ್ರರಥನೆಂಬುವನಿಗೆ ಸಂತಾನವಿಲ್ಲ. ಅವನಿಗೆ ರೋಮಪಾದನೆಂದೂ ಹೆಸರು. ಅವನ ಮಿತ್ರನಾದ ದಶರಥನು ತನ್ನ ಮಗಳಾದ ಶಾಂತಾದೇವಿಯನ್ನು ಅವನಿಗೆ ದತ್ತುಮಗಳನ್ನಾಗಿ ಕೊಟ್ಟನು. ರೋಮಪಾದನ ದೇಶದಲ್ಲಿ ಮಳೆಯಿಲ್ಲದೇ ಹೋದುದರಿಂದ ವೇಶ್ಯಯರ ಮೂಲಕ ಹರಿಣೀಪುತ್ರ ಋಶ್ಯಶೃಂಗನನ್ನು ಕರೆಸಿದನು. ಮಳೆಬಂತು. ಋಶ್ಯಶೃಂಗನಿಗೆ

ಶಾಂತಾದೇವಿಯನ್ನು ಕೊಟ್ಟು ಮದಿವೆ ಮಾಡಿದನು. ಋಶ್ಯಶೃಂಗಮುನಿಯ ಅನುಗ್ರಹದಿಂದ ದಶರಥನು ಪುತ್ರೇಷ್ಟಿಯನ್ನು ಮಾಡಿ ರಾಮಾದಿಗಳನ್ನು ಪುತ್ರರನ್ನಾಗಿ ಪಡೆದಂತೆ ರೋಮಪಾದನೂ ಮಕ್ಕಳನ್ನು ಪಡೆದನು. ರೋಮಪಾದನ ವಂಶದಲ್ಲಿ ಬಂದ ಅತಿರಥನಿಗೆ ಸಂತಾನವಿಲ್ಲ. ಆ ಕಾಲಕ್ಕೆ ಸರಿಯಾಗಿ ಕುಂತಿಯು ಕನ್ಯೆಯಾಗಿರುವಾಗ ಸೂರ್ಯನಿಂದ ಪುತ್ರನನ್ನು ಪಡೆದು, ಅಪವಾದಕ್ಕೆ ಹೆದರಿ ಪೆಟ್ಟಿಗೆಯಲ್ಲಿ ಆ ಶಿಶುವನ್ನಿಟ್ಟು ಗಂಗೆಯಲ್ಲಿ ಬಿಟ್ಟಳು. ಅದು ಅತಿರಥನಿಗೆ ಸಿಕ್ಕಿತು. ಅ ಶಿಶುವನ್ನು ಪುತ್ರನನ್ನಾಗಿ ಭಾವಿಸಿ ಪೋಷಿಸಿದನು. ಈತನೇ ಕರ್ಣನು. ಅವನ ಮಗನು ವೃಷಸೇನನು.

**ಯದುವಂಶ :–** ಈ ವಂಶದಲ್ಲಿ ಪರಮಾತ್ಮನು ಶ್ರೀಕೃಷ್ಣರೂಪದಿಂದ ಅವತರಿಸಿರುವ ಕಾರಣ, ಪರಮ, ಪವಿತ್ರವಾದ ಯದುವಂಶದ ಚರಿತ್ರೆಯನ್ನು ಕೇಳಿದ ಮಾತ್ರಗಿಂದ ಸಕಲ ಪಾಪಗಳೂ ಹೋಗಿ ಮಹಾಪುಣ್ಯ ಲಭಿಸುವುದು.

ಯದುರಾಜನ ವಂಶದಲ್ಲಿ ಕೃತವೀರ್ಯನ ಮಗನೇ ಕಾರ್ತವೀರ್ಯಾರ್ಜುನ. ಇವನು ಏಳುದ್ವೀಪಗಳಿಗೂ ಅಧಿಪತಿಯಾಗಿದ್ದು ದತ್ತರೂಪೀ ಪರಮಾತ್ಮನಿಂದ ಅಣಿಮಾದಿ ಅಷ್ಟೈಶ್ವರ್ಯಗಳನ್ನೂ, ಶೌರ್ಯಾದಿ ಮಹಾಗುಣಗಳನ್ನೂ ಹೊಂದಿದನು. ಅವನು 85 ಸಾವಿರ ವರ್ಷಗಳ ಪರ್ಯಂತ ಸದಾ ಭಗವಂತನನ್ನು ಸ್ಮರಿಸುತ್ತಾ ಧರ್ಮದಿಂದ ರಾಜ್ಯವಾಳುತ್ತಿದ್ದನು. ಯಜ್ಞ, ದಾನ ಮತ್ತು ತಪಸ್ಸುಗಳಲ್ಲಿ ಇವನಿಗೆ ಸಮರಾದ ಯಾವ ರಾಜರೂ ಇರಲಿಲ್ಲ. ಇವನ ಸಾವಿರಾರು ಮಂದಿ ಮಕ್ಕಳಲ್ಲಿ ಜಯಧ್ವಜ, ಶೂರಸೇನ, ಋಷಭ, ಮಧು ಮತ್ತು ಊರ್ಜಿತ ಎಂಬ ಐದುಮಂದಿ ಮಾತ್ರ ಉಳಿದರು. ಜಯಧ್ವಜನ ಮಗ ತಾಳಜಂಘನಿಗೆ ತಾಲಜಂಘರೆಂಬ ನೂರುಮಂದಿ ಮಕ್ಕಳು ಹುಟ್ಟಿದರು. ಅವರನ್ನು ಸಗರನು ಸಂಹರಿಸಿದನು. ತಾಲಜಂಘ ಪುತ್ರರಲ್ಲಿ ವೀತಿಹೋತ್ರನಿಗೆ ಮಧುವು ಮಗನು. ಅವನಿಗೆ ನೂರುಮಂದಿ ಮಕ್ಕಳು. ಹಿರಿಯ ಪುತ್ರನಿಗೆ ವೃಷ್ಣಿಯೆಂದು ಹೆಸರು. ಒಟ್ಟಿನಲ್ಲಿ ಮಧು, ವೃಷ್ಣಿ,ಯದು ಇವರಿಂದ ಈ ಕುಲವು ಹುಟ್ಟಿದುದರಿಂದ ಮಾಧವರು, ವೃಷ್ಣಿಗಳು, ಯಾದವರು ಎಂದು ಪ್ರಸಿದ್ಧರಾದರು.

ಯದುರಾಜನ ಎರಡನೆಯ ಮಗ ಕ್ರೋಷ್ಟುವಿನ ಕುಲದಲ್ಲಿ ಶಶಬಿಂದುವೆಂಬುವನು ಹುಟ್ಟಿದನು. ಅವನಿಗೆ ಮಹಾಭೋಜನೆಂದೂ ಹೆಸರು. ಅವನಿಗೆ ಹತ್ತುಸಾವಿರ ಪತ್ನಿಯರು. ಅವರಲ್ಲಿ ಒಬ್ಬೊಬ್ಬರೂ ಒಂದೊಂದು ಲಕ್ಷ ಮಂದಿ ಪುತ್ರರನ್ನು ಹೆತ್ತರು. ಆ ಮಕ್ಕಳಲ್ಲಿ ಪ್ರಧಾನನಾದ ಪೃಥುಶ್ರವನ ಮಗನು ರುಚಕನೂ ಒಬ್ಬ ಮಗನು. ಅವನ ಮಕ್ಕಳಲ್ಲಿ ಜ್ಯಾಮಘನೆಂಬುವನಿಗೆ ಶೈಬ್ಯೆಯೆಂಬುವಳು ಪತ್ನಿಯು. ಅವರಿಗೆ ಮಕ್ಕಳಿರಲಿಲ್ಲ. ಒಮ್ಮೆ ಜ್ಯಾಮಘನು ಶತ್ರುಗಳನ್ನು ಜಯಿಸಿ,

ಅವರು ಬಿಟ್ಟು ಹೋಗಿದ್ದ ಕನ್ಯೆಯನ್ನು ರಥದಲ್ಲಿ ಕೂಡಿಸಿಕೊಂಡು ಮನೆಗೆ ಕರೆ ತಂದನು. ಇದನ್ನುನೋಡಿ ಶೈಬ್ಯೆಯು ಕೋಪದಿಂದ 'ಕಪಟಿಯೇ ! ಈ ಹೆಣ್ಣು ಯಾರು?" ಎಂದುಆರ್ಭಟಿಸಿದಳು. ಭೀತನಾದ ಜಾಮಘನು 'ಇವಳು ನಿನ್ನ ಸವತಿ ಯಲ್ಲ. ನಿನ್ನ ಸೊಸೆ ಎಂದನು.

**ಶೈಬ್ಯೆ :–** ಮಕ್ಕಳೇ ಇಲ್ಲದಿರುವಾಗ ಇವಳು ಹೇಗೆ ಸೊಸೆಯಾಗುವಳು ? ಇದೇನು ವಂಚನೆ ?

**ಜಾಮಘ :–** ಈಗ ಮಗನಿಲ್ಲವಾದರೂ ಮುಂದಕ್ಕೆ ಮಗನು ಹುಟ್ಟುವನು. ಅವನಿಗೆ ಇವಳನ್ನು ಕೊಟ್ಟು ಮದಿವೆ ಮಾಡೋಣ.

ಈ ರಾಜನು ಬಹುಕಾಲದಿಂದಲೂ ವಿಶ್ವೇದೇವತೆಗಳನ್ನೂ, ಪಿತೃಗಳನ್ನೂ ಆರಾಧಿಸುತ್ತಿದ್ದನು. ಆದುದರಿಂದ ಅವರು ಇವನಿಗೆ ಪುತ್ರನಾಗಲಿ ಎಂದು ಅನುಗ್ರಹಿಸಿದರು. ಶೈಬ್ಯೆಯು ಒಬ್ಬ ಪುತ್ರನನ್ನು ಹೆತ್ತಳು. ಅವನಿಗೆ ವಿದರ್ಭ ನೆಂದು ಹೆಸರು. ಅವನಿಗೆ ಆ ಹೆಣ್ಣನ್ನು ಮದಿವೆ ಮಾಡಿದರು. ಈ ದಂಪತಿಗಳು ನಿಯತರಾದುದರಿಂದ ದೋಷವಿಲ್ಲವೆಂದು ತಿಳಿಯಬೇಕು.

## ಇಪ್ಪತ್ತನೆಯ ಅಧ್ಯಾಯ ಮುಗಿದುದು

**ಶುಕ :–** ವಿದರ್ಭನ ಮಕ್ಕಳ ವಂಶದಲ್ಲಿ ಸಾತ್ವತನೆಂಬುವನು ಹುಟ್ಟಿದನು. ಅವನ ಮಕ್ಕಳಲ್ಲಿ ದೇವಾವೃಧನೆಂಬುವನಿಗೆ ಬಭ್ರು ಎಂಬುವನು ಮಗನು. ಇವನು ಮನುಷ್ಯರಲ್ಲಿ ಶ್ರೇಷ್ಠನು. ಇವನ ತಂದೆಯಾದ ದೇವಾವೃಧನು ಶ್ರೇಷ್ಠನಾಗಿ ದೇವತೆ ಗಳಿಗೆ ಸಮಾನನು. ಈ ತಂದೆಮಕ್ಕಳಿಂದ ಅವರ ವಂಶೀಯರು ಬಹುಮಂದಿ ಪುರುಷರು ತತ್ತ್ವೋಪದೇಶವನ್ನು ಹೊಂದಿ ಮುಕ್ತರಾದರು. ಸಾತ್ವತನ ಏಳನೆಯ ಮಗ ಮಹಾಭೋಜನ ವಂಶದಲ್ಲಿ ಹುಟ್ಟಿದವರೆಲ್ಲರೂ ಭೋಜರೆಂದೇ ಪ್ರಸಿದ್ಧ ರಾದರು.

ಸಾತ್ವತನ ನಾಲ್ಕನೆಯ ಮಗ ವೃಷ್ಣಿಗೆ ಇಬ್ಬರು ಪುತ್ರರು. ಅವರ ವಂಶದಲ್ಲಿ ಹುಟ್ಟಿದ ನಿಮ್ನ ಎಂಬುವನಿಗೆ ಸತ್ರಾಜಿತ್ ಮತ್ತು ಪ್ರಸೇನರೆಂಬ ಇಬ್ಬರು ಮಕ್ಕ ಳಾದರು. ವೃಷ್ಣಿವಂಶದಲ್ಲಿ ಹುಟ್ಟಿದ್ದ ಪೃಶ್ನಿಗೆ ಶ್ವಫಲ್ಕನು ಮಗನು. ಅವನಿಗೆ ಗಾಂದಿನಿಯೆಂಬ ಪತ್ನಿಯಲ್ಲಿ ಅಕ್ರೂರನೇ ಮೊದಲಾದ ಹದಿಮೂರು ಮಂದಿ ಮಕ್ಕಳಾದರು.

ಸಾತ್ವತನ ಆರನೆಯ ಮಗ ಅಂಧಕನ ಕುಲದಲ್ಲಿ ಹುಟ್ಟಿದ ಪುನರ್ವಸು ಎಂಬುವ ನಿಗೆ ಆಹುಕನು ಮಗನು. ಆಹುಕನಿಗೆ ದೇವಕ ಮತ್ತು ಉಗ್ರಸೇನರೆಂಬ ಇಬ್ಬರು ಮಕ್ಕಳು. ದೇವಕನಿಗೆ ದೇವವಂತ, ಉಪದೇವ, ಸುದೇವ ಮತ್ತು ದೇವವರ್ಧನರೆಂಬ ನಾಲ್ಕು ಮಂದಿ ಪುತ್ರರು. ಹಾಗೂ ಶಾಂತೀ, ದೇವಾ, ಉಪದೇವಾ, ಶ್ರೀದೇವಾ, ದೇವರಕ್ಷಿತಾ, ಸಹದೇವಾ ಮತ್ತು ದೇವಕೀ ಎಂಬ ಏಳು ಮಂದಿ ಹೆಣ್ಣು ಮಕ್ಕಳು. ಈ ಏಳು ಮಂದಿ ಹೆಣ್ಣುಮಕ್ಕಳನ್ನೂ ವಸುದೇವನು ಮದಿವೆಯಾದನು. ಉಗ್ರಸೇನ ನಿಗೆ ಕಂಸ, ಸುನಾಮಾ, ನ್ಯಗ್ರೋಧ, ಕಂಹ್ವ, ಶಂಕು, ಸುಭೂ, ರಾಷ್ಟ್ರಪಾಲ, ಅಬ್ದ ಸೃಷ್ಟಿ ಮತ್ತು ತುಷ್ಟಿಮಂತ ಎಂಬ ಒಂಭತ್ತು ಮಂದಿ ಪುತ್ರರೂ ಕಂಸಾ, ಕಂಸ ಮತೀ, ಕಂಕಾ, ಸುರಭೂ ಮತ್ತು ರಾಷ್ಟ್ರಪಾಲಿಕಾ ಎಂಬ ಐದುಮಂದಿ ಹೆಣ್ಣು ಮಕ್ಕಳೂ ಹುಟ್ಟಿದರು. ಈ ಐದು ಮಂದಿಹೆಣ್ಣುಮಕ್ಕಳನ್ನೂ ವಸುದೇವನ ತಮ್ಮಂದಿರಾದ ದೇವಭಾಗ ಮೊದಲಾದ ಐವರಿಗೆ ಕೊಟ್ಟು ಮದಿವೆ ಮಾಡಿದನು.

ಅಂಧಕನ ಪುತ್ರ ಭಜಮಾನನ ವಂಶದಲ್ಲಿ ವಿದೂರಥ, ಶೂರ, ಶಿನಿ, ಸ್ವಯಂ ಭೋಜ ಮತ್ತು ಹೃದಿಕರೆಂಬುವರು ಹುಟ್ಟಿದರು. ಹೃದಿಕನಿಗೆ ದೇವಬಾಹು, ಶತಧನು ಕೃತವರ್ಮ ಮತ್ತು ದೇವಮೀಢರೆಂಬ ನಾಲ್ವರು ಮಕ್ಕಳು. ದೇವಮೀಢನ ಪುತ್ರ ಶೂರನು. ಅವನಿಗೆ ಮಾರಿಷಾ ಎಂಬ ಪತ್ನಿಯಲ್ಲಿ ವಸುದೇವ, ದೇವಭಾಗ, ದೇವ ಶ್ರವಸ್ಸು, ಆನಕ, ಸೃಂಜಯ, ಶ್ಯಾಮಕ, ಕಂಕ ಅನೀಕ, ವತ್ಸಕ ಮತ್ತು ವೃಕರೆಂಬ ಹತ್ತು ಮಂದಿ ಪುತ್ರರೂ, ಪೃಥಾ ಶ್ರುತದೇವಾ, ಶ್ರುತಶ್ರವಾ ಮತ್ತು ರಾಜಾಧಿದೈವೀ ಎಂಬ ಐದು ಮಂದಿ ಹೆಣ್ಣುಮಕ್ಕಳೂ ಹುಟ್ಟಿದರು. ವಸುದೇವನು ಹುಟ್ಟಿದಾಗ ದೇವದುಂದುಭಿಗಳು ಮೊಳಗಿದುವಾದ್ದರಿಂದ ಕೃಷ್ಣಾವತಾರಕ್ಕೆ ಸ್ಥಾನಭೂತನಾದ ವಸುದೇವನಿಗೆ ಆನಕದುಂದುಭಿಯೆಂದು ಹೆಸರಾಯಿತು. ವಸುದೇವನ ತಂದೆಯಾದ ಶೂರನು ತನಗೆ ಮಿತ್ರನಾದ ಕುಂತಿಭೋಜನಿಗೆ ಮಕ್ಕಳಿಲ್ಲವಾದುದರಿಂದ, ತನ್ನ ಮಗ ಳಾದ ಪೃಥಾದೇವಿಯನ್ನು ದತ್ತು ಕೊಟ್ಟನು. ಅವಳಿಗೆ ಕುಂತಿಯೆಂದು ಹೆಸರಾಯಿತು. ಕುಂತೀದೇವಿಯು ತಮ್ಮ ಮನೆಗೆ ಬಂದ ದುರ್ವಾಸರನ್ನು ಸೇವಿಸಿ ಸಂತೋಷಪಡಿ ಸಿದಳು. ಕರೆದರೆ ಸಮೀಪಕ್ಕೆ ದೇವತೆಗಳನ್ನು ಬರ ಮಾಡುವ ಮಂತ್ರವನ್ನು ದುರ್ವಾ ಸರು ಅವಳಿಗೆ ಉಪದೇಶಿಸಿದರು. ಒಮ್ಮೆ ಋತುಸ್ನಾತಳಾದ ಕುಂತೀದೇವಿಯು ಮಂತ್ರಶಕ್ತಿಯನ್ನು ಪರೀಕ್ಷಿಸಬೇಕೆಂದು ಸೂರ್ಯನನ್ನು ಕರೆದಳು. ಕೂಡಲೇ ಸೂರ್ಯನು ಅವಳ ಬಳಿಗೆ ಬಂದುಬಿಟ್ಟನು. ಕುಂತಿಯು ಹೆದರಿ "ದೇವ! ಮಂತ್ರದ ಶಕ್ತಿಯ ಪರೀಕ್ಷೆಗಾಗಿ ನಿನ್ನನ್ನು ಕರೆದೆನೇ ಹೊರತು ಇನ್ನಾವ ಉದ್ದೇಶದಿಂದಲೂ ಕರೆಯಲಿಲ್ಲ" ವೆಂದಳು. ಸೂರ್ಯನು "ನನ್ನ ದರ್ಶನವು ವ್ಯರ್ಥವಾಗಬಾರದು. ಕನ್ಯಾತ್ವಕ್ಕೆ ಕೆಡಕಾಗ ದಂತೆ ನಿನ್ನಲ್ಲಿ ಪುತ್ರನನ್ನು ಹುಟ್ಟಿಸುವೆನು" ಎಂದು ಸಮಾಧಾನಮಾಡಿ ಗರ್ಭ ಧರಿಸು ವಂತೆ ಮಾಡಿ ಹೊರಟು ಹೋದನು. ಕೂಡಲೇ ಸೂರ್ಯ ಸದೃಶ ಕುಮಾರನು ಹುಟ್ಟಿ

ದನು. ಕುಂತಿಯು ಲೋಕಾಪವಾದಕ್ಕೆ ಹೆದರಿ ಆ ಮಗುವನ್ನು ಪೆಟ್ಟಿಗೆಯಲ್ಲಿಟ್ಟು ನದಿಯ ಪ್ರವಾಹದಲ್ಲಿ ಬಿಟ್ಟು ಬಿಟ್ಟಳು. ಪರೀಕ್ಷಿದ್ರಾಜನೇ ! ಆ ಕುಂತಿಯನ್ನು ನಿನ್ನ ಪ್ರಪಿತಾಮಹನಾದ ಪಾಂಡುರಾಜನು ಮದಿವೆಯಾದನು

ಕರೂಶದೇಶಾಧಿಪತಿಯಾದ ವೃದ್ಧಶರ್ಮನು ವಸುದೇವನ ತಂಗಿ ಶ್ರುತದೇವಿಯನ್ನು ಮದಿವೆಯಾಗಿ ದಂತವಕ್ರನೆಂಬ ಮಗನನ್ನು ಪಡೆದನು. ವಸುದೇವನ ಮತ್ತೊಬ್ಬ ತಂಗಿ ಶ್ರುತಕೀರ್ತಿಯನ್ನು ಕೇಕಯದೇಶಾಧಿಪತಿಯಾದ ಧೃಷ್ಟಕೇತುವು ಮದಿವೆಯಾಗಿ ಅವಳಲ್ಲಿ ಸಂತರ್ದನಾದಿ ಐದು ಮಂದಿ ಪುತ್ರರನ್ನು ಪಡೆದನು. ಅವರು ಕೈಕಯರೆಂದು ಪ್ರಸಿದ್ಧರಾದರು. ಇನ್ನೊಬ್ಬಳು ವಸುದೇವನು ತಂಗಿ ರಾಜಾಧಿದೇವಿ ಯನ್ನು ಜಯತ್ಸೇನನು ಮದಿವೆಯಾಗಿ ಅವಳಲ್ಲಿ ವಿಂದಾನುವಿಂದರೆಂಬುವರು ಹುಟ್ಟಿದರು, ಶ್ರುತಶ್ರವಾ ಎಂಬ ವಸುದೇವನ ತಂಗಿಯನ್ನು ದಮಘೋಷನು ಮದಿವೆಯಾಗಿ ಅಳಲ್ಲಿ ಶಿಶುಪಾಲನೆಂಬುವನನ್ನು ಪಡೆದನು.

ವಸುದೇವನಿಗೆ ಪೌರವೀ, ರೋಹಿಣೀ, ಭದ್ರಾ, ಮದಿರಾ, ರೋಚನಾ, ಇಲಾ ಮತ್ತು ದೇವಕೀ ಮೊದಲಾದ ಅನೇಕ ಪತ್ನಿಯರಿದ್ದರು ಕಶ್ಯಪರ ಅವತಾರನಾದ ವಸುದೇವನಿಗೆ ಸುರಭಿಯ ಅವತಾರಳಾದ ರೋಹಿಣಿಯಲ್ಲಿ ಬಲರಾಮ, ಗದ, ಸಾರಣ, ದುರ್ಮದ ವಿಪುಲ ಮತ್ತು ಧ್ರುವರೆಂಬುವರು ಪುತ್ರರಾದರು. ಪೌರವಿಯಲ್ಲಿ ಸುಭದ್ರನು, ಭದ್ರಬಾಹು, ದುರ್ಮದ, ಭದ್ರ, ಭೂತ ಮೊದಲಾದ ಹನ್ನೆರಡು ಮಂದಿ ಮಕ್ಕಳು ಹುಟ್ಟಿದರು. ಮದಿರೆಯಲ್ಲಿ ನಂದ, ಉಪನಂದ ಕೃತಕ, ಶೂರಾದಿ ಮಕ್ಕಳು ಹುಟ್ಟಿದರು. ಭದ್ರಾದೇವಿಯಲ್ಲಿ ಕೇಶಿ ರೋಚನೆಯಲ್ಲಿ ಹಸ್ತ, ಹೇಮಾಂಗದಾದಿಗಳೂ, ಇಲಾದೇವಿಯಲ್ಲಿ ಪುರುವಲ್ಕಾದಿಗಳು, ಧೃತದೇವೆಯಲ್ಲಿ ತ್ರಿಪೃಷ್ಠ, ಶಾಂತಿದೇವಿಯಲ್ಲಿ ಪ್ರಶ್ರಮ ಮೊದಲಾದವರು, ಶ್ರೀದೇವಿಯಲ್ಲಿ ವಸು, ಹಂಸಾದಿಗಳೂ, ದೇವರಕ್ಷಿತೆ ಯಲ್ಲಿ ಗದನೇ ಮೊದಲಾದವರೂ, ಸಹದೇವಿಯಲ್ಲಿ ಪುರುವತ್ಸಾದಿಗಳೂ, ಪ್ರಧಾನ ಪತ್ನಿಯಾದ ದೇವಕಿಯಲ್ಲಿ ಕೀರ್ತಿಮಂತ, ಸುಷೇಣ, ಭದ್ರಸೇನ, ಋಜು, ಸಂಮರ್ದನ ಭದ್ರ, ಸಂಕರ್ಷಣ, ಸಾಕ್ಷಾನ್ಮಹಾವಿಷ್ಣುವಾದ ಶ್ರೀಕೃಷ್ಣನು ಹೀಗೆ ಎಂಟು ಮಂದಿ ಪುತ್ರರೂ, ಪರೀಕ್ಷಿದ್ರಾಜನೇ ! ನಿನ್ನ ಪಿತಾಮಹಿಯಾದ ಸುಭದ್ರೆಯೂ ಹುಟ್ಟಿದರು.

ಲೋಕದಲ್ಲಿ ಧರ್ಮವು ಕ್ಷೀಣವಾಗಿ, ಪಾಪವು ವೃದ್ಧಿಯಾದಾಗ ಶ್ರೀಪರಮಾತ್ಮನು ಅವತರಿಸುತ್ತಾನೆ. ಜೀವನು ವಿಧಿಬದ್ಧ. ಪುಣ್ಯ ಪಾಪಗಳ ಕಾರಣದಿಂದಲೇ ಅವನು ಜನ್ಮಾದಿಗಳನ್ನುಳ್ಳವನು. ಶ್ರೀಹರಿಯಾದರೋ ವಿಧಿಬದ್ಧ ನಲ್ಲವಾದುದರಿಂದ ಅವನ ಜನ್ಮಾದಿಗಳಿಗೆ ಪುಣ್ಯ ಪಾಪಗಳು ಕಾರಣಗಳಲ್ಲ. ಲೋಕ ಗಳಿಗೆ ಅನುಗ್ರಹಿಸಬೇಕೆಂಬ ಇಚ್ಛೆಯಿಂದಲೇ ಅವತರಿಸುವನು. ಅವನು ಈಶನಾದು ದರಿಂದಲೇ ಅವನಿಗೆ ದುಃಖಲೇಶವೂ ಇಲ್ಲ. ಅವನು ಜೀವರಿಂದ ಭಿನ್ನ.

ಸರ್ವೋತ್ತಮನು. ಸರ್ವಜ್ಞ. ಹೇಗೆಂದರೆ ಅವನ ಅಧೀನವಾಗಿರುವ ಪ್ರಕೃತಿಯನ್ನು ಅವನು ಪರಿಣಾಮ ಹೊಂದಿಸುವುದರಿಂದ ಜಗತ್ತಿನ ಸೃಷ್ಟಿಸ್ಥಿತಿ ಮತ್ತು ಸಂಹಾರಗಳಾಗುತ್ತವೆ. ಅದರ ನಿವೃತ್ತಿಗೆ ಶ್ರೀಹರಿಯ ಅನುಗ್ರಹವೇ ಕಾರಣವಾಗಿದೆ. ಮತ್ತು ಸ್ವರೂಪಾನಂದದ ಆವಿರ್ಭಾವಕ್ಕೂ ಹರಿಯ ಅನುಗ್ರಹವೇ ಕಾರಣವು. ಸೃಷ್ಟ್ಯಾದಿಗಳನ್ನು ಮಾಡುವವನಿಗೆ ಅವುಗಳ ಜ್ಞಾನವು ಆವಶ್ಯಕವು. ಹರಿಯು ಆಕಾರ್ಯಗಳನ್ನು ಮಾಡುವವನಾದ್ದರಿಂದ ಅವನು ಸರ್ವಜ್ಞನು. ಅವನು ಜೀವವಿಲಕ್ಷಣನಾಗಿರುವನೆಂದು ಹೇಳಿರುವುದು ಯುಕ್ತವೇ ಆಗಿದೆ. ಅವನು ಅವತರಿಸುವುದರಿಂದ ಜಗತ್ತಿಗಾಗುವ ಪ್ರಯೋಜನವನ್ನು ತಿಳಿಸುವೆನು ಕೇಳು :–

1) ಶ್ರೀಹರಿಯು ಅವತರಿಸಿ ಭೂಮಿಗೆ ಭಾರಭೂತರಾದ ದೈತ್ಯರನ್ನೆಲ್ಲ ನಾಶಗೊಳಿಸುವನು.

2) ಶ್ರೀಹರಿಯ ಪರಮ ಪವಿತ್ರವಾದ ಯಶಸ್ಸನ್ನು ಕೇಳುವ ಜನರು ಕರ್ಮವಾಸನೆಯನ್ನು ಕಳೆದುಕೊಂಡು ಸದ್ಗತಿಯನ್ನು ಹೊಂದುತ್ತಾರೆ.

3) ಶ್ರೀಕೃಷ್ಣನು ಬಲರಾಮನ ಸಹಿತನಾಗಿ ಅಪರಿಮೇಯಗಳಾದ ದುಷ್ಟನಿಗ್ರಹಾದಿಗಳನ್ನು ಮಾಡುತ್ತಾನೆ. ಅವುಗಳನ್ನು ಬ್ರಹ್ಮಾದಿಗಳೂ ಆಲೋಚಿಸಲೂ ಅಸಾಧ್ಯಗಳಾಗಿರುವುವು.

4) ಭಕ್ತರಿಗೆ ಅನುಗ್ರಹಿಸುವುದಕ್ಕಾಗಿ ಪುಣ್ಯಪ್ರದವಾದ ಕೀರ್ತಿಯನ್ನು ವಿಸ್ತರಿಸುವನು.

5) ಭೋಜ, ವೃಷ್ಣಿ, ಅಂಧಕ, ಮಧು, ಶೂರಸೇನ, ದಾಶಾರ್ಹ, ಕುರು, ಸೃಂಜಯ ಮತ್ತು ಪಾಂಡವರು ಈ ವಂಶದವರಿಂದ ಅನವರತವೂ ಕೂಡಿ ಪೂಜ್ಯ ಚರಿತ್ರೆಯುಳ್ಳ ಶ್ರೀಕೃಷ್ಣನು ಮಂದಹಾಸ ಪೂರ್ವಕವಾದ ನೋಟ, ಗಂಭೀರ ನಡೆನುಡಿಗಳು, ಮನೋಜ್ಞಗಳಾದ ಹಾವ ಭಾವಗಳು, ಸರ್ವಾಂಗ ಸುಂದರವಾದ ತನ್ನ ದಿವ್ಯಮೂರ್ತಿ ಇವುಗಳಿಂದ ಸರ್ವರನ್ನೂ ಸಂತೋಷಪಡಿಸುತ್ತಿದ್ದನು. ಕೃಷ್ಣನ ಸೌಂದರ್ಯವನ್ನು ನೋಡಿದ ಸ್ತ್ರೀಪುರುಷರು ಎಷ್ಟು ನೋಡಿದರೂ ತೃಪ್ತಿಯಿಲ್ಲದೆ, ದರ್ಶನಕ್ಕೆ ಪ್ರತಿಬಂಧಕವಾದ ತಮ್ಮ ರೆಪ್ಪೆಯ ಮೇಲೆ ಸಿಟ್ಟಾಗುತ್ತಿದ್ದರು. ಇವೆಲ್ಲ ಶ್ರೀಕೃಷ್ಣಾವತಾರದಲ್ಲಿ ಸಜ್ಜನರಿಗಾದ ಉಪಕಾರಗಳು.

**ಸಂಗ್ರಹಕೃಷ್ಣ ಚರಿತ್ರೆ**

**ಜಾತೋ ಗತಃ ಪಿತೃಗೃಹಾದ್ವ್ರಜಮೇಧಿತೋಽತ್ರ**
**ಹತ್ವಾ ರಿಪೂನ್ ಸುತಶತಾನಿ ಕೃತೋರುದಾರಃ ।**

**ಉತ್ಪಾದ್ಯ ತೇಷು ಪುರುಷಃ ಕ್ರತುಭಿಃ ಸಮೀಜ**
**ಆತ್ಮಾನಮಾತ್ಮನಿಗಮಂ ಪ್ರಥಯನ್ ಜನೇಷು ||66/21||**

**ಪೃಥ್ವ್ಯಾಃ ಸ ವೈ ಗುರುಭರಂ ಕ್ಷಪಯನ್ ಕುರೂಣಾ**
**ಮಂತಃ ಸಮುತ್ಥಕಲಿನಾ ಯುಧಿ ಭೂಪ ಬಂಧಂ |**
**ದೃಷ್ಟ್ಯಾ ವಿಧೂಯ ವಿಜಯೇ ಜಯಮುದ್ವಿಘುಷ್ಯ**
**ಪ್ರೋಚ್ಯೋದ್ಧವಾಯ ಚ ವರಂ ಸಮಗಾತ್ ಸ್ವಧಾಮ||66'21||**

ಪರೀಕ್ಷಿದ್ರಾಜನೇ ! ಶ್ರೀನಾರಾಯಣನು ನಿಜರೂಪದಿಂದ ವಸುದೇವನ ಮನೆಯಲ್ಲಿ ಅವತರಿಸಿ ಬಳಿಕ ಮನುಷ್ಯಾಕಾರವನ್ನು ತೋರಿಸಿ ಗೋಕುಲಕ್ಕೆ ಹೋದನು. ಅಲ್ಲಿದ್ದವರ ಮನೋರಥಗಳನ್ನು ಪೂರೈಸಿ ಬಾಲ್ಯದಲ್ಲಿಯೇ ಪೂತನಾದಿ ದುಷ್ಟರನ್ನು ಕೊಂದು ತಾನು ಮದಿವೆಯಾದ ಗೋಪಿಯರಲ್ಲಿ ಹತ್ತು ಲಕ್ಷಪುತ್ರಾದಿಗಳನ್ನು ಹುಟ್ಟಿಸಿದನು. ಬಳಿಕ ಕಂಸಾದಿಗಳನ್ನು ಕೊಂದು ರುಕ್ಮಿಣೀಮೊದಲಾದ ಬಹು ರಾಜಕನ್ಯೆಯರನ್ನು ಮದಿವೆಯಾಗಿ ಆ 16108 ಪತ್ನಿಯರಲ್ಲಿ ಒಬ್ಬೊಬ್ಬಳಲ್ಲಿ ಪ್ರದ್ಯುಮ್ನಾದಿ ಹತ್ತು ಹತ್ತು ಗಂಡುಮಕ್ಕಳನ್ನೂ, ಒಂದೊಂದು ಹೆಣ್ಣನ್ನೂ ಹುಟ್ಟಿಸಿ, ಸಜ್ಜನರಿಗೆ ವೇದೋಕ್ತಯಜ್ಞಾದಿ ಸತ್ಕರ್ಮಾನುಷ್ಠಾನಮಾರ್ಗವನ್ನು ಶಿಕ್ಷಿಸುವುದಕ್ಕಾಗಿ ತನ್ನನ್ನೇ ತಾನು ಯಜ್ಞಾದಿಗಳಿಂದ ಪೂಜಿಸಿಕೊಂಡನು.

ವಾಸುದೇವನು ಭೂಭಾರವನ್ನು ನಾಶ ಮಾಡಲು ಬಯಸಿ ಪಾಂಡವರಿಗೂ, ಕೌರವರಿಗೂ, ಉಂಟಾದ ಕಲಹವನ್ನು ನಿಮಿತ್ತ ಮಾಡಿ, ಯುದ್ಧದಲ್ಲಿ ರಾಜರಿಂದ ಕೃತವಾದ ಚಕ್ರಪದ್ಮವ್ಯೂಹಗಳನ್ನು ತನ್ನ ದೃಷ್ಟಿಮಾತ್ರದಿಂದಲೇ ನಡುಗಿಸಿ, ಅಲ್ಲಿ ಸೇರಿದ್ದ ರಾಜರನ್ನೂ, ಅವರ ಸೇನೆಗಳನ್ನೂ ಸಂಹರಿಸಿ, ಅರ್ಜುನನೇ ಜಯಿಸಿದನು ಎಂದು ಎಲ್ಲೆಲ್ಲೂ ಪ್ರಸಿದ್ಧಪಡಿಸಿ, ಉದ್ಧವನಿಗೆ ವರಣಯೋಗ್ಯ ಜ್ಞಾನವನ್ನು ವಿಸ್ತಾರವಾಗಿ ಉಪದೇಶಿಸಿ, ವೈಕುಂಠವನ್ನು ಸೇರಿ ಮೂಲರೂಪದಲ್ಲಿ ಏಕೀಭಾವವನ್ನು ಹೊಂದಿದನು.

**ಇಪ್ಪತ್ತೊಂದನೆಯ ಅಧ್ಯಾಯ ಮುಗಿದುದು**

**ನವಮಸ್ಕಂಧ ಸಮಾಪ್ತ**

# ದಶಮ ಸ್ಕಂಧಾರಂಭ

**ರಾಜೋವಾಚ**

**ಕಥಿತೋ ವಂಶವಿಸ್ತಾರೋ ಭವತಾ ಸೋಮಸೂರ್ಯಯೋ : |**
**ರಾಜ್ಞಾಂ ಚೋಭಯ ವಂಶ್ಯಾನಾಂ ಚರಿತಂ ಪರಮಾದ್ಭುತಂ ||೧||**

**ಪರೀಕ್ಷಿತ್ :–** ಮುನಿಗಳೇ ! ಚಂದ್ರಸೂರ್ಯವಂಶಗಳ ವಿಸ್ತಾರವನ್ನೂ, ಆ ವಂಶಗಳಲ್ಲಿ ಹುಟ್ಟಿದ ರಾಜರ ಅತ್ಯದ್ಭುತ ಚರಿತ್ರೆಯನ್ನೂ ಹೇಳಿದಿರಿ.

ಯದುವಿನ ವಂಶದಲ್ಲಿ ಅವತರಿಸಿದ ಶ್ರೀವಿಷ್ಣುವಿನ ಪರಾಕ್ರಮವನ್ನು ವಿಸ್ತಾರವಾಗಿ ತಿಳಿಸಿ. ಹರಿಕಥೆಯು ಜೀವನ್ಮುಕ್ತರಿಂದ ಕೀರ್ತಿಸಲ್ಪಡತಕ್ಕದ್ದು. ಭವರೋಗಕ್ಕೆ ಔಷಧಿ. ಕಿವಿ ಮನಸ್ಸುಗಳಿಗೆ ಸುಖಪ್ರದ, ಬ್ರಹ್ಮಾದಿಗಳಿಂದ ಸ್ತುತ್ಯ. ಇಂತಹ ಹರಿಕಥಾಮೃತಪಾನವನ್ನು ವಿವೇಕಿಯಾದವನು ಪಾನಮಾಡದಿರಲಾರನು.

ಶ್ರೀಕೃಷ್ಣನ ಅನುಗ್ರಹದಿಂದ ನಮ್ಮ ಹಿರಿಯರು ಕೌರವರ ಸೇನೆಯೆಂಬ ಸಮುದ್ರವನ್ನು ನಿರಾಯಾಸವಾಗಿ ದಾಟಿ ಬಿಟ್ಟರು. ಮಾತೃಗರ್ಭದಲ್ಲಿದ್ದ ನನ್ನನ್ನು ಕಾಪಾಡಿದವನು ಆ ಶ್ರೀಕೃಷ್ಣನೇ. ಅವನೇ ಮೋಕ್ಷಪ್ರದನು. ಅವನ ಪರಾಕ್ರಮವನ್ನು ತಿಳಿಸಿ. ನನಗೆ ಹಸಿವೆಯೇ ಇಲ್ಲ. ಹರಿಕಥಾಮೃತಪಾನವೇ ಅಂತಹ ಮಹಿಮೆಯುಳ್ಳದ್ದು.

**ಶುಕ :–** ರಾಜನೇ ! ನಿನ್ನ ಬುದ್ಧಿ ಬಹುವಾಗಿ ಕುದುರಿದೆ. ಹರಿಕಥೆಯು ಮೂರುಮಂದಿಯನ್ನು ಪಾವನ ಮಾಡುತ್ತದೆ ಪ್ರಶ್ನಿಸುವವನು, ಹೇಳುವವನು ಮತ್ತು ಕೇಳುವವನು ಇವರೇ ಮೂರು ಬಗೆಯವರು.

ಬ್ರಹ್ಮದೇವರು ಗೋರೂಪದಿಂದ ಬಂದಿದ್ದ ಭೂದೇವಿಯನ್ನೂ, ಶಿವಾದಿ ಇತರ ದೇವತೆಗಳನ್ನೂ ಕರೆದುಕೊಂಡು ಕ್ಷೀರಸಮುದ್ರದ ತೀರಕ್ಕೆ ಬಂದು ಪುರುಷಸೂಕ್ತದಿಂದ ಶ್ರೀಹರಿಯನ್ನು ಉಪಾಸಿಸಿದರು. ಶ್ರೀಹರಿಯು ಅವತರಿಸುವುದಾಗಿ ಅಶರೀರವಾಣಿ ನುಡಿದನು.

**ಬ್ರಹ್ಮ :–** ದೇವತೆಗಳಿರಾ ! ನೀವೆಲ್ಲ ಭೂಲೋಕದಲ್ಲಿ ಅವತರಿಸಿರಿ. ಶ್ರೀಹರಿಯು ವಸುದೇವನ ಭಾರ್ಯೆಯಲ್ಲಿ ಅವತರಿಸುನು. ಶೇಷನೂ ಅಣ್ಣನಾಗಿ ಅವತರಿಸುವನು. ಸಜ್ಜನರ ಸುಖಲಾಭಕ್ಕಾಗಿ ದುರ್ಗಾದೇವಿಯೂ ಅವತರಿಸುವಳು.

(ದೇವತೆಗಳು ಸ್ವಸ್ಥಾನವನ್ನು ಸೇರಿದರು. ಉಗ್ರಸೇನನ ಅಣ್ಣ ದೇವಕನ ಮಗಳಾದ ದೇವಕಿಯನ್ನು ಶೂರನ ಮಗನಾದ ವಸುದೇವನಿಗೆ ಕೊಟ್ಟು ಮದಿವಮಾಡಿದರು. ಆಗ ದೇವಕಿಯನ್ನು ರಥದಲ್ಲಿ ಕೂಡಿಸಿ ಕಂಸನು ರಥವನ್ನು ನಡೆಸುತ್ತಾ ಇದ್ದನು. ದೇವಕಿಯ ಎಂಟನೆಯ ಮಗನಿಂದ ಕಂಸನಿಗೆ ಮರಣವೆಂದು ಅಶರೀರವಾಣಿ ನುಡಿಯಿತು. ಇದನ್ನು ಕೇಳಿದ ಕಂಸನು ದೇವಕಿಯನ್ನು ಕೊಲ್ಲಲು ಹೋದನು.)

**ವಸುದೇವ :–** ಕಂಸನೇ ! ಇವಳು ಹೆಂಗುಸು. ಮೇಲಾಗಿ ತಂಗಿ ಮತ್ತು ಮದುಮಗಳು. ಇದು ಮಂಗಳಕಾಲ, ಕೊಲ್ಲುವುದಲ್ಲ. ಕೊಂದರೆ ನೀನು ಸಾಯದೆ ಸ್ಥಿರವಾಗಿರುವೆಯೇನು ? ಎಲ್ಲರೂ ಹುಟ್ಟುವಾಗಲೇ ಅವರ ಮರಣಕಾಲವು ನಿಶ್ಚಯವಾಗಿರುವುದು. ಮರಣವು ದೇಹಕ್ಕೇ ಹೊರತು ಜೀವಸ್ವರೂಪಕ್ಕಲ್ಲ. ಹೀಗಿರುವಾಗ ಸ್ವಾರ್ಥಕ್ಕಾಗಿ ಪರರಿಗೆ ದ್ರೋಹ ಮಾಡಬಾರದು. ಮಾಡಿದರೆ ಅವರಿಗೆ ನರಕವು ತಪ್ಪುವುದಿಲ್ಲ. ಆದ್ದರಿಂದ ನೀನು ನಿನ್ನ ಮಗಳಂತಿರುವ ಇವಳನ್ನು ಕೊಲ್ಲಬೇಡ.

(ಕಂಸನು ಈ ಮಾತನ್ನು ಕೇಳಲಿಲ್ಲ. ಆದರೂ ವಸುದೇವನು ಹೇಳುವುದನ್ನು ಬಿಡಲಿಲ್ಲ. ದೇವರು. ಕೊಟ್ಟ ಬುದ್ಧಿಯನ್ನೆಲ್ಲ ಉಪಯೋಗಿಸಿ, ಪ್ರಯತ್ನ ಬಿಡದೆ) ಕಂಸನೇ ! ಇವಳ ಎಂಟನೆಯ ಮಗನು ನಿನಗೆ ಮೃತ್ಯುವೇ ಹೊರತು ಈ ದೇವಕಿಯು ಮೃತ್ಯುವಲ್ಲವಷ್ಟೆ ? ಆದ್ದರಿಂದ ಇವಳಲ್ಲಿ ಹುಟ್ಟುವ ಮಕ್ಕಳನ್ನೆಲ್ಲ ನಿನಗೇ ತಂದೊಪ್ಪಿಸುವೆನು.

## ಮೊದಲನೆಯ ಅಧ್ಯಾಯ ಮುಗಿದುದು

ವಸುದೇವನು ಮೊದಲು ಹುಟ್ಟಿದ ಕೀರ್ತಿಮಂತನೆಂಬ ಮಗುವನ್ನು ಕಂಸನಿಗೆ ಒಪ್ಪಿಸಿದನು. ಕಂಸನು ವಸುದೇವನ ಸುಖದುಃಖಗಳಲ್ಲಿನ ಸಮತೆ ಮತ್ತು ಸತ್ಯಸಂಧತೆಯೆಂಬ ಸದ್ಗುಣಗಳನ್ನು ನೋಡಿ, ತೃಪ್ತನಾಗಿ ಎಂಟನೆಯ ಮಗುವನ್ನು ಮಾತ್ರ ತಂದುಕೊಟ್ಟರೆ ಸಾಕೆಂದು ಹೇಳಿದನು. ಕಂಸನು ಅವ್ಯವಸ್ಥಿತಚಿತ್ತನಾದ್ದರಿಂದ, ಮಗುವನ್ನು ಕೊಲ್ಲದೆ ಕೊಟ್ಟುದುದಕ್ಕೆ ವಸುದೇವನು ಹಿಗ್ಗಲಿಲ್ಲ. ನಾರದರು ಬಂದು

**ನಾರದ :–** ಕಂಸನೇ ! ವಸುದೇವಾದಿಗಳು ದೇವತೆಗಳು. ನೀವು ದೈತ್ಯರು. ಅವರು ನಿಮ್ಮೆಲ್ಲರ ವಧೆಗೆ ಪ್ರಯತ್ನವನ್ನು ಮಾಡಿರುವರು. ವಸುದೇವ, ನಂದಗೋಪಾದಿಗಳನ್ನು ನೀನು ನಂಬಬಹುದೆ ?

(ಹೀಗೆ ಹೇಳಿ ಹೊರಟು ಹೋದರು. ಕಿಡಿಕಿಡಿಯಾದ ಕಂಸನು ವಸುದೇವ ದೇವಕಿಯರನ್ನು ಸೆರೆಹಾಕಿ ಅವರ ಮಕ್ಕಳೆಲ್ಲರನ್ನೂ ಕೊಲ್ಲುತ್ತ ಬಂದನು. ತಾನು ಕಾಲ

ನೇಮಿ ಅಸುರನ ಅವತಾರನೆಂದು ತಿಳಿದ ಮೇಲೆ ವಿಷ್ಣುವಿನಲ್ಲಿ ವಿರೋಧ ಮಾಡಿದನು. ಉಗ್ರಸೇನನನ್ನು ಸೆರೆಯಲ್ಲಿಟ್ಟು ತಾನೇ ರಾಜ್ಯವಾಳುತ್ತ ಬಂದನು.

## ಎರಡನೆಯ ಅಧ್ಯಾಯ ಮುಗಿದುದು

ಕಂಸನು ಜರಾಸಂಧಾದಿಗಳ ಬೆಂಬಲದಿಂದ ಯಾದವರಿಗೆ ಹಿಂಸೆ ಕೊಡುತ್ತಿದ್ದನು. ಹಿಂಸೆಯನ್ನು ತಡೆಯಲಾರದೆ ಯಾದವರು ಮಧುರೆಯನ್ನು ಬಿಟ್ಟು ಬೇರೆ ದೇಶಗಳಿಗೆ ಹೋಗಿ ನೆಲೆಸಿದರು. ಅಕ್ರೂರ ಮೊದಲಾದ ಕೆಲವರು ಯಾದವರು ಮಾತ್ರ ಮಧುರೆಯಲ್ಲಿಯೇ ಇದ್ದು ಕಂಸನನ್ನು ಅನುಸರಿಸಿಕೊಂಡಿದ್ದರು. ದೇವಕಿಯ ಆರು ಮಕ್ಕಳೂ ಕಂಸನಿಂದ ಹತರಾದಮೇಲೆ ಶೇಷದೇವರು ದೇವಕಿಯ ಗರ್ಭಕ್ಕೆ ಬಂದರು. ದುರ್ಗಾದೇವಿಯು ಶ್ರೀಹರಿಯ ಆಜ್ಞಾನುಸಾರವಾಗಿ ಶೇಷದೇವರನ್ನು ಉದರದಿಂದ ಆಕರ್ಷಿಸಿ ಗೋಕುಲದಲ್ಲಿದ್ದ ರೋಹಿಣಿಯ ಉದರದಲ್ಲಿಟ್ಟು ತಾನೂ ಯಶೋದೆಯಿಂದ ಅವತರಿಸಲು ಸಿದ್ಧಳಾದಳು. ಅವಳಿಗೆ ಮುಂದೆ ಜನರು ಗುಡಿಗಳನ್ನು ಕಟ್ಟಿಸಿ ಅನೇಕ ನಾಮಗಳಿಂದ ಕರೆಯುವರು.

ಶ್ಲೋಕ

**ದುರ್ಗೇತಿ ಭದ್ರಕಾಳೀತಿ ವಿಜಯಾ ವೈಷ್ಣವೀ ತಥಾ ||**
**ಕುಮುದಾ ಚಂಡಿಕಾ ಕೃಷ್ಣಾ ಮಾಧವೀ ಕನ್ಯಕೇತಿ ಚ |**
**ಮಾಯಾ ನಾರಾಯಣೀಶಾನಾ ಶಾರದೇತ್ಯಂಬಿಕೇತಿ ಚ ||**

ಹುಟ್ಟಿದ ರೋಹಿಣೀ ಪುತ್ರನಿಗೆ **ಸಂಕರ್ಷಣನೆಂದೂ**, ರಮಯ ತೀತಿ–ರಮಿಸುವವನಾದ್ದರಿಂದ **ರಾಮನೆಂದೂ**, ಬಲದಿಂದ ಯುಕ್ತನಾದ್ದರಿಂದ **ಬಲಭದ್ರನೆಂದೂ** ಹೆಸರಾಯಿತು.

ಜಗದಾದಾನಾದಿಕರ್ತನಾದ ಶ್ರೀನಾರಾಯಣನು ಸ್ವರೂಪಾಂಶದಿಂದಲೇ ಮೊದಲು ವಸುದೇವನ ಹೃದಯದಲ್ಲಿ ಪ್ರವೇಶಿಸಿ, ರೇತಸ್ಸಿನ ಮೂಲಕ ದೇವಕೀ ಜಠರಕ್ಕೆ ಬಂದನು. ಪೂರ್ವದಿಕ್ಕು ಗಗನದಲ್ಲಿ ಚಂದ್ರನನ್ನು ಧರಿಸಿದಂತೆ ದೇವಕಿಯು ತನ್ನ ಹೃದಯಾಕಾಶದಲ್ಲಿ ಶ್ರೀಹರಿಯ ಕೃಷ್ಣಕೇಶದ ಅಂಶವನ್ನು ಧರಿಸಿದಳು ಆಗ ಅವಳು ಅತ್ಯಂತವಾಗಿ ವಿರಾಜಿಸಿದಳು. ಇದನ್ನೇ ನೋಡಿದ ಕಂಸನು "ಇವಳ ಉದರದಲ್ಲಿರುವ ಕುಮಾರನು ನನ್ನ ಸಂಹಾರಕನಾದ ಹರಿಯೇ ಸರಿ. ಈಗ ಇವಳನ್ನು ಕೊಂದರೆ ಗರ್ಭಿಣೀ ವಧೆಯಿಂದ ನನ್ನ ಆಯುಷ್ಯವು ನಷ್ಟವಾಗುವುದು. ಆದ್ದರಿಂದ ಕೊಲ್ಲುವುದಿಲ್ಲ" ಎಂದು ನಿಶ್ಚಯಿಸಿ ಹರಿಯ ಜನನ ಕಾಲವನ್ನು ಬಹಳ ಜಾಗರೂಕತೆಯಿಂದ ನಿರೀಕ್ಷಿಸುತ್ತಿದ್ದನು.

ಬ್ರಹ್ಮಾದಿದೇವತೆಗಳೆಲ್ಲರೂ ಬಂದು ದೇವಕಿಯ ಗರ್ಭಸ್ಥ ಹರಿಯನ್ನು ಸ್ತುತಿಸುವರು :–

ಶ್ಲೋಕ

**ಸತ್ಯವ್ರತಂ ಸತ್ಯಪರಂ ತ್ರಿಸತ್ಯಂ ಸತ್ಯಸ್ಯ ಯೋನಿಂ ನಿಹಿತಂ ಚ ಸತ್ಯೇ ।**
**ಸತ್ಯಸ್ಯ ಸತ್ಯಮುತ ಸತ್ಯನೇತ್ರಂ ಸತ್ಯಾತ್ಮಕಂ ತ್ವಾಂ ಶರಣಂ ಪ್ರಪನ್ನಾಃ॥**

ಸತ್ಯವ್ರತಂ – ಪೂರ್ಣಾನಂದಜ್ಞಾನಸ್ವರೂಪನು, ಸತ್ಯಪರಂ – ಪಂಚಭೂತಗಳಿಂದ ಭಿನ್ನನು, ತ್ರಿಸತ್ಯಂ – ವೇದಗಳಿಂದ ಮುಖ್ಯ ಪ್ರತಿಪಾದ್ಯನು, ಸತ್ಯಸ್ಯ ಯೋನಿಂ – ಜಗತ್ತಿಗೆ ಮೂಲಕಾರಣನು, ಸತ್ಯೇ ನಿಹಿತಂ – ಜಗದಂತರ್ನಿಯಾಮಕನು, ಸತ್ಯಸ್ಯ ಸತ್ಯಂ – ವಿಶ್ವಕ್ಕೆ ಆನಂದಜ್ಞಾನವನ್ನು ಕೊಡುತ್ತಿರುವವನು, ಸತ್ಯನೇತ್ರಂ – ಜಗತ್ಪ್ರೇರಕನು, ಸತ್ಯಾತ್ಮಕಂ = ಸಂಹಾರಕನು. ಇಂತಹ ನಿನ್ನನ್ನು ನಾವು ಶರಣು ಹೊಂದುವೆವು.

ಜಗತ್ತೆಂಬ ವೃಕ್ಷವು ನಿನ್ನನ್ನೇ ಆಶ್ರಯಿಸಿದೆ. ಆ ವೃಕ್ಷಕ್ಕೆ ಪುಣ್ಯಪಾಪಗಳು, ತ್ರಿಗುಣಗಳೇ ಅವಾಂತರಾಶ್ರಯಗಳು, ಚತುರ್ವಿಧ ಪುರುಷಾರ್ಥಗಳೇ ಆ ಹಣ್ಣುಗಳ ರಸಗಳು. ತ್ವಗಾದಿಸಪ್ತಧಾತುಗಳೇ ತೊಗಟೆಗಳು. ಶಬ್ದಾದಿಮಾತ್ರೆಗಳೇ ಬಿಳಿಲುಗಳು, ಸತ್ತೆ–ಉತ್ಪತ್ತಿ ಮೊದಲಾದ ಆರು ಊರ್ಮಿಗಳೇ ವಿಕಾರಗಳು, ದೇವಗಂಧರ್ವಾದಿಎಂಟುಜಾತಿಗಳೇ ಕೊಂಬೆಗಳು, ಕಣ್ಣು-ಕಿವಿ ಮೊದಲಾದ ಒಂಭತ್ತುರಂಧ್ರಗಳೇ ಪೊಟರೆಗಳು, ದಶೇಂದ್ರಿಯಗಳೇ ಎಲೆಗಳು, ಪ್ರವೃತ್ತ ನಿವೃತ್ತ ಕರ್ಮಗಳೇ ಎರಡು ಪ್ರಕಾರದ ಪಕ್ಷಿಗಳು. ಇಂತಹ ಪ್ರವಾಹರೂಪದಿಂದಿರತಕ್ಕ ಜಗತ್ತೆಂಬ ವೃಕ್ಷಕ್ಕೆ ಆಧಾರನಾದ ನಿನ್ನನ್ನು ಶರಣು ಹೊಂದುವೆವು.

ಭ್ರಾಂತರು ಈ ಜಗತ್ತಿಗೆ ಇತರ ದೇವತೆಗಳು ಕರ್ತರೆಂದು ತಿಳಿಯುತ್ತಾರೆ. ಆದರೆ ಜ್ಞಾನಿಗಳು ಜಗಜ್ಜನ್ಮಾದಿಕರ್ತನು ನೀನೇ ಎಂದು ತಿಳಿಯುತ್ತಾರೆ. ಸ್ವತಂತ್ರನಾದ ನೀನು ಪ್ರಕಟಿಸುವ ಅವತಾರರೂಪಗಳು ಸಜ್ಜನರಿಗೆ ಸುಖಕರಗಳೂ, ದುರ್ಜನರಿಗೆ ದುಃಖ ಮತ್ತು ತಮಸ್ಸು ಮುಂತಾದ ಅಮಂಗಳಗಳನ್ನುಂಟು ಮಾಡುತ್ತವೆ.

ನಿನ್ನ ಉಪಾಸಕರು ನಿನ್ನ ಪಾದವೆಂಬ ನಾವೆಯಿಂದ ಸಂಸಾರ ಸಮುದ್ರವನ್ನು ನಿರಾಯಾಸವಾಗಿ ದಾಟಿಬಿಡುವರು. ನಿನ್ನಲ್ಲಿ ಭಕ್ತಿಯಿಲ್ಲದ ಖಳರು ಸಂನ್ಯಾಸಿಗಳಾಗಿ, ಮಠಾಧಿಕಾರಿಗಳಾಗಿ, ದೊಡ್ಡ ಅಧಿಕಾರಿಗಳಾಗಿ, ಮಹಾ ಶ್ರೀಮಂತರಾಗಿದ್ದರೂ ಸತ್ತಮೇಲೆ ನರಕದಲ್ಲಿ ಉರುಳುವರು.

ಸಜ್ಜನರು ಬ್ರಹ್ಮಾದಿಗಳಲ್ಲಿ ನೀನಿದ್ದು ಮಾಡುವ ಉಪದೇಶದಂತೆ ನಡೆಯುತ್ತಾ ನಿನ್ನನ್ನು ಪೂಜಿಸಿ ಜ್ಞಾನವನ್ನು ಪಡೆಯುವರು. ಪ್ರೇರಕನೂ, ಪೂಜ್ಯನೂ ನೀನೇ ಎಂದು ತಿಳಿದು ನಿನ್ನ ಕಥಾಶ್ರವಣ, ಕೀರ್ತನವೆಂಬ ಚಿಂತನೆಗಳಿಂದ ನಿನ್ನ ಜ್ಞಾನವನ್ನು ಸಂಪಾದಿಸುವವನು ಸಂಸಾರಕ್ಕೆ ಸಿಗುವುದೇ ಇಲ್ಲ. ನೀನು ಅವತರಿಸುವುದರಿಂದ ಭೂಭಾರವು ಇಳಿದು ಸರ್ವರಿಗೂ ಸುಖವಾಗುವುದು. ಭೂಲೋಕವು ನಿನ್ನ ಪಾದ ರೇಖೆಗಳಿಂದ ಅಲಂಕೃತವಾಗುವುದು. ದೇವಲೋಕವು ನಿನ್ನ ಕೃಪೆಗೆ ಪಾತ್ರವಾಯಿತು. ತತ್ತ್ವಜ್ಞಾನ ಶೂನ್ಯರು ಮಾತ್ರ ನೀನು ಹುಟ್ಟುವೆ–ಸಾಯುವೆ ಎನ್ನುವರು. ನೀನೇ ಸೃಷ್ಟಿಕರ್ತನಾದ್ದರಿಂದ ನಿನಗೆ ಹುಟ್ಟುವಿಕೆಯೂ ಇಲ್ಲ. ಮರಣವೂ ಇಲ್ಲವೇ ಇಲ್ಲ. ಮತ್ಸ್ಯಾದಿ ಅವತಾರಗಳನ್ನು ಮಾಡಿ ನಮ್ಮನ್ನೂ, ಮೂರು ಲೋಕಗಳನ್ನೂ ಪಾಲಿಸಿರುವೆ. ಈಗಲೂ ಅವತರಿಸಿ ಭೂಭಾರವನ್ನು ಇಳಿಸು. ಯದೂತ್ತಮನೇ ! ನಿನಗೆ ವಂದನೆ !

ಅಮ್ಮಾದೇವಕಿಯೇ ! ನಮ್ಮೆಲ್ಲರ ಮಂಗಳಕ್ಕಾಗಿ ಪುರುಷೋತ್ತಮನು ನಿನ್ನ ಗರ್ಭದಲ್ಲಿ ಪ್ರವೇಶಿಸಿರುವನು. ಕಂಸನಿಗೆ ಮರಣವು ಸಮೀಪಿಸಿತು. ಅವನಿಂದ ನೀನು ಭಯಪಡಬೇಡ. ಈ ನಿನ್ನ ಮಗನೇ ಯಾದವರನ್ನು ರಕ್ಷಿಸುವನು. (ಹೀಗೆ ಸ್ತುತಿಸಿ ಸ್ವಸ್ಥಾನಗಳಿಗೆ ಹಿಂತಿರುಗಿದರು.)

## ಮೂರನೆಯ ಅಧ್ಯಾಯ ಮುಗಿದುದು.

ಭಗವಂತನ ಅವತಾರಕ್ಕೆ ಯೋಗ್ಯವಾದ ಕಾಲವು ಬಂದಿತು. ಶ್ರೀಹರಿಯ ಜನ್ಮನಕ್ಷತ್ರ ರೋಹಿಣಿ ಬಂದಿತು. ದಿಕ್ಕುಗಳು ಪ್ರಸನ್ನಗಳಾದುವು. ಸುಖಸ್ಪರ್ಶವಾಗಿ ಗಾಳಿಯು ಬೀಸಿತು. ದುಂದುಭಿಗಳು ಮೊಳಗಿದುವು. ಗಂಧರ್ವಾದಿಗಳ ಗಾನನರ್ತನಗಳಾದುವು. ಅರ್ಧರಾತ್ರಿಯಲ್ಲಿ ಶ್ರೀಹರಿಯು ದೇವಕಿಯಲ್ಲಿ ಪೂರ್ಣಚಂದ್ರನಂತೆ ಅವತರಿಸಿದನು.

### ಶ್ಲೋಕ

**ತಮದ್ಭುತಂ ಬಾಲಕಮಂಬುಜೇಕ್ಷಣಂ ಚತುರ್ಭುಜಂ ಶಂಖಗದಾದ್ಯುದಾಯುಧಂ ।**
**ಶ್ರೀವತ್ಸ ಲಕ್ಷ್ಮಂ ಗಲಶೋಭಿಕೌಸ್ತುಭಂ ಪೀತಾಂಬರಂ ಸಾಂದ್ರಪಯೋದಸೌಭಗಂ ॥**
**ಮಹಾರ್ಹವೈದೂರ್ಯಕಿರೀಟ ಕುಂಡಲತ್ವಿಷಾ ಪರಿಷ್ವಕ್ತ ಸಹಸ್ರ ಕುಂತಲಂ ಉದ್ದಾಮ ಕಾಂಚ್ಯಂಗದ ಕಂಕಣಾದಿಭಿರ್ವಿರೋಚಮಾನಂ ವಸುದೇವ ಐಕ್ಷತ ॥**

**ಅರ್ಥ :–** ಕಮಲದಂತೆ ವಿಶಾಲವಾದ ಕಣ್ಣುಗಳು, ಶಂಖ, ಗದೆ ಮುಂತಾದ ಉತ್ಕೃಷ್ಟಾಯುಧಗಳುಳ್ಳ ನಾಲ್ಕು ತೋಳುಗಳು. ಎದೆಯಲ್ಲಿ ಶ್ರೀವತ್ಸವೆಂಬ ಅಸಾಧಾರಣದ್ಯೋತಕವಾದ ಮಚ್ಚೆ, ಕೊರಳಲ್ಲಿ ಕಾಂತಿಯುಳ್ಳ ಕೌಸ್ತುಭಮಣಿ, ನಡುವಿಗೆ ಸುತ್ತಿದ ಪೀತಾಂಬರ ಜಲಪೂರ್ಣವಾದ ಮೋಡದಂತೆ ಶ್ಯಾಮಲವಾಗಿಯೂ, ಸುಂದರವಾಗಿಯೂ ಇರುವ ದೇಹಕಾಂತಿ, ಅಮೂಲ್ಯ ವಜ್ರವೈಡೂರ್ಯ ಮುಂತಾದ ನವರತ್ನ ಖಚಿತಗಳಾದ ಕಿರೀಟ ಕುಂಡಲಗಳ ಕಾಂತಿಯಿಂದ ಝಗ ಝಗಿಸುವ ಮುಂಗುರುಳುಗಳು, ಉತ್ತಮವಾದ ತೋಳ್ಬಳೆ ಕೈಬಳೆ ಕಾಂಚೀದಾಮ ಮೊದಲಾದ ಆಭರಣಗಳಿಂದ ಶೋಭಿತಗಳಾದ ಸರ್ವಾವಯವಗಳು ಇಂತಹ ಆಶ್ಚರ್ಯಕರವಾದ ಬಾಲಕನನ್ನು ವಸುದೇವನು ನೋಡಿದನು.

**ವಿಶೇಷ :–** ಅವತರಿಸಿದ ಕಾಲದಲ್ಲಿ ಆಯುಧವಸ್ತ್ರ ಮತ್ತು ಆಭರಣಗಳು ಇರುವುವೆಂದು ಹೇಳಿರುವುದರಿಂದ ಶ್ರೀಕೃಷ್ಣನಿಗೆ ಪ್ರಾಕೃತದೇಹವಿಲ್ಲವೆಂದೂ, ಶ್ರೀವತ್ಸಚಿಹ್ನೆ ಮತ್ತು ಕೌಸ್ತುಭಮಣಿ ಇವುಗಳನ್ನು ಅವತಾರ ಕಾಲದಲ್ಲಿಯೇ ಉಳ್ಳವನಾದ್ದರಿಂದ ಇವನು ವಿಷ್ಣುವಿನ ಅವತಾರವೆಂದೂ ಅತ್ಯಂತ ಸ್ಪಷ್ಟವಾಗಿ ತಿಳಿಯಬಹುದು.

**ವಸುದೇವ :–** (ಸ್ನಾನಮಾಡಿ, ಗೋದಾನವನ್ನು ಮುಂದೆ ಮಾಡುವುದಾಗಿ ಸಂಕಲ್ಪ ಮಾಡಿ, ಸ್ತುತಿಸುವನು :–)

ದೇವ ! ಪ್ರಕೃತಿ ವಿಲಕ್ಷಣ, ಜ್ಞಾನಾನಂದಸ್ವರೂಪನಾದ ಪರಮಾತ್ಮನೇ ನೀನೆಂದು ನಿನ್ನ ಅನುಗ್ರಹದಿಂದ ತಿಳಿಯಿತು. ಪ್ರಕೃತಿಯಿಂದ ಜಗತ್ತನ್ನು ಸೃಷ್ಟಿಸುವೆ. ಅಪ್ರವಿಷ್ಟ ಅಂದರೆ ಜಗತ್ತಿನ ಹೊರಗೂ ಇರುವೆಯಾದುದರಿಂದ ಅದರೊಳಗಿಲ್ಲದವನೆಂದೂ, ಜಗತ್ತಿನೊಳಗೆ ವ್ಯಾಪ್ತನಾಗಿದ್ದರೂ ನಿರ್ಲಿಪ್ತನಾದ್ದರಿಂದ ಪ್ರವಿಷ್ಟನೆಂದೂ ಕರೆಯಲ್ಪಡುವೆ. ಜೀವನಂತೆ ಶರೀರದಲ್ಲಿರುವ ನಿನಗೂ, ಜೀವನಿಗೂ ಭೇದವಿಲ್ಲವೆಂದು ಅಜ್ಞಾನಿಗಳು ಹೇಳುವರು. ತನ್ನ ಮೇಲೆರಗಿದ ಪ್ರಪಂಚವನ್ನು ಹರಿಯು ಸಂಹರಿಸಬಲ್ಲನೆಂದು ಶ್ರುತಿಯು ಹೇಳುವುದರಿಂದ ಶಕ್ತಿಪೂರ್ಣನಾದ ನಿನಗೂ ಅಲ್ಪರಾದ ಜೀವರಿಗೂ ಅಭೇದವೆಲ್ಲಿದೆ ? ಹಾಗೆ ಅಭೇದವನ್ನು ತಿಳಿಯುವವರು. ಅಂಧಂತಮಸ್ಸಿನಲ್ಲಿ ಉರುಳುವರು. ಅಷ್ಟೇಕೆ ? ಜಗತ್ತಿಗೂ ಬ್ರಹ್ಮನಿಗೂ ಪಾರಮಾರ್ಥಿಕ ಭೇದವಿದೆ ಎಂಬುದನ್ನೂ, ಜಗತ್ತಿನ ಸೃಷ್ಟಿ–ಸ್ಥಿತಿ–ಸಂಹಾರ ಮಾಡತಕ್ಕವನು ನೀನೇ ಎಂಬುದನ್ನೂ ಶ್ರುತಿಯು ಸ್ಪಷ್ಟಪಡಿಸುತ್ತಿದೆ. ನೀನು ನಿರ್ಗುಣನೂ ಹೌದು, ಸಗುಣನೂ ಹೌದು. ಕ್ಲೇಶಕರ ಕರ್ಮ ರಹಿತನಾದುದರಿಂದ ಅವಿಕ್ರಿಯನೂ ಹೌದು, ಕರ್ತನೂ ಹೌದು. ಸ್ವಾಮಿಯೇ ! ತಮೋಗುಣನಾದ ಕಂಸನು ನಿನ್ನ ಆರುಮಂದಿ ಅಣ್ಣಂದಿರನ್ನೂ ಕೊಂದನು. ನೀನು ಅವತರಿಸಿದುದನ್ನು ಕೇಳಿದರೆ ಅವನು ಕೂಡಲೇ ಆಯುಧವನ್ನು ಹಿಡಿದೇ ಬರುವನು.

**ದೇವಕಿ :–** ದೇವ ! ನಿನ್ನ ರೂಪವು ಅವ್ಯಕ್ತ ಅಂದರೆ ನಿನ್ನ ಅನುಗ್ರಹವಿಲ್ಲ ದಿದ್ದರೆ ಕಾಣಿಸುವುದಿಲ್ಲ. ಇದು ಆದಿಯಲ್ಲಿ ಇರತಕ್ಕದು. ಬ್ರಹ್ಮ, ಸ್ವಪ್ರಕಾಶ, ನಿರ್ಗುಣ, ನಿರ್ವಿಕಾರ, ಅಶುಭಸಂಪರ್ಕರಹಿತ, ಸರ್ವೋತ್ತಮವಾಗಿರತಕ್ಕದು. ನಾರಾಯಣನೆಂಬುದು ಇದರ ಸಂಜ್ಞೆ. ವಿಷ್ಣು ಅಂದರೆ ಬಲ ಮತ್ತು ಪ್ರಾಣಾತ್ಮಕವು. ಅಧ್ಯಾತ್ಮ ದೀಪವು ಅಂದರೆ ದೇಹದೊಳಗಿದ್ದು ಇಂದ್ರಿಯಾದಿಗಳನ್ನು ಬೆಳಗಿಸ ತಕ್ಕದು. ಕಾಲವೂ ನಿನ್ನಾಧೀನವು. ಮೋಕ್ಷಾಶ್ರಯನೂ, ಸರ್ವಪ್ರೇರಕನೂ ಆದ ನಿನ್ನನ್ನು ಶರಣು ಹೊಂದುವೆನು. ಕಂಸನ ಭಯವನ್ನು ಪರಿಹರಿಸು. ಈ ರೂಪವನ್ನು ಮರೆಮಾಚಿ ಶಿಶುರೂಪಿನಿಂದ ಕಾಣಿಸಿಕೋ !

**ಭಗವಂತ :** ನೀವು ಹಿಂದೆ ಸುತಪ ಮತ್ತು ಪೃಶ್ನೀ ಎಂಬ ದಂಪತಿಗಳು. ನನ್ನನ್ನು ಮಗನಾಗಬೇಕೆಂದು ಪ್ರಾರ್ಥಿಸಿದಿರಿ. ಇದೇ ರೂಪದಿಂದ ಆಗ ನಿಮಗೆ ಕಾಣಿಸಿಕೊಂಡು ವರವನ್ನು ಕೊಟ್ಟು ಪೃಶ್ನಿಗರ್ಭನಾಮಕ ಮಗನಾದೆ. ನೀವು ನಂತರ ಕಶ್ಯಪ ಅದಿತಿಯರಾಗಿ ತಪಸ್ಸನ್ನು ಮಾಡಿದಿರಿ. ನಾನು ವಾಮನ ಎಂಬ ಹೆಸರಿನಿಂದ ನಿಮಗೆ ಮಗನಾದೆನು. ಇದನ್ನು ತಿಳಿಸಬೇಕೆಂದೇ ಹಿಂದೆ ದರ್ಶನ ಕೊಟ್ಟ ರೂಪ ದಿಂದಲೇ ಈಗಲೂ ಪ್ರಕಟನಾದೆ. ಈಗ ನನ್ನನ್ನು ಪುತ್ರಭಾವದಿಂದ ಮತ್ತು ನಾರಾ ಯಣನೆಂಬ ಜ್ಞಾನದಿಂದ ಬಹುಬಾರಿ ಚಿಂತಿಸಿ ನನ್ನ ಲೋಕವನ್ನು ಹೊಂದುವಿರಿ.

(ಶ್ರೀಹರಿಯು ಮಗುವಿನಂತೆ ಕಾಣಿಸಿಕೊಂಡನು. ಅವನ ಪ್ರೇರಣೆಯಂತೆ ವಸುದೇವನು ಸ್ತನ್ಯಊಡಿದ ದೇವಕಿಯಿಂದ ಆ ಮಗುವನ್ನು ತೆಗೆದುಕೊಂಡು. ಹೊರಟನು. ತಾನಾಗಿ ಬಾಗಿಲುಗಳು ತೆರೆದುಕೊಂಡವು. ಕಾವಲುಗಾರರು ನಿದ್ರಿಸುತ್ತಿದ್ದರು. ಮಳೆಗಾಲವಾದುದರಿಂದ ಯಮುನಾನದಿಯು ಪೂರ್ಣ ಪ್ರವಾಹದಿಂದ ಹರಿಯುತ್ತಿದ್ದರೂ ಶಿಶುರೂಪದ ದೇವರಿಗಾಗಿ ದಾರಿಯನ್ನು ಬಿಟ್ಟುಕೊಟ್ಟಳು. ಶಿಶುವನ್ನೆತ್ತಿಕೊಂಡು ವಸುದೇವನು ಸುಖವಾಗಿ ಆ ನದಿಯನ್ನು ದಾಟಿ ಯಶೋದೆಯಿದ್ದ ಸ್ಥಳವನ್ನು ತಲುಪಿದನು. ಆ ವೇಳೆಗೆ ಯಶೋದೆಯಲ್ಲಿ ದುರ್ಗೆಯು ಅವತರಿಸಿದ್ದಳು. ಅವಳ ಅನುಗ್ರಹದಿಂದ ಯಶೋದೆಗೆ ನಿದ್ರೆಯು ಬಂದಿತ್ತು. ಹುಟ್ಟಿದ ಮಗುವು ಹೆಣ್ಣೋ ಗಂಡೋ ಗೊತ್ತಾಗಲಿಲ್ಲ. ವಸುದೇವನು ತಾನು ತಂದಿದ್ದ ಮಗುವನ್ನು ಯಶೋದೆಯ ಮಗ್ಗುಲಲ್ಲಿ ಮಲಗಿಸಿ ಅಲ್ಲಿದ್ದ ಹೆಣ್ಣು ಮಗುವನ್ನು ಎತ್ತಿಕೊಂಡು ಬಂದನು.

## ನಾಲ್ಕನೆಯ ಅಧ್ಯಾಯ ಮುಗಿದುದು

ಬಾಗಿಲುಗಳು ಮೊದಲಿನಂತೆ ಬಂದಾದುವು. ಮಗುವು ಗಟ್ಟಿಯಾಗಿ ಅತ್ತಿತು. ಈ ಧ್ವನಿಯಿಂದ ಎಚ್ಚೆತ್ತ ಕಾವಲುಗಾರರು ಓಡಿ ಹೋಗಿ ಕಂಸನಿಗೆ ಮಗುವು ಹುಟ್ಟಿ ತೆಂದು ತಿಳಿಸಿದರು. ಕಂಸನು ಬಂದು ಮಗುವನ್ನು ಕೊಲ್ಲಲು ಹೋದಾಗ ದುರ್ಗೆಯು

ನಿಜರೂಪದಿಂದ ಗಗನದಲ್ಲಿ ನಿಂದು "ಮೂಢನೇ ! ನನ್ನ ವಧೆಯಿಂದ ನಿನಗೇನು ಫಲ ? ನಿನ್ನ ಮೃತ್ಯುವು ಬೇರೆಡೆ ಬೆಳೆಯುತ್ತಿರುವನು. ದೇವಕಿಯನ್ನು ವೃಥಾ ವ್ಯಥೆ ಪಡಿಸಬೇಡ" ಎಂದು ಹೇಳಿ ಅಲ್ಲಿಂದ ಹೊರಟು ಕಾಶಿ ಮುಂತಾದ ಅನೇಕ ಸ್ಥಳಗಳಲ್ಲಿ ಒಂದೊಂದು ರೂಪದಿಂದ ನೆಲೆಸಿ ಪೂಜೆಯನ್ನು ಕೊಳ್ಳುತ್ತಿರುವಳು.

**ಕಂಸ .–** ತಂಗೀ ! ಅಶರೀರವಾಣಿಯೂ ಸುಳ್ಳಾಯಿತು ಅದನ್ನು ನಂಬಿ ನಿನ್ನ ಮಕ್ಕಳನ್ನು ಕೊಂದು ಪಾಪಿಯಾದೆ. ಕೊರಗಬೇಡಮ್ಮ ! ಹರಿಯು ಸ್ವತಂತ್ರನು. ಜೀವರ ಕರ್ಮಾನುಸಾರ ಫಲವನ್ನು ಕೊಡುವನು. ನಿನ್ನ ಮಕ್ಕಳು ಅವರ ಕರ್ಮದಿಂದಲೇ ಸತ್ತರು. ನನ್ನ ಅಪರಾಧವನ್ನು ಕ್ಷಮಿಸು. (ವಸುದೇವ ದೇವಕಿಯರನ್ನು ಸೆರೆಯಿಂದ ಬಿಡಿಸಿದನು )

**ವಸುದೇವ :–** ಪರಮಾತ್ಮನು ಜೀವರ ಸತ್ತಾ (ಇರುವಿಕೆ) ಮೊದಲಾದುವು ಗಳಿಗೆ ನಿಯಾಮಕನು. ಈ ಭೇದ ಜ್ಞಾನವು ನರಕವನ್ನು ತಪ್ಪಿಸುವುದು. ಮುಕ್ತಿಗೂ ಸಾಧನವು. ಈ ಜ್ಞಾನವುಳ್ಳವನು ಯಾರಲ್ಲಿಯೂ ಶತ್ರುತ್ವವನ್ನು ಮಾಡುವುದಿಲ್ಲ.

(ಹೀಗೆ ಹೇಳಲು ಕಂಸನು ಕಾಲಿಗೆರಗಿ ಪ್ರಸನ್ನರಾದ ವಸುದೇವ ದೇವಕಿಯರ ಅನುಮತಿಯನ್ನು ಪಡೆದು ತನ್ನ ಅರಮನೆಗೆ ಬಂದನು. (ಇದು ಕಂಸನಲ್ಲಿದ್ದ ಭೃಗು ಋಷಿಗಳ ವ್ಯಾಪಾರವೆಂದು ತಿಳಿಯಬೇಕು.)

ಮರುದಿನ ಕಂಸನು ತನ್ನ ದೈತ್ಯಪರಿವಾರಕ್ಕೆ ದುರ್ಗಾದೇವಿಯು ಹೇಳಿದು ದನ್ನು ತಿಳಿಸಿದನು. ವಿಷ್ಣುವೇ ಎಲ್ಲಕ್ಕೂ ಮೂಲನಾದುದರಿಂದ ಋಷಿಗಳನ್ನು ಕೊಲ್ಲು ವುದೇ ವಿಷ್ಣುವಿನ ವಧೆಗೆ ಉಪಾಯವೆಂದು ದುರ್ಮಂತ್ರಿಗಳು ಹೇಳಿದರು. ಸಾಧು ಗಳನ್ನು ಕೊಲ್ಲಲು ಕಂಸನು ಎಲ್ಲ ಕಡೆಗೆ ರಾಕ್ಷಸರನ್ನು ಕಳುಹಿಸಿದನು.

## ಐದನೆಯ ಅಧ್ಯಾಯ ಮುಗಿದುದು

ಬೆಳಗ್ಗೆ ನಂದಗೋಪನು ತನಗೆ ಗಂಡುಮಗು ಹುಟ್ಟಿತೆಂದು ಸಂತೋಷಿಸಿ ಮಂಗಳಕಾರ್ಯಗಳನ್ನು ಸಂಭ್ರಮದಿಂದ ಮಾಡಿದನು. ಹರಿಯು ಗೋಕುಲಕ್ಕೆ ಬಂದಾಗಿನಿಂದ ಅದು ಭಾಗ್ಯಲಕ್ಷ್ಮಿಯ ವಿಹಾರಸ್ಥಾನವಾಯಿತು. ನಂದಗೋಪನು ಮಾಮೂಲಿನಂತೆ ಕಂಸನಿಗೆ ಕಪ್ಪವನ್ನು ಕೊಟ್ಟು ಹಿಂತಿರುಗುವಾಗ, ಇವನ ದರ್ಶನ ಕ್ಕಾಗಿಯೇ ಕಾದಿದ್ದ ವಸುದೇವನ ಭೇಟಿ ಮಾಡಿದನು.

**ವಸುದೇವ :** ನಂದ ! ನಿನಗೆ ಮುಪ್ಪಿನಲ್ಲಿ ಪುತ್ರನು ಹುಟ್ಟಿದುದು ನಮಗೆಲ್ಲ ರಿಗೂ ಸುಖಸಂತೋಷವನ್ನುಂಟುಮಾಡಿದೆ. ಬಂಧುಗಳು ಒಂದೆಡೆ ಸೇರುವುದು

ದುರ್ಲಭ. ಅವರನ್ನು ಅಗಲುವುದೂ ಅಷ್ಟೇ ದುಃಖಕರ. ಎಲ್ಲರೂ ಕ್ಷೇಮದಿಂದಿರುವರೆ ? ಬಲರಾಮನು ಸುಖವಾಗಿರುವನೆ ? ನೀನೂ ನಾನೂ ಅನಿಮಿತ್ತ ಬಂಧುಗಳಾದುದರಿಂದ ನಿನಗೆ ಸುಖವಾದರೆ ನನಗೆ ಧರ್ಮಾರ್ಥಕಾಮಗಳೆಲ್ಲ ಕೈಗೂಡಿದಂತೆ ಆಗುವುದು. ಅದಕ್ಕಾಗಿ ನಿನ್ನ ಕ್ಷೇಮವನ್ನು ವಿಚಾರಿಸಿದೆ.

**ನಂದಗೋಪ :–** ಅಣ್ಣಾ ! ನಿನಗೆ ಬಹಳ ಸಂಕಟಗಳು ಬಂದುವು. ಹುಟ್ಟಿದ ಮಕ್ಕಳೆಲ್ಲ ಸತ್ತರು. ಕೊನೆಯ ಹೆಣ್ಣು ಮಗುವು ಗಗನಕ್ಕೆ ಹಾರಿಹೋಗಿ ಅದೂ ನಿನಗೆ ದಕ್ಕಲಿಲ್ಲ. ಎಲ್ಲ ಶ್ರೀಹರಿಯ ಸಂಕಲ್ಪ.

(ನಂದಗೋಪನು ತನ್ನ ಮಗನು ಕೃಷ್ಣನೆಂದು ತಿಳಿದಿದ್ದನು. ಮತ್ತು ಅವನು ಪರಮಾತ್ಮನೆಂಬುದೂ ಗೊತ್ತಿರಲಿಲ್ಲ. ಇದು ಗುಟ್ಟಾಗಿಯೇ ಇರಲಿ ಎಂದು ವಸುದೇವನು ತನ್ನ ಮಾತನ್ನು ಬೇರೆ ಕಡೆಗೆ ತಿರುಗಿಸಿದನು.)

**ವಸುದೇವ :–** ಗೋಕುಲದಲ್ಲಿ ಅನರ್ಥವಾಗುವುದೆಂಬ ಸೂಚನೆಗಳು ತೋರುತ್ತಿವೆ. ನೀನು ಅಲ್ಲಿಗೆ ಬೇಗನೆ ಹೊರಡು.

**ಆರನೆಯ ಅಧ್ಯಾಯ ಮುಗಿದುದು**

ನಂದಗೋಪನು ತನ್ನ ಪತ್ನಿಮೊದಲಾದವರು ಇದ್ದ ಸ್ಥಳಕ್ಕೆ ಬರುವುದಕ್ಕೆ ಮುಂಚೆ ಪೂತನಿಯೆಂಬ ರಾಕ್ಷಸಿಯು ಮಗುವನ್ನು ಕೊಲ್ಲಲು ಮಾರುವೇಷದಿಂದ ಬಂದಳು. ಮಗುವನ್ನು ಎತ್ತಿಕೊಂಡು ವಿಷದ ಸ್ತನ್ಯವನ್ನು ಕೊಟ್ಟಳು. ಶ್ರೀಕೃಷ್ಣನು ಸ್ತನ್ಯಪಾನನೆವದಿಂದ ಅವಳನ್ನು ಕೊಂದನು. ರಾಕ್ಷಸಿಯು ನಿಜರೂಪದಿಂದ ಸತ್ತು ಬಿದ್ದಳು. ಗೋಪಿಯರು ಮಗುವಿಗೆ ರಕ್ಷೆ ಮಾಡಿದರು. ನಂದಾದಿಗಳು ಬಂದು ಸತ್ತು ಬಿದ್ದಿದ್ದ ಪೂತನಿಯ ಬೆಟ್ಟದಂತಿದ್ದ ದೇಹವನ್ನು ನೋಡಿ ಆಶ್ಚರ್ಯಪಟ್ಟು ಆ ದೇಹವನ್ನು ತುಂಡುಗಳಾಗಿ ಕಡಿದು ಸುಟ್ಟರು. ಶ್ರೀಕೃಷ್ಣನ ಸ್ಪರ್ಶದಿಂದ ಸುಗಂಧವು ಹರಡಿತು.

**ಶ್ಲೋಕ**

**ಯಾತು ಧಾನ್ಯಪಿ ಸಾ ಸ್ವರ್ಗಂ ಅವಾಪ ಜನನೀಂ ಗತಿಂ ।**
**ಕೃಷ್ಣ ಭುಕ್ತಸ್ತನಕ್ಷೀರಾಃ ಕಿಮು ಗಾವೋನು ಮಾತರಃ ॥**

**ಅರ್ಥ :–** ಶ್ರೀಕೃಷ್ಣನು ತನ್ನ ಪಾದಗಳನ್ನೊತ್ತಿ ಸ್ತನ್ಯಪಾನ ಮಾಡಿದನು. ಅಂತಹ ರಾಕ್ಷಸಿಯು ಅಂದರೆ ಪೂತನಿಯು ಜನನೀಗತಿ ಅಂದರೆ ದುರ್ಜನರು

ಹೊಂದುವ ನಿತ್ಯನರಕವೆಂಬ ದುರ್ಗತಿಯನ್ನು ಹೊಂದಿದಳು. ಅವಳಲ್ಲಿ ಆವೇಶ ರೂಪ ದಿಂದಿದ್ದ ಉರ್ವಶಿಯು ಜನನೀಗತಿ ಅಂದರೆ ಜನನಿಯರಾದ ದೇವಕೀ, ಯಶೋದೆ ಯರು ಹೊಂದುವ ಸ್ವರ್ಗವನ್ನು ಪಡೆದಳು. ಅಂದ ಬಳಿಕ ಹರಿಗೆ ಸ್ತನ್ಯ ಕೊಟ್ಟ ತಾಯಿಯರೂ ಗೋವುಗಳ ರೂಪದಿಂದಿದ್ದ ದೇವತೆಗಳೂ ಸದ್ಗತಿಯನ್ನು ಹೊಂದುವ ರೆಂದು ಹೇಳತಕ್ಕುದೇನು? ಹೊಂದಿಯೇ ತೀರುತ್ತಾರೆ ಎಂದು ಅರ್ಥ.

ಈ ಕಥೆಯನ್ನು ಶ್ರವಣ ಮಾಡಿದವರು ಗೋವಿಂದನಲ್ಲಿ ಭಕ್ತಿಯನ್ನು ಹೊಂದುವರು.

## ಏಳನೆಯ ಅಧ್ಯಾಯ ಮುಗಿದುದು

ಶ್ರೀಕೃಷ್ಣನು ಅವತರಿಸಿ ನಾಲ್ಕು ತಿಂಗಳಾಗಿದ್ದುವು. ಮಗುವಿನ ಮಾತುಳಾದಿಗಳ ಮನೆಗೆ ಕರೆದುಕೊಂಡು ಹೋಗುವುದೆಂಬ ಉಪನಿಷ್ಕ್ರಮಣಮಹೋತ್ಸವವನ್ನು ನೆರವೇರಿಸಿದರು. ಯಮುನೆಯ ಬಳಿಗೆ ಒಂದು ಮಗುವಿಗೆರದು ಒಂದು ಗಾಡಿಯ ಕೆಳಗೆ ಮಲಗಿಸಿದರು. ಶಕಟನೆಂಬ ಆಸುರನು ಆ ಗಾಡಿಯೊಳಗೆ ಸೇರಿಕೊಂಡು ಮಗುವನ್ನು ಕೊಲ್ಲಬೇಕೆಂದು ಸಿದ್ಧನಾದ ಅಷ್ಟರೊಳಗೆ ಶ್ರೀಕೃಷ್ಣನು ತನ್ನ ಪಾದಗಳನ್ನು ಮೆಲಕ್ಕೆತ್ತಿ ಒದ್ದನು. ಶಕಟನು ಸತ್ತುಬಿದ್ದನು. ಅಂಗಳದಲ್ಲಿ ಯಶೋದೆಯು ಕೊಡಿಸಿಹೋಗಿದ್ದ ಮಗುವನ್ನು ಸುಂಟರು ಗಾಳಿರೂಪದಿಂದ ಬಂದ ತೃಣಾಸುರನು ಎತ್ತಿಕೊಂಡು ಗಗನಕ್ಕೆ ಹೋದನು ಶ್ರೀಕೃಷ್ಣನು ಆತೃಣಾಸುರನನ್ನೂ ಕೊಂದನು. ಇವೆಲ್ಲ ಪರಮಾತ್ಮನ ಪರಾಕ್ರಮದ ಮಹಿಮೆಯೆಂಬುದನ್ನು ತಿಳಿಯಲಾರದ ನಂದ ಗೋಪಮೊದಲಾದವರು ಮಗು ಸುರಕ್ಷಿತವಾದುದು ದೇವರ ದಯೆಯಿಂದ ಎಂದು ಸಮಾಧಾನವನ್ನು ಹೊಂದಿದರು ಯಶೋದೆಯ ತೊಡೆಯ ಮೇಲೆ ಮಲಗಿಸ್ತನ್ಯ ಪಾನಮಾಡುತ್ತಿದ್ದ ಶ್ರೀಕೃಷ್ಣನ ಪುಟ್ಟ ಬಾಯಿಯಲ್ಲಿ ಯಶೋದೆಯು ದಿವ್ಯದೃಷ್ಟಿ ಯಿಂದ ಬ್ರಹ್ಮಾಂಡವನ್ನು ನೋಡಿ ಆಶ್ಚರ್ಯವನ್ನು ಹೊಂದಿದಳು.

## ಎಂಟನೆಯ ಅಧ್ಯಾಯ ಮುಗಿದುದು

ಯಾದವರ ಪುರೋಹಿತರಾದ ಗರ್ಗಾಚಾರ್ಯರನ್ನು ವಸುದೇವನು ಗೋಕುಲಕ್ಕೆ ಕಳುಹಿಸಿದನು. ಅವರು ಬಂದು ರಹಸ್ಯದಲ್ಲಿ ಕ್ಷತ್ರಿಯೋಚಿತ ಸಂಸ್ಕಾರ ಮಾಡಿ ಆ ಇಬ್ಬರು ಬಾಲಕರಿಗೆ ನಾಮವಿಟ್ಟರು.

ರೋಹಿಣಿಯ ಮಗನು ಸಜ್ಜನರನ್ನು ಸಂತೋಷಪಡಿಸುವುದರಿಂದ **ರಾಮ**ನೆಂದೂ, ಬಲಾಢ್ಯನಾದ್ದರಿಂದ **ಬಲ**ನೆಂದೂ, ಯಾದವರಲ್ಲಿ ಒಗ್ಗಟ್ಟು ಉಂಟುಮಾಡಿ ಒಂದುಗೂಡಿಸುವುನರಿಂದ **ಸಂಕರ್ಷಣ**ನೆಂದೂ, ಹೆಸರಿಟ್ಟರು'

ಯುಗಾನುಸಾರವಾಗಿ ಶುಕ್ಲ, ರಕ್ತ, ಪೀತವರ್ಣವುಳ್ಳವನಾಗಿದ್ದು ಈಗ ಶ್ಯಾಮವರ್ಣವುಳ್ಳವನಾದುದರಿಂದ ಶ್ರೀಹರಿಗೆ '**ಕೃಷ್ಣ**' ಎಂಬ ನಾಮವಿಟ್ಟರು.

**ಗರ್ಗ :–** ನಂದಗೋಪ ! ಇವನು ವಸುದೇವನ ಮಗನು. ಆದ್ದರಿಂದ ವಾಸುದೇವನೆಂದು ಹೆಸರು. ನಾರಾಯಣನೇ ಇವನು. ಇದನ್ನು ಗುಟ್ಟಾಗಿಟ್ಟರು. (ಹೀಗೆ ಹೇಳಿ ಗರ್ಗರು ಹೊರಟುಹೋದರು.)

**ಶುಕ ;** ಇಬ್ಬರು ಬಾಲಕರೂ ಕಾಲಕಳೆದಂತೆ ಅಂಬೆಗಾಲನ್ನು ಹಾಕಿ, ತರಳಡಿ ಇಟ್ಟು, ಬಾಲಕ್ರೀಡೆಯನ್ನು ತೋರಿಸಿ, ಮುಂದೆ ಕೌಮಾರ ಚೇಷ್ಟೆಯನ್ನು ಮಾಡುತ್ತ ಬಂದರು. ಗೋಪಿಯರು ಯಶೋದೆಯ ಬಳಿಗೆ ಬಂದು ಕೃಷ್ಣನ ಹಾವಳಿಯನ್ನು ಹೇಳಿ ದೂರುವರು. ಅದನ್ನು ಕೇಳಿ ಯಶೋದೆಯು ನಕ್ಕುಬಿಡುತ್ತಿದ್ದಳು.

ಒಮ್ಮೆ ಜೊತೆಯ ಬಾಲಕರು ಯಶೋದೆಗೆ ಶ್ರೀಕೃಷ್ಣನು ಮಣ್ಣನ್ನು ತಿಂದನೆಂದು ಚಾಡಿ ಹೇಳಿದರು. ಯಶೋದೆಯು 'ಮಣ್ಣನ್ನೇಕೆ ಮೆದ್ದೆ' ಎಂದು ಕೇಳಿದಾಗ ಶ್ರೀಕೃಷ್ಣನು "ನಾಹಂ ಭಕ್ಷಿತವಾನಂಬ" ಎಂದನು. ಅವಳು ಬಾಯಿ ತೆರೆಯುವಂತೆ ಹೇಳಿದಳು. ಕೃಷ್ಣನು ಬಾಯಿ ತೆರೆದಾಗ ಯಶೋದೆಯು ಬ್ರಹ್ಮಾಂಡವನ್ನು ಕಂಡಳು. ಆಗ ಅವಳು 'ಈ ಬಾಲಕನಿಗೆ ಸ್ವಾಭಾವಿಕವಾಗಿ ಅದ್ಭುತ ಶಕ್ತಿಯಿದೆ. ಪರಬ್ರಹ್ಮನೇ ಇವನು. ಈ ರೂಪಕ್ಕೆ ನಮಸ್ಕರಿಸುವೆನು' ಎಂದಳು. ಕೂಡಲೇ ಶ್ರೀ ಕೃಷ್ಣನು ಯಶೋದೆಗೆ ತನ್ನ ಮಗನೆಂಬ ಮಮತೆಯನ್ನು ತಂದಿಟ್ಟನು. ಯಶೋದೆ ಮತ್ತು ನಂದಗೋಪರೆಂಬ ಈ ದಂಪತಿಗಳು ಸಾಮಾನ್ಯರಲ್ಲ. ನಂದಗೋಪನು **ದ್ರೋಣ**ನೆಂಬ ವಸುವಿನ ಅಂಶದ ದೇವತೆ. ಅವನ ನಿಯತಪತ್ನಿಯಾದ **ಧರಾದೇವಿ**ಯೆಂಬುವಳೇ ಯಶೋದೆ. ಬ್ರಹ್ಮದೇವರ ವರದಿಂದ ಆ ದಂಪತಿಗಳು ಧರೆಯ ಮೇಲೆ ಜನಿಸಿ ಜನಾರ್ದನನಲ್ಲಿ ದೃಢಭಕ್ತಿಯನ್ನು ಹೊಂದಿದರು. ಶ್ರೀಕೃಷ್ಣನು ತನ್ನ ಕ್ರೀಡೆಯಿಂದ ಅವರಿಗೆ ಪ್ರೀತಿಯನ್ನುಂಟು ಮಾಡಿದನು.

**ಒಂಭತ್ತನೆಯ ಅಧ್ಯಾಯ ಮುಗಿದುದು**

ಒಮ್ಮೆ ಶ್ರೀಕೃಷ್ಣನು ಮೊಸರನ್ನು ಯಶೋದೆಯು ಕಡೆಯುತ್ತಿದ್ದಾಗ ಸ್ತನ್ಯವನ್ನು ಕೊಡೆಂದು ಕಡಗೋಲನ್ನು ಹಿಡಿದು ನಿಲ್ಲಿಸಿಬಿಟ್ಟನು. ಅವನು ಯಶೋದೆಯ

ತೊಡೆಯ ಮೇಲೆ ಮಲಗಿ ಸ್ತನ್ಯಪಾನಮಾಡುತ್ತಿದ್ದನು. ಯಶೋದೆ ಹಾಲು ಉಕ್ಕಿದುದನ್ನು ನೋಡಿ ಅದರ ಪಾತ್ರೆಯನ್ನು ಕೆಳಗಿಳಿಸಬೇಕೆಂದು ತೊಡೆಯ ಮೇಲಿದ್ದ ಕೃಷ್ಣನನ್ನು ಎತ್ತಿ ನೆಲದ ಮೇಲೆ ಕುಕ್ಕಿ ಓಡಿಹೋದಳು. ಶ್ರೀಕೃಷ್ಣನು ತನ್ನ ಸ್ತನ್ಯಪಾನರೂಪ ಸೇವೆಗಿಂತ ಹಾಲಿನ ರಕ್ಷಣೆ ಲಾಭದಾಯಕವೆಂದು ತಿಳಿದ ಯಶೋದೆಗೆ ಬುದ್ಧಿಯನ್ನು ಕಲಿಸಬೇಕೆಂದು, ಮೊಸರಿನ ಗಡಿಗೆಯನ್ನು ಒಡೆದು ಬೆಣ್ಣೆಯನ್ನು ತೆಗೆದುಕೊಂಡು ಓಡಿಹೋಗಿ ಅಂಗಳದಲ್ಲಿದ್ದ ಒರಳಕಲ್ಲಿನ ಮೇಲೆ ಕುಳಿತು ಬೆಣ್ಣೆಯನ್ನು ಬೆಕ್ಕಿಗೂ ಕೊಟ್ಟು ತಾನೂ ತಿನ್ನುತ್ತಿದ್ದನು. ಯಶೋದೆಗೆ ಕೋಪ ಬಂದಿತು. ಹಗ್ಗದಿಂದ ಅವನನ್ನು ಕಟ್ಟಿ ಹಾಕಿದಳು. ಶ್ರೀಕೃಷ್ಣನು ಹಗ್ಗದಿಂದ ಕಟ್ಟಲ್ಪಟ್ಟ ಒರಳನ್ನು ಎಳೆದುಕೊಂಡು ಹೋಗಿ ಊರ ಮುಂದಿದ್ದ ಎರಡು ಮತ್ತಿಮರಗಳ ಸಂದಿನಲ್ಲಿ ನುಗ್ಗಿ ಹಗ್ಗವನ್ನು ಜಗ್ಗಿ ಆ ಎರಡು ಮರಗಳನ್ನೂ ಬುಡಸಹಿತ ಉರುಳಿಸಿದನು. ಹಾಗೂ ನಲಕೂಬರ ಮತ್ತು ಮಣಿಗ್ರೀವರ ಶಾಪವನ್ನು ಕಳೆದನು.

## ಹತ್ತನೆಯ ಅಧ್ಯಾಯ ಮುಗಿದುದು

ನಲಕೂಬರ ಮತ್ತು ಮಣಿಗ್ರೀವರೆಂಬುವರು ಕುಬೇರನ ಮಕ್ಕಳು. ಜಲಕ್ರೀಡೆಯಾಡುವಾಗ ನಾರದರು ಬಂದರೆ ಹುಟ್ಟುರೂಪದಿಂದಲೇ ಅವರಿಬ್ಬರೂ ಇದ್ದುದರಿಂದ ಅನುಗ್ರಹಮಾಡಬೇಕೆಂದೇ ಶಾಪವನ್ನು ಕೊಡುತ್ತಾ

**ನಾರದ :–** ವಿಷಯಾದಿ ಆಕಾಂಕ್ಷೆಯೇ ಜ್ಞಾನನಾಶಕವು. ಅದರಿಂದ ಸ್ತ್ರೀವಶವಾಗಿ ವ್ಯಸನಗಳಲ್ಲಿ ಮುಳುಗಿ ಪ್ರಾಣಿಹಿಂಸೆ ಮಾಡುವರು. ಅಂತಹವರು ಬ್ರಹ್ಮದ್ರೋಹಿಗಳಾಗುವರು (1) ಜೀವ ಪರಮಾತ್ಮರು ಒಂದೇ (2) ಬ್ರಹ್ಮನು ನಿರ್ಗುಣ ನಿರಾಕಾರನು (3) ರಾಮಕೃಷ್ಣಾದಿ ಅವತಾರರೂಪಗಳೂ ದುಃಖಿಸುವುವು. (4) ಜಗತ್ತು ಮಿಥ್ಯೆ. ಈ ನಾಲ್ಕು ಬಗೆಯ ಹಿಂಸೆ ಮಾಡಿ ತಮಸ್ಸಿಗೆ ಬೀಳುವರಲ್ಲ ! 'ಅಸದಃಶ್ರೀಮದಾಂಧಸ್ಯ ದಾರಿದ್ರ್ಯಂ ಪರಮಾಂಜನಂ' ಸಿರಿಮದದಿಂದ ಕುರುಡಾದವನಿಗೆ ಬಡತನವೇ ಪರಮೌಷಧಿ. ನೀವಿಬ್ಬರೂ ವೃಕ್ಷಗಳಾಗಿ ಹುಟ್ಟಿರಿ. ಆದರೆ ಜಾತಿಸ್ಮರರಾಗಿರಲಿ. ದೇವಮಾನದ ನೂರು ವರುಷಗಳ ನಂತರ ಕೃಷ್ಣನ ಸಾಂನಿಧ್ಯವನ್ನು ಹೊಂದಿ ದೇವತ್ವವನ್ನು ಹೊಂದಿರಿ ಎಂದು ಶಪಿಸಿದರು.

ಕೃಷ್ಣನು ಮರಗಳ ಮಧ್ಯೆ ಸಿಕ್ಕಿದ ಒರಳನ್ನು ಬಲವಾಗಿ ಎಳೆದಾಗ ಮರಗಳು ಮುರಿದು ಬಿದ್ದುವು. ಆ ಮರಗಳಲ್ಲಿ ಸೇರಿಕೊಂಡು ತಪಸ್ಸನ್ನು ಮಾಡುತ್ತಿದ್ದ ಧುನಿ ಮತ್ತು ಚಮು ಎಂಬ ಇಬ್ಬರು ದೈತ್ಯರೂ ಸತ್ತರು.

**ಯಕ್ಷರಿಬ್ಬರು** :– ಕೃಷ್ಣ ! ಕೃಷ್ಣ ! ಅಣಿಮಾದಿಯೋಗೀಶ್ವರನೇ ! ನೀನು ಆದಿಭೂತನು, ಪುರುಷನು, ಪರನು. ಜಗತ್ತು ನಿನ್ನ ಪ್ರತಿಮೆ. ನೀನು ಕಾಲನು ಅಂದರೆ ಸರ್ವಗುಣಪೂರ್ಣನು. ವಿಷ್ಣುವು ಅಂದರೆ ಸರ್ವತ್ರ ವ್ಯಾಪ್ತನು. ಉತ್ಪತ್ತಿನಾಶ ರಹಿತನು. ಅಂತರ್ಯಾಮಿಯು. ಅಧ್ಯಕ್ಷನು. ಸಂಪೂರ್ಣವಾಗಿ ತಿಳಿಯಲ್ಪಡದವನು. 'ಭಗವತೇ ವಾಸುದೇವಾಯ ನಮಃ'. ಮುಂದೆ ಎಂದೂ ನಮಗೆ ಮದವು ಬರದಿರಲಿ. ವಾಕ್ಕು, ಕೈಗಳು ಶಿರಸ್ಸು ನಿನ್ನ ಸ್ತುತಿ ಮೊದಲಾದ ವ್ಯಾಪಾರಗಳಿಂದ ನಿನ್ನನ್ನು ಸೇವಿಸುತ್ತಿರಲಿ.

**ಶ್ರೀಕೃಷ್ಣ** :– ನಿಮ್ಮ ವಿಚಾರ ನನಗೆ ಗೊತ್ತು. ನಾರದಾದಿ ಸಜ್ಜನರ ದರ್ಶನದಿಂದ ಬಂಧವು ನೀಗುವುದು. ನೀವಿಬ್ಬರೂ ನನ್ನ ಭಕ್ತರು. ನಿಮಗೆ ಮಂಗಳವಾಗಲಿ. ಅಲಕಾಪುರಕ್ಕೆ ಹೊರಡಿ. (ಅವರಿಬ್ಬರೂ ಶ್ರೀಕೃಷ್ಣನಿಗೆ ನಮಸ್ಕರಿಸಿ ಹೊರಟು ಹೋದರು.)

**ಹನ್ನೊಂದನೆಯ ಅಧ್ಯಾಯ ಮುಗಿದುದು**

ನಂದಾದಿಗಳು ಬಂದು ನೋಡಿದರು. ಮರಗಳು ಹೇಗೆ ಉರುಳಿದುವು ? ಎಂದು ತಮ್ಮಲ್ಲಿಯೇ ಮಾತಾಡಿಕೊಳ್ಳುತ್ತಿದ್ದಾಗ ಅಲ್ಲಿಯೇ ಆಟವಾಡುತ್ತಿದ್ದ ಮಕ್ಕಳು ಕೃಷ್ಣನು ಒರಳೆಳೆದು ಮರಗಳನ್ನು ಮುರಿದನೆಂದರು. ಕೆಲವರು ಮಕ್ಕಳ ಮಾತನ್ನು ನಂಬಲಿಲ್ಲ. ಪೂತನಾದಿಗಳನ್ನು ಕೃಷ್ಣನು ಸಂಹಾರಮಾಡಿದ ಸ್ಮೃತಿಯುಳ್ಳವರು ಕೃಷ್ಣನು ಈ ಕೆಲಸ ಮಾಡಿದ್ದರೂ ಮಾಡಿರ ಬಹುದೆಂದರು. ನಂದನು ಮಗನ ಕಟ್ಟನ್ನು ಬಿಚ್ಚಿದನು. ಕೃಷ್ಣನು ಬೃಹದ್ವನದಿಂದ ಬೃಂದಾವನಕ್ಕೆ ಗೋಕುಲದವರನ್ನು ಸಾಗಿಸಬೇಕೆಂದು ವೃಕಗಳನ್ನು ಸೃಷ್ಟಿಸಿದನು. ಈ ತೋಳಗಳ ಹಾವಳಿಯಿಂದ ಜನರು ಬೆದರಿ ಆ ಸ್ಥಳವನ್ನು ಬಿಟ್ಟು ಬೃಂದಾವನಕ್ಕೆ ಬಂದು ವಾಸಕ್ಕೆ ಮನೆಗಳನ್ನು ಕಟ್ಟಿಕೊಂಡರು.

ಬಲರಾಮ ಕೃಷ್ಣರು ಊರು ಮುಂದಿನ ವನದಲ್ಲಿ ಕರುಗಳನ್ನು ಮೇಯಿಸುತ್ತ ಕೊಳಲನ್ನು, ಊದುತ್ತ ಜೊತೆಯ ಬಾಲಕರೊಡನೆ ಆಟವಾಡಲಾರಂಭಿಸಿದರು. ಇವರನ್ನು ಕೊಲ್ಲಲು ಬಂದ ವತ್ಸಾಸುರನು ಸತ್ತನು. ಕೃಷ್ಣನು ತನ್ನನ್ನು ನುಂಗಲು ಬಂದ ಬಕಾಸುರನನ್ನು ಸೀಳಿ ಕೊಂದನು. ಈ ದೈತ್ಯವಧೆಯನ್ನು ಕೇಳಿದ ಗೊಲ್ಲರು ಆಶ್ಚರ್ಯವನ್ನುಹೊಂದಿದರು. ನಂದಗೋಪನು ಗರ್ಗರ ಮಾತು ನಿಜವಾಯಿತೆಂದುಕೊಂಡನು.

**ಹನ್ನೆರಡನೆಯ ಅಧ್ಯಾಯ ಮುಗಿದುದು**

ಬಲರಾಮಕೃಷ್ಣರು ಆರನೆಯ ವಯಸ್ಸಿನಿಂದ ದನಗಳನ್ನು ಮೇಯಿಸಲಿಕ್ಕೆ ಆರಂಭಿಸಿದರು. ಒಂದು ದಿನ ಸುಂದರವಾದ ವನವೊಂದನ್ನು ಪ್ರವೇಶಿಸಿದರು. ವೃಕ್ಷಗಳನ್ನು ನೋಡಿ ಶ್ರೀಕೃಷ್ಣನು ಬಲರಾಮನನ್ನು ಕುರಿತು

**ಕೃಷ್ಣ** :- ದೇವ ಶ್ರೇಷ್ಠನೇ ! ಫಲಪುಷ್ಪ ಸಹಿತಗಳಾದ ಈ ವೃಕ್ಷಗಳು ಕೊಂಬೆಗಳೆಂಬ ಹಸ್ತಗಳಿಂದ ನಿನ್ನ ಪಾದಗಳಿಗೆ ನಮಸ್ಕರಿಸುತ್ತಿರುವುವು. ನೀನು ದೇವತಾರೂಪವನ್ನು ಮರೆಮಾಚಿ ಮನುಷ್ಯರೂಪದಿಂದ ಬಂದಿರುವ ಪ್ರಯುಕ್ತ ದೇವತೆಗಳು ದುಂಬಿಗಳ ರೂಪತಾಳಿ ನಿನ್ನನ್ನು ಸೇವಿಸುತ್ತಿರುವರು. ನವಿಲುಗಳು ನರ್ತಿಸುತ್ತಿರುವುವು. ಇವರೆಲ್ಲ ತಾಪಸರು. ಕೋಕಿಲರು ಅಂದರೆ ಕ=ಬ್ರಹ್ಮ ಉ=ಶಿವ ಇವರನ್ನು ಕಿಲ=ಕೀರ್ತಿಸುವವರು. ಒಟ್ಟಿನಲ್ಲಿ ಇಂದ್ರಾದಿ ದೇವತೆಗಳು ನಿನ್ನನ್ನು ನೋಡಿ ನಿನಗೆ ಪ್ರಿಯವನ್ನುಂಟು ಮಾಡುತ್ತಿರುವರು.

(ಹೀಗೆ ವನಸಾಮ್ರಾಜ್ಯದ ವೈಭವವನ್ನು ಬಲರಾಮನಿಗೆ ಸಮರ್ಪಿಸಿದನು. ರಮಾಪತಿಯು ಗೊಲ್ಲನಂತೆ ನಟಿಸುತ್ತ ಗೊಲ್ಲ ಮಕ್ಕಳೊಡನೆ ಬೆರೆತು ಕ್ರೀಡಿಸಿದನು. ಭೂಮಿಯು ಕೃಷ್ಣನ ಪಾದಸ್ಪರ್ಶದಿಂದ ಧನ್ಯವಾಯಿತು. ಗೋಪಿಯರು ಹರಿಯನ್ನು ಆಲಿಂಗಿಸಿ ಧನ್ಯರಾದರು.)

ಒಂದು ದಿನ ಶ್ರೀದಾಮನೆಂಬ ಗೋಪಾಲನು ತಾಳೆಹಣ್ಣನ್ನು ತಿನ್ನಬೇಕೆಂದನು. ಕೃಷ್ಣನೊಡನೆ ಎಲ್ಲರೂ ತಾಳೆವನಕ್ಕೆ ಹೋದರು. ಅಲ್ಲಿದ್ದ ಧೇನುಕ ಎಂಬ ಕತ್ತೆಯ ರೂಪದ ದೈತ್ಯನು ಎಲ್ಲರನ್ನೂ ಕೊಲ್ಲಬೇಕೆಂದು ಹವಣಿಸಿದನು. ಬಲರಾಮನು ಅವನನ್ನು ಕೊಂದನು. ಅವನ ಪರಿವಾರದ ದೈತ್ಯರೆಲ್ಲ ಕತ್ತೆಗಳ ರೂಪದಿಂದ ಬಂದು ಒದ್ದು, ಕಚ್ಚಿ ಉಪದ್ರವ ಕೊಡಲಾರಂಭಿಸಿದರು. ಶ್ರೀಕೃಷ್ಣನು ಅವರೆಲ್ಲರನ್ನೂ ಕೊಂದು ಹಾಕಿದನು. ತಾಳೆವನ ಉಪದ್ರವರಹಿತವಾಯಿತು. ಯಾವ ನರನು ಬೇಕಾದರೂ ಅಲ್ಲಿಗೆ ಹೋಗಿ ಬರಲು ಅನುಕುಲವಾಯಿತು. ಸಾಯಂಕಾಲ ಕೊಳಲನ್ನು ಉದುತ್ತಾ ದನದ ಮಂದೆಯನ್ನು ಅಟ್ಟಿಕೊಂಡು ಹಟ್ಟಿಗೆ ಬರುತ್ತಿದ್ದ ಕೃಷ್ಣನನ್ನು ನೋಡುವುದಕ್ಕಾಗಿ ಪ್ರತಿದಿನದಂತೆ ಅವತ್ತೂ ಗೋಪಿಕಾಸ್ತ್ರೀಯರು ಗುಂಪು ಗುಂಪಾಗಿ ಬಂದರು. ಹಗಲಿನಲ್ಲಿ ಕೃಷ್ಣನ ಅಗಲಿಕೆಯಿಂದ ಉಂಟಾಗಿದ್ದ ತಾಪವನ್ನು ಅವನ ದರ್ಶನದಿಂದ ಕಳೆದುಕೊಂಡರು. ಅವನನ್ನು ಉಪಚರಿಸಿ ಗೋಕುಲದೊಳಗೆ ಕರೆದುಕೊಂಡು ಬಂದರು. ಯಶೋದೆಯು ರಾಮಕೃಷ್ಣರಿಗೆ ಸ್ನಾನಮಾಡಿಸಿ, ಅಲಂಕರಿಸಿ ಭೋಜನ ಮಾಡಿಸಿದಳು. ಬಾಲರು ನಿದ್ರಿಸಿದರು.

ಒಂದು ದಿನ ಕೃಷ್ಣನು ಬಲರಾಮನನ್ನು ಬಿಟ್ಟು ಉಳಿದ ಗೊಲ್ಲಬಾಲಕರು ಮತ್ತು ದನಗಳೊಡನೆ ಕಾಳಿಂದಿ ಮಡುವಿನ ಬಳಿಗೆ ಬಂದನು. ಬಾಯಾರಿ ವಿಷೋದಕ

ಪಾನದಿಂದ ಸತ್ತ ಗೋ ಗೋಪಾಲರನ್ನು ಶ್ರೀಕೃಷ್ಣನು ಬದುಕಿಸಿ, ಆ ಮಡುವಿನಲ್ಲಿ ಸೇರಿದ್ದ ಸರ್ಪರಾಜನಾದ ಕಾಲಿಯನನ್ನು ಶಿಕ್ಷಿಸಲು ಮಡುವಿನೊಳಗೆ ಹಾರಿದನು.

## ಹದಿಮೂರನೆಯ ಅಧ್ಯಾಯ ಮುಗಿದುದು

**ಪರೀಕ್ಷಿತ್ :–** ಕಾಳಿಯಸರ್ಪನು ಮಾಡಿದ ಅಪರಾಧವೇನು ? ಭಗವಂತನು ಅವನನ್ನು ನಿಗ್ರಹಿಸಿದುದೇತಕ್ಕೆ ?

**ಶುಕ :–** ಕಾಲಿಯನ ವಿಷಾಗ್ನಿಯಿಂದ ಆ ಮಡುವಿನ ನೀರು ಕುದಿಯುತ್ತಿದ್ದಿತು. ಆ ವಿಷದ ಗಾಳಿಯಿಂದ ಯಾವ ಸ್ಥಾವಿರವಾಗಲೀ, ಮಡುವಿನ ಮೇಲೆ ಗಗನದಲ್ಲಿ ಹಾರಾಡುವ ಪಕ್ಷಿಗಳಾಗಲಿ ಉಳಿಯದೆ ದಗ್ಧವಾಗುತ್ತಿದ್ದುವು. ಈ ದುಷ್ಟ ನಿಗ್ರಹಕ್ಕಾಗಿ ಶ್ರೀಕೃಷ್ಣನು ಮಡುವಿಗೆ ಹಾರಿದ್ದನು. ಸರ್ಪಶ್ರೇಷ್ಠನು ಕುಪಿತನಾಗಿ ಕೃಷ್ಣನು ದೇವರೆಂಬುದನ್ನು ಅರಿಯದೆ ಅವನ ದೇಹವನ್ನು ಕಚ್ಚಿ ವಿಷವನ್ನುಗುಳಿದನು. ಆ ಕಡೆ ಗೋಕುಲದಲ್ಲಿ ಮಹೋತ್ಪಾತಗಳನ್ನು ಕಂಡ ಗೋಕುಲದವರೆಲ್ಲರೂ ವ್ಯಥೆಪಡುತ್ತಾ, ಕೃಷ್ಣನಿಗೆ ಯಾವ ಅಪಾಯವೂ ಇಲ್ಲವೆಂದು ಬಲರಾಮನು ಹೇಳುತ್ತಿದ್ದರೂ, ಅದನ್ನು ಗಮನಿಸದೆ ಮಡುವಿನ ಬಳಿಗೆ ಬಂದು ಅಲ್ಲಿನ ಸ್ಥಿತಿಯನ್ನು ಕಂಡು ಗೋಳೋ ಎಂದು ಅಳುತ್ತಿದ್ದರು. ಬಲರಾಮನು "ಕೃಷ್ಣನೇ ! ಈ ಲೀಲೆ ಸಾಕು. ಬೇಗ ಖಳನನ್ನು ನಿಗ್ರಹಿಸಿ ಈಚೆಗೆ ಬಾ" ಎಂದನು. ಗೋಕುಲದವರಲ್ಲಿ ಕನಿಕರಗೊಂಡ ಶ್ರೀಕೃಷ್ಣನು ಆಗ ಸರ್ಪದಿಂದ ಬಿಡಿಸಿಕೊಂಡು ಅವನ ಹೆಡೆಯ ಮೇಲೆ ನಾಟ್ಯವಾಡಿದನು. ಸರ್ಪನು ತನ್ನ ದೇಹವು ಜರ್ಝರಿತವಾಗಿ ರಕ್ತವನ್ನು ಕಾರಿದನು. ಮೂರ್ಛಿತನೂ ಆದನು. ಎಚ್ಚೆತ್ತ ಮೇಲೆ ಅವನಿಗೆ ಶ್ರೀಕೃಷ್ಣನೇ ನಾರಾಯಣನೆಂಬ ಜ್ಞಾನವು ಉದಯವಾಯಿತು. ಮನಸ್ಸಿನಿಂದ ಶರಣು ಹೊಂದಿದನು. ಆಗ ಅವನ ಪತ್ನಿಯರು ಬಂದು

**ನಾಗಪತ್ನಿಯರು :–** "ಕ್ರೋಧೋ ದೇವಸ್ಯ ವರೇಣ ತುಲ್ಯಃ" ದೇವ ! ನೀನಿವನ ವಿಷಯದಲ್ಲಿ ಮಾಡಿದ ಕೋಪದಿಂದ ಇವನಿಗೆ ಶಿಕ್ಷೆ ಮಾಡಿದಿ. ಇದರಿಂದ ಹಿಂಸಕನಾದ ಇವನ ಪಾಪಗಳೆಲ್ಲ ಪರಿಹಾರವಾದುವು. ವರವನ್ನೇ ಕೊಟ್ಟಂತಾಯಿತು. ನಿನ್ನ ಸ್ಮರಣೆ ಬಂದಿತು. ನಮ್ಮ ಪತಿಯಾದ ಇವನು ಪೂರ್ವ ಜನ್ಮದಲ್ಲಿ ಪುಣ್ಯವನ್ನು ಮಾಡಿರುವನು. ಹೇಗೆಂದರೆ ರಮಾದೇವಿಗೆ ಅಪೇಕ್ಷಿತವಾದ ನಿನ್ನ ಪಾದದ ಧೂಳಿ ಇವನ ತಲೆಯ ಮೇಲೆ ಬಿದ್ದಿತು. ನಿನ್ನ ಪಾದಸ್ಪರ್ಶವನ್ನು ಹೊಂದಿದವರು ಮಹರ್ಲೋಕ, ಜನ, ತಪ, ಸತ್ಯಲೋಕಗಳಲ್ಲಿ ವಾಸಮಾಡುವ ಮುಕ್ತರಿಗಿಂತ ಶ್ರೇಷ್ಠವಾದ ವೈಕುಂಠದಲ್ಲಿ ಸಾಲೋಕ್ಯ ಮುಕ್ತಿಯನ್ನು ಹೊಂದಿರುವವರಿಗಿಂತ ಮಿಗಿಲಾದ ಪರಮಾತ್ಮನ ಸ್ಪರ್ಶಮುಕ್ತಿಯನ್ನು ಹೊಂದುವರು. ಅವರಿಗೆ ಇನ್ನಾವ ಬಯಕೆಯೂ ಇಲ್ಲ. ತಾಮಸಗುಣದಿಂದ ಉಂಟಾಗುವ ಸರ್ಪಜನ್ಮದಲ್ಲಿ ನಮ್ಮ

ಪತಿಯು ಬಂದಿದ್ದರೂ ಇವನು ನಿನ್ನ ಅಪರೋಕ್ಷವನ್ನು ಪಡೆದನು. ಕೃಷ್ಣ ! ವಾಸುದೇವ ! ನಿನಗೆ ನಮಸ್ಕಾರ ! ನಾವೆಲ್ಲರೂ ನಿನ್ನ ಕಿಂಕರಿಯರು. ಪತಿಯ ಭಿಕ್ಷೆಯನ್ನು ಕೊಡು !

(ಶ್ರೀಕೃಷ್ಣನು ಕಾಲಿಯನನ್ನು ಬಿಟ್ಟು ಬಿಟ್ಟನು. ಅವನು ಚೇತರಿಸಿಕೊಂಡು ನಮಿಸಿ.)

**ಕಾಲಿಯ :–** ದೇವ ನಮ್ಮ ಜಾತಿಯ ಸ್ವಭಾವವು ಕ್ರೂರವಾದುದು. ಸ್ವಭಾವವು ಹೋಗುವುದಿಲ್ಲ. ನೀನು ಮುಖ್ಯ ಸೃಷ್ಟಿಕರ್ತನು. ನಿನ್ನ ಮಾಯೆಯಿಂದ ನಾವು ಮೋಹಿತರು. ಆ ಮೋಹವನ್ನು ಕಳೆಯಲು ನೀನೇ ಸಮರ್ಥನು. ಅನುಗ್ರಹವೋ, ನಿಗ್ರಹವೋ ನಿನಗೆ ಉಚಿತವಾದುದನ್ನು ಮಾಡು.

**ಶ್ರೀಕೃಷ್ಣ :–** ನೀನು ರಮಣಕದ್ವೀಪಕ್ಕೆ ಹೋಗು. ಈ ನದೀಜಲವು ಎಲ್ಲರಿಗೂ ಸ್ನಾನಪಾನಾದಿಗಳಿಗೆ ಯೋಗ್ಯವಾಗಲಿ. ನಿನಗೆ ಮಾಡಿದ ಶಿಕ್ಷೆಯನ್ನು ಸ್ಮರಿಸುವವರಿಗೆ ನಿಮ್ಮ ಭಯವಿರದಿರಲಿ. ನಿನ್ನ ಶಿರಸ್ಸಿನಲ್ಲಿ ಮೂಡಿರುವ ನನ್ನ ಅಂಗಾಲಿನ ರೇಖೆಗಳಾದ ಶಂಖ ಚಕ್ರಗದಾಪದ್ಮಗಳನ್ನು ನೋಡಿದ ಗರುಡನು ನಿನಗೆ ಯಾವ ತೊಂದರೆಯನ್ನೂ ಮಾಡದೆ ವಿಶ್ವಾಸ ಮಾಡುವನು.

(ಕಾಲಿಯನು ರತ್ನಗಳಿಂದ ಶ್ರೀಕೃಷ್ಣನನ್ನು ಪೂಜಿಸಿ, ನಮಿಸಿ ಸತಿಸುತ ಪರಿವಾರದೊಡನೆ ರಮಣಕದ್ವೀಪಕ್ಕೆ ಹೊರಟು ಹೋದನು. ಶ್ರೀಕೃಷ್ಣನ ಅನುಗ್ರಹದಿಂದ ಕಾಳಿಂದಿಯ ಜಲವು ಅಮೃತವಾಯಿತು.)

## ಹದಿನಾಲ್ಕನೆಯ ಅಧ್ಯಾಯ ಮುಗಿದುದು

**ಪರೀಕ್ಷಿತ್ :–** ಕಾಲಿಯನು ಸ್ವಸ್ಥಳವಾದ ರಮಣಕದ್ವೀಪವನ್ನು ಬಿಟ್ಟು ಈ ಮಡುವಿಗೆ ಬರಲು ಕಾರಣವೇನು ? ಗರುಡನಿಗೆ ಇವನು ಮಾಡಿದ ಅಪರಾಧವೇನು ?

**ಶುಕ :–** ಸರ್ಪಗಳೆಲ್ಲವೂ ಗರುಡನಿಂದ ತಮಗೆ ಭಯವು ತಪ್ಪುವುದಕ್ಕಾಗಿ ಪ್ರತಿ ಅಮಾವಾಸ್ಯೆಯೂ ಅವನಿಗೆ ಒಬ್ಬೊಬ್ಬರೂ ಬಲಿಯನ್ನು ಒಪ್ಪಿಸುವುದಾಗಿ ಒಪ್ಪಂದವನ್ನು ಮಾಡಿಕೊಂಡರು. ಕಾಲಿಯನು ತನ್ನ ಸರದಿ ಬಂದಾಗ ಗರ್ವದಿಂದ ಗರುಡನಿಗೆ ಬಲಿಯನ್ನು ಅರ್ಪಿಸಲಿಲ್ಲ. ಗರುಡನು ಮುನಿದು ಬಂದು ರೆಕ್ಕೆಯಿಂದ ಅಪ್ಪಳಿಸಿದನು. ಕಾಲಿಯನು ಬದುಕಿದರೆ ಸಾಕೆಂದು, ಸೌಭರಿಯ ಶಾಪದಿಂದ ಗರುಡನು ಬರಲಾಗದ ಈ ಕಾಳಿಂದಿ ಮಡುವಿಗೆ ಬಂದು ಸೇರಿಕೊಂಡಿದ್ದನು. ಈಗ ಹರಿಯು ಅನುಗ್ರಹಿಸಿದ್ದರಿಂದ ಕಾಲಿಯನು ಸ್ವಸ್ಥಾನವನ್ನು ಸೇರಿದನು.

ಮಡುವಿನಿಂದ ಈಚೆಗೆ ಬಂದ ಶ್ರೀಕೃಷ್ಣನನ್ನು ನೋಡಿ ಎಲ್ಲರೂ ಆನಂದ ಭರಿತರಾದರು. ಆ ರಾತ್ರಿ ಎಲ್ಲರೂ ಆ ಮಡುವಿನ ತೀರದಲ್ಲಿ ಮಲಗಿರಲು ಕಾಡು ಗಿಚ್ಚು ಸುಡುತ್ತ ಬಂದಿತು. ಬಾಯಿಯಲ್ಲಿ ಅಗ್ನಿಯನ್ನುಳ್ಳ ನಾರಾಯಣನ ಅವತಾರ ನಾದ ಶ್ರೀಕೃಷ್ಣನು ಕಾಡುಗಿಚ್ಚನ್ನುಪಾನಮಾಡಿ ಅವರನ್ನು ರಕ್ಷಿಸಿದನು. ಬಳಿಕ ಬೆಳಗ್ಗೆ ಎಲ್ಲರೊಡನೆ ಗೋಕುಲಕ್ಕೆ ಪ್ರವೇಶಿಸಿದನು.

## ಹದಿನೈದನೆಯ ಅಧ್ಯಾಯ ಮುಗಿದುದು

ಗ್ರೀಷ್ಮಋತುವು ಬಂದಿತು. ಅದು ತಾಪಕಾರಿಯಾದರೂ ಶ್ರೀಕೃಷ್ಣನು ಗೋಕುಲದಲ್ಲಿದ್ದುದರಿಂದ ಬೃಂದಾವನವಾಸಿಗಳಿಗೆ ವಸಂತ ಕಾಲದಂತೆ ಆನಂದ ಕರವಾಗಿದ್ದಿತು. ಒಂದು ದಿನ ಎಂದಿನಂತೆ ದನಗಳನ್ನು ಮೇಯಿಸಲು ಕಾಡಿಗೆ ಹೋಗಿ ಬಾಲಕರು ಎರಡು ಪಕ್ಷಗಳನ್ನು ಮಾಡಿಕೊಂಡು ಚೆಂಡಾಟವಾಡುತ್ತಿದ್ದರು. ಆಗ ಪ್ರಲಂಬನೆಂಬ ಅಸುರನು ಗೊಲ್ಲ ಬಾಲಕನಂತೆ ರೂಪತಾಳಿ ಬಂದು ಕೃಷ್ಣನ ಪಕ್ಷದಲ್ಲಿ ನಿಂತು ಬಾಲರಾಮನ ಜೋಡಿಯಲ್ಲಿ ಸೋತನು. ಅವನು ಬಲರಾಮನನ್ನು ಎತ್ತಿ ಕೊಂಡು ಹೊರಟನು. ಗೊತ್ತು ಮಾಡಿದ್ದ ಸ್ಥಳವನ್ನು ಮೀರಿ ಗಗನದಲ್ಲಿ ಹೊರಟನು. ಭೀತನಾದ ಬಲರಾಮನು ಕೃಷ್ಣನನ್ನು ಕೂಗಿಕೊಂಡನು. ಕೃಷ್ಣನು ಆಗ ಬಲರಾಮನಿಗೆ ಅವನಲ್ಲಿದ್ದ ಹರಿಯ ಶ್ವೇತಕೇಶಾವೇಶವನ್ನೂ, ಶೇಷನ ಸ್ವರೂಪವನ್ನೂ ಸ್ಮರಣೆಗೆ ತಂದನು. ಆಗ ಬಲರಾಮನು ಆವೇಶ ಬಲದಿಂದ ಪ್ರಲಂಬಾಸುರನನ್ನು ಕೊಂದು ಬಿಟ್ಟನು. ದೇವತೆಗಳು ಸಂತೋಷದಿಂದ ಪುಷ್ಪವೃಷ್ಟಿಯನ್ನು ಮಾಡಿ ಸುತ್ತಿಸಿದರು.

## ಹದಿನಾರನೆಯ ಅಧ್ಯಾಯ ಮುಗಿದುದು

ಒಂದು ದಿನ ಗೋಪಾಲರು ಆಟವಾಡುತ್ತಿದ್ದಾರೆ. ದನಗಳ ಮೇಲೆ ಗಮನ ವಿಲ್ಲ. ದನಗಳು ಹಂಚಿಕಡ್ಡಿಯ ವನಕ್ಕೆ ನುಗ್ಗಿದುವು. ಬಾಲಕರು ಹುಡುಕಿದರು, ಕೂಗಿದರು. ದನಗಳ ಸುಳಿವೇ ಕಾಣಿಸಲಿಲ್ಲ. ಎಲ್ಲರೂ ಬಳಲಿ ಬಾಯಾರಿ, ಹಿಂತಿರುಗ ಬೇಕೆಂದಿದ್ದಾಗ ಶ್ರೀಕೃಷ್ಣನು ದನಗಳ ಹೆಸರನ್ನು ಹಿಡಿದು ಕೂಗಿದನು. ಅವು 'ಹಂಭಾ' ಎಂದು ಪ್ರತಿಧ್ವನಿ ಮಾಡಿದುವು. ಗೋಪಾಲರು ಮಂದೆಯಿದ್ದ ಸ್ಥಳಕ್ಕೆ ಬಂದರು. ಅಷ್ಟರಲ್ಲಿ ಕಾಡುಗಿಚ್ಚು ಹತ್ತಿತ್ತು. ಗೋಪಾಲರು "ಕೃಷ್ಣ ! ಮಹಾ ವೀರ್ಯ ! ನಮ್ಮನ್ನು ಕಾಪಾಡು" ಎಂದು ಮರೆಹೊಕ್ಕರು. ಶ್ರೀಕೃಷ್ಣನು ಅವರೆಲ್ಲ ರನ್ನೂ ಕಣ್ಣುಮುಚ್ಚಿಕೊಳ್ಳುವಂತೆ ಹೇಳಿ ಆ ಕಾಡುಗಿಚ್ಚನ್ನು ನುಂಗಿದನು. ಅದರಿಂದ ದನಗಳೂ ಜನರೂ ಬದುಕಿದರು. ಗೋಪಾಲರು ಶ್ರೀಕೃಷ್ಣನನ್ನು ಜರಾಮರಣ

ಶೂನ್ಯನಾದ ನಾರಾಯಣನೆಂದು ತಿಳಿದರು. ಸಾಯಂಕಾಲ ಗೋಕುಲಕ್ಕೆ ಬಂದ ಬಾಲಕರು ಪ್ರಲಂಬನವಧೆ ಮತ್ತು ದಾವಾಗ್ನಿಪಾನದ ವ್ಯಾಪಾರವನ್ನು ಗೊಲ್ಲರಿಗೆ ಹೇಳಿದರು. ಇದನ್ನು ಕೇಳಿದವರೆಲ್ಲರೂ ರಾಮಕೃಷ್ಣರು ದೇವಶ್ರೇಷ್ಠರೇ ಹೊರತು ಮನುಷ್ಯರಲ್ಲವೆಂದು ನಿಶ್ಚಯಿಸಿದರು.

## ಹದಿನೇಳನೆಯ ಅಧ್ಯಾಯ ಮುಗಿದುದು

ಮಳೆಗಾಲ ಆರಂಭವಾಯಿತು. ಚತುರ್ಮುಖನೆಂಬ ಬ್ರಹ್ಮನು ದುರ್ಮತ ವೆಂಬ ಮೇಘಾಚ್ಛಾದಿತನಾಗಿ ಸ್ವಜ್ಞಾನವು ಹೇಗೆ ಅಭಿವ್ಯಕ್ತವಾಗುವುದಿಲ್ಲವೋ ಅದರಂತೆ ಮೇಘಾವೃತ ಗಗನದಲ್ಲಿ ಸೂರ್ಯಾದಿಗಳ ಪ್ರಕಾಶವಿಲ್ಲದಂತಾಯಿತು. ಜ್ಞಾನಿ ಗಳಿಗೆ ಕೃಷ್ಣನ ಕಟಾಕ್ಷಗಳು ಕಾರುಣ್ಯವನ್ನು ಸುರಿಸುತಂತೆ ಪ್ರಾಣಿಗಳಿಗೆ ಜೀವನ ಸಾಧ ನವಾದ ನೀರನ್ನು ಮೇಘಗಳು ಸುರಿಸುತ್ತಿದ್ದುವು. ಹರಿನಿರತಮನಸ್ಕರು ವ್ಯಥೆಯನ್ನು ಹೊಂದದಿರುವಂತೆ ಪರ್ವತಗಳು ಮಳೆಯ ಹೊಡೆತದಿಂದ ಸ್ವಲ್ಪವೂ ವ್ಯಥೆಯನ್ನು ಹೊಂದಲಿಲ್ಲ. ಈ ಸಮಯದಲ್ಲಿ ಶ್ರೀಕೃಷ್ಣನು ಬಾಲಕರೊಂದಿಗೆ ವನವನ್ನು ಪ್ರವೇಶಿಸಿ ದನು. ಕೆಚ್ಚಲಭಾರದಿಂದ ಮೆಲ್ಲನೆ ನಡೆಯುತ್ತಿದ್ದ ಗೋವುಗಳು ತಮ್ಮ ನಾಮವನ್ನು ಹಿಡಿದು ಗೋಪಾಲಕೃಷ್ಣನು ಕೂಗುತ್ತಿದ್ದಾಗ ದುಡುದುಡು ಅವನ ಹಿಂದೆ ಓಡುತ್ತಿ ದ್ದುವು. ಗುಹೆಯಲ್ಲಿ ಕುಳಿತು ಮೊಸರು ಅನ್ನಬುತ್ತಿಯನ್ನು ಎಲ್ಲರೂ ಸೇರಿ ತಿನ್ನುತ್ತಿ ದ್ದರು. ಮಳೆಗಾಲವು ಕಳೆದು ಶರದೃತುವು ಬಂದಿತು. ಗಗನವು ಸ್ವಚ್ಛವಾಯಿತು.ಪುರ ಗ್ರಾಮಗಳಲ್ಲಿ ಗೃಹಸ್ಥರು ಇಂದ್ರೋದ್ದಿಶ್ಯ ಆಗ್ರಾಯಣೇಷ್ಟಿಯೆಂಬ ಉತ್ಸವವನ್ನು ಮಾಡುತ್ತಿದ್ದರು. ಪಕ್ವಧಾನ್ಯಗಳ ತೆನೆಗಳಿಂದ, ಶ್ರೀಹರಿಯ ಆವಿಷ್ಟ, ಅನಾವಿಷ್ಟ ರೂಪರಾದ ರಾಮಕೃಷ್ಣರಿಂದ ಕೂಡಿರುವ ಭೂಮಿಯು ಶೋಭಿಸುತ್ತಿದ್ದಿತು.

## ಹದಿನೆಂಟನೆಯ ಅಧ್ಯಾಯ ಮುಗಿದುದು

ಶ್ರೀಕೃಷ್ಣನು ವನದಲ್ಲಿ ಗೋಪಿಯರನ್ನು ಆಕರ್ಷಿಸಲು ಕೊಳಲನ್ನು ಊದುತ್ತಿ ದ್ದನು. ಈ ಧ್ವನಿಯನ್ನು ಕೇಳಿ ಅವನಲ್ಲಿ ಮಾತ್ರವೇ ಕಾಮವುಳ್ಳ ಗೋಪಿಯರು ಒಂದು ಕಡೆ ಸೇರಿ ಶ್ರೀಕೃಷ್ಣನ ವ್ಯಾಪಾರವನ್ನು ವರ್ಣಿಸುತ್ತಾರೆ :—

ಬಲರಾಮಕೃಷ್ಣರು ಕೊಳಲನ್ನೂದುತ್ತ ಸಾಯಂಕಾಲ ಗೋಕುಲವನ್ನು ಪ್ರವೇ ಶಿಸುವಾಗ ಅವರ ಮುಖ ಸೌಂದರ್ಯವನ್ನು ನೇತ್ರಗಳಿಂದ ಪಾನಮಾಡುವವರು ಕಣ್ಣು ಗಳನ್ನು ಪಡೆದುದಕ್ಕೆ ಇದೇ ಲಾಭ. ಶ್ರೀಕೃಷ್ಣನ ಅಧರಾಮೃತಪಾನ ಮಾಡುವ ಕೊಳ ಲೇನು ಪುಣ್ಯಮಾಡಿರುವುದೋ ? ಬೃಂದಾವನವು ಭೂಲೋಕದ ಕೀರ್ತಿಯನ್ನು

ವಿಸ್ತರಿಸುತ್ತಿರುವುದು. ವಿಮಾನದಲ್ಲಿ ಕುಳಿತಿರುವ ದೇವತಾಸ್ತ್ರೀಯರು ಕೃಷ್ಣನ ದರ್ಶನ ಮಾಡಿ, ಅವನ ಮುರಳೀನಾದವನ್ನು ಕೇಳಿ, ತುರುಬುಬಿಚ್ಚಿಹೋಗಿ, ವಸ್ತ್ರವು ಕದಲಿ ಮೈಮರೆತು ಹೋದರು. ಗೋವುಗಳು ಮೇವನ್ನು ಬಿಟ್ಟು ಕಣ್ಣೀರನ್ನು ಸುರಿಸುತ್ತ ನಿಂತುವು. ಯಮುನೆ ಸಾವಧಾನವಾಗಿ ಹರಿದಳು. ರಾಮಕೃಷ್ಣರು ಜಂಗಮಸ್ಥಾವರ ಪ್ರಾಣಿಗಳಿಗೆ ಹರ್ಷವನ್ನುಂಟು ಮಾಡುತ್ತ ಜಂತುಗಳಲ್ಲಿ ತೋರುವ ಸ್ನೇಹವು ವಿಚಿತ್ರವಾಗಿರುವುದು.

## ಹತ್ತೊಂಭತ್ತನೆಯ ಅಧ್ಯಾಯ ಮುಗಿದುದು

ಹೇಮಂತ ಋತುವಿನ ಮಾರ್ಗಶಿರಮಾಸದಲ್ಲಿ ಗೋಪಕನ್ಯೆಯರು ಕಾತ್ಯಾಯನೀ ಪೂಜಾವ್ರತವನ್ನು ಮಾಡಿದರು. ಅವರು ಅರುಣೋದಯದ ಕಾಲದಲ್ಲಿ ತಮ್ಮ ವಸ್ತ್ರಗಳನ್ನು ದಡದ ಮೇಲೆ ಇಟ್ಟು ಯಮುನೆಯ ನೀರಿನಲ್ಲಿಳಿದು ಸ್ನಾನವನ್ನು ಮಾಡುತ್ತಿದ್ದರು. ಒಂದು ದಿನ ಶ್ರೀ ಕೃಷ್ಣನು ಬಂದು ಆ ವಸ್ತ್ರಗಳನ್ನು ಅಪಹರಿಸಿ ಮರದ ಮೇಲಿಟ್ಟು "ಅಬಲೆಯರೇ ! ವ್ರತದಿಂದ ನೀವು ಬಳಲಿದ್ದೀರಿ. ನಿಮ್ಮನ್ನು ಅಪಹಾಸ್ಯ ಮಾಡುವುದಿಲ್ಲ. ನೀವಿಲ್ಲಿಗೆ ಬಂದು ನಿಮ್ಮ ನಿಮ್ಮ ವಸ್ತ್ರವನ್ನು ಸ್ವೀಕರಿಸಿರಿ'' ಎಂದನು. ಕನ್ಯೆಯರು ತಮ್ಮ ವ್ರತವು ಫಲಿಸಿತೆಂದು ಸಂತುಷ್ಟರಾಗಿ "ಈ ಅನ್ಯಾಯ ಬೇಡ. ನೀನು ಶ್ಲಾಘ್ಯನು. ನಡುಗುತ್ತಿರುವೆವು. ವಸ್ತ್ರಗಳನ್ನು ಕೊಡು. ಶ್ಯಾಮ ಸುಂದರನೆ ! ನಾವು ನಿನ್ನ ದಾಸಿಯರು. ನಿನ್ನ ಆಜ್ಞೆಯನ್ನು ನಡೆಸತಕ್ಕವರು. ನೀನು ಧರ್ಮಜ್ಞನು. ಸೀರೆಗಳನ್ನು ಕೊಟ್ಟುಬಿಡು. ಇಲ್ಲವಾದರೆ ನಂದಗೋಪನಿಗೆ ಹೇಳುವೆವು" ಎಂದರು.

ಶ್ರೀಕೃಷ್ಣ :- ದಾಸಿಯರು ಆಜ್ಞಾಕಾರಿಗಳೆಂಬುದು ನಿಜವಾದರೆ ನೀವು ಬಂದು ಸೀರೆಗಳನ್ನು ತೆಗೆದುಕೊಳ್ಳಿರಿ ನೀವು ಚಾಡಿಯನ್ನು ಹೇಳಿದರೂ ನಂದಗೋಪನು ನನ್ನನ್ನು ಏನೂ ಮಾಡಲಾರನು. (ಕನ್ಯೆಯರು ಮಾನ ಮುಚ್ಚಿಕೊಂಡು ತೀರಕ್ಕೆ ಬಂದರು. ಪ್ರಸನ್ನನಾಗಿ) ನೀವು ನಿರ್ವಾಣದಿಂದ ಸ್ನಾನವನ್ನು ಮಾಡಿದ್ದು ತಪ್ಪು. ಈ ದೋಷಪರಿಹಾರಕ್ಕಾಗಿ ತಲೆಯ ಮೇಲೆ ಎರಡೂ ಕೈಗಳನ್ನೂ ಜೋಡಿಸಿ ನಮಿಸಿರಿ. ಬಳಿಕ ನಿಮ್ಮ ನಿಮ್ಮ ವಸ್ತ್ರಗಳನ್ನು ತೆಗೆದು ಕೊಳ್ಳಿ. (ಗೋಪಕನ್ಯೆಯರು ಒಂದು ಕೈಯಿಂದ ನಮಿಸಿದರು. ಕುಪಿತನಾಗಿ) ಒಂದು ಕೈಯಿಂದ ಅಚ್ಯುತನಿಗೆ ನಮಿಸಿದರೆ ಆ ಹಸ್ತಛೇದನವೇ ಶಿಕ್ಷೆಯೆಂದು ಶಾಸ್ತ್ರಜ್ಞರು ಹೇಳಿರುವರು. ಆದುರಿಂದ ಎರಡು ಕೈಗಳಿಂದಲೂ ನಮಸ್ಕರಿಸಿರಿ. ಅದು ನನಗೆ ಪ್ರೀತಿಕರವಾಗುವುದು.

(ಕುಮಾರಿಯರು ಎರಡು ಕೈಗಳಿಂದಲೂ ನಮಸ್ಕರಿಸಿದರು. ಶ್ರೀಕೃಷ್ಣನು

ಅವರವರ ವಸ್ತ್ರಗಳನ್ನು ಕೊಟ್ಟನು. ಅವರು ವಸ್ತ್ರಗಳನ್ನು ಧರಿಸಿ, ಶ್ರೀಕೃಷ್ಣನಿಂದ ಆಕರ್ಷಿತಚಿತ್ತರಾಗಿ ಅವನ ಅಂಗಸಂಗೇಚ್ಛೆಯಿಂದ ಕದಲದೆ ಅಲ್ಲಿಯೇ ನಿಂತುಬಿಟ್ಟರು. ಆಗ ಶ್ರೀಕೃಷ್ಣನು ಮಾತಾಡುತ್ತಾನೆ :-)

ನಾನೇ ಪತಿಯಾಗಬೇಕೆಂಬ ನಿಮ್ಮ ಸಂಕಲ್ಪವು ಸತ್ಯವಾಗಬೇಕಾದುದು ನ್ಯಾಯವು. ಬೆಂದ ಬೀಜವು ಮೊಳಕೆಯಾಗಲಾರದು. ಅದರಂತೆಯೇ ಬುದ್ಧಿಯನ್ನು ನನ್ನಲ್ಲಿಯೇ ಇಟ್ಟಿರುವ ನಿಮ್ಮ ಅಭಿಲಾಷೆಯು ತಿರುಗಿ ಸಂಸಾರ ಸಾಧಕವಾದ ವಿಷಯ ದಲ್ಲಿ ಹುಟ್ಟಲಾರದು. ನನ್ನೊಡನೆ ಈ ರಾತ್ರಿಗಳನ್ನು ಸುಖವಾಗಿ ಕಳೆಯಲು ಸಿದ್ಧರಾ ಗಿರಿ. ಈಗ ಹೊರಡಿ.

**ಶುಕ :-** ಶ್ರೀಕೃಷ್ಣನು ಗೋಗೋಪಾಲರೊಡನೆ ಬೃಂದಾವನವನ್ನು ಬಿಟ್ಟು ಬಹುದೂರಕ್ಕೆ ಹೋದನು. ನೆರಳು ಕೊಡತಕ್ಕ ಅಲ್ಲಿದ್ದ ವೃಕ್ಷಗಳನ್ನು ನೋಡಿ 'ಗೆಳೆಯರೇ! ಪರೋಪಕಾರಕ್ಕಾಗಿಯೇ ತಮ್ಮ ಜೀವನವನ್ನು ಧಾರೆಯೆರೆದಿರುವ ಈ ವೃಕ್ಷಗಳೇ ಪುಣ್ಯಜೀವಿಗಳು" ಎಂದನು. ಮರಗಳ ತೋಪಿನ ಮಾರ್ಗವಾಗಿ ಯಮುನಾ ತೀರದಲ್ಲಿದ್ದ ಒಂದು ಸ್ಥಳಕ್ಕೆ ಬಂದನು. ದನಗಳಿಗೆ ನೀರನ್ನು ಕುಡಿಸಿ, ಮೇಯಿಸುತ್ತಿರುವಾಗ, ಹಸಿವಿನಿಂದ ಪೀಡಿತರಾದ ಗೋಪಾಲರು ಕೃಷ್ಣನನ್ನು ಕುರಿತು ಮಾತಾಡಿದರು.

## ಇಪ್ಪತ್ತನೆಯ ಅಧ್ಯಾಯ ಮುಗಿದುದು

**ಗೋಪಾಲರು :-** ರಾಮ ! ಕೃಷ್ಣ ! ನಮಗೆ ಬಹಳ ಹಸಿವಾಗಿದೆ. ತೃಪ್ತಿ ಯಾಗಿ ಭೋಜನ ಮಾಡಿಸಿ.

**ಕೃಷ್ಣ :-** ಗೋಪಾಲರೇ ! ಸಮೀಪದಲ್ಲಿಯೇ ಬ್ರಾಹ್ಮಣರು ಯಜ್ಞವನ್ನು ಮಾಡುತ್ತಿರುವರು. ಅವರ ಬಳಿಗೆ ಹೋಗಿ ಅನ್ನವನ್ನು ಬೇಡಿರಿ.

**ಗೋಪಾಲರು :-** (ಅಲ್ಲಿಗೆ ಹೋಗಿ) ಬ್ರಾಹ್ಮಣರೇ ! ರಾಮಕೃಷ್ಣ ರಿಬ್ಬರೂ ಸಮೀಪದಲ್ಲಿ ದನಗಳನ್ನು ಮೇಯಿಸುತ್ತಿರುವರು. ಅವರಿಗೆ ಹಸಿವೆಯಾಗಿ ಅನ್ನವನ್ನು ಬೇಡುತ್ತಿರುವರು. ದೀಕ್ಷಿತಾನ್ನವನ್ನು ಊಟಮಾಡಬಾರದೆಂದೇನೊ ಇದೆ. ಆದರೂ ದೀಕ್ಷಾಕಾಲದಲ್ಲಿ ಅಗ್ನಿಷ್ಟೋಮೀಯ ಪಶುವಧೆಯಾದ ಮೇಲೆ ಮತ್ತು ಅನ್ಯ ವಾದ ಸೌತ್ರಾಮಣಿ ಇಷ್ಟಿಯ ಕರ್ಮದ ಕೊನೆಯಲ್ಲಿಯೂ ದೀಕ್ಷಿತನ ಅನ್ನ ಭೋಜನ ನಿಷಿದ್ಧವಲ್ಲವೆಂದಿದೆ. ಆದ್ದರಿಂದ ಅನ್ನವನ್ನು ನೀಡಿರಿ.

**ಶುಕ :-** ಯಜ್ಞಪ್ರವರ್ತಕನೂ, ಯಜ್ಞಫಲಭೋಕ್ತೃವೂ ಆದ ಶ್ರೀ ಹರಿಯೇ ಆದ ಕೃಷ್ಣನನ್ನು ಮನುಷ್ಯನೆಂದು ತಿಳಿದು ಆ ವಿಪ್ರರು ಮಾತನ್ನೇ ಆಡದೆ

ಸುಮ್ಮನೆ ಕುಳಿತರು. ನಿರಾಶರಾದ ಗೋಪಾಲರು ಕೃಷ್ಣನ ಬಳಿಗೆ ಬಂದು ಅಲ್ಲಿ ನಡೆದುದನ್ನೆಲ್ಲ ಹೇಳಿದರು. ಶ್ರೀಕೃಷ್ಣನು ಆ ಬ್ರಾಹ್ಮಣರ ಪತ್ನಿಯರ ಬಳಿಗೆ ಹೋಗಿ ಅನ್ನ ಬೇಡಿರೆಂದು ಗೋಪಾಲರನ್ನು ಕಳುಹಿದನು. ಅದರಂತೆ ಗೋಪಾಲರು ಬಂದು ಹೇಳಿದ ಕೂಡಲೇ ಆ ಹೆಣ್ಣುಮಕ್ಕಳು ಮಾಡಿದ್ದ ಅಡುಗೆಯನ್ನೆಲ್ಲ ತೆಗೆದುಕೊಂಡು ಕೃಷ್ಣನ ಬಳಿಗೆ ಬಂದರು.

**ಕೃಷ್ಣ** ;– ಮಹಾಭಾಗ್ಯವತಿಯರೆ ! ನಿಮಗೆ ಸುಖಾಗಮನ. ನನ್ನಿಂದೇನಾಗ ಬೇಕು ? ಏಕಾಂತ ಭಕ್ತರಂತೆ ನಿಮ್ಮನ್ನು ಅಡ್ಡಗಟ್ಟಿ ತಡೆದ ಪತ್ಯಾದಿಗಳನ್ನು ಬಿಟ್ಟು, ಎಲ್ಲರಿಗಿಂತಲೂ ಪ್ರಿಯನೆನಿಸಿದ ನನ್ನಲ್ಲಿ ಭಕ್ತಿಯಿಟ್ಟು ಬಂದಿರುವಿರಿ. ಈಗ ನನ್ನಾಜ್ಞೆಯನ್ನು ನಡೆಸಿರಿ. ಗೃಹಸ್ಥಧರ್ಮಪರಾಯಣರಾದ ನಿಮ್ಮ ಪತಿಗಳ ಬಳಿಗೆ ಹಿಂತಿರುಗಿ ಹೋಗಿರಿ. ಅವರು ನಿಮ್ಮೊಡನೆಯೇ ಯಜ್ಞವನ್ನು ಪೂರ್ತಿಗೊಳಿಸಬೇಕಾಗಿದೆ.

**ದ್ವಿಜಪತ್ನಿಯರು** :– "ನಮೇ ಭಕ್ತಃ ಪ್ರಣಶ್ಯತಿ" ಎಂಬುದನ್ನು ಸತ್ಯ ಮಾಡು. ನಮ್ಮನ್ನು ಅನಾದರಿಸಬೇಡ. ಬಂಧುಗಳನ್ನು ನಿರಾಕರಿಸಿ ನಿನ್ನ ಪಾದದ ನಿರ್ಮಾಲ್ಯ ತುಳಸಿಯನ್ನು ಶಿರಸ್ಸಿನಲ್ಲಿ ಧರಿಸಿ ಧನ್ಯರಾಗಬೇಕೆಂದು ಬಯಸಿ ಇಲ್ಲಿಗೆ ಬಯಸಿ ಬಂದಿರುವೆವು. ಹಿಂತುರುಗಿ ಹೋದರೆ ನಮ್ಮನ್ನು ಬಂಧುಗಳು ಬಯಸುವುದಿಲ್ಲ. ಪರಿಗ್ರಹಿಸುವುದೂ ಇಲ್ಲ. ನೀನೇ ನಮಗೆ ದಿಕ್ಕುದಶೆ. ಪಾಹಿ ! ಪಾಹಿ !

**ಕೃಷ್ಣ** .– ನನ್ನ ಸಹವಾಸ ಮಾಡಿದವರನ್ನು ದೇವತೆಗಳೇ ಸಂಮಾನ ಮಾಡುವರು. ಅಂದ ಬಳಿಕ ನಿಮ್ಮ ಬಂಧುಗಳು ನಿಮ್ಮನ್ನು ನಿರಾಕರಿಸದೆ ಸ್ವೀಕರಿಸುವುದಿಲ್ಲವೆ ? ಅಂಗಸಂಗವು ತುಚ್ಛ. ಹೃದಯಸಂಗವೇ ಪ್ರಶಸ್ತ. ಆದ್ದರಿಂದ ನನ್ನಲ್ಲೇ ಮನಸ್ಸನ್ನಿಟ್ಟು ಬೇಗ ನನ್ನನ್ನು ಹೊಂದಿರಿ.

(ಈ ಮಾತಿನಿಂದ ಪರಮಾತ್ಮನಲ್ಲಿಯೆ ಕಾಮವುಳ್ಳ ಅಪ್ಸರುಸ್ತ್ರೀಯರೇ ಈ ಬ್ರಾಹ್ಮಣರ ಪತ್ನಿಯರಾಗಿರುವರೆಂದು ಮನದಟ್ಟಾಗುವುದು. ಶ್ರೀಕೃಷ್ಣನ ಮಾತಿನಂತೆಯೇ ಆ ಹೆಣ್ಣು ಮಕ್ಕಳು ಹಿಂತಿರುಗಿದರು. ಅವರ ಪೈಕಿ ಒಬ್ಬ ಹೆಣ್ಣು ಮಗಳು ಶ್ರೀ ಕೃಷ್ಣನ ದರ್ಶನಕ್ಕೆ ಹೊರಟಾಗ ಅವಳ ಗಂಡನು ಅವಳನ್ನು ಕೋಣೆಯಲ್ಲಿ ಕೂಡಿಹಾಕಿದನು. ಆಕೆಯು ಅಲ್ಲಿಯೇ ಕುಳಿತು ಶ್ರೀಕೃಷ್ಣನನ್ನು ಧ್ಯಾನಮಾಡಿ ದೇಹವನ್ನು ಬಿಟ್ಟು ಶ್ರೀಕೃಷ್ಣನ ಸ್ಥಾನವನ್ನು ಹೊಂದಿದಳು. ಇದನ್ನು ವಿಚಾರ ಮಾಡಿದರೆ ಆ ಹೆಣ್ಣುಮಗಳು ಅಪರೋಕ್ಷಜ್ಞಾನಿಯಾದ ಅಪ್ಸರಸ್ತ್ರೀಯು. ಪ್ರಾರಬ್ಧಕರ್ಮವನ್ನು ಭೋಗಿಸಲು ಹುಟ್ಟಿದ್ದಳು. ಅದು ಭೋಗದಿಂದ ಕಳೆಯಿತು. ಕೂಡಲೇ ಹರಿಯ ಸಾನಿಧ್ಯವನ್ನು ಸೇರಿದಳೆಂದೇ ತಿಳಿಯಬೇಕು.

ವಿಪ್ರಪತ್ನಿಯರು ತಂದ ಅನ್ನವನ್ನು ಶ್ರೀಕೃಷ್ಣನು ತನ್ನ ಸಂಗಡಿಗರಿಗೆ ಕೊಟ್ಟು ತಾನೂ ಉಂಡನು. ಶ್ರೀಹರಿಯು ಕರುಣಾಳುವಾದುದರಿಂದ ಭಕ್ತಿಯಿಂದ ಅರ್ಪಿತವಾದ ಸ್ಥೂಲಾನ್ನವನ್ನೂ ಭುಜಿಸುವನು. ಇತ್ತ ಬ್ರಾಹ್ಮಣರು ತಮ್ಮ ತಪ್ಪಿಗಾಗಿ ಪಶ್ಚಾತ್ತಾಪಪಟ್ಟು ಕೃಷ್ಣನನ್ನು ನಮಿಸಿ ಅಪರಾಧವನ್ನು ಕ್ಷಮಿಸೆಂದು ಪ್ರಾರ್ಥನೆಯನ್ನು ಮಾಡಿದರು. ಆದರೆ ಕಂಸನ ಭಯಕ್ಕಾಗಿ ಅವರು ಕೃಷ್ಣನ ಬಳಿಗೆ ಹೋಗದೆ ಅಲ್ಲಿಯೇ ಉಳಿದರು.

## ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು

ಗೋಪರು ಇಂದ್ರಯಾಗಕ್ಕೆ ಅಣಿಯಾಗುತ್ತಿದ್ದರು. ಇದೇನೆಂದು ಶ್ರೀಕೃಷ್ಣನು ಕೇಳಿದನು.

**ನಂದಗೋಪ :–** ಪ್ರಾಣಿಗಳು ಬದುಕಿರಲು ನೀರು ಬೇಕು. ಅದನ್ನು ಮಳೆಯ ಮೂಲಕ ಕೊಡುವ ಮೇಘಗಳಿಗೆ ಸ್ವಾಮಿಯು ಇಂದ್ರನು. ಹೀಗೆ ಮಳೆ ಬೆಳೆಗೆ ಉಪಕಾರವನ್ನು ಮಾಡುವ ಇಂದ್ರನನ್ನು ಪೂಜಿಸುವುದು ಧರ್ಮ. ಅದಕ್ಕಾಗಿ ಈ ಇಂದ್ರನ ಯಾಗದ ಏರ್ಪಾಡು.

**ಕೃಷ್ಣ :–** ಹರಿಯು ಫಲಪ್ರದನಾದ್ದರಿಂದಲೇ ಅವನು ಕರ್ಮನೆಂದು ಕರೆಯಲ್ಪಡುವನು. ಅವನಿಂದಲೇ ಪ್ರಾಣಿಗಳು ಹುಟ್ಟಿ ಸಾಯುತ್ತಿವೆ. ಕೊನೆಗೆ ಮೋಕ್ಷವನ್ನು ಕೊಡುವವನೂ ಅವನೇ. ಅವನು ಸ್ವಭಾವದಲ್ಲಿದ್ದು ಅದಕ್ಕೆ ನಿಯಾಮಕನಾದ್ದರಿಂದ ಅವನಿಗೆ **ಸ್ವಭಾವ** ಎಂದು ಹೆಸರು. ಇಂತಹ ನಾರಾಯಣನಿಂದ ಬರುವ ಸುಖದುಃಖಾದಿಗಳನ್ನು ಇಂದ್ರನು ತಪ್ಪಿಸಲಾರನು. ಹೀಗಿರುವುದರಿಂದ ಅಸ್ವತಂತ್ರನಾದ ಇಂದ್ರನಿಂದ ನಮಗೆ ಯಾವ ಫಲವೂ ಇಲ್ಲ. ಸ್ವಭಾವನಾಮಕನಾದ ಶ್ರೀಹರಿಯನ್ನು ಜಗತ್ತೆಲ್ಲವೂ ಆಶ್ರಯಿಸಿ ಬದುಕುತ್ತಿರುವುದು. ಅವನೇ ಈ ಗಿರಿಯಲ್ಲಿದ್ದು ಗಿರಿನಾಮಕನಾಗಿರುವನು. ಅವನನ್ನು ಪೂಜಿಸಬೇಕಾದುದೇ ನ್ಯಾಯ. ಅದರಿಂದ ಅವನೇ ಮಳೆಯನ್ನು ಕೊಡತಕ್ಕವನು. ಗೊಲ್ಲರಾದ ನಮ್ಮ ಜೀವನಕ್ಕೆ ಬೇಕಾದುದೆಲ್ಲವನ್ನೂ ಒದಗಿಸಿಕೊಡತಕ್ಕವನು ಅವನೇ. ಆದುದರಿಂದ ವಿಪ್ರರು, ಗೋವುಗಳು, ಆಶ್ರಯವನ್ನು ಕೊಡುತ್ತಿರುವ ಗೋವರ್ಧನ ಪರ್ವತ ಇವುಗಳೆಲ್ಲದರಲ್ಲಿಯೂ ಇರುವ ಭಗವಂತನನ್ನು ಪೂಜಿಸಬೇಕಾದುದು ನಮ್ಮ ಧರ್ಮ. ನೀವು ಹೀಗೆ ಮಾಡಿದರೆ ನನಗೆ ಪ್ರಿಯವಾಗುವುದು.

(ಇಂದ್ರನ ಮದವನ್ನು ಮುರಿಯಲು ಹೀಗೆ ಹೇಳಿದ ಕೃಷ್ಣನ ಮಾತಿನಂತೆ ಗೋಕುಲದವರೆಲ್ಲರೂ ಗಿರಿಯ ಪೂಜೆ ಮಾಡಿ ಬಲಿಯನ್ನು ಕೊಟ್ಟರು.

ಶ್ರೀಹರಿಯು ಗಿರಿಯಲ್ಲಿ ಪ್ರಕಟನಾಗಿ ಅವರು ಕೊಟ್ಟಿದ್ದ ಅನ್ನದ ರಾಶಿಯನ್ನುಂಡು ನಿಮಗೆ ಅನುಗ್ರಹಿಸಿರುವೆನು-ಎಂಬುದಾಗಿ ಹೇಳಿದನು.)

## ಇಪ್ಪತ್ತೆರಡನೆಯ ಅಧ್ಯಾಯ ಮುಗಿದುದು

ಇಂದ್ರನು ಕುಪಿತನಾಗಿ ಕುಂಭದ್ರೋಣಾಕಾರವಾಗಿ, ಎಡೆಬಿಡದೆ ಏಳು ದಿನ ಮಳೆಯನ್ನು ಸುರಿಸಿಬಿಟ್ಟನು ಗೋಕುಲದ ಜನ ಮತ್ತು ದನಕರುಗಳು ಕಂಗಾಲಾದರು. ಶ್ರೀಕೃಷ್ಣನು ಗೋವರ್ಧನ ಪರ್ವತವನ್ನು ಕಿರಿ ಬೆರಳಲ್ಲಿ ಎತ್ತಿ ಕೊಡೆಯಂತೆ ಏಳುದಿನ ಬೆಟ್ಟವನ್ನು ಹೊತ್ತು ನಿಂತನು.ಎಲ್ಲರನ್ನೂ ಕರೆದನು. ಇಡೀ ಗೋಕುಲವೇ ಬೆಟ್ಟದ ಕೆಳಗೆ ಸುಖವಾಗಿ ವಾಸಮಾಡಿತು. ಕೃಷ್ಣನ ಈ ಯೋಗೈಶ್ವರ್ಯವನ್ನು ನೋಡಿ'ಇಂದ್ರನ ಗರ್ವವು ಮುರಿದು ಹೋಯಿತು. ಮಳೆ ನಿಂತಿತು. ಜನ ಮತ್ತು ದನ ಎಲ್ಲರೂ ಗೋಕುಲವನ್ನು ಸೇರಿದರು ಅವರೆಲ್ಲರೂ ಶ್ರೀಕೃಷ್ಣನನ್ನು ಪ್ರೇಮದಿಂದ ಪೂಜಿಸಿದರು.

## ಇಪತ್ತಮೂರನೆಯ ಅಧ್ಯಾಯ ಮುಗಿದುದು

ಗೋಪಾಲರೆಲ್ಲರೂ ಶ್ರೀಕೃಷ್ಣನ ಈ ಅಮಾನುಷವ್ಯಾಪಾರವನ್ನೂ, ಪೂತನಾದಿ ದುಷ್ಟರ ಸಂಹಾರವನ್ನೂ ಹೊಗಳುತ್ತ ಆಶ್ಚರ್ಯವನ್ನು ಹೊಂದಿ "ನಂದಗೋಪನೇ ! ಶ್ರೀಕೃಷ್ಣನು ಮನುಷ್ಯನಲ್ಲ ಇವನು ಯಾವ ದೇವತೆಯು ಹೇಳು" ಎಂದು ಕೇಳಿದರು. ನಂದಗೋಪನು ಹಿಂದೆ ಗರ್ಗಾಚಾರ್ಯರು ತನಗೆ ತಿಳಿಸಿದ್ದ ವಿಷಯವನ್ನು ಅವರಿಗೆ ತಿಳಿಸಿ 'ಇವನು ನಾರಾಯಣನು ಎಂದು ನಾನು ತಿಳಿದಿರುವೆನು' ಎಂದನು. ನಾರಾಯಣನನ್ನೇ ಮಗನನ್ನಾಗಿ ಪಡೆದ ನಂದಗೋಪನು ಭಾಗ್ಯಶಾಲಿಯೆಂದು ಅವನನ್ನು ಪೂಜಿಸಿದರು.

**ಶುಕ :-** (ಅವ :-) ಕೃಷ್ಣನ ಬಾಲಲೀಲೆಯು ಗೋವರ್ಧನೋದ್ಧರಣ ವ್ಯಾಪಾರಕ್ಕೆ ಮುಗಿಯುವುದರಿಂದ ಮಂಗಳ ಮಾಡಿ ಆತ್ಮರಕ್ಷೆಯನ್ನು ಪ್ರಾರ್ಥಿಸುತ್ತಾರೆ :-

### ಶ್ಲೋಕ

**ದೇವೇ ವರ್ಷತಿ ಯಜ್ಞ ವಿಪ್ಲವರುಷಾ ವಜ್ರಾಶ್ಮ ವರ್ಷಾನಿಲೈಃ**
**ಸೀದದ್ಪಾಲ ಪಶುಸ್ತ್ರಿಯಾತ್ಮಶರಣಂ ದೃಷ್ಟ್ವಾನು ಕಂಪ್ಯುತ್ ಸ್ಮಯಃ**
**ಉತ್ಪಾಟ್ಯೈಕಕರೇಣ ಶೈಲಮುಬಲೋ ಲೀಲೋಚ್ಛಿಲೀಂಧ್ರಂ ಯಥಾ**
**ಬಿಭ್ರದ್ಗೋಷ್ಠಮಪಾನ್ಮಹೇಂದ್ರ ಮದಭಿತ್ ಪ್ರೀಯಾನ್ನ ಇಂದ್ರೋ ಗವಾಂ ||**

ಇಂದ್ರನು ತನ್ನ ಯಾಗಭಂಗವಾದುದಕ್ಕೆ ಕುಪಿತನಾಗಿ ಗಾಳಿ ಸಿಡಿಲುಗಳಿಂದ ಸಹಿತವಾದ ಕಲ್ಲಿನಂತಿರುವ ಹನಿಗಳನ್ನು ಸುರಿಸಿದಾಗ ಸ್ತ್ರೀಬಾಲವೃದ್ಧರು ಮೊದಲಾದ ಗೋಕುಲದ ಪ್ರಜೆಗಳೂ, ಗೋವುಗಳೂ ಪ್ರಾಣಭಯದಿಂದ ನಡುಗುತ್ತ ಬಂದು ಶ್ರೀಕೃಷ್ಣನನ್ನು ಮರೆಹೊಕ್ಕರು. ಅದನ್ನು ನೋಡಿದ ಭಗವಂತನ ಹೃದಯವು ಕರಗಿತು ಆಗ ಅವನು ನಗುತ್ತ ಗೋವರ್ಧನಪರ್ವತವನ್ನು ತನ್ನ ಒಂದೇ ಕೈಯಿಂದೆತ್ತಿ ಬಾಲಕನು ನಾಯಿ ಕೊಡೆಯನ್ನು ಹಿಡಿಯುವಂತೆ ಅನಾಯಾಸವಾಗಿ ಬೆಟ್ಟವನ್ನು ಕೊಡೆಯಂತೆ ಹಿಡಿದು ನಿಂತು ಗೋಕುಲವನ್ನು ಅಪಾಯವಿಲ್ಲದಂತೆ ರಕ್ಷಿಸಿದನು. ದೇವೇಂದ್ರನ ಮದವನ್ನು ಮುರಿದ ಗವಾಂ ಇಂದ್ರಃ ಅಂದರೆ ವೇದಾದಿ ಜ್ಞಾನಪ್ರದನಾದ ಗೋವಿಂದನು ನಮ್ಮ ವಿಷಯದಲ್ಲಿ ಪ್ರೀತನಾಗಲಿ. ।

## ಇಪ್ಪತ್ತನಾಲ್ಕನೆಯ ಅಧ್ಯಾಯ ಮುಗಿದುದು

ಇಂದ್ರನಿಗೆ ಬಂದಿದ್ದ ದೈತ್ಯಾವೇಶವು ಹೋದ ಮೇಲೆ ಅವನು ಸುರಭಿಯೊಡನೆ ಬಂದು ಶ್ರೀಕೃಷ್ಣನಿಗೆ ನಮಿಸಿ

**ಇಂದ್ರ :–** ಕೃಷ್ಣನೇ ! ನೀನು ಸತ್ತ್ವಾದಿಗುಣಸಂಬಂಧರಹಿತನು, ಮಂಗಳ ಸ್ವರೂಪನು. ಜ್ಞಾನಮಯನು. ಇಂತಹ ನಿನ್ನನ್ನು ಶರಣು ಹೊಂದುವೆನು. ನೀನೇ ತಂದೆ, ಗುರು, ಶಿಕ್ಷಕನು. ಸಜ್ಜನರು ಗರ್ವಪಟ್ಟರೆ ಅವರ ಹಿತಕ್ಕಾಗಿಯೇ ಆಗರ್ವ ವನ್ನು ಮುರಿಯುವೆ ಅದರಿಂದ ಅವರು ವಿದ್ವಜ್ಜನರ ಸಿದ್ಧಾಂತವನ್ನು (ತತ್ತ್ವವಾದ ಮತವನ್ನು) ಆಶ್ರಯಿಸುವರು. ದೇವ! ನಾನು ಅಪರಾಧಿ. ನನ್ನನ್ನು ಕ್ಷಮಿಸಿ ಅನುಗ್ರಹಿಸು.

**ಕೃಷ್ಣ :–** ನಿನ್ನ ಗರ್ವಾಪಹಾರಕ್ಕಾಗಿಯೇ ನಿನ್ನ ಯಜ್ಞಕ್ಕೆ ಭಂಗವನ್ನುಂಟು ಮಾಡಿದೆ. ಈ ನಿಗ್ರಹವೇ ನಿನಗೆ ಅನುಗ್ರಹವೆಂದು ತಿಳಿ.

**ಸುರಭಿ :–** ದೇವ ! ಗೋಬ್ರಾಹ್ಮಣ ಮೊದಲಾದವರಿಗೆ ಮಂಗಳ ಮಾಡು! ಬ್ರಹ್ಮದೇವರಿಂದ ಪ್ರೇರಿತಳಾಗಿ ಬಂದಿರುವ ನಾನು ಸ್ವಾಮಿಗೆ ಅಭಿಷೇಕ ಮಾಡುವೆನು.

(ಕಾಮಧೇನುವು ಕೃಷ್ಣನಿಗೆ ಕ್ಷೀರಾಭಿಷೇಕವನ್ನು ಮಾಡಿದಳು. ಐರಾವತವು ತಂದ ಆಕಾಶ ಗಂಗಾಜಲದಿಂದ ಇಂದ್ರನು ಅಭಿಷೇಕ ಮಾಡಿ ಗೋವಿಂದಪಟ್ಟಾಭಿ ಷೇಕ ಮಾಡಿದನು. ಅಂದರೆ ದೇವತೆಗಳಿಗೆ ಮತ್ತು ಗೋವುಗಳಿಗೆ ಸ್ವಾಮಿಯೆಂಬ ನಾಮದಿಂದ ಕರೆದು ಅಭಿಷೇಚಿಸಿದನು.

## ಇಪ್ಪತ್ತೈದನೆಯ ಅಧ್ಯಾಯ ಮುಗಿದುದು

ಒಮ್ಮೆ ನಂದನು ಏಕಾದಶೀಉಪವಾಸಮಾಡಿ ಯಮುನೆಯಲ್ಲಿ ಸ್ನಾನಕ್ಕಾಗಿ ಬಂದನು. ಆವೇಳೆ ಅಂದರೆ ರಾತ್ರಿ ಇನ್ನು ಉಳಿದಿತ್ತು. ಆಗ ವರುಣನ ದೂತರು ಅವನನ್ನು ಒಯ್ದರು. ಇದನ್ನು ಕೇಳಿ ಶ್ರೀಕೃಷ್ಣನು ವರುಣ ಲೋಕಕ್ಕೆ ಹೋದನು. ಅವನನ್ನು ನೋಡಿ ವರುಣನು ಪೂಜಿಸಿ, ವಿಜ್ಞಾಪಿಸಿಕೊಳ್ಳುವನು.

**ವರುಣ :** ದೇವ ! ನಿನ್ನ ದರ್ಶನದಿಂದ ನನ್ನ ದೇಹವು ಸಫಲವಾಯಿತು. ಮುಕ್ತಿಯು ನಿಶ್ಚಿತವಾಯಿತು. ಮೂಢನಾದ ನನ್ನ ಭೃತ್ಯನು ನಿನ್ನ ತಂದೆಯನ್ನು ತಂದನು. ಅವನ ಈ ಅಪರಾಧವನ್ನು ಕ್ಷಮಿಸು.

ಶ್ರೀಕೃಷ್ಣನು ನಂದಗೋಪನನ್ನು ಹಿಂದಕ್ಕೆ ಕರೆತಂದನು. ನಂದನು ವರುಣನ ಮಹಾಭಾಗ್ಯವನ್ನೂ, ಅವನು ತೋರಿದ ಹರಿಭಕ್ತಿಯನ್ನೂ ತನ್ನ ಬಂಧುಗಳಿಗೆ ಹೇಳಿಬಿಟ್ಟನು. ಇದನ್ನು ಕೇಳಿದ ಗೋಪಾಲರಿಗೆ ಶ್ರೀಕೃಷ್ಣನಲ್ಲಿ ಅಧಿಕ ಭಕ್ತಿ ಯುಂಟಾಯಿತು. 'ಬ್ರಹ್ಮಾದಿಗಳಿಗೆ ಸ್ವಾಮಿಯಾದ ಶ್ರೀಕೃಷ್ಣನು ನಮ್ಮ ಇಷ್ಟವನ್ನು ಪೂರೈಸುವುದಾದರೆ ವೈಕುಂಠವನ್ನು ತೋರಿಸಲಿ' ಎಂದು ಗೋಪಾಲರು ಮನಸ್ಸಿನಲ್ಲಿ ಅಂದುಕೊಂಡರು. ಶ್ರೀಕೃಷ್ಣನು ಯಮುನಾ ನದಿಯಲ್ಲಿರುವ ಬ್ರಹ್ಮಹ್ರದಕ್ಕೆ ಗೋಪಾಲ ರೆಲ್ಲರನ್ನೂ ಕರೆದುಕೊಂಡು ಹೋಗಿ ನೀರಿನಲ್ಲಿ ಮುಳುಗಿಯೆಂದು ಹೇಳಿ ವೈಕುಂಠ ವನ್ನೂ, ಅಲ್ಲಿರುವ ತನ್ನನ್ನೂ ಅವರಿಗೆ ತೋರಿಸಿದನು. ಅವರೆಲ್ಲರೂ ನೋಡಿ ಆನಂದಭರಿತರಾದರು.

**ಇಪ್ಪತ್ತೊಂಬತ್ತನೆಯ ಅಧ್ಯಾಯ ಮುಗಿದುದು**

**ರಾಸಕ್ರೀಡೆ :–** ಶ್ರೀಕೃಷ್ಣನು ಶರತ್ಕಾಲದ ಹುಣ್ಣಿಮೆಯ ದಿನ ಗೋಪಿಯರಿಗೆ ಅವರಿಷ್ಟವನ್ನು ಪೂರೈಸುವುದಾಗಿ ವಾಗ್ದಾನ ಮಾಡಿದ್ದನು. ಅದನ್ನು ನೆರವೇರಿಸಲು ಶ್ರೀಕೃಷ್ಣನು ಆ ರಾತ್ರಿ ವನಕ್ಕೆ ಬಂದು ಕೊಳಲೂದಿದನು. ಅದನ್ನು ಕೇಳಿದ ಗೋಪಿ ಯರು ಮಾಡುತ್ತಿದ್ದ ಮನೆಯ ಕೆಲಸವನ್ನು ಅಷ್ಟಕ್ಕೇ ಬಿಟ್ಟು, ಬಂಧುಜನರು ಅವ ರನ್ನು ತಡೆದರೂ ನಿರಾಕರಿಸಿ ಶ್ರೀಕೃಷ್ಣನ ಬಳಿಗೆ ಬಂದರು. ಯಾವ ಗೋಪಿಯರನ್ನು ಕೋಣೆಯಲ್ಲಿ ಕೂಡಿ ಬಾಗಿಲು ಮುಚ್ಚಿದರೋ ಅಂತಹವರು ತಮ್ಮ ಹೃದಯದಲ್ಲಿಯೇ ಇರುವ ಶ್ರೀಕೃಷ್ಣನನ್ನು ಧ್ಯಾನಿಸಿದರು. ಅವರಿಗೆ ಬಿಂಬದರುಶನವಾಯಿತು. ಗೋಪಿ ಯರಿಗೆ ಮಾತ್ರವೇ ಪರಮಾತ್ಮನನ್ನು ಜಾರಪತಿ ಅಂದರೆ ಪತಿಗಿಂತಲೂ ಅಧಿಕನೆಂದು ಉಪಾಸನೆ ಮಾಡುವ ಅಧಿಕಾರವಿರುವುದರಿಂದ ಬಿಂಬ ಮೂರುತಿಯನ್ನು ಹಾಗೆ

ಧ್ಯಾನಮಾಡಿ ನಾರಾಯಣನೊಡನೆ ಮಿಳಿತರಾಗಿ ದೇಹವನ್ನು ಬಿಟ್ಟು ಶ್ರೀಹರಿಯನ್ನು ಹೊಂದಿದರು.

**ಪರೀಕ್ಷಿತ್** :— ಮುನಿಗಳೇ ! ಆ ಗೋಪಿಯರು ಕೃಷ್ಣನನ್ನು ತಮ್ಮ ಪತಿಗಿಂತ ಮಾತ್ರ ಅಧಿಕನೆಂದು ತಿಳಿದಿದ್ದರೇ ಹೊರತು ಪರಿಪಕ್ವವಾದ ಬ್ರಹ್ಮಜ್ಞಾನವಿರಲಿಲ್ಲ. ನಿವೃತ್ತಿಮಾರ್ಗದಿಂದಷ್ಟೆ ಸಂಸಾರ ನಿವೃತ್ತಿ ? ಪ್ರವೃತ್ತಿ ಮಾರ್ಗದಲ್ಲಿಯೇ ಇದ್ದ ಈ ಗೋಪಿಯರಿಗೆ ಸಂಸಾರದ ನಿವೃತ್ತಿ ಹೇಗಾಯಿತು ಎಂಬುದನ್ನು ತಿಳಿಸಬೇಕು.

**ಶುಕ** :— ಶಿಶುಪಾಲನೆಂದು ಕರೆಯಲ್ಪಡುವ ಜಯನೆಂಬ ಸುಜೀವನು ಅಸುರಾವಿಷ್ಟನಾದರೂ ಮುಕ್ತಿಯನ್ನು ಹೊಂದಿದನು. (ಅವನ ಮುಕ್ತಿಗೆ ಕಾರಣವಾದ ಪಕ್ವಭಕ್ತಿಯು ಅವನ ಸ್ವರೂಪ ಭೂತವಾಗಿತ್ತು.) ಅಂದ ಮೇಲೆ ಗೋಪಿಯರಿಗೆ ಅಸುರಾವೇಶವಿರಲಿಲ್ಲ. ಅವರ ಸ್ವರೂಪವು ಹರಿಭಕ್ತಿಮಯವಾಗಿದ್ದಿತು. ಇದರ ಮೇಲೆ ಅವರು ಜ್ಞಾನಸಹಿತವಾದ ಕಾಮವುಳ್ಳವರಾದುದರಿಂದ ಅವರಿಗೆ ಮುಕ್ತಿಯಾಗಲು ಇನ್ನಾವುದು ಬೇಕು ? ಆದ್ದರಿಂದಲೇ ಆ ಗೋಪಿಯರು ದೇಹವನ್ನು ಬಿಟ್ಟು ಸ್ವರ್ಗಕ್ಕೆ ಹೋಗಿ ಕ್ಲೃಪ್ತ ಕಾಲದಲ್ಲಿ ಮುಕ್ತಿಯನ್ನು ಹೊಂದಿದರು. ಇದರಲ್ಲಿ ಆಶ್ಚರ್ಯವೇನೂ ಇಲ್ಲ. ಅವರಲ್ಲಿದ್ದ ಕಾಮವು ಇತರರಲ್ಲಿರುವ ದೋಷಯುಕ್ತ ಕಾಮದಂತೆ ಅಲ್ಲ. ಅದಕ್ಕೆ ಇಚ್ಛೆ ಎಂದು ಅರ್ಥ. ಭಕ್ತಿಯಿಂದಲೇ ಮೋಕ್ಷವಷ್ಟೆ ? ದ್ವೇಷಿಗಳಿಗೆ ಭಕ್ತಿಯು ಸುತರಾಂ ಇಲ್ಲ. ಆದ್ದರಿಂದ ಅವರಿಗೆ ಎಂದಿಗೂ ಮೋಕ್ಷವಿಲ್ಲ. ಗೋಪಿಯರಾದರೋ ಇಚ್ಛೆಯೆಂಬ ಕಾಮವುಳ್ಳ ಭಕ್ತಿಸ್ವರೂಪರಾದ್ದರಿಂದ ಅವರಿಗೆ ಮುಕ್ತಿಯು ಆಯಿತು. ಕರುಣಾಳುವಾದ ಶ್ರೀಹರಿಯು ಭಕ್ತರನ್ನು ಅನುಗ್ರಹಿಸುವ ವಿಷಯದಲ್ಲಿ ಆಶ್ಚರ್ಯಪಡಲೇಬೇಡ. ಮುಂದಿನ ಕಥೆಯನ್ನು ಕೇಳು.

**ಶ್ರೀಕೃಷ್ಣ** :— (ಕೃಷ್ಣನು ತನ್ನಲ್ಲಿ ಗೋಪಿಯರಿಗಿರುವ ಅಸಾಧಾರಣ ಭಕ್ತಿಯನ್ನು ಅವರ ಬಾಯಿಂದಲೇ ಹೊರಡಿಸಬೇಕೆಂದು ಮಾತಾಡುತ್ತಾನೆ :-) ಭಾಗ್ಯವತಿಯರೇ ! ನಿಮಗೆ ಸುಖಾಗಮನ. ನಿಮ್ಮ ಅಭೀಷ್ಟವನ್ನು ಪೂರೈಸುವುದು ನನ್ನ ಕರ್ತವ್ಯ. ಗೋಕುಲದಲ್ಲಿ ಎಲ್ಲರೂ ಕ್ಷೇಮವಷ್ಟೆ ? ನೀವು ಈ ರಾತ್ರಿಯ ವೇಳೆಯಲ್ಲಿ ಇಲ್ಲಿಗೆ ಬರಲು ಕಾರಣವೇನು ? ಇದು ಪಿಶಾಚಿಗಳು ಸಂಚರಿಸುವ ಕಾಲ. ಆದ್ದರಿಂದ ನೀವೆಲ್ಲ ಗೋಕುಲಕ್ಕೆ ಹಿಂತಿರುಗಿ ಹೋಗಿರಿ. ನಿಮ್ಮನ್ನು ಕಾಣದೆ ನಿಮ್ಮವರು ಭಯಪಡುತ್ತಿರುವರು. ಈ ಸಂನಿವೇಶವನ್ನು ನೋಡಿ ಆನಂದಪಡಬೇಕೆಂದು ಬಂದಿರುವಿರೇನು ? ನೋಡಿದ್ದಾಯಿತಷ್ಟೆ ? ಹಿಂತಿರುಗಿ ಹೋಗಿಬಿಡಿ. ನನ್ನಲ್ಲಿರುವ ಭಕ್ತಿಯಿಂದ ಬಂದಿರುವಿರೇನು ? ಹಾಗಾದರೆ ! ನನಗೆ ಪ್ರೀತಿಯಾಗುವ ಕೆಲಸ ಮಾಡಿರಿ. ಅದೇ

ನೆಂದರೆ ನಿಮ್ಮ ನಿಮ್ಮ ಪತಿಗಳಲ್ಲಿಯೂ ನಾನಿರುವೆನಾದುದರಿಂದ ಅವರನ್ನು ಸೇವಿಸಿರಿ. ಶ್ರೇಯಸ್ಸಾಗುವುದು. ಹಾಗಲ್ಲ. "ನೀನೇ ನಮಗೆ ಮುಖ್ಯಪತಿ. ನಿನ್ನ ಸೇವೆಯೇ ಪತಿಯ ಸೇವೆಗಿಂತ ಮುಖ್ಯ" ಎನ್ನುವಿರೇನು ? ನಿಜ. ಹಾಗಿದ್ದರೂ ನನ್ನ ಕಥಾ ಶ್ರವಣ, ದರ್ಶನ, ರೂಪಚಿಂತನೆ ಮತ್ತು ನನ್ನ ನಾಮ ಸಂಕೀರ್ತನೆ ಇವುಗಳಿಂದ ನನ್ನಲ್ಲಿ ಭಕ್ತಿಯು ವೃದ್ಧಿಯಾಗುವಂತೆ ನನ್ನ ಅಂಗಸಂಗದಿಂದ ಭಕ್ತಿಯು ವೃದ್ಧಿಯಾಗುವುದಿಲ್ಲ. ಮನೆಗೆ ಹೋಗಿ ಅಲ್ಲಿದ್ದುಕೊಂಡೇ ಭಕ್ತಿಯಿಂದ ಶ್ರವಣಾದಿಗಳನ್ನು ಮಾಡಬಹುದು.

**ಪ್ರಶ್ನೆ :–** ಕೃಷ್ಣನು ಹೀಗೇಕೆ ಮಾತಾಡಿದನು ?

**ಉತ್ತರ :–** ಗೋಪಿಯರು ಅಪರೋಕ್ಷಜ್ಞಾನಿಗಳಾದ ಅಪ್ಸರೆಯರ ಅವತಾರ. ಅವರಿಗೆ ಪರಪುರುಷನನ್ನು ಹೊಂದ ಬೇಕೆಂಬ ಕಾಮವೇ ಅಂದರೆ ಇಚ್ಛೆಯೇ ಇಲ್ಲ. ಆದರೆ ಪರಮಪುರುಷನಾದ ಶ್ರೀಹರಿಯನ್ನು ಮಾತ್ರವೇ ಹೊಂದಬೇಕೆಂಬ ಕಾಮವಿರುವುದು. ಅದು ಭೋಗಿಸಿಯೇ ಕಳೆದು ಕೊಳ್ಳಬೇಕಾದ ಪ್ರಾರಬ್ಧಕರ್ಮವಾಗಿದೆ. ಆದ್ದರಿಂದಲೇ 'ಉಪನಯನಾತ್ಪೂರ್ವದಲ್ಲಿಯೇ ಶ್ರೀಕೃಷ್ಣನ ಅಂಗಸಂಗವನ್ನು ಹೊಂದಬೇಕೆಂದು ಬ್ರಹ್ಮದೇವರಿಂದ ವರವನ್ನು ಪಡೆದಿದ್ದರು. ಅದನ್ನು ಪೂರ್ಣಮಾಡೆಂದು ಗೋಪಿಯರು ಬಾಯಿಂದ ಹೇಳಲಿ ಎಂದೇ ಶ್ರೀಕೃಷ್ಣನು ಹೀಗೆ ಮಾತಾಡಿದನು.

**ಗೋಪಿಯರು :–** (ಕೃಷ್ಣನ ಮಾತನ್ನು ಕೇಳಿ ಅತ್ತುಬಿಟ್ಟರು.) ವಿಭೋ! ಮನೆಮಂದಿಯನ್ನು ಬಿಟ್ಟು ನಿನ್ನ ಪಾದಸೇವೆಗೆ ಬಂದ ನಮ್ಮ ಕೊರಳನ್ನು ಕತ್ತರಿಸುವಂತಹ ಮಾತಾಡಬೇಡ. ಪತಿಸೇವೆಯೇ ಮುಖ್ಯಧರ್ಮವೆಂದು ಹೇಳಿದಿ ನಿಜ. ನಮ್ಮ ಪಿತ್ರಾದಿಗಳಿಗೆ ನೀನೇ ಜಾಮಾತೃಸ್ಥಾನೀಯನು ನಮಗೆ ನೀನೇ ಪತಿಯು. ನಿನ್ನ ಸೇವೆಗೇ ಬಂದಿರುವೆವು. ನೀನೇ ಸಾರಜ್ಞರಿಗೆ ಅನಿಮಿತ್ತ ಬಂಧುವು. ಹೀಗೆ ನೀನೇ ನಮಗೆ (ಜಾರಪತಿ) ಮುಖ್ಯಪತಿಯಾಗಿರುವಾಗ ಅಪ್ರಿಯರೂ, ಪೀಡೆಯನ್ನುಂಟುಮಾಡುವವರೂ ಆದ ಪತಿಪುತ್ರಾದಿಗಳಿಂದ ಪ್ರಯೋಜನವೇನು ? ನಮ್ಮ ಆಶಾಭಂಗಮಾಡಬೇಡ. ಮನೆಗೆ ಹೋಗಿರೆಂದು ನೀನು ಹೇಳಿದೆ. ನಮ್ಮ ಚಿತ್ತವನ್ನು ನೀನು ಸೆಳೆದುಕೊಂಡಿರುವೆ. ಅದು ನಿನ್ನನ್ನು ಹೊರತು ಮನೆಮಂದಿ ಯಾವುದನ್ನೂ ಸ್ಮರಿಸಲಾರದು. ಕೈಕಾಲುಗಳೂ ನಿನ್ನ ಸಾನ್ನಿಧ್ಯವನ್ನು ಬಿಟ್ಟು ಅನ್ಯತ್ರ ಚಲಿಸಲಾರವು. ನಮ್ಮ ಕಾಮಾಗ್ನಿಯನ್ನು ನಿನ್ನ ಅಧರಾಮೃತಸೇಚನೆಯಿಂದ ನಂದಿಸು. ಇಲ್ಲವಾದರೆ ವಿರಹಾಗ್ನಿಯಿಂದ ನಮ್ಮ ದೇಹವು ದಗ್ಧವಾಗಿ ಹೋಗುವುದು. ಲಕ್ಷ್ಮೀದೇವಿಗೆ ಉತ್ಸವಪ್ರದವಾದ ನಿನ್ನ ಅಂಗಾಲನ್ನು ನಾವು ಸ್ಪರ್ಶಮಾಡಿದಾಗಿನಿಂದ ಅನ್ಯರ ಇದಿರಿಗೆ ನಿಲ್ಲಲು ಅಶಕ್ತರಾಗಿದ್ದೇವೆ. ಲಕ್ಷ್ಮಿಯು ನಿನ್ನ ವಕ್ಷಸ್ಥಳದಲ್ಲಿ ಸ್ಥಾನ

ವನ್ನು ಪಡೆದಿದ್ದರೂ ನಿನ್ನ ಪಾದರೇಣುವನ್ನು ಅಪೇಕ್ಷಿಸುವಳು. ಇಂತಹ ನಿನ್ನ ಪಾದ ವನ್ನು ಹೊಂದಿರುವ ನಮ್ಮಲ್ಲಿ ಪ್ರಸನ್ನನಾಗು. ನಿನ್ನ ಆಕಾರವನ್ನು ನೋಡಿ, ನಿನ್ನ ದಾಸಿಯರಾಗಿ, ನಿನ್ನನ್ನೇ ಕಾಮಿಸುತ್ತಿರುವೆವು. ನಿನ್ನ ಮುರಳಿಯ ಗಾನವನ್ನು ಕೇಳಿ ಮೋಹಿತಳಾಗಿರುವ ಯಾವ (ನಮ್ಮಂತಹ) ಸ್ತ್ರೀಯು ತಾನೇ ಸನ್ಮಾರ್ಗವನ್ನು (ವಿಧಿನಿಷೇಧ ವಿನಾಯಿತಿ ಇರುವಂತಹ ಜೀವರು ಈ ಲೋಕದ ಮರ್ಯಾದೆಯನ್ನು ಮೀರದಿರುವಳು ? ಹೀಗಿರುವಾಗ ನಿನ್ನ ರೂಪವನ್ನು ಸಾಕ್ಷಾತ್ತಾಗಿ ನೋಡುತ್ತಿರುವ ನಾವು ಮೋಹಿತರಾಗಿ ನಿನ್ನ ಬೇಡುತ್ತಿರುವುದು ಆಶ್ಚರ್ಯವೇನೂ ಇಲ್ಲ. (ಜಾರಪತಿ ಯೆಂದು ಉಪಾಸನೆ ಮಾಡುವ ಅಧಿಕಾರಿಗಳು ನಾವು ಎಂಬುದರ ಅಭಿಪ್ರಾಯವಿದು.) ನಮ್ಮ ತಲೆಯ ಮೇಲೆ, ನಮ್ಮ ಸ್ತನಗಳ ಮೇಲೆ ನಿನ್ನ ಹಸ್ತವನ್ನಿಡು.

(ಸ್ವರಮಣನೂ, ಯೋಗೇಶ್ವರನೂ ಆಗಿರುವುದರಿಂದ ಶ್ರೀಕೃಷ್ಣನು ತಾನೊಬ್ಬನೇ ಆಗಿದ್ದರೂ ಬಹುಮಂದಿ ಸ್ತ್ರೀಯರೊಡನೆ ಕ್ರೀಡಿಸಿದನು. ಆನಂದ ಪೂರ್ಣನಾದುದರಿಂದ ಶ್ರೀಹರಿಗೆ ರಮೆಯೊಡನೆಯೂ ರತಿಗಾಗಿ ಸಂಪರ್ಕವಿಲ್ಲ. ರಮೆಯಲ್ಲಿರುವ ರಮಾನಾಮಕ ತನ್ನ ಬಿಂಬರೂಪದಲ್ಲಿ ತಾನು ರಮಿಸುವನು. ಆದ್ದರಿಂದ ಯಾವ ಗೋಪಿಯಲ್ಲಿ ರಮಿಸಿದನೆಂದು ಹೇಳುತ್ತಾರೆಯೋ ಅಲ್ಲಿ ರಮೆಯು ಇದ್ದೇ ಇರಬೇಕು. ಅವಳಲ್ಲಿನ ಬಿಂಬರೂಪವನ್ನು ರಮಿಸಿದನೆಂದೇ ಅರ್ಥ. ಗೋಪಿಯರಿಗೆ ಶ್ರೀಹರಿಯ ನೇರ ಸಂಪರ್ಕವಿಲ್ಲವಾದರೂ ಪರಂಪರಾ ಸಂಪರ್ಕದಿಂದ ರತಿಯ ಸುಖವನ್ನು ಆ ಗೋಪಿಯು ಹೊಂದುವಂತೆ ಹರಿಯು ಕರುಣಿಸುವನು. ಹೀಗಿರುವುದರಿಂದ ಕೃಷ್ಣನಿಗಾಗಲಿ ಗೋಪಿಯರಿಗಾಗಲಿ ಯಾವ ದೋಷವೂ ಇರುವುದಿಲ್ಲ)

ಶ್ರೀಕೃಷ್ಣನು ತಮ್ಮಲ್ಲಿ ತೋರಿದ ಗೌರವ ಪ್ರೇಮ, ಸಲಿಗೆಗಳಿಂದ ಗೋಪಿ ಯರಿಗೆ ತಮಗಿಂತ ಉತ್ತಮರು ಯಾರೂ ಇಲ್ಲವೆಂಬ ಗರ್ವವು ಬಂದಿತು. ಅದನ್ನು ಹೋಗಲಾಡಿಸಲು ಶ್ರೀಕೃಷ್ಣನು ಕಣ್ಮರೆಯಾದನು.

## ಇಪ್ಪತ್ತೊಂಬತ್ತನೆಯ ಅಧ್ಯಾಯ ಮುಗಿದುದು

ಗೋಪಿಯರು ಕೃಷ್ಣನನ್ನು ಕಾಣದೆ ಪರಿತಪಿಸಿದರು. ಆ ವನದಲ್ಲಿ ಅವನನ್ನು ಹುಡುಕುತ್ತಾ ಹೊರಟರು. ಅವರಿಗಾಗಿರುವ ದುಃಖವೆಷ್ಟಿದೆಯೆಂದರೆ ಕಂಡಕಂಡ ಅರಳಿ, ಆಲ ಮುಂತಾದ ಮರಗಳನ್ನೂ, ಜಿಂಕೆಗಳನ್ನೂ ಕುರಿತು 'ಕೃಷ್ಣನನ್ನು ಕಂಡಿರಾ' ಎಂದು ಕೇಳುತ್ತ ಕಾಡಿನಲ್ಲಿ ಅಲೆದರು. ಒಂದು ಕಡೆ ಕೃಷ್ಣ ಮತ್ತು ಗೋಪಿಯ ಹೆಜ್ಜೆಗಳ ಗುರುತು ಕಾಣಿಸಿದುವು. ಅವರಿಗೆ ಆ ಗೋಪಿಯಲ್ಲಿ ಅಸೂಯೆ ಹುಟ್ಟಿತು.

ಆ ಹೆಜ್ಜೆಯ ಗುರುತುಗಳನ್ನೇ ಅನುಸರಿಸಿ ಮುಂದೆ ಹೋಗುತ್ತಿರುವಾಗ ಆ ಗೋಪಿಯು ಅಳುತ್ತಾ ಕುಳಿತಿರುವುದನ್ನು ನೋಡಿದರು. ಏಕೆ ಎಂದು ಕೇಳಲಾಗಿ ಆ ಗೋಪಿಯು ಹೇಳುತ್ತಾಳೆ. "ಕೃಷ್ಣನು ನನ್ನನ್ನು ಕರೆದುಕೊಂಡು ಬಂದ. ನನ್ನಲ್ಲಿರುವ ಪ್ರೀತಿ ಕೃಷ್ಣನಿಗೆ ಇನ್ನಾರಲ್ಲಿಯೂ ಇಲ್ಲವೆಂದು ತಿಳಿದು ಗರ್ವದಿಂದ 'ಕೃಷ್ಣಾ ! ನಾನು ನಡೆಯಲಾರೆನು. ನನ್ನ ಹೊತ್ತುಕೋ ಎಂದೆ, ಕೃಷ್ಣನು ಕುಳಿತನು. ನಾನು ಅವನ ಹೆಗಲ ಮೇಲೆ ಕೂಡಬೇಕೆನ್ನುವಷ್ಟರಲ್ಲಿ ಅವನು ಕಣ್ಮರೆಯಾದನು" ಎಂದು ಹೇಳಿದಳು. ಇದನ್ನು ಕೇಳಿ ಗೋಪಿಯರೆಲ್ಲರೂ, ಶ್ರೀಕೃಷ್ಣನು ಗರ್ವಿಗಳಿಗೆ ಒಲಿಯುವವನಲ್ಲ ಎಂಬ ತ್ತ್ವವನ್ನು ತಿಳಿದರು. ಆ ಗೋಪಿಯನ್ನೂ ಸಂಗಡ ಕರೆದುಕೊಂಡು ಕೃಷ್ಣನನ್ನು ಹುಡುಕುತ್ತ ಹೊರಟರು. ಶ್ರೀಕೃಷ್ಣನು ಈ ಹೆಣ್ಣುಮಕ್ಕಳು ಹಿಂತಿರುಗಲಿ ಎಂಬ ಉದ್ದಿಶ್ಯದಿಂದ ಚಂದ್ರನು ಮುಳುಗಿದಂತೆ ಮಾಡಿದನು. ಕತ್ತಲಾಯಿತೆಂದು ಗಾಬರಿಯಾಗಿ ಗೋಪಿಯರು ಮುಂದೆ ಹೋಗದೆ ಹಿಂತಿರುಗಿ ಮೊದಲಿದ್ದ ಮರಳಿನ ಬಳಿಗೆ ಬಂದು ಕೃಷ್ಣನ ಗುಣಗಾನ ಮಾಡಿದರು.

**ಇಪ್ಪತ್ತೆಂಟನೆಯ ಅಧ್ಯಾಯ ಮುಗಿದುದು**

## ಗೋಪಿ ಗೀತೆ

**ಶ್ಲೋಕ ||**

**ಜಯತಿ ತೇಽಧಿಕಂ ಜನ್ಮನಾ ವ್ರಜಃ ಶ್ರಯತ ಇಂದಿರಾ ಸಾಧು ತತ್ರ ಹಿ |**
**ದಯಿತ ದೃಶ್ಯತಾಂ ತ್ವಾ ದಿದೃಕ್ಷತಾಂ ತ್ವಯಿ ಗತಾಸವಃ ತ್ವಾ ವಿಚಿನ್ವತೇ||**

ಅರ್ಥ :— ಪ್ರಿಯತಮನೇ ! ನೀನಿಲ್ಲಿ ಪ್ರಕಟನಾದ್ದರಿಂದ ಗೋಕುಲವು ಸರ್ವಶ್ರೇಷ್ಠವಾಯಿತು. ಆಗಿನಿಂದ ಇಂದಿರಾದೇವಿಯೂ ಇಲ್ಲಿ ವಾಸಮಾಡು ವಂತಾಯಿತು. ನಿನ್ನ ದರ್ಶನಾಕಾಂಕ್ಷಿಗಳು ನಾವಾದುದರಿಂದ ಪ್ರತ್ಯಕ್ಷನಾಗು !

ಮುಗುಳು ನಗೆಯಿಂದಲೇ ನಿನ್ನವರ ಗರ್ವವನ್ನು ನಾಶಮಾಡತಕ್ಕ ಸ್ವಾಮಿಯು ನೀನು. ಸಕಲ ಜನ್ಮಗಳಲ್ಲಿಯೂ ನಾವು ನಿನ್ನ ದಾಸಿಯರು. (ಅಮುಖ್ಯ) ಪತ್ಯಾದಿ ಗಳನ್ನು ಬಿಟ್ಟು, ಅರ್ಧರಾತ್ರಿಯಲ್ಲಿ ಕಾಡಿಗೆ ಬಂದಿರುವೆವು, ಇದನ್ನು ಯೋಚಿಸಿ ದರ್ಶನವನ್ನು ಕೊಟ್ಟು ಕಾಪಾಡು.

ನಾವು ಕ್ರೀತದಾಸಿಯರು. ಈ ವೇಳೆಯಲ್ಲಿ ನಮ್ಮನ್ನು ತ್ಯಜಿಸಿರುವುದು ಕೊರಳನ್ನು ಕತ್ತರಿಸಿದರೆ ಆಗುವ ವ್ಯಥೆಗಿಂತಲೂ ಅಧಿಕವಾದ ವ್ಯಥೆ.

ಹಿಂದೆ ವಿಷಜಲಪಾನ, ತೃಣಾವರ್ತನ ಹಿಂಸೆ, ಮಳೆಗಾಳಿ ಇವೇ ಮೊದಲಾದ ಸಕಲ ಬಗೆಯ ವಿಪತ್ತಿನಿಂದಲೂ ನೀನು ನಮ್ಮನ್ನು ತಪ್ಪಿಸಿ ಕಾಪಾಡಿದೆ. ಅದರಂತೆ ಈಗಲೂ ಕಾಪಾಡು.

ನೀನು ಯಶೋದೆಯ ಮಗನಲ್ಲ. ವಿರಿಂಚನ ಗುರುವು. ಶರಣು ಬಂದವರಿಗೆ ಆಶ್ರಯವನ್ನು ಕೊಡತಕ್ಕವನು. ಅಪೇಕ್ಷಿತಪ್ರದವಾದ ನಿನ್ನ ಹಸ್ತವನ್ನು ನಮ್ಮ ತಲೆಯ ಮೇಲಿಡು !

ಜ್ಞಾನಿಗಳಿಗಿಷ್ಟವೂ, ಮನೋಹರವೂ ಆದ ಮಾತುಗಳಿಂದ ಸಮಾಧಾನ ಮಾಡು. ಆಶ್ರಿತರ ಪಾಪಗಳನ್ನು ಕಳೆಯತಕ್ಕುದೂ, ಕಾಲಿಯನ ತಲೆಯನ್ನು ಮೆಟ್ಟಿದುದೂ ಆದ ನಿನ್ನ ಪಾದವನ್ನು ನಮ್ಮ ಸ್ತನಗಳ ಮೇಲಿಡು.

ಅಧರಾಮೃತದಿಂದ ನಿನ್ನ ದಾಸಿಯರನ್ನು ಬದುಕಿಸು. ಸಂಸಾರದುಃಖವನ್ನು ಅನುಭವಿಸುತ್ತಿರುವವರನ್ನು ಬದುಕಿಸುವುದೂ, ಬ್ರಹ್ಮಾದಿ ಸ್ತುತ್ಯವೂ, ಪಾಪಗಳನ್ನೆಲ್ಲ ಪರಿಹರಿಸಬಲ್ಲುದೂ, ಶ್ರವಣ ಮಾತ್ರದಿಂದ ಮಂಗಳಪ್ರದವೂ ಆದ ನಿನ್ನ ಕಥಾಮೃತ ವನ್ನು ಪಾನಮಾಡತಕ್ಕ ನಿನ್ನ ಭಕ್ತರಾದವರೇ ಬಹಳ ದುಃಖವನ್ನು ಪರಿಹರಿಸಬಲ್ಲರು.

ಕಥಾಮೃತಪಾನದಿಂದಲೇ ತೃಪ್ತರಾಗಿರಿ—ಎಂದು ಕೇಳುವೆಯಾ ? ನಿನ್ನ ಮುಗುಳುನಗೆ ನೋಟ, ಕ್ರೀಡೆ, ರಹಸ್ಯಸಂಭಾಷಣೆ ಇವೆಲ್ಲ ನಮ್ಮ ಮನಸ್ಸನ್ನು ಕಲಗಿಸಿವೆ. ಆದುದರಿಂದ ನಿನ್ನ ಅಧರಾಮೃತಪಾನಪ್ರಾರ್ಥನೆಯನ್ನು ಮಾಡುತ್ತಿ ರುವೆವು.

ನೀನು ವನಸಂಚಾರವನ್ನು ಮಾಡುತ್ತಿರುವಾಗ ನಿನ್ನ ಕೋಮಲವಾದ ಪಾದಕ್ಕೆ ನೋವಾಗುವುದೆಂದು ಕಳವಳಿಸುತ್ತಿರುವೆವು. ಇದರಿಂದ ನೀನು ನಾರಾಯಣನೋ ಅಥವಾ ಬೇರೆಯೋ ಎಂದು ನಮ್ಮ ಮನಸ್ಸು ಸಂದೇಹಿಸುತ್ತಿದೆ. ನಿನ್ನ ಚರಿತ್ರೆಯು ಜ್ಞಾನಿಗಳಿಗೇ ದುರ್ಬೋಧಕವಾಗಿರುವಾಗ ನಾವು ನಿನ್ನನ್ನು ಹೀಗೆ ಅಳೆಯುವುದು ಆಶ್ಚರ್ಯವೆ ?

ಸಾಯಂಕಾಲದಲ್ಲಿ ಮಂದೆಯೊಡನೆ ಗೋಕುಲಕ್ಕೆ ಹಿಂತಿರುಗುವಾಗ ನಿನ್ನಮುಖ ದರ್ಶನದಿಂದ ಕಾಮವನ್ನು ಉಂಟುಮಾಡುತ್ತಿರುವೆ.

ಶರಣಾಗತರ ಅಭೀಷ್ಟಪ್ರದವೂ, ಬ್ರಹ್ಮಾದಿಗಳಿಂದ ಆರಾಧಿತವೂ, ಸುಖತಮವೂ ಆದ ನಿನ್ನ ಪಾದಗಳನ್ನು ನಮ್ಮ ಸ್ತನಗಳ ಮೇಲೆ ಸ್ಥಾಪಿಸು. ನಿನ್ನ ಅಧರಾಮೃತವನ್ನು ನಮಗೆ ಕರುಣಿಸು !

ಹಗಲು ನಿನ್ನನ್ನು ಕಾಣದೆ ಒಂದು ಕ್ಷಣವು ಯುಗವಾಗುವುದು. ಮನೆಗೆ ಬಂದ ವೇಳೆ ನಿನ್ನ ದರ್ಶನದಿಂದ ನಿಶ್ಚೇಷ್ಟರಾಗುವೆವು.

ನಿನ್ನ ಸಂಭಾಷಣೆ, ಸುಂದರಮುಖ, ನೋಟ, ವಕ್ಷಸ್ಥಳ ಇವುಗಳನ್ನು ನೋಡಿ ವರ್ಣಿಸಿ ನಮ್ಮ ಮನಸ್ಸು ಅತಿಶಯವಾದ ಆಶೆಯಿಂದ ಮೋಹಗೊಂಡಿದೆ.

ನಿನ್ನ ಅವತಾರವು ಗೋಪಾಲರ ದುಃಖವನ್ನು ಪರಿಹರಿಸುವುದು. ಆದುದರಿಂದ ನಿನ್ನ ದರ್ಶನಾಕಾಂಕ್ಷಿಗಳಾದ ನಮಗೆ ಕಾಣಿಸಿಕೊ ! ಜಗನ್ಮಂಗಳಕರವಾದ ನಿನ್ನ ಅವತಾರರೂಪವು ಸಜ್ಜನರ ಮನಶ್ಚಿಂತೆಯನ್ನು ನಿರ್ಮೂಲಮಾಡತಕ್ಕುದ್ದು. ಆದುದರಿಂದ ನಿನ್ನವರೇ ಆದ ನಮ್ಮ ಅಭೀಷ್ಟಗಳನ್ನು ಪೂರ್ಣಮಾಡುವುದು ನಿನ್ನ ಕರ್ತವ್ಯ.

### ಇಪ್ಪತ್ತೊಂಭತ್ತನೆಯ ಅಧ್ಯಾಯ ಮುಗಿದುದು

ಶ್ರೀಕೃಷ್ಣನು ಗೋಪಿಯರ ಭಕ್ತಿಗೆ ಮೆಚ್ಚಿ ದರ್ಶನಕೊಟ್ಟನು. ಅವರು ಅತ್ಯಂತ ಸಂತುಷ್ಟರಾಗಿ ಆತನಿಗೆ ಉಪಚಾರಮಾಡಿದರು. ಶ್ರೀಕೃಷ್ಣನು ಬೆಳದಿಂಗಳಲ್ಲಿ ಗೋಪಿಯರೊಡನೆ ವಿರಾಜಿಸಿದನು.

**ಗೋಪಿಯರು :** ಲೋಕದಲ್ಲಿ ಸೇವಾನುಸಾರವಾಗಿ ಫಲವನ್ನು ಕೊಡ ತಕ್ಕವರು ಕೆಲವರು. ಸೇವಿಸದೇ ಇದ್ದರೂ ಫಲ ಕೊಡತಕ್ಕವರು ಕೆಲವರು. ಸೇವಿಸುವವರಿಗೂ, ಸೇವಿಸದೇ ಇರುವವರಿಗೂ ಫಲವನ್ನು ಕೊಡದೆ ಉದಾಸೀನ ರಾಗಿರುವವರು ಕೆಲವರು. ಕೃಷ್ಣನೇ ! ಇವರಲ್ಲಿ ಶ್ರೇಷ್ಠರು ಯಾರು ?

**ಕೃಷ್ಣ :** ಉಪಕಾರಮಾಡಿದವರಿಗೆ ಪ್ರತ್ಯುಪಕಾರಮಾಡುವವರಲ್ಲಿ ಸ್ವಾರ್ಥ ವಿದೆ. ಅನಿಮಿತ್ತ ಸ್ನೇಹವಿಲ್ಲ. ತಂದೆಯು ಮಕ್ಕಳಿಂದ ಸೇವೆಯನ್ನು ನಿರೀಕ್ಷಿಸದೆ ತಾನಾಗಿ ಮೇಲೆಬಿದ್ದು ಉಪಕರಿಸುವನು. ಅವನಂತೆ ಪ್ರಾಣಿಗಳಲ್ಲಿ ಕನಿಕರವುಳ್ಳವರು ತಮ್ಮನ್ನು ಸೇವಿಸದೇ ಇದ್ದರೂ ಉಪಕಾರಮಾಡುವ ಸಂಪ್ರಜ್ಞಾತ ತಪೋನಿಧಿಗಳಲ್ಲಿ ನಿರ್ದೋಷವೂ ಅನಿಮಿತ್ತವೂ ಆದ ಪ್ರೇಮವಿರುವುದು. ಇವರು ಉತ್ತಮರು. ಸೇವೆ ಮಾಡಿದರೂ, ಮಾಡದೇ ಇದ್ದರೂ ಉದಾಸೀನರಾಗಿರುವವರಲ್ಲಿ ಎರಡು ಬಗೆ. ಅಸಂಪ್ರಜ್ಞಾತ ಸಮಾಧಿಯಲ್ಲಿ ಮುಳುಗಿರುವವರು ಸ್ವಪ್ರಯೋಜನರಹಿತರಾದ್ದರಿಂದ ಸೇವಿಸುವವರನ್ನು ಸತ್ಕರಿಸುವುದಿಲ್ಲ. ಅವರು ಆತ್ಮಾರಾಮರು. ಬಹಿರ್ವ್ಯಾಪಾರ ಶೂನ್ಯರು. ಪರಮಾತ್ಮನ ಜ್ಞಾನವಿರುವುದರಿಂದ ಆನಂದವನ್ನು ಹೊಂದಿರುವರು. ಯಾರು ಸೇವಿಸಿದರೇನು ? ಬಿಟ್ಟರೇನು ? ಅವರ ಕಡೆ ಗಮನವೇ ಇಲ್ಲದವರಾಗಿ

ಉದಾಸೀನರಾಗಿರುವರು. ಎರಡನೆಯ ಬಗೆಯವರು ಕೃತಘ್ನರು. ಅವರು ದೇವಾದಿ ಗುರುಗಳಿಗೆ ಹವಿಸ್ಸನ್ನು ಕೊಡದೆ ದ್ರೋಹಮಾಡುತ್ತಾರೆ.

ನಾನು ಈ ಯಾವ ಗುಂಪಿಗೂ ಸೇರಿದವನಲ್ಲ. ಈಶಕೋಟಿಗೆ ಸೇರಿದವನು. ಫಲಾಪೇಕ್ಷೆಯಿಂದ ಸೇವಿಸುವವರನ್ನೂ. ನಿಷ್ಕಾಮರನ್ನೂ ನಾನು ಸತ್ಕರಿಸಿ ಅವರ ಇಚ್ಛೆಯಂತೆ ಫಲವನ್ನು ಕೊಡುವವನಲ್ಲ. ಅವರಿಂದ ನನಗೆ ಯಾವ ಪ್ರಯೋಜನವೂ ಇಲ್ಲ. ನನ್ನಿಂದ ಅವರಿಗೇ ಪ್ರಯೋಜನ. ಯೋಗ್ಯರಿಗೆ ಅವರವರ ಸೇವಾನುಸಾರ ಫಲವು ದೊರೆಯುವುದು. ಗೋಪಿಯರೇ ! ಲೌಕಿಕವೈದಿಕಕರ್ಮಗಳನ್ನೆಲ್ಲ ನನಗೆ ಅರ್ಪಿಸಿ, ನನ್ನನ್ನು ಉಪಾಸಿಸಿರಿ. ಇದಿರಿಗೆ ಇದ್ದರೆ ಆ ವ್ಯಕ್ತಿಯಲ್ಲಿ ಅನಾದರವುಂಟಾಗುವುದು. ಆದ್ದರಿಂದ ನಾನು ಕಣ್ಮರೆಯಾದೆ. ಅದಕ್ಕಾಗಿ ನೀವು ಅಸೂಯೆಪಡಬಾರದು. ನಿಷ್ಕಾಮವಾಗಿ ನನ್ನನ್ನು ಭಜಿಸುತ್ತಿರುವಿರಿ. ಅದಕ್ಕೆ ತಕ್ಕ ಪ್ರತಿ ಉಪಕಾರವನ್ನು ದೇವತೆಗಳ ಆಯುಃಕಾಲ ಪೂರ್ತಿ ಮಾಡಿದರೂ ನಿಮ್ಮ ಸಾಲವನ್ನು ತೀರಿಸಲಾರೆನು. ನಿಮ್ಮಲ್ಲಿ ಮಾತ್ರವೇ ವಿಶೇಷಾನುಗ್ರಹವೆಂದಲ್ಲ. ನನ್ನಲ್ಲಿ ಭಕ್ತಿಮಾಡುವ ಪುರುಷನಾಗಲೀ, ಸ್ತ್ರೀಯೇ ಆಗಲೀ ಅಭಿಮಾನವನ್ನು ಬಿಟ್ಟು ಸೇವಿಸಿದರೆ ಅವರು ಮುಕ್ತಿಯನ್ನು ಹೊಂದುವರು.

## ಮೂವತ್ತನೆಯ ಅಧ್ಯಾಯ ಮುಗಿದುದು

ಶೃಂಗಾರರಸಭರಿತವಾದ ಉತ್ಸವವು (ರಾಸಕ್ರೀಡೆಯು) ಶ್ರೀಕೃಷ್ಣನಿಂದಾರಂಭವಾಯಿತು. ಪುಷ್ಪವೃಷ್ಟಿಯಾಯಿತು. ಗಂಧರ್ವರು ಗಾನಮಾಡಿದರು. ಗೋಪಿಯರು ಒಬ್ಬರಿಗಿಂತ ಒಬ್ಬರು ಸ್ಪರ್ಧೆಯಿಂದ ಗಾನ ಮಾಡಿದರು. ಹರಿಯನ್ನು ಆಲಿಂಗಿಸಿದರು. ಸುರತಕ್ರೀಡೆಯಿಂದ ಬಳಲಿದವರನ್ನು ಶ್ರೀ ಕೃಷ್ಣನು ಉಪಚರಿಸಿದನು. ಜಲಕ್ರೀಡೆ ಯಾಡಿ ಸಂತೋಷಭರಿತರಾದರು. ಹೀಗೆ ಅವರು ಆ ರಾತ್ರಿಯನ್ನು ವೈಭವದಿಂದ ಕಳೆಯುವ ಹಾಗೆ ಶ್ರೀಕೃಷ್ಣನು ಅನುಗ್ರಹಿಸಿದನು.

**ಪರೀಕ್ಷಿತ್** :– ಮುನಿಗಳೇ ! ಧರ್ಮಸ್ಥಾಪನೆಗಾಗಿ ಅವತರಿಸಿದ ಶ್ರೀ ಹರಿಯು ಶಾಸ್ತ್ರಕ್ಕೆ, ಧರ್ಮಕ್ಕೆ ವಿರುದ್ಧವಾಗಿ ಪರಸ್ತ್ರೀಯರನ್ನು ಹೇಗೆ ಬೆರೆತನು ? ಆದರೆ ಸ್ವರಮಣನಿಗೆ ವಿಷಯಭೋಗದಾಸೆಯಿಲ್ಲ. ಹಾಗಾದರೆ ಜನರು ಹೀಗೆ ನಡೆಯಲಿ ಎಂದು ನಟಿಸಿದನೆ ? ತಾನು ಹೇಳಿದುದನ್ನು ಮಾತ್ರ ನಡೆಸಬೇಕು. ಅಷ್ಟೇ ಹೊರತು ತಾನು ಮಾಡಿದಂತೆ ನಡೆದುಕೊಳ್ಳಬಾರದು ಎಂದೆ ? ಅವನ-ಅಭಿಪ್ರಾಯವೇನು ?

**ಶುಕ** :– ಅಣಿಮಾದಿಅಷ್ಟೈಶ್ವರ್ಯವುಳ್ಳ ವಿಶ್ವಾಮಿತ್ರರೇ ಮೊದಲಾದ ಜ್ಞಾನಿಗಳು ಶಾಸ್ತ್ರ ವಿರುದ್ಧವಾದ ಕರ್ಮಗಳನ್ನು ಮಾಡಿದರೂ **"ತೇಜೀಯಸಾಂ ನ ದೋಷಾಯ"** ಅವರು ಶ್ರೀಹರಿಯ ಅನುಗ್ರಹದಿಂದುಂಟಾದ ಪ್ರಭೆಯನ್ನು ಉಳ್ಳವ

ರಾದುದರಿಂದ ಅವರಿಗೆ ಯಾವ ದೋಷವೂ ಅಂಟುವುದಿಲ್ಲ ಮತ್ತು ಪವಿತ್ರಾತ್ಮರೇ ಆಗಿರುತ್ತಾರೆ. ಪಾಮರನು ಹರಿ ಮತ್ತು ಹರಿಭಕ್ತರಾದ ಜ್ಞಾನಿಗಳು ಮಾಡುವ ಕರ ಗಳನ್ನು ಮಾಡುವುದಿರಲಿ, ಮನಸ್ಸಿನಿಂದಲೂ ಸ್ಮರಿಸಬಾರದು. ಇನ್ನು ಆಚರಿಸಲೇ ಬಾರದೆಂದು ಹೇಳಬೇಕಾದುದೇ ಇಲ್ಲ. ದೊಡ್ಡವರನ್ನು ನೋಡಿ ನಡಿ ಎಂದರೆ ದೊಡ್ಡ ವರು ಆಚರಿಸತಕ್ಕ ಸತ್ಕರ್ಮಗಳನ್ನೂ, ಸದಾಚಾರವನ್ನೂ ನೋಡಿ ಅದರಂತೆ ಆಚರಿಸಬೇಕೆಂದು ಅರ್ಥವೇ ಹೊರತು ದುಷ್ಕರ್ಮವನ್ನಲ್ಲ. ಯೋಗೇಶ್ವರರು ಮಾಡಿದ್ದನ್ನೆಲ್ಲ ನಡೆಸುವೆನೆಂಬ ಮೂರ್ಖನು ನಾಶವನ್ನೇ ಹೊಂದುವನು. **'ಋದ್ರೋऽಪಿಬದ್ವಿಷಂ'** ರುದ್ರನು ವಿಷವನ್ನು ಕುಡಿದನು. ನಾನೂ ಕುಡಿಯುವೆನೆಂದು ಕುಡಿದವನು ಸಾಯುವನು. ಮಹಾಜ್ಞಾನಿಗಳು ವಿರಕ್ತರು. ಪಕ್ವಭಕ್ತಿಯುಳ್ಳವರು. ಆದರಿಂದ ಲೋಕದ ಧರ್ಮವನ್ನು ಮೀರುವುದರಿಂದ ಅವರಿಗೆ ದೋಷವಿಲ್ಲ.

ಹೀಗೆ ಜ್ಞಾನಿಗಳಿಗೇ ದೋಷವಿಲ್ಲದಿರುವಾಗ ಸರ್ವಜೀವ ಪ್ರೇರಕನಾದ ಶ್ರೀ ಹರಿಗೆ ಪುಣ್ಯಪಾಪಲೇಪವಿಲ್ಲವೆಂದು ಹೇಳಬೇಕೇನು ? ಸಕಲದೇಹಿಗಳ ಒಳಗೆ ಸಂಚರಿಸುವ ಸಾಕ್ಷಿಯೇ ಈ ಕ್ರೀಡೆಗೆ ಉಪಯುಕ್ತವಾದ ಅಪ್ರಾಕೃತ ದೇಹವನ್ನು ತಾಳಿರುವನು. ಗೋಪಿಯರಲ್ಲೆಲ್ಲೂ ಆವೇಶ ರೂಪದಿಂದಿರುವ ಲಕ್ಷ್ಮಿಯ ಒಳ ಗಿರುವ ಲಕ್ಷ್ಮೀನಾಮಕ ಬಿಂಬರೂಪದೊಡನೆ ಶ್ರೀಕೃಷ್ಣನಿಗೆ ಸಂಪರ್ಕವೇ ಹೊರತು ಗೋಪಿಯರೊಡನೆ ಸಾಕ್ಷಾತ್ ಸಂಪರ್ಕವಿಲ್ಲವೆಂಬುದನ್ನು ಹಿಂದೆಯೇ ತಿಳಿಸಿರುವೆನು.

ಶ್ರೀಕೃಷ್ಣನ ಇಚ್ಛೆಯಿಂದ ಮೋಹಿತರಾದ ಗೋಪಾಲರು ಆ ರಾತ್ರಿ ತಮ್ಮ ತಮ್ಮ ಪತ್ನಿಯರು ತಮ್ಮ ಪಕ್ಕದಲ್ಲೇ ಇದ್ದಂತೆ ತಿಳಿದವರಾಗಿ ಕೃಷ್ಣನ ಗುಣಗಳಲ್ಲಿ ದೋಷವೆಣಿಸಲಿಲ್ಲ. ಬ್ರಾಹ್ಮಮುಹೂರ್ತವು ಬರಲು ಗೋಪಿಯರು ಕೃಷ್ಣನ ಅಪ್ಪಣೆ ಮೀರಲಾರದೆ ಮನೆಗಳಿಗೆ ಬಂದರು. ಕೃಷ್ಣನ ಈ ವಿಹಾರದ ಕಥೆಯನ್ನು ಭಕ್ತಿಯಿಂದ ಕೇಳಿದವನೂ. ಭಕ್ತಿಯಿಂದ ಹೇಳಿದವನೂ ಭಕ್ತಿಯ ವೃದ್ಧಿಯನ್ನು ಹೊಂದಿ ಜ್ಞಾನಿ ಯಾಗುವನು.

## ಮೂವತ್ತೊಂದನೆಯ ಅಧ್ಯಾಯ ಮುಗಿದುದು

ಒಮ್ಮೆ ಗೋಪಾಲರು ಅಂಬಿಕಾವನಕ್ಕೆ ಬಂದು ಶಿವನನ್ನೂ, ಶಿವೆಯನ್ನೂ ಪೂಜಿಸಿದರು. ರಾತ್ರಿ ಮಲಗಿರುವಾಗ ಒಂದು ಹೆಬ್ಬಾವು ನಂದಗೋಪನನ್ನು ನುಂಗಲು ಆರಂಭಿಸಿತು. ಶ್ರೀಕೃಷ್ಣನು ಅದನ್ನು ಪಾದದಿಂದ ಸ್ಪರ್ಶಿಸಿದನು. ಕೂಡಲೇ ಸರ್ಪ ದೇಹವು ಹೋಗಿ ವಿದ್ಯಾಧರನು ನಿಂತನು. ಶ್ರೀಕೃಷ್ಣನು ನೀನು ಯಾರೆಂದು ಕೇಳಿದನು.

**ವಿದ್ಯಾಧರ :–** ನಾನು ಸುದರ್ಶನನೆಂಬ ವಿದ್ಯಾಧರನು. ರೂಪವಂತನೆಂಬ ಗರ್ವದಿಂದ ಅಂಗಿರಾಋಷಿಗಳನ್ನು ಗೇಲಿ ಮಾಡಿದೆ. ಅವರು ಅಜಗರನಾಗೆಂದು ಶಪಿಸಿದರು. ಕೃಷ್ಣ ! ನಿನ್ನ ಪಾದಸ್ಪರ್ಶದಿಂದ ಪಾಪಪರಿಹಾರವಾಯಿತಾಗಿ ಆ ಶಾಪವು ಅನುಗ್ರಹವೆಂದು ಭಾವಿಸುವೆನು. ಸುಜನ ಪಾಲಕನೇ ! ನಾನು ಅನುಗ್ರಹೀತನಾದೆನು. (ಹೀಗೆ ಹೇಳಿ ಅಪ್ಪಣೆ ಪಡೆದು ಹೊರಟು ಹೋದನು.)

ರಾಮಕೃಷ್ಣರು ವನದಲ್ಲಿ ಗೋಪಿಯರೊಡನೆ ಕ್ರೀಡಿಸುತ್ತಿದ್ದಾಗ ಶಂಖಚೂಡನೆಂಬ ರುದ್ರದೇವರ ಪ್ರಸಾದದಿಂದ ರಕ್ಷಿತನಾಗಿದ್ದ ಯಕ್ಷನು ಬಂದು ಗೋಪಿಯರನ್ನು ಅಪಹರಿಸಿದನು. ಶ್ರೀಕೃಷ್ಣನು ಅವನ ತಲೆಯನ್ನು ಚಚ್ಚಿ ಕೊಂದು, ಅಲ್ಲಿದ್ದ ಮಣಿಯೊಂದನ್ನು ತಂದು ಅಣ್ಣನಿಗೆ ಕೊಟ್ಟನು.

## ಮೂವತ್ತೆರಡನೆಯ ಅಧ್ಯಾಯ ಮುಗಿದುದು

ಕೃಷ್ಣನು ಧನಗಳನ್ನು ಮೇಯಿಸಲು ಕಾಡಿಗೆ ಹೋದಾಗ, ಗೋಪಿಯರು ಅವನ ಅಗಲಿಕೆಯನ್ನು ಸಹಿಸದೆ, ಅವನ ಚರಿತ್ರೆಯನ್ನೇ ಗಾನ ಮಾಡುತ್ತ ಹಗಲನ್ನು ಕಳೆಯುವರು :–

### ಶ್ಲೋಕ

**ವಾಮಬಾಹುಕೃತ ವಾಮಕಪೋಲೋ ವಲ್ಗಿತ ಭ್ರುರಧರಾರ್ಪಿತವೇಣುಃ ।**
**ಕೋಮಲಾಂಗುಲಿಭಿರಾಶ್ರಿತ ಮಾರ್ಗಂ ಗೋಪ್ಯ ಈರಯತಿ ಯತ್ರ ಮುಕುಂದಂ ॥**

ಗೋಪಿಯರೇ ! ಗೋಪಾಲಕೃಷ್ಣನ ಸೌಂದರ್ಯವನ್ನು ಏನೆಂದು ಹೇಳಬಹುದು, ಎಡಭುಜಕ್ಕೆ ಕಪೋಲವು ಸೋಕುವಂತೆ ಬಗ್ಗಿದ ಕೊರಳು ! ತುಟಿಯ ಮೇಲೆ ಕೊಳಲು ! ಅದರ ಮೇಲೆ ಆಡುತ್ತಿರುವ ಬೆರಳುಗಳು ! ಸ್ವರ ಮೂರ್ಛನೆಗೆ ತಕ್ಕಂತೆ ಹುಬ್ಬಿನಾಟಗಳು.

ಇಂತಹ ದಿವ್ಯ ಸೌಂದರ್ಯದಿಂದ ಶ್ರೀಕೃಷ್ಣನು ಕೊಳಲನ್ನೂದುವಾಗ, ವಿಮಾನದಲ್ಲಿ ಕುಳಿತು ಸಂಚರಿಸುವ ಸಿದ್ಧಸ್ತ್ರೀಯರು ತಮ್ಮ ಪತಿಗಳೊಡನೆ ಇದ್ದರೂ, ಕಾಮವಶರಾಗಿ ಮೂರ್ಛೆ ಹೊಂದವರು.

ಯಶೋದೆ ! ನಿನ್ನ ಮಗನು ಕೊಳಲಿನಲ್ಲಿ ಸ್ವರಭೇದಗಳನ್ನು ನುಡಿಸುವಾಗ ಇಂದ್ರಾದಿಗಳು ಈ ಸ್ವರಭೇದಗಳ ತತ್ತ್ವವನ್ನು ತಿಳಿಯದೆ ಮೂರ್ಛೆಹೊಂದುವರು.

ಇಂತಹವನ ವಿಯೋಗವನ್ನು ಸಹಿಸಲಾರೆವು. ಸಾಯಂಕಾಲ ಗೋಕುಲಕ್ಕೆ ಬರುವಾಗ ಕೃಷ್ಣನನ್ನು ನೋಡಿದೊಡನೆ ಅವನು ಹಗಲಿನ ನಮ್ಮ ವಿರಹತಾಪವನ್ನು ಪರಿಹರಿಸುವನು.

ಹೀಗೆ ಗೋಪಿಯರು ಗಾನಮಾಡುತ್ತ ಶ್ರೀಕೃಷ್ಣನಲ್ಲಿಯೇ ಮನಸ್ಸುಳ್ಳ ವರಾದರು.

## ಮೂವತ್ತಮೂರನೆಯ ಅಧ್ಯಾಯ ಮುಗಿದುದು

ಅರಿಷ್ಟನೆಂಬ ಗೂಳಿಯ ಆಕಾರದ ಅಸುರನು ಗೋಕುಲಕ್ಕೆ ಬಂದು, ಅಲ್ಲಿರುವ ವರನ್ನೆಲ್ಲ ಹೆದರಿಸಿದನು. ಶ್ರೀಕೃಷ್ಣನು ಅವನನ್ನು ಸಂಹರಿಸಿ ಗೋಕುಲದವರ ಭಯ ವನ್ನು ಪರಿಹರಿಸಿದನು. ಇತ್ತ ನಾರದರು ಕಂಸನ ಬಳಿಗೆ ಬಂದು ಹೀಗೆ ಹೇಳು ತ್ತಾರೆ :–

**ನಾರದ :–** ಕಂಸನೇ ! ನೀನು ಕೊಲ್ಲಲು ಯತ್ನಿಸಿದ ಹೆಣ್ಣು ಮಗುವು ಯಶೋದೆಯದು. ಕೃಷ್ಣನು ದೇವಕಿಯ ಎಂಟನೆಯ ಮಗನು. ಬಲರಾಮ ಕೃಷ್ಣರೇ ನಿನ್ನವರಾದ ಅಸುರರನ್ನೆಲ್ಲ ಕೊಂದು ಹಾಕಿದರು.

(ಇದನ್ನು ಕೇಳಿ ಕಂಸನು ವಸುದೇವನನ್ನು ಕಪಟಿಯೆಂದು ಕೊಲ್ಲಲು ಸಿದ್ಧ ನಾದಾಗ ಸಮಾಧಾನ ಮಾಡಿದರು ಕಂಸನಾದರೋ ಕೃಷ್ಣನು ತನ್ನ ಮೃತ್ಯುವೆಂದು ಬಗೆದು ವಸುದೇವ ದೇವಕಿಯರನ್ನು ಸೆರೆಯಲ್ಲಿಟ್ಟನು. ಕೇಶಿಯೆಂಬ ದಾನವನನ್ನು ರಾಮಕೃಷ್ಣರನ್ನು ಕೊಲ್ಲೆಂದು ಅಪ್ಪಣೆಮಾಡಿ ಗೋಕುಲಕ್ಕೆ ಕಳುಹಿಸಿ, ದೈತ್ಯಸ್ವರೂಪ ರಾದ ಚಾಣೂರ ಮೊದಲಾದ ಜಟ್ಟಿಗಳನ್ನು ಕರೆಸಿ)

**ಕಂಸ :–** ನನ್ನ ತಾಯಿಯು ವನದಲ್ಲಿ ಸಂಚರಿಸುವಾಗ, **ದ್ರುಮಿಳ** ಎಂಬ ಗಂಧರ್ವನು ಉಗ್ರಸೇನನ ವೇಷದಿಂದ ಬಂದು ರಮಿಸಿದನು. ನನ್ನ ತಾಯಿಗೆ ಅವನ ಮೋಸವು ಗೊತ್ತಾಗಿ "ನಿನ್ನಿಂದ ಹುಟ್ಟುವ ಮಗನು ಕ್ರೂರಿಯಾಗಿ, ದೇವ ಬ್ರಾಹ್ಮಣರ ಅನುಗ್ರಹಕ್ಕೆ ಬಾಹಿರನಾಗಲಿ" ಎಂದಳು. ಈ ಸಂಗತಿಯನ್ನು ನಾರದರು ನನಗೆ ಹೇಳಿದರು. ನಾನು ಹೇಡಿಯಾದ ಉಗ್ರಸೇನನ ವೀರ್ಯದಿಂದ ಹುಟ್ಟಿದ ಮಗನಲ್ಲ. ದೇವಕಿಯೂ ನನ್ನ ತಂಗಿಯಲ್ಲ. ಯಾದವರು ನಮ್ಮವರಲ್ಲವಾದುದರಿಂದ ಅವರನ್ನು ಕೊಂದರೆ ನನಗೆ ದೋಷವಿಲ್ಲ. (ಅಕ್ರೂರನನ್ನು ಕುರಿತು ಹೇಳುವನು –) ಅಕ್ರೂರನೇ! ಗೋಕುಲಕ್ಕೆ ಹೋಗಿ ರಾಮಕೃಷ್ಣರನ್ನು ಬಿಲ್ಲು ಹಬ್ಬವೆಂದು ಹೇಳಿ ಇಲ್ಲಿಗೆ ಕರೆದು ಕೊಂಡು ಬಾ. ಇಲ್ಲಿಗೆ ಅವರಿಬ್ಬರು ಬಂದಾಗ ಅವರನ್ನು ಕೊಲ್ಲಿಸಿ, ದೇವಪಕ್ಷಪಾತಿ ಗಳನ್ನೆಲ್ಲ ಕೊಂದು ಈ ಭೂಮಿಯನ್ನು ಅನುಭವಿಸುವೆನು.

**ಅಕ್ರೂರ :** ಮಾಡುವ ಪ್ರಯತ್ನವು ನಮ್ಮದು. ಫಲವು ಈಶ್ವರಾಧೀನ. ನಿನ್ನ ಮಾತಿನಂತೆ ಹೋಗಿ ಬರುವೆನು.

**ಮೂವತ್ತನಾಲ್ಕನೆಯ ಅಧ್ಯಾಯ ಮುಗಿದುದು**

ಕುದುರೆಯ ಆಕಾರದ ಕೇಶಿಯೆಂಬ ದಾನವನು ಗೋಕುಲಕ್ಕೆ ಬಂದು ಎಲ್ಲರನ್ನೂ ಹೆದರಿಸಿದನು. ಎಲ್ಲರೂ ನಡುಗಿ ಹೋದರು. ಕೃಷ್ಣನು ಆ ನೀಚನ ಬಾಯೊಳಗೆ ತನ್ನ ತೋಳನ್ನು ತುರುಕಿ ಅದು ದೇಹದೊಳಗೆಲ್ಲ ವ್ಯಾಪಿಸುವ ಹಾಗೆ ಬೆಳೆಸಿದನು. ಕೇಶಿಯ ದೇಹವು ಬಿರಿದು ಸತ್ತನು. ಆಗ ದೇವತೆಗಳು ಗಗನದಲ್ಲಿ ನಿಂತು ಸ್ವಾಮಿಯನ್ನು ಸ್ತುತಿಸಿದರು. ಕೃಷ್ಣನ ಬಳಿಗೆ ಬಂದ ನಾರದರು ಮಾತಾಡುತ್ತಾರೆ :

**ನಾರದ :** ಕೃಷ್ಣನೇ ! ಅಪ್ರಮೇಯಾತ್ಮನೇ ! ಜಗದೀಶ್ವರನೆ ! ನೀನು ಪ್ರತಿಯೊಬ್ಬರ ಹೃದಯಗುಹಾಶಯನು. ಸಾಕ್ಷಿಯು. ಜಗತ್ತನ್ನು ಪ್ರಕೃತಿಯಿಂದ ಸೃಷ್ಟಿಸಿ, ಪಾಲಿಸಿ, ಸಂಹರಿಸುವೆ. ದುಷ್ಟನಿಗ್ರಹ ಮತ್ತು ಶಿಷ್ಟಪರಿಪಾಲನೆಗಾಗಿಯೇ ನೀನು ಅವತರಿಸುವೆ. ಕುವಲಯಾಪೀಡವೆಂಬ ಆನೆಯನ್ನೂ, ಅದರ ಮಾವಟಿಗನನ್ನೂ, ಜಟ್ಟಿಗಳನ್ನೂ ಮತ್ತು ಕಂಸನನ್ನೂ ಇವತ್ತಿಗೆ ನಾಲ್ಕನೆಯ ದಿನದಲ್ಲಿ ನೀನು ಸಂಹರಿಸುವೆ ಇದನ್ನು ನಾನು ನೋಡುವೆನು. ಹಾಗೆಯೇ ಮುಂದೆ ಸತ್ತ ಗುರುಪುತ್ರನನ್ನು ಬದುಕಿಸಿ ಗುರುದಕ್ಷಿಣೆಯನ್ನು ಕೊಡುವೆ. ದುಷ್ಟರನ್ನು ಮರ್ದಿಸಿ ರುಕ್ಮಿಣಿಯನ್ನು ತಂದು ಮದಿವೆಯಾಗುವೆ. ಇತರ ದುಷ್ಟರನ್ನೆಲ್ಲ ಸದೆಬಡಿಯುವೆ. ಕೊನೆಗೆ ಕುರುಕ್ಷೇತ್ರದಲ್ಲಿ ಹದಿನೆಂಟು ಅಕ್ಷೌಹಿಣೀ ಸೈನ್ಯವನ್ನು ಸಂಹರಿಸುವೆ. ಇವೇ ಮೊದಲಾದ ವ್ಯಾಪಾರವನ್ನು ನೀನು ಮಾಡುವೆ. ಅದೆಲ್ಲವನ್ನೂ ನಾನು ನೋಡುವೆನು. ಯಾದವರ ರಕ್ಷಣಾಭಾರವನ್ನು ಹೊತ್ತಿರುವ, ಈಶ್ವರನಾದ ನಿನಗೆ ನಮಸ್ಕಾರ ! (ಹೀಗೆ ಸ್ತುತಿಸಿ ಹೊರಟು ಹೋದರು. ಶ್ರೀಕೃಷ್ಣನು ಎಂದಿನಂತೆ ಕಾಡಿನಲ್ಲಿ ದನಗಳನ್ನು ಮೇಯಿಸುತ್ತಿರುವಾಗ ಮಯನಪುತ್ರ ವ್ಯೋಮಾಸುರನೆಂಬುವನು ಗೋಪಾಲನ ವೇಷದಿಂದ ಬಂದು ಗೊಲ್ಲಬಾಲಕರನ್ನು ಗುಹೆಯೊಳಗೆ ತುರುಕಿ, ಬಾಗಿಲಿಗೆ ಬಂಡೆ ಬಡಿದನು. ಶ್ರೀಕೃಷ್ಣನು ಆ ವ್ಯೋಮನನ್ನು ಕೊಂದು ಗೋಪಾಲರನ್ನು ಗುಹೆಯಿಂದ ಈಚೆಗೆ ತಂದು ರಕ್ಷಿಸಿದನು)

**ಮೂವತ್ತೈದನೆಯ ಅಧ್ಯಾಯ ಮುಗಿದುದು**

ಇತ್ತ ಅಕ್ರೂರನು ತನ್ನಲ್ಲಿಯೇ ಹೀಗೆ ಮಾತಾಡಿಕೊಳ್ಳುವನು :–

**ಅಕ್ರೂರ :–** ಆಹಾ ! ನಾನೇನು ಪುಣ್ಯಮಾಡಿದ್ದೆನೊ ? ಖಲನಾದ ಕಂಸನ ಸಂಗದಲ್ಲಿದ್ದರೂ ಶ್ರೀಕೃಷ್ಣನ ಸಂದರುಶನಭಾಗ್ಯವು ದೊರೆಯಿತು. ನನ್ನ ಪಾಪಗಳೆಲ್ಲ ನಷ್ಟವಾದುವು. ಜನ್ಮ ಸಫಲವಾಯಿತು. ಕಂಸನು ರಾಮಕೃಷ್ಣರನ್ನು ಕರೆತರಲು ಮತ್ತಾರನ್ನೂ ಕಳುಹಿಸದೆ ನನ್ನನ್ನೇ ಕಳುಹಿಸುತ್ತಿರುವುದರಿಂದ ನನಗೆ ಅನುಗ್ರಹವನ್ನೇ ಮಾಡಿರುವನು. ಆಶ್ಚರ್ಯ ! ಲಕ್ಷ್ಮೀ ಬ್ರಹ್ಮಾದಿಗಳಿಂದ ಅರ್ಚಿತ ವಾದ ಭಗವಂತನ ಪಾದಗಳನ್ನು ನೋಡುವೆನು. ಸುಂದರವಾದ ಮಂದಹಾಸಸೂಚಕ ಪ್ರಸನ್ನ ದೃಷ್ಟಿಯುಳ್ಳ, ಇಂದೀವರದಳ ನಯನನ ಮುಖಾರವಿಂದವನ್ನು ನೋಡಿಯೇ ನೋಡುವೆನು. ಈಗಾಗಲೇ ಶುಭಸೂಚನೆಗಳೂ, ಶಕುನಗಳೂ ಕಾಣುತ್ತಿವೆ. ಶ್ರೀಕೃಷ್ಣನು ಅಹಂಕಾರವಿಲ್ಲದವನು. ಭ್ರಾಂತಿಯನ್ನು ದೂರ ಓಡಿಸಿದವನು. ಸರ್ವಗುಣಪರಿಪೂರ್ಣನು ಸಾಕ್ಷಿಯು. ಸಜ್ಜನರಿಗೆ ಮಂಗಳವನ್ನೂ, ಪಾವನತೆಯನ್ನೂ ಉಂಟುಮಾಡುವ ಗುಣ, ಕರ್ಮ, ಜನ್ಮಗಳನ್ನುಳ್ಳವನು. ದೇವತೆಗಳಿಂದ ಸ್ತುತ್ಯವಾದ ಯಶಸ್ಸುಳ್ಳವನು. ಲಕ್ಷ್ಮೀದೇವಿಯಿಂದ ಆಕಾಂಕ್ಷಿತಸ್ವರೂಪನಾದ ಅವನನ್ನು ಕಣ್ದಣಿಯ ನೋಡುವೆನು. ಪರಮಾತ್ಮನನ್ನು ದರ್ಶನಮಾಡಿಸತಕ್ಕ ಇವತ್ತಿನ ಪ್ರಭಾತ ಕಾಲವು ಅತ್ಯಂತ ಮಂಗಳಕರವು. ಕಾಲಸರ್ಪದಿಂದ ಭೀತರಾದ ಸುಜನರಿಗೆ ಅಭಯ ಪ್ರದವಾದ ಹಸ್ತವನ್ನು ನನ್ನ ತಲೆಯ ಮೇಲೆ ಇಡುವನಲ್ಲವೆ ? ಶತ್ರುಪಕ್ಷದವನೆಂದು ನನ್ನನ್ನು ತಿಳಿಯದೆ ನನ್ನ ನಿರ್ಮಲ ಮನಸ್ಸನ್ನು ತಿಳಿಯಬಲ್ಲವನಾದ್ದರಿಂದ ನನ್ನನ್ನು ತಿರಸ್ಕರಿಸುವುದಿಲ್ಲ. ನಾನು ಅವನ ಪಾದಗಳಲ್ಲಿ ಬಿದ್ದಾಗ ಕೃಷ್ಣನು ನನ್ನನ್ನೆತ್ತಿ ಮುಖವನ್ನು ನೋಡಿ ಮಾತನಾಡಿಸುವನು. ಆಗಲೇ ನಾನು ಪಾಪವಿದೂರನಾಗಿ ಉದ್ರಿಕ್ತಾನಂದವನ್ನು ಹೊಂದಿಬಿಡುವೆನು. ಅವನ ಕುಲದಲ್ಲಿಯೇ ಹುಟ್ಟಿರುವೆನು ಮತ್ತು ಅವನನ್ನೇ ನನ್ನ ಕುಲಸ್ವಾಮಿಯೆಂದು ನಂಬಿರುವೆನು. ಆದುದರಿಂದ ನನ್ನನ್ನು ಬಿಗಿದಪ್ಪಿ ''ತಾತ ! ಅಕ್ರೂರ ! ಬಂದೆಯಾ !'' ಎಂದು ಮಾತ ನಾಡಿಸುವನು. ಆಗಲೇ ನನ್ನ ಜನ್ಮವು ಸಫಲವಾಗುವುದು. ಅತ್ಯಂತ ಪೂಜ್ಯನಾದ ಅವನಿಂದ ಆದರಿಸಲ್ಪಡದ ಜೀವನ ಜನ್ಮವು ನಿಂದ್ಯವೇ ಸರಿ. ಶ್ರೀಕೃಷ್ಣನು ಪರಮಾತ್ಮನಾದುದರಿಂದ ಅವನಿಗೆ ಯೋಗ್ಯತೆ ಮೀರಿದ ಪ್ರಿಯನಾಗಲಿ, ಅಪ್ರಿಯ ನಾಗಲಿ, ದ್ವೇಷಿಯಾಗಲಿ, ಉದಾಸೀನನಾಗಲಿ ಯಾರೂ ಇಲ್ಲ. ಭಜಕನ ಯೋಗ್ಯ ತಾನುಸಾರ ಫಲವನ್ನು ಕೊಟ್ಟುಬಿಡುವನು. ಬಲರಾಮನು ನನ್ನನ್ನು ಸತ್ಕರಿಸುವನು.

(ಹೀಗೆ ಅಕ್ರೂರನು ಹಂಬಲಿಸುತ್ತ ಗೋಧೂಳಿ ಲಗ್ನಕ್ಕೆ ಗೋಕುಲಕ್ಕೆ ಬಂದನು. ಆಗ ತಾನೇ ಶ್ರೀಕೃಷ್ಣನು ದನಗಳನ್ನು ಕರೆದುಕೊಂಡು ಬಂದಿದ್ದನಾದ್ದರಿಂದ ನೆಲದ ಧೂಳಿನಲ್ಲಿ ಅವನ ಅಂಗಾಲಿನ ಧ್ವಜಾಂಕುಶಾದಿ ರೇಖೆಗಳು ಮೂಡಿದ್ದುವು.

ಅವನ್ನು ನೋಡಿ ಅಕ್ರೂರನು ತೇರಿನಿಂದಿಳಿದು ಆ ಧೂಳಿಯಲ್ಲಿ ಹೊರಳಾಡಿ ನಾ ಧನ್ಯ ಧನ್ಯನೆಂದುಕೊಂಡನು. ರಾಮಕೃಷ್ಣರು ಕೊಟ್ಟಿಗೆಯಲ್ಲಿದ್ದರು. ಅವರನ್ನು ಅಕ್ರೂರನು ನೋಡಿ ಓಡಿ ಬಂದು ಭಕ್ತ್ಯುದ್ರೇಕದಿಂದ ಅವರ ಪಾದಗಳ ಮೇಲೆ ಬಿದ್ದನು. ಶ್ರೀಹರಿಯು ಅವನನ್ನೆತ್ತಿ ಅಪ್ಪಿಕೊಂಡನು. ಬಲರಾಮನು ಅವನಿಗೆ ನಮಿಸಿದನು. ಮತ್ತು ಅಕ್ರೂರನ ಕೈಹಿಡಿದುಕೊಂಡು ಮನೆಗೆ ಕರೆತಂದು ಭೋಜನ ಮಾಡಿಸಿ ತಾಂಬೂಲವನ್ನು ಕೊಟ್ಟನು.

## ಮೂವತ್ತಾರನೆಯ ಅಧ್ಯಾಯ ಮುಗಿದುದು

ಅಕ್ರೂರನು ಅಂದುಕೊಂಡಿದ್ದಂತೆ ಕೃಷ್ಣನು ಆದರವನ್ನು ತೋರಿದನು. ಅಕ್ರೂರನು ನಂದಗೋಪ, ಯಶೋದೆ, ರಾಮಕೃಷ್ಣರಿಗೆ ಕಂಸನ ಆಹ್ವಾನವನ್ನು ತಿಳಿಸಿ ಪಾಪಿ ಕಂಸನ ಮನದೊಳಗಿರುವ ದುಷ್ಟವಾದ ಅಭಿಪ್ರಾಯವನ್ನೂ ತಿಳಿಸಿದನು. ನಂದಗೋಪ, ಗೊಲ್ಲರು ಹಾಲು ಮೊಸರು ಇತ್ಯಾದಿಗಳನ್ನು ತೆಗೆದುಕೊಂಡು ಬೆಳಗ್ಗೆ ಹೊರಡಲು ಸಿದ್ಧಮಾಡಿಕೊಳ್ಳಹತ್ತಿದರು ರಾಮಕೃಷ್ಣರೂ ಬೆಳಗ್ಗೆ ಅಕ್ರೂರನೊಡನೆ ಮಧುರೆಗೆ ಹೊರಡಲು ಸಿದ್ಧರಾದರು. ಪ್ರಯಾಣ ಸಿದ್ಧತೆಯನ್ನು ನೋಡಿದ ಗೋಪಿಯರು, ಕೃಷ್ಣನನ್ನು ಬಿಟ್ಟಿರಲಾರದೆ, ಒಂದೆಡೆ ಸೇರಿ ಹೀಗೆ ಮಾತಾಡಿಕೊಂಡರು

**ಗೋಪಿಯರು** .— ವಿಧಿಯೇ ! ನಿನಗೆ ಕನಿಕರವೇ ಇಲ್ಲ. ಜನರಿಗೆ ಪರಸ್ಪರ ಪ್ರೀತಿಯನ್ನು ಹುಟ್ಟಿಸಿ ಒಟ್ಟಿಗೆ ಸೇರಿಸಿ ಮನೋರಥಗಳನ್ನು ಹೊಂದದೇ ಇರುವಂತೆ ಅಗಲಿಸುವೆ. ಎಂತಹ ಅಮಂಗಳಕರವಿದು ? ವಿಧಿಯನ್ನೇಕೆ ನಿಂದಿಸಬೇಕು ? ಮನೆ ಮಂದಿಯನ್ನೇ ಬಿಟ್ಟು ಹೊರಟ ಕೃಷ್ಣನಿಗೆ ನಂಬಿದ ದಾಸಿಯರು ಹೇಗೆ ಜ್ಞಾಪಕಕ್ಕೆ ಬಂದಾರು ? ಹೊಸ ಹೆಂಡತಿಯು ಸಿಗುವಾಗ ಹಳೆಯ ಹೆಂಡಿರಲ್ಲಿ ಪ್ರೇಮ ಹೇಗೆ ಇದ್ದೀತು ? ಮಧುರಾಪುರದ ಸ್ತ್ರೀಯರಿಗೆ ಅದೃಷ್ಟಕುಲಾಯಿಸಿತು. ಅವರು ಕೃಷ್ಣನನ್ನು ವಶಮಾಡಿಕೊಂಡು ಬಿಡುವರು. ಮುಂದೆ ಕೃಷ್ಣನು ಈ ಹಳ್ಳಿಮುಕ್ಕಗಳನ್ನು ಬಂದು ನೋಡುವನೆ ? ಅಕ್ರೂರನು ಕರುಣೆಯಿಲ್ಲದೆ ಕೃಷ್ಣನನ್ನು ನಮ್ಮಿಂದ ಅಗಲಿಸಿದನು. ಇವನಿಗೆ ಅಕ್ರೂರನೆಂದು ಹೆಸರನ್ನು ಯಾರು ಇಟ್ಟರೋ ಕಾಣೆವು ? ಅದೋ ! ಕೃಷ್ಣನು ರಥವನ್ನು ಹತ್ತುತ್ತಿರುವನು. ಇಲ್ಲಿರುವ ವೃದ್ಧರೂ ಅವನನ್ನು ತಡೆಯುತ್ತಿಲ್ಲವಲ್ಲ ? ಮುಖ್ಯ ದೈವವೇ ನಮಗೆ ಪ್ರತಿಕೂಲವಾಗಿದೆ. ಬನ್ನಿ ! ಕೃಷ್ಣನನ್ನು ತಡೆದು ಬಿಡೋಣ. ಯಾರು ಏನೆಂದರೂ ಭಯಪಡಬೇಕಾಗಿಲ್ಲ. ರಾಸಕ್ರೀಡೆಯಿಂದ ಪರಮಸಂತೋಷಪಡಿಸಿದ ಕೃಷ್ಣನನ್ನು ಬಿಟ್ಟು ಅಪಾರದುಃಖದಿಂದ ಹೇಗೆ ದಾಟಬಲ್ಲೆವು ?

(ಎಲ್ಲರೂ ನಾಚಿಕೆಯನ್ನು ಬಿಟ್ಟು 'ಗೋವಿಂದ ! ದಾಮೋದರ ! ಮಾಧವ !' ಎಂದು ಕೂಗಲಾರಂಭಿಸಿದರು. ಕೃಷ್ಣನು ಗೋಪಿಯರಿಗೆ ದೂತನ ಮೂಲಕ 'ನಾನು ಬರುವೆನು' ಎಂದು ಹೇಳಿ ಕಳುಹಿಸಿ ಸಮಾಧಾನ ಮಾಡಿ ಹೊರಟುಬಿಟ್ಟನು. ಗೋಪಿಯರು ಚಿತ್ರ ಬೊಂಬೆಗಳಂತೆ ನಿಂತು ರಥವು ಕಣ್ಮರೆಯಾದ ಮೇಲೆ ಹಿಂತಿರುಗಿ ಬಂದು ಹಗಲು ರಾತ್ರಿ ಒಂದು ಕ್ಷಣ ಬಿಡದಂತೆ ಕೃಷ್ಣನ ವ್ಯಾಪಾರಗಳನ್ನೇ ಗಾನ ಮಾಡುತ್ತ ದಿನಗಳನ್ನು ಕಳೆದರು.

ಇತ್ತ ಅಕ್ರೂರನು ರಥವನ್ನು ನಿಲ್ಲಿಸಿ ಯಮುನೆಯಲ್ಲಿ ಮಾಧ್ಯಾಹ್ನಿಕ ಕರ್ಮ ಮಾಡಿ ನೀರಿನಲ್ಲಿ ಮುಳುಗಿ ನಾರಾಯಣನ ಮಂತ್ರವನ್ನು ಮಾಮೂಲಿನಂತೆ ಜಪಿಸಿದನು. ಆಗ ನೀರಿನೊಳಗೆ ರಾಮಕೃಷ್ಣರನ್ನು ಕಂಡನು. ತಲೆಯೆತ್ತಿ ನೋಡಿದಾಗ ರಥದಲ್ಲಿ ಅವರಿಬ್ಬರೂ ಕುಳಿತಿರುವುದನ್ನು ನೋಡಿ, ನೀರಿನಲ್ಲಿ ಇವರಿಬ್ಬರನ್ನು ನೋಡಿದುದು ಸುಳ್ಳೇನು ? ತಿರುಗಿ ನೋಡುವುದಾಗಿ ನೀರಿನಲ್ಲಿ ಮುಳುಗಿದನು. ಆಗ ಶೇಷನ ಮೇಲೆ ಕುಳಿತಿರುವ ಶ್ರೀಹರಿಯನ್ನೂ, ಬ್ರಹ್ಮಾದಿ ಅವನ ಪರಿವಾರವನ್ನೂ ಕಂಡು ಕೈಮುಗಿದು ಸ್ತುತಿಸುವನು.

## ಮೂವತ್ತೇಳನೆಯ ಅಧ್ಯಾಯ ಮುಗಿದುದು

**ಅಕ್ರೂರ :–** ಸಕಲ ಜಗನ್ನಿಮಿತ್ತ ಕಾರಣ, ಸಕಲ ಗುಣಾಶ್ರಯ, ಪೂರ್ಣ ಷಡ್ಗುಣ, ನಾಶಕರ್ತ, ಸ್ವಯಂ ನಾಶರಹಿತನೂ ಆದ ನಿನಗೆ ನಮಃ ! ಈ ಲೋಕವನ್ನು ಸೃಷ್ಟಿಸಿದವನೂ, ನಾಭಿಕಮಲದಿಂದ ಬ್ರಹ್ಮನನ್ನು ಹುಟ್ಟಿಸಿದವನೂ ಆದ ನೀನೇ ಸೃಷ್ಟ್ಯಾದಿ ಕರ್ತನು.

ಮಹದಾದಿ ತತ್ತ್ವಾಭಿಮಾನಿಗಳು ನಿನ್ನ ಅವಯವಗಳಿಂದ ಹುಟ್ಟಿ ಈ ಜಗತ್ತಿಗೆ ಯೋಗ್ಯತಾನುಸಾರ ಕಾರಣರೆನಿಸಿದರೆ ನೀನಾದರೋ ಮುಖ್ಯ ಕಾರಣನಾಗಿರುವೆ.

ರಮಾಬ್ರಹ್ಮಾದಿಗಳು ನಿನ್ನ ಸ್ವರೂಪವನ್ನು ತಿಳಿಯದೇ ಹೋದರೂ, ಅವರವರ ಯೋಗ್ಯತಾನುಸಾರ ತಿಳಿದು ನಿನ್ನನ್ನು ಉಪಾಸಿಸುತ್ತಿರುವರು.

ಸಾಧ್ಯಾತ್ಮಂ ಅಂದರೆ ಜೀವರು, ಸಾಧಿಭೂತಂ = ಪಂಚಭೂತಗಳು ಅಂದರೆ ಅವುಗಳ ಅಭಿಮಾನಿದೇವತೆಗಳು ಮತ್ತು ಸಾಧಿದೈವಂ ಅಂದರೆ ಬ್ರಹ್ಮಾದಿ ದೇವತೆಗಳು ಇವರೆಲ್ಲರಿಗಿಂತಲೂ ನೀನೇ ಉತ್ತಮನೆಂದು ಯೋಗಿಗಳು ತಿಳಿದು ನಿನ್ನನ್ನು ಪೂಜಿಸುತ್ತಾರೆ.

ಕರ್ಮಗಳಿಗೆ ಪ್ರಾಧಾನ್ಯವನ್ನು ತಿಳಿದ ಯಾಜ್ಞಿಕರು ವೇದವಿದ್ಯೆಯಿಂದ ಸಕಲ ಯಜ್ಞಗಳಲ್ಲಿಯೂ ಇಂದ್ರಾದಿ ಸಕಲ ನಾಮಗಳಿಂದಲೂ ನಿನ್ನನ್ನೇ ಪೂಜಿಸುತ್ತಾರೆ.

ಏಕಾಂತಭಕ್ತರು ಸಕಲ ಕರ್ಮಗಳನ್ನೂ ನಿನಗೇ ಅರ್ಪಿಸಿ ಜ್ಞಾನಯಜ್ಞದಿಂದ ಜ್ಞಾನಾನಂದಾದಿ ದೇಹವುಳ್ಳ ನಿನ್ನನ್ನೇ ಪೂಜಿಸುತ್ತಾರೆ.

ಇಚ್ಛೆಯಿಂದಲೇ ಸತ್ವಾದಿ ಗುಣಗಳ ಮೂಲಕ ಬಂಧಿಸುವವನೂ, ಸರ್ವ ಸಾಕ್ಷಿಯೂ ಆದ ನಿನಗೆ ನಮಸ್ಕಾರ !

ನಿನ್ನ ಮುಖವೇ ಮೊದಲಾದ ಅವಯವಗಳಿಂದ ಅಗ್ನಿಯೇ ಮೊದಲಾದ ದೇವತೆಗಳು ಹುಟ್ಟಿ, ಮುಖವೇ ಮೊದಲಾದ ತಾವು ಹುಟ್ಟಿದ ಅವಯವಗಳನ್ನೇ ಆಶ್ರಯಿಸಿರುತ್ತಾರೆ. ಕ್ರೀಡೆಗಾಗಿ ನೀನೆತ್ತಿದ ಅವತಾರಗಳಿಂದ ಸಜ್ಜನರು ದುಃಖವನ್ನು ಕಳೆದುಕೊಂಡು ಸುಖವನ್ನು ಹೊಂದಿ ಸಂತೋಷದಿಂದ ನಿನ್ನ ಕೀರ್ತಿಯನ್ನು ಗಾನ ಮಾಡುತ್ತಾರೆ. ಮತ್ಸ್ಯಾದಿ ಅವತಾರವೆತ್ತಿದ ನಿನಗೆ ನಮಸ್ಕಾರ !

॥ ಶ್ಲೋಕ ॥

ನಮಸ್ತೇ ವಾಸುದೇವಾಯ ಸರ್ವಭೂತಕ್ಷಯಾಯ ಚ ।
ಹೃಷೀಕೇಶ ನಮಸ್ತೇಽಸ್ತು ಪ್ರಪನ್ನಂ ಪಾಹಿ ಮಾಂ ಪ್ರಭೋ ॥

## ಮೂವತ್ತೆಂಟನೆಯ ಅಧ್ಯಾಯ ಮುಗಿದುದು

ಶ್ರೀಕೃಷ್ಣನು ಅಕ್ರೂರನಿಗೆ ವಿಶ್ವರೂಪ ದರ್ಶನ ಮಾಡಿಸಿದನು. ಅಕ್ರೂರನೂ ಮಾಧ್ಯಾಹ್ನಿಕವನ್ನು ಮಾಡಿ ಬಂದು ತೇರನ್ನೇರಿದನು. ಕೃಷ್ಣನು ಆಶ್ಚರ್ಯವನ್ನೇನು ಕಂಡೆ ಎಂದು ಕೇಳಲು ಅಕ್ರೂರನು "ನಿನಗಿಂತ ಆಶ್ಚರ್ಯವಸ್ತುವು ಇನ್ನೊಂದಿಲ್ಲ" ಎಂದನು ಮಥುರೆಯ ಉಪವನವನ್ನು ತಲುಪಿದ ಕೃಷ್ಣನು, ತನಗಿಂತ ಮುಂಚಿತವಾಗಿ ಬಂದಿದ್ದ ನಂದಗೋಪ ಮತ್ತು ಗೊಲ್ಲರೊಡನೆ ಸೇರಿ, ಅಕ್ರೂರನನ್ನು ಮುಂದೆ ಅವನ ಮನೆಗೆ ಬರುವುದಾಗಿ ಸಮಾಧಾನ ಮಾಡಿ, ಅವನನ್ನು ಕಳುಹಿಸಿದನು. ಬಳಿಕ ಕೃಷ್ಣನು ತನ್ನ ಜೊತೆಯ ಗೊಲ್ಲಬಾಲಕರೊಡನೆ ಮಧುರಾಪಟ್ಟಣವನ್ನು ನೋಡಲು ಹೊರಟನು. ಅಲ್ಲಿನ ಸ್ತ್ರೀಯರು ಕೃಷ್ಣನನ್ನು ನೋಡಬೇಕೆಂದು ಮಾಡುತ್ತಿದ್ದ ಕೆಲಸವನ್ನು ಅಷ್ಟಕ್ಕೇ ನಿಲ್ಲಿಸಿ ಉಪ್ಪರಿಗೆಯನ್ನು ಏರಿ ನಿಂತರು. ಅವರಿಗೆ ಕೃಷ್ಣನನ್ನು ನೋಡಬೇಕೆಂದು ಬಹುಕಾಲದಿಂದಲೂ ಆಸೆಯಿದ್ದಿತು. ರಾಜಬೀದಿಯಲ್ಲಿ ಬರುತ್ತಿದ್ದ ಕೃಷ್ಣನನ್ನು ನೋಡಿದರು. ಅವರ ಆಸೆ ಈಡೇರಿತು. ದಾರಿಯಲ್ಲಿ ಒಬ್ಬ ಅಗಸರವನು ಬಂದನು. ವಸ್ತ್ರಗಳನ್ನು ಕೊಡೆಂದು ಕೃಷ್ಣನು ಯಾಚಿಸಿದನು. ಆ ದೈತ್ಯನಾದ

ಅಗಸರವನು ಉಚಾಯಿಸಿ ಮಾತಾಡಲು ಅವನನ್ನು ಕೊಂದು ಕೃಷ್ಣನು ಆ ವಸ್ತ್ರಗಳನ್ನು ತಾನೂ, ತನ್ನ ಗೆಳೆಯರೂ ಧರಿಸಿದರು. ಉಳಿದ ವಸ್ತ್ರಗಳನ್ನು ಗೊಲ್ಲ ಬಾಲಕರು ಕೃಷ್ಣನಿಗೆ ನಡೆಮುಡಿಹಾಸುತ್ತ ಹೋದರು. ವೈಕುಂಠದಲ್ಲಿ ನಾಪಿತ ನಾಗಿದ್ದು ಹರಿಯ ಸೇವೆಗಾಗಿ ಹುಟ್ಟಿದ್ದ ಒಬ್ಬ ಭಕ್ತನು ಬಂದು ರಾಮಕೃಷ್ಣರಿಗೆ ಲಾಕ್ಷಾದಿಗಳಿಂದ ಅಲಂಕಾರ ಮಾಡಿದನು. ಕೃಷ್ಣನು ಅವನಿಗೆ ವೈಕುಂಠವನ್ನು ಕೊಟ್ಟನು. ವೈಕುಂಠದಲ್ಲಿ ಹೂಮಾಲೆಯನ್ನು ಕಟ್ಟಿ ಹರಿಗೆ ಅರ್ಪಿಸುತ್ತಿದ್ದ ಹೂವಾಡಿಗರವನು ಸುದಾಮನೆಂಬ ಹೆಸರಿನಿಂದ ಹುಟ್ಟಿದ್ದನು. ರಾಮಕೃಷ್ಣರಿಬ್ಬರೂ ಬಂದು ಅವನನ್ನು ಹೂಮಾಲೆಗಳನ್ನು ಕೊಡಬೇಕೆಂದು ಕೇಳಿಕೊಂಡರು. ಸುದಾಮನು ಅವರಿಬ್ಬರಿಗೂ ಸುಂದರವಾದ ಮಾಲೆಗಳನ್ನು ಅರ್ಪಿಸಿದನು. ಶ್ರೀಕೃಷ್ಣನು ಅವನಿಗೂ ವೈಕುಂಠವನ್ನು ಕೊಟ್ಟನು.

## ಮೂವತ್ತೊಂಭತ್ತನೆಯ ಅಧ್ಯಾಯ ಮುಗಿದುದು

ಅಪ್ಸರ ಸ್ತ್ರೀಯೊಬ್ಬಳು ಪಿಂಗಳೆಯೆಂಬ ಸೂಳೆಯಾಗಿ ಹುಟ್ಟಿದ್ದಳು. ಅವಳು ಅಪೇಕ್ಷೆಮಾಡಿದಷ್ಟು ದ್ರವ್ಯವನ್ನು ಯಾರೂ ಕೊಡದೇಹೋದುದರಿಂದ ಇಡೀ ಜನ್ಮವು ಪುರುಷಸಂಗವೇ ಇಲ್ಲದಂತೆ ಆಗಿ ದೇಹವನ್ನು ಬಿಟ್ಟು ಪ್ರಾರಬ್ಧಕರ್ಮಾನುಸಾರ ಕುಬ್ಜೆಯಾಗಿ ಹುಟ್ಟಿ ಸೈರಂಧ್ರಿಯ ಕೆಲಸ ಮಾಡುತ್ತಿದ್ದಳು. ದಿನವೂ ಕಂಸನಿಗಾಗಿ ಗಂಧವನ್ನು ತಯಾರು ಮಾಡುತ್ತಿದ್ದಳು. ಎಂದಿನಂತೆ ತಯಾರು ಮಾಡಿದ ಗಂಧವನ್ನು ಕಂಸನಿಗೆ ಅರ್ಪಿಸಬೇಕೆಂದು ಬರುತ್ತಿರುವಾಗ ಮಧ್ಯಮಾರ್ಗದಲ್ಲಿ ಕೃಷ್ಣನ ಭೇಟಿ ಆಯಿತು. ಅವನು ಗಂಧವನ್ನು ಕೊಡೆಂದು ಕೇಳಿದನು. ಕೂಡಲೇ ಭಕ್ತಿಯಿಂದ ಅದನ್ನು ಅರ್ಪಿಸಿದಳು. ಶ್ರೀಕೃಷ್ಣನು ಕುಬ್ಜೆಯ ಡೊಂಕಾಗಿದ್ದ ದೇಹವನ್ನು ನೆಟ್ಟಗೆ ಮಾಡಿದನು. ಆಗ ಅವಳು ಸುಂದರಿಯಾಗಿ ಕಾಣಿಸಿದಳು. ಅವಳು ಅಪ್ಸರೆಯಾದ್ದರಿಂದ ತನ್ನ ಪ್ರಾರಬ್ಧ ಕರ್ಮಾನುಸಾರ ಕೃಷ್ಣನನ್ನು ಕಾಮಿಸಿ ಅವನ ಸಂಗವನ್ನು ಬಯಸಿದಳು. ಕೃಷ್ಣನು ಕಂಸನ ಸಂಹಾರವಾದ ಮೇಲೆ ಅವಳ ಮನೆಗೆ ಬರುವುದಾಗಿ ಮಾತು ಕೊಟ್ಟನು. ಮಧುರಾವಾಸಿಗಳೆಲ್ಲರೂ ರಾಮಕೃಷ್ಣರನ್ನು ಭಕ್ತಿಯಿಂದ ಪೂಜಿಸಿದರು. ಕೃಷ್ಣನು ಧನುರಾಗಾರಕ್ಕೆ ಹೋದನು. ಅಲ್ಲಿ ಶಿವನ ಧನುಃಸನ್ನಿಟ್ಟು ಪೂಜಿಸುತ್ತ ಅದಕ್ಕೆ ಕಾವಲಿದ್ದರು. ಕೃಷ್ಣನು ಅಲ್ಲಿಗೆ ಹೋದವನೇ ಆ ಶೈವ ಧನುಃಸ್ಸನ್ನು ಮುರಿದುಬಿಟ್ಟನು. ಆ ಬಿಲ್ಲಿನ ತುಂಡಿನಿಂದಲೇ ತನ್ನನ್ನು ಅಟಕಾಯಿಸಿದ ಕಾವಲುಗಾರರನ್ನೂ, ಕಂಸನು ಕಳುಹಿಸಿದ ಸೈನ್ಯವನ್ನೂ ಸಂಹರಿಸಿ, ಉದ್ಯಾನಕ್ಕೆ ಬಂದು ನಂದಗೋಪಾದಿಗಳೊಡನೆ ಭೋಜನ ಮಾಡಿ ರಾತ್ರಿಯನ್ನು ಸುಖವಾಗಿ ಕಳೆದನು. ಅತ್ತ ಕಂಸನು ಕೃಷ್ಣನ ವ್ಯಾಪಾರವನ್ನು ಕೇಳಿ ನಡುಗಿ ರಾತ್ರಿಯೆಲ್ಲ ಭಯದಿಂದ ಕಾಲ ಕಳೆದನು. ಬೆಳಗಾಗ ಕಂಸನು ರಂಗಸ್ಥಳಕ್ಕೆ ಬಂದನು. ಜಟ್ಟಿ

ಗಳೆಲ್ಲರೂ ಬಂದು ಅಲ್ಲಿ ಸೇರಿದರು. ನಂದಾದಿಗಳು ಕಂಸನಿಗೆ ಕಾಣಿಕೆ ಒಪ್ಪಿಸಿ ಸಭೆಯಲ್ಲಿ ತಮಗೆ ಯೋಗ್ಯವಾದ ಸ್ಥಳದಲ್ಲಿ ಕುಳಿತರು. ಪುರಜನ ಮೊದಲಾದವ ರೆಲ್ಲರೂ ಸಭೆಗೆ ಬಂದು ನೆರೆದರು.

## ನಲವತ್ತನೆಯ ಅಧ್ಯಾಯ ಮುಗಿದುದು

ಇತ್ತ ರಾಮಕೃಷ್ಣರು ಸ್ನಾನಮಾಡಿ ಅಲಂಕೃತರಾಗಿ ಉದ್ಯಾನದಿಂದ ಸಭೆಗೆ ಹೊರಟರು. ಕಂಸನ ಅಣತಿಯಂತೆ ರಾಮಕೃಷ್ಣರನ್ನು ಕೊಲ್ಲಬೇಕೆಂದು ಕುವಲಯಾ ಪೀಡವೆಂಬ ಬೆಟ್ಟದಂತಹ ಆನೆಯನ್ನು ಮಾವಟಿಗನು ಸಭಾದ್ವಾರದಲ್ಲಿ ನಿಲ್ಲಿಸಿದ್ದನು. ಆನೆಯು ಕೃಷ್ಣನನ್ನು ಕೊಲ್ಲಲು ಬಹಳ ಪ್ರಯತ್ನಪಟ್ಟಿತು. ಶ್ರೀಕೃಷ್ಣನು ಆ ಆನೆಯನ್ನೂ, ದೈತ್ಯನಾದ ಮಾವಟಿಗನನ್ನೂ ಕೊಂದು, ಆನೆಯ ಎರಡು ಕೊಂಬು ಗಳನ್ನೂ ಕಿತ್ತು ಒಂದನ್ನು ಬಲರಾಮನಿಗೆ ಕೊಟ್ಟು ಮತ್ತೊಂದನ್ನು ಹೆಗಲಮೇಲಿ ಇಟ್ಟುಕೊಂಡು ಸಭಾಪ್ರವೇಶ ಮಾಡಿದನು. ಇವನನ್ನು ನೋಡಿದ ಸಭಿಕರು ಭಿನ್ನ ಭಿನ್ನ ಸ್ವಭಾವದವರಾದುದರಿಂದ ಅದಕ್ಕನುಸಾರವಾಗಿ ಒಬ್ಬನೇ ಆದ ಕೃಷ್ಣನು ಭಿನ್ನಭಿನ್ನವಾಗಿ ತೋರಿದನು. ಅದನ್ನು ಶ್ರೀ ವೇದವ್ಯಾಸರು ಸುಂದರವಾಗಿ ವರ್ಣಿಸುತ್ತಾರೆ.

॥ ಶ್ಲೋಕ ॥

**ಮಲ್ಲಾನಾಮಶನಿಃ ನರವರಃಸ್ತ್ರೀಣಾಂ ಸ್ಮರೋ ಮೂರ್ತಿಮಾನ್ ।**
**ಗೋಪಾನಾಂ ಸ್ವಜನಃ ಕ್ಷಿತಿಭೃತಾಂ ಶಾಸ್ತಾ ಸ್ವಪಿತ್ರೋಃ ಶಿಶುಃ ॥**
**ಮೃತ್ಯುರ್ಭೋಜಪತೇರ್ವಿರಾಡವಿದುಷಾಂ ತತ್ತ್ವಂ ಪರಂ ಯೋಗಿನಾಂ ।**
**ವೃಷ್ಣೀನಾಂ ಚ ಪತಿ: ಸದೈವ ಶುಶುಭೇ ರಂಗೇಽಚ್ಯುತಃ ಸಾಗ್ರಜಃ ॥**

ಆ ರಂಗಸ್ಥಳದಲ್ಲಿ ಬಲರಾಮನಿಂದ ಸಹಿತನಾದ ಶ್ರೀಕೃಷ್ಣನು ಚಾಣೂರ ಮೊದಲಾದ ಜಟ್ಟಿಗಳಿಗೆ ಸಿಡಿಲಿನಂತೆ, ಶನೈಶ್ಚರನಂತೆ ತೋರಿದನು. ಮನುಷ್ಯರಿಗೆ ಮಹಾಪುರುಷನಂತೆ ತೋರಿದನು. ಸ್ತ್ರೀಯರಿಗೆ ಮೂರ್ತಿಮತ್ತಾದ ಮನ್ಮಥ ನಂತೆಯೂ, ಗೋಪಾಲರಿಗೆ ಬಂಧುವಿನಂತೆಯೂ, ದುಷ್ಟಕ್ಷತ್ರಿಯರಿಗೆ ದಂಡಿಸತಕ್ಕ ಪ್ರಭುವಿನಂತೆಯೂ. ವಸುದೇವದೇವಕಿಯರಿಗೆ ಮುದ್ದು ಮಗುವಿನಂತೆಯೂ, ಕಂಸನಿಗೆ ಬ್ರಹ್ಮದೇವರಿಂದ ಪ್ರಾರ್ಥಿತನಾದ ಮೃತ್ಯುವಿನಂತೆಯೂ, ನಾರದಾದಿ ಯೋಗಿಗಳಿಗೆ ಅನವರತ ನಾರಾಯಣನಂತೆಯೂ, ವೃಷ್ಣಿಕುಲದವರಿಗೆ ಪರಿಪಾಲಕ ನಾದ ಪ್ರಭುವಿನಂತೆಯೂ ತೋರುತ್ತಾ ವಿರಾಜಿಸಿದನು.

ಇವರನ್ನು ನೋಡಿದ ಸಭಿಕರು ಆನಂದಪಟ್ಟು "ನಾರಾಯಣನೇ ವಸುದೇವನ ಮಗನಾಗಿ ಅವತರಿಸಿರುವನು. ಪೂತನಾದಿಗಳನ್ನು ಕೊಂದವನೂ ಇವನೇ, ಯದು

ವಂಶವು ಇವನಿಂದಲೇ ಸುಖವಾಗಿ ಬಾಳುವುದೆಂದು ಜ್ಞಾನಿಗಳು ಹೇಳುವರು. ಅವನ ಪಕ್ಕದಲ್ಲಿರುವವನೇ ಬಲರಾಮನು ಇವನಿಂದಲೇ ಪ್ರಲಂಬ, ಧೇನುಕಾದಿಗಳು ಹತರಾದರು" ಎಂದು ಮಾತಾಡಿಕೊಳ್ಳುತ್ತಿದ್ದರು.

**ಚಾಣೂರ :-** ನಂದಕುಮಾರನೇ ! ಬಲರಾಮನೇ ! ನೀವಿಬ್ಬರೂ ಜಟ್ಟಿ ಕಾಳಗದಲ್ಲಿ ಗಟ್ಟಿಗರೆಂದು ನಮ್ಮ ಮಹಾಪ್ರಭುವು ತಿಳಿದು ಇಲ್ಲಿಗೆ ನಿಮ್ಮನ್ನು ಕರೆಸಿರುವನು. ರಾಜನೇ ದೇವರು. ಅವನಿಗೆ ಪ್ರಿಯವನ್ನುಂಟುಮಾಡುವ ಪ್ರಜೆಗೇ ಶ್ರೇಯಸ್ಸು ಇನ್ನಾರಿಗೂ ಇಲ್ಲ. ಪ್ರಭುವಿನ ಅಪ್ಪಣೆಯಂತೆ ನೀವಿಬ್ಬರೂ ನಮ್ಮ ಕೂಡೆ ಕುಸ್ತಿಯನ್ನುಮಾಡಿ ಪ್ರತ್ಯಕ್ಷದೇವರಾದ ಕಂಸಮಹಾಪ್ರಭುವನ್ನು ಸಂತೋಷ ಪಡಿಸಿರಿ.

**ಶ್ರೀಕೃಷ್ಣ :-** ನಿಮಗೆ ಈ ಕಂಸನೇ ದೇವರಾಗಲಿ, ನಮಗಲ್ಲ. ನಾವು ಬಾಲಕರು. ನಿಮಗೆ ಸಮಗ್ಟೆ ಅಲ್ಲ. ನೀವಿಬ್ಬರೂ ಬಲಿಷ್ಠರಿಗೆ ಬಲಿಷ್ಠರು. ಅಧರ್ಮವು ಬರದಂತೆ ನ್ಯಾಯರೀತಿಯಿಂದ ಕಾಳಗವನ್ನು ನಡೆಸಬೇಕು.

**ಚಾಣೂರ :-** ಸಾವಿರ ಆನೆಗಳ ಬಲವುಳ್ಳ ನಮ್ಮ ಮದದಾನೆಯನ್ನು ನಿರಾಯಾಸವಾಗಿ ಕೊಂದ ನೀನು ಬಾಲನೇ ? ನೀವಿಬ್ಬರೂ ಮಹಾಬಲಿಷ್ಠರಿದ್ದೀರಿ. ನಮ್ಮೊಡನೆ ನೀವು ಕಾಳಗಮಾಡಿದರೆ ಅಧರ್ಮವೇನೂ ಇಲ್ಲ. ಕೃಷ್ಣನೇ ! ನನ್ನೊಡನೆ ನೀನೂ, ಮುಷ್ಟಿಕನೊಡನೆ ಬಲರಾಮನೂ ಕಾಳಗಕ್ಕೆ ನಿಲ್ಲಿರಿ.

## ನಲವತ್ತೊಂದನೆಯ ಅಧ್ಯಾಯ ಮುಗಿದುದು

ಜಟ್ಟಿಕಾಳಗವು ಆರಂಭವಾಯಿತು. ಅದು ಅನ್ಯಾಯವೆಂದು ಸ್ತ್ರೀಯರೆಂದರು. ಕೃಷ್ಣದರ್ಶನಲಾಭವಾದುದರಿಂದ ತಾವೆಲ್ಲರೂ ಧನ್ಯರೆಂದುಕೊಂಡರು. ಕೃಷ್ಣನು ಚಾಣೂರನನ್ನೂ, ಬಲರಾಮನು ಮುಷ್ಟಿಕನನ್ನೂ ಕೊಂದರು. ಛಲನೆಂಬ ಜಟ್ಟಿ ಯನ್ನು ಬಲರಾಮನು ಕೊಂದನು. ಕೂಟ, ಕೋಶಲ ಮೊದಲಾದ ಮೇಲೆಬಿದ್ದ ಜಟ್ಟಿಗಳನ್ನೆಲ್ಲ ಶ್ರೀಕೃಷ್ಣನು ಕೊಂದನು.

**ಕಂಸ :-** ಬಲರಾಮಕೃಷ್ಣರನ್ನು ಈ ಊರಿನಿಂದ ಹೊರಡಿಸಿರಿ ನಂದ ಗೋಪನನ್ನು ಸೆರೆಹಾಕಿ. ವಸು ದೇವ ಮತ್ತು ಉಗ್ರಸೇನರನ್ನು ಕೊಂದುಬಿಡಿ.

ಶ್ರೀಕೃಷ್ಣನು ಹಾರಿ ಮಂಚದ ಮೇಲಿನಿಂದ ಕಂಸನನ್ನು ನೆಲದ ಮೇಲೆ ಕೆಡಹಿ ಕೊಂದನು. ಕಂಸನ ಪುಣ್ಯವನ್ನು ಸ್ವೀಕರಿಸುವುದಕ್ಕಾಗಿ ಅವನೊಳಗಿದ್ದ ವಾಯು

ದೇವರು ಶ್ರೀಕೃಷ್ಣನ ದೇಹವನ್ನು ಪ್ರವೇಶಿಸಿದರು. ದೈತ್ಯನು ತಮಸ್ಸಿಗೆ ಬಿದ್ದನು. ಕಂಸನು ವೀರನಾದರೂ ವೀರಮರಣವು ಬರದೆ ದುರ್ಮರಣವೇಬಂದಿತು. ಅವನು ಯುದ್ಧರಂಗದಲ್ಲಿ ಸಾಯಲಿಲ್ಲ. ಬಾಣದ ಗಾಯವೂ ಇಲ್ಲ. ಕೃಷ್ಣನುಅವನ ಕೂದಲನ್ನು ಹಿಡಿದುದರಿಂದ ಪ್ರಾಣಬಿಟ್ಟನು. ಆದ್ದರಿಂದ ವೀರಸ್ವರ್ಗವೂ ಅವನಿಗೆ ದೊರೆಯಲಿಲ್ಲ. ಈ ವಿಷಯವನ್ನು ಹರಿವಂಶವು ಹೇಳುತ್ತದೆ.

ಕೃಷ್ಣನು ಕಂಸನನ್ನು ಕೊಂದುದನ್ನು ನೋಡಿದ ಅವನ ಎಂಟು ಮಂದಿ ಸಹೋದರರೂ ಶ್ರೀಕೃಷ್ಣನ ಮೇಲೆಬಿದ್ದರು. ಕಂಕ, ನ್ಯಗ್ರೋಧ ಮೊದಲಾದ ಆ ದುಷ್ಟರನ್ನು ಶ್ರೀಕೃಷ್ಣನು ಸಂಹರಿಸಿದನು. ಕಂಸನ ಪತ್ನಿಯರು ಗೋಳಾಡಿದರು. ಅವರನ್ನು ಸಮಾಧಾನಮಾಡಿ, ಸತ್ತವರಿಗೆ ಸಂಸ್ಕಾರಗಳನ್ನು ಮಾಡಿಸಿ ಶ್ರೀಕೃಷ್ಣನು ತಂದೆತಾಯಿಗಳನ್ನು ಸೆರೆಯಿಂದ ಬಿಡಿಸಿ, ಬಲರಾಮನೊಡನೆ ಅವರಿಗೆ ನಮಸ್ಕಾರಮಾಡಿದನು. ವಸುದೇವದೇವಕಿಯರಿಬ್ಬರೂ ಅವರನ್ನು ಜಗದೀಶ್ವರರೆಂದು ತಿಳಿದು ಆಲಿಂಗಿಸಿ, ಆಶೀರ್ವದಿಸದೆ ಭಕ್ತಿಯಿಂದ ಕೈಮುಗಿದು ನಿಂತರು.

## ನಲವತ್ತೆರಡನೆಯ ಅಧ್ಯಾಯ ಮುಗಿದುದು

ಶ್ರೀಕೃಷ್ಣನು ಸಾಕ್ಷಾತ್ ಪರಮಾತ್ಮನು ಎಂದು ವಸುದೇವದೇವಕಿಯರಿಗೆ ಈಗಲೇ ಜ್ಞಾನವುಂಟಾಗಬಾರದೆಂದು ನಿಶ್ಚಯಿಸಿ, ಜನರು ಭ್ರಾಂತಿಯನ್ನು ಹೊಂದುವಂತೆ ಮಾಡಬಲ್ಲ ಮಾಯೆಯನ್ನುಂಟುಮಾಡಿ, ಬಲರಾಮನಿಂದ ಸಹಿತನಾಗಿ

**ಕೃಷ್ಣ :–** ಅಮ್ಮಾ ! ಅಪ್ಪಾ ! ನಾವು ನಿಮ್ಮ ಮಕ್ಕಳಾಗಿದ್ದರೂ ಬಾಲಲೀಲೆಗಳಿಂದ ನಿಮ್ಮನ್ನು ಸುಖಪಡಿಸಲಿಲ್ಲ. ತಂದೆ ತಾಯಿಗಳ ಋಣವನ್ನು ನೂರಾರು ವರ್ಷಗಳಲ್ಲಿಯೂ ತೀರಿಸಲು ಮನುಷ್ಯನಿಗೆ ಅಸಾಧ್ಯ. ಮುದುಕನಾದ ತಂದೆ, ಪತಿವ್ರತೆಯಾದ ಹೆಂಡತಿ ಮಗ, ಗುರು ಮತ್ತು ಶರಣಾಗತ ಇವರನ್ನು ಸಮರ್ಥನಾಗಿಯೂ ಪೋಷಿಸದೆ ಇದ್ದವನು ಬದುಕಿದ್ದರೂ ಅವನು ಮೃತಪ್ರಾಯನು. ಆದ್ದರಿಂದ ಕಂಸನಿಗೆ ಹೆದರಿ ನಿಮ್ಮನ್ನು ಸೇವಿಸದ ಇಷ್ಟು ಕಾಲವೂ ವ್ಯರ್ಥವಾಗಿ ಹೋಯಿತು. ನಮ್ಮ ಅಪರಾಧವನ್ನು ಕ್ಷಮಿಸಿ.

(ಶ್ರೀಕೃಷ್ಣನು ಉಗ್ರಸೇನನಿಗೆ ಪಟ್ಟಗಟ್ಟಿ "ನಾವು ನಿನ್ನ ಪ್ರಜೆಗಳು. ಆಯಾ ಕಾರ್ಯದಲ್ಲಿ ನಿಯಮಿಸಬೇಕು. ಯಯಾತಿಯ ಶಾಪಶಂಕೆಬಿಡು. ನಾನು ನಿನಗೆ ಭೃತ್ಯನಾಗಿರುವಾಗ ದೇವತೆಗಳೇ ನಿನ್ನ ಪೂಜಿಸುವರು" ಎಂದನು. ನಂದಗೋಪನನ್ನು ಸಮಾಧಾನ ಮಾಡಿ ಗೋಕುಲಕ್ಕೆ ಕಳುಹಿಸಿದನು. ಮುಂದೆ ರಾಮಕೃಷ್ಣರಿಗೆ ವಸು

ದೇವನು ಉಪನಯನ ಮಾಡಿದನು. ಅವರಿಬ್ಬರೂ ವ್ಯಾಸಂಗ ಮಾಡಲು ಅವಂತೀ ಪುರದಲ್ಲಿದ್ದ ಸಾಂದೀಪನಿಯನ್ನು ಗುರುವಾಗಿ ಮಾಡಿಕೊಂಡು ಅವರ ಶಿಷ್ಯರಾದರು. ಶ್ರೀಕೃಷ್ಣನು ಗುರುದಕ್ಷಿಣೆಗಾಗಿ ಸತ್ತಿದ್ದ ಗುರುಪುತ್ರನನ್ನು ಬದುಕಿಸಿ ತಂದು ಕೊಟ್ಟನು. ಗುರುವು ಬಹು ಸಂತೋಷಪಟ್ಟು "ನಿಮ್ಮ ಕೀರ್ತಿಯು ಭುವನಪಾವನ ಮಾಡಲಿ" ಎಂದರು.

## ನಲವತ್ತಮೂರನೆಯ ಅಧ್ಯಾಯ ಮುಗಿದುದು

ಶ್ರೀಕೃಷ್ಣನು ನಂದಗೋಪ, ಯಶೋದೆ ಮತ್ತು ಗೋಪಿಯರನ್ನು ಸಮಾಧಾನಪಡಿಸೆಂದು ಉದ್ಧವನನ್ನು ಗೋಕುಲಕ್ಕೆ ಕಳುಹಿಸಿದನು. ಬಂದ ಉದ್ಧವನನ್ನು ನಂದಗೋಪನು ಸತ್ಕರಿಸಿದನು.

**ನಂದಗೋಪ :** ಉದ್ಧವಾ ! ಕೃಷ್ಣನು ನಮ್ಮನ್ನು ನೋಡಲು ಬರುವನೆ ? ಅವನು ನಮ್ಮನ್ನು ಅನೇಕ ವಿಪತ್ತುಗಳಿಂದ ತಪ್ಪಿಸಿ ರಕ್ಷಿಸಿದನು ಅವನು ಸ್ಮರಣೆಗೆ ಬಂದರೆ ಕೈಕಾಲುಗಳು ಆಡದೆ ನಿಂತುಹೋಗುವುವು. ಶ್ರೀಕೃಷ್ಣನು ದೇವೋತ್ತಮ ನೆಂಬುದರಲ್ಲಿ ಸಂದೇಹವಿಲ್ಲ. (ಹೀಗೆ ಹೇಳುತ್ತಾ ಕಣ್ಣೀರನ್ನು ಸುರಿಸಿ ಸುಮ್ಮನಾದನು. ಯಶೋದೆಯೂ ಆನಂದಬಾಷ್ಪವನ್ನು ಸುರಿಸಿದಳು.)

**ಉದ್ಧವ :–** ನೀವು ಶ್ಲಾಘ್ಯರು. ಕೃಷ್ಣನಲ್ಲಿ ಭಕ್ತಿಯಿಟ್ಟಿರುವುದರಿಂದ ನೀವೇ ಧನ್ಯರು. ಕೃಷ್ಣನು ಇಲ್ಲಿಗೆ ಬಂದು ಪ್ರೀತಿವುಂಟುಮಾಡುವನು.

(ಬೆಳಗಾಯಿತು. ತೇರನ್ನು ಕಂಡ ಗೋಪಿಯರು ತಿರುಗಿ ಅಕ್ರೂರನು ಬಂದಿರ ಬಹುದು ಎಂದು ಮಾತಾಡುತ್ತಿರುವಾಗ ಉದ್ಧವನು ಅಲ್ಲಿಗೆ ಬಂದನು.

## ನಲವತ್ತನಾಲ್ಕನೆಯ ಅಧ್ಯಾಯ ಮುಗಿದುದು

**ಗೋಪಿಯರು :–** ಸೌಮ್ಯನೇ ! ನೀನು ಕೃಷ್ಣಭೃತ್ಯನಂತೆ ಕಾಣುವೆ. ಕೃಷ್ಣನು ನಿನ್ನ ಮೂಲಕ ಅವನ ತಂದೆ ತಾಯಿಗಳಿಗೆ ಮಾತ್ರ ಕ್ಷೇಮಲಾಭಗಳನ್ನು ಹೇಳಿ ಕಳುಹಿಸಿರಬಹುದಲ್ಲವೆ ? ನಾವಾರು ? ಮಧುರಾಪಟ್ಟಣದ ಕನ್ಯೆಯರಲ್ಲಿ ಆಶೆ ಯುಳ್ಳ ಅವನಿಗೆ ಅನಾಗರಿಕರಾದ ನಾವು ಸ್ಮರಣೆಗೆ ಹೇಗೆ ಬಂದೇವು ? (ಕೃಷ್ಣನನ್ನು ಸ್ಮರಿಸಿ ಅವರೆಲ್ಲ ಅಳುವುದಕ್ಕಾರಂಭಿಸಿದರು ಅವರಲ್ಲಿ ಮುಗ್ಧಳಾದ ಒಬ್ಬ ಗೋಪಿಯು ಒಂದು ಭ್ರಮರವನು ನೋಡಿ, ಅದನ್ನೇ ಕೃಷ್ಣನ ದೂತನೆಂದು ಭ್ರಮಿಸಿ ಹೀಗೆ ಹೇಳುವಳು ;–)

ಭ್ರಮರವೆ ! ನಮ್ಮನ್ನು ಮುಟ್ಟಬೇಡ ! ಕೃಷ್ಣನ ಸಹವಾಸದಿಂದ ನೀನು ಧೂರ್ತನಾಗಿರುವೆ. ಅವನೂ ನಮ್ಮನ್ನು ಮುಟ್ಟಬೇಕಾದ್ದಿಲ್ಲ. ಅವನು ಅಧರಾಮೃತದ ಆಶೆಯನ್ನು ಹೆಚ್ಚಿಸಿ ನಮ್ಮನ್ನು ಬಿಟ್ಟುಹೋದನು. ಲಕ್ಷ್ಮಿಯು ಅವನ ಮಧುರವಚ ನಕ್ಕೆ ಮರುಳಾಗಿ ಆಶೆಯಿಂದ ಅವನ ಸೇವೆಯನ್ನು ಮಾಡುತ್ತಿರುವಳು. ಉದ್ಧವನೇ ! ಕೃಷ್ಣನ ಚರಿತ್ರೆಯನ್ನು ಗಾನಮಾಡುತ್ತಿರುವೆ. ಸದ್ದು ಮಾಡಬೇಡ. ಮಧುರಾ ನಗರದ ಸ್ತ್ರೀಯರೆದುರಿಗೆ ಗಾನ ಮಾಡು. ಅವರು ಧನವನ್ನು ಕೊಡುವರು. ನಿನ್ನ ತಲೆಯ ಮೇಲೆ ನನ್ನ ಪಾದವನ್ನೇಕೆ ಇಟ್ಟುಕೊಂಡಿ ? ಬಿಡು ಬಿಡು ! ಈ ಗಿಲೀಟಿಗೆ ನಾನು ಮರುಳಾಗತಕ್ಕವಳಲ್ಲ. ಕೃಷ್ಣನು ಕೃತಘ್ನನು. ಸಂಧಿಮಾಡಿಸುವೆಯಾ ? ನಮ ಗೇನು ಫಲ ? ಅವನ ಸಹವಾಸವೇ ಬೇಡವಾದ ಮೇಲೆ ಅವನ ಕಥೆಯನ್ನೇಕೆ ಹೇಳು ವಿರಿ ? ಎಂದು ಕೇಳಬಹುದು. ಅದನ್ನು ಬಿಡಲು ನಮಗೆ ಸಾಧ್ಯವೇ ಇಲ್ಲವಾಗಿದೆ. ಬಿಟ್ಟರೆ ಅಮಂಗಳವಾಗುವುದು ಅವನ ವಾರ್ತೆಯನ್ನು ಹೇಳು ! ಆನಂದವಾಗುವುದು. ಕೃಷ್ಣನ ಗೆಳೆಯಾ ! ಹೋದವನು ತಿರುಗಿ ಏಕೆ ಬಂದೆ ? ಕೃಷ್ಣನು ನಿರ್ಬಂಧಿಸಿ ಕಳು ಹಿಸಿದನೇನು ? ಹಾಗಾದರೆ ನೀನು ಪೂಜ್ಯನು. ನಾವು ಅವನನ್ನು ಬಿಟ್ಟಿರಲಾರೆವು. ನಮ್ಮನ್ನು ಅವನ ಬಳಿಗೆ ಹೇಗೆ ಸಾಗಿಸುವಿ ? ಲಕ್ಷ್ಮಿಯು ಸವತಿಮಾತ್ಸರ್ಯದಿಂದ ನಮ್ಮನ್ನು ಅವನ ಹತ್ತಿರ ಸೇರಿಸುವಳೆ ? ಅವನ ದರ್ಶನ ಮತ್ತು ಸಂಭಾಷಣೆ ದುರ್ಲಭವೇ ಸರಿ. ಕೃಷ್ಣನು ಇಲ್ಲಿಗೆ ಬರುವನೆ ? ಯಾವಾಗ ಬರುವನು ?

**ಉದ್ಧವಾ :–** ಆಹಾ ! ನೀವೇ ಧನ್ಯರು ! ಸಾಧನ ಸಂಪನ್ನರಾದ ಮುನಿ ಗಳಿಗೂ ದುರ್ಲಭವಾದ ಅಸಾಧಾರಣ ಭಕ್ತಿಯು ನಿಮಗೆ ಉಂಟಾಗಿರುವುದಲ್ಲ ! ! ಮಹಾಭಾಗ್ಯವತಿಯರೇ ! ಸರ್ವವನ್ನೂ ತೊರೆದು ಶ್ರೀಕೃಷ್ಣನನ್ನೇ ಪ್ರೀತಿಸುವುದಕ್ಕೆ ದೈವಾನುಗ್ರಹವೇ ಕಾರಣ. ಶ್ರೀಕೃಷ್ಣನು ನಿಮಗೆ ಹೇಳಿ ಕಳುಹಿಸಿರುವುದನ್ನು ಅವನ ಮಾತಿನಿಂದಲೇ ತಿಳಿಸುವೆನು ಕೇಳಿ !

**ಶ್ರೀಭಗವಾನುವಾಚ :–** ಗೋಪಿಯರೇ ! ನಿಮಗೂ, ನನಗೂ ಯಾವಾ ಗಲೂ ವಿಯೋಗವು ಇಲ್ಲವೇ ಇಲ್ಲ. ಪಂಚಭೂತಗಳು ಸಕಲ ಶರೀರಗಳಲ್ಲಿಯೂ ಹೇಗೆ ಇದ್ದೇ ಇರುವುವೋ ಹಾಗೆ ನಾನು ಸರ್ವರಲ್ಲಿಯೂ ಇರುವುದರಿಂದ ನನ್ನನ್ನು ಬಿಟ್ಟು ನೀವು ಇರುವುದೆಲ್ಲಿ ಬಂತು ? ನಾನು ಆದಾನಾದಿಕರ್ತನು. ಪೂರ್ಣಜ್ಞಾನಿಯು ನಿರ್ದೋಷನು. ತ್ರಿಗುಣವರ್ಜಿತನು. ನಾನು ನಿಮ್ಮ ಸಮೀಪದಲ್ಲಿಯೇ ಇದ್ದರೂ, ನಿಮ್ಮ ಕಣ್ಣಿಗೆ ಕಾಣಿಸದೆ ದೂರವಿದ್ದಂತೆ ನಿಮಗೆ ಭಾಸವಾಗುತ್ತಿದೆ. ಅಖಂಡವಾಗಿ ಧ್ಯಾನವನ್ನು ನೀವು ಮಾಡಲು ನಿಮ್ಮ ಮನಸ್ಸನ್ನು ಸಂಯೋಜನೆ ಮಾಡಬೇಕೆಂದೇ ಹೀಗೆ ಮಾಡಿರುವೆನು. ನೀವು ಹೀಗೆ ಎಡೆಬಿಡದೆ ಧ್ಯಾನಮಾಡಿದರೆ ನನ್ನನ್ನು ಬೇಗ ಹೊಂದುವಿರಿ.

**ಗೋಪಿಯರು :–** ಉದ್ಧವಾ ! ಮಧುರಾಪುರಿಯ ತರುಣಿಯರೊಡನೆ ವಿಹರಿಸುವಾಗ ನಮ್ಮನ್ನು ಒಂದು ಬಾರಿಯಾದರೂ ಕೃಷ್ಣನು ಸ್ಮರಿಸಿಕೊಳ್ಳುವನೇ ? ಎಂದಾದರೂ ಬಂದು ಅಂಗಸಂಗದಿಂದ ನಮ್ಮನ್ನು ಅವನು ಬದುಕಿಸುವನೆ ? **ಸ್ವರಮಣನಾದ ಅವನಿಗೆ ಯಾರಿಂದಲೂ ಆಗ ಬೇಕಾದ ಸುಖವು ಇಲ್ಲ.** ನಮಗೆ ಮಾತ್ರ ಅವನ ಕಾಮವು (ಆಶೆಯು) ಬಿಟ್ಟಿಲ್ಲ. ಇಲ್ಲಿನ ವನ, ನದಿ ಮುಂತಾದುವುಗಳನ್ನು ನೋಡಿದಾಗ ಅವನ ಸ್ಮರಣೆಯು ಬರುವುದು. ಅವನ ಪಾದ ಸ್ಮರಣೆ ಮಾಡದಿರಲು ನಮಗೆ ಸಾಧ್ಯವೇ ಇಲ್ಲ.

ಶ್ಲೋಕ ॥

**ಹೇ ನಾಥ ಹೇ ರಮಾನಾಥ ವ್ರಜನಾಥಾರ್ತಿನಾಶನ ।**
**ಮಗ್ನಂ ಉದ್ಧರ ಗೋವಿಂದ ಗೋಕುಲಂ ವೃಜಿನಾರ್ಣವಾತ್ ॥**

**ನಲವತ್ತೈದನೆಯ ಅಧ್ಯಾಯ ಮುಗಿದುದು**

ಗೋಪಿಯರು ಕೃಷ್ಣಾಜ್ಞೆಯನ್ನು ಚಿಂತಿಸಿ ವಿರಹತಾಪದಿಂದ ಮುಕ್ತರಾಗಿ ಉದ್ಧವನನ್ನು ಪೂಜಿಸಿದರು. ಉದ್ಧವನು ಕೆಲವು ತಿಂಗಳುಗಳ ಕಾಲ ಅಲ್ಲಿಯೇ ಇದ್ದು, ಶ್ರೀಕೃಷ್ಣನು ಓಡಾಡಿದ ಸ್ಥಳ ಮತ್ತು ಅಲ್ಲಲ್ಲಿ ಮಾಡಿದ ವ್ಯಾಪಾರಗಳನ್ನು ಗೋಪರಿಂದ ಕೇಳುತ್ತಾ, ಹರಿಯನ್ನೇ ಸ್ಮರಿಸುತ್ತ, ಸಂತೋಷದಿಂದ ಇದ್ದು, ತನ್ನ ಮನಸ್ಸಿನಲ್ಲಿ ಹೀಗೆ ಚಿಂತಿಸಿದನು :–

ಗೋಪಿಯರು ದೃಢಭಕ್ತರಾಗಿ ತಮ್ಮ ಜನ್ಮವನ್ನು ಸಫಲಮಾಡಿಕೊಂಡಿರುವರು. ಗೊಲ್ಲತಿಯರಾಗಿ ಹುಟ್ಟಿದ್ದರೂ ಅವರಿಗೆ ಈ ಭಕ್ತಿಯು ಆಶ್ಚರ್ಯವೆ ! !

ಶ್ಲೋಕ ॥

**ಆಸಾಮಹೋ ಚರಣರೇಣುಜುಷಾಮಹಂ ಸ್ಯಾಂ ವೃಂದಾವನೇ ಕಿಮಪಿ ಗುಲ್ಮ ಲತೌಷಧೀನಾಂ ॥**

= ಈ ಭಾಗ್ಯವತಿಯರ ಪಾದಧೂಳಿಯನ್ನು ಸೇವಿಸುತ್ತಿರುವ ಈ ಬೃಂದಾವನ ದಲ್ಲಿರುವ ತರು, ಗುಲ್ಮ, ಬಳ್ಳಿ ಮೊದಲಾದುವುಗಳಲ್ಲಿ ಯಾವುದಾದರೂ ಒಂದು ಜನ್ಮವು ನನಗೆ ಲಭಿಸಲಿ ! ಅದೇ ನನಗೆ ಭಾಗ್ಯ ! ಇವರ ಪಾದಧೂಳಿಯನ್ನು ನನ್ನ ತಲೆಯ ಮೇಲೆ ಇಟ್ಟು ಸ್ತುತಿಸುವೆನು. (ಉದ್ಧವನು ಮಧುರೆಗೆ ಹೊರಡಲು ಸಿದ್ಧನಾದುದನ್ನು ನೋಡಿ)

**ಗೋಪರು :–** ಸೌಮ್ಯ ! ಉದ್ಧವ ! ಇನ್ನು ನಾವು ಹೇಳತಕ್ಕದ್ದೇನಿದೆ ? ನಮ್ಮ ಮನಸ್ಸು ಶ್ರೀಹರಿಯ ಪಾದಗಳಲ್ಲಿ ನೆಲೆಸಲಿ ! ನಾಲಗೆ ಅವನ ನಾಮವನ್ನು ನುಡಿಯುತ್ತಿರಲಿ ! ದೇಹವು ಅವನಿಗೆ ನಮಿಸುತ್ತಿರಲಿ ! ಹಿಂದೆ ಮಾಡಿದ ಪುಣ್ಯವೇನಾದರೂ ಇದ್ದರೆ ಶ್ರೀಕೃಷ್ಣನಲ್ಲಿ ಭಕ್ತಿಯು ಶಾಶ್ವತವಾಗಿರಲಿ ! (ಉದ್ಧವನು ಬಂದು ಶ್ರೀಕೃಷ್ಣನಿಗೆ ಗೋಕುಲದವರ ಭಕ್ತ್ಯತಿಶಯವನ್ನು ತಿಳಿಸಿದನು.)

## ನಲವತ್ತಾರನೆಯ ಅಧ್ಯಾಯ ಮುಗಿದುದು

ಶ್ರೀಕೃಷ್ಣನು ಒಂದು ದಿನ ಉದ್ಧವನೊಡನೆ ಸೈರಂಧ್ರಿಯ ಮನೆಗೆ ಬಂದು, ಹಿಂದೆ ಕೊಟ್ಟ ಮಾತಿನಂತೆ ಅವಳನ್ನು ಸುಖಪಡಿಸಿದನು. ಆಕೆಯು ಕೃಷ್ಣನನ್ನು ತನ್ನ ಮನೆಯಲ್ಲಿಯೇ ಕೆಲವು ದಿನಗಳು ಇರಬೇಕೆಂದು ಪ್ರಾರ್ಥಿಸಿದಾಗ, ಇನ್ನೊಂದು ಬಾರಿ ಬಂದು ಅವಳ ಅಭೀಷ್ಟವನ್ನು ಪೂರೈಸುವುದಾಗಿ ವರವನ್ನು ಕೊಟ್ಟು ತನ್ನ ಅರಮನೆಗೆ ಬಂದನು.

ಶ್ರೀಕೃಷ್ಣನು ಅಕ್ರೂರನಿಗೆ ಮಾತು ಕೊಟ್ಟಿದ್ದಂತೆ ಬಲರಾಮ ಮತ್ತು ಉದ್ಧವರೊಡನೆ ಅವನ ಮನೆಗೆ ಹೋದನು. ಅಕ್ರೂರನು ಆನಂದಿಸಿ ಅವರಿಗೆ ಭಕ್ತಿಪೂರ್ವಕವಾಗಿ ಸತ್ಕಾರಮಾಡಿದನು.

**ಅಕ್ರೂರ :–** ಮಹಾತ್ಮಾ ! ನಿಮ್ಮಿಂದ ಕಂಸನು ಹತನಾಗಿ, ಅವನಿಂದಾಗಿದ್ದ ಹಿಂಸೆ ಮತ್ತು ಸಂಕಟಗಳೆಲ್ಲ ಪರಿಹಾರವಾಗಿ, ಈ ಕುಲವು ಪಾವನವಾಗಿ ಅಭಿವೃದ್ಧಿಯಾಯಿತು. ಕೃಷ್ಣ ! ನೀನು ಸೃಷ್ಟ್ಯಾದಿಕರ್ತನು. ನಿನ್ನಿಂದ ಸೃಷ್ಟವಾದ ಪದಾರ್ಥಗಳೊಳಗೆಲ್ಲ ತದ್ರೂಪ ತನ್ಮಾತ್ಮಕನಾಗಿರುವೆ. ಅಣುಮಹತ್ತಾಗಿ ತೋರುವೆ. ಜನನಾದಿದೋಷದೂರನಾಗಿರುವೆ. ಈ ತತ್ತ್ವನಿಶ್ಚಯಜ್ಞಾನವು ನಮಗೆ ಉಂಟಾಗಲಿ ! ದುಷ್ಟರು ಅಪಾರ್ಥಮಾಡಿ ಶಾಸ್ತ್ರವನ್ನು ಕೆಡಿಸಿದಾಗಲೆಲ್ಲ ಅವತರಿಸಿ ಜ್ಞಾನೋಪದೇಶಮಾಡಿ ಸಜ್ಜನರನ್ನು ಸನ್ಮಾರ್ಗದಲ್ಲಿ ಸ್ಥಿರವಾಗಿ ಸ್ಥಾಪಿಸುವೆ. ವೇದವ್ಯಾಸರಿಂದ ಅಭಿನ್ನನಾದ ನೀನು ಕೃಷ್ಣಕೇಶಾಂಶದಿಂದ ದೇವಕಿಯಲ್ಲಿ ಅವತರಿಸಿರುವೆ. ಜಗದ್ಗುರುವಾದ ನೀನು ಈ ಮನೆಗೆ ಬಂದುದರಿಂದ ಮಹಾ ಸಂಪತ್ತುಂಟಾಯಿತು. ನಿನ್ನ ದರ್ಶನವು ದುರ್ಲಭ. ನೀನು ಪ್ರತ್ಯಕ್ಷನಾಗಿರುವಾಗಲೇ ಸತೀಸುತಾದಿಗಳಲ್ಲಿರುವ ಅಭಿಮಾನವನ್ನು ಬಿಡಿಸಿಬಿಡು.

**ಕೃಷ್ಣ :–** (ಅಕಾಲದಲ್ಲಿ ಬಂದ ವಿವೇಕವನ್ನು ಮರೆಮಾಡಿ) ನೀನು ನಮ್ಮ ಚಿಕ್ಕಪ್ಪನು. ನಾವು ನಿನ್ನ ಮಕ್ಕಳು. ನಮ್ಮ ಪೋಷಣೆ ಮುಂತಾದುದೆಲ್ಲವೂ ನಿನಗೇ

ಸೇರಿವೆ. ಸಾಧುಗಳಾದ ನಿಮ್ಮಂತಹವರು ಸ್ವಾರ್ಥಪರರಲ್ಲ. ಪರಾರ್ಥೈಕನಿಷ್ಠರು. ಆದ್ದರಿಂದ ಕಿರಿಯರಾದ ನಮ್ಮಿಂದ ಸೇವಿಸಲ್ಪಡಲು ಅರ್ಹರು.

ಶ್ಲೋಕ ॥

**ನಹ್ಯಮ್ಮಯಾನಿ ತೀರ್ಥಾನಿ ನ ದೇವಾ ಮೃಚ್ಛಿಲಾಮಯಾಃ ।**
**ತೇ ಪುನಂತ್ಯುರುಕಾಲೇನ ದರ್ಶನಾದೇವ ಸಾಧವಃ ॥**

ಜಡವಾದ ನೀರಾಗಲಿ, ಮಣ್ಣು, ಕಲ್ಲಿನ ಪ್ರತಿಮೆಗಳಾಗಲಿ ದೇವತೆಗಳಲ್ಲ. ಆದ್ದರಿಂದ ಜಡಗಳಾದ ಅವು ತಾವಾಗಿ ಪವಿತ್ರಮಾಡಲಾರವು. ತಮ್ಮಲ್ಲಿ ಸಂನಿಹಿತರಾಗಿರುವ ದೇವತೆಗಳ ಮೂಲಕ ಬಹುಕಾಲದ ಮೇಲೆ ಪಾವನಮಾಡುವುವು. ಸಜ್ಜನರಾದರೋ ಸ್ವಾರ್ಥಕ್ಕಾಗಿ ಸಂಚರಿಸುವವರಲ್ಲ. ಸಜ್ಜನರಾದವರಿಗೆ ಅನುಗ್ರಹಿಸ ಬೇಕೆಂದು ಸಂಚರಿಸುವವರು. ಆದ್ದರಿಂದ ಅವರು ತಮ್ಮ ದರ್ಶನಮಾತ್ರದಿಂದಲೇ ಸಜ್ಜನರನ್ನು ಪಾವನಮಾಬಿಡಿಡುತ್ತಾರೆ.

ಇಂತಹ ಸಾಧುವಾದ ನೀನು ನಮ್ಮ ಹಿತೈಷಿಯು. ನಮಗಾಗಿ ನೀನು ಒಂದು ಕಾರ್ಯವನ್ನು ಮಾಡಬೇಕು. ಏನೆಂದರೆ ಹಸ್ತಿನಾವತಿಗೆ ಹೋಗಿ ಧೃತರಾಷ್ಟ್ರನು ತನ್ನ ಮಕ್ಕಳನ್ನು ನೋಡುವಂತೆ ತನ್ನ ತಮ್ಮನ ಮಕ್ಕಳಾದ ಪಾಂಡವರನ್ನು ನೋಡುತ್ತಿರು ವನೇ ಅಥವಾ ಪಕ್ಷಪಾತ ಮಾಡುತ್ತಿರುವನೇ ? ವಿಚಾರಮಾಡಿ ತಿಳಿದು ಬಾ. ಬಳಿಕ ನಮ್ಮ ಬಂಧುಗಳಾದ ಪಾಂಡವರಿಗೆ ಸುಖವಾಗುವ ರೀತಿಯಲ್ಲಿ ಕಾರ್ಯಮಾಡೋಣ.

## ನಲವತ್ತೇಳನೆಯ ಅಧ್ಯಾಯ ಮುಗಿದುದು

ಅಕ್ರೂರನು ಕೃಷ್ಣಾಜ್ಞೆಯಂತೆ ಹಸ್ತಿನವತಿಗೆ ಹೋಗಿ, ಭೀಷ್ಮಾದಿಗಳನ್ನು ಕಂಡು ಕುಶಲವಿಚಾರಮಾಡಿದನು. ಯಾದವರ ಕುಶಲವನ್ನು ಅವರಿಗೂ ತಿಳಿಸಿದನು. ಅಲ್ಲಿಯೇ ಇದ್ದು ಧೃತರಾಷ್ಟ್ರನು ತನ್ನ ಮಕ್ಕಳವಶನಾಗಿರುವನೆಂದೂ, ಪಾಂಡವರಲ್ಲಿ ಪ್ರಜೆಗಳೆಲ್ಲರೂ ಬಹುವಾಗಿ ಅನುರಾಗವಿಟ್ಟಿರುವರೆಂದೂ, ಕುಂತಿ ಮತ್ತು ವಿದುರಾದಿ ಗಳಿಂದ ತಿಳಿದನು. ಈವೇಳೆಯಲ್ಲಿಯೇ ಕುಂತಿಯು ತನ್ನ ಗಂಡ ಪಾಂಡುರಾಜನನ್ನು ಕಳೆದುಕೊಂಡದ್ದು ಮಕ್ಕಳು ಪರದೇಶಿಗಳಾದುದು ಮೊದಲಾದ ಹಿಂದಿನ ಸಂಗತಿಗಳನ್ನು ಸ್ಮರಿಸಿಕೊಂಡು ಅತ್ತಳು. ಅಕ್ರೂರನೂ, ವಿದುರನೂ ಆಕೆಯನ್ನು ಸಮಾಧಾನ ಮಾಡಿದರು. ಅಕ್ರೂರನು ಹೊರಡಲು ಸಿದ್ಧನಾಗಿ ಬಂಧುಗಳ ಸಭೆಗೆ ಬಂದು

**ಅಕ್ರೂರ :–** ಧೃತರಾಷ್ಟ್ರನೇ ! ನೀನೀಗ ಕುರುರಾಜನ ಸಿಂಹಾಸನವನ್ನು ಏರಿರತಕ್ಕವನು. ಪ್ರಜೆಗಳನ್ನು ಯೋಗ್ಯರೀತಿಯಿಂದ ಕಾಪಾಡು ! ನಿನ್ನ ಮಕ್ಕಳ

ಲ್ಲಿಯೂ, ನಿನ್ನ ತಮ್ಮ ಪಾಂಡುರಾಜನ ಮಕ್ಕಳಲ್ಲಿಯೂ ಪಕ್ಷಪಾತ ಮಾಡದೆ ಸಮ ವಾಗಿ ನಡೆದುಕೊಂಡರೆ ಕೀರ್ತಿಯನ್ನೂ ಮತ್ತೂ ಶ್ರೇಯಸ್ಸನ್ನೂ ಹೊಂದುವೆ. ಅಧರ್ಮದಿಂದ ನರಕವಾಗುತ್ತದೆಯಾಗಿ ದೇಹ ಮತ್ತು ಮಕ್ಕಳು ಮೊದಲಾದವರಲ್ಲಿ ಮಮತೆಯನ್ನು ಬಿಟ್ಟು ಸರ್ವವೂ ಭಗವಂತನ ಅಧೀನವೆಂದೂ ನಿಶ್ಚಯಿಸಿ, ರಾಗ ದ್ವೇಷಾದಿಗಳನ್ನು ತೊರೆದು ಮನಸ್ಸನ್ನು ನಿಗ್ರಹಿಸಿ ಶಾಂತಚಿತ್ತನಾಗಿ ನಡೆದುಕೋ.

**ಧೃತರಾಷ್ಟ್ರ :–** ಅಕ್ರೂರನೇ ! ನಿನ್ನ ಹಿತೋಕ್ತಿಯನ್ನು ಕೇಳಿ ಸಂತೋಷ ವಾಯಿತು. ನೀನು ಹೇಳಿದ ಬುದ್ಧಿವಾದವು ಶ್ರೇಯಸ್ಕರವೆಂಬ ವಿಷಯದಲ್ಲಿ ಸಂದೇ ಹವೇ ಇಲ್ಲ. ಆದರೆ ಪುತ್ರವ್ಯಾಮೋಹವು ಹೋಗಿಲ್ಲ. ಮನಸ್ಸು ಸ್ಥಿರವಾಗಿ ನಿಲ್ಲುತ್ತಿಲ್ಲ. ಇದರ ಮೇಲೆ ಭೂಭಾರಹರಣಕ್ಕಾಗಿ ಅವತರಿಸಿರುವ ಶ್ರೀಕೃಷ್ಣನ ಸಂಕಲ್ಪವನ್ನು ವ್ಯತ್ಯಾಸ ಮಾಡಲು ಯಾರಿಗೆ ಶಕ್ತಿಯಿದೆ. ಅವನ ಪ್ರೇರಣೆಯಂತೆ ನಡೆಯುವೆನು.

**ಅಕ್ರೂರ :–** (ಇದು ಕಳ್ಳವೇದಾಂತವೆಂದು ತಿಳಿದು) ನಿನಗೆ ನೂರು ಮಂದಿ ಮಕ್ಕಳು ಇಲ್ಲವೆಂದೇ ತಿಳಿ. (ಹೀಗೆ ಹೇಳಿ ಮಧುರೆಗೆ ಬಂದು ಆ ಸಂಗತಿ ಗಳನ್ನೆಲ್ಲ ಶ್ರೀಕೃಷ್ಣನಿಗೆ ತಿಳಿಸಿದನು.)

**ನಲವತ್ತೆಂಟನೆಯ ಅಧ್ಯಾಯ ಮುಗಿದುದು**

**ದಶಮಸ್ಕಂಧ ಪೂರ್ವಾರ್ಧ ಸಂಪೂರ್ಣ**

# ದಶಮಸ್ಕಂಧ ಉತ್ತರಾರ್ಧಪ್ರಾರಂಭ

ಕಂಸನ ಪತ್ನಿಯರು ಅಸ್ತಿಪ್ರಾಸ್ತಿಯೆಂಬುವರು ತಮ್ಮ ತಂದೆಯಾದ ಜರಾಸಂಧನ ಬಳಿಗೆ ಹೋಗಿ, ಕೃಷ್ಣನಿಂದ ತಮಗೆ ವೈಧವ್ಯಬಂತೆಂದು ದೂರಿಕೊಂಡರು. ಹರಿಯ ದ್ವೇಷಿಯಾದ ಜರಾಸಂಧನು ಇಪ್ಪತ್ತಮೂರು ಅಕ್ಷೌಹಿಣೀ ಸೈನ್ಯದೊಡನೆ ಬಂದು ಮಧುರೆಯನ್ನು ಮುತ್ತಿದನು. ಜರಾಸಂಧನನ್ನು ಈಗ ಕೊಂದರೆ ಭೂಭಾರ ಭೂತರಾದ ದುಷ್ಟರು ಸಾಯುವುದಿಲ್ಲವೆಂದೂ, ಜರಾಸಂಧನನ್ನು ಕೊಲ್ಲದೆ ಹೋದರೆ ಅವನು ಮತ್ತೆಮತ್ತೆ ತರುವ ಸೈನ್ಯವನ್ನು ನಾಶಮಾಡಿದರೆ ಭೂಭಾರವು ಇಳಿಯುವುದೆಂದೂ ಶ್ರೀಕೃಷ್ಣನು ಆಲೋಚಿಸಿದನು. ಆಗ ಹರಿ ಮತ್ತು ಶೇಷದೇವರ ಎರಡು ರಥಗಳು ಮತ್ತು ಆಯುಧಗಳು ಗಗನದಿಂದ ಬಂದುವು. ಕೃಷ್ಣರಾಮರು ತಮ್ಮ ತಮ್ಮ ರಥಗಳನ್ನೇರಿ ಯುದ್ಧಮಾಡಿದರು. ಶ್ರೀಕೃಷ್ಣನು ಎಲ್ಲ ರಾಜರನ್ನೂ ಓಡಿಸಿ ಸಂಪೂರ್ಣವಾಗಿ ಆ ಸೈನ್ಯವನ್ನು ಸಂಹರಿಸಿದನು. ಜರಾಸಂಧನು ಬಲರಾಮನನ್ನು ಇದಿರಿಸಿದನು. ಬಲರಾಮನು ಅವನ ರಥಾದಿಗಳನ್ನು ನಾಶಮಾಡಿ ವರುಣಪಾಶದಿಂದ ಅವನನ್ನು ಕಟ್ಟುತ್ತಾ ಇರಲು ಶ್ರೀಕೃಷ್ಣನು ಬಂದು ಅವನನ್ನು ಬಿಡು ಎಂದು ಹೇಳಿದನು. ಜರಾಸಂಧನು ಇಪ್ಪತ್ತಮೂರು ಅಕ್ಷೌಹಿಣೀ ಸೈನ್ಯಗಳನ್ನು ಕಳೆದುಕೊಂಡು ದುಃಖದಿಂದ ತನ್ನ ಊರಿಗೆ ಹೋದನು. ಶ್ರೀಕೃಷ್ಣನು ಜಯೋತ್ಸವದಿಂದ ಮಧುರಾನಗರಿಯನ್ನು ಪ್ರವೇಶಿಸಿ ಎಲ್ಲರಿಂದಲೂ ಪೂಜಿತನಾಗಿ ಉಗ್ರಸೇನನಿಗೆ ಶತ್ರುಗಳ ಧನಭೂಷಣಗಳನ್ನು ಅರ್ಪಿಸಿದನು.

### ನಲವತ್ತೊಂಭತ್ತನೆಯ ಅಧ್ಯಾಯ ಮುಗಿದುದು

ಜರಾಸಂಧನು ತಿರುಗಿ ಮೂರನೆಯ ತಿಂಗಳಲ್ಲಿ ಇಪ್ಪತ್ತಮೂರು ಅಕ್ಷೌಹಿಣೀ ಸೇನಾಸಮೇತನಾಗಿ ಬಂದು ಯಮುನೆಯ ತೀರದಲ್ಲಿ ಬಿಡಾರ ಮಾಡಿ ರಾತ್ರಿ ವಿಶ್ರಮಿಸಿಕೊಳ್ಳುತ್ತಿದ್ದನು. ಇದನ್ನು ನೋಡಿ ಕೃಷ್ಣಾದಿಗಳು ಬೆಳಗಿನ ಜಾವದಲ್ಲಿ ನಾಲ್ಕು ದಿಕ್ಕುಗಳಲ್ಲಿಯೂ ಶತ್ರುಸೈನ್ಯವನ್ನು ಮುತ್ತಿ ಧ್ವಂಸಮಾಡಿ. ಜರಾಸಂಧನು ಓಡಿಹೋದುದನ್ನು ನೋಡಿ, ಅಲ್ಲಿ ದೊರೆತ ಸಕಲ ಧನ, ಆಭರಣ, ಆನೆಗಳು, ಕುದುರೆಗಳು ಮತ್ತು ದಾಸಿಯರು ಎಲ್ಲರನ್ನೂ ತಂದು ಉಗ್ರಸೇನನಿಗೆ ಕೊಟ್ಟರು.

### ಐವತ್ತನೆಯ ಅಧ್ಯಾಯ ಮುಗಿದುದು

ಜರಾಸಂಧನು ಶೋಣಿತಪುರಕ್ಕೆ ಹೋಗಿ ಬಾಣಾಸುರನಿಂದ ಸತ್ಕೃತನಾಗಿ, ಅರವತ್ತು ಸಾವಿರ ಆನೆಗಳು, ಲಕ್ಷರಥಗಳು. ಹತ್ತು ಲಕ್ಷ ಕುದುರೆಗಳು, ಕಪಟಯುದ್ಧ ಬಲ್ಲ ಮೂವತ್ತು ಮಂದಿ ದಾನವವೀರರು ಮತ್ತು ಮಂತ್ರಿಗಳಾದ ಕುಂಭಾಂಡ ಹಾಗೂ ಕೂಪಕರ್ಣರೆಂಬ ದೈತ್ಯಶ್ರೇಷ್ಠರನ್ನು ಪಡೆದು, ಅನೇಕರಾಜರಿಂದಲೂ. ಇಪ್ಪತ್ತ ಮೂರು ಅಕ್ಷೌಹಿಣೀಸೇನೆಯೊಡನೆ ಬಂದು ಮಧುರೆಗೆ ಮುತ್ತಿಗೆ ಹಾಕಿದನು. ಕೋಟೆ ಗೋಡೆಗಳನ್ನು ಕೆಡಹಿ ನೆಲಸಮಮಾಡಿದನು. ಯಾದವರು ಸೇನಾಸಮೇತರಾಗಿ ಬಂದು ಇವರನ್ನೆಲ್ಲ ಇದಿರಿಸಿ ಯುದ್ಧಮಾಡಿದರು. ರಾಮಕೃಷ್ಣರು ಜರಾಸಂಧನ ಸೈನ್ಯವನ್ನೆಲ್ಲ ಸಂಹರಿಸಿದನು. ಕುಂಭಾಂಡನು ಸಾತ್ಯಕಿಯಿಂದಲೂ, ಕೂಪಕರ್ಣನು ಕೃತವರ್ಮನಿಂದಲೂ ಸೋತು ತಮ್ಮ ಕಡೆಯ ಸತ್ತುಳಿದ ರಾಕ್ಷಸರನ್ನು ಕರೆದುಕೊಂಡು ಜರಾಸಂಧನಿಗೂ ಹೇಳದಂತೆ ಶೋಣಿತಪುರಕ್ಕೆ ಓಡಿಹೋದರು.

## ಐವತ್ತೊಂದನೆಯ ಅಧ್ಯಾಯ ಮುಗಿದುದು

ಜರಾಸಂಧನು ತಿರುಗಿಬಂದು ಯುದ್ಧಮಾಡಿದನು. ಅವನನ್ನು ಬಲರಾಮನು ಹಿಡಿದು ಮುಸಲಾಯುಧದಿಂದ ಕೊಲ್ಲಲೆತ್ನಿಸಿದಾಗ, ಬಲರಾಮನನ್ನು ಕುರಿತು "ಇವನನ್ನು ಕೊಲ್ಲಬೇಡ" ಎಂದು ಅಶರೀರವಾಣಿಯಾಯಿತು. ಬಲರಾಮನು ಜರಾಸಂಧನನ್ನು ಕೊಲ್ಲದೆ ಬಿಟ್ಟುಬಿಟ್ಟನು. ಆದೈತ್ಯನಿಗೆ ಬಹಳ ಅವಮಾನ ವಾಯಿತು. ಇಪ್ಪತ್ತಮೂರು ಅಕ್ಷೌಹಿಣೀಸೈನ್ಯವನ್ನೂ ಕಳೆದುಕೊಂಡು ನಾಚಿಕೆ ಯಿಂದ ಊರಿಗೆ ಹೋದನು.

ತಿರುಗಿ ಜರಾಸಂಧನು ಅಷ್ಟೇ ಸೈನ್ಯವನ್ನು ಜಮಾಯಿಸಿ ಯುದ್ಧ ಮಾಡಲು ಹೊರಟನು. ಆಗ ಶ್ರೀಕೃಷ್ಣನು ಸಭೆಯಲ್ಲಿ ಉದ್ಧವಾದಿಗಳೊಡನೆ ಆಲೋಚಿಸಿ ಉಗ್ರ ಸೇನಾದಿಗಳ ಅಪ್ಪಣೆ ಪಡೆದು ಗೋಮಂತ ಪರ್ವತವನ್ನು ನೋಡಲೋಸುಗ ದಕ್ಷಿಣಾಭಿಮುಖವಾಗಿ ಹೊರಟನು. ಅನೇಕ ದೇಶಗಳನ್ನು ದಾಟಿಹೋಗುತ್ತಿರುವಾಗ ಒಂದು ಮರದ ಕೆಳಗೆ ಕುಳಿತಿದ್ದ ಪರಶುರಾಮ ದೇವರನ್ನು ಕಂಡು, ಅಣ್ಣ ತಮ್ಮಂದಿ ರಿಬ್ಬರೂ ಅವರಿಗೆ ನಮಸ್ಕಾರಮಾಡಿದರು. ಹಾಗೂ ತಮ್ಮ ಸಂಗತಿಯನ್ನು ತಿಳಿಸಿದರು.

**ಪರಶುರಾಮ :**– ನೀವು ಗೋಮಂತ ಪರ್ವತವನ್ನು ಕುರಿತು ಹೋಗುವುದಕ್ಕೆ ಮುಂಚಿತವಾಗಿ ಆ ಪರ್ವತದ ಬುಡದಲ್ಲಿರುವ ಕರವೀರಪುರಕ್ಕೆ ರಾಜನಾದ ಸೃಗಾಲ ವಾಸುದೇವನನ್ನು ಕೊಂದು ಮುಂದಕ್ಕೆ ಸುಖವಾಗಿ ಹೋಗಿರಿ.

(ರಾಮಕೃಷ್ಣರು ಅದರಂತೆ ಕರವೀರಪುರದ ಬಳಿಗೆ ಹೋಗಿ ಶಂಖವನ್ನೂದಿದರು. ಶೃಗಾಲ ವಾಸುದೇವನು ಬಂದು ಅವರೊಡನೆ ಯುದ್ಧಮಾಡಿ, ಕೃಷ್ಣನಿಂದ ಹತನಾದನು. ಬಳಿಕ ವಾಸುದೇವನು ಆ ಪುರದೊಳಗೆ ಪ್ರವೇಶಿಸಿ ಸಕಲವರ್ಣದ ಪ್ರಜೆಗಳಿಂದಲೂ ಪೂಜಿತನಾಗಿ, ಸೃಗಾಲನ ಆನೆ, ಕುದುರೆ, ಭಂಡಾರ ಎಲ್ಲವನ್ನೂ ದೂತರ ಮೂಲಕ ಮಥುರೆಗೆ ಕಳುಹಿಸಿದನು.

## ಸೂಚನೆ

ಮಹಾಭಾರತ ತಾತ್ಪರ್ಯ ನಿರ್ಣಯದ ಪ್ರಕಾರ ಗೋಮಂತದಲ್ಲಿ ಜರಾಸಂಧಾದಿಗಳನ್ನು ಸೋಲಿಸಿದ ನಂತರ ಶೃಗಾಲ ವಾಸುದೇವನ ಸಂಹಾರವಾಯಿತೆಂದು ತಿಳಿಯಬೇಕು.

## ಐವತ್ತೆರಡನೆಯ ಅಧ್ಯಾಯ ಮುಗಿದುದು

ರಾಮಕೃಷ್ಣರು ಗೋಮಂತ ಪರ್ವತಕ್ಕೆ ಬಂದು ಪ್ರವರ್ಷಣವೆಂಬ ಅದರ ಶಿಖರವನ್ನೇರಿದರು. ಅತ್ತ ವೈಕುಂಠಕ್ಕೆ ಬಂದ ಬಲಿರಾಜನು ಸುಮ್ಮನೆ ಕಣ್ಣುಮುಚ್ಚಿ ಮಲಗಿದ್ದ ನಾರಾಯಣನ ಕಿರೀಟವನ್ನು ಕದ್ದು ಒಯ್ಯುತ್ತಿದ್ದಾಗ ಗರುಡನು ಬೆನ್ನಟ್ಟಿ ಹೋಗಿ ಅವನನ್ನು ಗೆದ್ದು ಕಿರೀಟವನ್ನು ತೆಗೆದುಕೊಂಡು ಹಿಂತಿರುಗಿ ಬರುವಾಗ ಗೋಮಂತ ಶಿಖರದಲ್ಲಿದ್ದ ಗೋವಿಂದನನ್ನು ನೋಡಿದನು. ಕೂಡಲೇ ಗಗನದಿಂದ ಕೆಳಗಿಳಿದು ಆ ಕಿರೀಟವನ್ನು ಕೃಷ್ಣನ ತಲೆಯ ಮೇಲಿಟ್ಟನು. ಅದು ಅವನ ತಲೆಗೆ ಸರಿಯಾಗಿತ್ತು. ಇದರಿಂದ ವೈಕುಂಠ ನಾರಾಯಣನೇ ಶ್ರೀಕೃಷ್ಣನೆಂದೂ, ಅವರೀರ್ವರಿಗೆ ಸ್ವಲ್ಪವೂ ಭೇದವಿಲ್ಲವೆಂದೂ ಹೇಳಿದಂತಾಯಿತು.

**ಗರುಡ :–** "ನಮೋ ನಮಃ ಕಾರಣಪೂರುಷಾಯ ನಾರಾಯಣಾಯಾಖಿಲವಲ್ಲಭಾಯ । ಸುರಾರಿ ಸಂಹಾರಕಾರಣಾಯ ನಾರಾಯಣಾಖಿಲಕರ್ಮಸಾಕ್ಷಿಣೇ ॥"

ನಾರಾಯಣನೇ ! ಬ್ರಹ್ಮದೇವರಲ್ಲಿ ಬ್ರಹ್ಮನಾಮಕನೇ ಆಗಿದ್ದು ಸೃಷ್ಟಿಸುವೆ. ಸಾಕ್ಷಾತ್ತಾಗಿ ಪಾಲಿಸುವೆ. ಶಿವನಲ್ಲಿ ಶಿವನಾಮಕನಾಗಿದ್ದು ನೀನೇ ಸಂಹರಿಸುವೆ. ಯದುವಂಶದಲ್ಲಿ ಅವತರಿಸಿರುವ ನೀನು ವಿಷ್ಣುವೆಂಬುದನ್ನು ಬಲ್ಲೆನು. ನಾನು ನಿನ್ನ ಸೇವಕನಾದ ಗರುಡನು. ಏನನ್ನು ಮಾಡಲಿ ಅಪ್ಪಣೆಯಾಗಬೇಕು.

**ಕೃಷ್ಣ ;–** ಸ್ಮರಿಸಿದಾಗ ಬಾ ! ಈಗ ಹೊರಡು.

(ಜರಾಸಂಧನು ಸೈನ್ಯಸಹಿತನಾಗಿ ಪರ್ವತ ಯುದ್ಧಮಾಡಲು ಬಂದು ಗೋಮಂತ ಪರ್ವತದ ಸುತ್ತಲೂ ಬೆಂಕಿ ಹಾಕಿದನು. ಕೃಷ್ಣರಾಮರು ಪರ್ವತದ

ಬಿಡದಲ್ಲಿ ಸೇರಿದ್ದ ಸೈನ್ಯದ ಮಧ್ಯಕ್ಕೆ ಹಾರಿ ಬಂದರು. ಕೃಷ್ಣನು ಪಾದದಿಂದ ಮೆಟ್ಟಿದ ಪ್ರಯುಕ್ತ ಪರ್ವತವು ಭೂಮಿಯೊಳಗೆ ಕುಸಿದುಹೋಗಿ ಶಿಖರ ಮಾತ್ರ ಮೇಲೆ ಕಾಣಿಸಿತು. ಕೃಷ್ಣನು ಸೈನ್ಯವನ್ನು ಸಂಹರಿಸಿ ಜರಾಸಂಧನನ್ನು ಸೋಲಿಸಿ ಮಧುರೆಗೆ ಬಂದನು. ಜರಾಸಂಧನಿಗೆ ಇದು ಹದಿನೇಳನೆಯ ಬಾರಿ ಆದ ಸೋಲು. ಆದರೂ ಆ ಮೂರ್ಖನು ಹದಿನೆಂಟನೆಯ ಬಾರಿಯೂ ಯುದ್ಧಕ್ಕೆ ಪ್ರಯತ್ನಿಸಿದನು. ಆಗ ಕಾಲಯವನನೆಂಬ, ಕೃಷ್ಣನ ಸಂಹಾರಕ್ಕಾಗಿ ಶಿವನ ವರದಿಂದ ಹುಟ್ಟಿದ್ದ ಮ್ಲೇಚ್ಛನು ನಾರದರಿಂದ ಪ್ರೇರಿತನಾಗಿ ಮಧುರೆಗೆ ಸೇನಾಸಮೇತನಾಗಿ ಯುದ್ಧ ಮಾಡಲು ಬಂದನು. ಶ್ರೀಕೃಷ್ಣನು ಮಧುರಾ ವಾಸಿಗಳೆಲ್ಲರನ್ನೂ ದ್ವಾರಕಿಗೆ ಸಾಗಿಸಿ, ತಾನೊಬ್ಬನೇ ಪದ್ಮಮಾಲೆಯನ್ನು ಧರಿಸಿ ಪುರದ್ವಾರದ ಹೊರಗೆ ಯುದ್ಧ ಮಾಡಲು ಬಂದನು.

## ಐವತ್ತಮೂರನೆಯ ಅಧ್ಯಾಯ ಮುಗಿದುದು

ಕಾಲಯವನನು ಪದಾತಿಯಾಗಿ ಬಂದ ಕೃಷ್ಣನನ್ನು ನೋಡಿ ತಾನೂ ರಥವಿಲ್ಲದೆ ಅವನನ್ನು ಇದಿರಿಸಲು ಸಿದ್ಧನಾದನು. ಶ್ರೀಕೃಷ್ಣನು ಓಡಿದನು. ಅವನು ಹೆದರಿ ಓಡುತ್ತಿರುವನೆಂದು ಕಾಲಯವನನು ತಿಳಿದು ಅವನ ಬೆನ್ನಟ್ಟಿ ಓಡಿದನು. ಮತ್ತು ಮೂದಲಿಸುತ್ತ ಹೋದನು. ಶ್ರೀಕೃಷ್ಣನು ಓಡಿ ಓಡಿ ಹಿಮಾಲಯ ಪರ್ವತದ ಗುಹೆಯೊಳಗೆ ಪ್ರವೇಶಿಸಿ ಅಲ್ಲಿ ಕಣ್ಮರೆಯಾದನು. ಕಾಲಯವನನೂ ಅವನ ಹಿಂದೆಯೇ ಹೋಗಿ ಗುಹೆಯಲ್ಲಿ ಮಲಗಿದ್ದ ಪುರುಷನನ್ನು ಕೃಷ್ಣನೆಂದು ಭ್ರಮಿಸಿ ಒದ್ದನು. ಮಲಗಿದ್ದ ಪುರುಷನು ಎಚ್ಚೆತ್ತು ತನ್ನ ಕಾಲುಕಡೆ ನಿಂತಿದ್ದವನನ್ನು ದಿಟ್ಟಿಸಿ ನೋಡಿದನು. ಕೂಡಲೇ ಕಾಲಯವನನು ಸುಟ್ಟು ಬೂದಿಯಾದನು.

**ಪರೀಕ್ಷಿದ್ರಾಜ :–** ಮುನಿಯೇ ! ಗುಹೆಯಲ್ಲಿ ಮಲಗಿದ್ದವನು ಯಾರು ? ದಿಟ್ಟಿಸಿದ ಮಾತ್ರಕ್ಕೆ ಸುಡುವ ಶಕ್ತಿಯು ಅವನಿಗೆ ಹೇಗೆ ಬಂದಿತು ?

**ಶುಕ ,–** ಹಿಂದೆ ದೇವತೆಗಳು ದೈತ್ಯರಿಗೆ ಹೆದರಿ, ಅವರನ್ನು ಗೆದ್ದು ತಮ್ಮನ್ನು ರಕ್ಷಿಸಬೇಕೆಂದು ಭೂಲೋಕದಲ್ಲಿ ಚಕ್ರವರ್ತಿಯಾಗಿದ್ದ ಮುಚುಕುಂದನೆಂಬುವನನ್ನು ಪ್ರಾರ್ಥಿಸಿದರು. ಧೀರನಾದ ಮುಚುಕುಂದನು ಒಪ್ಪಿ ನಿದ್ರೆಗೆಟ್ಟು ದೈತ್ಯರ ಕೂಡ ಹೊಡೆದಾಡಿ ಗೆದ್ದು ದೇವತೆಗಳನ್ನು ರಕ್ಷಿಸಿದನು. ದೇವತೆಗಳು ಷಣ್ಮುಖನನ್ನು ದೇವಸೇನಾನಿಯನ್ನಾಗಿ ಪಡೆದ ಮೇಲೆ "ಮುಚುಕುಂದನೇ ! ಇದುವರೆಗೆ ನಮ್ಮನ್ನು ಕಾಪಾಡಿದೆ. ಇನ್ನು ವಿಶ್ರಮಿಸು. ಬೇಕಾದ ವರಗಳನ್ನು ಕೇಳು ಕೊಡುವೆವು" ಎಂದರು. ಮುಚುಕುಂದನು "ಬಹುಕಾಲ ನಿದ್ರಿಸಬೇಕು. ನಿದ್ರಾಭಂಗ ಮಾಡಿದವನನ್ನು ನೋಡಿದ ಕೂಡಲೇ ಅವನು ಸುಟ್ಟು ಬೂದಿಯಾಗಬೇಕು" ಎಂದು

ವರವನ್ನು ಕೇಳಿಕೊಂಡನು. ಹಾಗೆಯೇ ಆಗಲೆಂದು ದೇವತೆಗಳು ವರವನ್ನು ಕೊಟ್ಟರು. ಮುಚುಕುಂದನು ಮೇಲೆ ಉಕ್ತವಾದ ಹಿಮಾಚಲದ ಗುಹೆಯಲ್ಲಿ ಮಲಗಿದ್ದನು. ಕಾಲಯವನನು ಅವನನ್ನು ಕೃಷ್ಣನೆಂದು ಭ್ರಮಿಸಿ ಒದ್ದು ನಿದ್ರಾಭಂಗವನ್ನು ಮಾಡಿದನು. ಮುಚುಕುಂದನು ಅವನನ್ನು ಕಣ್ಣು ತೆರೆದು ನೋಡಿದ ಕೂಡಲೇ ಅವನು ಉರಿದು ಹೋದನು. ಬಳಿಕ ಶ್ರೀಕೃಷ್ಣನು ಮುಚುಕುಂದನಿಗೆ ದರ್ಶನವನ್ನು ಕೊಟ್ಟನು.

**ಮುಚುಕುಂದ** :– ನೀನು ಯಾರು ? ಇಲ್ಲಿಗೇಕೆ ಬಂದೆ ? ತೇಜೋಮೂರ್ತಿಯಾದ ಶ್ರೀ ವಿಷ್ಣುವೇ ನೀನೆಂದು ಭಾವಿಸುವೆನು. ನಿನ್ನ ಪೂರ್ವೋತ್ತರಗಳನ್ನು ತಿಳಿಯಲು ಬಯಸುವೆನು. ನಾನು ಮಾಂಧಾತೃವಿನ ಮಗನು. ಮುಚುಕುಂದನೆಂದು ಹೆಸರು. ನಿದ್ರಿಸುತ್ತಿದ್ದ ನನ್ನನ್ನು ಯಾವನೋ ಒಬ್ಬ ಕಾಲಿನಿಂದ ಒದ್ದು ಭಸ್ಮೀಭೂತನಾದನು. ಬಳಿಕ ನೀನು ಕಾಣಿಸಿಕೊಂಡಿರುವೆ.

**ಶ್ರೀಕೃಷ್ಣ** :– ನಾನು ಅನಂತನಾದುದರಿಂದ ನನ್ನ ಅವತಾರಗಳು, ಕರ್ಮಗಳು, ನಾಮಗಳೂ ಅನಂತವಾಗಿವೆ. ಬ್ರಹ್ಮದೇವನೂ ಇವುಗಳನ್ನು ಪೂರ್ಣವಾಗಿ ಎಣಿಸಲಾರನು. ಬ್ರಹ್ಮನ ಪ್ರಾರ್ಥನಾನುಸಾರ ಯದುಕುಲದಲ್ಲಿ ಅವತರಿಸಿರುವೆನು. ವಾಸುದೇವನೆಂದು ನನ್ನ ನಾಮ. ಕಂಸಾದಿಗಳು ನನ್ನಿಂದ ಹತರಾದರು ಈಗ ದಗ್ಧನಾದವನು ಕಾಲಯವನನೆಂಬುವನು. ನಾನೇ ನಿನ್ನಿಂದ ಅವನು ಹತನಾಗುವಂತೆ ಮಾಡಿದೆನು. ನಿನಗೆ ಅನುಗ್ರಹಿಸಬೇಕೆಂದೇ ಹೀಗೆ ಮಾಡಿದೆ. ವರವನ್ನು ಕೇಳು ಕೊಡುವೆನು.

**ಮುಚುಕುಂದ** :– (ಗರ್ಗರ ಮಾತನ್ನು ಸ್ಮರಿಸಿ, ನಾರಾಯಣನೇ ಇವನೆಂದು ತಿಳಿದು) ಸ್ವಾಮಿಯೆ! ಸರ್ವಪ್ರಾಣಿಗಳೂ ನಿನ್ನ ಇಚ್ಛೆಯಿಂದಲೂ, ಪ್ರಕೃತಿಯಿಂದಲೂ ಮೋಹಿತರಾಗಿ ನಿನ್ನನ್ನು ಮರೆತಿರುವರು. ಮನೆ, ಸತಿ, ಸುತರಲ್ಲಿ ಆಸಕ್ತರಾಗಿ ಸಂಸಾರದಲ್ಲಿ ಸಿಕ್ಕಿ ಸಂಕಟಪಡುತ್ತಿರುವರು. ನಾನೂ ಅದರಂತೆಯೇ ಅಹಂಮಮತೆಗೆ ವಶನಾಗಿ ವ್ಯರ್ಥವಾಗಿ ಕಾಲವನ್ನು ಕಳೆದೆ. ಹಾವು ಇಲಿಯನ್ನು ನುಂಗುವಂತೆ ಸದಾ ಎಚ್ಚರಿತ್ತಿರುವ ನೀನು ನಮ್ಮ ಮದಾದಿಗಳನ್ನು ನಾಶಮಾಡುವೆ. ಕಾಲನಾಮಕ ಪರಮಾತ್ಮನಾದ ನಿನ್ನಿಂದ ಈ ದೇಹಕ್ಕೆ ವಿಟ್, ಕೃಮಿ ಮತ್ತು ಭಸ್ಮ ಎಂಬ ಸಂಜ್ಞೆ ಬರುವುದು. ಚಕ್ರವರ್ತಿಯಾಗಿರುವವನೂ ತನ್ನ ಹೆಂಡತಿಗೆ ಗುಲಾಮನಾಗುವುದು ಲಜ್ಜೆಗೇಡಿತನವು. ಯಾವ ಪದವಿಯು ದೊರೆತರೂ ಅದಕ್ಕಿಂತ ಉತ್ತಮವಾದುದನ್ನು ಹೊಂದಬೇಕೆಂಬ ಆಶೆಯುಂಟಾಗಿ ಕಷ್ಟವು ಗಂಟುಬೀಳುವುದೇ ಹೊರತು ಮುಕ್ತಿಯ ಸುಖವು ದೊರೆಯುವುದೇ ಇಲ್ಲ. ಮುಕ್ತಿಗೆ ಸತ್ಸಂಗವೇ ಜ್ಞಾನದ್ವಾರ ಕಾರಣವಾಗಿದೆ. ಗೃಹಾದಿ ಅಭಿಮಾನ ತ್ಯಾಗದಿಂದಲೇ ಸತ್ಸಂಗವು ದೊರೆಯುವುದು. ದೇವ ! ನಿನ್ನ ಪಾದಸೇವೆಯನ್ನು ಬಿಟ್ಟು ಇನ್ನಾವ ವರವನ್ನೂ ಬೇಡುವುದಿಲ್ಲ.

"ನಿರಂಜನಂ ನಿರ್ಗುಣಂ ಅವ್ಯಯಂ ಪರಂ ತ್ವಾಂ ಜ್ಞಪ್ತಿಮಾತ್ರಂ ಪುರುಷಂ ವ್ರಜಾಮಿ ಅಹಂ" ಸಂಸಾರವು ಸಾಕು. ಶರಣಾಗತನಾದ ನನ್ನನ್ನು ಪಾಲಿಸು !

**ಕೃಷ್ಣ** :– ನೀನು ಕೇಳಿಕೊಂಡ ವರದಿಂದಲೇ ನೀನು ಜ್ಞಾನಿಯೆಂಬುದು ಸಿದ್ಧವಾಯಿತು. ನೀನು ಹಿಂದೆ ಬೇಟೆಯಾಡಿ ಪಾಪವನ್ನು ಗಳಿಸಿರುವೆ. ಅದರ ನಿವೃತ್ತಿಗಾಗಿ ತಪಸ್ಸನ್ನು ಮಾಡಿ ನನ್ನನ್ನು ಆಶ್ರಯಿಸು. ಮುಂದಿನ ಜನ್ಮದಲ್ಲಿ ಬ್ರಾಹ್ಮಣನಾಗಿ ಹುಟ್ಟಿ ಸಕಲ ಪ್ರಾಣಿಗಳಲ್ಲಿಯೂ ದಯಾಪರನಾಗಿದ್ದು ಅಸದೃಶನಾದ ನನ್ನನ್ನು ಹೊಂದುವೆ.

## ಐವತ್ತನಾಲ್ಕನೆಯ ಅಧ್ಯಾಯ ಮುಗಿದುದು

ಹೀಗೆ ಶ್ರೀಕೃಷ್ಣನಿಂದ ಅನುಗ್ರಹಿಸಲ್ಪಟ್ಟ ಮುಚುಕುಂದನು ಶ್ರೀಕೃಷ್ಣನ ಅಪ್ಪಣೆಯಂತೆ ಗುಹೆಯಿಂದ ಈಚೆಗೆ ಬಂದು ನೋಡುವಾಗ ಕಲಿಯುಗವು ಬಂದಿದೆ ಯೆಂದು ತಿಳಿಯಿತು. ಅವನು ಬದರಿಗೆ ಹೋಗಿ ಶ್ರೀಹರಿಯನ್ನು ಆರಾಧಿಸುತ್ತಿದ್ದನು.

ಇತ್ತ ಶ್ರೀಕೃಷ್ಣನು ಮಥುರೆಯ ಬಳಿಗೆ ಬಂದು ಕಾಲಯವನನ ಸೈನ್ಯವನ್ನು ಸಂಹರಿಸಿ ಅವನ ದ್ರವ್ಯವನ್ನೆಲ್ಲ ದ್ವಾರಕೆಗೆ ಕಳುಹಿಸಿಕೊಡುವಷ್ಟರಲ್ಲಿ ಜರಾಸಂಧನು ಇಪ್ಪತ್ತುಮೂರು ಅಕ್ಷೌಹಿಣೀ ಸೈನ್ಯದೊಡನೆ ಬರುವುದನ್ನು ಕಂಡು, ದ್ರವ್ಯವನ್ನು ಅಲ್ಲಿಯೇ ಬಿಟ್ಟು ರಾಮಕೃಷ್ಣರು ಓಡಿದರು. ಜರಾಸಂಧನು ಅವರ ಬೆನ್ನಟ್ಟಿದನು ಹಿಂದೆ ಹೇಳಿದಂತೆ ರಾಮಕೃಷ್ಣರು ಗೋಮಂತ ಶಿಖರಕ್ಕೆ ಹೋಗಿ ಅಲ್ಲಿ ಇದ್ದರು. ಜರಾಸಂಧನು ಬಂದು ಹುಡುಕಿ, ಅಲ್ಲಿಯೇ ಅವರು ಅಡಗಿರುವರೆಂದು ನಿಶ್ಚಯಿಸಿ ಬೆಟ್ಟಕ್ಕೆ ಬೆಂಕಿ ಹಾಕಿದಾಗ ರಾಮಕೃಷ್ಣರು ಹನ್ನೊಂದು ಯೋಜನ ಎತ್ತರದಿಂದ ಕೆಳಕ್ಕೆ ಹಾರಿ, ಯಾರ ಕಣ್ಣಿಗೂ ಬೀಳದಂತೆ ದ್ವಾರಕೆಗೆ ಬಂದು ಸುಖವಾಗಿದ್ದರು. ಜರಾಸಂಧನು ರಾಮಕೃಷ್ಣರು ನಾಶಹೊಂದಿದರೆಂದು ನಿಶ್ಚಯಿಸಿ ಸಂತೋಷದಿಂದ ಮಗಧ ದೇಶಕ್ಕೆ ಹೋದನು.

(ಇದೂ ಒಂದು ಕಲ್ಪದಲ್ಲಿ ನಡೆದ ಕಥೆಯು).

## ಐವತ್ತೈದನೆಯ ಅಧ್ಯಾಯ ಮುಗಿದುದು

ಒಂದುದಿನ ಶ್ರೀಕೃಷ್ಣನು ಸಭೆಯಲ್ಲಿ ಕುಳಿತಿರುವಾಗ ಪಾಂಡವರು ದ್ರುಪದ ರಾಜನನ್ನು ಕಟ್ಟಿ ತಂದು ದ್ರೋಣಾಚಾರ್ಯರಿಗೆ ಗುರುದಕ್ಷಿಣೆಯಾಗಿ ಕೊಟ್ಟರೆಂದು ಕೇಳಿ ಸಂತೋಷಪಟ್ಟು, ಹಸ್ತಿನಾವತಿಯ ವೃತ್ತಾಂತವನ್ನು ತಿಳಿದು ಬರುವಂತೆ

ಕೃತವರ್ಮನನ್ನು ಕಳುಹಿಸಿದನು. ಕೃತವರ್ಮನು ಹಸ್ತಿನಾವತಿಗೆ ಒಂದು ಭೀಷ್ಮ ದ್ರೋಣಾದಿಗಳನ್ನೂ, ಧರ್ಮರಾಜಾದಿಗಳನ್ನೂ ನೋಡಿದನು. ಅವರು ಕೃಷ್ಣನ ಮತ್ತು ಬಲರಾಮನ ಯೋಗಕ್ಷೇಮವನ್ನು ಕೇಳಿದರು. ಕೃತವರ್ಮನು ಕೃಷ್ಣನಿಂದ ಮಾಡಲ್ಪಟ್ಟ ಕಾಲಯವನನ ಸಂಹಾರ, ಗೋಮಂತ ಯುದ್ಧದಲ್ಲಿ ಜರಾಸಂಧನಿಗಾದ ಪರಾಭವ, ಸೃಗಾಲವಾಸುದೇವನ ವಧೆ, ಸಮುದ್ರದ ಮಧ್ಯೆ ದ್ವಾರಕಾಪುರ ನಿರ್ಮಾಣ, ಹಂಸಡಿಭಿಕರ ಸಂಹಾರ ಮತ್ತು ದುರ್ಜಯನಾದ ಬ್ರಹ್ಮದತ್ತನ ವಧೆ ಇವೆಲ್ಲವನ್ನೂ ತಿಳಿಸಿದನು. ಧರ್ಮರಾಜನು ಇವೆಲ್ಲವನ್ನೂ ಕೇಳಿ, ಲಕ್ಷ್ಮೀಪತಿಯು ತ್ರೈಲೋಕ್ಯವನ್ನೂ ಕರಗತ ಮಾಡಿಕೊಂಡಮೇಲೆ ಅವನ ಅನುಗ್ರಹದಿಂದ ತಮಗೇ ಆ ಸಾಮ್ರಾಜ್ಯವು ಕರಗತವಾದಂತೆ ಎಂದು ತಿಳಿದನು. ಕೃತವರ್ಮನು ಹಿಂತಿರುಗಿ ಬಂದು ಎಲ್ಲ ವೃತ್ತಾಂತವನ್ನೂ ತಿಳಿಸಿದನು. ಜಗದೀಶ್ವರನು ಪಾಂಡವರ ಪೌರುಷ ವನ್ನು ಕೇಳಿ ಸಂತೋಷಪಟ್ಟನು.

## ಐವತ್ತಾರನೆಯ ಅಧ್ಯಾಯ ಮುಗಿದುದು

**ಶುಕ :–** ರೇವತನು ಬ್ರಹ್ಮದೇವರ ಮಾತಿನಂತೆ ತನ್ನ ಮಗಳಾದ ರೇವತಿ ಯನ್ನು ಬಲರಾಮನಿಗೆ ಕೊಟ್ಟು ಮದಿವೆ ಮಾಡಿದನಷ್ಟೆ ? ಲಕ್ಷ್ಮೀದೇವಿಯೂ ಭೀಷ್ಮಕನ ಮಗಳಾಗಿ ಅವತರಿಸಿದಳು. ರುಕ್ಮಿಣಿಯೆಂದು ಹೆಸರಾಯಿತು. ಶ್ರೀಕೃಷ್ಣನು ಅವಳನ್ನು ಮದಿವೆಯಾದನು. ಹೇಗೆಂದರೆ :–

## ರುಕ್ಮಿಣೀ ಕಲ್ಯಾಣ

ರುಕ್ಮಿಣಿಯು ನಾರದಾದಿಗಳಿಂದ ಶ್ರೀಕೃಷ್ಣನ ಗುಣಾದಿಗಳನ್ನು ಕೇಳಿ, ಅವನೇ ತನಗೆ ತಕ್ಕ ಪತಿಯೆಂದು ನಿಶ್ಚಯಿಸಿದಳು. ಶ್ರೀಕೃಷ್ಣನೂ ಕೂಡ ರುಕ್ಮಿಣಿಯೇ ತನಗೆ ತಕ್ಕ ಪತ್ನಿಯೆಂದು ನಿರ್ಣಯಿಸಿದ್ದನು. ರುಕ್ಮಿಣಿಯ ತಂದೆ ಭೀಷ್ಮಕನ ಐದುಮಂದಿ ಪುತ್ರರಲ್ಲಿ ಜ್ಯೇಷ್ಠನಾದ ರುಗ್ಮಿಯೆಂಬುವನು ಕೃಷ್ಣದ್ವೇಷಿ. ತಂದೆ ತಾಯಿಗಳನ್ನು ತಡೆದು ಶಿಶುಪಾಲನಿಗೇ ತನ್ನ ತಂಗಿಯನ್ನು ಕೊಡಬೇಕೆಂದು ಯತ್ನಿಸುತ್ತಿದ್ದನು. ರುಕ್ಮಿಣಿಯು ಇದನ್ನು ತಿಳಿದು ಕೃಷ್ಣನಿಗೆ ಪತ್ರವನ್ನು ಬರೆದು ಆಪ್ತನಾದ ಬ್ರಾಹ್ಮಣನ ಮೂಲಕ ಅವನಿಗೆ ತಲುಪಿಸಿದಳು. ಶ್ರೀಕೃಷ್ಣನು ಪತ್ರವನ್ನು ತಂದ ಬಡಬ್ರಾಹ್ಮಣ ನನ್ನು ಆದರಿಸಿ ಕುಶಲವನ್ನು ಕೇಳಿದನು. ಆ ಬ್ರಾಹ್ಮಣನು ರುಕ್ಮಿಣಿಯು ಬರೆದಿದ್ದ ಪತ್ರವನ್ನು ಶ್ರೀಕೃಷ್ಣನ ಪಾದದ ಮೇಲಿಟ್ಟನು. ಶ್ರೀಕೃಷ್ಣನು ಅದನ್ನು ಉದ್ಧವನಿಂದ ಓದಿಸುತ್ತಿದ್ದಾನೆ.

**ರುಕ್ಮಿಣಿಯ ಪತ್ರ :–** **ಶ್ರುತ್ವಾ ಗುಣಾನ್ ಭುವನಸುಂದರ ಸಂಗಮಾಂಸ್ತೇ**
**ನಿರ್ವಿಶ್ಯ ಕರ್ಣವಿವರಂ ಹರತೋಂಗತಾಪಂ ।**

ರೂಪಂ ಪರಂ ಭುವನಮಂಗಲ ಮಂಗಲಂ ತೇ
ತ್ವಯಚ್ಯುತಾವಿಶತಿ ಚಿತ್ತಮಪತ್ರಪಂ ಮೇ ॥

**ಅರ್ಥ :–** ಲೋಕೈಕಸುಂದರನೇ ! ಸಮೀಚೀನಗಳೂ, ವ್ಯಾಪ್ತಗಳೂ, ಅಥವಾ ಸ್ವರೂಪಾಭಿನ್ನಗಳೂ ಆದ ನಿನ್ನ ಗುಣಗಳು ಕರ್ಣರಂಧ್ರಗಳನ್ನು ಪ್ರವೇಶಿಸಿ ಶರೀರದ ತಾಪಗಳನ್ನು ಪರಿಹರಿಸತಕ್ಕವು. ನಿನ್ನ ರೂಪವು ಜಗತ್ತಿನ ಮಂಗಳಕ್ಕೆ ಮಂಗಳವನ್ನುಂಟುಮಾಡುವುದರಲ್ಲಿ ಉತ್ಕೃಷ್ಟವಾದುದು. ಇಂತಹ ನಿನ್ನ ಗುಣ ರೂಪಗಳನ್ನು ಕೇಳಿ ನಾಚಿಕೆಯಿಲ್ಲದೆ ನನ್ನ ಚಿತ್ತವು ನಿನ್ನಲ್ಲಿ ಸೇರಿರುವುದು.

ಮುಕುಂದನೆ ! ಆಚಾರ, ರೂಪ, ವಿದ್ಯೆ ಮತ್ತು ಸದ್ಗುಣಾದಿಗಳು ಇವುಗಳನ್ನು ಹೊಂದಿರುವ ವಿಷಯದಲ್ಲಿ ನಿನಗೆ ನೀನೇ ಸಮನು. ಮುಕ್ತಾಮುಕ್ತರ ವಿಷಯದಲ್ಲಿ ಅವರ ಮನಸ್ಸನ್ನು ಸಂತೋಷಪಡಿಸತಕ್ಕ ನಿನ್ನನ್ನು ಯಾವ ಸತ್ಕುಲಕನ್ಯೆಯು ತಾನೇ ವರಿಸಲು ಅಪೇಕ್ಷಿಸದೇ ಇದ್ದಾಳು ?

ಪ್ರಿಯತಮನೇ ! ನೀನು ರಮಾಪತಿಯೂ, ಭಕ್ತಪ್ರಿಯನೂ, ನಿಯಾಮಕನೂ ಆಗಿರುವೆಯೆಂಬುದನ್ನು ತಿಳಿದು ನಿನ್ನನ್ನೇ ವರಿಸುವೆನು. ಶರಣಾಗತಳಾದ ನಿನ್ನ ಚರಣದಾಸಿಯ ಅಭೀಷ್ಟವನ್ನು ಪೂರೈಸು.

ನೀನಾಗಿಯೇ ಬಂದು ನನ್ನನ್ನು ಒಯ್ಯಬೇಕು. ತಡಮಾಡಿದರೆ ಸಿಂಹದ ಭಾಗ (ಆಹಾರ)ವನ್ನು ನರಿಯು ಅಪಹರಿಸಿದಂತೆ ಶಿಶುಪಾಲನು ಮುಟ್ಟಿಬಿಡುವನು.

ಪೂರ್ವದಲ್ಲಿ ನಾನು ಇಷ್ಟಾಪೂರ್ತವನ್ನು (ಅಗ್ನಿಹೋತ್ರ, ತಪಸ್ಸು, ವೇದಾನುಪಾಲನ, ಆತಿಥ್ಯ, ವೈಶ್ವದೇವ ಮುಂತಾದುದು ಇಷ್ಟವೆನಿಸುವುದು. ಬಾವಿ, ಕೆರೆ, ದೇವಾಲಯ, ಅನ್ನಸತ್ರ ಮುಂತಾದುವುಗಳ ನಿರ್ಮಾಣವು ಪೂರ್ತ ವೆನಿಸುವುದು.) ಸತ್ಪಾತ್ರದಲ್ಲಿ ದಾನವನ್ನು ಮಾಡಿದ್ದರೆ, ವಾಙ್ನಿಯಮವನ್ನು ಮಾಡಿದ್ದರೆ, ಕೃಚ್ಛ್ರಚಾಂದ್ರಾಯಣಾದಿವ್ರತಗಳನ್ನು ಮಾಡಿದ್ದರೆ. ದೇವಬ್ರಾಹ್ಮಣ ಗುರುಗಳನ್ನು ಪೂಜಿಸಿದ್ದರೆ, ಇವೆಲ್ಲವೂ ಸರ್ವೋತ್ತಮನಾದ ಭಗವಂತನಿಗೆ ಪ್ರೀತಿಕರ ವಾಗುವಂತೆ ನಡೆಸಿದ್ದರೆ ಶ್ರೀಕೃಷ್ಣನು ನನ್ನ ಕರವನ್ನು ಹಿಡಿಯಲಿ, ಶಿಶುಪಾಲನು ನನ್ನನ್ನು ಮುಟ್ಟದಂತೆ ಭಗವಂತನು ಕಾಪಾಡಲಿ !

ರಾಕ್ಷಸವಿಧಿಯಿಂದ ನನ್ನನ್ನು ಮದಿವೆಯಾಗು. ನಮ್ಮ ಕುಲ ಪದ್ಧತಿಯಂತೆ ಊರಹೊರಗಿನ ಅಂಬಿಕಾಲಯಕ್ಕೆ ನಾನು ಬರುವೆನು. ನನ್ನನ್ನು ಕರೆದುಕೊಂಡು ಹೋಗಿ ಪಾಣಿಗ್ರಹಣ ಮಾಡು. ನೀನು ಅನುಗ್ರಹಿಸದಿದ್ದರೆ ಪ್ರಾಣಗಳನು ಬಿಟು

ಮುಂದೆ ನೂರಾರು ಜನ್ಮಗಳಲ್ಲಿಯಾದರೂ ವ್ರತವನ್ನು ಮಾಡಿ ನಿನ್ನ ಪತ್ನಿಯೇ ಆಗುವೆನು.

(ಕೃಷ್ಣನು ಇದನ್ನು ಕೇಳಿ ವಿಚಾರ ಮಾಡಿ ಬ್ರಾಹ್ಮಣನ ಮುಖವನ್ನು ನೋಡಿದನು.

**ಬ್ರಾಹ್ಮಣ :–** ದೇವ ! ರುಕ್ಮಿಣಿಯು ಹೇಳಿಕಳುಹಿಸಿರುವ ಮಾತುಗಳೂ ಇವೇ ಆಗಿವೆ. ವಿಚಾರ ಮಾಡಿ ನ್ಯಾಯವಾದುದನ್ನು ಮಾಡು.

## ಐವತ್ತೇಳನೆಯ ಅಧ್ಯಾಯ ಮುಗಿದುದು

ಶ್ರೀಕೃಷ್ಣನು ರುಕ್ಮಿಣಿಯನ್ನು ಅವಳಿಚ್ಛೆಯಂತೆಯೇ ಕರೆದುಕೊಂಡು ಬರುವುದಾಗಿ ಹೇಳಿ, ಬ್ರಾಹ್ಮಣನೊಡನೆ ರಥವೇರಿ ವಿದರ್ಭನಗರಿಗೆ ಬಂದನು. ಬಲರಾಮನೂ ಯಾದವ ಸೇನೆಯನ್ನು ತೆಗೆದುಕೊಂಡು ಹಿಂದಿನಿಂದ ಬಂದು ತಮ್ಮನೊಡನೆ ಸೇರಿಕೊಂಡನು. ಪತ್ರವನೊಯ್ದಿದ್ದ ಬ್ರಾಹ್ಮಣನು ರುಕ್ಮಿಣಿಗೆ ಶ್ರೀಕೃಷ್ಣಾಗಮನವನ್ನು ತಿಳಿಸಿದನು. ಅದನ್ನು ಕೇಳಿ ಸಂತೋಷಗೊಂಡ ರುಕ್ಮಿಣಿಯು, ವಿಪ್ರನ ಉಪಕಾರಕ್ಕೆ ಪ್ರತಿ ಉಪಕಾರವೆಂದರೆ ನಮಸ್ಕಾರವೊಂದೇ. ಇನ್ನಾವುದೂ ಇಲ್ಲವೆಂದು ನಿಶ್ಚಯಿಸಿ ಆ ಬ್ರಾಹ್ಮಣನಿಗೆ ಕೈ ಮುಗಿದುಬಿಟ್ಟಳು. (ಆ ಬ್ರಾಹ್ಮಣನು ಮತ್ತಾರಾದರೂ ಆಗಿರದೆ ಭಾವಿಸಮೀರರಾದ ಶ್ರೀ ವಾದಿರಾಜ ಸ್ವಾಮಿಗಳೆಂದು ಪುರಾಣ ವಾಕ್ಯಗಳೂ, ಜ್ಞಾನಿಗಳ ವಾಣಿಯೂ ಆಧಾರಗಳಾಗಿವೆ.) ರಾಮಕೃಷ್ಣರು ಆಹ್ವಾನವಿಲ್ಲವಾದರೂ ತಮ್ಮೂರಿಗೆ ಬಂದರೆಂಬ ಸಂಗತಿಯನ್ನು ಕೇಳಿ, ಭೀಷ್ಮಕರಾಜನು ಅವರ ಬಳಿಗೆ ಹೋಗಿ ಸತ್ಕರಿಸಿ, ಊರೊಳಗೆ ಜರಾಸಂಧಾದಿಗಳು ತುಂಬಿರುವುದರಿಂದ ಖಾಲಿ ಸ್ಥಳವಿಲ್ಲವಾಗಿ ಉದ್ಯಾನದಲ್ಲಿಯೇ ಅವರು ಬಿಡಾರ ಮಾಡುವಂತೆ ಕೇಳಿಕೊಂಡನು. ಶ್ರೀಕೃಷ್ಣನಿಗೆ ಚಂಡಾಲ ಚೌಕಳಿಗಳಿರುವ ಸ್ಥಳಬೇಡವಾಯಿತು. ಉದ್ಯಾನದಲ್ಲೇ ಇರುವುದಾಗಿ ಸಂತೋಷದಿಂದ ಅವನು ಒಪ್ಪಿದನು. ಶ್ರೀಕೃಷ್ಣನು ಬಂದಿರುವನೆಂದು ಗೊತ್ತಾದ ಕೂಡಲೇ ಆ ಊರಿನ ಜನರೆಲ್ಲ ಅವನನ್ನು ಸಂದರ್ಶಿಸಲು ಹೊರಟು ಬಂದರು. ಕೃಷ್ಣನ ದರ್ಶನವನ್ನು ಮಾಡಿ ಆ ಜನರೆಲ್ಲರೂ "ನಾರಾಯಣ ! ರುಕ್ಮಿಣಿಯು ಶ್ರೀಕೃಷ್ಣನ ಪತ್ನಿಯಾಗಲಿ" ಎಂದು ಪ್ರಾರ್ಥಿಸಿ ದೇವರಿಗೆ ಹರಿಕೆಯನು ಕಟ್ಟಿಕೊಂಡರು.

ರುಕ್ಮಿಣಿಯು ಅಂಬಿಕೆ ಮತ್ತು ಇಂದ್ರಾಣಿಯರನ್ನು ಪೂಜಿಸಿ, ಊರಹೊರಗಿನ ಆ ಗುಡಿಯಿಂದ ಹೊರಗೆ ಬಂದು ಕೃಷ್ಣನ ಆಗಮನವನ್ನೇ ನಿರೀಕ್ಷಿಸುತ್ತಿರಲು ಶ್ರೀ

ಕೃಷ್ಣನು ಭರದಿಂದ ಬಂದು ರುಕ್ಮಿಣಿಯನ್ನು ಅಪಹರಿಸಿಯೇ ಬಿಟ್ಟನು. ರಾಜರು ಯುದ್ಧಕ್ಕೆ ನಿಂತರು. ಆಗ ಬಲರಾಮನು ಕೃಷ್ಣನನ್ನು ಊರಿಗೆ ಕಳುಹಿಸಿ ತಾನೇ ನಿಂತು ಯುದ್ಧ ಮಾಡಿ ಅವರನ್ನೆಲ್ಲರನ್ನೂ ಜಯಿಸಿಬಿಟ್ಟನು.

**ಐವತ್ತೆಂಟನೆಯ ಅಧ್ಯಾಯ ಮುಗಿದುದು**

ಮದವಣಿಗನ ವೇಷದಿಂದ ಕುಳಿತ್ತಿದ್ದ ಶಿಶುಪಾಲನಿಗೆ ಕೃಷ್ಣನು ಕನ್ಯಾಹರಣ ವನ್ನು ಮಾಡಿದನೆಂಬ ಸಂಗತಿ ತಿಳಿಯಿತು. ಅವನು ಕೋಪದಿಂದ ಯುದ್ಧಕ್ಕೆ ಬಂದನು. ಸಾತ್ಯಕಿಯು ಅವನನ್ನಿದಿರಿಸಿ ಯುದ್ಧವನ್ನು ಮಾಡಿ ಅವನನ್ನು ಸೋಲಿ ಸಿದನು. ಬಲರಾಮನಿಂದ ಸೋತ ಜರಾಸಂಧನು ಅಳುತ್ತಿದ್ದ ಶಿಶುಪಾಲನಿಗೆ ಸಮಾ ಧಾನವನ್ನು ಮಾಡಿದನು. ದುಷ್ಟರೆಲ್ಲರೂ ಕೆಟ್ಟ ಮೋರೆ ಹಾಕಿಕೊಂಡು ಅವರವರ ಊರಿಗೆ ಹೋದರು. ರುಗ್ಮಿಯು "ಕೃಷ್ಣನನ್ನು ಕೊಂದು ರುಕ್ಮಿಣಿಯನ್ನು ಹಿಂದಕ್ಕೆ ತರುವೆನು. ಇಲ್ಲವಾದರೆ ಈ ನಗರಕ್ಕೆ ಈ ಜನ್ಮದಲ್ಲಿ ಪ್ರವೇಶಿಸುವುದಿಲ್ಲ"ವೆಂದು ಪ್ರತಿಜ್ಞೆಯನ್ನು ಮಾಡಿ ಮೂರು ಅಕ್ಷೌಹಿಣೀ ಸೇನೆಯೊಡನೆ ಕೃಷ್ಣನನ್ನು ಬೆನ್ನಟ್ಟಿ ಬಂದನು. ಎಷ್ಟೇ ಆಗಲಿ ಪಾಪಿಯಾದ ಇಲ್ವಲನೆಂಬ ದೈತ್ಯನೇ ರುಕ್ಮಿಯಾಗಿ ಹುಟ್ಟಿದ್ದನಷ್ಟೆ ? ಯುದ್ಧವನ್ನು ಮಾಡಲು ಬಂದ ರುಕ್ಮಿಯನ್ನು ಶ್ರೀಕೃಷ್ಣನು ಸೋಲಿಸಿ, ಅವನ ಹಿಂದೆ ಬಂದಿದ್ದ ಸೈನ್ಯವನ್ನು ಧ್ವಂಸಮಾಡಿದನು. ರುಕ್ಮಿಯು ಕೃಷ್ಣನ ರಥವನ್ನು ಹತ್ತಿ ಕೊಲ್ಲಲು ಬಂದನು. ಕೃಷ್ಣನು ಅವನನ್ನು ಕೊಲ್ಲಲು ಕತ್ತಿಯನ್ನೆತ್ತಿದಾಗ ರುಕ್ಮಿಣಿಯು ಲೋಕವನ್ನು ಅನುಕರಿಸುತ್ತ, ಅಣ್ಣನನ್ನು ಕೊಲ್ಲ ಬೇಡವೆಂದು ಬೇಡಿಕೊಂಡಳು. ಕೃಷ್ಣನು ರುಕ್ಮಿಯನ್ನು ಕೊಲ್ಲದೆ ಅವನ ತಲೆ ಮತ್ತು ಮೀಸೆಗಳನ್ನು ಐದುಪಟ್ಟೆಗಳಾಗಿ ತೆಗೆದು, ಕಟ್ಟಿಹಾಕಿದನು. ಬಲರಾಮನು ಆಗ ಅಲ್ಲಿಗೆ ಬಂದು, ದೈತ್ಯಾವೇಶದಿಂದ ಕೃಷ್ಣನನ್ನು ಆಕ್ಷೇಪಿಸಿ ರುಕ್ಮಿಯ ಕಟ್ಟನ್ನು ಬಿಚ್ಚಿ! ಅವನನ್ನು ಬಿಟ್ಟು

**ಬಲರಾಮ :–** ಕೃಷ್ಣನೇ ! ನೀನು ಮಾಡಿದ್ದು ತಪ್ಪು. ರುಕ್ಮಿಣಿಯೇ ಇದಕ್ಕಾಗಿ ಕೊರಗಬೇಡ. ಇದೆಲ್ಲ ಭಗವಂತನ ಸಂಕಲ್ಪಾನುಸಾರ ನಡೆದುಹೋಯಿತು. ಇದರ ಮೇಲೆ ಕ್ಷತ್ರಿಯವೃತ್ತಿಯೇ ಹೀಗೆ. ಅವರು ಕೋಪ ಬಂದಾಗ ಇವರು ತನ್ನವರು, ಬಂಧುಗಳು ಎಂಬುದನ್ನೂ ಗಮನಿಸುವುದಿಲ್ಲ. ಜೀವನು ಅಸ್ವತಂತ್ರನು. ಅವರವರ ಕರ್ಮಕ್ಕೆ ತಕ್ಕ ಫಲವನ್ನು ಅನುಭವಿಸುವುದು ತಪ್ಪಿದ್ದಲ್ಲ. ಇದೆಲ್ಲವನ್ನೂ ಚಿಂತಿಸಿ ಶೋಕವನ್ನು ಬಿಡು.

(ಇಲ್ಲಿ ಸೋಜಿಗವೇನೆಂದರೆ :– ಕೃಷ್ಣನನ್ನು ಆಕ್ಷೇಪಿಸಿದ ಈ ಬಲರಾಮನೇ ರುಕ್ಮಿಯ ಮುಮ್ಮೊಗಳ ಮದಿವೆಯ ಮನೆಯಲ್ಲಿಯೇ ರುಕ್ಮಿಯನ್ನು ಸಂಹರಿಸುವನು.)

ರುಕ್ಮಿಯು ದುಃಖಿಸುತ್ತ ಹಿಂತಿರುಗಿ, ತಾನು ಮಾಡಿದ ಪ್ರತಿಜ್ಞೆಯಂತೆ ಭೋಜಕಟಕವೆಂಬ ಊರನ್ನು ನಿರ್ಮಾಣ ಮಾಡಿ ಅಲ್ಲಿ ಸೇರಿಕೊಂಡು ಕೃಷ್ಣನನ್ನು ದ್ವೇಷಿಸುತ್ತಾ ಇದ್ದನು.

ಇತ್ತ ಶ್ರೀಕೃಷ್ಣನು ದ್ವಾರಕಿಗೆ ಬಂದು ಪಾಂಡವರು, ದೇವಾದಿ ಸಜ್ಜನರ ಸಮ್ಮುಖದಲ್ಲಿ ರುಕ್ಮಿಣಿಯನ್ನು ವಿಧ್ಯುಕ್ತವಾಗಿ ಮದುವೆಯಾದನು. ಸರ್ವರೂ ಸಂತೋಷಭರಿತರಾದರು.

**ಐವತ್ತೊಂಭತ್ತನೆಯ ಅಧ್ಯಾಯ ಮುಗಿದುದು.**

ಸತ್ರಾಜಿತನೆಂಬ ಯಾದವನಿಗೆ ಅವನ ತಪಸ್ಸನ್ನು ಮೆಚ್ಚಿ ಸೂರ್ಯನು ಪ್ರತ್ಯಕ್ಷ ವಾಗಿ ಸ್ಯಮಂತಕವೆಂಬ ಮಣಿಯನ್ನು ಕೊಟ್ಟನು. ಆಗಿನಿಂದ ಸತ್ರಾಜಿತನಿಗೆ ಆ ಮಣಿಯಲ್ಲಿ ವಿಪರೀತ ಮೋಹವು ಬಂದಿತು. ಇವನ ಲೋಭವನ್ನು ಎಲ್ಲರಿಗೂ ತಿಳಿಸುವುದಕ್ಕಾಗಿ ಸಭೆಯಲ್ಲಿ ಶ್ರೀಕೃಷ್ಣನು ಅದನ್ನು ಯಾಚಿಸಿದನು. ಸತ್ರಾಜಿತನು ಅದನ್ನು ಭಗವಂತನಿಗೆ ಕೊಡದೇಹೋದನು. ಸತ್ರಾಜಿತನ ತಮ್ಮ ಪ್ರಸೇನಜಿತ್ ಎಂಬುವನು ಒಮ್ಮೆ ಆ ಮಣಿಯನ್ನು ಧರಿಸಿ ಬೇಟೆಗೆ ಹೋದನು. ಒಂದು ಸಿಂಹವು ಅವನನ್ನು ಕೊಂದುಹಾಕಿತು ತಮ್ಮನು ಮನೆಗೆ ಬಾರದಿದ್ದುದನ್ನು ನೋಡಿ, ಕೃಷ್ಣನೇ ಅವನನ್ನು ಕೊಂದು ಮಣಿಯನ್ನು ಅಪಹರಿಸಿದನೆಂದು ಅಪವಾದವನ್ನು ಹೊರಸಿದನು. ಅಪವಾದವನ್ನು ಯೋಗ್ಯನು ಕಳೆದುಕೊಳ್ಳುವುದು ಧರ್ಮವೆಂಬುದನ್ನು ಲೋಕಕ್ಕೆ ತಿಳಿಸುವುದಕ್ಕಾಗಿ ಶ್ರೀಕೃಷ್ಣನು ಯಾದವರೊಡನೆ ಕಾಡಿಗೆ ಬಂದು ಹುಡುಕಿದನು. ಸಿಂಹದಿಂದ ಪ್ರಸೇನನು ಹತವಾದುದನ್ನು ಯಾದವರೆಲ್ಲರೂ ಕಂಡರು. ಹಾಗೆಯೇ ಸ್ವಲ್ಪ ದೂರದಲ್ಲಿ ಸಿಂಹವು ಸತ್ತುಬಿದ್ದುದನ್ನೂ ನೋಡಿದರು. ಅಲ್ಲಿ ಕರಡಿಯ ಹೆಜ್ಜೆ ಗುರುತನ್ನು ನೋಡಿ ಸಿಂಹವು ಕರಡಿಯಿಂದ ಹತವಾಗಿರಬೇಕೆಂದು ಯಾದವರು ಊಹಿಸಿ, ಕರಡಿಯ ಹೆಜ್ಜೆಯ ಗುರುತನ್ನೇ ಅನುಸರಿಸಿ ಹೋದರು. ಒಂದು ಗುಹೆಯು ಅಲ್ಲಿದ್ದಿತು. ಸಿಂಹವನ್ನು ಕೊಲ್ಲಬೇಕಾದರೆ ಜಾಂಬವಂತ ಕರಡಿಯೇ ಇರಬೇಕೆಂದೂ ಈ ಗುಹೆಯಲ್ಲಿ ಅವರು ವಾಸಿಸುತ್ತಿರಬಹುದೆಂದೂ ಯೋಚಿಸಿ. ಬಂದ ಯಾದವರೆಲ್ಲ ಗುಹೆಯೊಳಗೆ ಪ್ರವೇಶಿಸಲಾರದೆ ಹೊರಗೆ ನಿಂತರು. ಶ್ರೀಕೃಷ್ಣನು ಆ ಗುಹೆಯೊಳಗೆ ಪ್ರವೇಶಿಸಿದನು. ಗುಹೆಯ ಒಳಗೆ ಅಳುತ್ತಿದ್ದ ಒಂದು ಮಗುವನ್ನು ಸಮಾಧಾನ ಮಾಡುತ್ತ ಒಬ್ಬ ಧಾತ್ರಿಯು ಹೇಳುತ್ತಿದ್ದ ಪದ್ಯವನ್ನು ಯಾದವರೆಲ್ಲರೂ ಕೇಳಿಸಿ ಕೊಂಡರು. ಆ ಪದ್ಯವು ಹೀಗಿದೆ :–

**"ಸಿಂಹಃ ಪ್ರಸೇನಮವಧೀತ್ ಸಿಂಹೋ ಜಾಂಬವತಾ ಹತಃ**
**ಸುಕುಮಾರಕ ಮಾರೋದೀಸ್ತವ ಹ್ಯೇಷ ಸ್ಯಮಂತಕಃ ॥"**

ಯಾದವರು ಹನ್ನೆರಡು ದಿನ ಕಾದರೂ ಕೃಷ್ಣನು ಬರದಿದ್ದುದನ್ನು ಕಂಡು ಹೆದರಿ ತಮ್ಮೂರಿಗೆ ಹೊರಟುಹೋದರು. ಕೃಷ್ಣನು ಶಂಖವನ್ನೂದಿದನು. ಆ ಧ್ವನಿಯನ್ನು ಕೇಳಿ ಕುಪಿತರಾದ ಜಾಂಬವಂತರು ಕೃಷ್ಣನನ್ನು ದೇವರು ಎಂದು ತಿಳಿಯದೆ ಅವನ ಕೂಡ ಇಪ್ಪತ್ತೆಂಟುದಿನಗಳ ಕಾಲ ಹೋರಾಡಿದರು. ಕೊನೆಗೆ ಕೃಷ್ಣನು ಜಾಂಬವಂತರನ್ನು ಮುದ್ದೆ ಮಾಡಿ ಎಸೆದನು. ಮೂರ್ಛೆ ಬಂದಿತು. ಎಚ್ಚೆತ್ತ ಜಾಂಬವಂತರಿಗೆ ಕೃಷ್ಣನು ರಾಮನಾಗಿ ದರ್ಶನಕೊಟ್ಟನು. ಜಾಂಬವಂತರು ಅಪರಾಧವನ್ನು ಕ್ಷಮಿಸಬೇಕೆಂದು ಪ್ರಾರ್ಥಿಸಿ, ತಮ್ಮ ಮಗಳಾದ ಜಾಂಬವತಿಯನ್ನೂ ಮಣಿಯನ್ನೂ ಶ್ರೀಕೃಷ್ಣನಿಗೆ ಅರ್ಪಿಸಿ ಕೃತಾರ್ಥರಾದರು. ಶ್ರೀಕೃಷ್ಣನು ದ್ವಾರಕೆಗೆ ಬಂದು ಸಭೆಯಲ್ಲಿ ಮಣಿಯನ್ನು ಸತ್ರಾಜಿತನಿಗೆ ಕೊಟ್ಟುಬಿಟ್ಟನು. ಅವನು ತಾನು ಅಪವಾದವನ್ನು ಹಾಕಿದ್ದಕ್ಕೆ ಪಶ್ಚಾತ್ತಾಪಪಟ್ಟು ಸತ್ಯಭಾಮೆಯೆಂಬ ತನ್ನ ಮಗಳನ್ನೂ, ಸ್ಯಮಂತಕರತ್ನವನ್ನೂ ಶ್ರೀಕೃಷ್ಣನಿಗೆ ಅರ್ಪಿಸಿದನು. ಶ್ರೀಕೃಷ್ಣನು ಸತ್ಯಭಾಮೆಯನ್ನು ಮದಿವೆಯಾಗಿ ಆರತ್ನವನ್ನು ಸತ್ರಾಜಿತ್ತಿಗೇ ಹಿಂತಿರುಗಿಸಿದನು. ಆಗಲೇ ಜಾಂಬವತಿಯನ್ನೂ ಶ್ರೀಕೃಷ್ಣನು ಮದಿವೆಯಾದನು.

## ಅರವತ್ತನೆಯ ಅಧ್ಯಾಯ ಮುಗಿದುದು

ಪಾಂಡವರು ಅರಗಿನ ಮನೆಯಲ್ಲಿ ದಗ್ಧರಾದರೆಂಬ ವಾರ್ತೆಯನ್ನು ಕೇಳಿ ಶ್ರೀಕೃಷ್ಣನು ಬಲರಾಮನೊಡನೆ ಮೃತಬಂಧುಗಳನ್ನು ಸಮಾಧಾನಮಾಡಲು ಹಸ್ತಿನಾವತಿಗೆ ಹೋದನು. ಇವನನ್ನು ಕಂಡ ಭೀಷ್ಮಾದಿಗಳು ದುಃಖವನ್ನು ಹೊಂದಿದರು. ಕೃಷ್ಣನು ತಾನೂ ದುಃಖಪಡುವವನಂತೆ ನಟಿಸಿದನು. ಇತ್ತ ದ್ವಾರಕೆಯಲ್ಲಿ ಕೃಷ್ಣನಿಲ್ಲದ ವೇಳೆಯಲ್ಲಿ ಅಕ್ರೂರ, ಕೃತವರ್ಮರು ಸತ್ರಾಜಿತನನ್ನು ಕೊಂದು ಮಣಿಯನ್ನು ತರುವಂತೆ ದೈತ್ಯಾಂಶನಾದ ಶತಧನ್ವಯಾದವನನ್ನು ಹುರಿದುಂಬಿಸಿದರು. ಅವನು ಅದರಂತೆ ಸತ್ರಾಜಿತನನ್ನು ಕೊಂದು ರತ್ನವನ್ನು ತಂದು ಅಕ್ರೂರನ ಕೈಲಿಟ್ಟನು. ಸಾಕ್ಷಾತ್ ಲಕ್ಷ್ಮಿಯ ರೂಪಳಾದ ಭೂದೇವಿಯ ಅವತಾರಳಾದ ಸತ್ಯಭಾಮೆಯು ಲೋಕವನ್ನು ಅನುಕರಿಸುತ್ತ ತಂದೆಯ ಮೃತದೇಹವನ್ನು ತೈಲದಲ್ಲಿಡಿಸಿ. ಕೃಷ್ಣನಿಗೆ ಈ ವಿಚಾರವನ್ನು ತಿಳಿಸಲು ಹಸ್ತಿನಾವತಿಗೆ ಹೊರಟಳು. ಮಧ್ಯಮಾರ್ಗದಲ್ಲಿಯೇ ಕೃಷ್ಣನು ಅವಳನ್ನು ಕಂಡು ಸಂಗತಿಯನ್ನು ಕೇಳಿ ಸಮಾಧಾನಮಾಡಿ. ಊರಿಗೆ ಬಂದನು. ಆಗ ಪಾಂಚಾಲಿಯ ಸ್ವಯಂವರದ ಆಹ್ವಾನ ಬಂದಿತ್ತು. ಶ್ರೀಕೃಷ್ಣನು ಪಾಂಚಾಲನಗರಿಗೆ ಹೋಗಿ, ಪಾಂಡವರು ಮತ್ತು ಕುಂತಿಗೆ ದರ್ಶನವನ್ನು ಕೊಟ್ಟು, ಅವರನ್ನು ರಕ್ಷಿಸುವುದಾಗಿ ಅಭಯವಚನಕೊಟ್ಟು ದ್ವಾರಕೆಗೆ ಬಂದನು. ಬಲರಾಮನೊಡನೆ ರಥವನ್ನು ಹತ್ತಿ ಮಣಿಯನ್ನು ಕದ್ದಿದ್ದ ಶತಧನ್ವನನ್ನು ಬೆನ್ನಹತ್ತಿಹೋಗಿ

ಅವನನ್ನು ಕೃಷ್ಣನು ಕೊಂದನು. ಆದರೆ ಅವನ ಬಳಿ ಮಣಿಯಿರಲಿಲ್ಲ. ಕೃಷ್ಣನು ಇದನ್ನು ಅಣ್ಣನಿಗೆ ಹೇಳಿದನು. ಬಲರಾಮನು ದೈತ್ಯಾವೇಶಕ್ಕೆ ಒಳಗಾಗಿ ಕೃಷ್ಣನು ರತ್ನವನ್ನು ತಾನು ದಕ್ಕಿಸಿಕೊಳ್ಳಲು ಸುಳ್ಳು ಹೇಳಿರುವನೆಂದು ತಪ್ಪಾಗಿ ಊಹಿಸಿ ತಮ್ಮನ ಮೇಲಿನ ಅಸಮಾಧಾನದಿಂದ ಅವನನ್ನು ಬಿಟ್ಟು ಮಿಥಿಲೆಗೆ ಹೋಗಿ ಅಲ್ಲಿ ಐದು ವರ್ಷಗಳ ಕಾಲ ವಾಸಮಾಡಿದನು. ಅಕ್ರೂರನು ಸ್ಯಮಂತಕಮಣಿಯ ಸಹಾಯದಿಂದ ಯಜ್ಞಗಳನ್ನು ಮಾಡಿ ಅಪಾರದಾನಮಾಡುತ್ತಿದ್ದುದರಿಂದ ಆ ರತ್ನವು ಅವನ ಬಳಿಯಲ್ಲಿರುವುದೆಂದು ಗೊತ್ತಾಗಿ ಅವನನ್ನೂ, ಬಲರಾಮನನ್ನೂ ಕೃಷ್ಣನು ಕರೆಸಿ ಸಭೆಯನ್ನು ಸೇರಿಸಿ, ರತ್ನವನ್ನು ತೋರಿಸೆಂದು ಅಕ್ರೂರನಿಗೆ ಹೇಳಿದನು. ಹರಿಯ ಮಾತಿನಂತೆ ಆ ಮಣಿಯನ್ನು ಅಕ್ರೂರನು ತೋರಿಸಿದನು. ಅದನ್ನು ಕೃಷ್ಣನು ಅವನಿಗೇ ಕೊಟ್ಟುಬಿಟ್ಟನು. ಬಲರಾಮನಿಗೆ ಕೃಷ್ಣನ ವಿಷಯದಲ್ಲಿದ್ದ ಸಂದೇಹವು ಹೋಯಿತು. ತಾನು ಅಪರಾಧವನ್ನು ಮಾಡಿದೆನೆಂದು ಅವನು ಬಹಳ ಪಶ್ಚಾತ್ತಾಪಪಟ್ಟನು.

ಶ್ರೀಕೃಷ್ಣನ ಈ ಮಹಿಮೆಯನ್ನು ಹೇಳಿ, ಕೇಳಿ, ಸ್ಮರಿಸುವವರು ಅಪವಾದವನ್ನೂ, ಪಾಪವನ್ನೂ ಕಳೆದುಕೊಂಡು ಮುಕ್ತಿಯನ್ನು ಹೊಂದುವರು.

## ಅರವತ್ತೊಂದನೆಯ ಅಧ್ಯಾಯವು ಮುಗಿದುದು

ಪಾಂಡವರು ದ್ರೌಪದಿಯನ್ನು ಮದುವೆಯಾಗಿ ಹಸ್ತಿನಾವತಿಯಿಂದ ಇಂದ್ರಪ್ರಸ್ಥಕ್ಕೆ ಬಂದರು. ಶ್ರೀಕೃಷ್ಣನ ಸಹಾಯದಿಂದ ಅಲ್ಲಿ ನಗರವನ್ನು ನಿರ್ಮಾಣ ಮಾಡಿ ಅಲ್ಲಿಯೇ ರಾಜ್ಯವಾಳುತ್ತಿದ್ದರು. ಒಂದು ದಿನ ಶ್ರೀಕೃಷ್ಣನು ಪಾರ್ಥನೊಡನೆ ರಥವನ್ನು ಹತ್ತಿ ಬೇಟೆಗೆ ಹೊರಟನು. ಆ ಕಾಲದಲ್ಲಿ ಕಾಲಿಂದೀ ದೇವಿಯು ಅರ್ಜುನನಿಗೆ ದರ್ಶನಕೊಟ್ಟಳು. ಶ್ರೀಕೃಷ್ಣನು ಅವಳನ್ನು ಕರೆತಂದು ದ್ವಾರಕಿಯಲ್ಲಿ ಮದುವೆಯಾದನು.

ಅವಂತಿ ರಾಜನ ಮಕ್ಕಳು ವಿಂದ ಮತ್ತು ಅನುವಿಂದ ಎಂಬುವರಿಬ್ಬರು ದೈತ್ಯಾಂಶರು. ಆದ್ದರಿಂದ ದುರ್ಯೋಧನನ ವಶರಾಗಿದ್ದರು. ಅವರ ತಂಗಿ ಮಿತ್ರವಿಂದಾದೇವಿಯು ಕೃಷ್ಣನಲ್ಲಿ ಆಸಕ್ತಳಾಗಿದ್ದಳು. ಕೃಷ್ಣದ್ವೇಷಿಗಳಾದ ಅವಳ ಸಹೋದರರಿಬ್ಬರೂ ತಂಗಿಯ ವಿವಾಹವನ್ನು ತಡೆದರು. ಶ್ರೀಕೃಷ್ಣನು ತನ್ನ ಸೋದರತ್ತೆಯಾದ ರಾಜಾಧಿದೇವಿಯ ಮಗಳಾದ ಮಿತ್ರವಿಂದೆಯ ಸ್ವಯಂವರದಲ್ಲಿ ರಾಜರೆಲ್ಲರೂ ನೋಡುತ್ತಿರುವ ಹಾಗೆಯೇ ಆ ಕನ್ಯೆಯನ್ನು ಅಪಹರಿಸಿ ಬಲಾತ್ಕಾರವಾಗಿ ತಂದು ಮದುವೆಯಾದನು.

ಕೋಸಲದೇಶರಾಜ ನಗ್ನಜಿತ್ತಿನಮಗಳು ನೀಲಾದೇವಿಯು. ಅವಳ ತಂದೆಯು ತನ್ನಲ್ಲಿದ್ದ ದೈತ್ಯಾಂಶ ಏಳು ಗೂಳಿಗಳನ್ನು ನಿಗ್ರಹಿಸಿದವರಿಗೆ ತನ್ನ ಮಗಳನ್ನು ಕೊಡುವುದಾಗಿ ಪಣವನ್ನಿಟ್ಟಿದ್ದನು. ಅದನ್ನು ಕೇಳಿ ಶ್ರೀಕೃಷ್ಣನು ಅಲ್ಲಿಗೆ ಹೋದಾಗ ರಾಜನು ಅತಿಪ್ರೀತಿಯಿಂದ ಸ್ವಾಮಿಯನ್ನು ಪೂಜಿಸಿದುದಲ್ಲದ ತನ್ನ ಪ್ರತಿಜ್ಞೆಯನ್ನು ತಿಳಿಸಿದನು. ಶ್ರೀಕೃಷ್ಣನು ನಿರಾಯಾಸವಾಗಿ ಆ ಏಳು ಗೂಳಿಗಳನ್ನೂ ನಿಗ್ರಹಿಸಿ ರಾಜಕುಮಾರಿ ನೀಲಾದೇವಿಯನ್ನು ಮದಿವೆಯಾದನು. ರಾಜನು ಮಗಳಿಗೆ ಬಹಳ ವಾಗಿ ಬಳುವಳಿಗೆಗಳನ್ನು ಕೊಟ್ಟನು.

ಶ್ರೀಕೃಷ್ಣನ ಮತ್ತೊಬ್ಬಳು ಸೋದರತ್ತೆ ಶ್ರುತಕೀರ್ತಿಯೆಂಬುವಳು. ಅವಳ ಮಗಳು ಭದ್ರಾದೇವಿ. ಸಂತರ್ದನ ಮೊದಲಾದ ಅವಳ ಸಹೋದರರು ಪ್ರೇಮ ದಿಂದಲೂ, ಸಂತೋಷದಿಂದಲೂ, ತಮ್ಮ ತಂಗಿಯನ್ನು ಶ್ರೀಕೃಷ್ಣನಿಗೆ ಕೊಟ್ಟು ಮದಿವೆ ಮಾಡಿದರು.

ಮದ್ರದೇಶಾಧಿಪತಿಯ ಮಗಳು ಲಕ್ಷಣಾದೇವಿ. ಅವಳ ಸ್ವಯಂವರದಲ್ಲಿಟ್ಟಿದ್ದ ಲಕ್ಷ್ಯಭೇದನವು ಬಹಳ ಕಠಿಣವಾಗಿದ್ದಿತು. ಶ್ರೀಕೃಷ್ಣನು ಅದನ್ನು ನಿರಾಯಾಸವಾಗಿ ಭೇದಿಸಿ ಲಕ್ಷಣೆಯನ್ನು ಮದಿವೆಯಾದನು.

ಇದೂ ಅಲ್ಲದೆ ನರಕಾಸುರನ ಸೆರೆಯಲ್ಲಿದ್ದ ಹದಿನಾರು ಸಾವಿರದ ನೂರು ಮಂದಿ ಕನ್ಯೆಯರನ್ನು ಶ್ರೀಕೃಷ್ಣನು ಮದಿವೆಯಾದನು.

## ಅರವತ್ತೆರಡನೆಯ ಅಧ್ಯಾಯ ಮುಗಿದುದು

**ಪರೀಕ್ಷಿತ್ .–** ಶ್ರೀಕೃಷ್ಣನು ನರಕಾಸುರನನ್ನು ಕೊಂದ ಕಾರಣವೇನು ?

**ಶುಕ :–** ನರಕಾಸುರನು ದೇವತೆಗಳನ್ನೆಲ್ಲಾ ಹಿಂಸಿಸುತ್ತಿದ್ದನು. ದೇವ ಮಾತೆಯಾದ ಅದಿತಿದೇವಿಯನ್ನು ಬಹಳವಾಗಿ ಹಿಂಸಿಸಿ ಅವಳ ಬೆಂಡೋಲೆಗಳನ್ನು ಅಪಹರಿಸಿದನು. ಇಂದ್ರನು ಬಂದು ಕೃಷ್ಣನಲ್ಲಿ ಇದನ್ನು ಅರಿಕೆ ಮಾಡಿಕೊಂಡನು. ಇದನ್ನು ಕೇಳಿ ಶ್ರೀಕೃಷ್ಣನು ಸತ್ಯಭಾಮೆಯೊಡನೆ ಗರುಡನನ್ನೇರಿ ಪ್ರಾಗ್ಜ್ಯೋತಿಷವೆಂಬ ನರಕಾಸುರನ ಪಟ್ಟಣದ ಬಳಿಗೆ ಬಂದನು. ಆ ನಗರದ ರಕ್ಷಣೆಗಿದ್ದ ಗಿರಿದುರ್ಗ, ಜಲ ದುರ್ಗ ಅದರೊಳಗಿದ್ದ ಅಗ್ನಿವಾಯು ದುರ್ಗಗಳು ಇವೆಲ್ಲವನ್ನೂ ಕೃಷ್ಣನು ನಾಶ ಮಾಡಿದ್ದಲ್ಲದೆ ಮುರನ ಆರು ಸಾವಿರ ಪಾಶಗಳನ್ನೂ ಅನಾಯಾಸವಾಗಿ ಧ್ವಂಸಮಾಡಿ, ಐದು ತಲೆಗಳುಳ್ಳಮುರಾಸುರ ಮತ್ತು ಅವನ ಪುತ್ರರಾದ ತಾಮ್ರಮುಂತಾದ ಏಳು ಮಂದಿ ದೈತ್ಯರನ್ನೂ ಸಂಹರಿಸಿದನು. ಕೊನೆಗೆ ನರಕಾಸುರನೇ ಯುದ್ಧಕ್ಕೆ ಬಂದು

ಶತಘ್ನಿ ಎಂಬ ಅಮೋಘವಾದ ಗದೆಯನ್ನು ತಿರುಗಿಸಿ ಕೃಷ್ಣನನ್ನು ಬಡಿದನು. ಶ್ರೀ ಕೃಷ್ಣನು ಶತಘ್ನಿನಾಮಕಗದೆಯನ್ನು ನುಂಗಿ ಅಸುರಜನರಿಗೆ ಬಳಲಿಕೆಯನ್ನು ತೋರಿಸಿ ಬಳಿಕ, ನರಕಾಸುರನು ಪ್ರಯೋಗಿಸಿದ ಬಾಣಗಳನ್ನೆಲ್ಲ ಕತ್ತರಿಸಿ, ನರಕನಸಹಾಯಕ್ಕೆಂದು ಬಂದ ಯಾವತ್ತು ಸೈನ್ಯವನ್ನೂ ಕ್ಷಣಮಾತ್ರದಲ್ಲಿ ಸಂಹರಿಸಿದನು.

## ಅರವತ್ತ ಮೂರನೆಯ ಅಧ್ಯಾಯ ಮುಗಿದುದು

ನರಕನು ಕೃಷ್ಣನ ಕೂಡೆ ಯುದ್ಧವನ್ನು ಮಾಡುತ್ತ ಅವನ ವಾಹನವಾದ ಗರುಡನನ್ನು ಹೊಡೆದನು. ಆದರೇನು ? ಅವನು ಅಲ್ಲಾಡಲಿಲ್ಲ. ನರಕನು ಕೃಷ್ಣನ ಮೇಲೆ ಶೂಲಾಯುಧವನ್ನು ಪ್ರಯೋಗಿಸಬೇಕೆಂದಿರುವಾಗಲೇ ಶ್ರೀಕೃಷ್ಣನು ಚಕ್ರದಿಂದ ನರಕಾಸುರನನ್ನು ಸಂಹರಿಸಿದನು. ಆಗ ದೇವತೆಗಳು ಪುಷ್ಪವೃಷ್ಟಿ ಮಾಡಿದರು, ಗಂಧರ್ವಾಪ್ಸರೆಯರು ಗಾನನರ್ತನಗಳನ್ನು ಮಾಡಿದರು. ಶ್ರೀಕೃಷ್ಣನು ಪಟ್ಟಣದೊಳಗೆ ಬಂದು ನರಕನು ಕಿತ್ತುಕೊಂಡಿದ್ದ ಮಣಿಪರ್ವತವನ್ನು ಇಂದ್ರನಿಗೂ, ಅಮೃತಸ್ರಾವಿಯಾದ ಶ್ವೇತಛತ್ರವನ್ನು ವರುಣನಿಗೂ ಕಳುಹಿಸಿ ಅಂತಃಪುರಕ್ಕೆ ಬಂದನು. ಅಲ್ಲಿದ್ದ ಭೂದೇವಿಯು ಅದಿತಿಯ ಓಲೆಗಳನ್ನು ಶ್ರೀಕೃಷ್ಣನಿಗೆ ಅರ್ಪಿಸಿದಳು. ಮತ್ತು "ನಮ.ಪಂಕಜನಾಭಾಯ ನಮಃಪಂಕಜಮಾಲಿನೇ । ನಮ; ಪಂಕಜನೇತ್ರಾಯ ನಮಸ್ತೇ ಪಂಕಜಾಂಘ್ರಯೇ ॥" ಎಂದು ಸ್ತುತಿಸಿದಳು.

**ಭೂದೇವಿ :–** ಸ್ವಾಮಿಯೇ ! ರಜೋಗುಣದಿಂದ ಸೃಷ್ಟಿಯನ್ನೂ, ಸತ್ವಗುಣದಿಂದ ರಕ್ಷಣೆಯನ್ನೂ, ತಮೋಗುಣದಿಂದ ಲಯವನ್ನೂ ಮಾಡುವೆ. ನಾನೇ ಮೊದಲಾದ ಸರ್ವತತ್ವಾಭಿಮಾನಿ ದೇವತೆಗಳೂ ನಿನ್ನ ಅಧೀನರಾಗಿರುವೆವು. ನನ್ನ ಮುಮ್ಮಗವಾದ ಈ ಭಗದತ್ತನು ನಿನ್ನಲ್ಲಿ ಶರಣಾಗತನಾಗಿರುವನು. ಇವನನ್ನು ರಕ್ಷಿಸು.

ಶ್ರೀಕೃಷ್ಣನು ಭಗದತ್ತನಿಗೆ ಅಭಯವನ್ನು ಕೊಟ್ಟು ಆ ರಾಜ್ಯದ ಸಿಂಹಾಸನದಲ್ಲಿ ಅವನನ್ನು ಸ್ಥಾಪಿಸಿ, ನರಕನ ಸೆರೆಯಲ್ಲಿದ್ದ ಕನ್ಯೆಯರನ್ನೆಲ್ಲ ಬಿಡಿಸಿದನು. ಆಕನ್ಯೆಯರಲ್ಲಿ ಯಾರೂ ತಮ್ಮ ತಮ್ಮ ಊರಿಗೆ ಹೋಗಲಿಷ್ಟಪಡದೆ ಅವರೆಲ್ಲರೂ ಶ್ರೀಕೃಷ್ಣನನ್ನೇ ಮದಿವೆಯಾಗಬೇಕೆಂದು ಪ್ರಾರ್ಥಿಸಿದರು. ಭಕ್ತವತ್ಸಲನಾದ ಶ್ರೀಕೃಷ್ಣನು ಅವರನ್ನೆಲ್ಲ ಮದಿವೆಯಾಗಲು ಒಪ್ಪಿ ಅವರೆಲ್ಲರನ್ನೂ ದ್ವಾರಕಿಗೆ ಕಳುಹಿಸಿಕೊಟ್ಟನು.

## ಅರವತ್ತನಾಲ್ಕನೆಯ ಅಧ್ಯಾಯ ಮುಗಿದುದು

ಬಳಿಕ ಶ್ರೀಕೃಷ್ಣನು ದೇವಲೋಕಕ್ಕೆ ಹೋಗಿ ಇಂದ್ರನಿಂದ ಪೂಜಿತನಾಗಿ ಅದಿತಿ ದೇವಿಗೆ ಬೆಂಡೋಲೆಗಳನ್ನು ಕೊಟ್ಟನು. ಸತ್ಯಭಾಮೆಯೂ ನಮಿಸಿದಳು. ಅದಿತಿಯು ದೈತ್ಯಾವೇಶಕ್ಕೆ ಒಳಗಾಗಿ ಆ ಲೋಕದಂಪತಿಗಳನ್ನು ಕಿರಿಯವರೆಂದು ತಿಳಿದು ಆಶೀರ್ವದಿಸಿಬಿಟ್ಟಳು. ಮುಂದೆ ಸತ್ಯಭಾಮೆಯ ಪ್ರೇರಣೆಯಿಂದ ಶ್ರೀಕೃಷ್ಣನು ನಂದನವನದಲ್ಲಿದ್ದ ಪಾರಿಜಾತವೃಕ್ಷವನ್ನು ಕಿತ್ತು ಗರುಡನ ಮೇಲಿಟ್ಟು ತನ್ನೂರಿಗೆ ತೆರಳಬೇಕೆನ್ನುವಾಗ ಇಂದ್ರಾದಿದೇವತೆಗಳು ಕೃಷ್ಣನನ್ನಿದಿರಿಸಿ ಯುದ್ಧಕ್ಕೆ ಬಂದರು.

## ಅರವತ್ತೈದನೆಯ ಅಧ್ಯಾಯ ಮುಗಿದುದು

ದೇವತೆಗಳು ಯುದ್ಧದಲ್ಲಿ ಸತ್ಯಭಾಮೆಯಿಂದಲೂ, ಕೃಷ್ಣನಿಂದಲೂ ಸೋತು ಹಿಂದಕ್ಕೆ ತೆರಳಿದರು. ಶಿವನು ನಂದಿಯನ್ನೇರಿ ಯುದ್ಧಕ್ಕೆ ಬಂದನು. ಗರುಡನು ನಂದಿಯನ್ನು ಶಿವನ ಸಹಿತವಾಗಿ ದೂರಕ್ಕೆ ಬಿಸಾಡಿದನು. ಶಿವನು ಯುದ್ಧವನ್ನು ಮಾಡಲಾಗದೆ ಕೈಲಾಸಕ್ಕೆ ಹಿಂತಿರುಗಿದನು.

## ಅರವತ್ತಾರನೆಯ ಅಧ್ಯಾಯ ಮುಗಿದುದು

ಇಂದ್ರನು ಬಂದು ಯುದ್ಧವನ್ನು ಮಾಡಿ ಕೃಷ್ಣನ ಮೇಲೆ ವಜ್ರಾಯುಧವನ್ನು ಪ್ರಯೋಗಿಸಿದನು. ಶ್ರೀಕೃಷ್ಣನು ಅದನ್ನು ಕೈಲಿಹಿಡಿದು "ದುಶ್ಚವನನೇ ! ನಿನ್ನಾ ಯುಧವು ನನ್ನನ್ನು ಏನೂಮಾಡದೆ ನನ್ನ ಕೈಸೇರಿದೆ ನೋಡು" ಎಂದು ನಕ್ಕನು. ಇಂದ್ರನು ನಿರಾಯುಧನಾದನು. ಐರಾವತವು ಗರುಡನಿಂದ ಪೆಟ್ಟು ತಿಂದು ಸೊರಗಿ ಹೋಯಿತು. ಇಂದ್ರನು ಕೈಸಾಗದೆ ಹಿಮ್ಮೆಟ್ಟಿದನು. ಆಗ

**ಸತ್ಯಭಾಮೆ :–** ಇಂದ್ರನೇ ! ಶಚಿಯ ಗಂಡನಾಗಿ ಪಲಾಯನಮಾಡುವುದು ಯೋಗ್ಯವಲ್ಲ. ಸೋತು ಹಿಂತಿರುಗಿ ಹೋಗುವ ನಿನ್ನನ್ನು ಶಚಿಯು ಮೂದಲಿಸದೇ ಬಿಡಳು.

**ಇಂದ್ರ :** ದೇವಾದಿಸೃಷ್ಟಿಕರ್ತನಾದ ಶ್ರೀಕೃಷ್ಣನಿಂದ ಯಾವನು ತಾನೇ ಪರಾಜಯವನ್ನು ಹೊಂದದೇ ಇರುವನು ? ಕರುವು ತಾಯಿಯ ಕೆಚ್ಚಲನ್ನು ಗುದ್ದುವಂತೆ ಜ್ಞಾನವಿಲ್ಲದೆ ನಾವೂ ವಿರೋಧಮಾಡಿ ನಮ್ಮ ಮೂರ್ಖತನವನ್ನು ತೋರಿಸಿಕೊಂಡೆವು. (ಕೃಷ್ಣನಿಗೆ ನಮಸ್ಕರಿಸಿ) ಸ್ವಾಮಿಯೇ ನನ್ನ ಅಪರಾಧವನ್ನು ಕ್ಷಮಿಸು. ಅಮರಾವತಿ ರಾಜ್ಯ, ಐರಾವತ, ಪಾರಿಜಾತಾದಿ ಈ ಸಕಲ ವಸ್ತುಗಳೂ ನಿನ್ನಾಧೀನಗಳು. ನಿನ್ನಿಷ್ಟದಂತೆ ಯಾವುದನ್ನು ಬೇಕಾದರೂ ಒಯ್ಯಬಹುದು.

ಹಾಗಾದರೆ ನಾನು ವಿರೋಧಿಸಿದುದೇಕೆಂದರೆ ಈಗ ನೀನು ಭೂಲೋಕದಲ್ಲಿರುವೆ, ಪಾರಿಜಾತವೃಕ್ಷವನ್ನು ಅಲ್ಲಿಗೆ ನೀನು ತೆಗೆದುಕೊಂಡು ಹೋದರೆ ಈ ದೇವಲೋಕದ ಹೆಚ್ಚುಗಾರಿಕೆಯೇ ಹೋಗುವುದು. ಭೂಲೋಕದವರಿಗೆ ಸದರವಾಗುವುದು.. ನನ್ನ ತಪ್ಪನ್ನು ಕ್ಷಮಿಸು !

**ಕೃಷ್ಣ** :– ನೀನು ಅಪರಾಧಿಯಲ್ಲ. ನಾನೇ ಅಪರಾಧಿ. ನಿನಗೆ ಸ್ವಾತಂತ್ರ್ಯ ವಿಲ್ಲ. ನಿನ್ನೊಳಗೆ ಕುಳಿತು ಅಪರಾಧವನ್ನು ಮಾಡಿಸಿದ ಅಂತರ್ಯಾಮಿಯೇ ನಾನು. ನೀನು ಪೇಚಾಡಬೇಡ. ನಾನು ದೇವಲೋಕಕ್ಕೆ ತೆರಳುವಾಗ ಈ ವೃಕ್ಷವೂ ನಂದನ ವನಕ್ಕೆ ಬಂದು ಸೇರುವುದು. ಆದುದರಿಂದ ಈ ಲೋಕದ ಮಹಿಮೆಯು ಕುಂದು ವುದಿಲ್ಲ.

**ಇಂದ್ರ** :– ಅರ್ಜುನನ್ನು ನನ್ನ ಮಗನು. ಅವನನ್ನು ಕೈಬಿಡದೆ ರಕ್ಷಿಸಬೇಕು.

**ಕೃಷ್ಣ** :– ಹಾಗೆಯೇಆಗಲಿ.

(ಕೃಷ್ಣನು ವಜ್ರಾಯುಧವನ್ನು ಇಂದ್ರನಿಗೇ ಕೊಟ್ಟು, ದ್ವಾರಕಿಗೆ ಬಂದು, ಪಾರಿಜಾತ ವೃಕ್ಷವನ್ನು ಸತ್ಯ ಭಾಮೆಯ ಮನೆಯ ಅಂಗಳದಲ್ಲಿ ಸ್ಥಾಪಿಸಿದನು ಎಲ್ಲರೂ ಆ ವೃಕ್ಷವನ್ನು ನೋಡಿ ಆನಂದಪಟ್ಟು ಶ್ರೀಕೃಷ್ಣನನ್ನು ಪೂಜಿಸಿದರು.

**ಅರವತ್ತೇಳನೆಯ ಅಧ್ಯಾಯ ಮುಗಿದುದು**

"ಶಿವನೇ ದೇವರು. ಕೃಷ್ಣನು ಮಕ್ಕಳಿಗಾಗಿ ಶಿವನನ್ನು ಕುರಿತು ತಪಸ್ಸನ್ನು ಮಾಡಿದ್ದರಿಂದ ಆ ಕೃಷ್ಣನು ದೇವರಲ್ಲ. ನಮ್ಮಂತೆ ಒಬ್ಬ ಮನುಷ್ಯನು" ಎಂದು ಅಯೋಗ್ಯರು ತಿಳಿಯಲೆಂದೇ ಶ್ರೀಕೃಷ್ಣನು ಈ ವಿಡಂಬನೆಯನ್ನು ಮಾಡಿದನು. ಶಿವನಿಂದ ದಗ್ಧನಾಗಿದ್ದ ಮನ್ಮಥನನ್ನು ರುಕ್ಮಿಣಿಯಲ್ಲಿ ಶ್ರೀಕೃಷ್ಣನು ಸೃಷ್ಟಿಸಿದನು. ನಾರದರು ಶಂಬರಾಸುರನ ಬಳಿಗೆ ಹೋಗಿ ಶ್ರೀಕೃಷ್ಣನಿಂದ ರುಕ್ಮಿಣಿಯಲ್ಲಿ ಹುಟ್ಟಿರುವ ಪ್ರದ್ಯುಮ್ನನಾಮಕ ಮಗನಿಂದ ನಿನಗೆ ಮರಣವೆಂದು ಹೇಳಿಬಿಟ್ಟರು. ಶಂಬರನು ಕೂಡಲೇದ್ವಾರಕಿಗೆ ಬಂದು ರುಕ್ಮಿಣಿ ಮತ್ತು ಎಳೆಯ ಮಗುವಿದ್ದ ಸೂತಿಕಾಗೃಹವನ್ನು ಪ್ರವೇಶಿಸಿ, ಅಲ್ಲಿದ್ದ ಶಿಶುವನ್ನು ಅಪಹರಿಸಿ ಸಮುದ್ರ ಜಲದಲ್ಲಿ ಒಗೆದನು. ಸರ್ವಜ್ಞ ರಾದ ಕೃಷ್ಣ ರುಕ್ಮಿಣಿಯರು ಪ್ರದ್ಯುಮ್ನ ಮತ್ತು ಶಂಬರ ಅವರ ಕರ್ಮದ ಫಲವನ್ನು ಅವರು ಭೋಗಿಸಲೆಂದೇ ಕಂಡರೂ ಕಾಣದ ಹಾಗಿದ್ದುಬಿಟ್ಟರು. ಪ್ರದ್ಯುಮ್ನನು ಮೀನಿನ ಉದರದಲ್ಲಿ ವಾಸಿಸುವ ಕರ್ಮವನ್ನು ಅನುಭವಿಸಲೇಬೇಕಾದುದರಿಂದ ಅವನನ್ನು ಒಂದು ಮೀನು ನುಂಗಿತು. ಬೆಸ್ತರು ಬಲೆಬೀಸಿ ಆ ಮೀನನ್ನು ಹಿಡಿದು

ಶಂಬರನಿಗೆ ಕಾಣಿಕೆಯಾಗಿ ಕೊಟ್ಟರು. ಅದನ್ನು ಅಸುರನು ಅಡಿಗೆಯ ಮನೆಗೆ ಕಳುಹಿಸಿದನು. ಅದನ್ನು ಸೀಳಿದಾಗ ಒಳಗೆ ಇದ್ದ ಅದ್ಭುತರೂಪವುಳ್ಳ ಶಿಶುವನ್ನು ಅಡಿಗೆ ಮನೆಯ ಅಧ್ಯಕ್ಷಳಾದ ಮಾಯಾವತಿಯು ನೋಡಿ ಅದನ್ನು ರಕ್ಷಿಸಲು ತೊಡಗಿದಳು.

ರತೀದೇವಿಯೇ ಮಾಯಾವತಿ. ಶಿವನು ಕಾಮನನ್ನು ಸುಟ್ಟರೂ, ಅವನ್ನ ಪತ್ನಿಯು ಶರಣಾಗತಳಾಗಿ ಪ್ರಾರ್ಥಿಸಿದ್ದರಿಂದ ಪ್ರೀತನಾಗಿ ವರವನ್ನು ಕೊಟ್ಟನು. ಮತ್ತು ನಾರದರು ಕಾಮನೇ ಮಗುವಾಗಿ ಹುಟ್ಟಿ ನಿನ್ನ ಬಳಿಗೆ ಬಂದಾಗ ಅದನು ರಕ್ಷಣೆ ಮಾಡಿದರೆ ಮುಂದೆ ಮಂಗಳವಾಗುವುದೆಂದು ಹೇಳಿದ್ದರು. ಆದ್ದರಿಂದ ರತೀ ದೇವಿಯು ಮಗುವೇ ತನ್ನ ಗಂಡನೆಂದು ತಿಳಿದು ರಸಾಯನಗಳಿಂದ ಅವನಿಗೆ ಬೇಗ ಯೌವನವು ಬರುವಂತೆ ಪೋಷಿಸಿದಳು. ಮುಂದೆ ಪ್ರದ್ಯುಮ್ನನಿಗೆ ರತಿಯು ಅವನ ಸ್ವರೂಪವನ್ನು ತಿಳಿಸಿ ಶಂಬರನ ವಧೆಗೆ ಮಾಯಾವಿದ್ಯೆಗಳನ್ನು ಹೇಳಿಕೊಟ್ಟು ಅವನ ವಧೆಗೆ ಪ್ರಚೋದಿಸಿದಳು. ಪ್ರದ್ಯುಮ್ನನು ಶಂಬರಾಸುರನನ್ನು ಕೊಂದು ರತಿಯೊಡನೆ ಗಗನ ಮಾರ್ಗದಿಂದ ದ್ವಾರಕೆಯ ಅಂತಃಪುರಕ್ಕೆ ಬಂದನು. ಆ ವೇಳೆಗೆ ನಾರದರೂ ಅಲ್ಲಿಗೆ ಬಂದು ಪ್ರದ್ಯುಮ್ನನು ರುಕ್ಮಿಣಿಯ ಮಗನೆಂದು ಹೇಳಿದರು. ಇದನ್ನು ಕೇಳಿದ ಸರ್ವರೂ ಆಶ್ಚರ್ಯಭರಿತರಾಗಿ ಸಂತೋಷಪಟ್ಟರು.

## ಅರವತ್ತನೆಂಯ ಅಧ್ಯಾಯ ಮುಗಿದುದು

ಕಾಶಿರಾಜನಿಗೆ 'ಸುತನು' ಎಂಬ ಹೆಣ್ಣುಮಗಳೊಬ್ಬಳು ವಿನಾ ಮಕ್ಕಳೇ ಇರಲಿಲ್ಲ. ವಸುದೇವನು ಅಲ್ಲಿಗೆ ಬಂದಾಗ ಅವಳನ್ನು ಅವನಿಗೆ ರಾಜನು ಮದಿವೆ ಮಾಡಿ ಕೊಟ್ಟು, ತನ್ನ ಮಗಳು ಹೆರುವ ಗಂಡು ಮಗುವನ್ನು ತನಗೇ ಕೊಟ್ಟು ಬಿಡಬೇಕೆಂದು ಒಪ್ಪಂದ ಮಾಡಿಕೊಂಡನು. ಆ ಮಗಳು ಒಂದು ಗಂಡು ಮಗುವನ್ನೇ ಹಡೆದಳು. ವೇನಾಸುರನೇ ಸುತನುವಿನ ಮಗನಾಗಿ ಹುಟ್ಟಿದನು. ಅವನಿಗೆ ಪೌಂಡ್ರಕವಾಸುದೇವನೆಂಬ ಹೆಸರಾಯಿತು. ಅವನು ಮಾತಾಮಹನ ಮನೆಯಲ್ಲಿಯೇ ಬೆಳೆದನು. ಅವನಿಗೆ ಸಹಜವಾಗಿ ಕೃಷ್ಣನಲ್ಲಿ ಬಹಳ ದ್ವೇಷವಿದ್ದಿತು. ಕೃಷ್ಣನು ಕೈಲಾಸಕ್ಕೆ ಹೋಗಿರುವಾಗ ಅವನು ಬಂದು ದ್ವಾರಕೆಯನ್ನು ಮುತ್ತಿದನು. ಬಲ ರಾಮಾದಿಗಳು ಯುದ್ಧವನ್ನು ಮಾಡಿ ಅವನನ್ನು ಸೋಲಿಸಿದರು. ಪೌಂಡ್ರಕನ ಕೂಡಲೇ ಕಾಶಿಗೆ ಓಡಿ ಹೋದನು. ಬೆಳಗಾಯಿತು. ಶ್ರೀಕೃಷ್ಣನು ಬದರಿಯಿಂದ ಬಂದು ಪೌಂಡ್ರಕನು ಮಾಡಿದ ಹಾವಳಿಯನ್ನೂ, ಅವನು ಸೋತು ಓಡಿ ಹೋದುದನ್ನೂ ಕೇಳಿದನು. ಎಷ್ಟೇ ಆಗಲಿ ಪೌಂಡ್ರಕನು ತನಗೆ ಜ್ಯೇಷ್ಠನಾದುದರಿಂದ ಪ್ರತೀಕಾರವನ್ನು ಮಾಡಬಾರದೆಂದು ಕೃಷ್ಣನು ಸುಮ್ಮನಾದನು. ಪೌಂಡ್ರಕನು ಒಬ್ಬ ದೂತನನ್ನು ಕೃಷ್ಣನ ಬಳಿಗೆ ಕಳುಹಿಸಿದನು. ಅವನು ಬಂದು ಯಾದವಸಭೆಯಲ್ಲಿ

**ದೂತ** :– ಪೌಂಡ್ರಕನ ಸಂದೇಶವನ್ನು ಕೇಳಿರಿ :– ನಾನೊಬ್ಬನೇ ವಾಸುದೇವನು. ಕೃಷ್ಣನೇ ! ನೀನು ಈ ಹೆಸರನ್ನು ಬಿಟ್ಟುಬಿಡು. ಮೌಢ್ಯದಿಂದ ಧರಿಸಿರುವ ಚಕ್ರಾದಿಗಳನ್ನು ತ್ಯಜಿಸಿ ನನಗೆ ಶರಣಾಗತನಾಗು. ಇಲ್ಲವೇ ಯುದ್ಧಕ್ಕೆ ಸಿದ್ಧನಾಗು.

**ಕೃಷ್ಣ** :– ಮೂಢನೇ ! ನೀನು ಧರಿಸಿರುವ ಚಕ್ರಾದಿಗಳು ನಕಲು ಚಿಹ್ನೆಗಳು. ಅವನ್ನು ನಾನು ತೆಗೆಸುವೆನು. ನೀನು ಸತ್ತು ನಿನ್ನ ದೇಹವು ನಾಯಿನರಿಗಳ ಪಾಲಾಗುವುವು.

(ಶ್ರೀಕೃಷ್ಣನು ಹೀಗೆ ಹೇಳಿ ಕಳುಹಿಸಿ ಸೇನಾಸಮೇತನಾಗಿ ಕಾಶಿಗೆ ಹೋಗಿ ಶ್ರೀವತ್ಸ ಚಿಹ್ನೆಗಾಗಿ ಸುಡಿಸಿಕೊಂಡು, ಬಂಗಾರದ ಎರಡು ತೋಳುಗಳನ್ನು ಕಟ್ಟಿಕೊಂಡು, ಬಂಗಾರದ ಗರುಡನ ಮೇಲೆ ಕುಳಿತು ರಥದೊಡನೆ ಬಂದ, ನಾನೇ ಪರಬ್ರಹ್ಮವಾದ ವಾಸುದೇವನೆಂದು ಹೇಳಿಕೊಳ್ಳುವ ಪೌಂಡ್ರಕನನ್ನೂ, ಅವನ ಮಾತಾಮಹನಾದ ಕಾಶಿರಾಜನನ್ನೂ ಕೊಂದು ದ್ವಾರಕಿಗೆ ಬಂದನು. ಕಾಶಿರಾಜನ ಮಗನಾದ ಸುದಕ್ಷಿಣನೆಂಬ ಅಸುರನು ಶಿವನಿಂದ ವರವನ್ನು ಪಡೆದು, ಹೋಮ ಮಾಡಿದನು. ಆಗ ಅಗ್ನಿಕುಂಡದಿಂದ ದಕ್ಷಿಣಾಗ್ನಿಯು ಹೊರಟು ದ್ವಾರಕಿಗೆ ಬಂದು ಅದನ್ನು ಸುಡಲಾರಂಭಿಸಿದನು. ಕೃಷ್ಣನು ಚಕ್ರವನ್ನು ಬಿಟ್ಟನು. ಅದು ಬೆನ್ನಟ್ಟಿ ಬಂದ ಕೂಡಲೆ ಆ ಕೃತ್ಯಾಗ್ನಿಯು ಹಿಂತಿರುಗಿ ಹೋಗಿ ಸುದಕ್ಷಿಣವನ್ನೇ ಸುಟ್ಟುಬಿಟ್ಟಿತು. ಚಕ್ರವು ಕಾಶಿಯನ್ನು ಪೂರ್ಣವಾಗಿ ಸುಟ್ಟು ಕೃಷ್ಣನ ಬಳಿಗೆ ಬಂದಿತು.

ಈ ಕಥೆಯನ್ನು ಕೇಳುವವರೂ, 'ಹೇಳುವವರೂ ಪಾಪರಹಿತರಾಗಿ, ಕೊನೆಗೆ ವೈಕುಂಠವನ್ನು ಹೊಂದುವರು.

### ಅರವತ್ತೊಂಭತ್ತನೆಯ ಅಧ್ಯಾಯ ಮುಗಿದುದು

ಒಮ್ಮೆ ಪೂರ್ಣಗ್ರಾಸ ಸೂರ್ಯಗ್ರಹಣವು ಬಂದಿತು. ಶ್ರೀಕೃಷ್ಣನು ಸಕಲ ಬಂಧುಗಳೊಡನೆ ಕುರುಕ್ಷೇತ್ರದಲ್ಲಿರುವ ಸ್ಯಮಂತಪಂಚಕಪುಣ್ಯಸ್ಥಳಕ್ಕೆ ಬಂದನು. ಆಗ ಬಹುಶಃ ಭೂಮಿಯಲ್ಲಿರುವ ಸಕಲ ಪುಣ್ಯಾತ್ಮರೂ ಆ ಕ್ಷೇತ್ರಕ್ಕೆ ಬಂದು ತಮ್ಮ ತಮ್ಮ ಶಕ್ತ್ಯನುಸಾರ ಸ್ನಾನ, ದಾನ, ಅನ್ನಸಂತರ್ಪಣೆಯನ್ನು ನಡೆಸಿದರು. ಇಷ್ಟಮಿತ್ರಬಾಂಧವರನ್ನು ಕಂಡು ಸಂತೋಷಭರಿತರಾದರು. ಯಾದವರಿಗೆ ಬೇಕಾದವರೂ, ಶತ್ರುಮಿತ್ರರೆಲ್ಲರೂ ಅಲ್ಲಿಗೆ ಬಂದಿದ್ದರು. ಆಗ ಅಲ್ಲಿಗೆ ಬಂದಿದ್ದ ನಂದಗೋಪ ಮೊದಲಾದ ಗೋಪರೂ, ಗೋಪಿಯರೂ, ಪಾಂಡವರೂ ಯಾದವರನ್ನು ಭೇಟಿ ಮಾಡಿ ಯೋಗಕ್ಷೇಮವನ್ನು ವಿಚಾರಿಸಿ ಹರ್ಷಗೊಂಡರು. ಕುಂತೀದೇವಿಯು ವಸುದೇವನನ್ನು ಕಂಡು

**ಕುಂತಿ :–** ಅಣ್ಣಾ ! ನಮಗೆ ಮಹಾವಿಪತ್ತುಗಳು ಒಂದುವು. ಆಗ ನೀವು ನಮ್ಮನ್ನು ಸ್ಮರಿಸಲಿಲ್ಲ. ದೇವರು ಕೈಬಿಟ್ಟಾಗ ಯಾರಿಗೆ ಯಾರೂ ಇಲ್ಲ.

**ವಸುದೇವ :–** ತಂಗಿ ! ಜೀವರೆಲ್ಲರೂ ಅಸ್ವತಂತ್ರರು. ಆಗ ನಾವೇನೂ ಸುಖವಾಗಿರಲಿಲ್ಲ. ಕಂಸನಿಂದ ನಮಗೆ ಮಹಾವಿಪತ್ತು ಒಂದಿತ್ತು. ಯಾದವರು ದಿಕ್ಪಾಪಾಲಾಗಿದ್ದರು. ನಿಮಗೆ ವಿಪತ್ತು ಬಂದಿದ್ದ ಕಾಲದಲ್ಲಿ ನಾವು ಕಂಸನ ಸೆರೆಯಲ್ಲಿ ಕೊಳೆಯುತ್ತಿದ್ದೆವು. ಈಗತಾನೆ ಎಲ್ಲರೂ ಒಂದೆಡೆ ಸೇರಿರುವೆವು. ಆದ್ದರಿಂದ ಆಗ ನಿಮ್ಮ ಯೋಗಕ್ಷೇಮವನ್ನು ವಿಚಾರಿಸಲು ಅವಕಾಶವಿಲ್ಲದೇ ಹೋಯಿತು, ಅನ್ಯಥಾ ತಿಳಿಯಬೇಡಮ್ಮಾ !

ವಿರಾಟದ್ರುಪದ ಮೊದಲಾದ ರಾಜರು ಒಂದು ಶ್ರೀಕೃಷ್ಣನ ದರ್ಶನಮಾಡಿ ಅವನ ಸೇವೆಮಾಡಿ ಸಂತೋಷಪಟ್ಟರು. ನಂದಗೋಪ, ಯಶೋದೆ ಬಂದುದನ್ನು ನೋಡಿ ಬಲರಾಮ ಮತ್ತು ಕೃಷ್ಣ ಇಬ್ಬರೂ ಅವರಿಗೆ ನಮಸ್ಕರಿಸಿದರು. ನಂದಗೋಪ ಯಶೋದೆಯರು ಅವರಿಬ್ಬರನ್ನೂ ತಮ್ಮ ತೊಡೆಯ ಮೇಲೆ ಕೂಡಿಸಿಕೊಂಡು ಬಿಗಿದಪ್ಪಿದರು. ರೋಹಿಣೀ ಮತ್ತು ದೇವಕಿಯರು ಯಶೋದೆಯನ್ನು ಆಲಿಂಗಿಸಿದರು.

**ದೇವಕಿ ;–** ವ್ರಜೇಶ್ವರಿ ! ನಿಮ್ಮ ಉಪಕಾರಕ್ಕೆ ದೇವೇಂದ್ರನ ಸಂಪತ್ತನ್ನು ಕೊಟ್ಟರೂ ಸಾಲದು. ನಮ್ಮ ಮಕ್ಕಳನ್ನು ಪ್ರೀತಿಯಿಂದ ಪೋಷಿಸಿದಿರಿ.

ಗೋಪಿಯರು ಏಕಾಂತದಲ್ಲಿ ಶ್ರೀಕೃಷ್ಣನ ಭೇಟಿಯನ್ನು ಮಾಡಿ ಭಕ್ತ್ಯುದ್ರೇಕವನ್ನು ಹೊಂದಿದರು. ಶ್ರೀಕೃಷ್ಣನು ಅವರನ್ನು ಆಲಿಂಗಿಸಿದನು.

**ಶ್ರೀಕೃಷ್ಣ ;–** ಸಖೀಮಣಿಯರೇ ! ಯಾದವರ ಅಭೀಷ್ಟವನ್ನು ಸಲ್ಲಿಸಲು ನಿಮ್ಮನ್ನು ಬಿಟ್ಟು ಹೋಗಬೇಕಾಯಿತು. ಬಳಿಕ ಬೇರೆ ಬೇರೆ ಕಾರ್ಯದಲ್ಲಿ ತೊಡಗಲೇ ಬೇಕಾಯಿತು. ಈ ಕಾರಣದಿಂದ ನಿಮ್ಮನ್ನು ಭೇಟಿಮಾಡಲು ತಡವಾಯಿತು. ನನ್ನನ್ನೂ ನಿಮ್ಮನ್ನೂ ಸೇರಿಸಿದವನು ಈಶ್ವರನೇ. ಅಗಲಿಸಿದವನೂ ಅವನೇ. 'ಪ್ರಿಯನಾದ ನಿನ್ನ ಅಗಲಿಕೆಯು ಬಹುತಾಪಕರ' ಎಂದು ನೀವು ಹೇಳಬಹುದು. ಮುಕ್ತಿಯು ದೊರೆಯಬೇಕಾದರೆ ಭಕ್ತಿಯೊಂದೇ ಮುಖ್ಯ ಸಾಧನವು. ನಿಮಗೆ ಅಂತಹ ಭಕ್ತಿಯು ಇದೆ. ಮುಖ್ಯವಾದ ತತ್ತ್ವವನ್ನು ಹೇಳಿಬಿಡುವೆನು ಕೇಳಿ :–ನಾನೇ ಸಕಲರ ಉತ್ಪಾದಕನೂ ಮತ್ತು ಸಂಹಾರಕನು. ಎಲ್ಲರ ಒಳಗೂ ಹೊರಗೂ ಸರ್ವತ್ರ ವ್ಯಾಪಿಸಿರುವೆನು. ಸರ್ವವೂ ಪರಬ್ರಹ್ಮನಾದ ನನ್ನನ್ನೇ ಆಶ್ರಯಿಸಿರುವುದನ್ನು ನೋಡಿರಿ !

**ಗೋಪಿಯರು :–** (ಜ್ಞಾನವನ್ನು ಹೊಂದಿ) ಇದೋ ನಮಸ್ಕರಿಸುವೆವು. ನಮ್ಮ ಮನಸ್ಸಿನಲ್ಲಿ ನಿನ್ನ ಸ್ವರೂಪವು ನಿರಂತರವೂ ವ್ಯಕ್ತವಾಗಿರಲಿ !

**ಎಪ್ಪತ್ತನೆಯ ಅಧ್ಯಾಯ ಮುಗಿದುದು**

ಶ್ರೀಕೃಷ್ಣನು ಕುರುಕ್ಷೇತ್ರಕ್ಕೆ ಬಂದಿದ್ದ ಧರ್ಮರಾಜ ಮತ್ತು ಬಂಧುಗಳು ಮಿತ್ರರು ಎಲ್ಲರ ಭೇಟಿ ಮಾಡಿ ಕುಶಲವನ್ನು ಕೇಳಿ ಅವರೆಲ್ಲರನ್ನೂ ಸತ್ಕರಿಸಿದನು. ರಾಜರು "ನೀನೇ ನಾರಾಯಣನು. ನಿನ್ನ ಕಥಾಮೃತಪಾನಮಾಡುವವರಿಗೆ ಅಮಂಗಳವು ಇಲ್ಲವೇ ಇಲ್ಲ" ಎಂದು ಸ್ತುತಿಸಿದರು. ಅತ್ತ ದ್ರೌಪದೀದೇವಿಯು ರುಕ್ಮಿಣೀ ಕೃಷ್ಣ ಮಹಿಷಿಯರ ಯೋಗಕ್ಷೇಮವನ್ನು ಕೇಳಿ "ನಿಮ್ಮೆಲ್ಲರನ್ನೂ ಶ್ರೀಕೃಷ್ಣನು ಮದಿವೆಯಾದುದನ್ನು ಹೇಳಿರಿ'' ಎಂದು ಕೇಳಿದಳು. ರುಕ್ಮಿಣೀ ಮೊದಲಾದವರೆಲ್ಲರೂ ತಮ್ಮೆಲ್ಲರನ್ನೂ ಕೃಷ್ಣನು ಕಲ್ಯಾಣಮಾಡಿಕೊಂಡ ಕಥೆಗಳನ್ನು ಹೇಳಿದರು. ಹರಿಯ ಮಹಿಷಿಯರೆಲ್ಲರೂ "ನಾವು ಮೋಕ್ಷವನ್ನೂ ಅಪೇಕ್ಷಿಸುವವರಲ್ಲ. ಗದಾಧರನ ಪಾದಸೇವೆಯನ್ನು ಮಾತ್ರ ಬಯಸತಕ್ಕವರು ಅವನ ಪಾದಧೂಳಿಯು ನಿರಂತರ ನಮಗೆ ಲಭಿಸಲಿ" ಎಂದರು.

ವೇದವ್ಯಾಸರು, ನಾರದರು, ದೇವಲ, ಅಸಿತ ಮುಂತಾದ ಮಹರ್ಷಿಗಳೆಲ್ಲರೂ ಶ್ರೀಕೃಷ್ಣನ ದರ್ಶನಾರ್ಥವಾಗಿ ಬಂದು ಅವನಿಂದ ಸತ್ಕಾರವನ್ನು ಹೊಂದಿದರು.

**ಶ್ರೀಕೃಷ್ಣ** :– ನಾವು ಪೂರ್ಣಫಲವನ್ನು ಹೊಂದಿದೆವು. ದೇವತೆಗಳಿಗೂ ದುರ್ಲಭವಾದುದು ತಮ್ಮ ದರ್ಶನ. ಪ್ರತಿಮೆಯೇ ದೇವರೆಂದು ನಂಬಿರುವ ಮನುಷ್ಯರಿಗೆ ತಮ್ಮಂತಹ ಜ್ಞಾನಿಗಳ ಸೇವೆಯು ದುರ್ಲಭ. ಜಡವಾದ ಜಲವೇ ತೀರ್ಥಗಳಲ್ಲ. ಕಲ್ಲು ಮಣ್ಣಿನ ವಿಗ್ರಹಗಳೇ ದೇವರಲ್ಲ. ಜಲ ಮತ್ತು ವಿಗ್ರಹಗಳಲ್ಲಿ ಸಂನಿಹಿತರಾಗಿರುವ ದೇವತೆಗಳು ತಮ್ಮನ್ನು ಸೇವಿಸತಕ್ಕ ಜನರಿಗೆ ಗುರುಗಳ ದ್ವಾರ ಜ್ಞಾನವನ್ನು ಕೊಟ್ಟು ಬಹುಕಾಲದ ಮೇಲೆ ಪಾವನ ಮಾಡುವರು. ತಮ್ಮಂತಹ ಸಾಧುಸಜ್ಜನರಾದರೋ ದರ್ಶನ ಮಾತ್ರದಿಂದಲೇ ಪಾವನ ಮಾಡುತ್ತಾರೆ.

**ಋಷಿಗಳು** : ನಿನ್ನ ಮಾಯೆಯಿಂದ ಮೋಹಿತರಾಗಿರುವೆವು. ನೀನು ಬ್ರಹ್ಮಾದಿಗಳಿಗೂ ನಿಯಾಮಕನು.

**ವಸುದೇವ** :– ಜ್ಞಾನಿಗಳೇ ! ವಿಹಿತಕರ್ಮವನ್ನು ಹೇಗೆ ಮಾಡಿದರೆ ಪಾಪ ಕರ್ಮದ ಮೂಲನಾಶವಾಗುವುದು ?

**ನಾರದ** :– ವಸುದೇವನು ಭಗವಂತನನ್ನು ಮಗನೆಂದು ತಿಳಿದಿರುವನು. ಭಗವಂತನನ್ನು ತನ್ನ ಬಳಿಯಲ್ಲಿಯೇ ಇಟ್ಟುಕೊಂಡು ನಮ್ಮನ್ನು ಕೇಳುತ್ತಿರುವನು.

**ಋಷಿಗಳು** :– ಬ್ರಹ್ಮಾರ್ಪಣಬುದ್ಧಿಯಿಂದ ವಿಹಿತಕರ್ಮವನ್ನು ಮಾಡಿದರೆ ಜ್ಞಾನದ್ವಾರಾ ಮುಕ್ತಿಯಾಗುವುದು.

**ಎಪ್ಪತ್ತೆರಡನೆಯ ಅಧ್ಯಾಯ ಮುಗಿದುದು**

ವಸುದೇವನು ಆಗ ಬಂದಿದ್ದ ಋಷಿಗಳನ್ನೇ ಋತ್ವಿಜರನ್ನಾಗಿಟ್ಟುಕೊಂಡು ಸ್ಯಮಂತಪಂಚಕವೆಂಬ ಕ್ಷೇತ್ರದಲ್ಲಿಯೇ ಯಜ್ಞವನ್ನು ಮಾಡಿ ಹೇರಳವಾಗಿ ದಕ್ಷಿಣೆಯನ್ನು ಕೊಟ್ಟು ರಾಮಹ್ರದದಲ್ಲಿ ಅವಭೃತಸ್ನಾನವನ್ನು ಮಾಡಿದನು. ಎಲ್ಲರೂ ಮೂರುತಿಂಗಳ ಕಾಲ ಕುರುಕ್ಷೇತ್ರದಲ್ಲಿದ್ದು ಬಳಿಕ ಅವರವರ ಸ್ಥಾನಗಳಿಗೆ ತೆರಳಿದರು.

## ಎಪ್ಪತ್ತುಮೂರನೆಯ ಅಧ್ಯಾಯ ಮುಗಿದುದು

**ವಸುದೇವ** :— (ತನಗೆ ನಮಸ್ಕಾರ ಮಾಡಿದ ರಾಮಕೃಷ್ಣರನ್ನು ಕುರಿತು) ಶ್ರೀಕೃಷ್ಣನೇ ! ನೀನು ನಾರಾಯಣನು. ಬಲರಾಮನು ಶೇಷದೇವನು. ನೀವಿಬ್ಬರೂ ಸಾಕ್ಷಾತ್ಪ್ರಧಾನ ಪುರುಷರು. ನನ್ನ ಮಕ್ಕಳು ಅಲ್ಲವೇ ಅಲ್ಲ. ಜಗತ್ತಿನ ಸೃಷ್ಟ್ಯಾದಿಗಳನ್ನು ಮಾಡುವವರು ನೀವು. ಭೂ ಭಾರನಾಶಕ್ಕಾಗಿ ನೀವು ಅವತರಿಸಿರುವಿರಿ. ನಿಮ್ಮನ್ನು ಶರಣು ಹೊಂದುವೆನು.

**ದೇವಕಿ** :— ಶ್ರೀಕೃಷ್ಣನೇ ! ನೀನೇ ನಾರಾಯಣನು. ನಿನ್ನಲ್ಲಿ ನಾನು ಶರಣು ಬಂದಿರುವೆನು. ಹಿಂದೆ ಮೃತನಾಗಿದ್ದ ಗುರುಪುತ್ರನನ್ನು ಬದುಕಿಸಿ ಗುರುವಿಗೆ ಕೊಟ್ಟಿರುವೆ. ಹಾಗೆಯೇ ಸತ್ತುಹೋಗಿರುವ ನನ್ನ ಆರುಮಂದಿ ಪುತ್ರರು ನಿನ್ನ ಅಣ್ಣಂದಿರು. ಅವರನ್ನು ಬದುಕಿಸಿ ತೋರಿಸು.

ಶ್ರೀಕೃಷ್ಣನು ಆಗಲಿ ಎಂದು ಹೇಳಿ ಸುತಳಲೋಕದಲ್ಲಿದ್ದ ಬಲಿರಾಜನ ಬಳಿಗೆ ಬಂದನು. ಬಲಿಯು ಭಕ್ತಿಯಿಂದ ಅವನನ್ನು ಪೂಜಿಸಿ "ಸ್ವಾಮಿಯೇ ! ನಾವು ನಿನ್ನನ್ನು ದ್ವೇಷಿಸುವ ದೈತ್ಯಕುಲದವರು. ಆದರೂ ನಮಗೆ ದರ್ಶನವನ್ನು ಕೊಟ್ಟು ಉದ್ಧಾರ ಮಾಡಿದೆ" ಎಂದು ಸ್ತುತಿಸಿದನು.

**ಕೃಷ್ಣ** :— ಬಲಿರಾಜನೇ ! ಸ್ವಾಯಂಭುವಮನ್ವಂತರದಲ್ಲಿ ಮರೀಚಿಗೆ ಊರ್ಣಾಎಂಬ ಪತ್ನಿಯಲ್ಲಿ ಆರುಮಂದಿ ಪುತ್ರರು ಹುಟ್ಟಿದರು. ಅವರು ದೇವಲರನ್ನು ಹಾಸ್ಯಮಾಡಿದುದರಿಂದ ಶಾಪವನ್ನು ಹೊಂದಿ ಕಾಲನೇಮಿ ಎಂಬ ದೈತ್ಯನ ಮಕ್ಕಳಾಗಿ ಹುಟ್ಟಿದರು. ಹಿರಣ್ಯಕಶಿಪುವಿನ ಶಾಪದಿಂದ ದುರ್ಗಾದೇವಿಯು ಅವರನ್ನು ದೇವಕಿಯ ಗರ್ಭದಲ್ಲಿ ತಂದಳು. ಅವರು ಹುಟ್ಟಿದೊಡನೆ ಕಂಸನಿಂದ ಹತರಾದರು. ಆರು ಮಂದಿಯೂ ನಿನ್ನ ಬಳಿಯಿದ್ದಾರೆ. ತಾಯಿಯ ದುಃಖಪರಿಹಾರಕ್ಕಾಗಿ ಅವರನ್ನು ನಾನೀಗ ಒಯ್ಯುವೆನು. ಸ್ಮರ, ಉದ್ಗೀಥ, ಪರಿಷ್ವಂಗ, ಕ್ಷುದ್ರಭುಕ್ ಮತ್ತು ಘೃಣಿಯೆಂಬ ಹೆಸರಿನ ಈ ಆರುಮಂದಿಯೂ ನನ್ನ ಅನುಗ್ರಹದಿಂದ ಮುಂದೆ ಮುಕ್ತಿಯನ್ನು ಹೊಂದುವರು.

ಹೀಗೆ ಹೇಳಿ ಶ್ರೀಕೃಷ್ಣನು ಹಿಂದೆ ಹುಟ್ಟಿದಾಗ ಇದ್ದಂತೆ ಶಿಶುದೇಹಗಳನ್ನು ಕೊಟ್ಟು ದೇವಕಿಯಾ ಬಳಿಗೆ ಅವರನ್ನು ತೆಗೆದುಕೊಂಡು ಬಂದನು. ಕೃಷ್ಣಭುಕ್ತ ಸ್ತನ್ಯವನ್ನು ದೇವಕಿಯು ಆ ಆರುಮಂದಿಗೂ ಕೊಟ್ಟಳು. ಆ ಪ್ರಸಾದದಿಂದಲೂ, ಕೃಷ್ಣನ ಸ್ಪರ್ಶದಿಂದಲೂ ಆ ಆರುಮಂದಿಗೂ ಮೂಲರೂಪಗಳು ಬಂದು ತಮ್ಮ ಮಂದಿರಕ್ಕೆ ಹೋದರು.

ಶ್ರೀಕೃಷ್ಣನ ಮಹಿಮಾನ್ವಿತವಾದ ಈ ಕಥೆಯನ್ನು ಭಕ್ತಿಯಿಂದ ಹೇಳುವವರೂ ಕೇಳುವವರೂ ಮೋಕ್ಷವನ್ನು ಹೊಂದುವರು.

## ಎಪ್ಪತ್ತುನಾಲ್ಕನೆಯ ಅಧ್ಯಾಯ ಮುಗಿದುದು

**ಪರೀಕ್ಷಿತ್ :–** ಶ್ರೀಕೃಷ್ಣನ ಮಡದಿಯರೆಲ್ಲರೂ ತಮ್ಮ ಪತಿಯಾದ ಅವನಲ್ಲಿಯೇ ಚಿತ್ತವನ್ನಿಟ್ಟಿದ್ದವರು. ಶ್ರೀಕೃಷ್ಣನು ಅವರನ್ನೆಲ್ಲ ಸಮವಾಗಿ ಪ್ರೀತಿಸುತ್ತಿದ್ದನೆ ? ಅಥವಾ ಕೆಲವರಲ್ಲಿ ಅಧಿಕ ಪ್ರೇಮವಿಟ್ಟಿದ್ದನೇ ? ಅದನ್ನು ತಿಳಿಸಬೇಕು.

**ಶುಕ :–** ಶ್ರೀಕೃಷ್ಣನು ಮೊದಲು ಮದಿವೆಯಾದ ರುಕ್ಮಿಣೀದೇವಿಯಲ್ಲಿ ಅಧಿಕ ಪ್ರೇಮವಿಟ್ಟಿದ್ದನು. ಅದಕ್ಕೆ ನಿದರ್ಶನವಾಗಿ ರುಕ್ಮಿಣಿಯೊಡನೆ ಪ್ರೇಮಕಲಹ ಮಾಡಿದುದನ್ನು ತಿಳಿಸುವೆನು ಕೇಳು :–

ಒಂದುದಿನ ಮಣಿಮಂಚದ ಮೇಲೆ ಕೃಷ್ಣನು ಕುಳಿತಿದ್ದಾನೆ. ರುಕ್ಮಿಣಿಯು ತಾನೇ ಬೀಸಣಿಗೆಯಿಂದ ಬೀಸುತ್ತ ಉಪಚರಿಸುತ್ತಿದ್ದಾಳೆ.

**ಕೃಷ್ಣ ;–** ರುಕ್ಮಿಣೀ ! ನಿನ್ನನ್ನು ಸುಂದರರೂ, ಸಂಪನ್ನರೂ ಆದ ಶಿಶುಪಾಲ ಮೊದಲಾದವರು ಮದಿವೆಯಾಗಲು ಇಚ್ಛಿಸಿದರು. ನೀನು ಆ ರಾಜರನ್ನೆಲ್ಲ ನಿರಾಕರಿಸಿ, ಜರಾಸಂಧಾದಿಗಳಿಗೆ ಹೆದರಿ ಸಮುದ್ರದಲ್ಲಿ ಅಡಗಿದ ನಮ್ಮನ್ನು ಏಕೆ ವರಿಸಿದೆ ? ನೀನೇಕೆ ನನ್ನನ್ನು ಅಪಹರಿಸಿದೆ ? ಎಂದು ನೀನು ಕೇಳಬಹುದು. ನಮಗೆ ಸ್ತ್ರೀಮೊದಲಾದವರಲ್ಲಿ ಯಾವ ಕಾಲಕ್ಕೂ ಅಭಿಲಾಷೆ ಇಲ್ಲವೇ ಇಲ್ಲ. ಆ ಮದಾಂಧರ ಗರ್ವನಾಶಕ್ಕಾಗಿ ನಿನ್ನನ್ನು ಅಪಹರಿಸಿಕೊಂಡು ಬಂದೆನು.

(ಇದನ್ನು ಕೇಳಿ ರುಕ್ಮಿಣಿಯು ಮೂರ್ಛಿತಳಾದಳು. ಶ್ರೀಕೃಷ್ಣನು ಅವಳನ್ನು ಸಮಾಧಾನಮಾಡಿ ''ತಮಾಷೆಗೆ ಆಡಿದ ಮಾತನ್ನು ವಿಪರೀತವಾಗಿ ತಿಳಿಯಬಾರದು'' ಎಂದನು.)

**ರುಕ್ಮಿಣಿ ;–** ನೀನು ಸಮಾಭ್ಯಧಿಕಶೂನ್ಯನು. ಆದ್ದರಿಂದ ನಿನ್ನನ್ನು

ವರಿಸಿದೆನು. ನೀನು ಜರಾಸಂಧಾದಿಗಳ ಹೆದರಿಕೆಯಿಂದ ಸಮುದ್ರವನ್ನು ಸೇರಿದವ ನಲ್ಲ. ಕ್ಷೀರಸಮುದ್ರದಲ್ಲಿ ಸದಾ ಮಲಗಿರುವ ಸ್ವಾಮಿಯು ನೀನು. ನೃಪರೆಂಬ ನಾಮ ಮಾತ್ರವುಳ್ಳ ಶಿಶುಪಾಲಾದಿಗಳನ್ನು ಅಂಧಂತಮಸ್ಸಿಗೆ ಹಾಕತಕ್ಕವಳು ನಾನು. ಮುಖ್ಯವಾಗಿ ನೃಪಶಬ್ದವಾಚ್ಯನಾದ ನಿನ್ನನ್ನೇ ಹೊಂದಿರುವೆನು. ನೀನು ಜಗತ್ತಿಗೆ ಸ್ವಾಮಿಯು. ಭಜಕರಿಗೆ ಮೋಕ್ಷವನ್ನು ಕೊಡತಕ್ಕವನು. ಆದ್ದರಿಂದ ಬ್ರಹ್ಮಾದಿ ಗಳನ್ನು ಬಿಟ್ಟು ನಿನ್ನನ್ನೇ ವರಿಸಿದೆನು. ನಿನ್ನ ಪಾದವು ನನಗೆ ರಕ್ಷಕವಾಗಲಿ !

**ಕೃಷ್ಣ** :- ನನ್ನ ಪರಿಹಾಸವಾಕ್ಯಗಳಿಗೆ ಸರಿಯಾದ ಅರ್ಥವನ್ನು ವಿವರಿಸಿದೆ. ನನಗೆ ಬಹಳ ಸಂತೋಷವಾಯಿತು. ನಿನ್ನಂತಹ ಪತಿವ್ರತೆ ಯಾರೂ ಇಲ್ಲ.

(ಹೀಗೆಯೇ ಶ್ರೀಕೃಷ್ಣನು ಇತರಪತ್ನಿಯರ ಮನೆಯಲ್ಲಿಯೂ ಗೃಹಸ್ಥ ಧರ್ಮ ವನ್ನು ನಡೆಸುತ್ತಿದ್ದನು. ಅಂದರೆ ಚೇತನರೆಲ್ಲರೂ ಭಿನ್ನಭಿನ್ನಸ್ವಭಾವದವರು. ಹರಿಯಾದರೋ ಅವರವರ ಭಕ್ತಿಗೆ ತಕ್ಕ ಹಾಗೆ ಅನುಗ್ರಹವನ್ನು ಮಾಡುವವನಾದುದ ರಿಂದ ನಿಷ್ಪಕ್ಷಪಾತಿಯೂ ಮತ್ತು ಸಮನೂ ಆಗಿರುವನೆಂದು ತಿಳಿಯಬೇಕು.)

## ಎಪ್ಪತ್ತೈದನೆಯ ಅಧ್ಯಾಯ ಮುಗಿದುದು

ಶ್ರೀಕೃಷ್ಣನ ಪತ್ನಿಯರು ಒಬ್ಬೊಬ್ಬರೂ ಬೇರೆಬೇರೆ ಅರಮನೆಗಳಲ್ಲಿದ್ದರು. ಒಬ್ಬೊಬ್ಬರಿಗೂ ಹತ್ತು ಹತ್ತು ಗಂಡುಮಕ್ಕಳು, ಒಂದೊಂದು ಹೆಣ್ಣು ಮಗಳು ಹುಟ್ಟಿ ದರು. ಆ ಪತ್ನಿಯರು ತಮ್ಮ ಹಾವಭಾವವಿಲಾಸಾದಿಗಳಿಂದ ಶ್ರೀಕೃಷ್ಣನ ಇಂದ್ರಿಯ ಗಳನ್ನು ತಮ್ಮ ವಶಮಾಡಿಕೊಳ್ಳಲು ಸಮರ್ಥರಾಗಲಿಲ್ಲ. ಶ್ರೀಶುಕಾಚಾರ್ಯರು ಈ ಸಂದರ್ಭದಲ್ಲಿ ಶ್ರೀಕೃಷ್ಣನ ಅಷ್ಟಮಹಿಷಿಯರ ಪುತ್ರರ ಹೆಸರನ್ನು ಹೇಳಿರುವರೆಂದು ತಿಳಿಯಬೇಕು. ಕೃಷ್ಣನ ಜ್ಯೇಷ್ಠಪುತ್ರನು ಪ್ರದ್ಯುಮ್ನನು ಅವನಿಗೆ ರುಗ್ಮಿಯ ಮಗಳಾದ ರುಕ್ಮವತಿಯು ಪತ್ನಿಯಾದಳು.

**ಪರೀಕ್ಷಿತ್** :- ಶತ್ರುವಾದ ರುಗ್ಮಿಯು ತನ್ನ ಮಗಳನ್ನು ಕೃಷ್ಣನ ಮಗನಿಗೆ ಹೇಗೆ ಕೊಟ್ಟನು?

**ಶುಕ** :- ರುಗ್ಮಿಗೆ ಕೃಷ್ಣನಲ್ಲಿ ಬದ್ಧದ್ವೇಷವಿದ್ದರೂ, ತನ್ನ ತಂಗಿಯಾದ ರುಕ್ಮಿಣಿಗೆ ಸಂತೋಷಪಡಿಸಬೇಕೆಂದು ಅವಳ ಮಗನಿಗೆ ತನ್ನ ಮಗಳನ್ನು ಕೊಟ್ಟು ಮದುವೆ ಮಾಡಿದನು. ಆದರೂ ಕೃಷ್ಣನ ಮೇಲಿನ ದ್ವೇಷದಿಂದ ಅವನು ಶ್ರೀಶೈಲ ದಲ್ಲಿ ಶಿವನನ್ನು ಕುರಿತು ತಪಸ್ಸನ್ನು ಮಾಡಿದನು. ಶಿವನು ಪ್ರತ್ಯಕ್ಷನಾಗಿ ಅವನ ಅಪೇಕ್ಷೆ ಯಂತೆ ಪಿನಾಕವೆಂಬ ತನ್ನ ಧನುಃಸನ್ನು ಕೊಟ್ಟು "ವಿಷ್ಣುವಿಗೆ ವಿರೋಧವನ್ನು ನೀನು

ಮಾಡಿದ ಕೂಡಲೇ ಈ ಬಿಲ್ಲು ನನ್ನ ಬಳಿಗೆ ಬರುವುದು" ಎಂದು ಹೇಳಿ ಕೂಡಲೇ ಕಣ್ಮರೆಯಾದನು. ರುಗ್ಮಿಯು ಕೃಷ್ಣನಲ್ಲಿ ದ್ವೇಷ ಮಾಡಿದರೆ ಶಿವನ ಬಿಲ್ಲು ಕೈತಪ್ಪಿ ಹೋಗುವುದೆಂಬ ಭಯದಿಂದ ಅವನ ಕೂಡ ಯುದ್ಧಮಾಡದೆ ಉಳಿದ ವೀರರನ್ನೆಲ್ಲ ಜಯಿಸಿದನು. ಮಗಳಿಗೆ ಸ್ವಯಂವರವನ್ನು ಏರ್ಪಡಿಸಿದಾಗ ಅಲ್ಲಿಗೆ ಪ್ರದ್ಯುಮ್ನನು ಹೋದನು. ರುಕ್ಮವತಿಯು ರತಿಯ ಅವತಾರಳಾದ್ದರಿಂದ ತನ್ನನಿಯತಪತಿಯಾದ ಪ್ರದ್ಯುಮ್ನನನ್ನೇ ವರಿಸಿದಳು. ಉಳಿದ ರಾಜರು ಯುದ್ಧಕ್ಕೆ ನಿಂತರು. ಪ್ರದ್ಯುಮ್ನನು ಅವರೆಲ್ಲರನ್ನೂ ಗೆದ್ದು ರುಕ್ಮವತಿಯನ್ನು ಕರೆತಂದು ಮದಿವೆಯಾದನು. ಅವಳಲ್ಲಿ ಅನಿರುದ್ಧನು ಹುಟ್ಟಿದನು.

ಬಾಣಸುರನ ಮಗಳಾದ ಉಷೆಯು ಸ್ವಪ್ನದಲ್ಲಿ ತನ್ನ ನಿಯತಪತಿಯಾದ ಅನಿರುದ್ಧನೊಡನೆ ವಿಹರಿಸಿದ ಹಾಗೆ ಸ್ವಪ್ನವನ್ನು ಕಂಡಳು. ಅವನಾರೆಂದು ತಿಳಿಯದೆ ಒದ್ದಾಡುತ್ತಿದ್ದಾಗ, ಅವಳ ಮಿತ್ರಳಾದ ಚಿತ್ರಲೇಖೆ ಎಂಬುವಳು ಉಷೆಯನ್ನು ಸಮಾಧಾನ ಮಾಡಿ, ಚಿತ್ರಗಳನ್ನು ಬರೆಯುವುದರಲ್ಲಿ ಪಂಡಿತಳಾದ ಅವಳು ಆಗಿನ ಎಲ್ಲ ರಾಜಕುಮಾರರ ಚಿತ್ರಗಳನ್ನು ಬರೆದು ತೋರಿಸಿದಳು. ಆ ಚಿತ್ರಗಳಲ್ಲಿ ಸ್ವಪ್ನದಲ್ಲಿ ಕಾಣಿಸಿಕೊಂಡಿದ್ದ ಅನಿರುದ್ಧನನ್ನು ಉಷೆಯು ಗುರುತಿಸಿದಳು. ಚಿತ್ರಲೇಖೆಯು ಗಗನ ಮಾರ್ಗದಿಂದ ದ್ವಾರಕಿಯಲ್ಲಿದ್ದ ಅನಿರುದ್ಧನನ್ನು ಕರೆತಂದಳು. ಉಷೆಯು ಗಾಂಧರ್ವವಿಧಿಯಿಂದ ಅವನನ್ನು ಮದಿವೆಯಾದಳು. ಮಗಳ ಅಂತಃಪುರದಲ್ಲಿ ಅಡಗಿದ್ದ ಅನಿರುದ್ಧನ ವಿಷಯವನ್ನು ಬಾಣಾಸುರನು ತಿಳಿದು ಕಿಡಿಕಿಡಿಯಾಗಿ ಯುದ್ಧ ಮಾಡಲಾರಂಭಿಸಿದನು. ನಾರದರು ಈ ವಿಷಯವನ್ನು ಶ್ರೀಕೃಷ್ಣನಲ್ಲಿಗೆ ಬಂದು ತಿಳಿಸಿದರು. ಕೂಡಲೇ ಶ್ರೀಕೃಷ್ಣನು ಬಾಣನ ಪಟ್ಟಣಕ್ಕೆ ಬಂದು ಯುದ್ಧಮಾಡಿ ಬಾಣನ ಅಪಾರಸೈನ್ಯವನ್ನು ಮರ್ದನಮಾಡಿದನು. ಶಿವನು ಬಾಣನ ಪಟ್ಟಣವನ್ನು ರಕ್ಷಿಸುತ್ತಿದ್ದುದರಿಂದ ಅವನು ಕೃಷ್ಣನೊಡನೆ ಯುದ್ಧಕ್ಕೆನಿಂತನು. ಆದರೇನು ಶಿವನು ಸೋತನು. ಕೃಷ್ಣನು ಬಾಣಾಸುರನನ್ನು ಕೊಲ್ಲುಲು ಸಿದ್ಧನಾದಾಗ ಶಿವನು ತನ್ನಭಕ್ತನಾದ ಬಾಣನನ್ನು ಕೊಲ್ಲಬೇಡವೆಂದು ಬೇಡಿದನು. ಕೃಷ್ಣನು ಬಾಣನನ್ನು ಕೊಲ್ಲದೆ ಅವನಿಗಿದ್ದ ಸಾವಿರ ತೋಳುಗಳಲ್ಲಿ ಎರಡು ತೋಳುಗಳನ್ನು ಮಾತ್ರ ಉಳಿಸಿ ಮಿಕ್ಕ ತೋಳುಗಳನ್ನೆಲ್ಲ ಕತ್ತರಿಸಿ ಶಿವನ ಪ್ರಾರ್ಥನೆಯಂತೆ ಬಾಣನನ್ನು ರಕ್ಷಿಸಿದನು. ಅದುವರೆಗೂ ಬಾಣನ ದೇಹದೊಳಗೆ ಸೇರಿ ಹರಿಯಲ್ಲಿ ದ್ವೇಷಮಾಡುತ್ತಿದ್ದ ಬಾಣನೆಂದು ಹೆಸರುಳ್ಳದೈತ್ಯನು ಆ ದೇಹವನ್ನು ಬಿಟ್ಟು ಹೊರಟುಹೋದನು. ಬಾಣನು ತನ್ನ ಮಗಳಾದ ಉಷೆಯನ್ನು ಅನಿರುದ್ಧನೊಡನೆ ಕಳುಹಿಸುತ್ತ ಮಗಳಿಗೆ ಬೇಕಾದ ಬಳುವಳಿಗೆಗಳನ್ನು ಕೊಟ್ಟನು.

ರುಗ್ಮಿಯು ರುಕ್ಮಿಣಿಯ ಸಂತೋಷಾರ್ಥವಾಗಿ, ತನ್ನ ಮಗಳ ಮಗನೂ,

ರುಕ್ಮಿಣೀದೇವಿಯ ಮೊಮ್ಮಗನೂ ಆದ ಅನಿರುದ್ಧನಿಗೆ ತನ್ನ ಮಗನ ಮಗಳಾದ **ರೋಚನೆ** ಎಂಬುವಳನ್ನು ಕೊಟ್ಟು ಮದುವೆ ಮಾಡಿದನು. ಆಸಮಯದಲ್ಲಿ ಬೀಗನಾದ ಬಲರಾಮನಿಗೆ ಅಪಮಾನಮಾಡಬೇಕೆಂದು ದ್ಯೂತಕ್ಕೆ ಕರೆದನು. ರುಗ್ಮಿಯು ಸೋಲುವ ಗರ ಹಾಕಿದನು. ಅದನ್ನು ಮುಚ್ಚಿ ಗೆದ್ದೆನೆಂದು ಸುಳ್ಳು ಹೇಳಿದನು. ಆಗ ಅಶರೀರವಾಣಿಯು ನಿಜಾಂಶವನ್ನು ಹೇಳಿತು. ಕುಪಿತನಾದ ಬಲರಾಮನು ಪಗಡೆಯ ಮಣೆಯನ್ನು ಹಿಡಿದು ಅದುದರಿಂದಲೇ ರುಗ್ಮಿಯನ್ನು ಹೊಡೆದು ಕೊಂದುಬಿಟ್ಟನು. ಬಳಿಕ ಶ್ರೀಕೃಷ್ಣನು ಅನಿರುದ್ಧನನ್ನೂ ರೋಚನೆಯನ್ನೂ ಕರೆದುಕೊಂಡು ಎಲ್ಲರೊಡನೆ ದ್ವಾರಕಿಗೆ ಬಂದನು.

## ಎಪ್ಪತ್ತಾರನೆಯ ಅಧ್ಯಾಯ ಮುಗಿದುದು

**ಶುಕ :–** ರಾಜನೇ ! ಶ್ರೀಕೃಷ್ಣನ ದಿನಚರಿಯನ್ನು ಹೇಳುವೆನು ಕೇಳು. ಶ್ರೀಕೃಷ್ಣನು ಪ್ರತಿದಿನವೂ ಬ್ರಾಹ್ಮಮುಹೂರ್ತದಲ್ಲೆದ್ದು, ಸ್ನಾನಸಂಧ್ಯಾವಂದನೆಗಳನ್ನು ಮಾಡಿ, ದೇವರ್ಷಿಪಿತೃಗಳನ್ನು ತೃಪ್ತಿಪಡಿಸಿ, ಬ್ರಾಹ್ಮಣರಿಗೆ ಗೋಹಿರಣ್ಯಾದಿ ದಾನಗಳನ್ನು ಮಾಡಿ, ವಸ್ತ್ರಾಭರಣಗಳಿಂದ ಅಲಂಕರಿಸಿಕೊಂಡು, ಸಕಲ ವರ್ಣದವರಿಗೂ ಅಮಾತ್ಯಾದಿಗಳಿಗೂ ಇಷ್ಟಾರ್ಥಗಳನ್ನು ಕೊಟ್ಟು, ರಥಾರೂಢನಾಗಿ **ಸುಧರ್ಮ** ಎಂಬ ಸಭೆಗೆ ಪ್ರವೇಶಿಸುವನು. ಆಗ ಸೂತಾದಿಗಳು ಅವನನ್ನು ಸ್ತುತಿಸುವರು. ಹೀಗೆ ನಡೆಯುತ್ತಿತ್ತು. ಒಂದುದಿನ ಒಬ್ಬ ಪುರುಷನು ಬಂದು "ಸ್ವಾಮಿಯೇ ! ಜರಾಸಂಧನು ತನಗೆ ಶರಣಾಗತರಾಗದೇ ಹೋದ 20800 ಮಂದಿ ರಾಜರನ್ನು ಸೆರೆಹಾಕಿ, ಶಿವನನ್ನು ಕುರಿತು ಯಾಗಮಾಡಿ, ಆ ಯಾಗದಲ್ಲಿ ಈ ರಾಜರನ್ನೆಲ್ಲ ಬಲಿಕೊಡಬೇಕೆಂದಿರುವನು. ಆ ರಾಜರೆಲ್ಲ ತಮ್ಮನ್ನು ನೀನು ರಕ್ಷಿಸಬೇಕೆಂದು ನನ್ನನ್ನು ನಿನ್ನ ಬಳಿಗೆ ಕಳುಹಿಸಿರುವವರು" ಎಂದನು. ಅದೇವೇಳೆಗೆ ನಾರದರು ಬಂದು ಪೂಜಿತರಾಗಿ, ಪ್ರಶ್ನಿಸಲ್ಪಟ್ಟು "ಕೃಷ್ಣನೇ ! ಧರ್ಮರಾಜನು ನಿನ್ನ ಅನುಮತಿ ಪಡೆದು ರಾಜಸೂಯ ಯಾಗವನ್ನು ಮಾಡಬೇಕೆಂದು ಬಯಸುತ್ತಿರುವನು. ರಾಜಸೂಯಯಾಗವು ನಡೆದಾಗ ಅಲ್ಲಿ ನಿನ್ನ ದರ್ಶನಾದಿಗಳಿಂದ ದೇವತೆಗಳೂ ರಾಜರೂ ಪವಿತ್ರರಾಗುವರು" ಎಂದರು.

## ಎಪ್ಪತ್ತೆಂಟನೆಯ ಅಧ್ಯಾಯ ಮುಗಿದುದು

**ಉದ್ಧವ :–** ಸ್ವಾಮಿಯೇ ! ಧರ್ಮರಾಜನಿಗೆ ಸಹಾಯಮಾಡಬೇಕಾದುದು ಹಾಗೂ ರಾಜರನ್ನು ರಕ್ಷಿಸಬೇಕಾದುದೂ ಭಕ್ತವತ್ಸಲನಾದ ನಿನ್ನ ಕರ್ತವ್ಯ. ಮೊದಲು ರಾಜಸೂಯ ಯಾಗವು ನಡೆಯಲು ಇತ್ಯರ್ಥವಾದರೆ ಎರಡು ಕಾರ್ಯಗಳೂ

ಸಿದ್ದಿಸುವವು. ಸೆರೆ ಸಿಕ್ಕಿರುವ ರಾಜರೆಲ್ಲ ಯೋಗ್ಯರಾದುದರಿಂದ ಅವರನ್ನು ಆ ವಿಪತ್ತಿನಿಂದ ತಪ್ಪಿಸಿದರೆ ನಿನಗೆ ಯಶಸ್ಸುಂಟಾಗುವುದು. ಆ ಯಾಗಕ್ಕೆ ಮುಂಚಿತವಾಗಿ ದಿಗ್ವಿಜಯಕ್ಕೆ ಹೋದಾಗ ಬೇರೆ ಯಾರಿಂದಲೂ ವಧ್ಯನಲ್ಲದ ಜರಾಸಂಧನನ್ನು ಭೀಮಸೇನನು ನಿನ್ನಿದಿರಿಗೆ ಸಂಹರಿಸುವನು. ಆದುದರಿಂದ ನೀನು ಮೊದಲು ಧರ್ಮರಾಜನಿಗೆ ದರ್ಶನವನ್ನು ಕೊಡು.

(ಶ್ರೀಕೃಷ್ಣನು ಉದ್ಧವನ ಸಲಹೆಯನ್ನೊಪ್ಪಿ ರಾಜರ ಕಡೆಯಿಂದ ಬಂದಿದ್ದ ದೂತನಿಗೆ ರಾಜರ ಸೆರೆಬಿಡಿಸುವುದಾಗಿ ಹೇಳಿಕಳುಹಿಸಿ, ಇಂದ್ರಪ್ರಸ್ಥವನ್ನು ಕುರಿತು ಹೊರಟುಬಂದನು. ಅರ್ಜುನನು ಕೃಷ್ಣಾನುಗ್ರಹದಿಂದ ಖಾಂಡವವನವನ್ನು ಅಗ್ನಿದೇವನಿಗೆ ಒಪ್ಪಿಸಿದನು. ಆ ವನವು ಸುಡುತ್ತಿರುವಾಗ ಶರಣಾಗತನಾದ ಮಯನಿಗೆ ಜೀವದಾನವನ್ನು ಮಾಡಿದನು. ಮಯನು ಸೇವೆಮಾಡಬೇಕೆಂದು ಬಯಸಲು ಅವನಿಗೆ ಪಾಂಡವರಿಗೋಸುಗ ಶ್ರೇಷ್ಠಸಭಾನಿರ್ಮಾಣಮಾಡು ಎಂದು ಅಪ್ಪಣೆ ಮಾಡಿ, ಇಂದ್ರಪ್ರಸ್ಥದಲ್ಲಿಯೇ ಕೆಲವು ತಿಂಗಳುಗಳ ಕಾಲ ವಾಸಮಾಡಿದನು.

## ಎಪ್ಪತ್ತೊಂಭತ್ತನೆಯ ಅಧ್ಯಾಯ ಮುಗಿದುದು

ಶ್ರೀಕೃಷ್ಣನು ಜರಾಸಂಧನ ವಧೆಯನ್ನು ಭೀಮಸೇನನಿಂದ ಮಾಡಿಸಿದನು. ಬಳಿಕ ಭೀಮಾರ್ಜುನ ನಕುಲಸಹದೇವರು ದಿಗ್ವಿಜಯ ಮಾಡಿ ಅಪಾರದ್ರವ್ಯವನ್ನು ಸಂಪಾದಿಸಿ ತಂದು ಧರ್ಮರಾಜನಿಗೆ ಸಮರ್ಪಿಸಿದರು.

(ಭಾಗವತದಲ್ಲಿ ಮೊದಲು ದಿಗ್ವಿಜಯದ ಕಥೆಯನ್ನು ಹೇಳಿ ಬಳಿಕ ಜರಾಸಂಧನ ವಧೆಯ ಕಥೆಯನ್ನು ಹೇಳಿರುವರು. ದುರ್ಜನರಿಗೆ ಭ್ರಾಂತಿಯನ್ನುಂಟುಮಾಡುವುದಕ್ಕಾಗಿಯೇ ಹೀಗೆ ಕಾಲವ್ಯತ್ಯಾಸ ಮತ್ತು ಪುರುಷ ವ್ಯತ್ಯಾಸಗಳನ್ನು ಮಾಡಿರುವುದಾಗಿ ಪುರಾಣಕರ್ತರಾದ ವೇದವ್ಯಾಸದೇವರು ಹೇಳಿರುವರು.)

## ಎಂಭತ್ತನೆಯ ಅಧ್ಯಾಯ ಮುಗಿದುದು

ಜರಾಸಂಧನ ವಧೆಯಾದ ಬಳಿಕ ಶ್ರೀಕೃಷ್ಣನು ಸೆರೆಸಿಕ್ಕಿದ್ದ ರಾಜರನ್ನೆಲ್ಲ ಬಂಧನದಿಂದ ಬಿಡಿಸಿದನು. ಅವರೆಲ್ಲರೂ ಶ್ರೀಕೃಷ್ಣನ ದರ್ಶನಮಾಡಿ ಪೂತಾತ್ಮರಾಗಿ ಭಗವಂತನನ್ನು ನಮಿಸಿ ಸ್ತುತಿಸುವರು :–

**"ನಮಸ್ತೇ ದೇವದೇವೇಶ ಪ್ರಸನ್ನಾರ್ತಿಹರ ಅವ್ಯಯ ।**
**ಪ್ರಪನ್ನಾನ್ ಪಾಹಿ ನಃಕೃಷ್ಣ ನಿರ್ವಿಣ್ಣಾನ್ ಘೋರಸಂಸೃತೇಃ ॥**

ಜರಾಸಂಧನ ಮೇಲೆ ನಾವು ಕೋಪಿಸಲಾರೆವು. ಅವನು ಸೆರೆಹಾಕಿದ್ದರಿಂದ

ನಿನ್ನ ಅನುಗ್ರಹಕ್ಕೆ ನಾವು ಪಾತ್ರರಾಗಲು ಅವಕಾಶವಾಯಿತು. ರಾಜ್ಯವು ಹೋದುದೂ ನಿನ್ನ ಅನುಗ್ರಹವೇ ಸರಿ. ಇಲ್ಲದಿದ್ದರೆ ಅಧಿಕಾರಮದದಿಂದ ನಿನ್ನನ್ನು ಮರೆತು ಸತಿಸುತರಾಜ್ಯಾದಿಗಳೆಲ್ಲ ಸ್ಥಿರವೆಂದು ಭ್ರಮಿಸಿ ನಾಶವನ್ನು ಹೊಂದುತ್ತಿದ್ದೆವು. "ಆದದ್ದೆಲ್ಲ ಒಳಿತೆ ಆಯಿತು". ಈಗ ರಾಜ್ಯಾದಿಗಳ ಆಶೆ ಹೋಯಿತು. ಕಾಮ್ಯಕರ್ಮದಿಂದ ದೊರೆಯುವ ಸ್ವರ್ಗವನ್ನೂ ನಾವು ಬಯಸುವುದಿಲ್ಲ. ಶ್ರೀಕೃಷ್ಣನೇ! ನಿನ್ನ ಸ್ಮರಣೆಯು ತಪ್ಪದೇ ಇರುವುದಕ್ಕೆ ಉಪಾಯವೇನು ? ಅನುಗ್ರಹಿಸು !

**ಕೃಷ್ಣ** : ನಿಮ್ಮೆಲ್ಲರಿಗೂ ನನ್ನಲ್ಲಿ ಸುದೃಢವಾದ ಭಕ್ತಿಯು ಉಂಟಾಗಲಿ ! ನಿಮಗೆಲ್ಲರಿಗೂ ಸಂಸಾರಮೋಚನೆಯಾಗುವುದು. ಫಲಾಪೇಕ್ಷೆಯಿಲ್ಲದೆ ಯಜ್ಞಗಳಿಂದ ನನ್ನನ್ನು ಆರಾಧಿಸಿರಿ. ಪ್ರಜೆಗಳನ್ನು ಧರ್ಮದಿಂದ ಪಾಲಿಸಿರಿ. ಉಬ್ಬದೆ, ಕುಗ್ಗದೆ ನನ್ನಲ್ಲಿಯೇ ಮನಸ್ಸನ್ನಿಡಿ. ಹೀಗೆ ಮಾಡುವುದರಿಂದ ನೀವು ನನ್ನನ್ನು ಹೊಂದುವಿರಿ.

(ಜರಾಸಂಧನ ಮಗನಾದ ಸಹದೇವನಿಂದ ಆ ಎಲ್ಲರಾಜರಿಗೂ ಸತ್ಕಾರ ಮಾಡಿಸಿ, ಶ್ರೀಕೃಷ್ಣನು ಅವರನ್ನು ಅವರವರ ರಾಜ್ಯಕ್ಕೆ ಕಳುಹಿಸಿದನು. ಬಳಿಕ ಇಂದ್ರಪ್ರಸ್ಥಕ್ಕೆ ಬಂದು ಧರ್ಮರಾಜನಿಗೆ ಇದೆಲ್ಲವನ್ನು ತಿಳಿಸಿ ಸಂತೋಷಪಡಿಸಿದನು.

**ಎಂಭತ್ತೊಂದನೆಯ ಅಧ್ಯಾಯ ಮುಗಿದುದು**

ರಾಜಸೂಯವು ವಿಜೃಂಭಣೆಯಿಂದ ಸಾಂಗವಾಗಿ ನೆರವೇರಿತು. ಅಗ್ರಪೂಜೆ ಯಾರಿಗೆ ಎಂದು ಕೇಳಿದಾಗ ಸಹದೇವ ಸಾನುಕರಾದ ಭೀಷ್ಮರು "ಯಾದವರಿಗೆ ಸ್ವಾಮಿಯೂ, ದೇಶಕಾಲಗುಣಗಳಿಂದ ಪರಿಪೂರ್ಣನೂ ಆದ ಶ್ರೀಕೃಷ್ಣನೇ ಅಗ್ರಪೂಜೆಗೆ ಅರ್ಹನು. ಇವನೇ ಜಗದ್ವ್ಯಾಪಕನು. ನಿಯಾಮಕನು. ಸರ್ವೋತ್ತಮನು. ಇವನಿಗೆ ಇವನೇ ಆಶ್ರಯನು ಹೊರತು ಮತ್ತೊಬ್ಬನಿಲ್ಲ. ಸೃಷ್ಟ್ಯಾದಿಕರ್ತನು. ಇವನನ್ನೇ ಅಪಾರಫಲವನ್ನು ಅಪೇಕ್ಷಿಸುವವನು ಪೂಜಿಸಬೇಕು'' ಎಂದು ಹೇಳಿದರು. ಪಾಂಡವರು ಅದರಂತೆ ಶ್ರೀಕೃಷ್ಣನಿಗೇ ಅಗ್ರಪೂಜೆಯನ್ನು ಅರ್ಪಿಸಿದರು. ಶಿಶುಪಾಲನು ಆಗ ಕೃಷ್ಣನನ್ನು ನಿಂದಿಸಿ ಯುದ್ಧಕ್ಕೆ ನಿಂತನು. ಶ್ರೀಕೃಷ್ಣನು ಚಕ್ರದಿಂದ ಅವನ ಶಿರಸ್ಸನ್ನು ಕತ್ತರಿಸಿದನು. ಜಯನು ಶ್ರೀಹರಿಯ ದೇಹವನ್ನು ಪ್ರವೇಶಿಸಿದನು. ಅವನ ಜೊತೆಯಲ್ಲಿದ್ದ ದೈತ್ಯನು ಅಂಧಂತಮಸ್ಸಿನಲ್ಲಿ ಬಿದ್ದನು. ಎಲ್ಲರೂ ಪಾಂಡವರು ಮಾಡಿದ ಯಜ್ಞವನ್ನು ಕೊಂಡಾಡುತ್ತಾ ಸ್ವಸ್ಥಾನಗಳಿಗೆ ತೆರಳಿದರು.

**ಎಂಭತ್ತೆರಡನೆಯ ಅಧ್ಯಾಯವು ಮುಗಿದುದು**

**ಪರೀಕ್ಷಿತ್ :–** ಈ ಯಾಗದ ವೈಭವವನ್ನು ನೋಡಿದ ದುರ್ಯೋಧನನು ಸಹಿಸಲಿಲ್ಲವೆಂದು ನೀವು ಹೇಳಿದಿರಿ. ಅದಕ್ಕೆ ಕಾರಣವೇನು ?

**ಶುಕ :–** ರಾಜಸೂಯಯಾಗಕಾಲದಲ್ಲಿ ಭೀಮಸೇನದೇವರು ಅಡಿಗೆ ಮನೆಯ ಅಧ್ಯಕ್ಷರಾಗಿದ್ದರು. ದುರ್ಯೋಧನನಾದರೋ ಧನಾಧ್ಯಕ್ಷನಾಗಿದ್ದನು. ಅದರಿಂದ ಪಾಂಡವರ ಸಂಪತ್ತು ಯಾವ ಮಟ್ಟದ್ದು ಎಂಬುದು ತಿಳಿದುಹೋಯಿತು. ಅದರಿಂದ ಅವನಿಗಿದ್ದ ಅಸಹನೆ ಮಿತಿಮೀರಿತು. ಕೃಷ್ಣನ ಕೆಲಸವೇನೆಂದರೆ ಬಂದ ಬ್ರಾಹ್ಮಣರ ಪಾದಪ್ರಕ್ಷಾಲನೆಯನ್ನು ಮಾಡುವುದು, ಎಂಜಲೆಲೆಗಳನ್ನು ತೆಗೆಯುವುದು. ಈ ಎರಡರ ಕರ್ಮದಿಂದ ಬರುವ ಪುಣ್ಯವನ್ನು ದಕ್ಕಿಸಿಕೊಳ್ಳುವವರು ಯಾರೂ ಇಲ್ಲ ವಾದುದರಿಂದಲೆ ಪುಣ್ಯಪಾಪ ಲೇಪರಹಿತನಾದ ಶ್ರೀಕೃಷ್ಣನೇ ಆಕಾರ್ಯಗಳನ್ನು ನಿರ್ವಹಿಸಿದನು. ಯಾಗವು ಮಹಾಸಂಭ್ರಮದಿಂದ ನಡೆದುಹೋಯಿತು. ಅವಭೃತ ಸ್ನಾನವನ್ನೂ ಪಾಂಡವರು ಮಾಡಿದರು. ಇವೆಲ್ಲವನ್ನೂ ನೋಡಿದ ದುರ್ಯೋಧನನು ಖಳಾಗ್ರೇಸರನಾದುದರಿಂದ ಸಹಿಸದೆ ಒಳಗೇ ಕುದಿಯುತ್ತಿದ್ದನು. ಧರ್ಮರಾಜನು ಕೃಷ್ಣನೊಡನೆ ಮಯನಿರ್ಮಿತ ಸಭೆಯೊಳಗೆ ಬಂದು ಕುಳಿತನು. ಎಲ್ಲರೂ ಅವನನ್ನು ಓಲೈಸುತ್ತಾ ಇದ್ದರು. ಅಗ ಯುಧಿಷ್ಠಿರನು ದೇವೇಂದ್ರನಂತೆ ವಿರಾಜಿಸುತ್ತಿದ್ದನು.

## ಎಂಬತ್ತುಮೂರನೆಯ ಅಧ್ಯಾಯವು ಮುಗಿದುದು

ದುರ್ಯೋಧನನು ಮಯನಿರ್ಮಿತ ಸಭೆಯನ್ನು ನೋಡಲು ಬಂದನು. ಅದರ ರಚನೆ ವಿಚಿತ್ರವಾದುದರಿಂದ ಬಾಗಿಲು ಯಾವುದೆಂಬುದೂ ಅವನಿಗೆ ತಿಳಿಯದೇ ಹೋಯಿತು. ಕೊನೆಗೆ ಪಾಂಡವರ ಕಡೆಯವರು ಅವನ ಕೈಯನ್ನು ಹಿಡಿದುಕೊಂಡು ಒಳಕ್ಕೆ ಕರೆತಂದರು ದುರ್ಯೋಧನನು ಸಭೆಯ ಚಮತ್ಕಾರವನ್ನು ನೋಡುತ್ತಾ ಬಂದನು. ನೀರು ಇಲ್ಲದಕಡೆ ಇದ್ದಂತೆ, ಅದಿಲ್ಲದ ಕಡೆ ನೀರಿದ್ದಂತೆ ಕಾಣಿಸಿತು. ತಬ್ಬಿಬ್ಬಾಗಿ ನೀರಿನಲ್ಲಿ ಬಿದ್ದನು. ಆಗ ಹರೀಚ್ಛೆಯಂತೆ ಭೀಮಸೇನಾದಿಗಳು ನಕ್ಕರು. ದುರ್ಯೋಧನನಿಗೆ ಅವಮಾನವಾಗಿ ಪ್ರಾಣವೇ ಹೋದಂತಾಯಿತು. ಅವನು ಹಸ್ತಿ ನಾವತಿಗೆ ದುಃಖಿಸುತ್ತಾ, ಹೊರಟನು. ಆಗ ಉತ್ಪಾತಗಳು ಕಾಣಿಸಿಕೊಂಡುವು. ನಾರದರು ಬಂದರು. ಧರ್ಮರಾಜನು ಅವರನ್ನು ಪೂಜಿಸಿ, ರಾಜ್ಯದಲ್ಲಿ ಈಗ ಶತ್ರು ಸಂಹಾರಕ್ಕೆ ಯತ್ನಮಾಡುತ್ತಿರುವವನು ಯಾರೆಂದು ಕೇಳಿದನು.

**ನಾರದ :–** ರುಕ್ಮಿಣಿಯ ವಿವಾಹಕಾಲದಲ್ಲಿ ಬಂದಿದ್ದ ಸಾಲ್ವ ಜರಾಸಂಧಾದಿ ಗಳು ಯಾದವರಿಂದ ಸೋತರಷ್ಟೆ ? ಆಗ ಸಾಲ್ವನು ಯಾದವರ ಹುಟ್ಟೇ ಇಲ್ಲದಂತೆ ಮಾಡುವುದಾಗಿ ಪ್ರತಿಜ್ಞೆಯನ್ನು ಮಾಡಿ, ಶಿವನನ್ನು ಕುರಿತು ನಿತ್ಯವೂ ಹಿಡಿಧೂಳನ್ನೇ ಮುಕ್ಕಿ ಕಠಿಣವಾದ ತಪಸ್ಸನ್ನು ಮಾಡಿದನು. ವರುಷದ ಕೊನೆಯಲ್ಲಿ ಶಿವನು ಬಂದು ವರವನ್ನು ಕೇಳೆಂದನು.

**ಸಾಲ್ವ :–** ದೇವಾಸುರರಿಂದ ಅಭೇದ್ಯವಾದ ವಿಮಾನವನ್ನು ಕೊಡು.

**ನಾರದ :–** ಶಿವನು ಮಯನಿಂದ ಉಕ್ಕಿನ ವಿಮಾನವನ್ನು ನಿರ್ಮಾಣ ಮಾಡಿಸಿದನು. ಅದಕ್ಕೆ ಸೌಭ ಎಂದು ಹೆಸರು. ಅದನ್ನು ಸಾಲ್ವನಿಗೆ ಕೊಟ್ಟನು. ಸಾಲ್ವನು ಶಿವನಿಂದ ಅದನ್ನು ಪಡೆದು ಊರಿಗೆ ಬಂದು ಶ್ರೀಕೃಷ್ಣನನ್ನು ಕೊಲ್ಲ ಬೇಕೆಂದು ಬಹಳ ಯತ್ನವನ್ನು ಮಾಡುತ್ತಿರುವನು.

**ಶುಕ :–** ಇದನ್ನು ಕೇಳಿದ ಯುಧಿಷ್ಠಿರನು ಶ್ರೀಕೃಷ್ಣನ ಮುಖವನ್ನು ನೋಡಿದನು. ಶ್ರೀಕೃಷ್ಣನು ನಗುತ್ತಾ "ಈಗ ಸಾಲ್ವನು ನಮಗೆ ಅತಿಥಿಯು. ಒಳ್ಳೆಯದು" ಎಂದು ಹೇಳಿ, ಉಗ್ರಸೇನ. ಬಲರಾಮಾದಿಗಳನ್ನು ದ್ವಾರಕಿಯ ರಕ್ಷಣೆಗೆ ಕಳುಹಿಸಿದನು.

## ಎಂಭತ್ತುನಾಲ್ಕನೆಯ ಅಧ್ಯಾಯ ಮುಗಿದುದು

ಶ್ರೀಕೃಷ್ಣನು ಇಂದ್ರಪ್ರಸ್ಥದಲ್ಲಿಯೇ ಇದ್ದಾಗ, ಸಾಲ್ವನು ಶಿಶುಪಾಲ, ಜರಾಸಂಧಾದಿಗಳು ಸಂಹೃತರಾದರೆಂದು ಕೇಳಿ ಕಿಡಿಕಿಡಿಯಾಗಿ, ಶಿವದತ್ತ ವಿಮಾನ ವೇರಿ, ಸೇನಾಸಮೇತನಾಗಿ ದ್ವಾರಕಿಗೆ ಬಂದು, ಉಪವನಾದಿಗಳನ್ನು ಹಾಳುಮಾಡಿ ಆ ನಗರದವರನ್ನು ಪೀಡಿಸಿದನು. ಪ್ರದ್ಯುಮ್ನನು ಹೆದರದೆ ಧೈರ್ಯದಿಂದಿರಿಯೆಂದು ಪ್ರಜೆಗಳಿಗೆ ಹೇಳಿ ಸಾತ್ಯಕಿ ಮೊದಲಾದವರೊಡನೆ ಬಂದು ಯುದ್ಧಮಾಡಿ ಸಾಲ್ವನು ವ್ಯಕ್ತಮಾಡಿದ ರಾಕ್ಷಸಮಾಯೆಗಳೆಲ್ಲವನ್ನೂ ನಾಶಪಡಿಸಿದನು. ಸಾಲ್ವನ ಮಂತ್ರಿ ದ್ಯುಮಂತನೆಂಬುವನು ಯುದ್ಧಮಾಡಿ ಪ್ರದ್ಯುಮ್ನನನ್ನು ಗದೆಯಿಂದ ಹೊಡೆದನು. ಪ್ರದ್ಯುಮ್ನನಿಗೆ ಆ ಪೆಟ್ಟಿನಿಂದ ಬಹು ನೋವಾಗಿ ಮೂರ್ಛೆ ಬರುವಂತಾಯಿತು. ಆಗ ಅವನ ಸಾರಥಿಯು ಬೇರೆ ಸ್ಥಳಕ್ಕೆ ರಥವನ್ನು ಬಿಟ್ಟುಕೊಂಡು ಹೋದಾಗ, ಪ್ರದ್ಯುಮ್ನನು ಅವನನ್ನು ಆಕ್ಷೇಪಿಸಿದನು. ಸಾರಥಿಯು ಆಗಿನ ಸ್ಥಿತಿಯನು ವಿವರಿಸಿ, ಅಪಾಯದಿಂದ ತಪ್ಪಿಸಿ ಕಾಪಾಡುವುದಕ್ಕಾಗಿಯೇ ರಣರಂಗದಿಂದ ಹೊರಕ್ಕೆ ರಥವನ್ನು ತರಲು ಕಾರಣವನ್ನು ಹೇಳಿದನು.

## ಎಂಭತ್ತೈದನೆಯ ಅಧ್ಯಾಯ ಮುಗಿದುದು

ಪ್ರದ್ಯುಮ್ನನು ಸಾರಥಿಯನ್ನೊಪ್ಪಿಸಿ ರಥವನ್ನು ಬಿಡಿಸಿಕೊಂಡು ಮೊದಲಿದ್ದ ಸ್ಥಳಕ್ಕೆ ಬಂದು, ಯುದ್ಧಮಾಡಿ ಆ ದ್ಯುಮಂತನನ್ನು ಕೊಂದನು. ಇತ್ತ ಯಾದವರು ಸಾಲ್ವನ ಸೈನ್ಯವನ್ನು ನಾಶಮಾಡುತ್ತ ಬಂದರು. ಇಪ್ಪತ್ತೇಳು ದಿನಗಳ ಕಾಲ ಯುದ್ಧವು ನಡೆಯಿತು. ಅತ್ತ ಕೃಷ್ಣನು ದುರ್ನಿಮಿತ್ತಗಳನ್ನು ಕಂಡು ಧರ್ಮಾದಿಗಳ

ನ್ನೊಪ್ಪಿಸಿ ಸಮಾಧಾನವಮಾಡಿ ದ್ವಾರಾವತಿಗೆ ಬಂದನು. ಅಷ್ಟರೊಳಗೆ ಸಾಲ್ವನು ಪ್ರದ್ಯುಮ್ನನಿಂದ ಚೆನ್ನಾಗಿ ಪೆಟ್ಟುತಿಂದು ತನ್ನ ದೇಶಕ್ಕೆ ಹಿಂತಿರುಗಿದನು. ಶ್ರೀಕೃಷ್ಣನು ದ್ವಾರಕಿಯ ಬಳಿಗೆ ಬಂದು ಸಾಲ್ವನು ಮಾಡಿದ್ದ ಹಾವಳಿಯನ್ನು ನೋಡಿ, ಅವನನ್ನು ಕೊಲ್ಲದೆ ಪಟ್ಟಣವನ್ನು ಪ್ರವೇಶಿಸುವುದಿಲ್ಲವೆಂದು ಪ್ರತಿಜ್ಞೆಮಾಡಿ ಸಾಲ್ವನನ್ನು ಅಟ್ಟಿ ಕೊಂಡು ಹೋದನು. ಆಗ ಸಮುದ್ರದ ಮಧ್ಯೆ ಸಾಲ್ವನ ಸೌಭವಿಮಾನವು ಹೋಗು ತ್ತಿತ್ತು. ಶ್ರೀಕೃಷ್ಣನು ಅದನ್ನು ನೋಡಿ ಸಾಲ್ವನನ್ನಿದಿರಿಸಿ ಯುದ್ಧ ಮಾಡಿದನು. ಸಾಲ್ವನು ಶ್ರೀಕೃಷ್ಣನು ಹಿಡಿದಿದ್ದ ಶಾರ್ಙ್ಗಧನುಃಸನ್ನು ಬಾಣದಿಂದ ಹೊಡೆದನು ಸಾಲ್ವ ನಿಗೆ ತನ್ನ ಪರಾಕ್ರಮವು ತಿಳಿಯಬಾರದೆಂದು ಕೃಷ್ಣನು ನಟನೆ ಮಾಡಿದನು. ಆದುದ ರಿಂದ ಹರಿಯ ಹಸ್ತದಿಂದ ಆ ಬಿಲ್ಲು ಜಾರಿಬಿದ್ದಿತು. ಇದನ್ನು ಕಂಡ ಸಾಲ್ವನು ಅಷ್ಟಕ್ಕೇ ಉಬ್ಬಿ ಕೃಷ್ಣನನ್ನು ಕೊಲ್ಲುವುದಾಗಿ ಅಬ್ಬರಿಸಿದನು. ಕೃಷ್ಣನು ಗದೆಯಿಂದ ಸಾಲ್ವನ ಭುಜಕ್ಕೆ ಹೊಡೆದನು. ಆಗ ಸಾಲ್ವನು ಶಂಬರ ಮಾಯೆಯಿಂದ ವಸುದೇವನಂತಿರುವ ಆಕೃತಿಯನ್ನು ಸೃಷ್ಟಿಸಿ, ಅದರ ತಲೆಯನ್ನು ಕತ್ತರಿಸಿದ ಹಾಗೆ ತೋರಿಸಿದನು. ಶ್ರೀ ಕೃಷ್ಣನು ಇದು ಮಾಯೆಯೆಂದು ತಿಳಿದನು. ಒಂದು ಮುಹೂರ್ತ ಅಸುರರ ಮೋಹ ನಾರ್ಥವಾಗಿ ಸುಮ್ಮನೆ ನಿಂತು ಬಳಿಕ ಈ ಮಾಯೆಯನ್ನು ನಾಶಮಾಡಿದನು. ಬಳಿಕ ಸಾಲ್ವನ ಕವಚ ಮತ್ತು ಬಿಲ್ಲುಗಳನ್ನು ಕತ್ತರಿಸಿ, ಗದೆಯಿಂದ ಸೌಭವಿಮಾನವನ್ನು ಸೀಳಿ ಛಿದ್ರ ಛಿದ್ರ ಮಾಡಿದನು. ಸಾಲ್ವನು ಗದೆಯನ್ನು ಹಿಡಿದು ಇದಿರಿಗೆ ಬಂದನು. ಆಗ ಶ್ರೀಕೃಷ್ಣನು ಸಾಲ್ವನ ಬಾಹುಗಳನ್ನು ಕತ್ತರಿಸಿ. ಚಕ್ರದಿಂದ ಶಿರಸ್ಸನ್ನು ಕತ್ತರಿ ಸಿದನು. ದೇವತೆಗಳು ದುಂದುಭಿಧ್ವನಿಮಾಡಿ ಪುಷ್ಪವೃಷ್ಟಿಯನ್ನು ಮಾಡಿದರು. ಶ್ರೀ ಕೃಷ್ಣನು ಬಳಿಕ ದ್ವಾರಾವತಿಗೆ ಬಂದು ಸರ್ವರಿಂದಲೂ ಪೂಜಿತನಾಗಿ ತನ್ನ ಪತ್ನಿಯ ರೆಲ್ಲರೊಡನೆ ಆನಂದಿಸುತ್ತ ವಾಸ ಮಾಡಿದನು.

### ಎಂಭತ್ತಾರನೆಯ ಅಧ್ಯಾಯ ಮುಗಿದುದು

ಇಂದ್ರಪ್ರಸ್ಥದಿಂದ ಒಬ್ಬಬ್ರಾಹ್ಮಣನು ದ್ವಾರಕಿಗೆ ಬಂದು ಪಾಂಡವರಿಗೆ ವನವಾಸವಾಯಿತೆಂದು ಶ್ರೀಕೃಷ್ಣನಿಗೆ ಹೇಳಿದನು. ಕೂಡಲೇ ಶ್ರೀಕೃಷ್ಣನು ಪಾಂಡವರಿದ್ದ ಕಾಡಿಗೆ ಬಂದು ಅವರನ್ನು ಸಮಾಧಾನಮಾಡಿ, ಸುಭದ್ರೆಯನ್ನೂ ಅವಳ ಮಗ ಅಭಿಮನ್ಯುವನ್ನು ಜೊತೆಯಲ್ಲಿ ಕರೆದುಕೊಂಡು ದ್ವಾರಕಿಗೆ ಬಂದನು.

ಒಮ್ಮೆ ಸಾಂಬ, ಪ್ರದ್ಯುಮ್ನಾದಿಗಳು ಒಂದು ಹಾಳು ಬಾವಿಯಲ್ಲಿ ಬಿದ್ದಿದ್ದ ಬೃಹದಾಕಾರದ ಕೃಕಲಾಸದ ವಿಷಯವನ್ನು ಕೃಷ್ಣನಿಗೆ ಹೇಳಿದರು. ನೃಗರಾಜ ನೆಂಬುವನಿಗೆ ಶಾಪದಿಂದ ಕೃಕಲಾಸದೇಹವು ಬಂದಿತ್ತು. ಅದು ವಿಮೋಚನೆ ಯಾಗುವ ಕಾಲಬಂತಾದುದರಿಂದ ಶ್ರೀಕೃಷ್ಣನು ಹಾಳು ಬಾವಿಯಿಂದ ಆ ಪ್ರಾಣಿ

ಯನ್ನು ಮೇಲಕ್ಕೆ ತಂದು ದಡದಮೇಲಿಟ್ಟ ಕೂಡಲೆ ನೃಗರಾಜನಾಗಿ ನಿಂತನು. ಅವನು ಹಿಂದೆ ಒಬ್ಬನಿಗೆ ದಾನಮಾಡಿದ ಗೋವು ತಪ್ಪಿಸಿಕೊಂಡು ಒಂದು ಹೊಸ ಗೋವುಗಳ ಗುಂಪಿಗೆ ಸೇರಿತು. ರಾಜನು ಕಾಣದೆ ಆಗೋವನ್ನು ತಿರುಗಿ ದಾನಮಾಡಿದನು. ದಾನತೆಗೆದುಕೊಂಡಿದ್ದ ಇಬ್ಬರು ಬ್ರಾಹ್ಮಣರೂ ಒಂದು ವ್ಯಾಜ್ಯವಾಡಿ ದಾನಕೊಟ್ಟ ರಾಜನಿಗೆ ಕೃಕಲಾಸ ಆಗೆಂದು ಶಾಪವನ್ನು ಕೊಟ್ಟಿದ್ದರು. ಶಾಪನಿವೃತ್ತಿಯನ್ನು ಹೊಂದಿದ ನೃಗರಾಜನು ಶ್ರೀಕೃಷ್ಣನನ್ನು ತುತಿಸಿ ಸ್ವರ್ಗಕ್ಕೆ ಹೋದನು. ಶ್ರೀಕೃಷ್ಣನು ಊರಿಗೆ ಬಂದು ಸಭೆಯಲ್ಲಿ "ವಿಷವು ಅದನ್ನು ಕುಡಿದವನೊಬ್ಬನನ್ನು ಮಾತ್ರ ಕೊಲ್ಲುವುದು. ಬ್ರಹ್ಮಸ್ವವು ಕುಲವನ್ನೇ ನಾಶಮಾಡುವುದರಿಂದ ಅದು ಮಹಾ ಘೋರ ವಿಷವು" ಎಂದು ಹೇಳಿ ಎಂದೆಂದೂ ಬ್ರಾಹ್ಮಣದ್ರೋಹವನ್ನು ಮಾಡಬಾರದೆಂದು ತನ್ನವರನ್ನು ಶಿಕ್ಷಿಸಿದನು.

## ಎಂಭತ್ತೇಳನೆಯ ಅಧ್ಯಾಯ ಮುಗಿದುದು

ಒಮ್ಮೆ ಬಲರಾಮನು ಗೋಕುಲಕ್ಕೆ ಹೋಗಿ ವೃದ್ಧರನ್ನು ನಮಸ್ಕರಿಸಿ, ಮಿತ್ರರಾದ ಗೋಪಾಲರ ಕ್ಷೇಮವನ್ನು ವಿಚಾರಿಸಿದನು. ಗೋಪಿಯರಿಗೆ ಶ್ರೀಕೃಷ್ಣನ ಸಂದೇಶಗಳನ್ನು ತಿಳಿಸಿ ಸಮಾಧಾನಮಾಡಿದನು. ಚೈತ್ರ ವೈಶಾಖ ಮಾಸಗಳಲ್ಲಿ ಸ್ತ್ರೀಯರಿಂದ ಕೂಡಿ ಮದ್ಯಪಾನಮಾಡಿ ಯಮುನೆಯ ಉಪವನದಲ್ಲಿ ಕ್ರೀಡಿಸಿದನು. ಬಳಿಕ ಮದೋನ್ಮತ್ತನಾಗಿ ಜಲಕ್ರೀಡೆಗಾಗಿ ಯಮುನೆಯನ್ನು ಕರೆದಾಗ ಅವಳು ಭೀತಳಾಗಿ ಬರಲಿಲ್ಲ. ಕುಪಿತನಾದ ಬಲರಾಮನು ಹಲಾಗ್ರದಿಂದ ಯಮುನಾನದಿಯನ್ನು ಸೆಳೆದು ''ಯಮುನೆಯೇ ! ನನ್ನನ್ನು ತಿರಸ್ಕರಿಸಿದ್ದರಿಂದ ನಿನ್ನನ್ನು ಮುಸಲದಿಂದ ಸೀಳುವೆನು'' ಎಂದನು. ಭೀತಳಾದ ಯಮುನೆಯು ''ಪ್ರಭೋ ! ನಿಮ್ಮ ಬಲವನ್ನು ತಿಳಿಯಲಿಲ್ಲ ನನ್ನ ಅಪರಾಧವನ್ನು ಕ್ಷಮಿಸು. ನನ್ನನ್ನು ಬಿಟ್ಟು ಬಿಡು'' ಎಂದು ಪ್ರಾರ್ಥಿಸಿದಳು. ಬಲರಾಮನು ಅವಳನ್ನು ಬಿಟ್ಟು ಜಲಕ್ರೀಡೆಯಾಡಿದನು. ಯಮುನೆಯು ಅವನಿಗೆ ನೀಲಾಂಬರ, ಆಭರಣ ಮತ್ತು ಪುಷ್ಪಮಾಲಿಕೆಗಳನ್ನರ್ಪಿಸಿದಳು. ಆ ನದಿಯು ಈಗಲೂ ವಕ್ರವಾಗಿ ಪ್ರವಹಿಸುತ್ತ ಬಲರಾಮನ ಬಲವನ್ನು ಸೂಚಿಸುತ್ತಿರುವುದು.

## ಎಂಭತ್ತೆಂಟನೆಯ ಅಧ್ಯಾಯ ಮುಗಿದುದು

ರೈವತಪರ್ವತದಲ್ಲಿ ನಾರಿಯರೊಡನೆ ಬಲರಾಮನು ವಿಹರಿಸುತ್ತಿದ್ದಾಗ ಮೈಂದನೆಂಬ ಗಡವಕೋತಿಯು ಬಂದು ಹುಬ್ಬುಹಾರಿಸಿ ಬಲರಾಮನನ್ನು ಕೆಣಕಿತು.

ಕುಪಿತನಾದ ಬಲರಾಮನು ಅದನ್ನು ಕೊಂದನು ಅವನ ಸಹೋದರನಾದ ವಿವಿದನು ಮಾರನೆಯ ದಿವಸ ಬಂದು ಬಲರಾಮನನ್ನು ಕೆಣಕಿದುದರಿಂದ, ಬಲರಾಮನು ಆ ಕೋತಿಯನ್ನೂ ಕೊಂದುಹಾಕಿದನು.

## ಎಂಭತ್ತೊಂಭತ್ತನೆಯ ಅಧ್ಯಾಯ ಮುಗಿದುದು

ಕೃಷ್ಣನಿಂದ ಜಾಂಬವತಿಯಲ್ಲಿ ಮನ್ಮಥನು ಹುಟ್ಟಿ ಸಾಂಬನಾಮದಿಂದ ಪ್ರಸಿದ್ಧನಾಗಿದ್ದನು. ಅವನು ದುರ್ಯೋಧನನ ಮಗಳಾದ ಲಕ್ಷಣಾದೇವಿಯನ್ನು ಸ್ವಯಂವರದಲ್ಲಿ ಅಪಹರಿಸಿದನು. ಕೌರವರು ಸಾಂಬನನ್ನು ಕಟ್ಟಿಹಾಕಬೇಕೆಂದೂ, ಯಾದವರು ಹೇಡಿಗಳೆಂದೂ ಮೂದಲಿಸುತ್ತ ಆರುಮಂದಿ ವೀರರು ಸೇರಿ ಸಾಂಬನ ರಥಾದಿಗಳನ್ನು ನಾಶಮಾಡಿ ಅವನನ್ನೂ ಲಕ್ಷಣೆಯನ್ನೂ ಬಂಧನದಲ್ಲಿಟ್ಟರು. ನಾರದರು ಬಂದು ಈ ವಿಷಯವನ್ನು ಯಾದವರ ಸಭೆಯಲ್ಲಿ ಹೇಳಿದರು. ಯಾದವರು ಕುಪಿತರಾಗಿ ದುರ್ಯೋಧನಾದಿಗಳನ್ನು ಕೊಂದು ಬರುವುದಾಗಿ ಉರಿದೆದ್ದರು. ಇದನ್ನು ನೋಡಿದ ಬಲರಾಮದೇವರು ದುರ್ಯೋಧನನು ತಮ್ಮ ಶಿಷ್ಯನೆಂಬ ಅಭಿಮಾನವುಳ್ಳವರಾದ್ದರಿಂದ, ದುರ್ಯೋಧನಾದಿಗಳಿಗೆ ಬರುವ ಹಾನಿಯನ್ನು ತಪ್ಪಿಸಬೇಕೆಂದು ಯೋಚಿಸಿ, ಯಾದವರನ್ನು ಸಮಾಧಾನಮಾಡಿ, ಸಾಂಬ ಮತ್ತು ಲಕ್ಷಣೆಯರನ್ನು ತಾವು ಕರೆದುಕೊಂಡು ಬರುವುದಾಗಿ ಭರವಸೆಕೊಟ್ಟು ದ್ವಾರಕಿಯಿಂದ ಹೊರಟು ಬಂದು ಹಸ್ತಿನಾವತಿಯ ಬಹಿರೋದ್ಯಾನದಲ್ಲಿಳಿದುಕೊಂಡು, ಉದ್ಧವನನ್ನು ಊರೊಳಕ್ಕೆ ಕಳುಹಿಸಿದರು. ಉದ್ಧವನಿಂದ ದುರ್ಯೋಧನಾದಿಗಳು ಬಲರಾಮದೇವರು ಬಂದಿರುವ ಸಂಗತಿಯನ್ನು ಕೇಳಿ ಪೂಜಾಸಾಮಗ್ರಿಗಳನ್ನು ತೆಗೆದುಕೊಂಡು ಬಂದು ಬಲರಾಮನನ್ನು ಪೂಜಿಸಿದರು.

**ಬಲರಾಮ .–** ನಮ್ಮ ಉಗ್ರಸೇನ ಮಹಾರಾಜನು ನಿಮಗೆ ಅಪ್ಪಣೆ ಮಾಡಿರುವನು. ಸಾಂಬನನ್ನು ಬಂಧಿಸಿರುವುದು ಅನ್ಯಾಯ. ಬಂಧುಗಳಾದ್ದರಿಂದ ನಿಮ್ಮ ಕೂಡೆ ಕಲಹಮಾಡಬಾರದೆಂದು ನಿಮ್ಮ ತಪ್ಪನ್ನು ಕ್ಷಮಿಸಿದ್ದೇವೆ. ಮೊದಲು ಸಾಂಬನನ್ನು ಬಿಡಿ ಇಲ್ಲವಾದರೆ ನಮ್ಮ ಕೋಪಕ್ಕೆ ನೀವು ಪಾತ್ರರಾಗುವಿರಿ.

**ಕೌರವರ .–** ಯಾದವರು ನಮಗೆ ಅಪ್ಪಣೆಮಾಡುವಂತಾಯಿತೆ? ಅವರು ರಾಜರಾಗಿರುವುದು ನಮ್ಮ ಅನುಗ್ರಹದಿಂದ. ಪಾದರಕ್ಷೆ ತಲೆಗೇರಿದಂತಾಯಿತು. ಅವರ ರಾಜ್ಯವನ್ನು ಕಿತ್ತುಕೊಳ್ಳೋಣ ನಡೆಯಿರಿ. (ಹೀಗೆ ಹೇಳಿ ಹೊರಟು ಹೊದರು. ಇದನ್ನು ಕೇಳಿದಕೂಡಲೇ ಬಲರಾಮನಿಗೆ ಮಿತಿಮೀರಿದ ಕೋಪವು ಬಂದಿತು.)

**ಬಲರಾಮ .–** ಏನು ? ಶ್ರೀಕೃಷ್ಣನು, ನಾನು, ಯಾದವರೆಲ್ಲರೂ ಇವರ ಹಂಗಿನಿಂದ ಬದುಕಿರುವವರೆ ? ನಾವು ಪಾದರಕ್ಷೆಗೆ ಸಮಾನವೇ ? ಇರಲಿ! ಈ

ಕ್ಷಣ ಇವರ ಸೊಕ್ಕನ್ನು ಮುರಿಯುವೆನು. (ದೇವತಾ ಆಯುಧವಾದ ನೇಗಿಲಿನಿಂದ ಈ ಪಟ್ಟಣವನ್ನೆಬ್ಬಿ ಗಂಗೆಯಲ್ಲಿ ಮುಳುಗಿಸುವೆನು ಎಂದು ತೀರ್ಮಾನಿಸಿ, ನೇಗಿಲಿನಿಂದ ಪಟ್ಟಣದಒಂದು ಭಾಗವನ್ನೆಬ್ಬಿದರು. ಇದನ್ನು ಕಂಡು ಕೌರವರು ನಡುಗಿ ಹೋದರು. ತಾವು ನಾಶವನ್ನು ಹೊಂದುತ್ತೇವೆಂದು ತಿಳಿದು ಕೂಡಲೆ ಲಕ್ಷಣೆ, ಸಾಂಬ ಮತ್ತು ಮಗಳಿಗೆ ಕೊಡಬೇಕಾದ ಬಳವಳಿಗೆಗಳನ್ನು ತೆಗೆದು ಕೊಂಡುಬಂದು ಬಲರಾಮನಿಗೆ ಅರ್ಪಿಸಿ, ತಪ್ಪಾಯಿತು ಕ್ಷಮಿಸಬೇಕು ಎಂದು ಬೇಡಿದರು. ಇದರಿಂದ ಸಮಾಧಾನ ವನ್ನು ಹೊಂದಿದ ಬಲರಾಮನು ಮಗ ಮತ್ತು ಸೊಸೆಯೊಡನೆ ದ್ವಾರಕಿಗೆ ಬಂದನು.

**ಶುಕ :–** ಪರೀಕ್ಷಿದ್ರಾಜನೇ 'ಈಗಲೂ ಹಸ್ತಿನಾವತಿ ಪಟ್ಟಣವು ದಕ್ಷಿಣದಲ್ಲಿ ಗಂಗಾನದಿಯ ಕಡೆಗೆ ವಾಲಿದೆ.

## ತ್ತೊಂಭತ್ತನೆಯ ಅಧ್ಯಾಯ ಮುಗಿದುದು

ಮಿಥಿಲಾನಗರಿಯಲ್ಲಿ ಶ್ರುತದೇವನೆಂಬ ಗೃಹಸ್ಥನಿದ್ದನು ಅವನು ವೃಷ್ಣಿ (ಕೃಷ್ಣನ) ಕುಲದವನು. ಶ್ರೀಕೃಷ್ಣನ ನೈಜಭಕ್ತನಾಗಿದ್ದನು. ಮಿಥಿಲಾ ನಗರಿಯ ರಾಜ ನಾದ ಬಹುಲಾಶ್ವನೆಂಬುವನೂ ಶ್ರೀಕೃಷ್ಣನ ಭಕ್ತನಾಗಿದ್ದನು. ಶ್ರೀಕೃಷ್ಣನು ಉಭಯ ರಿಗೂ ಅನುಗ್ರಹಿಸಬೇಕೆಂದು ನಾರದಾದಿ ಋಷಿಗಳೊಡನೆ ಮಿಥಿಲೆಗೆ ಬಂದನು. ಪುರ ವಾಸಿಗಳೆಲ್ಲರೂ ಕೃಷ್ಣ ಮತ್ತು ಋಷಿಗಳನ್ನು ಸತ್ಕರಿಸಿದರು. ಬಹುಲಾಶ್ವ ಮತ್ತು ಶ್ರುತದೇವ ಈ ಇಬ್ಬರು ಭಕ್ತರೂ ಬಂದು ನಮಿಸಿ ಏಕಕಾಲಕ್ಕೇ ತಮ್ಮ ಮನೆ ಗಳಿಗೆ ಬರಬೇಕೆಂದು ಪ್ರಾರ್ಥಿಸಿದರು. ಕೃಷ್ಣನೂ, ಋಷಿಗಳು ಎರಡೆರಡು ರೂಪ ಗಳನ್ನು ತಾಳಿ ಇಬ್ಬರಮನೆಗಳಿಗೂ ಏಕಕಾಲಕ್ಕೆ ಹೋದರು. ಬಹುಲಾಶ್ವರಾಜನು ತನ್ನ ಅರಮನೆಗೆ ಬಂದವರನ್ನು ಪೂಜಿಸಿ ಸತ್ಕರಿಸಿದನು. ಅವನು ಕೃಷ್ಣನ ಕಾಲನ್ನೊತ್ತುತ್ತ

**ಬಹುಲಾಶ್ವ :–** ಸರ್ವಸ್ವಾಮಿಯೂ, ಅನಿಮಿತ್ತೋಪಕಾರಿಯೂ ಆದ ನೀನು, ನಿನ್ನನ್ನೇ ಸ್ಮರಿಸುತ್ತಿರುವ ನಮಗೆ ದರ್ಶನ ಕೊಟ್ಟಿರುವೆ. ಜ್ಞಾನಿಯಾದ ಯಾವನೂ ನಿನ್ನ ಚರಣವನ್ನು ತ್ಯಜಿಸಲಾರನು. ನಿರ್ದೋಷಪೂರ್ಣಾನಂದಜ್ಞಾನಿಯೂ ನಾರಾಯಣನೂ ಆದ ಶ್ರೀಕೃಷ್ಣನಿಗೆ ನಮಸ್ಕಾರ ! ನಿನ್ನ ಪಾದಧೂಳಿಯಿಂದ ನಿಮಿಯ ಕುಲವನ್ನು ಪಾವನ ಮಾಡುತ್ತಾ ಇಲ್ಲಿಯೇ ಕೆಲವು ದಿನಗಳಿರಬೇಕು.

(ಶ್ರೀಕೃಷ್ಣನು ಅವನ ಪ್ರಾರ್ಥನೆಯಂತೆ ಆ ನಗರದಲ್ಲಿ ಕೆಲವು ದಿನಗಳವರೆಗೆ ತಂಗಿದ್ದು ಅಲ್ಲಿನ ಸ್ತ್ರೀಪುರುಷರಿಗೆ ಮಂಗಳವನ್ನುಂಟು ಮಾಡುತ್ತಿದ್ದನು. ಹೀಗೆಯೇ

ಶ್ರೀಕೃಷ್ಣನು ಋಷಿಗಳೊಂದಿಗೆ ಶ್ರುತದೇವನ ಮನೆಗೆ ಬಂದನು. ಶ್ರುತದೇವನು ಆನಂದದಿಂದ ಅವರನ್ನು ಇದಿರುಗೊಂಡು ಪಾದಪೂಜೆಮಾಡಿ ಸತ್ಕರಿಸಿದನು. ಅವನೂ ಶ್ರೀಕೃಷ್ಣನ ಪಾದಗಳನ್ನೊತ್ತುತ್ತಾ

**ಶ್ರುತದೇವ** :– ಪುರುಷೋತ್ತಮನೇ ! ನೀನು ಜಗತ್ತಿನೊಳಗಿದ್ದರೂ, ಅದರಿಂದ ಪ್ರತ್ಯೇಕವಾಗಿ ನಿನ್ನ ಸ್ವರೂಪವನ್ನು ಪ್ರಕಟಿಸುತ್ತಿರುವೆ. ನಿನ್ನ ಕಥಾಶ್ರವಣ ಮಾಡತಕ್ಕವರೂ, ನಿನ್ನನ್ನು ಸದಾ ನೋಡತಕ್ಕವರೂ, ವ್ಯಾಖ್ಯಾನ ಮಾಡತಕ್ಕವರೂ ಆದವರ ಹೃದಯದಲ್ಲಿ ನೆಲೆಸಿರುವೆ. ನಿನ್ನ ಉಪಾಸನೆಯನ್ನು ಮಾಡದಿರುವವರಿಗೆ ದೂರದಲ್ಲಿರುವಂತೆ ವರ್ತಿಸುವೆ. ನಿನ್ನ ಪ್ರಸಾದವಿಲ್ಲದಿದ್ದರೆ ನಿನ್ನನ್ನು ಉಪಾಸಿಸುವವರೂ ನಿನ್ನನ್ನೂ ತಿಳಿಯಲಾರರು. ಅಂತಹ ವಿಲಕ್ಷಣ ವಿಗ್ರಹನು ನೀನು. ಈ ರೀತಿಯಿರುವ ನೀನು ನಮಗೆ ದರ್ಶನವನ್ನು ಕೊಟ್ಟಿರುವೆ. ತತ್ತ್ವಜ್ಞಾನಿಗಳಿಗೆ ಪುರುಷಾರ್ಥದಾಯಕನೂ, ಸರ್ವವ್ಯಾಪಿಯೂ, ಪ್ರಕೃತಿಯಿಂದ ಮರೆಯಾಗದ ಜ್ಞಾನವುಳ್ಳವನೂ ಆದ ನಿನಗೆ ನಮಸ್ಕಾರ ! ನೀನು ನನಗೇನಾದರೂ ಕೊಡಬೇಕಿಂದಿದ್ದರೆ ನಿನ್ನ ಪಾದಸೇವೆಯೊಂದನ್ನು ಮಾತ್ರ ಕೊಡು. ನಾನೇನನ್ನು ಬೇಡಬೇಕು ಹೇಳು.

**ಶ್ರೀಕೃಷ್ಣ** :– ಇಲ್ಲಿಗೆ ಬಂದಿರುವ ಈ ಮುನಿಪುಂಗವರು ಸಾಮಾನ್ಯರಲ್ಲ ದರ್ಶನ ಮಾತ್ರದಿಂದಲೇ ಪಾವನ ಮಾಡತಕ್ಕವರು. ಬ್ರಾಹ್ಮಣರು ಜನ್ಮದಿಂದ ಶ್ರೇಷ್ಠರು. ಅವರಲ್ಲಿಯೂ ಸರ್ವದಾ ನನ್ನ ಕಥೆಗಳಲ್ಲಿ ಆಸಕ್ತರಾದ ಇವರು ಶ್ರೇಷ್ಠತರರು. ವೇದಗಳ ಮುಖ್ಯತಾತ್ಪರ್ಯವನ್ನು ತಿಳಿದಿರುವುದರಿಂದ ಬ್ರಾಹ್ಮಣನು ವೇದಮಯನೆನಿಸುವನು. ಆದ್ದರಿಂದ ಇವರನ್ನು ಶ್ರದ್ಧೆಯಿಂದ ಪೂಜಿಸು. ಹೀಗೆ ಮಾಡುವುದರಿಂದ ನನ್ನನ್ನು ಉತ್ಕೃಷ್ಟವಾಗಿ ಪೂಜಿಸಿದಂತಾಗುವುದು.

**ಶುಕ** :– ಶ್ರುತದೇವನು ವಿಪ್ರರನ್ನು ಆರಾಧಿಸಿ ಸದ್ಗತಿಯನ್ನು ಹೊಂದಿದನು. ಹೀಗೆ ಶ್ರೀಕೃಷ್ಣನು ಭಕ್ತರಾದ ಬಹುಳಾಶ್ವ ಮತ್ತು ಶ್ರುತದೇವ ಇವರಿಬ್ಬರಿಗೂ ಅನುಗ್ರಹಿಸಿ ಅಲ್ಲಿಯೇ ಕೆಲವು ದಿನಗಳಿದ್ದು ಬಳಿಕ ದ್ವಾರಕಿಗೆ ಬಂದನು.

## ತೊಂಭತ್ತೊಂದನೆಯ ಅಧ್ಯಾಯ ಮುಗಿದುದು

**ಪರೀಕ್ಷಿತ್** :– ಆಚಾರ್ಯರೇ ! ದೇವಾಸುರಮನುಷ್ಯರಲ್ಲಿ ಅಮಂಗಳಕರನಾದ ಶಿವನನ್ನು ಭಜಿಸುವವರು ಧನಿಕರೂ ಮತ್ತು ಭೋಗಿಗಳೂ ಆಗುವರು. ಲಕ್ಷ್ಮೀಪತಿಯನ್ನು ಭಜಿಸುವವರು ಪ್ರಾಯಶಃ ದರಿದ್ರರಾಗಿರುವರು. ಇದಕ್ಕೆ ಕಾರಣವೇನು ?

**ಶುಕ** :– ಶಿವನು ಪ್ರಕೃತಿಸಂಬದ್ಧನಾದುದರಿಂದ ತನ್ನನ್ನು ಭಜಿಸುವವರಿಗೆ ಅಸ್ಥಿರವಾದ (ಪ್ರಾಕೃತ) ಐಶ್ವರ್ಯವನ್ನು ಕೊಡುತ್ತಾನೆ. ಶ್ರೀಹರಿಯಾದರೋ ಸತ್ವಾದಿ ಗುಣರಹಿತನಾದುದರಿಂದ ಆತನನ್ನು ಭಜಿಸಿ ಅಪರೋಕ್ಷೀಕರಿಸಿದವರು ಪ್ರಾಕೃತದ್ರವ್ಯ ಸಂಬಂಧವಿಲ್ಲದೆ, ಸತ್ವಾದಿಗುಣರಹಿತರಾಗಿ ಮುಕ್ತರಾಗುತ್ತಾರೆ. ಅಶ್ವಮೇಧ ಯಾಗವು ಮುಗಿದ ಮೇಲೆ ಧರ್ಮರಾಜನು ಶ್ರೀಕೃಷ್ಣನನ್ನು ಕುರಿತು ನೀನು ಕೇಳಿದು ದನ್ನೇ ಪ್ರಶ್ನಿಸಿದನು. ಆಗ ಕೃಷ್ಣನು ಹೀಗೆ ಹೇಳಿದನು.

**ಶ್ರೀಕೃಷ್ಣ** :– ಧರ್ಮರಾಜನೇ ! ಯಾರನ್ನು ಅನುಗ್ರಹಿಸಬೇಕೆಂದು ನಾನು ಇಚ್ಛಿಸುವೆನೋ ಅವರ ಧನವನ್ನು ಮೊದಲು ಅಪಹರಿಸುವೆನು. ದರಿದ್ರನಾದ ನನ್ನ ಭಕ್ತನನ್ನು ಸತಿ, ಸುತ, ಬಂಧುಗಳೆಲ್ಲರೂ ಬಿಟ್ಟು ಹೋಗುವರು. ಆಗ ಅವನಿಗೆ ವೈರಾಗ್ಯವು ಬರುವುದು ಒಳಿಕ ನಾನು ಅನುಗ್ರಹಿಸುವೆನು

ಶ್ರೀ ವಿಜಯದಾಸರೂ ಅದೇ ಮಾತನ್ನು ಹೇಳುತ್ತಾರೆ .–

**ಅಟತಾಳ**

ದಾಸನಾಗುವೆನೆಂದು ಆಸೆಯನು ಮಾಡಲು । ಕ್ಲೇಶ ಬಡಿಸುವ ಅಭ್ಯಾಸ
ಮಾಡಿಸುವ ನಾಶನ ಮಾಡಿಸುವ ಸಕಲ ಐಶ್ವರ್ಯವ । ಗ್ರಾಸವಾಸಕೆ ತರ
ಲೀಸನು ಪರರಿಂದ ದ್ವೇಷವ ಮಾಡಿಸುವ ಮಾನಿಸರ ಕೈಯಿಂದ ।
ಮೋಸವಾದ ಭವಪಾಶದಲ್ಲಿ ಬಿಗಿವ ಬೀಸಿ ಬಿಸುಟುವ ಕಾಸಿನವನ ಮಾಡಿ ।

ಲೇಸು ಜ್ಯೋತಿರ್ನಾಮ ವಿಜಯ ವಿಟ್ಠಲನ । ದಾಸನಾಗುವನಿಗೆ ಕ್ಲೇಶ ಬಡಿ ಸದೆ ಒಲಿಯ ॥೪॥

ಜತೆ ॥ ಶ್ರಮವೇನು ಬಂದರು. ಬಿಡೆನೆಂಬೊ ದಾಸಗೆ । ಯಮನಾಮ ವಿಜಯವಿಟ್ಠಲನು ತೆತ್ತಿಗನು (ಸೇವಕನು) ॥೬॥

ಹೀಗೆ ಸುಖದಿಂದ ಭಜಿಸಲು ಅಶಕ್ಯನಾದ ನನ್ನನ್ನು ಬಿಟ್ಟು ಬೇಗ ಫಲವನ್ನು ಕೊಡುವ ರುದ್ರಾದಿಗಳನ್ನು ಜನರು ಭಜಿಸುತ್ತಾರೆ.

ಹರಿಹರಬ್ರಹ್ಮರು ಶಾಪಾನುಗ್ರಹಶಕ್ತರು. ಅವರಲ್ಲಿ ಶಿವನು ಮತ್ತು ಬ್ರಹ್ಮ ದೇವರು ಬೇಗ ಶಾಪ ಮತ್ತು ಅನುಗ್ರಹಗಳನ್ನು ಮಾಡತಕ್ಕವರು. ಶ್ರೀವಿಷ್ಣುವು ಹಾಗಲ್ಲ. ಈ ವಿಷಯಕ್ಕೆ ಒಂದು ಇತಿಹಾಸವನ್ನು ಹೇಳುವೆನು ಕೇಳು .

ಶಕುನಿಯ ಮಗನಾದ ವೃಕನೆಂಬ ಅಸುರನು ನಾರದರಿಂದ ಶಿವನು ಬೇಗ ವರವನ್ನು ಕೊಡುವವನು ಎಂದು ತಿಳಿದು ಕೇದಾರಕ್ಕೆ ಹೋಗಿ ದೇಹದ ಮಾಂಸವನ್ನೇ ಆರುದಿನ ಅಗ್ನಿಯಲ್ಲಿ ಹೋಮಿಸಿದನು. ಶಿವನು ಬರಲಿಲ್ಲ. ಆ ದೈತ್ಯನು ತನ್ನ ಕೊರಳನ್ನು ಕತ್ತರಿಸಲು ಸಿದ್ಧನಾದಾಗ ಶಿವನು ಪ್ರತ್ಯಕ್ಷನಾಗಿ ವರವನ್ನು ಕೇಳೆಂದನು. ವೃಕಾಸುರನು "ಯಾರ ತಲೆಯ ಮೇಲೆ ನನ್ನ ಹಸ್ತವನ್ನಿಡುವೆನೋ ಅವನು ಆಕೂಡಲೆ ಸಾಯಬೇಕು'' ಎಂದು ವರವನ್ನು ಕೇಳಿದನು. ಶಿವನು 'ಆಗಲಿ' ಎಂದನು. ಆ ವರವನ್ನು ಪರೀಕ್ಷಿಸಲು ಅಸುರನು ಶಿವನ ತಲೆಯ ಮೇಲೆ ತನ್ನ ಕೈಯಿಡಲು ಬಂದನು. ರುದ್ರನು ಭೀತನಾಗಿ ಎಲ್ಲ ಲೋಕಗಳಿಗೂ ಓಡಿಹೋಗಿ ಕೊನೆಗೆ ವೈಕುಂಠಕ್ಕೆ ಬಂದನು. ಇದನ್ನು ಕಂಡ ನಾರಾಯಣನು ವಟುರೂಪಿಯಾಗಿ ಬಂದು "ವೃಕಾಸುರನೇ ! ಬಳಲಿರುವೆ. ವಿಶ್ರಾಂತಿಯನ್ನು ಹೊಂದು. ಏಕೆ ಬಂದಿರುವಿ ?'' ಎಂದು ಕೇಳಿದನು. ವೃಕನು ನಡೆದ ಸಂಗತಿಯನ್ನು ಹೇಳಿದನು.

**ವಿಷ್ಣು :–** ಶಿವನ ಮಾತನ್ನು ನಾನು ಎಷ್ಟು ಮಾತ್ರಕ್ಕೂ ನಂಬಲಾರೆನು. ಅವನು ಸುಳ್ಳನ್ನು ಹೇಳುತ್ತಾನೆ. ಅವನ ಮಾತನ್ನು ನಂಬುವುದಾದರೆ ನಿನ್ನ ತಲೆಯ ಮೇಲೆ ಕೈಯಿಟ್ಟುಕೊಂಡರೆ ಅವನ ಮಾತು ಸತ್ಯವೋ, ಸುಳ್ಳೋ ಎಂಬುದು ನಿಶ್ಚಯವಾಗುವುದು.

**ಶುಕ :–** ಭಗವಂತನ ವಾಕ್ಯಗಳಿಂದ ಮೋಹಿತನಾದ ಆ ವೃಕಾಸುರನು ತನ್ನ ತಲೆಯ ಮೇಲೆ ಕೈಯಿಟ್ಟುಕೊಂಡನು. ಕೂಡಲೇ ಅವನ ತಲೆ ಸೀಳಿ ಹೋಗಿ ಸತ್ತು ಒರಗಿದನು. ದೇವತೆಗಳು ಪುಷ್ಪವೃಷ್ಟಿಯನ್ನು ಮಾಡಿದರು. ಈ ಚರಿತ್ರೆಯನ್ನು ಹೇಳಿ ಕೇಳುವವರು ಶತ್ರುಭಯದಿಂದಲೂ, ಸಂಸಾರ ಭಯದಿಂದಲೂ ಮುಕ್ತರಾಗುವರು.

**ತೊಂಭತ್ತೆರಡನೆಯ ಅಧ್ಯಾಯ ಮುಗಿದುದು**

ಒಮ್ಮೆ ಸರಸ್ವತೀನದಿಯ ತೀರದಲ್ಲಿ ಋಷಿಗಳೆಲ್ಲರೂ ಸೇರಿ ಸತ್ರಯಾಗ ಮಾಡಿದರು. ಆಗ ತ್ರಿಮೂರ್ತಿಗಳಲ್ಲಿ ಶ್ರೇಷ್ಠರು ಯಾರೆಂಬ ಜಿಜ್ಞಾಸೆ ಉಂಟಾಯಿತು. ಅದನ್ನು ತಿಳಿಯಲಿಚ್ಛೆಯಿಂದ ಸತ್ರಯಾಗಸಭಾಧ್ಯಕ್ಷರಾದ ಭೃಗುಋಷಿಗಳನ್ನು ಕಳುಹಿಸಿಕೊಟ್ಟರು. ಭೃಗುಮಹರ್ಷಿಗಳು ಪರೀಕ್ಷಿಸಬೇಕೆಂದು ಮೊದಲು ಬ್ರಹ್ಮದೇವರ ಬಳಿಗೆ ಹೋಗಿ ನಮಸ್ಕಾರಾದಿಗಳನ್ನು ಮಾಡದೆ ಸುಮ್ಮನೇ ನಿಂತರು. ಬ್ರಹ್ಮದೇವರಿಗೆ ಕೋಪವು ಬಂದರೂ ಭೃಗುವಿನ ವಿಷಯವನ್ನು ಆಲೋಚಿಸಿದ ಕೂಡಲೇ ವಿಷಯವೆಲ್ಲ ಗೊತ್ತಾಗಿ ಸಮಾಧಾನವನ್ನು ಹೊಂದಿದರು. ಬಳಿಕ ಭೃಗು

ಮಹರ್ಷಿಗಳು ಕೈಲಾಸಕ್ಕೆ ಹೋದರು. ಆಗ ಶಿವನು ಪಾರ್ವತಿಯೊಡನೆ ಭೋಗಾಸಕ್ತನಾಗಿದ್ದನು. ತಮ್ಮನು ಬಂದಿರುವನೆಂದು ಪಾರ್ವತಿಯು ಹೇಳಿದುದನ್ನು ಕೇಳಿ, ಭ್ರಾತೃಪ್ರೇಮದಿಂದ ಆಲಿಂಗಿಸುವುದಕ್ಕಾಗಿ ದಿಗಂಬರನಾಗಿಯೇ ಶಿವನು ಬಂದನು. ಭೃಗುಮುನಿಗಳು "ಈ ರುದ್ರನು ಶ್ಮಶಾನವಾಸಿಯೂ ಕಪಾಲಪಾಣಿಯೂ, ಆಗಿರುವುದರಿಂದ ಅಮಂಗಳ ಆಚಾರವುಳ್ಳ ಇವನನ್ನು ಸ್ಪರ್ಶಮಾಡಲಾರೆನು" ಎಂದು ಹೇಳಿದರು. ಶಿವನು ಕುಪಿತನಾಗಿ ಅವರನ್ನು ಕೊಲ್ಲಲು ಹೋದನು. ಆಗ ಶಿವೆಯು ಬ್ರಹ್ಮಹತ್ಯಾದೋಷ ಬರುವುದರಿಂದ ಬೇಡವೆಂದು ಪ್ರಾರ್ಥಿಸಿ ಶಿವನನ್ನು ಸುಮ್ಮನಾಗಿಸಿದಳು. ಬಳಿಕ ಭೃಗುಮುನಿಗಳು ವೈಕುಂಠಕ್ಕೆ ಬಂದು ಲಕ್ಷ್ಮಿಯ ತೊಡೆಯ ಮೇಲೆ ತಲೆಯಿಟ್ಟು ಮಲಗಿದ್ದ ಶ್ರೀ ನಾರಾಯಣನ ವಕ್ಷಃಸ್ಥಳವನ್ನು ತಮ್ಮ ಪಾದದಿಂದ ಒದ್ದರು. ಕೂಡಲೇ ಹರಿಯು ಎದ್ದು ಮುನಿಯ ಪಾದದ ಮೇಲೆ ತಲೆಯನ್ನಿಟ್ಟು ನಮಿಸಿ ಮಾತಾಡುವನು.

**ವಿಷ್ಣು** :– ನಿಮಗೆ ಸುಖಾಗಮನವೆ ? ಕುಳಿತು ವಿಶ್ರಮಿಸಿಕೊಳ್ಳಿರಿ. ನೀವು ಬರುವುದನ್ನು ತಿಳಿಯದೆ ಮೈಮರೆತು ಮಲಗಿದ್ದ ನನ್ನ ತಪ್ಪನ್ನು ಕ್ಷಮಿಸಿ. ಒದ್ದುದೇ ಸಾಕು. ಶಾಪಾದಿಗಳನ್ನು ಕೊಡಬೇಡಿ. ನಿಮ್ಮ ಪಾದೋದಕದಿಂದ ನನ್ನನ್ನೂ, ಲೋಕಪಾಲರನ್ನೂ ಪಾವನ ಮಾಡಬೇಕು. ನಿಮ್ಮ ಪಾದಸ್ಪರ್ಶದಿಂದ ನಾನು ಮಹಾಶ್ರೀಮಂತನಾದೆನು. ವಕ್ಷಃಸ್ಥಳದಲ್ಲಿ ಲಕ್ಷ್ಮಿಯು ನಿತ್ಯವೂ ವಾಸಮಾಡುತ್ತಿದ್ದರೂ ಇವತ್ತಿನಿಂದ ಸ್ಪಷ್ಟವಾಗಿ ವಾಸಮಾಡುತ್ತಾಳೆ. (ನನ್ನಿಂದ ಯಾವ ಕಾಲಕ್ಕೂ ಅವಳಿಗೆ ಭೋಗವಿಲ್ಲ. ನಾನು ಸ್ವರಮಣನು. ವಿಪ್ರಪಾದ ಸ್ಪರ್ಶದಿಂದ ಲಕ್ಷ್ಮಿಯು "ನನ್ನಪತಿಯಿಂದ ಎಂದೂ ಸಾಕ್ಷಾತ್ ಭೋಗಸುಖವಿಲ್ಲದಿದ್ದರೂ ಇವನನ್ನು ಬಿಡುವುದೇ ಇಲ್ಲ" ಎಂಬ ಬುದ್ಧಿಯು ಅವಳಿಗೆ ಬಂದಿತೆಂದು ಭಾವ.) ನಿಮ್ಮ ಹೆಜ್ಜೆಯ ಗುರುತಿನ ಆಕಾರವನ್ನು ವಕ್ಷಃಸ್ಥಳವು ಹೊಂದಿದೆ.

(ಇವನ್ನು ಕೇಳಿದ ಭೃಗುಮುನಿಗಳು "ನಾನು ಎಲ್ಲಿಯೂ ಮಾಡದೇ ಇದ್ದ ಅಪಚಾರವನ್ನು ಇಲ್ಲಿ ಮಾಡಿದರೂ, ಎಲ್ಲಿಯೂ ಆಗದ ಉಪಚಾರವು ಇಲ್ಲಿ ದೊರೆಯಿತೆಂದು ಸಂತೋಷಿಸಿ ಹಿಂತಿರುಗಿ ಬಂದು ತಾವು ಅನುಭವಿಸಿದುದನ್ನೆಲ್ಲ ಸಾಂಗವಾಗಿ ಹೇಳಿದರು. ಇದನ್ನು ಕೇಳಿ ಆಶ್ಚರ್ಯವನ್ನು ಪಡುತ್ತಾ ಮುಕ್ತಸಂಶಯರಾಗಿ **ಶಾಂತನೂ ಭೃಗುವಿಗೆ ಅಭಯದಾತನೂ ಆದ ಶ್ರೀ ವಿಷ್ಣುವೇ ಸರ್ವೋತ್ತಮನು** ಎಂದು ನಿಶ್ಚಯಿಸಿದರು.

ಮೂರು ಗುಣಗಳಲ್ಲಿ ಸತ್ವಗುಣವು ಶ್ರೀಹರಿಯ ಜ್ಞಾನವನ್ನು ಹುಟ್ಟಿಸುವುದರಿಂದ ಅದು ಪೂಜ್ಯವೆನಿಸಿದೆ. ಸತ್ರಯಾಗದಿಂದ ಶ್ರೀಹರಿಯ ಸೇವೆಯನ್ನು ಮಾಡಿದ ಆ ಋಷಿಗಳೆಲ್ಲರೂ ಸದ್ಗತಿಯನ್ನು ಹೊಂದಿದರು.

ಈ ಕಥೆಯನ್ನು ಅನೇಕ ಬಾರಿ ಕೇಳುವವನು ಮುಕ್ತನಾಗುವನು.

ತೊಂಭತ್ತುಮೂರನೆಯ ಅಧ್ಯಾಯ ಮುಗಿದುದು

## ಶ್ರುತಿಗೀತಾ

**ಪರೀಕ್ಷಿತ್ :–** ವೇದವು ಸಗುಣ ವಸ್ತುವನ್ನು ಹೇಳುತ್ತದೆ. "ಬ್ರಹ್ಮನು ನಿರ್ಗುಣನು ಅಂದರೆ ಧರ್ಮಶೂನ್ಯನು. ನಿರ್ದೇಶನಕ್ಕೆ ವಿಷಯನೇ ಅಲ್ಲ. ವಿಧಿ ನಿಷೇಧಾತೀತನು. ಆದ್ದರಿಂದ ಕರ್ಮಕಾಂಡ ಸಹಿತವಾದ ವೇದವು ಬ್ರಹ್ಮನನ್ನು ಪ್ರತಿಪಾದಿಸುವುದೆಂಬುದು ಕೂಡುವುದೇ ಇಲ್ಲ.

**ಶುಕ :–** ಶ್ರೀಹರಿಯು ದೇಹವನ್ನು ನಿರ್ಮಿಸಿದನು. ಏತಕ್ಕೆಂದರೆ ಬ್ರಹ್ಮ ಪ್ರತಿಪಾದಕವಾದ ವೇದವನ್ನು ಅಧ್ಯಯನ ಮಾಡಿ ಬ್ರಹ್ಮಜ್ಞಾನವನ್ನು ಸಂಪಾದಿಸಬೇಕು. ಆದರಿಂದಲೇ ಮೋಕ್ಷ ಸುಖವನ್ನು ಹೊಂದಬೇಕಾಗಿದೆ. ಇದರಿಂದ ವೇದವು ಪರಬ್ರಹ್ಮನ ಮಹಿಮೆಯನ್ನು ಹೇಳತಕ್ಕಗ್ರಂಥವೆಂಬುದು ಯುಕ್ತವಾಗಿದೆ. ರಾಜನೇ ! ನಾರದರು ಬದರಿ ನಾರಾಯಣನನ್ನು ಸಂದರ್ಶಿಸಿ ನೀನು ಮಾಡಿದ ಪ್ರಶ್ನೆಯನ್ನೇ ಮಾಡಿದರು. ಸ್ವಾಮಿಯು ಕೊಟ್ಟ ಉತ್ತರವು ಹೀಗಿದೆ ;–

**ನಾರಾಯಣ :–** ನಾರದನೇ ! ನೀನು ಶ್ವೇತದ್ವೀಪಕ್ಕೆ ಹೋದಾಗ ಇತ್ತ ಜನೋಲೋಕದಲ್ಲಿ ಸನಕಾದಿಗಳು ಸತ್ರಯಾಗವನ್ನು ಮಾಡಿದರು. ಅಲ್ಲಿ ಸನಕ, ಸನತ್ಕುಮಾರ, ಸನತ್ಸುಜಾತರೆಂಬ ಮೂವರೂ ಪ್ರಶ್ನಿಸುವವರು ಎಂದೂ, ಸನಂದನರು ಉತ್ತರಿಸುವವರು ಎಂದೂ ವ್ಯವಸ್ಥೆ ಮಾಡಿಕೊಂಡರು.

**ಸನಂದ :–** ಪ್ರಳಯದಲ್ಲಿ ಶ್ರೀನಾರಾಯಣನು ಶ್ರೀಭೂದುರ್ಗಾರೂಪಳಾದ ಲಕ್ಷ್ಮಿಯೊಡನೆ ಮಲಗಿ ಯೋಗನಿದ್ರೆಯನ್ನು ಮಾಡಿದನು. ಪ್ರಳಯಕಾಲದ ಎಂಟನೆಯ ಒಂದು ಭಾಗವು ಉಳಿದಿರುವಾಗ, ಶ್ರುತ್ಯಾಭಿಮಾನಿನಿಯಾದ ದುರ್ಗಾದೇವಿಯು ಉಷಃಕಾಲದಲ್ಲಿ ರಾಜನನ್ನು ಬಂದಿಗಳು ಎಚ್ಚರಿಸುವಂತೆ ಶ್ರೀಪರಮಾತ್ಮನನ್ನು ಸ್ತುತಿಸುವಳು :–

೧. ಶ್ರೀಹರಿಯೇ ! ನಿನ್ನ ಉತ್ಕರ್ಷವನ್ನು ಪ್ರಕಟಿಸು. ಜೀವರ ಸ್ವರೂಪಾನಂದಾದಿಗಳನ್ನು ಮರೆಮಾಡುವ ಅಜ್ಞಾನವನ್ನು ನಾಶಮಾಡು. ನೀನಾದರೋ ಸ್ವತಃ ಪೂರ್ಣಗಳಾದ ಐಶ್ವರ್ಯಾದಿ ಗುಣಗಳುಳ್ಳವನಾಗಿರುವೆ. ಶ್ರೀದೇವಿ ಮತ್ತು ಬ್ರಹ್ಮಾದಿ ಸರ್ವರಲ್ಲಿಯೂ ಅಂತರ್ಯಾಮಿಯಾಗಿ ಸರ್ವಶಕ್ತಿಯನ್ನೂ ಅಧಿಕಗೊಳಿಸುವುದರಿಂದ

ಚೇತನರು ಸ್ವತಂತ್ರರಲ್ಲವೆಂದು ತತ್ತ್ವನಿಶ್ಚಾಯಕವಾದ ವೇದರಾಶಿಯು ನಿನ್ನನ್ನೇ ಪ್ರತಿಪಾದಿಸುತ್ತದೆ.

೨. ದುರ್ಗಾದೇವಿಗಿಂತಲೂ ಉತ್ತಮನಾದುದರಿಂದ ನೀನೇ ಸರ್ವೋತ್ತಮನು ಎಂದು ವೇದದಲ್ಲಿ ವ್ಯಕ್ತವಾಗಿದೆ. ಈ ಕಾರಣದಿಂದಲೇ ಜ್ಞಾನಿಗಳೆಲ್ಲರೂ ನೀನೇ ಸರ್ವೋತ್ತಮನೆಂದು ಮನಸ್ಸಿನಲ್ಲಿ ಆಲೋಚಿಸಿ, ಮಾತಿನಿಂದ ಸ್ತುತಿಸಿ, ನಿನಗೆ ಪ್ರೀತಿಯಾಗುವಂತೆ ದೇಹದಿಂದ ಕರ್ಮವನ್ನು ಮಾಡುವರು. ಭೂಮಿಯ ಒಂದು ಭಾಗವನ್ನು ಸಂಚರಿಸಿದವನೂ ಸಮಗ್ರಭೂಸಂಚಾರಿಯೆನಿಸಿದಂತೆ ಹರಿಯು ಸರ್ವೋತ್ತಮನೆಂದು ತಿಳಿದವನೂ ಭಗವದ್‌ಜ್ಞಾನಿಯೆನಿಸುವನು.

೩. ನಿನ್ನ ಕಥಾಶ್ರವಣಮಾಡಿದವರೇ ಸಕಲಸಂತಾಪಗಳನ್ನೂ ಕಳೆದುಕೊಳ್ಳುವ ರೆಂದಮೇಲೆ ಮುಕ್ತರಾದವರು ತಾಪತ್ರಯಗಳನ್ನು ಸಂಪೂರ್ಣವಾಗಿ ಕಳೆದುಕೊಳ್ಳುವ ರೆಂದು ಹೇಳಬೇಕಾಗಿಯೇ ಇಲ್ಲ.

೪. ಬ್ರಹ್ಮಾದಿಗಳು ನಿನ್ನ ಅನುಗ್ರಹದಿಂದ ಬ್ರಹ್ಮಾಂಡವನ್ನೇ ಸೃಷ್ಟಿಸುವರು. ನಿನ್ನ ದ್ವೇಷಿಗಳಾದ ಜಗತ್ತು ಸುಳ್ಳು ಎಂದು ಬೊಗಳುವವರು ನಿತ್ಯನರಕದಲ್ಲಿ ಬಿದ್ದು ದುಃಖಿಸುವರು. ನಿನ್ನ ಸ್ವರೂಪವನ್ನು ಉಪದೇಶಮಾಡತಕ್ಕವರು ಸಾಯುಜ್ಯಾದಿ ಮುಕ್ತಿಯನ್ನು ಹೊಂದಿ ಸುಖಪಡುವರು.

೫. ಶಾರ್ಕರಾಕ್ಷನಾಮಕಋಷಿಗಳು ಉದರನಾಮಕ ಪರಬ್ರಹ್ಮನನ್ನೂ, ಆರುಣಿ ನಾಮಕ ಋಷಿಗಳು ಹೃದಯನಾಮಕ ಪರಬ್ರಹ್ಮನನ್ನೂ, ಮಾಂಡೂಕೇಯಾದಿ ಋಷಿಗಳು ಅತಿಸೂಕ್ಷ್ಮನಾದ ಪರಬ್ರಹ್ಮನನ್ನೂ ಉಪಾಸಿಸುವರು. ಸರ್ವರೂ ಹೃದಯಾದಿಗಳಲ್ಲಿರುವ ಪರಬ್ರಹ್ಮನನ್ನು ಉಪಾಸಿಸಿ, ಆತನ ಸಾಮೀಪ್ಯವನ್ನು ಹೊಂದಿ ತಿರುಗಿ ಸಂಸಾರಕ್ಕೆ ಬರುವುದೇ ಇಲ್ಲ.

೬. ನೀನೇ ಜಗತ್ಸ್ರಷ್ಟ್ರ್ಯಾದಿಗಳಿಗೆ ಕಾರಣನೆಂದು ಮುಖ್ಯಪ್ರಾಣದೇವರು ತಿಳಿದಿರುವರು. ಅಜ್ಞಾನಿಗಳು ಹಾಗೆ ತಿಳಿದೇ ಇಲ್ಲ. ಅವರು ಶರೀರದಲ್ಲಿ ದೇವರು ಇರುವುದರಿಂದ ಅವನು ಜೀವರಂತೆ ದುಃಖಾದಿಗಳನ್ನುಳ್ಳವನೆಂದೇ ತಿಳಿಯುತ್ತಾರೆ.

೭. ಪೂಜ್ಯನೂ ನೀನೇ ಪೂಜಕನೂ ನೀನೇ. ಬ್ರಹ್ಮಾದಿಗಳು ದುರ್ಜನರಲ್ಲಿದ್ದು ಮಾಡಿಸುವ ಪಾಪಾಚರಣೆಯೂ ನಿನ್ನ ಪೂಜೆಯೆನಿಸುತ್ತದೆ. ನೀನು ಮಾಡುವ ಸರ್ವವ್ಯಾಪಾರಗಳನ್ನೂ ಸ್ವತಂತ್ರನಾಗಿಯೇ ಮಾಡುವೆಯೆಂದು ಜ್ಞಾನಿಗಳು ಹೇಳುತ್ತಾರೆ.

೮. ರಮಾದಿಗಳಿಗೂ ದುರ್ಜ್ಞೇಯವಾದ ಸ್ವರೂಪವುಳ್ಳವನು ನೀನು. ವಿರಕ್ತರಾದವರು ಸಾಂಸಾರಿಕ ದುಃಖವನ್ನು ನೋಡಿ, ಜ್ಞಾನಪೂರ್ವಕವಾಗಿ ವೇದ ಪ್ರತಿಪಾದ್ಯನಾದ ನಿನ್ನನ್ನು ಯಜ್ಞಾದಿಗಳಿಂದ ಪೂಜಿಸಿ, ಉಪಾಸಿಸಿ, ಧ್ಯಾನಿಸುವರು.

೯. ಸತಿಸುತಾದಿಗಳಲ್ಲಿ ಮಮತೆಯನ್ನು ಬಿಟ್ಟಿರುವ ಏಕಾಂತಭಕ್ತರು ನಿನ್ನಿಂದ ಮೋಕ್ಷವನ್ನೇ ಬಯಸುವುದಿಲ್ಲ. ಅವರು ಬಯಸುವುದು ಭಕ್ತರಸಂಗದಿಂದ ದೊರೆಯುವ ಸುಖವನ್ನು ಮಾತ್ರ. ತಮ್ಮ ದೇಹವು ಹರಿಪ್ರಾಪ್ತಿಗೆ ಅನುಕೂಲವಾಗಿರುವುದರಿಂದ ಅದನ್ನು ಸ್ವರೂಪದ, ಜ್ಞಾನಮಯವಾದ ಶರೀರದಂತೆ ನೋಡುವವರು ನಿನ್ನ ಆರಾಧನೆಯಲ್ಲಿಯೇ ಆಸಕ್ತರಾಗುವರು.

೧೦. "ಅಹಂ ಬ್ರಹ್ಮಾಸ್ಮಿ"—ನಾನೇ ದೇವರು ಇತ್ಯಾದಿ ಉಪಾಸನೆಯಿಂದ ಪರಮಾತ್ಮನ ಸ್ವರೂಪವನ್ನು ತಿರಸ್ಕರಿಸುವ ಭಗವದ್ವೇಷಿಗಳು ನಿತ್ಯ ನರಕದಲ್ಲಿ ಉರುಳಿ ಶಾಶ್ವತವಾದ ದುಃಖವನ್ನು ಅನುಭವಿಸುವರು. ಅವರು ಮಾತ್ರವೇ ಅಲ್ಲ. ಹರಿಯ ಭಕ್ತರನ್ನು ದ್ವೇಷಿಸುವವರೂ ನಿತ್ಯದುಃಖರೂಪವಾದ ತಮಸ್ಸನ್ನೇ ಹೊಂದುವರು.

೧೧. ವೇದಾಭಿಮಾನಿಗಳಾದ ನಾವೂ, ವೇದಗಳೂ ನಿನ್ನ ಮಹಿಮೆಯನ್ನು ಸಂಪೂರ್ಣವಾಗಿ ತಿಳಿಯಲಾರೆವು. ಆದ್ದರಿಂದ **ಅಸಮದರ್ಶಿಗಳು** ಎನಿಸುವೆವು. ಹಾಗಿದ್ದರೂ ನೀನು ವೇದಗಳಿಂದಲೇ ತಿಳಿಯಲ್ಪಡುವವನು. ಆದ್ದರಿಂದ ವೇದಗಳು ಸಮದರ್ಶಿಗಳೆನಿಸುವುವು. ಬ್ರಹ್ಮಾದಿಗಳು ಯಾರೂ ನಿನ್ನನ್ನು ಪೂರ್ಣವಾಗಿ ತಿಳಿಯಲಾರರು ಎಂದು ಹೇಳಿರುವುದರಿಂದ ನಿನ್ನ ಸ್ವರೂಪವನ್ನು ಪೂರ್ಣವಾಗಿ ತಿಳಿದವನು ನೀನೊಬ್ಬನೇ.

೧೨. ಪ್ರಳಯಕಾಲದಲ್ಲಿ ನೀನೊಬ್ಬನು ಹೊರತು ಯಾವುದೂ ಇಲ್ಲವೆಂದು ಉಪನಿಷತ್ತುಗಳು ಹೇಳುವ ಅಭಿಪ್ರಾಯವೇನೆಂದರೆ ಜೀವ, ಕಾಲ ಮೊದಲಾದುವು ಇದ್ದರೂ ಅವು ಯಾವುವೂ ಸ್ವತಂತ್ರಗಳಾಗಿರಲಿಲ್ಲ. ಸ್ವತಂತ್ರನಾದವನು ನೀನೊಬ್ಬನೇ ಇದ್ದವನು. ಸೃಷ್ಟಿಕಾಲದಲ್ಲಿ ವಾಯುದೇವರ ಅನುಗ್ರಹದಿಂದ ನಿನ್ನ ಸೃಷ್ಟ್ಯಾದಿ ವ್ಯಾಪಾರಗಳನ್ನು ಯಥಾಯೋಗ್ಯವಾಗಿ ತಿಳಿದುಕೊಂಡು ಜ್ಞಾನಿಗಳು ನಿಷ್ಕಾಮವಾಗಿ ಯಜ್ಞಾದಿಗಳನ್ನು ಮಾಡುತ್ತಾರೆ. ಅಂತಹ ಜ್ಞಾನಿಗಳು ಉಪದೇಶಿಸಿದಾಗಲೇ ನಿನ್ನ ಮಹಿಮೆಯನ್ನು ತಿಳಿಯಲು ಸಾಧ್ಯವಾಗುವುದು.

೧೩. ನೀನು ತ್ರಿಗುಣಬದ್ಧನಲ್ಲದಿದ್ದರೂ ಗುಣಮಯದೇಹವು ನಿನ್ನ ರೂಪಗಳಿಗಿವೆ ಎಂದು ತಮೋಯೋಗ್ಯರು ತಿಳಿಯುವರು. ಆದರೆ ದೇವತೆಗಳಾದರೋ 'ನೀನೇ ಪರಮಾನಂದಸ್ವರೂಪಿಯು. ನಿನ್ನಿಂದ ಭಿನ್ನರಾದ ಸರ್ವಜೀವರೂ ದುಃಖವುಳ್ಳವರೇಸರಿ" ಎಂದೇ ತಿಳಿಯುವರು.

೧೪. ಬಂಗಾರಕ್ಕೂ ಅದರ ಒಡವೆಗಳಿಗೂ ಹೇಗೆ ಭೇದವಿಲ್ಲವೋ ಹಾಗೆಯೇ ನಿನ್ನ ಮೂಲರೂಪ ಅವತಾರರೂಪಗಳಿಗೆ ಕೊಂಚವೂ ಭೇದವಿಲ್ಲ. ಆದ್ದರಿಂದ ನಿನ್ನನ್ನು **ಸ್ವಗತಭೇದರಹಿತನೆಂದೂ,** ಸರ್ವತ್ರ ವ್ಯಾಪ್ತನಾದುದರಿಂದ ವಿಷ್ಣು ನಾಮಕನೆಂದೂ ಯೋಗ್ಯರು ತಿಳಿದು ನಿನ್ನನ್ನು ಸಾಕ್ಷಾತ್ಕರಿಸಿ, ಸಂಸಾರದ ತಲೆಮೆಟ್ಟಿ ವೈಕುಂಠಕ್ಕೆ ಹೋಗುವರು.

೧೫. ಪಶುಪಾಲಕನು ಎತ್ತುಗಳಿಗೆ ಮೂಗುದಾರ ಹಾಕಿ ಅದನ್ನು ದೊಡ್ಡ ಹಗ್ಗದಿಂದ ಬಂಧಿಸುವಂತೆ ನೀನು ದೇವತೆಗಳನ್ನು ವೇದಗಳಲ್ಲಿರತಕ್ಕ ಇಂದ್ರ, ಚಂದ್ರ, ಅಗ್ನಿ ಮುಂತಾದ ನಾಮಗಳೆಂಬ ಮೂಗುಧಾರದಿಂದ ಬಂಧಿಸಿ, ವೇದೋಕ್ತ ಕರ್ಮ ಗಳೆಂಬ ದೊಡ್ಡ ಹಗ್ಗದಿಂದ ಕಟ್ಟಿ, ಅವರು ವೇದೋಕ್ತ ಕರ್ಮಗಳನ್ನು ಮಾಡುವಂತೆ ಕಟ್ಟುಪಾಡು ಮಾಡಿರುವೆ. ಈ ಜಗತ್ತನ್ನು ಪಾವನಮಾಡಬಲ್ಲವರು ನಿನ್ನ ಭಕ್ತರು ಮಾತ್ರವೇ. ನಿನ್ನ ದ್ವೇಷಿಗಳಾದರೋ ಜಗತ್ತನ್ನು ಹಿಂಸಿಸುವರು. ಸ್ವತಂತ್ರನೆಂದರೆ ನೀನೊಬ್ಬನೇ. ಆದುದರಿಂದಲೇ ದೇವತೆಗಳೇ ಮೊದಲಾದವರು ನಿನ್ನನ್ನೇ ಪೂಜಿ ಸುತ್ತ ಸುಖಿಗಳಾಗಿರುವರು.

೧೬. ನೀನೇ ಭವಪಾಶಬಂಧಕನಾದ್ದರಿಂದ ಅಜ್ಞಾನವನ್ನು ತಂದಿಡುವವನೂ ನೀನೇ. ಮೋಕ್ಷಪ್ರದನಾದುದರಿಂದ ಜ್ಞಾನಪ್ರದನೂ ನೀನೇ ಆಗಿರುವೆ. ಅಧಿಕಾ ರಿಯು ಹೀಗೆ ತಿಳಿದು ಯೋಗ್ಯರಾದ ಇತರರಿಗೂ ಹೀಗೆಯೇ ವಿವರಿಸಿ ತಿಳಿಸಬೇಕು.

೧೭. ವಾಯುದೇವರು ಜೀವರಲ್ಲಿ ದತ್ತವಾದ ಸ್ವಾತಂತ್ರ್ಯವುಳ್ಳವರು. ಆದರೆ ಅವರಾಗಲಿ, ಲಕ್ಷ್ಮೀದೇವಿಯಾಗಲೀ ನಿನ್ನಂತೆ ಸ್ವತಂತ್ರರಲ್ಲ. ಇದಕ್ಕೆ ಆಧಾರ :– "ಏಕಮೇವಾದ್ವಿತೀಯಂ ಬ್ರಹ್ಮ" ಇತ್ಯಾದಿ ಶ್ರುತಿಗಳು ಹರಿಯಲ್ಲಿರತಕ್ಕ ಗುಣ. ಕ್ರಿಯೆ ಮೊದಲಾದುವುಗಳಿಗೆ ಭೇದವಿಲ್ಲವೆಂದೂ, ಅನ್ಯರು ಯಾರೂ ಸ್ವತಂತ್ರ ರಿಲ್ಲವೆಂದೂ ಶ್ರುತಿಗಳು ನಿಷೇಧಿಸುತ್ತಿವೆ. ಅಷ್ಟೇ ಹೊರತು ಅಯೋಗ್ಯರು ಹೇಳುವಂತೆ ನಿಯಮ್ಯರಾದ ಜೀವರೇ ಇಲ್ಲವೆಂದು ಹೇಳುವುದಿಲ್ಲ.

೧೮. ಪ್ರಕೃತಿನಾಮಕ ಲಕ್ಷ್ಮಿ ಮತ್ತು ಪುರುಷನಾಮಕ ನಾರಾಯಣ ಇವ ರಿಬ್ಬರು ಮಾತ್ರವೇ ನಿತ್ಯಮುಕ್ತ ಸ್ವರೂಪರು. ಈ ಪ್ರಕೃತಿ ಪುರುಷರಿಂದಲೇ ಎಲ್ಲರೂ ಹುಟ್ಟುತ್ತಾರೆ. ಪರಾಪರತತ್ತ್ವಜ್ಞಾನಿಯಾದವನೇ ಆಚಾರ್ಯ. ಇನ್ನಾರೂ ಅಲ್ಲ. ಅಂತಹ ಆಚಾರ್ಯನಿಂದ ಉಪದೇಶ ಹೊಂದಿದವನೇ ಮುಕ್ತನಾಗತಕ್ಕವನು.

೧೯. (ತತ+ಅ+ಓ ತತೋ)ತತ – ಪಿತನೇ! ಅ – ಆನಂದ ಪೂರ್ಣನೇ! ಓ – ಉತ್ಕೃಷ್ಟ ರೂಪನೇ! ಮಕರಂದವೆಂಬ ಸಮುದ್ರದಲ್ಲಿ ಪುಷ್ಪರಸಗಳು ಅಡಗಿರುವಂತೆ ಇಂದ್ರಾದಿ ನಾಮಗಳ ಅರ್ಥಗಳಾದ ಐಶ್ವರ್ಯಾದಿ ಗುಣಗಳು ನಿನ್ನಲ್ಲಿ ಅಡಗಿವೆ. ಹೇಗೆ ನೀನು

ಪೂರ್ಣಗುಣನಾದುದರಿಂದಲೇ ಜ್ಞಾನಿಗಳು ನಿನ್ನ ಕಥಾಶ್ರವಣಮಾಡಲು ಅವಕಾಶ ವಾಯಿತು. ನಿನ್ನ ಕಥಾಶ್ರವಣಮಾಡುವುದರಿಂದ ಪಂಚಭೇದ ತಾರತಮ್ಯ ಜ್ಞಾನ ವನ್ನು ಹೊಂದಲು ಶಕ್ತರಾದರು. ಭೇದಜ್ಞಾನದ ಫಲವೇನೆಂದರೆ ಜೀವರು ಬೇರೆ, ಈಶನು ಬೇರೆ ಎಂಬ ಭೇದಜ್ಞಾನದಿಂದ ಸಂಸಾರವನ್ನು ಪರಿಹರಿಸಿ ಕೊಳ್ಳುವ ಶಕ್ತಿಯು ಬರುವುದು.

೨೦. ೨೧. ಗುರುಪ್ರಸಾದವು ಪ್ರಬಲವಾದುದು ಗುರುವಿನ ಅನುಗ್ರಹವಿಲ್ಲದೆ, ಇಂದ್ರಿಯಗಳನ್ನು ಜಯಿಸಿ ಶ್ರವಣಾದಿಗಳನ್ನು ಮಾಡಿದರೂ ಹರಿಯು ಪ್ರೀತನಾಗು ವುದಿಲ್ಲ. ನಾವಿಕರಿಲ್ಲದ ನಾವೆಯೊಳಗೆ ಕುಳಿತು ವ್ಯಾಪಾರಿಗಳು ಸಮುದ್ರದಲ್ಲಿ ಮುಳುಗಿ ದುಃಖಪಡುವಂತೆ ನಿತ್ಯನರಕದಲ್ಲಿ ಬೀಳುವರು. ಗುರುಪ್ರಸಾದವಿಲ್ಲದಿದ್ದರೆ ಮೋಕ್ಷ ವಿಲ್ಲ. "ಗುರುವಿನಪಾದಗಳನ್ನು ಸೇವಿಸಿ, ಅವರ ಪ್ರಸಾದಸಂಪಾದಿಸಿದವನಿಗೇ ಮುಕ್ತಿ ಯು ದೊರೆಯುವುದು.

## ೨೨. ಜೀವರು ಎಂದಿಗೂ ಪರಬ್ರಹ್ಮರಾಗುವುದಿಲ್ಲ

ಅಯೋಗ್ಯರಿಗೆ ದುರ್ಗತಿಯಾಗಲೆಂದೇ ಶ್ರೀಹರಿಯು "ನಾನೇ ಪರಬ್ರಹ್ಮಸ್ವ ರೂಪನು" ಎಂಬುದಾಗಿ ಪ್ರೇರಿಸುವನು. ಆದರಿಂದಲೇ ಆ ಅಯೋಗ್ಯರು "ಜೀವನೇ ಈಶ್ವರನು. ಜೀವನ ಹೊರತು ಜಗತ್ತಿಗೆ ಇನ್ನೊಬ್ಬ ರಕ್ಷಕನಿಲ್ಲ " ಎಂದು ಹೇಳುತ್ತಾರೆ. ಅದು ಸರಿಯಾದ ಮಾತಲ್ಲ. ಏಕೆಂದರೆ ಕೇವಲ ತರ್ಕಗಳಿಂದ ಅಂದರೆ ಊಹಾಪೋಹಗ ಳಿಂದ **ವೇದಶ್ರುತಿಸಾಧ್ಯನಾದ ಹರಿಯೇ ಈಶ್ವರನು** ಎಂಬುದನ್ನ ಅಲ್ಲಗಳೆಯಲು ಸಾಧ್ಯವೇ ಇಲ್ಲ. ಸ್ವತಂತ್ರಗಳಾದ ಊಹಾಪೋಹಗಳು ವ್ಯಭಿಚಾರಿಗಳೂ, ಅನುಭವಾದಿ ಗಳಿಗೆ ಕೇವಲ ವಿರುದ್ಧಗಳೂ ಆಗಿವೆ. ಆದ್ದರಿಂದ ಜೀವನೇ ಬ್ರಹ್ಮ' ಇತ್ಯಾದಿ ಪ್ರತಿ ಪಾದಕಕುತರ್ಕಗಳು ಅಂಧಪರಂಪರೆಯಿಂದಲೇ ಲೋಕದಲ್ಲಿ ಹರಡಿದೆ. ಶ್ರೀಹರಿಗೆ ಅನಂತಾನಂತಗುಣಗಳು ಇವೆ ಎಂಬುದರಲ್ಲಿಯೇ ವೇದಗಳಿಗೆ ಮುಖ್ಯ ತಾತ್ಪರ್ಯ. ಆದ್ದರಿಂದಲೇ ದಾಸರು ಹೀಗೆ ಹೇಳುತ್ತಾರೆ :-

### ಧ್ರುವತಾಳ

ಸರ್ವಜ್ಞಹರಿಗೆ ಅಸರ್ವಜ್ಞತೆಯನು ! ಸಾಕಾರ ಹರಿಗೆ ನಿರಾಕಾರತೆಯನು
ನಿತ್ಯಮುಕ್ತನಿಗೆ ಸಂಸಾರ ಬಂಧನವನು ! ನಿತ್ಯ ತೃಪ್ತನಿಗೆ ದುಷ್ಕೃತ ಭೋಗವನು
ಅಪ್ರಮಾಣವೆಂದು ಅರಿತೂ ಕಲ್ಪಿಸಿದೆಯೊ ! ಆವ ಶ್ವಪಚ ಬೋಧಿಸಿದನೋ ನಿನಗೆ
ನಿತ್ಯ ತೃಪ್ತನು ನಿತ್ಯಸುಖಿಯೆಂದು ಶ್ರೀವಿಷ್ಣು ! ಸರ್ವೋತ್ತಮ ಸಾಕಾರನೆಂದು ಶ್ರುತಿ ಸಾರುತಲಿದೆ
ಚತುರ್ಮುಖಾದಿ ದೇವರು ನಿನ್ನ ಮೆಚ್ಚರೊ! ಚಿತ್ತಕಲುಷವ ಬಿಟ್ಟು ಭಕ್ತನಾಗೊ ಬೇಗ

ಗುರುಮಧ್ವಪತಿ ವಿಟ್ಠಲ ನಿಮಗೊಲಿವನಯ್ಯ ||೧||

ಜತೆ|| ಹರಿಯೇ ಸರ್ವೋತ್ತಮ ಹರಿಯೇ ಪರದೈವ
ಹರಿಯೇ ಗುರುಮಧ್ವಪತಿ ವಿಟ್ಠಲ ||೭||

೨೩. ೨೪. ಜೀವರಿಗೆ ಗರ್ಭಾವಸ್ಥೆಯಲ್ಲಿ ದುಃಖವಿರುವ ಪ್ರಯುಕ್ತ ಈಶ್ವರತ್ವವಿಲ್ಲ. ಸತ್ತ ಮೇಲೆ ನರಕದುಃಖವಿರುವಪ್ರಯುಕ್ತ ಈಶ್ವರತ್ವವಿಲ್ಲ. ಹೀಗೆ ಹಿಂದೆ ಮುಂದೆ ಇಲ್ಲದಿರುವ ಈಶ್ವರತ್ವ ಮಧ್ಯೆ ಸ್ಥಿತಿಕಾಲದಲ್ಲಿ ಎಲ್ಲಿಂದ ಬಂದೀತು ? ಆದ್ದರಿಂದ ಅವಿದ್ಯೆಯಿಂದ ಆವೃತರಾದ ಸಮಸ್ತಜೀವರೂ ಈಶ್ವರರು ಎಂದ ತೋರುವುದು ಮಿಥ್ಯೆಯೇ. ಆದ್ದರಿಂದ ಜೀವಬ್ರಹ್ಮರು ಒಂದೇ ಎಂಬುದನ್ನು ಮಿಥ್ಯೆಯೆಂದೇ ತಿಳಿಯುತ್ತಾರೆ.

೨೫. ಶ್ರೀಹರಿಯೆ ! ಶ್ರುತಿಗಳಲ್ಲಿ ನಿನ್ನನ್ನು ಸ್ವತಂತ್ರನೆಂದೂ, ಪೂಜ್ಯ ಪೂಜಕನೆಂದೂ, ಸರ್ವೋತ್ತಮನೆಂದೂ ಹೇಳುತ್ತಿವೆ. ಅಂತಹ ನಿನ್ನ ಗುಣಗಳನ್ನೂ ಮತ್ತು ಕರ್ಮಗಳನ್ನೂ ಧ್ಯಾನಿಸುವವನು ಈ ಸಂಸಾರದಿಂದ ಮುಕ್ತನಾಗುವನು. ಜೀವನು ಪರಮಾತ್ಮನ ಸಮೀಪದಲ್ಲಿದ್ದರೂ ಮರೆಮಾಡಿರುವ ಸ್ವಗುಣಾಚ್ಛಾದಿಕಾ ಮತ್ತು ಪರಮಾಚ್ಛಾದಿಕಾ ಎಂಬ ಹೆಸರಿನ ಎರಡು ಪರದೆಗಳಿವೆ. ದೇವ ! ನಿನ್ನ ಗುಣಕರ್ಮಗಳನ್ನೇ ಧ್ಯಾನಿಸಿದರೆ ಆ ಪರದೆಗಳಲ್ಲಿ ಒಂದಾದ ಸ್ವಗುಣಾಚ್ಛಾದಿಕೆ ಎಂಬುದನ್ನು ನೀನೆ ನಾಶಮಾಡಿ, ಪರಮಾಚ್ಛಾದಿಕೆ ಎಂಬ ಪರದೆಯನ್ನು ಸರಿಗಿಸುವೆ. ಬಳಿಕ ನಿನ್ನ ಅನುಗ್ರಹದಿಂದ ಆ ಪರಮಾಚ್ಛಾದಿಕೆಯೂ ಹೋಗಿ ಸಾರೂಪ್ಯ, ಸಾಮೀಪ್ಯ, ಸಾಲೋಕ್ಯ ಮತ್ತು ಸಾಯುಜ್ಯವೆಂಬ ಮುಕ್ತಿಗಳಲ್ಲಿ ಅವರವರ ಯೋಗ್ಯತೆಯನ್ನು ಅನುಸರಿಸಿ ಆಯಾ ಮುಕ್ತಿಯನ್ನು ಹೊಂದುತ್ತಾರೆ.

೨೬. ಹರಿಯ ಜ್ಞಾನವಾಗದವರು ಹರಿಯನ್ನು ತಿಳಿಯಲಾರರು. ಆದುದರಿಂದ ಜ್ಞಾನಿಗಳಿಗೇ ಹರಿಯು ಮುಕ್ತಿಯನ್ನು ಕೊಡುವನು.

೨೭. ಬ್ರಹ್ಮದೇವರಿಂದ ಪರಂಪರೆಯಾಗಿ ಉಪದೇಶವನ್ನು ಹೊಂದದೇ ಇರುವವರ ಶ್ರೋತ್ರಾದಿ ಇಂದ್ರಿಯಗಳು ಶ್ರೀದೇವಿಯ ಮತ್ತು ಹರಿಯ ಜ್ಞಾನವನ್ನು ಹುಟ್ಟಿಸಲಾರವು. ಆ ಉಪದೇಶವನ್ನು ಹೊಂದಿದವರಿಗೆ ಮಾತ್ರವೇ ಇಂದ್ರಿಯಗಳು ಜ್ಞಾನವನ್ನು ಹುಟ್ಟಿಸಬಲ್ಲವು. ನಿತ್ಯಸಂಸಾರಿಗಳಿಗೂ. ಅಸುರರಿಗೂ ಅರ್ಥಜ್ಞಾನವನ್ನು ಹುಟ್ಟಿಸುವುದಿಲ್ಲ. ಮುಕ್ತಿಯೋಗ್ಯರಿಗೆ ಮೋಕ್ಷಪ್ರದಗಳಾಗುತ್ತವೆ. ವೇದಗಳು ಅಸುರರಿಗೆ ಮಿಥ್ಯಾಜ್ಞಾನವನ್ನು ಹುಟ್ಟಿಸಿ ಅನರ್ಥಫಲಗಳನ್ನು ಕೊಡುವುವು. ಅವೇ ಶ್ರುತಿಗಳು ನಿತ್ಯಸಂಸಾರಿಗಳಿಗೆ ಸಂಶಯಾದಿಗಳನ್ನು ಹುಟ್ಟಿಸಿ ಮಿಶ್ರಫಲಪ್ರದಗಳಾಗುವುವು.

**ಬದರಿನಾರಾಯಣ :-** ನಾರದನೇ ! ಸನಕಾದಿ ಮೂವರೂ ಶ್ರುತಿಗಳಲ್ಲಿ ಹೇಳಿರುವ ಶ್ರೀಹರಿಯ ಮಹಿಮೆಯನ್ನು ಕೇಳಿ, ಅವನ ಸ್ವರೂಪಸ್ಥಿತಿಯನ್ನು ತಿಳಿದು ಸನಂದನನನ್ನು ಪೂಜಿಸಿದರು. ಹೀಗೆ ಶ್ರೇಷ್ಠರಾದ ಅವರು ಸರ್ವವೇದೋಪನಿಷತ್ಪುರಾಣಗಳ ಸಾರವನ್ನು ಉದ್ಧರಿಸಿರುವರು. ನಾರದನೇ ! ನೀನೂ ನನ್ನ ಉಪದೇಶದಂತೆ ಶ್ರದ್ಧೆಯಿಂದ ಪರಮಾತ್ಮನನ್ನು ಭಜಿಸು.

**ನಾರದ :-** ಸರ್ವರ ಧಾರಣ ಪೋಷಣ ಕರ್ತನಾದ ಬಿಂಬರೂಪೀ ಶ್ರೀಕೃಷ್ಣನಿಗೆ ನಮಸ್ಕಾರ !

**ಶುಕ :-** ನಾರದರು ಬದರಿನಾರಾಯಣನಿಗೆ ನಮಸ್ಕರಿಸಿ ದೊಡ್ಡ ಬದರಿಗೆ ಹೋಗಿ ಶ್ರೀವೇದವ್ಯಾಸದೇವರಿಗೆ ನಾರಾಯಣನಿಂದ ತಾವು ಕೇಳಿದುದೆಲ್ಲವನ್ನೂ ನಿವೇದಿಸಿದರು. ಪರಿಕ್ಷೀದ್ರಾಜನೇ ! ಪರಬ್ರಹ್ಮನಲ್ಲಿ ಮನಸ್ಸು ಸ್ಥಿರವಾಗಿ ನಿಲ್ಲುವ ಹಾಗೆ ನಿನ್ನ ಪ್ರಶ್ನೆಗೆ ಸರಿಯಾಗಿ ಪರಿಹಾರವನ್ನು ಹೇಳಿರುವೆನು (ಹರಿಯನ್ನು ಸ್ಮರಿಸುತ್ತಾರೆ :-)

ಶ್ಲೋಕ ||

**ಯೋ ಹ್ಯಾತ್ಮಾ ಜಗದಾದಿಮಧ್ಯನಿಧನೋ ಯೋಽವ್ಯಕ್ತ ಜೀವೇಶ್ವರೋ**
**ಯಃಸೃಷ್ಟ್ವೇದಮನುಪ್ರವಿಷ್ಟ ಋಷಿಣಾ ಚಕ್ರೇ ಪುನಃಸಂಹಿತಾಂ ।**
**ಯಂ ಸಂಪದ್ಯ ಜಹಾತ್ಯಜಾಂ ಅನುಶಯೀ ಸುಪ್ತಃ ಕುಲಾಯಂ ತಥಾ**
**ತಂ ಕೈವಲ್ಯ ನಿರಸ್ತಯೋನಿಮಭಯಂ ಧ್ಯಾಯೇದಜಸ್ರಂ ಹರಿಂ ||**

ಅರ್ಥ :- ಶ್ರೀಪರಮಾತ್ಮನು ಜಗತ್ತಿನ ಸೃಷ್ಟಿಸ್ಥಿತಿಸಂಹಾರ ಕರ್ತನು. ಪ್ರಕೃತಿಗೂ, ಚೇತನರಿಗೂ ನಿಯಾಮಕನು. ಜಗತ್ತನ್ನು ಸೃಷ್ಟಿಸಿ ಅದರೊಳಗೆ ಪ್ರವೇಶಿಸಿರುವನು. ವ್ಯಾಸಾದಿಜ್ಞಾನರೂಪದಿಂದ ಶ್ರೀಹರಿಯು ಪುರಾಣಸಂಹಿತೆಗಳನು ರಚಿಸಿರುವನು. ಅನುಶಯೀ ಅಂದರೆ ಜೀವನು ಅಪರೋಕ್ಷಜ್ಞಾನದಿಂದ ಪರಮಾತ್ಮನನ್ನು ಹೊಂದಿ, ಮಲಗಿ ನಿದ್ರಿಸುತ್ತಿರುವ ಮನುಷ್ಯನು, ಕುಲಾಯಂ ಅಂದರೆ ಶರೀರಾದಿಗಳಲ್ಲಿನ ಅಭಿಮಾನವನ್ನು ಬಿಟ್ಟಿರುವಂತೆ ಎರಡು ಬಗೆಯ ಪ್ರಕೃತಿಯನ್ನೂ ಬಿಡುವನು. ಸರ್ವೋತ್ತಮತ್ವಾದಿ ಮಹಾಮಹಿಮೆಯಿಂದಲೇ ತನಗೆ ಮೂಲಕಾರಣವಿಲ್ಲದಂತೆ ಮಾಡಿಕೊಂಡಿರುವವನೂ, ಉತ್ಪತ್ತಿರಹಿತನೂ ಮತ್ತು ಭಯನಿವಾರಕನೂ ಆದ ಶ್ರೀಹರಿಯನ್ನು ಯಾವಾಗಲೂ ಭಜಿಸುತ್ತಿರಬೇಕು.

**ತೊಂಭತ್ತುನಾಲ್ಕನೆಯ ಅಧ್ಯಾಯ ಮುಗಿದುದು**

ಶ್ರೀಕೃಷ್ಣನು ಮಿಥಿಲೆಗೆ ಹೋಗಿ ಶ್ರುತದೇವನನ್ನು ಸಂತೋಷಪಡಿಸಿ ದ್ವಾರಕೆಗೆ ಬಂದಾಗ, ಪಾಂಡವರು ವನವಾಸ ಮತ್ತು ಅಜ್ಞಾತವಾಸಗಳನ್ನು ಮುಗಿಸಿ ಉಪ ಪ್ಲಾವ್ಯದಲ್ಲಿರುವುದನ್ನು ಕೇಳಿ, ಮಹಾಸೇನೆಯಿಂದೊಡಗೂಡಿ ಅಲ್ಲಿಗೆ ಹೋದನು. ಕಲಹ ನಿವೃತ್ತಿ ಮಾಡಿ ಸಂಧಿ ಮಾಡಬೇಕೆಂದು ಶ್ರೀಕೃಷ್ಣನು ದುರ್ಯೋಧನಾದಿ ಗಳಿದ್ದಲ್ಲಿಗೆ ಹೋದನು. ಅವರು ಸಭೆಯಲ್ಲಿದ್ದ ಸ್ವಾಮಿಯನ್ನು ಕಟ್ಟಿಹಾಕಲು ಹೊರಟರು. ದೇವನು ಯೋಗ್ಯರಿಗೆ ವಿಶ್ವರೂಪವನ್ನು ತೋರಿಸಿ ಅಯೋಗ್ಯರಿಗೆ ಭಯವನ್ನು ಹುಟ್ಟಿಸಿ ಬಂದನು. ಕೌರವರು ಹನ್ನೊಂದು ಅಕ್ಷೌಹಿಣೀ ಸೇನಾ ಸಮೇತರಾಗಿ ಕುರುಕ್ಷೇತ್ರಕ್ಕೆ ಬಂದರು. ಶ್ರೀಕೃಷ್ಣನ ಸಹಾಯದಿಂದ ಏಳು ಅಕ್ಷೌಹಿಣೀ ಸೇನಾಸಮೇತರಾಗಿ ಅಲ್ಲಿಗೆ ಬಂದರು. ಹದಿನೇಳುವರೆ ದಿನಗಳು ಯುದ್ಧವು ನಡೆದು ಭೀಮ ಮತ್ತು ದುರ್ಯೋಧನನ ಕೋಪದಿಂದ ಹದಿನೆಂಟು ಅಕ್ಷೌಹಿಣೀ ಸೈನ್ಯಗಳೂ ಹತವಾದುವು.

### ತೊಂಭತ್ತೈದನೆಯ ಅಧ್ಯಾಯ ಮುಗಿದುದು

**ಪರೀಕ್ಷಿತ್ :–** **ಅಷ್ಟಾದಶಾ ಕ್ಷೌಹಿಣೀನಾಂ ತಾವದ್ಭಿರ್ಮಾಯಯಾ ದಿನೈಃ।**
**ವ್ಯಾಪಾದನಂ ಯೇನ ಕೃತಂ ತಸ್ಮೈ ವಿಶ್ವಾತ್ಮನೇ ನಮಃ ॥**

ಯಾವಾತನ ಇಚ್ಛೆಯಿಂದ ಹದಿನೆಂಟು ಅಕ್ಷೌಹಿಣೀ ಸೇನೆಗಳು ಅಷ್ಟೇ ಸಂಖ್ಯೆಯ ದಿನಗಳಲ್ಲಿ ಯಾವನಿಂದ ನಾಶವಾದುವೋ ಅಂತಹ ವಿಶ್ವಾಂತರ್ಯಾ ಮಿಯೂ, ವಿಶ್ವನಾಥನೂ ಆದ ದೇವನಿಗೆ ನಮಸ್ಕಾರ !

ಶುಕಾಚಾರ್ಯರೇ ! ಬಲರಾಮದೇವರು ತಮ್ಮವರೇ ಆದ ಕೌರವ ಪಾಂಡವ ರನ್ನು ಯುದ್ಧಮಾಡದಂತೆ ತಡೆಯಲು ಆಗದೆ ತೀರ್ಥಯಾತ್ರೆಗೆ ಹೊರಟು ಏನು ಮಾಡಿದನು ?

**ಶುಕ :–** ಬಲರಾಮನು ಯುದ್ಧವನ್ನು ನಿಲ್ಲಿಸಲು ಶಕ್ತನಾಗದೆ ತೀರ್ಥಾಟನೆ ಮಾಡುತ್ತ ನೈಮಿಷ ಕ್ಷೇತ್ರಕ್ಕೆ ಬಂದನು. ಶೌನಕಾದಿಗಳು ಅವನಿಗೆ ನಮಿಸಿ ಸತ್ಕಾರ ಗಳನ್ನು ಮಾಡಿದರು. ರೋಮಹರ್ಷಣನು ಪುರಾಣವನ್ನು ಹೇಳುತ್ತಾ ಇದ್ದುದರಿಂದ ಬಲರಾಮನು ಬಂದರೂ ಏಳದೆ, ಸತ್ಕರಿಸದೇ ಹೋದುದನ್ನು ನೋಡಿ ಬಲರಾಮನಿಗೆ ಕೋಪ ಬಂದಿತು. ಆಗ ಅವನಿಗೆ ರೋಮಹರ್ಷಣನಲ್ಲಿ ಶ್ರೀ ವೇದವ್ಯಾಸರು ಸನ್ನಿಹಿ ತರಾಗಿರುವುದು ತಿಳಿಯದೇ ಹೋಯಿತು. ಅಭಿಮಂತ್ರಿತ ದರ್ಭಾಗ್ರದಿಂದ ರೋಮ ಹರ್ಷಣನನ್ನು ಸಂಹರಿಸಿಬಿಟ್ಟನು.

**ಶೌನಕಾದಿಗಳು :–** ಪ್ರಭುವೆ ! ರೋಮಹರ್ಷಣನಿಗೆ ನಾವು ಬ್ರಹ್ಮಾಸನ ವನ್ನು ಕೊಟ್ಟು, ಸತ್ರಯಾಗವು ಮುಗಿಯುವವರೆಗೂ ಆಯುಷ್ಯವನ್ನು ಕೊಟ್ಟಿದ್ದೆವು.

ಆದ್ದರಿಂದ ನಿನಗೀಗ ಬ್ರಹ್ಮಹತ್ಯೆಯ ಪಾಪವು ಬಂದಿರುವುದು. ಅದಕ್ಕೆ ನೀನು ತಕ್ಕ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕೆಂದು ಪ್ರಾರ್ಥಿಸುವೆವು.

**ಬಲರಾಮ :–** ನೀವು ಹೇಳುವ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವೆನು. ಅಲ್ಲದೆ ಆತ್ಮಾ ವೈ ಪುತ್ರನಾಮಾಸಿ' ಎಂಬ ಪ್ರಮಾಣಾನುಸಾರ ರೋಮಹರ್ಷಣನ ಮಗನು ತಂದೆಯ ಪೀಠದಲ್ಲಿ ಕುಳಿತು ಪುರಾಣವನ್ನು ಸತ್ರಯಾಗವು ಪೂರೈಸುವ ವರೆಗೂ ಹೇಳಲಿ. ಮತ್ತು ಆಯುಷ್ಯಾದಿಗಳು ಅವನಿಗುಂಟಾಗಲಿ,

**ಸನಕಾದಿಗಳು :–** ಇಲ್ವಲನ ಮಗ ಬಲ್ವಲನೆಂಬ ಅಸುರನು ಪರ್ವಕಾಲ ಗಳಲ್ಲಿ ಬಂದು ಮಲಮೂತ್ರಗಳನ್ನು ಸುರಿಸಿ ಈ ಯಾಗವನ್ನು ಕೆಡಿಸುತ್ತಿರುವನು. ನೀನು ಅವನನ್ನು ಸಂಹರಿಸು. ಬಳಿಕ ಭರತಖಂಡವನ್ನು ಸಂಚರಿಸಿ ತೀರ್ಥಸ್ನಾನ ಮಾಡಿದರೆ ಶುದ್ಧನಾಗುವೆ.

**ತೊಂಭತ್ತಾರನೆಯ ಅಧ್ಯಾಯ ಮುಗಿದುದು**

ಋಷಿಗಳು ಹೇಳಿದಂತೆ ಯಾಗನಾಶಕ್ಕಾಗಿ ಬಂದ ಬಲ್ವಲನನ್ನು ಬಲರಾಮ ದೇವರು ತಮ್ಮನೇಗಿಲಿನಿಂದ ಕೊಂದರು. ಬಳಿಕ ತೀರ್ಥಯಾತ್ರೆಯನ್ನು ಮಾಡಿ ಪ್ರಭಾ ಸತೀರ್ಥಕ್ಕೆ ಬಂದರು. ಅಲ್ಲಿ ಸೇರಿದ್ದ ಬ್ರಾಹ್ಮಣರು ಕುರುಕ್ಷೇತ್ರ ಯುದ್ಧದಲ್ಲಿ ಸರ್ವ ರಾಜರೂ ಹತರಾದರೆಂದೂ, ಭೀಮ ದುರ್ಯೋಧನರಿಗೆ ಗದಾಯುದ್ಧವು ನಡೆಯು ತ್ತಿರುವುದೆಂದೂ ಮಾತಾಡಿಕೊಂಡರು. ಅದನ್ನು ಕೇಳಿ ಭೀಮಕೌರವರ ಯುದ್ಧ ವನ್ನಾದರೂ ನಿಲ್ಲಿಸಬೇಕೆಂದು ಬಲರಾಮನು ಅಲ್ಲಿಗೆ ಹೋಗಿ ಯುದ್ಧ ಬೇಡವೆಂದು ಎಷ್ಟು ಹೇಳಿದರೂ ಅವರಿಬ್ಬರೂ ಆ ಮಾತನ್ನು ಕೇಳಲಿಲ್ಲ. ಹರೀಚ್ಛೆಯೇ ಹೀಗಿದೆ ಎಂದುಕೊಂಡು, ಬಲರಾಮದೇವರು ದ್ವಾರಕೆಗೆ ಬಂದು ಸೇರಿದರು. ಈ ಸಂಕರ್ಷಣನ ಚರಿತ್ರೆಗಳನ್ನು ಕೇಳಿದವರೂ ಹೇಳುವವರೂ ಶ್ರೀಹರಿಯ ಪ್ರೀತಿಗೆ ಪಾತ್ರರಾಗುವರು.

**ತೊಂಭತ್ತೇಳನೆಯ ಅಧ್ಯಾಯ ಮುಗಿದುದು**

**ಶುಕ :–** ಭಗವಾನ್ ಕೃಷ್ಣನು ಹಸ್ತಿನಾವತಿಯಲ್ಲಿ ಪಾಂಡವರನ್ನು ಸ್ಥಾಪಿಸಿ ದ್ವಾರಕೆಗೆ ಬಂದನು.

**ಪರೀಕ್ಷಿತ್ .–** ಶ್ರೀಹರಿಕಥೆಯನ್ನು ಕೇಳಿದಷ್ಟೂ ಮತ್ತೆ ಕೇಳಬೇಕೆನಿಸು ವುದು. ಅವನ ಸೇವೆಗೆ ವಿನಿಯೋಗವಾಗುವ ಅಂಗಗಳೇ ಅಂಗಗಳು. ಶ್ರೀಹರಿಯ ಮಹಿಮೆಯನ್ನು ಹೇಳಬೇಕೆಂದು ಪ್ರಾರ್ಥನೆ.

**ಶುಕ :–** ರಾಜನೇ ! ಶ್ರೀಕೃಷ್ಣನಿಗೆ ಕುಚೇಲನೆಂಬ ಒಬ್ಬ ಬ್ರಾಹ್ಮಣನು ಬಾಲ್ಯಸ್ನೇಹಿತನಾಗಿದ್ದನು. ಅವನು ಬ್ರಹ್ಮವಾದಿಗಳಲ್ಲಿ ಶ್ರೇಷ್ಠನು ವಿರಕ್ತ, ಶಾಂತಚಿತ್ತ ಮತ್ತು ಜಿತೇಂದ್ರಿಯನಾಗಿದ್ದನು. ಅವನಿಗೆ ಬಹಳ ಬಡತನ. ಮಕ್ಕಳು ಬಹುವಾಗಿದ್ದವು. ಸರಿಯಾದ ಆಹಾರವಿಲ್ಲದೆ ಕೃಶಳಾಗಿದ್ದುದರಿಂದ ಅವನ ಹೆಂಡತಿಯನ್ನು ಕ್ಷುತ್‌ಕ್ಷಾಮೆಯೆಂದು ಜನರು ಕರೆಯುತ್ತಿದ್ದರು ಒಂದು ದಿನ ಆಕೆ ಅನನೇಚ್ಛೆಯಿಂದ

**ಹೆಂಡತಿ :–** ಸ್ವಾಮಿಯೇ ! ಪೂಜ್ಯರಾದ ನಿಮಗೆ ಸಾಕ್ಷಾತ್ ಲಕ್ಷ್ಮೀಪತಿಯಾದ ಶ್ರೀಕೃಷ್ಣನು ಪ್ರಿಯ ಮಿತ್ರನು. ಅವನು ಬ್ರಹ್ಮಣ್ಯದೇವನು ಶರಣಾಗತರನ್ನು ವಾತ್ಸಲ್ಯದಿಂದ ಪೋಷಿಸುವವನು. ನೀವು ಹೋಗಿ ಅವನನ್ನು ಯಾಚಿಸಿದರೆ ಬೇಕಾದಷ್ಟು ಧನವನ್ನು ಕೊಡುವನು 'ಸ್ಮರತಃ ಪಾದಯುಗಳಮಾತ್ಮಾನಮಪಿಯಚ್ಛತಿ' ಹೀಗಿರುವಾಗ ಧರ್ಮಾರ್ಥಕಾಮಗಳನ್ನು ಕೊಡದಿರುವನೆ ? ಅನ್ಯಭಕ್ತರಿಗೆ ಒಲಿಯುವವನಲ್ಲ. ತನ್ನ ಭಕ್ತರನ್ನು ಬಿಡುವವನಲ್ಲ.

(ಇದನ್ನು ಕೇಳಿ ಸುದಾಮನು ಕೃಷ್ಣನ ಬಳಿಗೆ ಹೋಗಿಬರಲೊಪ್ಪಿದನು. ಹೆಂಡತಿಯು ಯಾಚಿಸಿ ತಂದುಕೊಟ್ಟ ನಾಲ್ಕುಹಿಡಿ ಅವಲಕ್ಕಿಯೊಡನೆ ಹೊರಟು ಒಂದು ಕೃಷ್ಣನ ಪತ್ನಿಯಾದ ಮಿತ್ರವಿಂದೆಯ ಮನೆಗೆ ಪ್ರವೇಶಿಸಿದನು. ಅಲ್ಲಿದ್ದ ಕೃಷ್ಣನು ಇವನನ್ನು ಕಂಡೊಡನೆ ಬಿಗಿದಪ್ಪಿ ಆನಂದಬಾಷ್ಪವನ್ನು ಸುರಿಸುತ್ತ ತಾನು ಕುಳಿತಿದ್ದ ಮಂಚದ ಮೇಲೆ ಅವನನ್ನು ಕೂಡಿಸಿದನು. ಅವನ ಪಾದವನ್ನು ತೊಳೆದು ಆ ಜಲವನ್ನು ತನ್ನ ತಲೆಯ ಮೇಲೆ ಪ್ರೋಕ್ಷಿಸಿಕೊಂಡನು. ಗಂಧವನ್ನು ಹಚ್ಚಿ ಧೂಪ ದೀಪಗಳನ್ನು ತಂದು ಸತ್ಕರಿಸಿ ಗೋದಾನದೊಡನೆ ತಾಂಬೂಲವನ್ನು ಕೊಟ್ಟು 'ಮಿತ್ರನೇ ! ನಿನಗೆ ಸ್ವಾಗತವು' ಎಂದನು. ಈ ಬಡಕಲು ವ್ಯಕ್ತಿಯನ್ನು ಮಿತ್ರವಿಂದೆಯು ಬೀಸಣಿಗೆಯಿಂದ ಬೀಸಿ ಉಪಚರಿಸಿದಳು. ಅಂತಃಪುರದ ಜನರು ಆಶ್ಚರ್ಯವನ್ನು ಹೊಂದಿ 'ಈ ತಿರುಕನಾದ ಬ್ರಾಹ್ಮಣನು ಏನು ಪುಣ್ಯವನ್ನು ಮಾಡಿದ್ದನು ? ಯಾರಿಗೂ ಗಣನೆಗೆ ಬಾರದ ಈ ದರಿದ್ರನೆಲ್ಲಿ ? ಲಕ್ಷ್ಮೀಪತಿಯೆಲ್ಲಿ ? ಬಲರಾಮನನ್ನು ಹೇಗೋ ಹಾಗೆ ಇವನನ್ನು ಗೌರವದಿಂದ ಪೂಜಿಸಿದನಲ್ಲ!' ಎಂದು ಪರಸ್ಪರ ಮಾತಾಡಿಕೊಂಡರು. ಶ್ರೀಕೃಷ್ಣನೂ, ಕುಚೇಲನೂ ಹಿಂದೆ ಗುರುಗಳ ಮನೆಯಲ್ಲಿದ್ದಾಗ ನಡೆಸಿದ ವ್ಯಾಪಾರಗಳನ್ನು ಸ್ಮರಿಸಿ ಮಾತಾಡಿದರು.

**ಕೃಷ್ಣ :–** ಮಿತ್ರನೇ ! ಮದುವೆ ಆಯಿತೆ ? ನಿನ್ನ ಹೆಂಡತಿಯಾಗಿರುವವಳು ಯೋಗ್ಯಳೆ ? ನಿನ್ನನ್ನು ನೋಡಿದರೆ ದುಡ್ಡುಕಾಸು ಮುಂತಾದ ವಿಷಯಗಳನ್ನು ಪ್ರೀತಿಸದ ವಿರಕ್ತನಾಗಿರುವೆ. ವೈಕುಂಠವನ್ನು ಸೇರಬೇಕಾದರೆ ಗುರುಸೇವೆಮಾಡಿ ಜ್ಞಾನವನ್ನು ಸಂಪಾದಿಸಬೇಕು. ನಾನು ಗುರುಸೇವೆಯಿಂದ ಪ್ರೀತನಾಗುವಂತೆ ಯಜ್ಞ, ಸಂತತಿ, ಜಪ, ಶಮ ದಮಾದಿಗಳಿಂದ ಪ್ರೀತನಾಗುವುದಿಲ್ಲ. ನಾವು ಹಿಂದೆ

ಕಟ್ಟಿಗೆತರಲು ಕಾಡಿಗೆ ಹೋಗಿ ಮಳೆಗೆ ಸಿಕ್ಕಿದಾಗ ಗುರುಗಳು ಬಂದು ನಮ್ಮನ್ನು ನೋಡಿ ಅತ್ತುಬಿಟ್ಟರು. "ನಿಮ್ಮ ಗುರುಭಕ್ತಿಗೆ ಮೆಚ್ಚಿದೆನು. ಕೋರಿಕೆಗಳೆಲ್ಲ ಕೈಗೂಡಲಿ ! ಅಭ್ಯಸಿಸಿದ ವೇದಗಳು ವೀರ್ಯವತ್ತಾಗಲಿ ! ಈಲೋಕ ಪರಲೋಕಗಳು ನಿಮಗೆ ಫಲಕಾರಿಗಳಾಗಲಿ'' ಎಂದು ಗುರುಗಳು ಆಶೀರ್ವದಿಸಿದರು. ಗುರುಪ್ರಸಾದ ವನ್ನು ಪಡೆದವನೇ ಜ್ಞಾನದ್ವಾರಾ ಮುಕ್ತನಾಗುವನು.

**ಕುಚೇಲ :–** ಸತ್ಯಕಾಮನಾದ ನಿನ್ನೊಡನೆ ನಾವು ವಾಸಮಾಡಿದ ಬಳಿಕ, ಗುರುಕುಲದಲ್ಲಿ ಅನುಷ್ಠಿಸಬೇಕಾದ ಸಕಲ ಶುಭಕರ್ಮಗಳನ್ನೂ ಮಾಡಿದಂತಾಯಿತು. ಸರ್ವೇಶ್ವರನಾದ ನೀನು ಗುರುಸೇವೆಯನ್ನು ಮಾಡಿದುದು ವಿಡಂಬನೆಯೇ ಸರಿ.

**ತೊಂಭತ್ತೆಂಟನೆಯ ಅಧ್ಯಾಯ ಮುಗಿದುದು**

**ಕೃಷ್ಣ :–** ಮಿತ್ರನೇ ! ಏನುಪಾಯನವ ತಂದಿರುವೆ ? ಭಕ್ತಿಯಿಂದ ಕೊಡತಕ್ಕ ವಸ್ತುವು ಎಷ್ಟೇ ಅಲ್ಪವಾಗಿದ್ದರೂ ಅದನ್ನು ಮಹತ್ತಾಗಿ ಭಾವಿಸುವೆನು. "ಪತ್ರಂಪುಷ್ಪಂ" ಇತ್ಯಾದಿ ವಚನಗಳಿಲ್ಲವೆ ? (ವಿಪ್ರನು ನಾಚಿ ಹಿಡಿಯಷ್ಟು ಅವಲಕ್ಕಿ ಯನ್ನು ಶ್ರೀಹರಿಗೆ ಕೊಡಲಾರದವನಾದನು. ಕೃಷ್ಣನು ಸರ್ವಜ್ಞನಾದುದರಿಂದ ವಿಪ್ರನು ತನ್ನಲ್ಲಿಗೆ ಬಂದ ಕಾರಣವನ್ನು ತಿಳಿದು "ಅಹಾ ! ಈತನು ಧನಾರ್ಥಿಯಾಗಿ ನನ್ನನ್ನು ಭಜಿಸಿದವನಲ್ಲ. ಪತಿವ್ರತೆಯಾದ ತನ್ನ ಪತ್ನಿಯ ಸಂತೋಷಕ್ಕಾಗಿ, ಮಿತ್ರ ನಾದಿವನು ಬಂದಿರುವನು. ಬೇರೆಯವರಿಗೆ ದುರ್ಲಭವಾದ ಭಾಗ್ಯವನ್ನು ಕೊಡು ವೆನು'' ಎಂದು ನಿಶ್ಚಯಿಸಿ, ತಾನೇ ಅವಲಕ್ಕಿಯ ಗಂಟನ್ನು ಕಿತ್ತುಕೊಂಡು, ಒಂದು ಹಿಡಿ ಅವಲಕ್ಕಿಯನ್ನು ಬಾಯಿಗೆ ಹಾಕಿಕೊಂಡು ಇನ್ನೊಂದು ಮುಷ್ಟಿ ಅವಲಕ್ಕಿಯನ್ನು ತಿನ್ನಬೇಕೆನ್ನುವುದರೊಳಗೆ ಶ್ರೀದೇವಿಯು ಅದನ್ನು ತಡೆದು ''ವಿಶ್ವನಾಥನೇ ! ಮೊದಲ ಹಿಡಿಯ ಅವಲಕ್ಕಿಯನ್ನು ತಿಂದು ನೀನು ತೃಪ್ತನಾದ ಮಾತ್ರಕ್ಕೆ ಸಂಪತ್ತನ್ನುಂಟು ಮಾಡಿ ಉಭಯ ಲೋಕಗಳಲ್ಲಿಯೂ ನಿನ್ನನ್ನು ಸಂತೋಷಪಡಿಸುವುದಕ್ಕೆ ಕಾರಣ ವಾಗಿದೆ. ನೀನೇನಾದರೂ ಇನ್ನೊಂದು ಹಿಡಿಯ ಅವಲಕ್ಕಿಯನ್ನು ತಿಂದುಬಿಟ್ಟರೆ ನನ್ನನ್ನು ಅವನಿಗೇ ಕೊಟ್ಟುಬಿಟ್ಟರೂ ಪ್ರತಿಉಪಕಾರವನ್ನು ಮಾಡಿದಂತಾಗುವುದೇ ಇಲ್ಲ'' ಎಂದಳು.

ರಾತ್ರಿ ಕಳೆದು ಬೆಳಗಾಯಿತು. ಆಗ ಕೃಷ್ಣನು ''ವಿಪ್ರನೇ ! ನಿನಗೆ ವಂದನೆ'' ಎಂದು ಹೇಳಿ ಅವನನ್ನು ಸಾಗಿ ಕಳುಹಿಸಿದನು. ಕೊನೆಗೂ ವಿಪ್ರನು ಬಾಯಿಬಿಟ್ಟು ಧನವನ್ನು ಯಾಚಿಸಲೇ ಇಲ್ಲ. ಆದರೆ ಒಳಗೆ ಶ್ರೀಕೃಷ್ಣನ ದರ್ಶನದಿಂದ ಅವನು

ಸುಖಿಯಾಗಿದ್ದನು. ಹೊರಗಡೆ ''ಹೆಂಡತಿಯು ಕೇಳಿದರೆ ಏನಹೇಳಲಿ'' ಎಂದು ನಾಚಿದನು. ಮತ್ತೆ ಹೀಗೆ ತನ್ನಲ್ಲಿಯೇ ತಾನು ಅಂದುಕೊಂಡನು :-

**ಕುಚೇಲ :-** ಆಹಾ ! ಕೃಷ್ಣನಿಗೆ ವಿಪ್ರರೆಂದರೆ ಎಷ್ಟು ಪ್ರೀತಿ ? ದರಿದ್ರನಾದ ನನ್ನನ್ನು ಆಲಂಗಿಸಿದನಲ್ಲ ! ಅಣ್ಣನನ್ನು ಕಂಡಂತೆ ನನ್ನನ್ನು ಪೂಜಿಸಿದನಲ್ಲ ! ಪಟ್ಟದ ರಾಣಿಯು ನನಗೆ ಚಾಮರ ಹಾಕಿದಳಲ್ಲ ! ದೇವದೇವನಾಗಿ ಸ್ವಾಮಿಯು ನನ್ನ ಕಾಲನ್ನೊತ್ತಿದನಲ್ಲ ! ಅವನು ಕರುಣಾಳು. ಹೇಗೆಂದರೆ ನನಗೆ ಧನವನ್ನು ಕೊಟ್ಟರೆ ತನ್ನನ್ನು ಮರೆತುಬಿಡುವನು ಎಂದು ಬರಿಗೈಯ್ಯಲ್ಲಿ ಕಳುಹಿಸಿದನು. ಇದು ಪರಮಾನಂದವೇ ಸರಿ.

(ಊರಿಗೆ ಬಂದನು. ಸಂಪದ್ಭರಿತವಾದ ತನ್ನ ಮನೆಯನ್ನು ನೋಡಿ)

ನಾನು ಹುಟ್ಟುದರಿದ್ರನು. ಶ್ರೀಕೃಷ್ಣನ ದರ್ಶನವೇ ಈ ಮಹಾಭಾಗ್ಯಕ್ಕೆ ಕಾರಣವಾಗಿದೆ. ಅಲ್ಲಿ ಶ್ರೀಕೃಷ್ಣನು ಮಾತನ್ನಾಡದೆ ಇಲ್ಲಿ ಮಹದೈಶ್ವರ್ಯವನ್ನು ಕೊಟ್ಟನು. ಭಕ್ತಿಯಿಂದ ಅಲ್ಪವನ್ನು ಕೊಟ್ಟರೂ ಮಹತ್ತಾದ ಫಲವನ್ನು ಕೊಟ್ಟುಬಿಡುವನು ಮತ್ತು ತಾನು ಕೊಟ್ಟುದು ಅಲ್ಪವೆಂದೇ ಭಾವಿಸುವನು. ಇದರಿಂದಲ್ಲವೇ ಒಂದು ಹಿಡಿ ಅವಲಕ್ಕಿಯನ್ನು ಎಷ್ಟೋ ಪ್ರೀತಿಯಿಂದ ಸ್ವೀಕರಿಸಿದನು. ಪ್ರತಿ ಜನ್ಮದಲ್ಲಿಯೂ ಭಗವಂತನಲ್ಲಿ ಪ್ರೇಮ, ದಾಸ್ಯಉಂಟಾಗಲಿ. ಬ್ರಹ್ಮಾದಿಗಳ ಸಂಗ ದೊರೆಯಲಿ. ಆಹಾ ! ಶ್ರೀಹರಿಯು ಐಹಿಕ ಐಶ್ವರ್ಯವನ್ನು ಕೊಡುವುದೇ ಇಲ್ಲವೆಂದು ದಡ್ಡರು ಹಾಕುವ ಅಪವಾದವನ್ನು ತಪ್ಪಿಸಿಕೊಳ್ಳಲು ನವೆಯದ ಸಂಪತ್ತನ್ನು ಕೊಟ್ಟನು.

ಈ ವಿಷಯವನ್ನು ದಾಸರು ಹೇಳುತ್ತಾರೆ :-

**ಸುಳಾದಿ**

ಕುಚೇಲನನ್ನು ನೀ ಸುಚೇಲನನ್ನಾಗಿ ಮಾಡಿದೆ ಅಯ್ಯ
ಯಾಚಿಸಿದನೆ ಯೋಚಿಸಿದನೆ ಕಾಯೇನ ವಾಚಾ ಮನಸಿನಿಂದ
ನಾಚಿದ್ಯೋ ವರದಗೋಪಾಲವಿಠಲ ಕೃಷ್ಣ ಸೂಚನೆ ತಿಳಿಯದೇನೋ ||

ಹೀಗೆ ವಿಪ್ರನು ನಿಶ್ಚಯಿಸಿ ಅಹಂ ಮಮತೆಯನ್ನು ಬಿಟ್ಟು, ಹರಿಯಲ್ಲಿ ಭಕ್ತಿಯಿಟ್ಟು, ಧನಾದಿಗಳನ್ನು ವಿಪ್ರರಿಗೆ ದಾನ ಮಾಡುತ್ತ ಪತ್ನಿಯೊಡನೆ ಸುಖವಾಗಿದ್ದು ಮುಂದೆ ಧ್ಯಾನಮಾಡಿ ಮುಕ್ತನಾದನು.

**ತೊಂಭತ್ತೊಂಭತ್ತನೆಯ ಅಧ್ಯಾಯ ಮುಗಿದುದು**

ಶ್ರೀಕೃಷ್ಣನು ಒಂದೇ ದಿನದಲ್ಲಿ ಮುಗಿಯುವ ಅಶ್ವಮೇಧವನ್ನು ಮಾಡಲು ದೀಕ್ಷೆಯನ್ನು ವಹಿಸಿದನು. ಆ ಕಾಲದಲ್ಲಿ ಒಬ್ಬ ಬ್ರಾಹ್ಮಣನು ಒಂದು ತನಗೆ ಹುಟ್ಟಿದ ಮಕ್ಕಳನ್ನು ಸೂತಿಕಾಗೃಹದಿಂದ ಯಾರೋ ಅಪಹರಿಸುತ್ತಿರುವರೆಂದೂ, ಈ ದುಃಖವು ಕ್ಷತ್ರಿಯರ ದೋಷದಿಂದಲೇ ತನಗೆ ಒದಗಿರುವುದೆಂದೂ, ಸಭೆಯಲ್ಲಿ ಮೂರು ಬಾರಿ ಹೇಳಿದನು.

**ಅರ್ಜುನ** :– ವಿಪ್ರನೇ ! ನಾನು ನಿನ್ನ ಮಕ್ಕಳನ್ನು ರಕ್ಷಿಸುವೆನು. ತಪ್ಪಿದರೆ ಅಗ್ನಿಯನ್ನು ಪ್ರವೇಶಿಸುವೆನು.

**ವಿಪ್ರ** :– ವಾಸುದೇವಾದಿಗಳಿಗೇ ಸಾಧ್ಯವಾಗದೇ ಇರುವುದು ನಿನಗೆ ಸಾಧ್ಯವೆ ?

**ಅರ್ಜುನ** ,– ನಾನು ಕೃಷ್ಣಬಲರಾಮರಂತಲ್ಲ. ಗಾಂಡೀವವನ್ನು ನೋಡು ! ನಿನ್ನ ಮಕ್ಕಳನ್ನು ಮೃತ್ಯುವು ಒಯ್ದಿದ್ದರೂ ಅವನನ್ನು ಗೆದ್ದು ನಿನ್ನ ಪುತ್ರರನ್ನು ತಂದುಕೊಡುವೆನು.

(ಹೀಗೆ ತನ್ನ ಪೌರುಷವನ್ನು ಹೇಳಿಕೊಂಡು ಶ್ರೀಕೃಷ್ಣನ ಅನುಜ್ಞೆಯನ್ನು ಕೇಳಿದನು )

**ಕೃಷ್ಣ** :– ಅರ್ಜುನನೇ ! ನಿನಗೆ ಈ ಕಾರ್ಯ ಶಕ್ಯವಲ್ಲ. ನಾನೂ ಬರುವೆನು.

**ಅರ್ಜುನ** :– ಕೃಷ್ಣ ! ನಾನು ಸಾಮಾನ್ಯನೆಂದು ತಿಳಿದೆಯಲ್ಲ ? ಇಂದ್ರನನ್ನು ಗೆದ್ದಿರುವೆನು. ಶಿವನನ್ನು ಮೆಚ್ಚಿಸಿರುವೆನು. ನಿವಾತಕವಚರನ್ನು ಕತ್ತರಿಸಿರುವೆನು. ಅವರಿಗಿಂತ ಅಧಿಕಶಕ್ತರು ಯಾರಿರುವರು ? ನನ್ನನ್ನು ಹೆದರಿಸಬೇಡ. ಅಪ್ಪಣೆ ಕೊಡು.

**ಕೃಷ್ಣ** :– ಹಾಗಿದ್ದರೆ ಹೋಗಿ ಬಾ !

(ಅರ್ಜುನನು ರಥಹತ್ತಿ ವಿಪ್ರನನ್ನೂ ಕರೆದುಕೊಂಡು ಅವನ ಊರಿಗೆ ಹೋಗಿ ಅವನ ಮನೆಯ ಸುತ್ತ ಮುತ್ತ ಮತ್ತು ಸೂತಿಕಾಗೃಹದ ಎಲ್ಲ ಕಡೆಯಲ್ಲಿಯೂ ಶರಪಂಜರವನ್ನು ಬಿಗಿದನು. ಇಷ್ಟು ಬಂದೋಬಸ್ತು ಮಾಡಿದ್ದರೂ ಬ್ರಾಹ್ಮಣನ ಹೆಂಡತಿಯು ಹೆತ್ತಳು. ಮಗುವಿನ ಧ್ವನಿಯೂ ಕೇಳಿಸಿತು. ಆ ಕೂಡಲೇ ಮಗುವು ಅದೃಶ್ಯವಾಯಿತು. ಬ್ರಾಹ್ಮಣನು ಪಾರ್ಥನನ್ನು ಚೆನ್ನಾಗಿ ಬಯ್ದು ಮಾನವನ್ನೇ ತೆಗೆದನು. ಅರ್ಜುನನು ಅಗ್ನಿ ಪ್ರವೇಶಕ್ಕೆ ಸಿದ್ಧನಾದಾಗ ಶ್ರೀಕೃಷ್ಣನು ವಿಪ್ರನ ಪುತ್ರರನ್ನು ಕೊಡಿಸುವೆನೆಂದು ಹೇಳಿ ಅರ್ಜುನನನ್ನೂ, ವಿಪ್ರನನ್ನೂ ರಥದಲ್ಲಿ ಕೂಡಿಸಿ

ಕೊಂಡು ಪೂರ್ವದಿಕ್ಕಿಗೆ ಕರೆದುಕೊಂಡು ಹೋಗಿ, ಅಲ್ಲಿಂದ ಏಳು ದ್ವೀಪಗಳು, ಏಳು ಸಮುದ್ರಗಳು, ಲೋಕಾ ಲೋಕಾಪರ್ವತ ಇವುಗಳನ್ನು ದಾಟಿ ಮುಂದೆ ಜೇಡರ ಬಲೆ ಯಂತಿದ್ದ ಮಹಾಂಧಕಾರವನ್ನು ತನ್ನ ಚಕ್ರದಿಂದ ಭೇದಿಸಿ, ರಥವನ್ನು ಸಾಗಿಸಿ ಕೊಂಡು, ಅನಂತಾಸನಕ್ಕೆ ತಲುಪಿದನು. ಅಲ್ಲಿರುವ ಅನಂತನಾಮಕ ದೇವರಿಗೆ ಈ ಕೃಷ್ಣದೇವರು ನಮಸ್ಕರಿಸಿದನು. ಇದನ್ನು ನೋಡಿದ ಅರ್ಜುನನೂ ನಮಸ್ಕರಿಸಿದನು. ಅನಂತಾಸನದೇವರು ಹೇಳುತ್ತಾನೆ :- ನಿಮ್ಮನ್ನು ನೋಡಬೇಕೆಂದೇ ನನ್ನ ದ್ವಾರ ಪಾಲಕರಾಗಿರುವ, ಕರ್ಮದಿಂದ ವಿಪ್ರನ ಮಕ್ಕಳಾಗಿ ಹುಟ್ಟಿದ ನಾಲ್ಕು ಮಕ್ಕಳನ್ನೂ ನಾನೇ ಅಪಹರಿಸಿದೆನು. ಈಗ ಈ ಮಕ್ಕಳನ್ನು ಕರೆದುಕೊಂಡು ಹೋಗಿ ಅವರ ತಂದೆಯೆ-ನಿಸಿದ ವಿಪ್ರನಿಗೆ ಒಪ್ಪಿಸಿರಿ. ನೀವು (ಕೃಷ್ಣಾರ್ಜುನರು) ಧರ್ಮರಕ್ಷಣೆಗಾಗಿ ಅವತರಿಸಿರುವಿರಿ. ನಿಮ್ಮ ಕಾರ್ಯವನ್ನು ಪೂರ್ಣವಾಗಿ ನೆರವೇರಿಸಿರಿ."

ಕೃಷ್ಣಾರ್ಜುನರು ಆ ಮಕ್ಕಳನ್ನು ತಂದು ಆ ಬ್ರಾಹ್ಮಣನಿಗೆ ಒಪ್ಪಿಸಿದರು. ಅರ್ಜುನನು ಆಶ್ಚರ್ಯಭರಿತನಾಗಿ ಜಗತ್ತಿನಲ್ಲಿ ತಾನು ತೋರುವ ಪೌರುಷವೆಲ್ಲವೂ ಶ್ರೀಕೃಷ್ಣನ ಅನುಗ್ರಹದಿಂದಲೇಬಂದುದು ಎಂದು ಖಚಿತವಾಗಿ ತಿಳಿದನು. ಆಮೂ ವರೂ ಸ್ವಸ್ಥಾನಕ್ಕೆ ಹಿಂತಿರುಗಿ ಬಂದರು. ಶ್ರೀಕೃಷ್ಣನು ಯಜ್ಞದೀಕ್ಷಿತನಾಗಿದ್ದಾಗ ಸೀಮೋಲ್ಲಂಘನೆ ಮಾಡಿದ್ದಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ಮಾಡಿಕೊಂಡು, ಯಜ್ಞ ವನ್ನು ಪೂರ್ತಿ ಮಾಡಿ ಮುಗಿಸಿ, ವಿಪ್ರಾದಿಗಳನ್ನು ದಕ್ಷಿಣಾದಿಗಳಿಂದ ಸಂತೋಷಪಡಿಸಿ ಯಮುನಾನದಿಯಲ್ಲಿ ಅವಭೃತಸ್ನಾನ ಮಾಡಿದನು.

### ನೂರನೆಯ ಅಧ್ಯಾಯ ಮುಗಿದುದು

ಯಮುನೆಯಲ್ಲಿ ಅವಭೃತಸ್ನಾನ ಮಾಡಿ ಹಿಂತಿರುಗಿ ಬರುವಾಗ, ಮಧ್ಯ ಮಾರ್ಗದಲ್ಲಿ ದಂತವಕ್ತ್ರನು ಬಂದು ಕೃಷ್ಣನನ್ನು ತಡೆದು ಅವನನ್ನು ಮೂದಲಿಸುತ್ತ ಯುದ್ಧ ಮಾಡಿದನು. ಶ್ರೀಕೃಷ್ಣನು ಕೌಮೋದಕೀಗದೆಯಿಂದ ಹೊಡೆದು ಅವನನ್ನು ಕೊಂದನು. ವಿಜಯನ ಅಂಶವು ಕೃಷ್ಣನ ದೇಹವನ್ನು ಪ್ರವೇಶಿಸಿ, ಅಲ್ಲಿ ನೆಲೆಸಿತು. ದಂತವಕ್ತ್ರನ ತಮ್ಮ ವಿದೂರಥನು ಕೃಷ್ಣನ ಮೇಲೆ ಬೀಳಲು ಬಂದನು. ಶ್ರೀಕೃಷ್ಣನು ಅವನನ್ನು ಚಕ್ರದಿಂದ ಕೊಂದು ಬಳಿಕ ಜಯಘೋಷದೊಡನೆ ದ್ವಾರಕೆಯನ್ನು ಪ್ರವೇಶಿಸಿದನು.

ಶ್ರೀಕೃಷ್ಣನ ವ್ಯಾಪಾರಗಳನ್ನು ಅನಂತ ವರ್ಷಗಳಲ್ಲಿ ಎಡೆಬಿಡದೆ ಹೇಳಿದರೂ ಅವು ಮುಗಿಯುವುದಲ್ಲ. ಸಂಪೂರ್ಣವಾಗಿ ಹೇಳಲು ಯಾರಿಗೂ ಶಕ್ತಿಯಿಲ್ಲ.

### ನೂರೊಂದನೆಯ ಅಧ್ಯಾಯ ಮುಗಿದುದು

ಶ್ರೀಕೃಷ್ಣನು ದ್ವಾರಕಾ ಪಟ್ಟಣದಲ್ಲಿ ತನ್ನ ಸಕಲ ಪತ್ನಿಯರಿಂದ ಕೂಡಿ ತಾನೂ 16108 ರೂಪಗಳನ್ನು ಧರಿಸಿ ಅವರನ್ನೆಲ್ಲ ತೃಪ್ತಿಗೊಳಿಸುತ್ತಲಿದ್ದನು.

## ನೂರೆರಡನೆಯ ಅಧ್ಯಾಯ ಮುಗಿದುದು

ಹೀಗೆ ಶ್ರೀಕೃಷ್ಣನು ದ್ವಾರಕಾಪಟ್ಟಣದಲ್ಲಿ ವಾಸಿಸುವಾಗ ಅನೇಕ ಕ್ಷೇತ್ರಗಳಿಂದ ಮಹರ್ಷಿಗಳೆಲ್ಲರೂ ಬಂದು ಸ್ವಾಮಿಯನ್ನು ಉಪಾಸನೆ ಮಾಡುತ್ತಾ ಇದ್ದರು. ಹದಿನಾರು ಸಾವಿರದ ನೂರೆಂಟು ಮಂದಿ ಪತ್ನಿಯರಲ್ಲಿ ಪ್ರಧಾನರಾದ ರುಕ್ಮಿಣೀ ಮೊದಲಾದವರಲ್ಲಿ ಪ್ರದ್ಯುಮ್ನನೇ ಮೊದಲಾದವರು ಪುತ್ರರಾಗಿ ಹುಟ್ಟಿದರು ಇವರ ವಂಶದಲ್ಲಿ ಹುಟ್ಟಿದವರನ್ನೆಲ್ಲ ಲೆಕ್ಕ ಮಾಡಲು ಸಾಧ್ಯವಿಲ್ಲ. ಯಾದವರ ಮಕ್ಕಳಿಗೆ ಪಾಠ ಹೇಳತಕ್ಕ ಉಪಾಧ್ಯಾಯರ ಸಂಖ್ಯೆಯೇ ಮೂರು ಕೋಟಿ ಎಂಭತ್ತೆಂಟುಸಾವಿರದ ನೂರು ಮಂದಿಯೆಂದು ನಾನು ಕೇಳಿರುವೆನು. ದೇವತೆಗಳೇ ಯಾದವರಾಗಿ ಅವತರಿಸಿದ್ದರೂ, ಶಯನಾಸನಾದಿ ಕಾಲದಲ್ಲಿಯೂ ಶ್ರೀಕೃಷ್ಣನ ಸಂಗಡವೇ ಇದ್ದರೂ. ಅವನು ನಾರಾಯಣ ಸ್ವರೂಪವೆಂದು ತಿಳಿಯಲಿಲ್ಲ. ಹೀಗಿದೆ ಶ್ರೀಕೃಷ್ಣನ ಮಾಯೆ.

ಶ್ರೀಕೃಷ್ಣನು ಲೋಕಸಂಗ್ರಹಕ್ಕಾಗಿ ಕುರುಕ್ಷೇತ್ರದಲ್ಲಿ ಹನ್ನೆರಡು ವರ್ಷಗಳ ಕಾಲ ಯಜ್ಞವನ್ನು ಮಾಡಿ, ಅವುಗಳಲ್ಲಿ ತನ್ನನ್ನೇ ತಾನು ಆರಾಧಿಸಿಕೊಂಡನು.

ಶುಕಾಚಾರ್ಯರು ಶ್ರೀಕೃಷ್ಣನ ಸ್ಮರಣೆಗಾಗಿ ಅವನ ಗುಣಗಳನ್ನು ಸಂಗ್ರಹವಾಗಿ ವರ್ಣಿಸುತ್ತಾರೆ :–

ಶ್ರೀಕೃಷ್ಣನು ಮಾನವನಂತೆ ತೋರಿದನು. ಯಾದವರಲ್ಲಿ ಅವತರಿಸಿದನು. ಯಜ್ಞಗಳನ್ನು ಮಾಡಿದನು. ಅವನ ಪಾದಪ್ರಕ್ಷಾಲನೆಯ ಜಲವು ಗಂಗಾನದಿಯಾಯಿತು. ಐಶ್ವರ್ಯಾದಿಷಡ್ಗುಣಗಳಿಂದ ಪೂರ್ಣವಾದ ಸ್ವರೂಪವುಳ್ಳವನು. ಶ್ರೇಷ್ಠವಾದ ಅವನ ವಕ್ಷಃಸ್ಥಳದಲ್ಲಿ ಲಕ್ಷ್ಮಿಯು ಅನವರತವೂ ವಾಸಮಾಡುತ್ತಿರುವಳು. ಅವನು ಅರ್ಜುನನಿಗೆ ಉಪದೇಶ ಮಾಡಿದ ಗೀತೆಯು ಪ್ರಮಾಣವು. ಅವನ ಮಹಿಮೆಗಳನ್ನು ಪ್ರತಿಪಾದಿಸುವ ವೇದಾದಿಶಾಸ್ತ್ರವೇ ಪ್ರಮಾಣವು. ಮೂರ್ತಾಮೂರ್ತ ಜಗತ್ತು ಮತ್ತು ಕಾರ್ಯಕಾರಣಮೊದಲಾದುವು ಇವನಿಂದಲೇ ಉತ್ಪತ್ತಿಯಾದುವು. ಸರ್ವಧರ್ಮಗಳೂ ಅವನ ವಿಷಯಕಗಳೇ ಆಗಿವೆ. ಕಾಲಚಕ್ರವೇ ಅವನ ಆಯುಧ. ಇಂತಹ ಶ್ರೀಕೃಷ್ಣನು ಭೂಭಾರಪರಿಹಾರರೂಪಕಾರ್ಯವನ್ನು ನಡೆಸಿದುದು ಅವನಿಗೇನೂ ಆಶ್ಚರ್ಯವಲ್ಲ. ನಮಗೆ ಮಾತ್ರ ಆಶ್ಚರ್ಯವೇ.

ವಿಶ್ವಂಭರನಾದ ಭಗವಂತನು ದೇವಕಿಯ ಪುತ್ರನೆಂಬ ಕೀರ್ತಿಯುಳ್ಳವನಾಗಿ, ಭೂಭಾರ ಪರಿಹಾರಕ್ಕಾಗಿ ಅವತರಿಸಿ, ತಪ್ಪದೆ ಭೂಮಿಯ ಮೇಲೆ ತನ್ನ ಪದಕಮಲಗಳನ್ನು ಇಡುವುದರಿಂದಲೂ, ಎಲ್ಲದರ ಒಳಗೆ ಹೊರಗೆ ಇರುವ ತನ್ನ ರೂಪವನ್ನು ದರ್ಶಿಸತಕ್ಕ ಉತ್ತಮಾಧಿಕಾರಿಗಳಿಗೆ ಸಂತೋಷವನ್ನು ಉಂಟುಮಾಡಿದನು. ಅವನು ಸಾಕ್ಷಾನ್ಮನ್ಮಥಮನ್ಮಥನು. ಎದೆಯಲ್ಲಿ ಶ್ರೀದೇವಿಯನ್ನು ವಾಸಮಾಡಿಸುತ್ತಿರುವನು. ಮನೋಹರವಾಗಿರುವ ಮಂದಹಾಸಸಹಿತವಾದ ಕಟಾಕ್ಷನಿರೀಕ್ಷಣದಿಂದ ಸ್ತ್ರೀಯರಿಗೆ ಸಂತೋಷವನ್ನುಂಟುಮಾಡಿದವನು. ಇಂತಹ ಪರಮಾತ್ಮನು ಸದಾಕಾಲವೂ ಜಯಶೀಲನು.

ಆದಾನಾದಿ ಕರ್ತ. ಜಗದುತ್ಪತ್ತಿಸ್ಥಿತಿಕರ್ತಾ, ಪ್ರಕೃತಿ ಮತ್ತು ಜೀವರಿಗೆ ನಿಯಾಮಕ. ತನ್ನಿಂದ ಸೃಷ್ಟಿಸಲ್ಪಟ್ಟ ಜಗತ್ತಿನೊಳಗೆ ಪ್ರವೇಶಮಾಡಿರುವವನು. ವೇದವ್ಯಾಸರೂಪದಿಂದ ಭಾಗವತವನ್ನು ರಚಿಸಿರುವವನು. ತನ್ನಲ್ಲಿ ಜೀವರು ಪ್ರವೇಶಿಸುವಂತೆ ಮಾಡಿ ಬಂಧನರಹಿತರಾಗುವಂತೆ ಮಾಡುವವನು. ಜೀವನು ಪ್ರಾಜ್ಞ ನಾಮಕಪರಮಾತ್ಮನನ್ನು ಹೊಂದಿ ಅಭಿಮಾನವನ್ನು ಬಿಟ್ಟಿರುವಂತೆ, ಸಚ್ಚಿದಾನಂದ ಸ್ವರೂಪದಿಂದ ನಿತ್ಯವೂ ಪ್ರಕೃತಿಯ ಸಂಬಂಧವನ್ನು ಬಿಟ್ಟಿರುವವನು, ಅಭಯ ಪ್ರದನೂ ಆದ ಶ್ರೀಹರಿಯನ್ನು ಯಾವಾಗಲೂ ಧ್ಯಾನಿಸುವೆನು.

ಶ್ರೀಕೃಷ್ಣನು ಸರ್ವೋತ್ತಮನು, ಯದೂತ್ತಮನೂ ಹೌದು. ಧರ್ಮಾದಿಗಳನ್ನು ರಕ್ಷಿಸಬೇಕೆಂದು ಲೀಲಾಮಾನುಷವಿಗ್ರಹನಾಗಿ ಅವತರಿಸಿದವನು. ಈ ಅವತಾರಕ್ಕೆ ಅನುಕೂಲವಾಗಿ ಲೋಕದ ಜನರಂತೆ ವ್ಯಾಪಾರಮಾಡಿರುವನು. ದುಷ್ಕರ್ಮಗಳನ್ನು ನಿರಾಕರಿಸುವ ಸಮರ್ಥನು. ಜ್ಞಾನಾನಂದಾದಿಗಳನ್ನು ಕೊಡುವ ಇವನ ಪಾದಗಳನ್ನು ಹೊಂದಬೇಕೆಂದು ಬಯಸುವ ಪುರುಷನು ಈ ಸ್ವಾಮಿಯು ಮಾಡಿದ ವ್ಯಾಪಾರಗಳನ್ನು ಅವಶ್ಯವಾಗಿ ಕೀರ್ತಿಸಲೇಬೇಕು.

ಅನವರತವೂ ವೃದ್ಧಿ ಹೊಂದತಕ್ಕ. ಸಂಪತ್ಕರವಾದ, ಶ್ರೀಹರಿಯ ಕಥಾಶ್ರವಣ, ಕೀರ್ತನೆ ಮತ್ತು ಚಿಂತನೆ ಎಂಬ ಭಗವಂತನ ಸೇವೆಯನ್ನು ಮಾಡುವ ಮನುಷ್ಯನು ಸತ್ಕರ್ಮಫಲರೂಪವಾದ ಶ್ರೀಹರಿಯ ಮಂದಿರವನ್ನು ಹೊಂದುತ್ತಾನೆ.

ಶ್ರೀಮಂತರಾಗಿ ಏಕಛತ್ರಾಧಿಪತ್ಯವಾಳುತ್ತಿರುವ ಚಕ್ರವರ್ತಿಗಳೂ, ರಾಜರೂ ಆ ವೈಕುಂಠವನ್ನು ಹೊಂದಬೇಕೆಂಬ ಉದ್ದೇಶದಿಂದ ತಮ್ಮ ರಾಜ್ಯ, ಕೋಶ, ಭೋಗದಾಶೆ ಇವುಗಳನ್ನೆಲ್ಲ ಬಿಟ್ಟು ವನಕ್ಕೆ ಹೋಗುವರು. ಅಂದಬಳಿಕ ಆ ಹರಿಮಂದಿರವನ್ನು ಯಾರು ಬಯಸದಿರುವರು ?

**ಸೂತ ಉವಾಚ**

**ಯ ಇದಮನು ಶೃಣೋತಿ ಶ್ರಾವಯೇದ್ವಾ ಮುರಾರೇಶ್ಚರಿತಮಮೃತ**
**ಕೀರ್ತೇರ್ವರ್ಣಿತಂ ವ್ಯಾಸಪುತ್ರೈಃ ।**
**ಜಗದಘಭಿದಲಂ ತದ್ಭಕ್ತಕರ್ಣಾವತಂಸಂ ಭಗವತಿ ಕೃತಚಿತ್ತೋ ಯಾತಿ**
**ತತ್ ಕ್ಷೇಮಧಾಮ ॥**

ಸೂತರು ಹೇಳುತ್ತಾರೆ – ಶೌನಕಾದಿಗಳಿರಾ ! ವ್ಯಾಸಪುತ್ರರಾದ ಶುಕಾಚಾರ್ಯರೇ ಮೊದಲಾದ ಮಹಾನುಭಾವರು ವರ್ಣಿಸಿರುವ, ಮಂಗಳಕೀರ್ತಿಯಾದ, ಶ್ರೀಹರಿಯ ಚರಿತ್ರವು ಜಗತ್ತಿನ ಪಾಪಗಳನ್ನು ಸಂಪೂರ್ಣವಾಗಿ ನಾಶಮಾಡತಕ್ಕದ್ದು ಭಕ್ತರ ಕಿವಿಗಳಿಗೆ ಆಭರಣವಾಗಿರತಕ್ಕುದು. ಇಂತಹ ಚರಿತ್ರೆಯನ್ನು ಯಾವನು ನಿತ್ಯವೂ ಕೇಳುವನೋ, ನಿತ್ಯವೂ ಯಾವನು ಹೇಳುವನೋ ಅಂತಹವನು ಭಗವಂತನಲ್ಲಿಯೇ ನಟ್ಟಮನಸ್ಸುಳ್ಳವನಾಗಿ ನಿತ್ಯಕ್ಷೇಮರೂಪವಾದ ಮೋಕ್ಷವನ್ನು ಪಡೆಯುವನು.

**ನೂರಮೂರನೆಯ ಅಧ್ಯಾಯ ಮುಗಿದುದು**

**ದಶಮ ಸ್ಕಂಧ ಸಮಾಪ್ತ**

# ಏಕಾದಶಸ್ಕಂಧ ಪ್ರಾರಂಭ

**ಶುಕ :–** **ಕೃತ್ವಾ ದೈತ್ಯವಧಂ ಕೃಷ್ಣಃ ಸರಾಮೋ ಯದುಭಿರ್ವೃತಃ।**
**ಭುವೋಽವತಾರಯನ್ ಭಾರಂ ಯವಿಷ್ಠಂ ಜನಯನ್ ಕಲಿಂ॥**

ಶ್ರೀಕೃಷ್ಣನು ಬಲರಾಮನಿಂದ ಕೂಡಿ ದೈತ್ಯರನ್ನು ಸಂಹರಿಸಿ, ಬಂಧುಗಳಿಗೆ ಕಲಹವನ್ನು ಹುಟ್ಟಿಸಿ ಭೂಭಾರವನ್ನು ಕಳೆದನು.

**ಪರೀಕ್ಷಿತ್ :–** ಯಾದವರು ಕೃಷ್ಣನ ಭಕ್ತರಾಗಿ ಬ್ರಾಹ್ಮಣರ ಶಾಪಕ್ಕೆ ಗುರಿಯಾಗಲು ಕಾರಣವೇನು ?

**ಶುಕ :–** ಶ್ರೀಕೃಷ್ಣನು ಯಾದವಕುಲವನ್ನು ಸಂಹರಿಸಬೇಕೆಂದು ನಿಶ್ಚಯಿಸಿದನು. ಆಗ ಪಿಂಡಾರಕವೆಂಬ ಕ್ಷೇತ್ರದಲ್ಲಿ ದುರ್ವಾಸ, ವಿಶ್ವಾಮಿತ್ರಾದಿ ಋಷಿಗಳು ಸೇರಿದ್ದರು. ಅವರನ್ನು ಗೇಲಿ ಮಾಡಲಿಚ್ಛಿಸಿದ ಯಾದವಕುಮಾರರು ಸಾಂಬನಿಗೆ ಗರ್ಭಿಣಿಯ ವೇಷವನ್ನು ಹಾಕಿ, ಆ ಋಷಿಗಳ ಮುಂದೆ ನಿಲ್ಲಿಸಿ "ಇವಳಿಗೆ ಹೆಣ್ಣಾಗುವುದೇ ಗಂಡೇ ?" ಎಂದು ಕೇಳಿದರು. ಮುನಿಗಳಿಗೆ ಕೋಪವು ಬಂದು 'ನಿಮ್ಮ ಕುಲವನ್ನು ನಾಶಗೊಳಿಸುವ ಮುಸಲವನ್ನು ಹಡೆಯುವಳು' ಎಂದರು. ಸಾಂಬನ ಉದರದಲ್ಲಿದ್ದ ಮುಸಲ (ಉಕ್ಕಿನ ಒನಕೆ)ವನ್ನು ನೋಡಿ ಹೆದರಿ ಉಗ್ರಸೇನಾದಿಗಳಿಗೆ ಇದನ್ನು ತಿಳಿಸಿದರು. ರಾಜನು ಮುಸಲವನ್ನು ಪುಡಿಮಾಡಿಸಿ ಸಮುದ್ರಕ್ಕೆ ಹಾಕಿಸಿದನು. ಅವು ಹೊಡಿಕೆಗಳಾದುವು. ಜರಾ ಎಂಬ ವ್ಯಾಧನು ಮೀನೊಂದರ ಹೊಟ್ಟೆಯೊಳಗಿದ್ದ ಮುಸಲದ ಚೂರನ್ನು ತನ್ನ ಬಾಣದ ಅಲುಗನ್ನಾಗಿ ಮಾಡಿಕೊಂಡನು. ಶ್ರೀಕೃಷ್ಣನು ಈ ಶಾಪವು ತಟ್ಟದಂತೆ ಮಾಡಲು ಶಕ್ತನಾದರೂ ಅದನ್ನು ಅನುಮೋದಿಸಿದನು.

**ಒಂದನೆಯ ಅಧ್ಯಾಯ ಮುಗಿದುದು**

ವಸುದೇವ –: (ಮನೆಗೆ ಬಂದ ನಾರದರನ್ನು ಕುರಿತು) ದೇವತೆಗಳು ದರ್ಶನ ಕೊಡದೆ ಸೇವೆಗೆ ತಕ್ಕ ಫಲವನ್ನು ಕೊಡುವರು. ತಾವು ದೇವತೆಗಳೂ ಆಗಿರುವುದರಿಂದ ಪ್ರಾಣಿಗಳ ಮಂಗಳಕ್ಕಾಗಿ ಸಂಚರಿಸಿ ದರ್ಶನವನ್ನು ಕೊಡುವಿರಿ. ಭಗವಂತನು ಪ್ರಸನ್ನನಾಗಲು ಮಾಡಬೇಕಾದ ಧರ್ಮಗಳಾವುವು ? ಹಿಂದೆ ಮುಕುಂದನನ್ನು ಮಗನಾಗಬೇಕೆಂದು ಆರಾಧಿಸಿದೆ. ಈ ಜನ್ಮದಲ್ಲಿಯೇ ಮುಕ್ತನಾಗಲು ನಾನಾವ ಧರ್ಮವನ್ನು ಮಾಡಬೇಕೆಂಬುದನ್ನು ಉಪದೇಶಿಸಿರಿ.

**ನಾರದ :–** ಋಷಭಪರಮಾತ್ಮನ ಮಕ್ಕಳು ಕವಿ ಮುಂತಾದ ಒಂಭತ್ತು ಮಂದಿ ಜ್ಞಾನಿಗಳು ವಿರಕ್ತರೂ ವೇದಾಂತಿಗಳೂ ಆದವರು. ಅವರು ನಿಮಿರಾಜನ ಸತ್ರ ಯಾಗದಲ್ಲಿ ಇದ್ದರು. ಆ ಜ್ಞಾನಿಗಳನ್ನು ಉಪದೇಶಿಸಬೇಕೆಂದು ಆ ರಾಜನು ಕೇಳಿದನು.

**ಕವಿ :–** ಸ್ವತಂತ್ರಕರ್ತನಾನಲ್ಲವೆಂದು ತಿಳಿದು, ದೇಹಾದಿಗಳಲ್ಲಿನ ಮಮತೆ ಯನ್ನು ಬಿಟ್ಟು ದುಃಸಂಗರಹಿತನಾಗಿ, ಸರ್ವವನ್ನೂ ಪರಬ್ರಹ್ಮನಿಗೆ ಅರ್ಪಿಸುತ್ತಾ, ಹರಿಕಥಾ ಶ್ರವಣಸಂಕೀರ್ತನೆಗಳನ್ನು ಮಾಡುತ್ತ, ಆಕಾಶಾದಿಗಳಲ್ಲಿರುವ ಶ್ರೀಹರಿ ಯನ್ನು ಕಾಣುತ್ತ ನಮನಾದಿಗಳನ್ನು ಮಾಡಿ ಧನ್ಯನಾಗಬೇಕು. ಇದರಿಂದ ಹರಿಯಲ್ಲಿ ಭಕ್ತಿ, ಹರಿಯೇ ಸ್ವತಂತ್ರನೆಂಬ ಜ್ಞಾನ ಮತ್ತು ಸಂಸಾರದಲ್ಲಿ ವಿರಕ್ತಿ ಇವು ಏಕ ಕಾಲ ದಲ್ಲಿ ಹುಟ್ಟುವುವು. ಅವುಗಳಿಂದ ಬ್ರಹ್ಮಜ್ಞಾನವಾಗಿ ಮುಕ್ತಿಯು ದೊರೆಯುವುದು.

**ನಿಮಿ :–** ಉತ್ತಮ, ಮಧ್ಯಮ ಭಾಗವತನಾರು ? ಅವನ ಆಚಾರ ವಾವುದು ? ಭಕ್ತನ ಲಕ್ಷಣವೇನು ?

**ಹರಿ ;–** ಸರ್ವರಿಗೂ ನಾರಾಯಣನೇ ನಿಯಾಮಕನು. ಎಲ್ಲವೂ ಅವನನ್ನೇ ಆಶ್ರಯಿಸಿವೆ–ಎಂದು ತಿಳಿಯುವವನು ಉತ್ತಮ ಭಾಗವತ. ಹರಿಯಲ್ಲಿ ಭಕ್ತಿ, ಸಜ್ಜ ನರಲ್ಲಿ ಮೈತ್ರಿ, ಅಜ್ಞರಲ್ಲಿ ಕೃಪೆ, ದ್ವೇಷಿಗಳಲ್ಲಿ ಉಪೇಕ್ಷೆ ಉಳ್ಳವನು ಮಧ್ಯಮ ಭಾಗವತ. ಪ್ರತಿಮೆಯಲ್ಲಿ ದೇವರಿರುವನು ಎಂದು ಪೂಜಿಸುತ್ತ, ಇತರರಲ್ಲಿ ಹಾಗೆ ತಿಳಿಯದೆ ಪೂಜಿಸದೆ ಬಿಟ್ಟವನು ಅಧಮಭಾಗವತ. ದೈತ್ಯರಿಗೇ ದುಃಖಾದಿಗಳೆಂದು ತಿಳಿದು, ಪಂಚಭೇದ ತಾರತಮ್ಯ ಜ್ಞಾನವುಳ್ಳವನಾಗಿ, ಹರಿಯ ಸ್ಮರಣೆಯನ್ನು ಸದಾ ಮಾಡುತ್ತ, ಭಕ್ತಿಯಿಂದ ಹೃದಯದಲ್ಲಿ ಹರಿಯನ್ನು ನಿಲ್ಲಿಸಿಕೊಂಡಿರುವವನು ಭಾಗವ ತೋತ್ತಮನು. ಇದೇ ಭಗವತ್ಪ್ರಿಯನ ಲಕ್ಷಣ.

**ಎರಡನೆಯ ಅಧ್ಯಾಯ ಮುಗಿದುದು**

**ನಿಮಿ :–** ಹರಿಯ ಇಚ್ಛಾಶಕ್ತಿಯನ್ನೂ, ಜಡಪ್ರಕೃತಿಯ ಮಹಿಮೆಯನ್ನೂ ತಿಳಿಸಿ.

**ಅಂತರಿಕ್ಷ :–** ಹರಿಯು ಯೋಗ್ಯರಿಗೆ ತತ್ತ್ವಜ್ಞಾನವುಂಟಾಗುವುದಕ್ಕಾಗಿ, ಸ್ವೇಚ್ಛೆಯಿಂದ ಪ್ರಕೃತಿಯನ್ನು ಉದ್ಬೋಧಿಸಿ, ಇಪ್ಪತ್ತುನಾಲ್ಕು ತತ್ತ್ವಗಳನ್ನೂ, ಬ್ರಹ್ಮಾಂಡವನ್ನೂ ಸೃಷ್ಟಿಸಿದನು. ಬಳಿಕ ಅದರೊಳಗೆ ಪ್ರವೇಶಿಸಿ, ತ್ರಿವಿಧ ಜೀವ ರಿಗೂ ಪಾಂಚಭೌತಿಕ ಶರೀರಗಳನ್ನು ತೊಡಿಸಿದನು. ಆ ಶರೀರಗಳಲ್ಲಿಯೂ ಅವನು ಪ್ರವೇಶಿಸಿ ಹನ್ನೊಂದು ಇಂದ್ರಿಯಗಳನ್ನು ಪ್ರೇರಿಸಲು ಅಷ್ಟೇರೂಪಗಳನ್ನು ತೆಗೆದು ಕೊಂಡನು. ಸುಖದುಃಖಗಳನ್ನು ಜೀವನು ಅನುಭವಿಸುವಂತೆ ಮಾಡುತ್ತ, ತಾನು ಮಾತ್ರ ಶುಭವನ್ನುಣ್ಣುತ್ತ ಆನಂದದಿಂದಿರುವನು. ಜೀವನು ಕರ್ಮಗಳನ್ನು ಮಾಡುತ್ತ ಸಂಸಾರದಲ್ಲಿ ಸುತ್ತುತ್ತಿರುವನು. ಜೀವನು ಮತ್ತು ಈಶ್ವರನು ಒಂದೇ ಎಂದು

ತಿಳಿದವನು ಕೊನೆಗೆ ನಿತ್ಯನರಕದಲ್ಲಿ ಬೀಳುವನು. ಇದೇ ಈಶ್ವರನ ಇಚ್ಛಾಶಕ್ತಿಯನ್ನು ತಿಳಿಸುವ ಅವ್ಯಕ್ತ ಸೃಷ್ಟಿಯು. ಈಗ ಈಶಕ್ತಿಯ ಮಹಿಮೆಯನ್ನು ತಿಳಿಸುವ ಪ್ರಳಯವನ್ನು ತಿಳಿಸುವೆನು ಕೇಳು :- ನೂರುವರ್ಷ ಮಳೆ ಇರುವುದಿಲ್ಲ. ಸಂಕರ್ಷಣ ಮುಖದಿಂದ ಹೊರಡುವ ಅಗ್ನಿಯು ಬ್ರಹ್ಮಾಂಡವನ್ನು ಸುಡುವುದು. ಮಹಾವೃಷ್ಟಿಯಾಗಿ ಎಲ್ಲವೂ ಜಲಮಯವಾಗುವುದು. ಜನ್ಯತತ್ತ್ವಗಳು ಜನಕತತ್ತ್ವಗಳಲ್ಲಿ ಲಯ ಹೊಂದುವುವು. ಎಲ್ಲ ಜೀವರೊಡನೆ ಬ್ರಹ್ಮದೇವರು ಕಾರ್ಯಗತರೂಪಗಳನ್ನು ಕಾರಣಗತರೂಪಗಳಲ್ಲಿ ಒಂದಾಗಿಸಿ ಮೂಲರೂಪದಿಂದ ಪರಮಾತ್ಮನಲ್ಲಿ ಲೀನವಾಗುವರು ಅಂದರೆ ಹರಿಯ ಅಧೀನದಲ್ಲಿ ಅಡಗುವರು.

**ನಿಮಿ :-** ಸ್ಥೂಲಬುದ್ಧಿಯುಳ್ಳ ಜೀವರು ಮಾಯೆಯನ್ನುದಾಟುವ ಪ್ರಕಾರವನ್ನು ತಿಳಿಸಿ

**ಪ್ರಬುದ್ಧ :-** ಜೀವರು ಸುಖಬೇಕೆಂದೇ ಮೈಥುನಾದಿಕರ್ಮಗಳನ್ನು ಮಾಡಿ ದುಃಖವನ್ನು ಹೊಂದುವರು. ಕಾಮ್ಯಕರ್ಮದಿಂದ ದೊರೆಯುವ ಸ್ವರ್ಗಸುಖವೂ ಅನಿತ್ಯವೇ. ಸದ್ಗುರುವನ್ನು ಸೇವಿಸಿ ಭಾಗವತಧರ್ಮಗಳನ್ನು ಅನುಷ್ಠಿಸಿದರೆ ಶ್ರೀಹರಿಯು ಪ್ರೀತನಾಗಿ ಮೋಕ್ಷವನ್ನು ಕೊಡುವನು. ಭಾಗವತ ಧರ್ಮಗಳು ಯಾವುವು ? ಎಂದರೆ :- ದುರ್ವಿಷಯ ಸಂಗ ತ್ಯಾಗ ಸರ್ವಪ್ರಾಣಿಗಳಲ್ಲಿಯೂ ಯಥಾಯೋಗ್ಯ ದಯೆ, ಶೌಚ, ತಪಸ್ಸು, ಸಹನೆ, ಮೌನ, ವೇದಾಧ್ಯಯನ, ಬ್ರಹ್ಮಚರ್ಯ, ಅಹಿಂಸೆ, ದ್ವಂದ್ವಸಹನೆ, ಹರಿಮಹಿಮಾಜ್ಞಾನ, ಏಕಾಂತವಾಸ, ಹರಿಯನ್ನೇ ಆಶ್ರಯಿಸಿರುವುದು, ಶುದ್ಧ ಸ್ಥಳದಲ್ಲಿ ವಾಸ, ವಲ್ಕಲಧಾರಣೆ, ವಿಷ್ಣುಪ್ರತಿಪಾದ್ಯ ಶಾಸ್ತ್ರಗಳಲ್ಲಿ ಆಸ್ತಿಕ್ಯ ಬುದ್ಧಿ, ಕಲಾವಿದ್ಯಾನಿಂದನೆ, ತ್ರಿಕರಣನಿಗ್ರಹ, ಸತ್ಯ, ಶಮ, ದಮ, ಶ್ರವಣ, ಕೀರ್ತನೆ, ಧ್ಯಾನ ತ್ರಿಕರಣಪೂರ್ವಕ ಹರ್ಯಾರಾಧನೆ, ಇಷ್ಟಾಪೂರ್ತ, ಸತಿಸುತಾದಿಗಳು ಹರಿಯಿಂದಲೇ ದತ್ತರೆಂಬ ಚಿಂತನೆ, ಹರಿಭಕ್ತರಲ್ಲಿ ಪ್ರೇಮ ಮತ್ತು ಹರಿಸುರರು ಸಜ್ಜನರು ಇವರ ಸೇವೆ. ಇದರಿಂದ ಭಕ್ತಿ, ವೈರಾಗ್ಯವುಂಟಾಗುವುದು.

**ನಿಮಿ :-** ಸದ್‌ಜ್ಞಾನ ಮತ್ತು ಅನ್ಯಥಾಜ್ಞಾನ ಯಾವುದೆಂಬುದನ್ನು ವಿವರಿಸಿ.

**ಪಿಪ್ಪಲಾಯನ :-** ಶ್ರೀಹರಿಯು ಜಗಜ್ಜನ್ಮಾದಿಕಾರಣನು, ಅವಸ್ಥಾತ್ರಯ ಪ್ರವರ್ತಕನು, ಅದರಿಂದ ತಿರಸ್ಕೃತವಾಗದಿರುವ ಶಕ್ತಿಯುಳ್ಳವನು, ಮನಮುಂತಾದ ಅಭಿಮಾನಿದೇವತೆಗಳಿಗೆ ಸಂಪೂರ್ಣವಾಗಿ ಗೋಚರನಾಗದಿರುವವನು, ಅಜನು, ಆದುದರಿಂದ ಸರ್ವೋತ್ತಮನು. ಇದೇ ಸದ್‌ಜ್ಞಾನ.

ಹರಿಯೇ ಪ್ರಕೃತಿ ಮತ್ತು ಅದರ ಪರಿಣಾಮರೂಪನು. ಇದೇ ಅನ್ಯಥಾ ಜ್ಞಾನ, ಇದರ ಫಲ ನಿತ್ಯನರಕ. ಹರಿಯು ಸರ್ವವಿಲಕ್ಷಣನೆಂದು ತಿಳಿದವರಿಗೇ

ಮುಕ್ತ ಶ್ರೀಹರಿಗೆ ಜನನ ಮೊದಲಾದ ಆರು ವಿಕಾರಗಳು ಎಂದಿಗೂ ಇಲ್ಲ. ಸಕಲ ವಸ್ತುಗಳಲ್ಲಿಯೂ ಇದ್ದು ಶಕ್ತ್ಯಾದಿಗಳನ್ನು ಕೊಡತಕ್ಕವನು.

ಜೀವನು ದೇಹದಿಂದ ಹೊರಡುವಾಗ ತತ್ತ್ವದೇವತೆಗಳೊಡನೆ ಮುಖ್ಯಪ್ರಾಣನನ್ನು ಪ್ರವೇಶಿಸುವನು. ಹೊಸದೇಹಕ್ಕೆ ಬರುವಾಗ ಪರಮಾತ್ಮನನ್ನು ಪ್ರವೇಶಿಸುವನು. ನಿದ್ರೆಯಲ್ಲಿ ಪ್ರಾಜ್ಞನೊಳಗೆ ಪ್ರವೇಶಿಸುವನು. ಹೀಗಿರುವುದರಿಂದ ಜೀವರಿಗೆ ಸ್ವಾಮಿಯಾದ ಮುಖ್ಯಪ್ರಾಣದೇವರಿಗೂ ಶ್ರೀಹರಿಯೇ ಆಧಾರ. ಈ ಕಾರಣದಿಂದ **ಹರಿಯೇ ಸರ್ವೋತ್ತಮನು.** ಭಕ್ತಿವೃದ್ಧಿಯನ್ನು ಹೊಂದಿದವನು ನಿರ್ಮಲಾಂತಃಕರಣದಲ್ಲಿ ಶ್ರೀಹರಿಯನ್ನು ಸಾಕ್ಷಾತ್ಕರಿಸಬಲ್ಲನು.

**ನಿಮಿ** .- ಕರ್ಮಯೋಗವನ್ನು ತಿಳಿಸಿ.

**ಆವಿರ್ಹೋತ್ರ** :- ಹರಿಪ್ರೀತ್ಯರ್ಥವಾಗಿ ಮಾಡಲ್ಪಡತಕ್ಕುದೇ ಕರ್ಮ. ವಿಹಿತ ಕರ್ಮ ತ್ಯಾಗವೇ ಅಕರ್ಮ. ವೇದನಿಷಿದ್ಧ ಆಚರಣೆ ವಿಕರ್ಮ. ಇವುಗಳನ್ನು ವೇದಗಳಿಂದಲೇ ತಿಳಿಯಲ್ಪಡತಕ್ಕುದು. ವೇದವು ಕೇವಲ ಈಶ್ವರ ವಿಷಯಕವಾದುದರಿಂದ ಜ್ಞಾನಿಗಳೂ ವೇದಾರ್ಥವಿಚಾರದಲ್ಲಿ ಮೋಹವುಂಟಾಗುವುದು. ಶ್ರೀಹರಿಯ ಪ್ರೀತಿಗಾಗಿಯೇ ವೇದಗಳು ಕರ್ಮಗಳನ್ನು ಹೇಳುತ್ತವೆ ಎಂಬುದನ್ನು ತಿಳಿಯದೆ ಮಾಡುವ ಕರ್ಮದಿಂದ ನರಕವಾಗುತ್ತದೆ. ತಿಳಿದು ಮಾಡಿದರೆ ಜ್ಞಾನವೂ ಅದರಿಂದ ಮುಕ್ತಿಯೂ ಆಗುವುದು. ಭಕ್ತಿಯಿಲ್ಲದೆ ವೇದೋಕ್ತ ಕರ್ಮವನ್ನು ಮಾಡಿದರೂ ಅದು ವೇದವಿರುದ್ಧ ಕರ್ಮವೆನಿಸಿ ಅದರಿಂದ ನರಕವಾಗುವುದು. ವೇದದಲ್ಲಿ 'ಸ್ವರ್ಗಕಾಮೋ ಯಜೇತ' ಇತ್ಯಾದಿ ಕಾಮ್ಯ ಕರ್ಮದ ಫಲವನ್ನು ಹೇಳಿದೆಯಲ್ಲವೆ ? ಎಂದು ಕೇಳಬಹುದು. ವೇದೋಕ್ತವಾದ ಕರ್ಮವನ್ನೇ ಮಾಡಬೇಕೆಂಬ ಶ್ರದ್ಧೆ, ಆದರಗಳನ್ನು ಹುಟ್ಟಿಸುವುದಕ್ಕಾಗಿ ಹಾಗೆ ವೇದವು ಹೇಳುತ್ತಿದೆ. ಅದು ದೋಷವಲ್ಲ.

ಕರ್ಮಯೋಗಕ್ಕೆ ಸಂಬಂಧಪಟ್ಟ ಹರಿಪೂಜೆಯ ಪ್ರಕಾರವನ್ನು ಹೇಳುವೆನು ಕೇಳು :-

ಪಂಚ ರಾತ್ರದಲ್ಲಿ ಹೇಳಿರುವ ಪ್ರಕಾರ ಹರಿಪೂಜೆ ಮಾಡಬೇಕು. ಈ ಸಂಪ್ರಧಾಯವನ್ನು ತಿಳಿಯದವನು ಚೆನ್ನಾಗಿ ಪರೀಕ್ಷಿಸಿ ಯೋಗ್ಯನೆಂದು ತಿಳಿದ ಮೇಲೆ ಅಂತಹ ಗುರುವನ್ನು ಸೇವಿಸಿ, ಅವನು ಹೇಳಿದಂತೆ ಹರಿಯನ್ನು ಪೂಜಿಸಬೇಕು. ಹರಿಯ ಪ್ರತಿಮೆಗಳು ಮೂರುಬಗೆ. ದ್ರವ್ಯಲಿಂಗ=ಶಿಲಾದಿಪ್ರತಿಮೆಗಳು. ಕ್ಷಿತಿಲಿಂಗ=ಸ್ಥಂಡಿ

ಆ. ಆತ್ಮಲಿಂಗ=ವಾಸನಾಮಯ ಪ್ರತಿಮೆ. ಅವುಗಳಲ್ಲಿ ಒಂದನ್ನು ಸಿದ್ಧಪಡಿಸಿಕೊಂಡು ಷೋಡಶೋಪಚಾರಗಳಿಂದ ಪೂಜಿಸಬೇಕು. ಹೀಗೆಯೇ ಅಗ್ನಿ ಸೂರ್ಯ, ಹೃದಯಗಳಲ್ಲಿ ಶ್ರೀಹರಿಯನ್ನು ಪೂಜಿಸಿದರೆ ಮುಕ್ತಿಯಾಗುವುದು.

**ಮೂರನೆಯ ಅಧ್ಯಾಯ ಮುಗಿದುದು**

**ನಿಮಿ :–** ಶ್ರೀಹರಿಯು ಹಿಂದೆ ಮಾಡಿದ, ಈಗ ಮಾಡಿರುವ, ಮುಂದೆ ಮಾಡುವ ಅವತಾರವನ್ನು ತಿಳಿಸಿ.

**ದ್ರುಮಿಲ :–** ಸ್ವಾಮಿಯ ಕಾರ್ಯಗಳನ್ನೂ, ಗುಣಗಳನ್ನೂ ಪೂರ್ಣವಾಗಿ ಯಾರೂ ಹೇಳಲಾರರು. ನನಗೆ ಶಕ್ತಿಯಿದ್ದಷ್ಟು ಹೇಳುವೆನು ಕೇಳು :– ಶ್ರೀನಾರಯಣನು ವಾಸುದೇವನಾಗಿ ಮಹದಹಂಕಾರ, ಪಂಚಭೂತಗಳನ್ನು ಸೃಷ್ಟಿಮಾಡುವಾಗ ಪುರುಷ ಎಂಬ ಹೆಸರುಳ್ಳವನಾದನು. ಬ್ರಹ್ಮಾಂಡವನ್ನು ಸೃಷ್ಟಿಸಿ ಅದರೊಳಗೆ ಒಂದಂಶದಿಂದ ಪ್ರವೇಶಿಸುವಾಗ ಪುರುಷ ಎಂಬ ಹೆಸರುಳ್ಳವನಾದ. ಶರೀರಗಳನ್ನು ಸೃಷ್ಟಿಸಿ ಅವುಗಳೊಳಗೆ ಪ್ರವೇಶಿಸುವಾಗ ಪುರುಷ ಎಂಬ ಹೆಸರನ್ನು ಹೊಂದಿದನು. ಹೀಗೆ ಪುರುಷರೂಪತ್ರಯನು ಶ್ರೀಹರಿ. ಮೂರು ಲೋಕಗಳೂ ಶ್ರೀಹರಿಯ ಆಧಾರದಿಂದ ನಿಂತಿವೆ. ಶ್ರೋತ್ರಾದಿ ಇಂದ್ರಿಯಗಳೂ, ಬಲ, ಓಜಸ್ಸು ಮುಂತಾದುವೆಲ್ಲ ಅವನಿಂದಲೇ ಪ್ರೇರಿತಗಳಾಗಿ ಪ್ರವರ್ತಿಸುತ್ತಿವೆ. ಮೂರುಗುಣಗಳಿಂದ ಸೃಷ್ಟಿ, ಸ್ಥಿತಿ, ಸಂಹಾರಗಳನ್ನು ಮಾಡುವುದರಿಂದ ಅವನು ಆದಿಕರ್ತನೆನಿಸುವನು.

ಯಮಧರ್ಮ ಮತ್ತು ಮೂರ್ತಿ ದೇವಿಯಲ್ಲಿ ನಾರಾಯಣನೆಂದೂ. ನರನೆಂಬ ಆವಿಷ್ಟ ರೂಪನಾಗಿಯೂ ಅವತರಿಸಿದನು. ಬದರಿ ನಾರಾಯಣನನ್ನು ಇಂದ್ರಪ್ರೇಷಿತ ಮನ್ಮಥಾದಿಗಳು ತಪಸ್ಸನ್ನು ಬಿಡುವಂತೆ ಮಾಡಲು ಯತ್ನಮಾಡಿ ವಿಫಲರಾದರು. ಕೊನೆಗೆ ದೇವರಿಂದಲೇ ಸತ್ಕೃತರಾಗಿ ಹಿಂತಿರುಗಿದರು. ಹಂಸ, ದತ್ತ, ಸನತ್ಕುಮಾರ, ಹಯಗ್ರೀವ, ಮತ್ಸ್ಯ, ವರಾಹ, ಕೂರ್ಮ, ವ್ಯಾಸ. ನರಸಿಂಹ, ವೈವಸ್ವತಮನ್ವಂತರವನ್ನು ಬಿಟ್ಟು ಉಳಿದಮನ್ವಂತರಗಳಲ್ಲಿ ದೈತ್ಯರನ್ನು ಕೊಲ್ಲುವ ಉಪೇಂದ್ರ, ವಾಮನ, ಪರಶುರಾಮ, ಕೃಷ್ಣ, ಬುದ್ಧ ಮತ್ತು ಕಲ್ಕಿ ಈ ಅವತಾರಗಳಿಂದ ಸಜ್ಜನರನ್ನು ಕಾಪಾಡುವನು. ಅವನ ಅವತಾರ ಮತ್ತು ಕರ್ಮಗಳು ಅನಂತವಾಗಿವೆ. ಸಂಕ್ಷೇಪವಾಗಿ ವರ್ಣಿಸಿರುವೆನು.

**ನಾಲ್ಕನೆಯ ಅಧ್ಯಾಯ ಮುಗಿದುದು**

**ಸಿನಿ :-** ಭಗವದ್ವಿಮುಖರು ಹೊಂದುವ ಸ್ಥಾನವಾವುದು ?

**ಚಮಸ :-** ಶ್ರೀಹರಿಯೇ ತಂದೆ ಮತ್ತು ಅತ್ಯಂತ ಉಪಕಾರಿ. ಈ ಜಗದಪ್ಪನನ್ನು ಸೇವಿಸದೆ ತಿರಸ್ಕರಿಸುವವರು ನಿತ್ಯನರಕದಲ್ಲಿ ಬೀಳುವರು. ಸ್ತ್ರೀಶೂದ್ರರಿಗೆ ವೇದಾಧಿಕಾರವಿಲ್ಲ. ಹರಿಕಥೆಯನ್ನು ಕೇಳಿ ಉದ್ಧೃತರಾಗುವರು. ತ್ರೈವರ್ಣಿಕರು ವೇದಾಧಿಕಾರಿಗಳಾದರೂ ಭಕ್ತಿಯಿಲ್ಲದೆ ವೇದೋಕ್ತಕರ್ಮಮಾಡಿದರೂ ಮುಕ್ತಿಯಿಲ್ಲ ಮುಕ್ತಿಗೆ ದ್ವಿಜತ್ವವು ಕಾರಣವಲ್ಲ. ಭಕ್ತಿಯೇ ಕಾರಣವು. ಶಾಕ್ತೇಯರು ಹರಿ ಮತ್ತು ಅವನ ಭಕ್ತರನ್ನು ತಿರಸ್ಕರಿಸಿ ಲಕ್ಷ್ಮೀದೇವಿಯೇ ಸಂಪತ್ತನ್ನು ಕೊಡುವವಳಾದುದರಿಂದ ಅವಳೇ ಸರ್ವೋತ್ತಮಳು ಎಂದು ದುಷ್ಟ ಉಪಾಸನೆಮಾಡುತ್ತ, ತಾವು ಬದುಕಲು ಕೋಳಿ ಕುರಿಗಳನ್ನು ಬಲಿಕೊಡುವರು. ಅಂತಹವರು ತಮಸ್ಸಿನಲ್ಲಿ ಬೀಳುವರು.

ಮೈಥುನ, ಮಾಂಸಮದ್ಯಗಳ ಸೇವನೆ, ಭಗವತ್ಪೂಜೆಗಾಗಿ ಕರ್ತವ್ಯವು. ಮೈಥುನವು ವಾಮದೇವಯಜ್ಞರೂಪವಾದರೆ ಪುಣ್ಯಕರ. ವಿಪ್ರರು, ಕ್ಷತ್ರಿಯರು ಮೊದಲಾದವರು ರತಿಯಜ್ಞದಲ್ಲಿ ಪಿಷ್ಟಕೃತಮದ್ಯವನ್ನು ಆಘ್ರಾಣಿಸುವುದು ಪುಣ್ಯಕರ. ಈ ಅನುಸಂಧಾನವಿಲ್ಲದೆ ರಾಗಾದಿಗಳಿಂದ ರತಿ, ಮಾಂಸಮದ್ಯ ಸೇವನೆ ಮಾಡುವ ಅಸುರರು ತಮಸ್ಸಿನಲ್ಲಿ ಬೀಳುವರು.

ಸಂಪಾದಿತ ಧನವು ಧರ್ಮಕ್ಕೆ ಕಾರಣವಾದರೆ ಅದರಿಂದ ಜ್ಞಾನ ಮತ್ತು ಮುಕ್ತಿ ದೊರೆಯುವುದು. ಲೌಕಿಕ ಸುಖಕ್ಕೆ ಉಪಯೋಗವಾದ ಧನದಿಂದ ದುರ್ಯೋಧನನಿಗೆ ಅಧೋಗತಿಯೇ ಆಗುವುದು.

ಸುರೆಯನ್ನು ಹೋಮಿಸುವ ಯಜ್ಞದಲ್ಲಿ ಹಿಟ್ಟಿನಿಂದ ತಯಾರಾದ ಸುರೆಯನ್ನು ಹೋಮಮಾಡಿ ಯಜ್ಞಶೇಷವನ್ನು ಬ್ರಾಹ್ಮಣಾದಿಗಳು ಆಘ್ರಾಣಿಸುವುದು ಮಾತ್ರ ವಿಹಿತ. ಅಗ್ನಿಷ್ಟೋಮೀಯ ಯಜ್ಞದಲ್ಲಿ ಭಗವದನುಸಂಧಾನಪೂರ್ವಕ ಪಶುವನ್ನು ಕೊಂದು ಆ ಪಶುವು ಸ್ವರ್ಗವನ್ನು ಹೊಂದುವಂತೆ ಮಾಡಬೇಕು. ಅದು ಪಶುಹಿಂಸೆ ಯಾಗುವುದಿಲ್ಲ. ಅದು ಆಲಭವೆನಿಸುವುದು. ಇಂತಹ ಯಜ್ಞವು ವಿಹಿತವು ಹೀಗಿಲ್ಲವೆ ಯಜ್ಞದ ಹೆಸರನ್ನು ಹೇಳಿ ಕೊಂದ ಪಶುವಿನ ಮಾಂಸತಿನ್ನುವವರು ನಿತ್ಯನರಕದಲ್ಲಿ ಬೀಳುವರು.

ಹರಿಯು ಸರ್ವರಿಂದ ಭಿನ್ನನೆಂಬುದರಲ್ಲಿ ದ್ವೇಷವನ್ನು ಮಾಡುತ್ತ, ಸತಿಸುತರಲ್ಲಿ ಮೋಹವನ್ನಿಟ್ಟಿರುವವರು ನಿತ್ಯನರಕದಲ್ಲಿ ಬೀಳುವರು. ನಿತ್ಯಸಂಸಾರಿಗಳು ಪುಣ್ಯತೀರಿದ ಮೇಲೆ ಸ್ವರ್ಗದಿಂದ ಚ್ಯುತರಾಗುವರು. ಹರಿದ್ವೇಷಿಯಾದ ಅನ್ಯಥಾ ಜ್ಞಾನಿಯು ತಮಸ್ಸಿನಲ್ಲಿ ಬೀಳುತ್ತಾನೆ.

**ನಿಮಿ** :– ಹರಿಯು ಯಾವಯಾವ ಯುಗದಲ್ಲಿ ಯಾವಯಾವ ನಾಮ ರೂಪಗಳಿಂದಿರುವನು ? ಯಾವಯಾವ ಅಧಿಕಾರಿಗಳಿಂದ ಯಾವವಿಧವಾದ ಪೂಜೆ ಯನ್ನು ಕೈಗೊಳ್ಳುವನು ?

**ಕರಭಾಜನ** :– ಕೃತಯುಗದಲ್ಲಿ ಹರಿಯವರ್ಣ ಶುಕ್ಲ, ಚತುರ್ಬಾಹು, ದಂಡ ಕಮಂಡಲು ಧರಿಸಿರುವನು. ಹಂಸ, ಸುಪರ್ಣ ಇತ್ಯಾದಿ ಹತ್ತು ನಾಮಗಳು ಳ್ಳವನು; ನಿರ್ವೈರ, ಶಮ ದಯಾದಿ ಗುಣವಂತರಾದ ಆಗಿನ ಜನರಿಂದ ತಪಸ್ಸೆಂಬ ಪೂಜೆಯನ್ನು ಸ್ವೀಕರಿಸುವನು. ಕೃತಯುಗದಲ್ಲಿ ಈಗಿನ ಹಾಗೆ ವೇದವಿಭಾಗವಿಲ್ಲ. ಮೂಲವೇದಗಳೇ ಇದ್ದುವು.

ತ್ರೇತ್ರೆಯಲ್ಲಿ ಹರಿಯವರ್ಣ ಕೆಂಪು. ನಾಲ್ಕುತೋಳುಗಳಿದ್ದುವು. ಮೂರು ವೇದಪ್ರತಿಪಾದ್ಯ, ಯಜ್ಞಾದಿ ರೂಪಗಳನ್ನುಳ್ಳವನು, ಯಜ್ಞ, ವಿಷ್ಣು ಇತ್ಯಾದಿ ಎಂಟು ನಾಮಗಳು ಅವನಿಗೆ. ಜನರು ಅವನನ್ನು ಯಜ್ಞದಿಂದ ಪೂಜಿಸುವರು.

ದ್ವಾಪರದಲ್ಲಿ ಶ್ಯಾಮವರ್ಣ, ಪೀತವಾಸ. ಜನರು ವಾಸುದೇವಾದಿ ಭಗವ ದ್ರೂಪವನ್ನು ಪೂಜಿಸುವರು.

ಕಲಿಯುಗದಲ್ಲಿ ಕೃಷ್ಣವರ್ಣ. ಅಂಗೋಪಾಂಗ ದೇವತೆಗಳ ಸಹಿತನಾದ ಭಗವಂತನನ್ನು ಕೀರ್ತನಯುಕ್ತ ಯಜ್ಞದಿಂದ ಜನರು ಪೂಜಿಸುತ್ತಾರೆ. ಕೃಷ್ಣಜಯಂತಿ ರಾಮೋತ್ಸವಾದಿಗಳಿಂದ ಕೃಷ್ಣರಾಮರನ್ನು ಆರಾಧಿಸುವರು.

ಸರ್ವಯುಗದ ಜನರೂ ಗುರೂಪದಿಷ್ಟ ಭಗವಂತನ ರೂಪವನ್ನೇ ಉಪಾಸಿಸಿ ಮುಕ್ತರಾಗಬೇಕು.

ಕಲಿಯುಗದಲ್ಲಿ ಭಗವನ್ನಾಮ ಸಂಕೀರ್ತನೆಯಿಂದಲೇ ಸಕಲೇಷ್ಟಗಳು ಸಿದ್ಧಿಸು ತ್ತವೆಯಾಗಿ ಸಾರಜ್ಞಜ್ಞಾನಿಗಳು ಕಲಿಯುಗದಲ್ಲಿ ಭರತಖಂಡದಲ್ಲಿ ಹುಟ್ಟಬೇಕೆಂದು ಬಯಸಿ ಅದರಂತೆ ಹುಟ್ಟುವರು. ಈ ಯುಗದಲ್ಲಿ ಪಾಪಿಗಳು ಹೆಚ್ಚಿದರೂ ದ್ರಮಿಲ ದೇಶ, ತಾಮ್ರಪರ್ಣಿ, ಕೃತಮಾಲೆ, ಪಯಸ್ವಿನಿ, ನೇತ್ರವತಿ. ಕಾವೇರಿ ಈ ನದೀತೀರ ಗಳಲ್ಲಿ ಹರಿಭಕ್ತರಿರುವರು. ಸಾಮಾನ್ಯವಾಗಿ ಅವರೆಲ್ಲರ ಅಂತಃಕರಣವೂ ನಿರ್ಮಲ ವಾಗಿರುವುದು. ಅವರ ಸಂಗದಿಂದ ಸತ್ಸಾಧನೆ ಮಾಡಿಕೊಳ್ಳಬಹುದು.

ಭಕ್ತರಲ್ಲಿ ಮೂರುಬಗೆ. **ಸರ್ವಾತ್ಮನಾ ಭಕ್ತರು** ಅಂದರೆ ದೇವತೆಗಳೊಡೆ ಯರು. **ಸರ್ವಥಾ ಭಕ್ತರು.** ಅಂದರೆ ದೇವತೆಗಳು. ಇತರ ಭಕ್ತರು. ದೇವತೆ ಗಳಿಗೆ ಮಾನವರು ಕಿಂಕರರು ಮತ್ತು ಋಣಿಗಳು. ಆ ಋಣವನ್ನು ತೀರಿಸದೆ ಮುಕ್ತ ನಾಗುವುದಿಲ್ಲ. ತನಗಿಂತ ಕೀಳಾದವನು ಅನ್ನಾದಿ ಉಪಕಾರಮಾಡಿದ್ದರೂ ಅವನಿಗೆ ಋಣತೀರಿಸಬೇಕಾಗಿಲ್ಲ. ಅವನಲ್ಲಿರುವ ಹರಿಯೇ ಉಪಕಾರಮಾಡಿರುವನು ಎಂದು

ಚಿಂತಿಸಬೇಕು  ಸಂನ್ಯಾಸಿಯು ದಂಡೋದಕ ಕೊಡುವುದು, ದಿಕ್ಪಾಲಕರಿಗೆ ನಮನ ಇತ್ಯಾದಿಗಳಿಂದ ದೇವತೆಗಳ ಋಣವನ್ನು ಪರಿಹರಿಸಿಕೊಳ್ಳಬೇಕು.

ಹರಿಭಕ್ತರಿಗೆ ಹಿಂದಿನ ದುಷ್ಕರ್ಮದಿಂದ ಅಧಃಪತನವಿಲ್ಲ. ಹರಿಯು ಸರ್ವೋತ್ತಮನು. ಬ್ರಹ್ಮಾದಿಗಳು ಅವನ ಕಿಂಕರರು. ನಾನು ಅವರೆಲ್ಲರಿಗೂ ದಾಸನು-ಎಂದು ಭಕ್ತಿಪೂರ್ವಕ ಹರಿಪಾದ ಭಜನೆ ಮಾಡುವವನ ಹೃದಯದಲ್ಲಿರತಕ್ಕ ಶ್ರೀಹರಿಯು ಅವನ ದುಷ್ಕರ್ಮಗಳನ್ನೆಲ್ಲ ನಾಶಮಾಡಿಬಿಡುವನು.

**ನಾರದ :–** ವಸುದೇವ ! ನಿಮಿಯು ಈ ಭಾಗವತಧರ್ಮವನ್ನು ಕೇಳಿ ಹರ್ಷಿಸಿ ಆ ಮುನಿಗಳನ್ನು ಪೂಜಿಸಿದನು. ನಿಮಿಯು ಕೇಳಿದಂತೆ ನಡೆದು ಮುಕ್ತನಾದನು. ನೀನೂ ಹಾಗೆಯೇ ನಡೆದು ಮುಕ್ತನಾಗು. ಕೃಷ್ಣನಲ್ಲಿ ಪುತ್ರ ಸ್ನೇಹವನ್ನಿಟ್ಟಿರುವ ದಂಪತಿಗಳಾದ ನೀವಿಬ್ಬರೂ ಅವನ ದರ್ಶನ, ಆಲಿಂಗನ, ಸಂಭಾಷಣ, ಶಯನ, ಆಸನ ಮತ್ತು ಭೋಜನಗಳಿಂದ ಪಾವನರಾಗಿರುವಿರಿ. ಶಿಶುಪಾಲಾದಿಗಳಿಗೆ ಅಸುರಾವೇಶವನ್ನು ಬಿಡಿಸಿ, ಶ್ರೀಹರಿಯು ಸದ್ಗತಿಯನ್ನು ಕೊಟ್ಟನೆಂದ ಬಳಿಕ, ಅಸುರಾವೇಶವಿಲ್ಲದ ಭಕ್ತರು ಸದ್ಗತಿಯನ್ನು ಹೊಂದುವರೆಂದು ಹೇಳಬೇಕಾದುದೇ ಇಲ್ಲ. ನೀವು ಶ್ರೀಕೃಷ್ಣನನ್ನು ಪುತ್ರನೆನ್ನದೆ ಸರ್ವೇಶ್ವರನೆಂದು ತಿಳಿದು ಕೃತಾರ್ಥರಾಗಿರಿ.

**ಶುಕ :–** ವಸುದೇವ ದೇವಕಿಯರು ಇದನ್ನು ಕೇಳಿ ಕೃಷ್ಣನು ಮಗನೆಂಬ ಮೋಹವನ್ನು ಬಿಟ್ಟು ಪರದೇವತೆಯೆಂದು ಭಕ್ತಿಯನ್ನು ಮಾಡಿದರು.

ಈ ಇತಿಹಾಸವನ್ನು ಮನನಮಾಡಿದವನು ದುಷ್ಕರ್ಮಗಳನ್ನು ಕಳೆದುಕೊಂಡು ಮುಕ್ತನಾಗುವನು.

## ಐದನೆಯ ಅಧ್ಯಾಯ ಮುಗಿದುದು

**ಶುಕ :–** ರಾಜನೇ ! ಶ್ರೀಕೃಷ್ಣನು ವಿಪ್ರಶಾಪವನ್ನು ನೆಪಮಾಡಿ ಯಾದವರ ಕುಲವನ್ನು ಸಂಹರಿಸಬೇಕೆಂದು ಸಂಕಲ್ಪಮಾಡಿದ ಮೇಲೆ ಬ್ರಹ್ಮಾದಿಗಳು ದ್ವಾರಕೆಗೆ ಬಂದು ಶ್ರೀಕೃಷ್ಣನನ್ನು ಸ್ತುತಿಸುತ್ತಾರೆ :– ಮುಮುಕ್ಷುಗಳು ಕರ್ಮವನ್ನು ಕಳೆದುಕೊಳ್ಳಲು ನಿನ್ನ ಪಾದವನ್ನು ತ್ರಿಕರಣದಿಂದ ಸೇವಿಸುವರು. ಅಭಿಮಾನಿ ದೇವತೆಗಳಿಂದ ಸೇವಿತವಾದ ನಿನ್ನ ಪಾದಗಳಿಗೆ ನಮಿಸುತ್ತೇವೆ. ಸೃಷ್ಟ್ಯಾದಿಗಳನ್ನು ನೀನು ಮಾಡಿದರೂ ಗುಣಗಳ ಸಂಪರ್ಕವಿಲ್ಲದೆ ನಿರ್ದೋಷನಾಗಿರುವೆ. ಸಾತ್ವಿಕರು ನಿನ್ನ ಯಶಸ್ಸನ್ನು ಕೇಳಿ ಶುದ್ಧರಾಗುವರು. ವಿಷಯಲಂಪಟರು ಏನನ್ನು ಮಾಡಿದರೂ ಶುದ್ಧರಾಗುವುದೇ ಇಲ್ಲ. 'ನಾನಿಂಥ ಮಹಿಮನಾದರೆ ನಿಮಗೇನು' ಎಂದು ನೀನು

ಕೇಳಬಹುದು. ಮುನಿಧ್ಯೇಯವಾದ ನಿನ್ನ ಪಾದವು ಮನಸ್ಸಿನ ದುರ್ವಿಷಯಾಸಕ್ತಿಯನ್ನು ದಹಿಸುವುದು. ಯಾಜಕರು ಚಿಂತಿಸುವ, ಪರಮ ಭಾಗವತರು ಧ್ಯಾನಿಸುವ ನಿನ್ನ ಪಾದವು ನಮ್ಮ ಅಶುಭಗಳನ್ನು ನೀಗಿಸಲಿ. ಸಿರಿದೇವಿಯಿಂದ ಅರ್ಚಿಸಲ್ಪಡುವ ನಿನ್ನ ಪಾದವು ನಮ್ಮ ದುರ್ವಿಷಯದ ವಾಸನೆಯನ್ನು ಪರಿಹರಿಸಲಿ. ಮೂರು ಲೋಕಗಳನ್ನು ಅಳೆದು ಮೂರು ವೇದಗಳೆಂಬ ಪತಾಕೆಗಳನ್ನುಳ್ಳ ಸಜ್ಜನರಿಗೆ ಸುಖವನ್ನೂ, ದುರ್ಜನರಿಗೆ ದುಃಖವನ್ನೂ ಕೊಡುವ ನಿನ್ನ ಪಾದವು ನಮ್ಮ ಮತ್ತು ಜಗತ್ತಿನ ಪಾಪಗಳನ್ನು ಕಳೆದು ಪಾವನಮಾಡಲಿ. ಇಂದ್ರಿಯಾಭಿಮಾನಿಗಳನ್ನು ವಶಮಾಡಿಕೊಂಡಿರುವ, ಪ್ರಾಣಿಗಳಿಗೆ ಆಯುಷ್ಯವನ್ನು ಕೊಟ್ಟು ಬದುಕಿಸುವ, ಅಕಾರವಾಚ್ಯವಾದ, ಪ್ರಕೃತಿ ಪುರುಷ ಕಾಲಗಳಿಗಿಂತ ಉತ್ತಮನಾದ ನಿನ್ನ ಚರಣವು ಸುಖವುಂಟುಮಾಡಲಿ ! ನೀನು ಕಾಲ, ಜೀವ, ಅವ್ಯಕ್ತ (ಪ್ರಕೃತಿ) ಮತ್ತು ಮಹತ್ತತ್ತ್ವಗಳಿಗಿಂತ ಉತ್ತಮನಾಗಿರುವುದರಿಂದಲೇ ಪುರುಷೋತ್ತಮನಾಗಿರುವೆ. ಪ್ರಳಯಸ್ಥ ನಾರಾಯಣನು ವಾಸುದೇವನಾದನು. ಅವನಿಗೆ ಪುರುಷನೆಂಬ ನಾಮ. ಲಕ್ಷ್ಮಿಯು ಮಾಯಾದೇವಿಯಾದಳು. ವಾಸುದೇವನು ಪ್ರದ್ಯುಮ್ನನಾದನು. ಲಕ್ಷ್ಮಿಯು ಕೃತಿ ನಾಮಕಳಾದಳು. ಪ್ರದ್ಯುಮ್ನನು ಕೃತಿದೇವಿಯಲ್ಲಿ ಮಹದಭಿಮಾನಿ ಪುರುಷನಾಯಕ ಬ್ರಹ್ಮನನ್ನು ಸೃಷ್ಟಿಸಿದನು. ಹಾಗೂ ಗಾಯತ್ರಿಯನ್ನೂ ಸೃಷ್ಟಿಸಿದನು. ಚತುರ್ಮುಖನಿಂದ ಶ್ರದ್ಧೆಯಲ್ಲಿ ಶೇಷನು ಹುಟ್ಟಿದನು. ಪುರುಷನಾಮಕ ನಿನ್ನಿಂದ ಪ್ರವಿಷ್ಟನಾದ ಬ್ರಹ್ಮನು ನವಾವರಣಯುಕ್ತ ಹೈಮಬ್ರಹ್ಮಾಂಡವನ್ನು ಸೃಷ್ಟಿಸಿದನು. ನೀನು ವಿಷಯಸಾರವನ್ನು ಸೇವಿಸಿದರೂ ನಿರ್ಲಿಪ್ತನಾಗಿರುವೆ ಯಾದುದರಿಂದ ಜಂಗಮಸ್ಥಾವರಗಳಿಗೂ, ಇಂದ್ರಿಯಗಳಿಗೂ ನೀನೆ ಮುಖ್ಯಸ್ವಾಮಿಯು. ಯೋಗಿಗಳಿಗೆ ವಿಷಯಲೇಪವಿಲ್ಲದಿರುವುದೂ ನಿನ್ನ ಪ್ರಸಾದದಿಂದಲೇ. ನಿನ್ನ ಪತ್ನಿಯರೆಲ್ಲರೂ ನಿನ್ನನ್ನು ಹಾವಭಾವಗಳಿಂದ ಮೋಹಗೊಳಿಸಲು ಬಹಳ ಪ್ರಯತ್ನಿಸಿದರೂ, ನಿನ್ನ ಇಂದ್ರಿಯಗಳನ್ನು ಕದಲಿಸಲಾರದೇ ಹೋದರು. ನೀನು ಅಜಿತನು. ಸರ್ವಾಧಾರಕನು ನೀನು. ವ್ಯಾಸರು ಹರಿಕಥೆಯೆಂಬ ನದಿಯನ್ನು ಸೃಷ್ಟಿಸಿದರೆ ನಿನ್ನ ಪಾದವು ಗಂಗಾದಿ ತೀರ್ಥಗಳನ್ನು ಸೃಷ್ಟಿಸಿತು. ಇವೆರಡನ್ನೂ ಜ್ಞಾನಿಗಳು ಸೇವಿಸುತ್ತಾರೆ.

ಬ್ರಹ್ಮ :– ನಮ್ಮ ಪ್ರಾರ್ಥನೆಯನ್ನು ಮನ್ನಿಸಿ ಅವತಾರಮಾಡಿ ಭೂಭಾರವನ್ನಿಳಿಸಿದೆ. ಧರ್ಮವನ್ನೂ ಸ್ಥಾಪಿಸಿದೆ ಕಲಿಯುಗದಲ್ಲಿರುವ ಸಜ್ಜನರು ನಿನ್ನ ಚರಿತ್ರೆಯ ಶ್ರವಣಪಠಣದಿಂದ ಜ್ಞಾನವನ್ನು ಸಂಪಾದಿಸುವರು ಮತ್ತು ಮುಕ್ತಿಯನ್ನೂ ಹೊಂದುವರು. ನೀನು ಅವತರಿಸಿ 104ವರ್ಷಗಳು. 2ತಿಂಗಳುಗಳೂ ಕಳೆದುವು. ದೇವಕಾರ್ಯವಾಯಿತು. ಯದುಕುಳವುವಿಪ್ರಶಾಪದಿಂದ ನಷ್ಟಪ್ರಾಯವಾಗಿದೆ. ನಿನ್ನ ಸಂಕಲ್ಪದಂತೆ ವೈಕುಂಠವನ್ನು ಪ್ರವೇಶಿಸಿ ನಮ್ಮನ್ನು ಕಾಪಾಡು. (ಒಟ್ಟು ಕೃಷ್ಣಾವತಾರ 106 ವರ್ಷ, 6ತಿಂಗಳು.)

**ಶ್ರೀಕೃಷ್ಣ :–** ಬ್ರಹ್ಮ ! ನಿನ್ನ ಪ್ರಾರ್ಥನೆಯಂತೆ ನಡೆಯಬೇಕೆಂದೇ ನಿಶ್ಚಯಿಸಿರುತ್ತೇನೆ. ಯಾದವಕುಲವನ್ನು ನಾಶಮಾಡದೆ ನಾನು ವೈಕುಂಠಕ್ಕೆ ಬಂದರೆ, ಈ ಯಾದವಕುಲವು ಕಲಿಯಿಂದ ದುಷ್ಟವಾಗಿ ಸಜ್ಜನದ್ರೋಹಮಾಡಿ ಅನರ್ಥಕ್ಕೆ ಗುರಿಯಾಗುವುದು. ಈ ಅಪಯಶಸ್ಸು ಒಳ್ಳೆಯದು. ಈ ಕುಲಕ್ಕೆ ನಾಶವು ಆರಂಭವಾಗಿದೆ. ಅದು ನಡೆದ ಬಳಿಕ ನಾನು ಬರುವೆನು

(ದೇವತೆಗಳು ಹೊರಟುಹೋದರು. ದ್ವಾರಕಿಯಲ್ಲಿ ಮಹೋತ್ಪಾತಗಳು ಕಾಣಿಸಿಕೊಂಡುವು)

**ಕೃಷ್ಣ :–** ಯಾದವರೇ ! ಇಲ್ಲಿ ವಾಸಮಾಡಕೂಡದು. ಪ್ರಭಾಸಕ್ಕೆ ಹೋಗೋಣ.

**ಉದ್ಧವ :–** (ಕೃಷ್ಣನನ್ನು ಎಡಬಿಡದೆ ಅವನ ಬಳಿಯಿದ್ದು ಒಂದು ದಿನ ನಮಿಸಿ) ದೇವೇಶ ! 'ಯೋಗೀಶ' ! ಕುಲವನ್ನು ಸಂಹರಿಸಿ ಪರಂಧಾಮಕ್ಕೆ ನೀನು ತೆರಳು ವುದು ನಿಶ್ಚಯವೆಂದೇ ನನಗೆ ತೋರುತ್ತಿದೆ. ನಿನ್ನ ಬಿಟ್ಟು ಒಂದು ಕ್ಷಣವೂ ಇರಲಾರೆ. ನಿನ್ನೊಡನೆ ನನ್ನನ್ನೂ ಕರೆದುಕೊಂಡುಹೋಗು. ಮುಂದೆಯೂ ನಿನ್ನಸಂಗವಿದ್ದರೆ ನಿರ್ಭೀತರಾಗಿರುವೆವು.

## ಆರನೆಯ ಅಧ್ಯಾಯ ಮುಗಿದುದು

**ಕೃಷ್ಣ ,–** ಉದ್ಧವಾ ! ನನ್ನ ಅವತಾರಕಾರ್ಯ ಮುಗಿಯಿತು. ಯದುಕುಲವು ನಶಿಸುವುದು. ನಾನು ಪರಂಧಾಮಕ್ಕೆ ಹೋದಮೇಲೆ ಏಳನೆಯ ದಿನ ಈ ದ್ವಾರಕಿಯು ಸಮುದ್ರದಲ್ಲಿ ಮುಳುಗುವುದು. ನಾನೀಲೋಕವನ್ನು ಬಿಟ್ಟೊಡನೆಯೇ ಅಮಂಗಳ ವಾಗುವುದು. ಈ ಭೂಮಿ. ಕಲಿಯು ವ್ಯಾಪಿಸುವುದರಿಂದ ಈ ಯುಗದಲ್ಲಿ ಅಧರ್ಮಾ ಭಿಲಾಷೆ ಜಾಸ್ತಿಯಾಗುವುದು. ಆದುದರಿಂದ ನೀನು ಇಲ್ಲಿರಬೇಡ. ಬಂಧು ಮೊದ ಲಾದವರಲ್ಲಿ ಸ್ನೇಹವನ್ನು ಬಿಟ್ಟು ನನ್ನನ್ನೇ ಧ್ಯಾನಿಸುತ್ತ ತೀರ್ಥಯಾತ್ರೆ ಯಲ್ಲಿದ್ದು ಬಿಡು.

ಮನ ಆದಿ ಇಂದ್ರಿಯಗಳಿಂದ ನೋಡುವ ಈ ಜಗತ್ತು ಪ್ರಕೃತಿನಿರ್ಮಿತವಾಗಿ ನಶ್ವರವಾಗಿರುವುದು ಎಂದು ತಿಳಿ. ಮನಸ್ಸನ್ನು ನನ್ನಲ್ಲಿಡದಿರುವ ಪುರುಷನಿಗೆ ಭ್ರಮೆ ಯುಂಟಾಗಿ ಸುಖದುಃಖವೆಂಬ ಸಂಸಾರವು ಗಂಟು ಬೀಳುವುದು. ಭ್ರಮೆಗೆ ಕಾರಣ ವೇನೆನ್ನುವಿಯಾ ? ಹರಿಯು ಕರ್ತನಾಗಿರುವಾಗ ಜೀವನೇ ಸ್ವತಂತ್ರಕರ್ತನೆಂಬ ಬುದ್ಧಿಯೇ ಭ್ರಮೆ. ಆದುದರಿಂದ ಸರ್ವಜಗತ್ತೂ ಚಿತಾಪೂರ್ಣಖನ ಅಧೀನ, ಅವನು ನನ್ನ ಅಧೀನನೆಂದು ತಿಳಿ. ಶ್ರೀಹರಿಯ ಜ್ಞಾನಪಡೆದವನಿಗೆ ಕೆಡಕಾಗುವುದಿಲ್ಲ.

ಸಕಲಪ್ರಾಣಿಗಳಲ್ಲಿಯೂ ನಿರುಪಾಧಿಕ ಪ್ರೇಮವಿಟ್ಟು, ವೈಷ್ಣವ ಸಿದ್ಧಾಂತದಲ್ಲಿ ಸ್ಥಿರನಾಗಿದ್ದು, ಜಗತ್ತಿಗೆ ಶ್ರೀಹರಿಯೇ ಸ್ವಾಮಿಯು ಎಂದು ತಿಳಿದವನು ತಿರುಗಿ ಸಂಸಾರವನ್ನು ಹೊಂದುವುದಿಲ್ಲ.

**ಉದ್ಧವ :** ಕೃಷ್ಣ ! ನೀನು ಯೋಗೇಶ ಅಂದರೆ ಯಮನಿಯಮಾದಿ ನಿಯಾಮಕ ! ಯೋಗವಿನ್ಯಾಸ ಅಂದರೆ ದೇವಾದಿಗಳಿಗೆ ವಿಶೇಷ ಜ್ಞಾನವನ್ನು ಕೊಟ್ಟಿರುವವನೇ ! ಯೋಗಸಂಭವ ಅಂದರೆ ಜ್ಞಾನಭಕ್ತ್ಯಾದ್ಯುಪಾಯಗಳನ್ನು ಉತ್ಪಾದನೆ ಮಾಡಿರುವವನೇ ! ಸರ್ವಸಂಗಪರಿತ್ಯಾಗವೆಂಬ ಸಂನ್ಯಾಸವನ್ನು ಹೇಳಿದಿ. ಕಾಮತ್ಯಾಗವನ್ನು ನಾನು ಸಾಧಿಸುವಹಾಗೆ ಹೇಳು. ನಿನ್ನಸ್ವರೂಪವನ್ನು ನಿನ್ನಂತೆ ಉಪದೇಶಿಸುವವನು ಯಾರೂ ಇಲ್ಲ. ರುದ್ರಾದಿಗಳು ಬಾಹ್ಯಧನದಲ್ಲಿ ಅಭಿಲಾಷೆಯುಳ್ಳವರು. ನೀನಾದರೋ ಸಮಸ್ತಕಾಮಪೂರ್ಣ. ಪೂಜ್ಯ. ದೋಷದೂರ. ಅಪ್ರಮೇಯ. ಜ್ಞಾನೋಪದೇಶಮಾಡೆಂದು ಶರಣುಹೊಂದುವೆನು.

**ಶ್ರೀಕೃಷ್ಣ :–** ಗುರುವಿಲ್ಲದ ವಿದ್ಯೆ ಅನರ್ಥಕರ. ಗುರುಗಳಿಂದಲೇ ಜ್ಞಾನವನ್ನು ಸಂಪಾದಿಸಬೇಕು. ನನಗೆ ಅತಿಪ್ರಿಯವಾದ ಮನುಷ್ಯಶರೀರದಲ್ಲಿಯೇ ಪ್ರತ್ಯಕ್ಷಾನುಮಾನಗಳಿಂದ ನನ್ನ ಪರೋಕ್ಷಜ್ಞಾನವನ್ನು ಸಂಪಾದಿಸಬೇಕು. ಈ ವಿಷಯದಲ್ಲಿ ಅವಧೂತನಿಗೂ, ಯದುರಾಜನಿಗೂ ನಡೆದ ಸಂವಾದವನ್ನು ಹೇಳುವೆನು ಕೇಳು .–

**ಯದುರಾಜ :–** (ಒಬ್ಬ ಅವಧೂತನನ್ನು ಕುರಿತು) ಬ್ರಾಹ್ಮಣನೇ ! ಮಾನವರು ಆಯುಷ್ಯಾದಿಗಳ ಕಾಮದಿಂದ ಧರ್ಮವನ್ನೇ ಆಚರಿಸುವರು. ನೀನು ಪುಷ್ಟನೂ, ಶಕ್ತಿವಂತನೂ ಆಗಿರುವೆ. ಆದರೂ ಜಡನಂತೆ ಯಾವ ಕರ್ಮವನ್ನೂ ಮಾಡುತ್ತಿಲ್ಲ. ನಿನಗೆ ಯಾವುದರಲ್ಲಿಯೂ ಅಭಿಲಾಷೆಕೂಡ ಇಲ್ಲ. ಈ ಬುದ್ಧಿ ನಿನಗೆ ಹೇಗೆ ಬಂದಿತು ? ವಿಷಯ ಭೋಗವಿಲ್ಲದೆ ಆನಂದಿಸುತ್ತಿರುವುದಕ್ಕೆ ಕಾರಣವೇನು ?

**ಅವಧೂತ :–** ನನಗೆ ಇಪ್ಪತ್ತುನಾಲ್ಕು ಮಂದಿ ಗುರುಗಳಿರುವರು. ಅವರಿಂದ ಕಲಿತ ಬುದ್ಧಿಯೇನೆಂದರೆ :-

1) ಭೂಮಿಯು ಕ್ಷಮೆಯನ್ನು ಬಿಡದೆ ಅಚಲವಾಗಿದೆ. ಪರಂಪರೆಯಾಗಿ ಸಸ್ಯಾಭಿವೃದ್ಧಿ ಆಗುತ್ತಲೇ ಇದೆ. ಆದರಿಂದ ಪರರ ಪ್ರಯೋಜನಕ್ಕಾಗಿ ಕ್ಷಮೆ ಮತ್ತು ಪ್ರವೃತ್ತಿಯನ್ನು ಕಲಿತೆ.

2) ವಾಯುವು ಪುಷ್ಪಾವಯವಗಳಿಂದ ಸಂಬದ್ಧವಾದರೂ ಸುವಾಸನೆ ಮುಂತಾದುದರಿಂದ ಲಿಪ್ತವಾಗದಂತೆ, ಜೀವನು ವಿಷಯಗಳನ್ನು

ಅನುಭವಿಸಿದರೂ ಗುಣದೋಷಗಳ ಸಂಪರ್ಕದಿಂದ ಗಾನಾದಿಗಳಲ್ಲಿ ಬದ್ಧನಾಗಬಾರದು.

3) ಆಕಾಶವು ವಾಯುಪ್ರೇರಿತಗಳಾದ ಮೇಘಾದಿಗಳಿಂದ ಅಸ್ಪೃಷ್ಟವಾಗಿರುವಂತೆ ವಿಷಯಗಳ ಸ್ಪರ್ಶರಹಿತನಾಗಿರಬೇಕು.

4) ಗಂಗಾದಿ ಜಲವು ಮಾಧುರ್ಯಾದಿಗುಣಗಳಿಂದಲೂ, ದರ್ಶನ, ಸ್ನಾನ, ಪಾನಾದಿಗಳಿಂದಲೂ ಜಗತ್ತನ್ನು ಪಾವನ ಮಾಡುವಂತೆ ಮುನಿಯೂ ಪಾವನಮಾಡಬೇಕು.

5) ಅಗ್ನಿಯು ತೇಜಸ್ಸುಳ್ಳದ್ದು. ಸಂತಾಪಕರ ಜ್ವಾಲೆಯಿಂದ ಪ್ರಕಾಶಕವು. ಮುಟ್ಟಿಧರಿಸಲು ಅಶಕ್ಯ. ದೂರದಿಂದಲೇ ಸೇವಿಸಲ್ಪಡತಕ್ಕುದು. ತಿರಸ್ಕಾರಕ್ಕೆ ಅನರ್ಹ. ಸರ್ವಭಕ್ಷಕವಾದರೂ ದೋಷರಹಿತ. ಅಗ್ನಿದೇವನು ಒಂದುಕಡೆ ಮರೆಯಾಗಿದ್ದು ಮತ್ತೊಂದು ಕಡೆ ಕಾಣಿಸಿ ಕೊಳ್ಳುವನು. ಹವಿರಾದಿಗಳನ್ನು ಕೊಡುವವರ ಹಿಂದಿನ ಮುಂದಿನ ಪಾಪಗಳನ್ನು ದಹಿಸಿ ಸರ್ವವನ್ನೂ ಭುಜಿಸುವವನು. ಅದರಂತೆ ಮುನಿಯೂ ಪ್ರಭಾವಂತನೂ ಉಪವಾಸಾದಿಗಳಿಂದ ಪ್ರಕಾಶಿಸುವವನೂ, ತಿರಸ್ಕರಿಸಿ ಅಪಮಾನಿಸಲು ಅನರ್ಹನೂ ಅಶಕ್ಯನೂ, ದೂರದಲ್ಲಿ ನಿಂತೇ ಸೇವಿಸಲ್ಪಡತಕ್ಕವನೂ, ಆಪತ್ಕಾಲದಲ್ಲಿ ಯಾವುದನ್ನು ತಿಂದರೂ ಪಾಪವನ್ನು ಹೊಂದದವನೂ ಆಗಿರುವನು. ದುರ್ಜನರಿಗೆ ದೂರವಾಗಿ ಸಜ್ಜನರಿಗೆ ತನ್ನನ್ನು ಸ್ಪಷ್ಟಗೊಳಿಸಬೇಕು. ಜ್ಞಾನೇಚ್ಛುಗಳಿಂದ ಸೇವಿಸಲ್ಪಡುತ್ತಾ, ಅನ್ನನೀಡಿದವರ ಹಿಂದಿನ ಮುಂದಿನ ಪಾಪಗಳನ್ನು ಪರಿಹರಿಸಿ ದೇವರಿಂದ ದತ್ತವಾದುದನ್ನು ಭುಂಜಿಸಬೇಕು.

6) ಚಂದ್ರಮಂಡಲದ ಕಳೆಗಳಿಗೆ ವೃದ್ಧಿ ಕ್ಷಯಗಳೇ ಹೊರತು ಚಂದ್ರನ ಸ್ವರೂಪಕ್ಕಿಲ್ಲ. ಆದರಂತೆ ದೇಹಕ್ಕೆ ಜನ್ಮಾದಿ ವಿಕಾರಗಳೇ ಹೊರತು ಆತ್ಮನಿಗಿಲ್ಲ.

7) ಸೂರ್ಯನು ವಸಂತಕಾಲದಲ್ಲಿ ತನ್ನ ಕಿರಣಗಳಿಂದ ಜಲವನ್ನು ಹೀರಿ ಮಳೆಗಾಲದಲ್ಲಿ ಅದನ್ನು ಸುರಿಸುವನು. ಅದರಂತೆ ಯೋಗಿಯು ವಿಹಿತಕಾಲದಲ್ಲಿ ಇಂದ್ರಿಯುಗಳಿಂದ ಶಬ್ದಾದಿ ವಿಷಯಗಳನ್ನು ಸೇವಿಸಿ, ನಿಷಿದ್ಧಕಾಲಗಳಲ್ಲಿ ಇಂದ್ರಿಯಗಳನ್ನು ತನ್ನ ವಶದಲ್ಲಿಟ್ಟುಕೊಂಡು ವಿಷಯದಲ್ಲಿ ಅತಿಯಾಗಿ ಆಸಕ್ತವಾಗುವುದಿಲ್ಲ.

8) ಒಂದು ಕಪೋತವು ತನ್ನ ಪತ್ನಿಯಲ್ಲಿ ಬಹುಪ್ರೇಮವಿಟ್ಟು ಅದು ಬಯಸಿದುದನ್ನೆಲ್ಲ ಒದಗಿಸಿ ಸುಖಪಡುತ್ತಿತ್ತು. ಕಪೋತಿಯಲ್ಲಿ ಮಕ್ಕಳು ಹುಟ್ಟಿದುವು. ಆದಂಪತಿಗಳು ತಮ್ಮ ಮಕ್ಕಳನ್ನು ಪ್ರೇಮದಿಂದ ಪೋಷಿಸುತ್ತಿದ್ದುವು. ಬೇಡನು ಮರಿಪಕ್ಷಿಗಳನ್ನು ಬಲೆಯಲ್ಲಿ ಹಿಡಿದನು. ಕಪೋತಿ ಮತ್ತು ಕಪೋತಗಳೂ ಬಲೆಯಲ್ಲಿ ಬಿದ್ದುವು. ಹೀಗೆ ಕುಟುಂಬದಲ್ಲಿ ಅತಿಸ್ನೇಹಮಾಡಿ ಪೋಷಿಸುವವನು ನಾಶ ಹೊಂದುವನು.

## ಏಳನೆಯ ಅಧ್ಯಾಯ ಮುಗಿದುದು

**ಅವಧೂತ** :– ಸ್ವರ್ಗನರಕಗಳಲ್ಲಿಯೂ ಇಂದ್ರಿಯ ಸಂಬಂಧವಾದ ವಿಷಯ ಸುಖವು ಇರುವಂತೆ, ಈ ಲೋಕದಲ್ಲಿಯೂ ಪ್ರಯತ್ನವಿಲ್ಲದೆ ದುಃಖವು ಬರುವಂತೆ ಶಬ್ದಾದಿ ಸುಖವೂ ಬರುವುದು. ಜ್ಞಾನಿಯು ದುಃಖಶಿರಸ್ಕವಾದ ಇಂತಹ ಸುಖ ವನ್ನು ಬಯಸಬಾರದು.

9) ಅಜಗರವು ತನ್ನ ಬಳಿ ತಾನಾಗಿ ದೊರೆತ ಆಹಾರವನ್ನು ಸೇವಿಸುವುದು. ಅದರಂತೆ ಮುನಿಯು ಹರಿಯು ಕೊಟ್ಟುದನ್ನು ಅನುಭವಿಸಬೇಕು. ಬಹಿರ್ಮುಖನಿಗೆ ಅನ್ನವಿಲ್ಲದಿದ್ದರೆ ದೇಹವು ಉಳಿಯುವುದಿಲ್ಲ. ಯೋಗಾರೂಢನು ದೇಹರಕ್ಷಣೆಗಾಗಿ ಯತ್ನ ಮಾಡುವುದಿಲ್ಲ. ಹರಿಧ್ಯಾನಾಮೃತಪಾನದಿಂದ ಅನ್ನವಿಲ್ಲದಿದ್ದರೂ ಗ್ಲಾನಿ, ಕೃಶತ್ವ ಮೊದಲಾದ ವಿಕಾರವನ್ನು ಹೊಂದದೇ ಇರುವನು.

10) ಉತ್ತಮರ ಸ್ತ್ರೀಯನ್ನು ಕಾಮಿಸುವವನು ಬೆಂಕಿಯಲ್ಲಿ ಬಿದ್ದ ಪತಂಗ ದಂತೆ ನಿತ್ಯನರಕದಲ್ಲಿ ಬೇಯುವನು.

11) ಭ್ರಮರವು ಹೂವಿನಲ್ಲಿರುವ ಮಕರಂದವನ್ನು ಸ್ವಲ್ಪಸ್ವಲ್ಪವಾಗಿ ಸಂಗ್ರಹಿಸುವಂತೆ ಮುನಿಯು ಪ್ರಾಣಧಾರಣೆಗೆ ತಕ್ಕಷ್ಟು ಮಾತ್ರ ಆಹಾರವನ್ನು ಭುಜಿಸಬೇಕು. ಭ್ರಮರವು ಪುಷ್ಪಗಳಿಂದ ಸಾರವನ್ನು ತೆಗೆದುಕೊಳ್ಳುವಂತೆ ಬ್ರಹ್ಮ ಸೂತ್ರ, ಭಾರತಾದಿಗಳಲ್ಲಿ ಸಾರವನ್ನು ಗ್ರಹಿಸಬೇಕು. ಅಥವಾ ಭಕ್ತಿಯನ್ನು ಸಂಪಾದಿಸಬೇಕು. ಭ್ರಮರವು ಕೂಡಿಟ್ಟ ಜೇನುತುಪ್ಪವು ನಾಶವಾಗುವುದು. ಅದರಂತೆ ಮುನಿಯು ಭಿಕ್ಷದಿಂದ ದೊರೆತ ಅನ್ನಾದಿಗಳನ್ನು ನಾಳೆಗೆ ಎಂದು ಸಂಗ್ರಹಿಸ ಬಾರದು. ಹಾಗೆ ಮಾಡಿದರೆ ಅವು ನಾಶಹೊಂದುವುವು.

12) ಮುನಿಯು ಕಾಲಿನಿಂದ ಮರದ ಹೆಣ್ಣುಬೊಂಬೆಯನ್ನೂ ಮುಟ್ಟ ಬಾರದು. ಪಳಗಿದ ಹೆಣ್ಣಾನೆಯ ಸ್ಪರ್ಶಸುಖಕ್ಕೆ ಮನಸೋತು ಗುಂಡಿಗೆ ಬಿದ್ದು ಮಾವುತನ ಬಂಧನಕ್ಕೆ ಸಿಕ್ಕಿದ ಆನೆಯಂತೆ ಹೆಣ್ಣಿಗೆ ಮರುಳಾದ ಮುನಿಯು ಅವಳ ಬಂಧನಕ್ಕೆ ಸಿಕ್ಕಿಬೀಳುವನು.

13) ಜೇನು ಕೀಳುವವರು ಜೇನುತುಪ್ಪವನ್ನು ಮಾರಿ ಬಂದ ಹಣದಿಂದ ಸುಖವನ್ನು ಭೋಗಿಸುವರು. ಜೇನು ಹುಳುಗಳಂತೆ ಲೋಭಿಗಳಾಗದೆ ದಾನದಿಂದಲೂ, ಭೋಗದಿಂದಲೂ ಧನವನ್ನು ಸಾರ್ಥಕಗೊಳಿಸಬೇಕು. ಜೇನು ಕೀಳುವವನು ಜೇನು ಹುಳುಗಳ ಕಷ್ಟಕಾರ್ಪಣ್ಯಗಳನ್ನು ವಿಚಾರಮಾಡದೆ ಜೇನುತುಪ್ಪದ ದ್ರವ್ಯದಿಂದ ಸುಖವನ್ನು ಭೋಗಿಸುವಂತೆ ಯತಿಯು ಗೃಹಸ್ಥನ ಸ್ಥಿತಿಗಳನ್ನು ವಿಚಾರಮಾಡದೆ ಸಕಾಲಕ್ಕೆ ಬಂದು ಭೋಜನ ಮಾಡುವುದು ದೋಷಕರವಲ್ಲ.

14) ಜಿಂಕೆ ಬೇಟೆಗಾರನ ಧ್ವನಿಗೆ ಮರುಳಾಗಿ ಸಾಯುವುದನ್ನು ನೋಡಿ ವನಚಾರಿ ಯತಿಯು ವಿಷಯಾಸಕ್ತಿಯನ್ನು ಕೆರಳಿಸುವ ಗೀತೆಗಳಿಗೆ ಕಿವಿಗೊಡಬಾರ ದೆಂಬುದನ್ನು ಕಲಿತೆನು.

15) ಮೀನಿನಿಂದ ಜಿಹ್ವೇಂದ್ರಿಯ ಜಯವು ಆವಶ್ಯಕವೆಂದು ತಿಳಿಯಿತು.

16) ಪಿಂಗಳೆಯೆಂಬ ಸೂಳೆ ಆಶೆಯನ್ನು ನಾಶಮಾಡುವ ವೈರಾಗ್ಯವನ್ನು ತಾಳಿ ಹೇಳಿದ ಮಾತಿದು :–

ಅಮಂಗಳ ವಿಟರಿಂದ ನನಗೆ ಅಪೇಕ್ಷಿತದ್ರವ್ಯವು ಬರುವುದೆಂದು ಬಯಸಿದ ನಾನು ಮೂರ್ಖಳು. ಮನೋಜಯವಿಲ್ಲದ ನನ್ನ ಮೋಹ ಎಷ್ಟು ಪ್ರಬಲ ? "ಸಂತಂ ಸಮೀಪೇ ರಮಣಂ ರತಿಪ್ರದಂ ನಿತ್ಯಮಿಮಂ ವಿಹಾಯ । ಅಕಾಮದಂ ದುಃಖ ಭಯಾದಿಶೋಕಮೋಹಪ್ರದಂ ತುಚ್ಛಮಹಂ ಭಜೇ ಅಜ್ಞಾ ॥" ಅಂದರೆ ಯೋಗ್ಯ ವಾದ ಇಷ್ಟವನ್ನು ಪೂರ್ಣಗೊಳಿಸುವವನೂ, ಬೇಕಾದಷ್ಟು ಧನವನ್ನು ಕೊಡತಕ್ಕ ವನೂ, ನಾಶರಹಿತನೂ, ಪರಮಪ್ರಿಯನೂ ಆದ ಶ್ರೀರಮಣನು ನನ್ನ ಹೃದಯ ದಲ್ಲಿಯೇ ಯಾವಾಗಲೂ ಇರತಕ್ಕವನು. ಇಂತಹವನನ್ನು ಬಿಟ್ಟು ನನ್ನ ಅಭೀಷ್ಟ ವನ್ನು ಸಲ್ಲಿಸಲಾರದವರೂ, ದುಃಖ ಭಯ ಸಂಕಟ ಶೋಕ ಮೋಹಾದಿಗಳನ್ನುಂಟು ಮಾಡುವ ತುಚ್ಛರಾದ ಮನುಷ್ಯರನ್ನು ಸೇವಿಸಲು ಬಯಸಿದ ನಾನೆಂತಹ ಅವಿವೇಕಿ ? ಮೂರ್ಖಳು ?"

ನವದ್ವಾರಗಳಿಂದ ಕಶ್ಮಲವನ್ನು ಕಾರುತ್ತಿರುವ ಹೊಲಸು ದೇಹವನ್ನು ಅಂದ ವಾಗಿ ತೋರುವಂತೆ ಮಾಡಿರುವ ಶ್ರೀಹರಿಯ ಶಕ್ತಿಯನ್ನು ಕೊಂಡಾಡಿ ದುಷ್ಟವಿಷಯ ಗಳಿಂದ ದೂರವಾಗುವುದನ್ನು ಬಿಟ್ಟು ಗ್ರಾಮ್ಯಸುಖದಿಂದ ಕಾಲವನ್ನು ಕಳೆದೆ. ಹೀಗೆ ಮೋಹವನ್ನು ಯಾವಳು ಹೊಂದಿಯಾಳು ? ಈ ವಿದೇಹನಗರದಲ್ಲಿ ಮೂಢ ಳೆಂದರೆ ನಾನೊಬ್ಬಳೇ. ಶ್ರೀಹರಿಗೆ ಈ ದೇಹವನ್ನೊಪ್ಪಿಸಿ, ಮನಸ್ಸಿನಿಂದ ಸಿರಿ ದೇವಿಯಂತೆ ಅವನೊಡನೆ ರಮಿಸುವೆನು. ವೈರಾಗ್ಯವು ಬರುವುದಕ್ಕೆ ಕಾರಣಗಳಾದ ಕ್ಲೇಶಗಳು ಬರಲಿ ! ರಕ್ಷಕನೆಂದರೆ ಶ್ರೀಹರಿಯೇ. ಅವನ ಅನುಗ್ರಹದಿಂದಲೇ ವೈರಾಗ್ಯವು ಬಂದಿತು. ಈಗ ಎಚ್ಚರಿಕೆಯಿಂದ ಶ್ರೀಹರಿಯನ್ನೇ ಶರಣುಹೊಂದಿ ಉಪಾಸಿಸುವೆನು.

(ಹೀಗೆ ಪಿಂಗಳೆಯು ನಿಶ್ಚಯಿಸಿದಳು. ದುಷ್ಟ ವಿಷಯದಾಶೆ ಮಹಾ ದುಃಖ ಕರವು. ಅದರತ್ಯಾಗವೇ ಪರಮ ಸುಖಕರ ಎಂಬುದನ್ನು ಪಿಂಗಳೆಯಿಂದ ನಾನು ಕಲಿತೆನು.

## ಎಂಟನೆಯ ಅಧ್ಯಾಯ ಮುಗಿದುದು

17) ಕುರರ ಪಕ್ಷಿಯು ಕೊಕ್ಕಿನಲ್ಲಿ ಕಚ್ಚಿಕೊಂಡಿದ್ದ ಮಾಂಸದ ತುಂಡನ್ನು ಕಾಪಾಡುವುದು ಹೇಗೆ ? ಎಂಬ ಚಿಂತೆಯನ್ನು ಹೊಂದಿ ಭಯಪಡುತ್ತಿತ್ತು. ಬಲಿಷ್ಠಪಕ್ಷಿಗಳು ಬಂದು ಆ ಮಾಂಸದ ತುಂಡನ್ನು ಅಪಹರಿಸಿದ ಬಳಿಕ ಆ ಕುರರ ಪಕ್ಷಿಗೆ ಇದ್ದ ಭಯ ಹೋಗಿ ಸುಖವಾಯಿತು. ಅದರಂತೆ ಧನವನ್ನು ಸಂಗ್ರಹಿಸಿದರೆ ಜನರು ದ್ವೇಷಿಸಿ ಸಾಧನಭಂಗವನ್ನು ಮಾಡುವರು. ಧನವನ್ನು ಸಂಗ್ರಹಿಸದಿರುವ ಜ್ಞಾನಿಯೇ ಸುಖವಾಗಿರುವನು. ದರಿದ್ರನಾಗಿದ್ದರೆ ಪರಮಶ್ರೇಯಸ್ಸಾಗುವುದು ಎಂಬುದಕ್ಕೆ ಕುರರಪಕ್ಷಿಯು ನನಗೆ ಗುರು.

18) ಮಾನ-ಅಪಮಾನಗಳನ್ನು ಬಿಟ್ಟು ಬಾಲಕನಂತೆ ಸ್ವೇಚ್ಛಾನುಸಾರ ಸಂಚರಿಸುತ್ತೇನೆ. ಚಿಂತಾರಹಿತರೂ. ಆನಂದಭರಿತರೂ ಆಗಿರುವವರು ಇಬ್ಬರು. ಒಬ್ಬ ಬಾಲಕ. ಮತ್ತೊಬ್ಬ ಶ್ರೀಹರಿಯನ್ನು ಹೊಂದಿರುವ ಜ್ಞಾನಿಯು.

19) ಹೆಣ್ಣು ಕೇಳಲು ಬಂದು ಹೊರಗೆ ಕುಳಿತಿರುವವರ ಕಿವಿಗೆ ಬತ್ತಕುಟ್ಟು ವಾಗ ಶಬ್ದ ಮಾಡುತ್ತಿದ್ದ ಬಳೆಗಳನ್ನು ಒಬ್ಬಳು ಕುಮಾರಿಯು ತೆಗೆದು ಒಂದೊಂದು ಕೈಗೆ ಒಂದೊಂದೇ ಬಳೆಯನ್ನುಳಿಸಿದಳು. ಸಜ್ಜನನೊಬ್ಬ, ದುರ್ಜನನೊಬ್ಬ ಸೇರಿದರೆ ಜಗಳ. ಸಜ್ಜನರು ದುರ್ಜನರು ಒಟ್ಟಿಗೆ ಸೇರಿದರೆ ಲೋಕವಾರ್ತೆ. ಆದುದರಿಂದ ಸಜ್ಜನನಾದವನೊಬ್ಬನೇ ಸಂಚರಿಸಬೇಕೆಂಬುದಕ್ಕೆ ಕುಮಾರಿಯ ಕೈಕಂಕಣವೆಂಬುದು ಗುರು.

20) ಬಾಣಗಳನ್ನು ತಯಾರುಮಾಡುವವನು ಬಾಣದ ಅಲುಗಿಗೆ ಹದವನ್ನು ಕೊಡುತ್ತಿರುವಾಗ ಚಕ್ರವರ್ತಿಯು ಅಲ್ಲಿ ಸುಳಿದರೂ ನೋಡದೆ ತನ್ನ ಆ ಕೆಲಸ ದಲ್ಲಿಯೇ ಏಕಾಗ್ರಚಿತ್ತನಾಗುವನು. ಮುನಿಯು ಅಭ್ಯಾಸ ಮತ್ತು ವೈರಾಗ್ಯಗಳಿಂದ ಮನಸ್ಸನ್ನು ಭಗವಂತನಲ್ಲಿಯೇ ಇಟ್ಟು ಮತ್ತಾವುದನ್ನೂ ಸ್ಮರಿಸಬಾರದು.

21) ಹಾವು ಜನರ ಗುಂಪಿನಲ್ಲಿ ಸೇರದೆ ಗೆದ್ದಲಹುಳು ಕಟ್ಟಿದ ಹುತ್ತ ದೊಳಗೇ ಇದ್ದು, ಆಹಾರವು ದೊರೆಯದಿದ್ದರೆ ಗಾಳಿಯನ್ನೇ ಕುಡಿದು ಜೀವಿಸುತ್ತದೆ. ಅದರಂತೆ ಮುನಿಯು ಜನರಗುಂಪಿನಲ್ಲಿ ಸೇರದೆ ಗೃಹಾಭಿಮಾನವನ್ನು ಬಿಟ್ಟು. ಅಲ್ಪಾಶನನಾಗಿ ಹೃದಯ ಗುಹೆಯಲ್ಲಿರುವ ಶ್ರೀಹರಿಯ ಪಾದದಲ್ಲಿಯೇ ಮನಸ್ಸನ್ನಿಟ್ಟು

ಒಬ್ಬಂಟಿಗನಾಗಿ ಸಂಚರಿಸುತ್ತಿರಬೇಕು. ದುಃಖಕ್ಕೆ ಕಾರಣವಾದ ಕರ್ಮವನ್ನಾರಂಭಿಸಬಾರದು. ಹಾವಿನಿಂದ ಇದನ್ನು ಕಲಿತೆನು.

22) ಜೇಡರಹುಳುವು ತನ್ನ ಹೊಟ್ಟೆಯೊಳಗಿನಿಂದ ಜೊಲ್ಲಿನ ಎಳೆಯನ್ನು ಹೊರ ತಂದು ಅದರಿಂದ ಬಲೆಯನ್ನು ಕಟ್ಟಿ ಯಥಾ ಶಕ್ತಿ ಜಂತುಗಳನ್ನು ಬೇಟೆಯಾಡಿ ಸಾಕೆಂದು ತೋರಿದಾಗ ದಾರವನ್ನು ನುಂಗಿಬಿಡುವುದು. ಅದರಂತೆ ಸ್ವತಂತ್ರನಾದ ಶ್ರೀಹರಿಯು ಲೀಲೆಯಿಂದ ಜಡಪ್ರಕೃತಿಯನ್ನು ಪರಿಣಾಮಹೊಂದಿಸಿ ಅನಂತ ಪದಾರ್ಥಗಳನ್ನು ಸೃಷ್ಟಿಸಿ ಅವಕ್ಕೆ ಜೀವರನ್ನು ಜೋಡಿಸಿ, ತಾನೂ ವಿಹರಿಸಿ, ಅವರಿಗೆ ತಕ್ಕಗತಿಯನ್ನು ಕೊಟ್ಟು ಸರ್ವವನ್ನೂ ನುಂಗಿ ಸ್ವರಮಣನಾಗಿರುವನು.

23) ಅವರೆಹುಳು ಕಣಜವನ್ನು ಧ್ಯಾನಿಸಿ ಅದರ ಸಾರೂಪ್ಯವನ್ನು ಹೊಂದುವಂತೆ, ಸ್ನೇಹಾದಿಗಳಿಂದ ಕೂಡಿದ ಬುದ್ಧಿಯಿಂದ ಎಲ್ಲೆಲ್ಲಿ ಮನಸ್ಸನ್ನಿಡುವನೋ ಅಲ್ಲಲ್ಲಿನ ರೂಪವನ್ನು ಹೊಂದುತ್ತಾನೆ. ಭರತನು ಜಿಂಕೆಯಾಗಲಿಲ್ಲವೆ ? ಸ್ನೇಹದಿಂದ ಶ್ರೀಹರಿಯಲ್ಲಿ ಮನಸ್ಸನ್ನಿಡಬೇಕು. ಮುಕ್ತಿಯಲ್ಲಿ ಸಾರೂಪ್ಯವನ್ನು ಹೊಂದುವನು. ಇದೇ ಕೀಟದಿಂದ ಕಲಿತ ಬುದ್ಧಿ.

24) ವೈರಾಗ್ಯ ವಿವೇಕಗಳಿಗೆ ಕಾರಣವೂ, ಶ್ರೀಹರಿಗೆ ಅಧಿಷ್ಠಾನವೂ, ತತ್ತ್ವವಿಚಾರಕ್ಕೆ ಸಾಧನವೂ ಆದ ನನ್ನ ದೇಹವು ನನಗೆ ಗುರು ಭಾರ್ಯಾದಿಗಳಿಗೆ ಪ್ರಿಯವಾಗಬೇಕೆಂದು ಕರ್ಮವನ್ನು ಮಾಡುತ್ತ, ಸ್ವರ್ಗನರಕಗಳಿಗೆ ಹೋಗಿಬರುತ್ತಾ ಸಂಸಾರಕ್ಕೆ ಕಾರಣವಾದ ದೇಹವನ್ನೇ ಹೊಂದುತ್ತಿರುವವನು ದುಃಖಿಯಾಗುವನು. ಬಹುಪತ್ನಿಯರನ್ನುಳ್ಳ ಪುರುಷನನ್ನು ಒಬ್ಬೊಬ್ಬ ಪತ್ನಿಯೂ ತನ್ನ ಕಡೆಗೆ ಎಳೆದು ಪೀಡಿಸುವಂತೆ ಇಂದ್ರಿಯಗಳು ಜೀವನನ್ನು ತಮ್ಮ ತಮ್ಮ ವಿಷಯಗಳ ಕಡೆಗೆ ಸೆಳೆಯುತ್ತವೆ. ಆದುದರಿಂದ ಇಂದ್ರಿಯಗಳನ್ನು ಜಯಿಸಿ ಶರೀರವನ್ನು ಅನ್ಯಥಾ ಉಪಯೋಗಿಸದೆ ಸತ್ಸಾಧನೆಮಾಡಬೇಕು.

ಶ್ರೀಹರಿಯು ನಾನಾಬಗೆಯ ದೇಹಗಳನ್ನು ಸೃಷ್ಟಿಸಿ ಅವುಗಳಿಂದ ತೃಪ್ತನಾಗದೆ ಜ್ಞಾನಾಶ್ರಯವಾದ ಮನುಷ್ಯನ ದೇಹವನ್ನು ಸೃಷ್ಟಿಸಿದ ಮೇಲೆ ತೃಪ್ತನಾದನು. ಆದುದರಿಂದ ಸಾಧನಶರೀರವು ಬಂದಿರುವಾಗ ಧೀರನು ಜ್ಞಾನವನ್ನು ಸಂಪಾದಿಸಿ ಮುಕ್ತನಾಗಬೇಕು. ಚತುರ್ಮುಖನು ಜ್ಞಾನವನ್ನು ಹುಟ್ಟಿಸಲು ಸಮರ್ಥನು. ಜ್ಞಾನವಿಲ್ಲದೆ ಮುಕ್ತಿಯಿಲ್ಲ.

(ಅವಧೂತನು ಹೊರಟು ಹೋದನು. ಯದುರಾಜನು ಸರ್ವಸಂಗತ್ಯಾಗ ಮಾಡಿ ಪರಬ್ರಹ್ಮನಲ್ಲಿಯೇ ಬುದ್ಧಿಯನ್ನು ಸ್ಥಿರವಾಗಿ ನಿಲ್ಲಿಸಿದನು.

**ಒಂಭತ್ತನೆಯ ಅಧ್ಯಾಯ ಮುಗಿದುದು**

**ಶ್ರೀಕೃಷ್ಣ :-** ಉದ್ಧವಾ ! ಧರ್ಮವನ್ನು ಫಲಾಪೇಕ್ಷೆಯಿಲ್ಲದೆ ಮಾಡಬೇಕು. ಜ್ಞಾನಕ್ಕಾಗಿ ಗುರುಸೇವೆಮಾಡಬೇಕು. ಅದರಿಂದಾಗುವ ಲಾಭ :- ತನ್ನ ಶ್ಲಾಘನೆಯತ್ಯಾಗ, ಸಜ್ಜನರಲ್ಲಿ ಮಾತ್ಸರ್ಯ ತ್ಯಾಗ, ವೈಷ್ಣವಶಾಸ್ತ್ರದಲ್ಲಿ ದೃಢ ವಿಶ್ವಾಸ, ಮೋಕ್ಷಕ್ಕೆ ಆತುರಪಡದಿರುವುದು, ತತ್ತ್ವವಿಚಾರ, ಹಿತವಚನ, ಪತ್ನ್ಯಾದಿಗಳಲ್ಲಿ ಮೋಹತ್ಯಾಗ, ಭಗವದ್ರೂಪಗಳ ಅಭೇದಚಿಂತನೆ, ಹರಿಯು ಸ್ವಪ್ರಕಾಶ, ಸರ್ವಸಾಕ್ಷಿ, ಜಡಚೇತನಭಿನ್ನ ಎಂಬ ಜ್ಞಾನ ಸಂಪಾದನೆ. ಜೀವನೇ ಹರಿಯು, ಜಗತ್ತೇ ಹರಿಯು ಎಂಬ ಮಿಥ್ಯಾಜ್ಞಾನ ತ್ಯಾಗ.

ಗುರುವು ಮೇಲಿನ ಕಟ್ಟಿಗೆ ಶಿಷ್ಯನು ಕೆಳಗಿನ ಕಟ್ಟಿಗೆ. ವ್ಯಾಖ್ಯಾನವೇ ಮಥನ. ಬ್ರಹ್ಮಜ್ಞಾನೋದಯವೇ ಅಗ್ನಿಪ್ರಾಪ್ತಿ. ಅಪರೋಕ್ಷಜ್ಞಾನವು ಜೀವಾಚ್ಛಾದಿಕೆಯನ್ನು ನಾಶಮಾಡಿ, ಪರಮಾಚ್ಛಾದಿಕೆಯನ್ನು ಅಪಸರಣಗೊಳಿಸುತ್ತದೆ. ಮುಕ್ತಿ ಉಂಟುಮಾಡುತ್ತದೆ ಆಗ ಯಥೇಷ್ಟ ಸುಖಭೋಗವಾಗುತ್ತದೆ. ಜಗತ್ತಿನಲ್ಲಿ ಒಬ್ಬ ಚೇತನ ಮಾತ್ರವಿಲ್ಲ. ಅನಂತಜೀವರಿರುವರು. ಅವರಲ್ಲಿ ಉತ್ತಮರು ಸುಖಸ್ವರೂಪರು. ಮಧ್ಯಮರು ಮಿಶ್ರಸ್ವರೂಪರು. ನೀಚರು ದುಃಖಸ್ವರೂಪರು. ಎಲ್ಲರಲ್ಲಿಯೂ ಇರುವ ಭೇದವು ಸತ್ಯವೂ ನಿತ್ಯವೂ ಆಗಿದೆ. ದೇಹಕ್ಕೆ ಬರುವ ಜನನಮರಣಾದಿಗಳು ಪ್ರವಾಹತಃ ಸತ್ಯವೇ, ಹೊರತು ಮಿಥ್ಯೆಯಲ್ಲ. ಜೀವರು ಸುಖದುಃಖಗಳನ್ನು ಅನುಭವಿಸುವುದರಿಂದ ಅವರು ಅಸ್ವತಂತ್ರರು. ಉತ್ತಮರನ್ನಾಶ್ರಯಿಸಿದವರಿಗೇ ಸುಖ. ದೇಹಾಭಿಮಾನಿಗೆ ದುಃಖವು ತಪ್ಪಿದ್ದಲ್ಲ. ಮೂಢ-ಗರ್ವಿ ಇವರಿಗೆ ಸುಖವಿಲ್ಲವೇ ಇಲ್ಲ.

ಮೃತ್ಯುಗ್ರಸ್ತನಿಗೆ ಧನಾದಿಗಳು ಹೇಗೆ ಸುಖಕರಗಳಲ್ಲವೋ ಹಾಗೆಯೇ ಹೆಣ್ಣು ಹೊನ್ನು ಮಣ್ಣುಗಳ ಆಸೆ ಸುಖಸಾಧನವಲ್ಲ. ಕಾಮ್ಯಕರ್ಮಗಳ ಫಲವು ಅನಿತ್ಯವು. ಸತ್ಯಲೋಕಪೂರ್ತಿ ಲೋಕಗಳು ಅನಿತ್ಯಗಳು. ಅಲ್ಲಿರುವವರೂ ಅನಿತ್ಯರು. ಹೀಗಿರುವಾಗ ದುರಾಶಾಪಿಶಾಚಿಯಾಗಿರುವ ಈ ಕುನ್ನಿಮಾನವನಿಗೆ ಸ್ಥಿರವಾದ ಸುಖವೆಲ್ಲಿಂದ ಬಂದೀತು ? ಜೀವನು ಅಸ್ವತಂತ್ರನು ಜೀವೇಶ್ವರರಿಗೆ ಭೇದವು ಸತ್ಯ. ಇದನ್ನರಿತು ಸುಖಿಯಾಗು.

**ಉದ್ಧವ :-** ಜೀವನು ಶರೀರದೊಳಗೆ ಅಡಗಿರುವುದರಿಂದ ಅವನು ಬದ್ಧನೆಂದಾಯಿತು. ಆ ಬಂಧಪ್ರಕಾರವು ಹೇಗೆ ? ಜೀವನೊಳಗಿರುವ ಪರಮಾತ್ಮನೂ ಬದ್ಧನೆನ್ನುವುದಾದರೆ ಅವನ ಪ್ರವರ್ತನೆ ?

**ಹತ್ತನೆಯ ಅಧ್ಯಾಯ ಮುಗಿದುದು**

**ಅವ** :– ಉದ್ಧವನು ಏಕಜೀವವಾದವನ್ನು ಮಾಡಿರುವನು. ಏಕಜೀವ ವಾದವೆಂದರೆ – ಸಂಪೂರ್ಣಜಗತ್ತು ಸ್ವಪ್ನದಂತೆ ಒಬ್ಬ ಜೀವನ ಅಜ್ಞಾನದಿಂದ ಕಲ್ಪಿತವಾದುದು ಅದನ್ನು ಶ್ರೀಕೃಷ್ಣನು ಖಂಡಿಸುವನು :

**ಶ್ರೀಕೃಷ್ಣ** .– ಉದ್ಧವಾ ! ನನ್ನ ಅಧೀನನಾದ ಜೀವನಿಗೆ ಸತ್ವಾದಿಗುಣ ಗಳಿಂದಲೇ ಬದ್ಧನೆಂದೂ, ಮುಕ್ತನೆಂದೂ ಕರೆಯಲ್ಪಡುವನು ಅಷ್ಟೇ ಹೊರತು ಜೀವಸ್ವರೂಪದಿಂದ ಬದ್ಧನೂ ಅಲ್ಲ. ಮುಕ್ತನೂ ಅಲ್ಲ. ಸತ್ವಾದಿಗುಣಗಳು ಜಡ ಪ್ರಕೃತಿಯಿಂದ ವಿಕೃತಗಳಾದುವು. ಅವುಗಳ ಪ್ರವರ್ತಕನು ನಾನೇ ಆದುದರಿಂದ ಅವು ವನ್ನನ್ನು ವಿಕಾರ ಹೊಂದಿಸಲಾರವು ನಾನು ಅನಾದಿನಿತ್ಯವಾಗಿ ನಿರ್ಗುಣನಾಗಿರುವೆನು. ಆದ್ದರಿಂದ ಆ ಗುಣಗಳ ಸಂಪರ್ಕದಿಂದಾಗುವ ಬಂಧನವಾಗಲಿ ಮೋಕ್ಷವಾಗಲಿ ನನಗಿಲ್ಲ. ಏಕಜೀವವಾದವನ್ನು ಅನುಸರಿಸಿ, ಜೀವನಿಗೆ ಬಂಧ ಮೋಕ್ಷಗಳ ವ್ಯವಸ್ಥೆಯೇ ಇಲ್ಲವೆಂಬುದು ಅತ್ಯಂತ ಅಸಂಗತ. ಸ್ವತಂತ್ರನಾದ ನನ್ನ ಇಚ್ಛೆ ಯಿಂದಲೇ ನನ್ನಿಂದ ಭಿನ್ನರಾದ ಜೀವರು ಬಂಧ ಮೋಕ್ಷಗಳನ್ನು ಹೊಂದುವರು.

ಜೀವನಿಗೆ ಸಂಸಾರವು ವಾಸ್ತವವಲ್ಲ. ಜೀವರು ಸ್ವಪ್ನವನ್ನು ನೋಡುತ್ತಿರು ವಾಗ ಅವರಿಗೆ ಇದು ಸ್ವಪ್ನವೆಂಬ ಜ್ಞಾನವಿರುವುದಿಲ್ಲ. ಆಗ ಅಳುತ್ತಾರೆ. ನಗು ತ್ತಾರೆ. ಹೀಗೆ ಜ್ಞಾನವಿಲ್ಲದಿರುವುದರಿಂದ ಶೋಕಾದಿಗಳನ್ನು ಹೊಂದುವಂತೆ, ಜೀವರಿಗೆ ಸ್ವರೂಪಜ್ಞಾನವಿಲ್ಲದಿರುವುದರಿಂದ ಶೋಕಾದಿಗಳು ಮತ್ತು ಸಂಸಾರವೂ ಅವರಿಗೆ ಗಂಟು ಬೀಳುತ್ತವೆ. ಸಂಸಾರವು ಸುಳ್ಳಲ್ಲ. ಅರ್ಥಕ್ರಿಯಾಕಾರಿಯಾದ್ದರಿಂದ ಸತ್ಯ. ಆದರೂ ಸಂಸಾರವು ಜೀವಸ್ವಭಾವವಲ್ಲವಾದ್ದರಿಂದ ವಾಸ್ತವಿಕವಲ್ಲ. ಉದ್ಧವಾ ! ನನಗೆ ಬಂಧವೂ ಇಲ್ಲ. ಮೋಕ್ಷವೂ ಇಲ್ಲ. ಏಕೆಂದರೆ ಲಕ್ಷ್ಮಿಯು ವಿದ್ಯೆಗೆ, ದುರ್ಗೆಯು ಅವಿದ್ಯೆಗೆ ಹಾಗೂ ಬಂಧಮೋಕ್ಷಗಳಿಗೆ ಅಭಿಮಾನಿಗಳು. ಅವರೇ ನನ್ನ ಅಧೀನರಾಗಿರುವುದರಿಂದ ನನಗೆ ಬಂಧಮೋಕ್ಷಗಳಿಲ್ಲ. ನನ್ನ ಭಿನ್ನಾಂಶನು ಜೀವನು ಅಂದರೆ ಖದ್ಯೋತವು (ಮಿಂಚಿನ ಹುಳು) ಸೂರ್ಯ ಸದೃಶವೂ ಅವನ ಅಧೀನವೂ ಆಗಿರುವುದರಿಂದ ಅದು ಸೂರ್ಯನ ಭಿನ್ನಾಂಶವು. ಅಥವಾ ಪ್ರತಿ ಬಿಂಬವು. ಆದರಂತೆ ಜೀವನು ಪರಮಾತ್ಮನಿಂದ ಭಿನ್ನನಾಗಿದ್ದರೂ, ಚೇತನನಾಗಿರು ವಿಕೆ ಮುಂತಾದ ಗುಣಗಳಿಂದ ಸಮಾನನೂ, ಅವನ ಅಧೀನನೂ ಆಗಿರುವುದರಿಂದ ಅವನು ಪರಮಾತ್ಮನ ಭಿನ್ನಾಂಶನು ಅಥವಾ ಪ್ರತಿಬಿಂಬನಾಗಿರುವನು. ಮುಕ್ತಿಯನ್ನು ಹೊಂದಬಲ್ಲವನು ಆರೆನ್ನುವಿಯಾ ? ಸಜ್ಜನನಾಗಿ ಭಕ್ತಿಯುಳ್ಳವನು.

ಸಜ್ಜನನ ವಿಶೇಷ ಲಕ್ಷಣ .– ನನ್ನ ಮತ್ತು ನನ್ನ ಭಕ್ತರು ಇವರಿಂದ ಉಪದಿಷ್ಟ ವಾದ ಗುಣದೋಷಗಳನ್ನು ತಿಳಿದು ದೋಷಗಳನ್ನು ಕಳೆದುಕೊಂಡು ಗುಣವನ್ನು

ಹೊಂದಿ, ಹರಿಯು ಸರ್ವೋತ್ತಮನೆಂಬ ಭಾವನೆಯಿಂದ ಆಚರಿಸಿದ ಭಾಗವತಧರ್ಮ ಗಳನ್ನು ನನಗೆ ಅರ್ಪಿಸಿ ಭಜಿಸುವವನು ಸಜ್ಜನ ಶ್ರೇಷ್ಠನು.

ಭಕ್ತಿಯ ಲಕ್ಷಣಗಳು ;– ಗುರುಗಳ ಉಪದೇಶದಿಂದ ಭಗವಂತನ ಮಹಿಮೆ ಗಳನ್ನು ವಿಶೇಷವಾಗಿ ತಿಳಿದು ಅಸಾಧಾರಣ ಭಕ್ತಿಯಿಂದ ಭಜಿಸುವವರು ಅತಿಶಯಿತ ಭಕ್ತರೆನಿಸುವರು. ಇದು ಉತ್ತಮೋತ್ತಮ ಭಕ್ತಿಯ ಲಕ್ಷಣ.

ಸರ್ವಸಾಧಾರಣ ಭಕ್ತಿಯ ಲಕ್ಷಣ :– ನನ್ನ ಪ್ರತಿಮೆ ಅಥವಾ ನನ್ನ ಭಕ್ತರ ದರ್ಶನ, ಸ್ಪರ್ಶನ, ಅರ್ಚನೆ, ಸೇವೆ, ಸ್ತುತಿ, ಗಾನ, ಕಥಾಶ್ರವಣ, ಧ್ಯಾನ, ಸರ್ವ ಸಮರ್ಪಣೆ, ಉತ್ಸವ, ಏಕಾದಶ್ಯಾದಿ ವ್ರತಾಚರಣೆ, ನಿರಹಂಕಾರ ಮತ್ತು ದಂಭತ್ಯಾಗ ಇತ್ಯಾದಿಗಳನ್ನು ಅನುಷ್ಠಿಸಬೇಕು. ಇಂತಹವನಿಗೆ ಸಾಧನೆ ಮಾಡಿಸಿ ಮುಕ್ತಿಯನ್ನು ಕೊಡುವೆನು.

ಸೂರ್ಯ, ಅಗ್ನಿ, ವಿಪ್ರ, ಗೋವು, ವಿಷ್ಣುಭಕ್ತ, ಆಕಾಶ, ವಾಯು, ಜಲ, ಪೃಥಿವಿ, ಹೃದಯ, ಸರ್ವಪ್ರಾಣಿಗಳು, ಅಧಿಕಾರಿಗಳ ಯೋಗ್ಯತಾಭೇದದಿಂದ ನನ್ನ ಪೂಜೆಗೆ ಇವು ಸ್ಥಾನಗಳು

ಸೂರ್ಯನೊಳಗಿರುವ ನನ್ನನ್ನು ಗಾಯಿತ್ರಿಯಿಂದ, ಅಗ್ನಿಯಲ್ಲಿರುವ ನನ್ನನ್ನು ಹೋಮದಿಂದ, ಬ್ರಾಹ್ಮಣನಲ್ಲಿರುವ ನನ್ನನ್ನು ಅತಿಥಿಸತ್ಕಾರದಿಂದ, ಗೋವಿನಲ್ಲಿರುವ ನನ್ನನ್ನು ಹುಲ್ಲು ನೀರನ್ನು ಅರ್ಪಿಸುವುದರಿಂದ, ವಿಷ್ಣು ಭಕ್ತನಲ್ಲಿರುವ ನನ್ನನ್ನು ಪರಲೋಕ ಬಂಧುವೆಂದು ತಿಳಿದು ಸತ್ಕರಿಸುವುದರಿಂದ, ಹೃದಯದಲ್ಲಿರುವ ನನ್ನನ್ನು ಧ್ಯಾನದಿಂದ, ಮುಖ್ಯಪ್ರಾಣನನ್ನು ಸರ್ವದೇವೋತ್ತಮನೆಂದು ತಿಳಿದು ಅವನಲ್ಲಿರುವ ನನ್ನನ್ನು ಮತ್ತು ನೀರಿನಲ್ಲಿರುವ ನನ್ನನ್ನು ಜಲ ಮತ್ತು ಪುಷ್ಪಗಳಿಂದ ಪೂಜಿಸಬೇಕು. ಭಕ್ತಿಯೋಗದಿಂದಲೇ ಸಂಸಾರದಿಂದ ಮುಕ್ತನಾಗಬೇಕು. ಉದ್ಧವಾ ! ನೀನು ನನ್ನ ಭೃತ್ಯನೂ, ಮಿತ್ರನೂ ಆಗಿರುವುದರಿಂದಲೇ ನಿನಗೆ ಅತಿಗೋಪ್ಯವಾದುದನ್ನು ಹೇಳುವೆನು ಕೇಳು.

**ಹನ್ನೊಂದನೆಯ ಅಧ್ಯಾಯ ಮುಗಿದುದು**

**ಶ್ರೀಕೃಷ್ಣ :–** ಉದ್ಧವಾ ! ನನ್ನಲ್ಲಿ ಮಾಡುವ ಸುದೃಢವಾದ ಭಕ್ತಿಯೆ ಸಕಲ ದುಃಖ ಪರಿಹಾರಕವು. ಇಂತಹ ಭಕ್ತಿಪೂರ್ವಕವಾಗಿ ನಾನು ಸರ್ವಗುಣ ಪರಿಪೂರ್ಣನೆಂಬ ಜ್ಞಾನದಿಂದ ನಾನು ವಶನಾಗುವ ಹಾಗೆ ವಾಯು ಜಯಾದಿ ಯೋಗಾಭ್ಯಾಸ, ದಾನ, ಕರ್ಮ, ತೀರ್ಥಸ್ನಾನವೇ ಮೊದಲಾದ ಯಾವ ಸಾಧನ ದಿಂದಲೂ ವಶನಾಗತಕ್ಕವನಲ್ಲ. ಸಾಧಾರಣ ಭಕ್ತಿಯಿಂದ ಸಹಿತವಾದ ಜ್ಞಾನವು

ಇಹಪರಗಳಲ್ಲಿ ಸುಖವನ್ನು ಮಾತ್ರ ಕೊಡುವುದು. ಮೋಕ್ಷವನ್ನು ಕೊಡಿಸಲಾರದು. ಆದುದರಿಂದ ನನ್ನಲ್ಲೂ, ನನ್ನ ಭಕ್ತರಲ್ಲೂ ಭಕ್ತಿಸಹಿತವಾದ ಹರಿಯು ಗುಣಪೂರ್ಣ ನೆಂಬ ಜ್ಞಾನವನ್ನು ಸಂಪಾದಿಸಿ ಯೋಗ್ಯನು ಮುಕ್ತನಾಗುವನು. ಈ ಮಾರ್ಗ ದಿಂದಲೇ ಪ್ರಹ್ಲಾದ, ಸ್ತ್ರೀಯರು, ಪಕ್ಷಿಗಳು, ಮಯಾಸುರ, ಗೋಪಿಯರು, ಯಜ್ಞ ಪತ್ನಿಯರು, ಗೋವು, ವೃಕ್ಷ ಮತ್ತು ಮೃಗ ಇವರೆಲ್ಲ ಮುಕ್ತರಾದರು.

ನನ್ನನ್ನೇ ಇಚ್ಛಿಸುವ ಸಾವಿರಾರು ಮಂದಿ ಗೋಪಿಕಾಸ್ತ್ರೀಯರು "ಶ್ರೀಕೃಷ್ಣನು ವಿಷ್ಣುಸ್ವರೂಪನು, ಅವನೇ ಸಂಸಾರ ತಾರಕನು ಮತ್ತು ನಿತ್ಯಾನಂದ ಪ್ರದನೆಂದು ಭಕ್ತಿ ಪೂರ್ವಕವಾಗಿ ತಿಳಿದವರಾದುದರಿಂದ ನನ್ನನ್ನು ಹೊಂದಿದರು.

## ಗೋಪಿಕಾ ಸ್ತ್ರೀಯರ ವಿಚಾರ

ಅಪ್ಸರ ಸ್ತ್ರೀಯರು ಜಾತಾ ಅಪರೋಕ್ಷಿಗಳು. ಅವರಲ್ಲಿ ಎರಡು ಬಗೆಯ ಅಧಿಕಾರಿಗಳುಂಟು. ಕೇವಲ ಭಕ್ತಿಯಿಂದ ಉಪಾಸನೆ ಮಾಡುವವರು. ಕಾಮ ದಿಂದ ಸಹಿತವಾದ ಭಕ್ತಿಯಿಂದ ಉಪಾಸಿಸುವವರೆಂದು ಎರಡು ಬಗೆಯವರು. ಗೋಪಿಕಾ ಸ್ತ್ರೀಯರೆಲ್ಲ ಕಾಮಸಹಿತವಾದ ಭಕ್ತಿ ಉಳ್ಳವರು. ವಿಷವನ್ನು ಪರಿಹರಿಸ ತಕ್ಕ ಮಣಿ ಮಂತ್ರಾದಿಗಳುಳ್ಳವರಿಗೆ ವಿಷವು ಸೇರಿದ ಅನ್ನವು ಹೇಗೆ ಅನಿಷ್ಟವಲ್ಲವೋ ಹಾಗೆಯೇ ಅಧಿಕಾರಿಗಳಿಗೆ ಕಾಮಯುಕ್ತ ಭಕ್ತಿಯು ಅನಿಷ್ಟಕ್ಕೆ ಕಾರಣವಾಗುವುದಿಲ್ಲ. ಯಾವ ಸ್ತ್ರೀಯರಿಗೆ ಈ ಯೋಗ್ಯತೆ ಇದೆಯೋ ಅಂತಹ ಅಪ್ಸರ ಸ್ತ್ರೀಯರು ಶ್ರೀಕೃಷ್ಣ ನನ್ನು ಜಾರನೆಂದೇ ಉಪಾಸನೆ ಮಾಡಬೇಕು. ''ಕಾಮಸ್ತ್ವಶುಭ ಕೃಚ್ಚಾಪಿ ಭಕ್ತ್ಯಾ ವಿಷ್ಣೋಃ ಪ್ರಸಾದಕೃತ್" ಸ್ಕಾಂದ 10-27-13ರ ತಾತ್ಪರ್ಯ. ಕಾಮ ನಾವೆಂಬುದು ಸ್ವಾಭಾವಿಕವಾಗಿ ಅಶುಭವನ್ನು ಮಾಡತಕ್ಕುದಾದರೂ ಭಕ್ತ್ಯಾದಿ ಗುಣಗಳಿಂದ ಕೂಡಿರುವ ಪ್ರಯುಕ್ತ ಭಗವತ್ಪ್ರಸಾದದ್ವಾರಾ ಶ್ರೇಯಸ್ಸನ್ನೇ ಹುಟ್ಟಿಸುತ್ತದೆ.

"ಕೃಷ್ಣಂ ವಿದುಃಪರಂ ಕಾಂತಂ"-ಭಾಗ 10-27-12. ಗೋಪಿಕಾಸ್ತ್ರೀಯರು ಶ್ರೀಕೃಷ್ಣನನ್ನು ಮೊದಲು ಉಪಪತಿಯನ್ನಾಗಿ ತಿಳಿದರು. ಆಗ ಅವರು ಶ್ರೀಕೃಷ್ಣ ಬ್ರಹ್ಮನೆಂದು ತಿಳಿದರೂ, ಅವರಿಗೆ ಪರಿಪಕ್ವವಾದ ಜ್ಞಾನವಿರಲಿಲ್ಲವಾದುದರಿಂದ ಕೃಷ್ಣನು ಪರಬ್ರಹ್ಮನೆಂದು ಚೆನ್ನಾಗಿ ತಿಳಿಯಲಿಲ್ಲ. "ಕೃಷ್ಣ ಕಾಮಾಃ ತದಾ ಗೋಪ್ಯಃ"- ತಾತ್ಪರ್ಯ. ಗೋಪಿಕಾಸ್ತ್ರೀಯರು ಮೊದಲು ಕೃಷ್ಣನ ಸಂಗವನ್ನು ಬಯಸಿದರು ಇವರಿಗೆ ಮುಕ್ತಿಯು ಯಾವಾಗ ಆಯಿತೆಂಬುದಕ್ಕೆ ಭಾಗ 11-12-13ನೆ ತಾತ್ಪರ್ಯ ಹೀಗಿದೆ.

**ಗೋಪಿಕಾದ್ಯಾಃ ದಿವಂ ಗತ್ವಾ ಹರಿಂ ಜ್ಞಾತ್ವಾ ಯಥಾ ತಥಂ ।**
**ಪರಂಪದಂ ಯಯುಃ ಪೂರ್ವಸಂಗಾದೇವ ಶುಭೋಚಿತಾಃ ॥**

**ಅರ್ಥ :-** ಗೋಪಿಕಾದಿ ಸ್ತ್ರೀಯರು ಗೋಪಿಕಾಜನ್ಮದಲ್ಲಿ ಮಾಡಿದ

ಶ್ರೀಹರಿಯ ಸಂಸರ್ಗದಿಂವಲೇ ಮೋಕ್ಷವನ್ನು ಹೊಂದುವ ಯೋಗ್ಯತೆಯಿರುವುದರಿಂದ ಪ್ರಾರಬ್ಧ ಕರ್ಮವು ಮುಗಿದಕೂಡಲೇ ಭೂಲೋಕದಲ್ಲಿನ ದೇಹವನ್ನು ಬಿಟ್ಟು (ದಿವಂಗತಾಃ) ಕೂಡಲೇ ಮೋಕ್ಷವನ್ನು ಹೊಂದದೆ ಸ್ವರ್ಗಕ್ಕೆ ಹೋದರು. ಬಳಿಕ ಸಾಂತಾನಿಕಲೋಕಕ್ಕೆ ಹೋಗಿ ಅಲ್ಲಿ ಶ್ರೀಹರಿಯನ್ನು ತಮ್ಮ ಯೋಗ್ಯತಾನುಸಾರವಾಗಿ ತಿಳಿದು ಸಾಧನಸಂಪೂರ್ತಿಯನ್ನು ಸಂಪಾದಿಸಿ ಶ್ರೀಹರಿಯ ಪಾದಾರವಿಂದವನ್ನು ಹೊಂದಿದರು.

ಸಾಂತಾನಿಕ ಲೋಕವೆಂದರೆ ಯಾವುದು ? ಎಂದರೆ ಮಹಾಭಾರತ ತಾತ್ಪರ್ಯ ನಿರ್ಣಯ 9ನೇ ಅಧ್ಯಾಯ 107ನೆಯ ಶ್ಲೋಕದಲ್ಲಿ "ವೈಷ್ಣವಾನ್ ಸಂತತತ್ವಾಚ್ಚ ನಾಮ್ನಾ ಸಾಂತಾನಿಕಾನ್'' ಮಹಾಪ್ರಳಯದವರೆಗೂ ಇರುವುದರಿಂದ ನಿತ್ಯಗಳಾದುದರಿಂದ ಸಾಂತಾನಿಕ ನಾಮಗಳುಳ್ಳ ವಿಷ್ಣು ಸಂಬಂಧವಿರುವುದರಿಂದ ಅತ್ಯುತ್ತಮಗಳೂ ಆಗಿರುವ ಲೋಕಗಳು ಮಹರ್ಲೋಕ, ಜನೋಲೋಕ, ತಪೋಲೋಕ ಮತ್ತು ಸತ್ಯಲೋಕಗಳೇ ಸಾಂತಾನಿಕಗಳೆನಿಸುವುವು. ಈ ಲೋಕಗಳು ಶ್ರವಣಾದಿಗಳಿಗೆ ಫಲವಾದರೂ, ಭೋಗಿಸಿ ಪ್ರಾರಬ್ಧ ಕರ್ಮವನ್ನು ಕಳೆದುಕೊಂಡು ಭೂಲೋಕದಲ್ಲಿ ದೇಹ ಬಿಟ್ಟ ಜ್ಞಾನಿಗಳು ತಮ್ಮ ಸಾಧನ ಪೂರ್ತಿಗಾಗಿ ನೆಲಸುವ ಲೋಕಗಳಿವು.

ಹಿಂದೆ ಹೇಳಿದಂತೆ ಗೋಪಿಕಾಸ್ತ್ರೀಯರು ಈ ಸಾಂತಾನಿಕ ಲೋಕಕ್ಕೆ ಹೋಗಿ ಅಲ್ಲಿ ಶ್ರೀಹರಿಯನ್ನು ಯಥಾಯೋಗ್ಯವಾಗಿ ತಿಳಿಯುವರು. ಅಂದರೆ "ಜಾರಬುದ್ಧ್ಯಾಽಪಿ ಸಂಗತಃ" ಭಾಗ 10–27–10ರ ತಾತ್ಪರ್ಯ. ಜಾರನೆಂದು ಉಪಾಸನೆಯನ್ನು ಮಾಡುವರು. ಅಂದರೆ ಜರಯತೀತಿ ಜಾರಃ =ಸಂಸಾರವನ್ನು ಜೀರ್ಣ (ನಾಶ)ವಾಗುವಂತೆ ಮಾಡುವವನಾದ್ದರಿಂದ ಶ್ರೀಹರಿಗೆ ಜಾರನೆಂದು ಹೆಸರು ಹೀಗೆ ಜಾರನೆನಿಸುವ ಶ್ರೀಕೃಷ್ಣನೇ ಪರಬ್ರಹ್ಮನೆಂದು ದೃಢವಾಗಿ ತಿಳಿದು ಸಾಧನ ಸಂಪೂರ್ತಿಯನ್ನು ಹೊಂದಿ ಸರ್ವೋತ್ತಮನಾದ ಆ ಶ್ರೀಹರಿಯನ್ನೇ ಹೊಂದಿದರು. "ವಿಮುಕ್ತಾವಪಿ ಕಾಮಿನ್ಯೋ ವಿಷ್ಣುಕಾಮಾ ವ್ರಜಸ್ತ್ರಿಯಃ" – ಭಾಗ 10–27–15 ತಾತ್ಪರ್ಯ. ಶ್ರೀಕೃಷ್ಣಾವತಾರಕಾಲದಲ್ಲಿ ಶ್ರೀಕೃಷ್ಣನನ್ನು ಸಾಕ್ಷಾತ್ ವಿಷ್ಣುವೆಂದು ತಿಳಿದು ಆ ಶ್ರೀವಿಷ್ಣುವನ್ನು ಪತಿಯನ್ನಾಗಿ ಇಚ್ಛಿಸುವ ಗೋಪಿಕಾಸ್ತ್ರೀಯರು ಮೋಕ್ಷದಲ್ಲಿಯೂ ಕಾಮನೆಯನ್ನುಳ್ಳವರಾಗುತ್ತಾರೆ.

**ಕೃಷ್ಣ :–** ಉದ್ಧವನೇ ! ನೀನೂ ಸರ್ವಕರ್ಮಗಳನ್ನೂ ನನಗರ್ಪಿಸಿ ನಾನು ಸರ್ವಾಂತರ್ಯಾಮಿಯೆಂಬ ಬುದ್ಧಿಯಿಂದ ನನ್ನನ್ನು ಶರಣು ಹೊಂದು.

**ಉದ್ಧವ .–** ವಾಯುದೇವರೇ ಭಕ್ತೋತ್ತಮರೆಂದು ಹೇಳಿ ಗೋಪಿಯ

ರನ್ನೂ ಹೊಗಳಿದಿ. ಇದರಿಂದ ವಾಯುದೇವರು ಉತ್ತಮರೋ ಅಥವಾ ಗೋಪಿಯರು ಉತ್ತಮರೋ ಎಂಬ ಸಂದೇಹವು ಬಂದಿದೆ. ಅದನ್ನು ಪರಿಹರಿಸು.

**ಶ್ರೀಕೃಷ್ಣ** :– ಸಹಜವಾಗಿ ಜ್ಞಾನಭಕ್ತ್ಯಾದಿ ಸಕಲಸದ್ಗುಣಗಳಿಂದ ವಾಯುದೇವನೇ ಸಕಲ ಭಕ್ತರಲ್ಲಿಯೂ ಉತ್ತಮನು. ಅವನೇ ಚತುರ್ಮುಖ ಬ್ರಹ್ಮ ಪದವಿಗೆ ಬರತಕ್ಕವನು. ಅವನು ಸಿರಿಹರಿಯಿಂದ ಸಹಿತನಾಗಿ ರುದ್ರಾದಿಗಳ ಹೃದಯ ಗುಹೆಯನ್ನು ಪ್ರವೇಶಿಸಿ ಅವರ ಮನಸ್ಸಿಗೆ ನಿಯಾಮಕನಾಗುವನು. ಅವನು, ಸಿರಿ ಮತ್ತು ನಾನು ಈ ಮೂವರನ್ನು ವೇದವು ಪ್ರತಿಪಾದಿಸಿದರೂ, ನನ್ನನ್ನು ಹೆಚ್ಚಾಗಿ ಪ್ರಕಟಿಸುವುದು.

ಬ್ರಹ್ಮದೇವನು ಇತರ ಎಲ್ಲ ಜೀವರಿಗಿಂತ ಉತ್ತಮನು. ತ್ರಿವೃತ್ ಅಂದರೆ ಜ್ಞಾನಾನಂದಬಲಸ್ವರೂಪ. ಅವ್ಯಕ್ತನು ಅಂದರೆ ಸೂಕ್ಷ್ಮನು ಮೊದಲು ಹುಟ್ಟಿದವನು. ಅನೇಕ ಬಗೆಯ ಜಗತ್ತಿನಲ್ಲಿ ಚತುರ್ಮುಖನಿದ್ದರೂ ಅವನನ್ನು ಜಗತ್ತು ಆಶ್ರಯಿಸಿಕೊಂಡಿದ್ದರೂ ಜೀರ್ಣಪಟದಲ್ಲಿ ಅನೇಕ ತಂತುಗಳು ಇದ್ದರೂ ತಂತುಗಳೂ ಪಟಗಳೂ ಹೇಗೆ ಭಿನ್ನಗಳೋ ಹಾಗೆಯೇ ಚತುರ್ಮುಖನೂ, ಜಗತ್ತೂ ಭಿನ್ನಗಳಾಗಿಯೇ ಇವೆ. ಜಗತ್ತೆಂಬ ವೃಕ್ಷವನ್ನು ತಿಳಿಯುವವನೇ ವೇದಾರ್ಥವನ್ನು ತಿಳಿದು ಭಗವದನುಗ್ರಹಕ್ಕೆ ಪಾತ್ರನಾಗಬಲ್ಲನು. ಉದ್ಧವಾ ! ನೀನೂ ಸ್ವರೂಪಜ್ಞಾನದಿಂದ ಪರಮಾತ್ಮನನ್ನು ಹೊಂದಿ ಮುಕ್ತಿಯಲ್ಲಿ ನಿನ್ನ ಯೋಗ್ಯತಾನುಸಾರವಾದ ಸುಖವನ್ನು ಅನುಭವಿಸು.

## ಹನ್ನೆರಡನೆಯ ಅಧ್ಯಾಯ ಮುಗಿದುದು

ಸತ್ವಾದಿ ಮೂರು ಗುಣಗಳು ಜೀವನ ಸ್ವರೂಪದಲ್ಲಿಲ್ಲ. ಪ್ರಾಕೃತವಾದ ಅಂತಃಕರಣದಲ್ಲಿವೆ. ಈ ಪ್ರಾಕೃತವಾದ ಅಂತಃಕರಣವು ಸಾತ್ವಿಕ, ರಾಜಸ, ತಾಮಸ ಎಂದು ಮೂರು ಬಗೆಯಾಗಿದೆ. ಈ ಅಂತಃಕರಣಾನುಸಾರ ವ್ಯಾಪಾರ ಮಾಡತಕ್ಕ ಜೀವನೂ ಸಾತ್ವಿಕ, ರಾಜಸ, ತಾಮಸನೆಂದು ಕರೆಯಲ್ಪಡುವನು.

ಸತ್ವಸ್ವಭಾವದವನು ಭಕ್ತಿಯನ್ನು ಹೊಂದುವ ಸಾಧನೆಯನ್ನು ಕೇಳು :–

ಮೊದಲು ಸಾತ್ವಿಕಾಂತಃಕರಣದಿಂದ ಭಕ್ತಿಯೆಂಬ ಧರ್ಮವು ಹುಟ್ಟುತ್ತದೆ. ಅದರಿಂದ ಸಾತ್ವಿಕಾಂತಃಕರಣವು ಉದ್ರೇಕವಾಗುತ್ತದೆ. ಅದರಿಂದ ಅಪರೋಕ್ಷ ಜ್ಞಾನವುಂಟಾಗುವುದು. ಅದರಿಂದ ಸತ್ವಗುಣವು ಮೊದಲಿಗಿಂತ ಅಧಿಕವಾಗುತ್ತದೆ. ಅದ

ರಿಂದ ಭಕ್ತಿಯು ಮತ್ತಷ್ಟು ಅಧಿಕವಾಗುತ್ತದೆ. ಹೀಗೆ ಅಭಿವೃದ್ಧವಾದ ಭಕ್ತಿಯಿಂದ ರಜಸ್ತಮೋಗುಣಗಳು ನಾಶವಾಗುವುವು.

ಪುರಾಣಗಳು, ಯಾಗ, ದೇಶ, ಕಾಲ, ಕರ್ಮ. ಜನ್ಮ, ಧ್ಯಾನ, ಮಂತ್ರ ಮತ್ತು ಸಂಸ್ಕಾರ ಈ ಒಂಭತ್ತೂ, ಸಾತ್ವಿಕ, ರಾಜಸ, ತಾಮಸಭೇದದಿಂದ ಮೂರು ಬಗೆಯಾಗಿವೆ. ಜ್ಞಾನವೃದ್ಧರಿಂದ ಪ್ರಶಂಸಿಸಲ್ಪಡುವ ಪುರಾಣಾದಿ ಒಂಭತ್ತು ಸಾಧನಗಳೂ ಸಾತ್ವಿಕಗಳು. ಜ್ಞಾನವೃದ್ಧರಿಂದ ಉಪೇಕ್ಷಿಸಲ್ಪಡತಕ್ಕವು ರಾಜಸಗಳು. ನಿಂದಿಸಲ್ಪಡತಕ್ಕವು ತಾಮಸಗಳು.

ಜ್ಞಾನಿಮಾನ್ಯ ಪುರಾಣಾದಿ ಸಾಧನೆಗಳಿಂದ ಸತ್ವಗುಣವು ಅಭಿವೃದ್ಧವಾಗುವುದು. ಅದರಿಂದ ಭಕ್ತಿ, ಅಪರೋಕ್ಷಜ್ಞಾನ, ಸದಾಹರಿಸ್ಮರಣೆ ಮತ್ತು ಕೀರ್ತನೆ ಮಾಡುವಂತಾಗಿ ನಿಷಿದ್ಧಕರ್ಮಗಳನ್ನು ತ್ಯಜಿಸುವನು. ಸತ್ವಗುಣವು ಅಭಿವೃದ್ಧಿ ಹೊಂದಿ ವೃತ್ತಿಜ್ಞಾನವು ಉಂಟಾಗುವುದು. ಸ್ವರೂಪದ ಅಂತಃಕರಣ ಮತ್ತು ಅಪರೋಕ್ಷ ಜ್ಞಾನಗಳು ವ್ಯಕ್ತವಾದಮೇಲೆ, ವೃತ್ತಿಜ್ಞಾನವು ಜಡವಾದ ಅಂತಃಕರಣವನ್ನು ನಾಶಪಡಿಸಿ. ನಿರ್ಮೂಲವಾಗಿ ತಾನೂ ನಾಶಹೊಂದುವುದು.

**ಉದ್ಧವ :–** ವಿಷಯ ಭೋಗವು ದುಃಖಕ್ಕೆ ಕಾರಣವೆಂದೂ ಮನುಷ್ಯರು ಕತ್ತೆನಾಯಿಗಳಂತೆ ಮತ್ತೆ ಮತ್ತೆ ವಿಷಯಭೋಗಗಳನ್ನು ಅನುಭವಿಸುತ್ತ ದುಃಖಿಸುವರು. ಇದಕ್ಕೆ ಕಾರಣವೇನು ?

**ಶ್ರೀಕೃಷ್ಣ :–** ಮದದಿಂದ ಮನುಷ್ಯನು ತಾನೇ ಸ್ವತಂತ್ರಕರ್ತನೆಂದು ಸುಳ್ಳಾಗಿ ತಿಳಿದಾಗ, ಪಾಪಪ್ರದವಾದ ರಜೋಗುಣವು ಕೆರಳುತ್ತದೆ. ಅದರಿಂದ ಮನಸ್ಸು ನಾನಾ ಬಗೆಯ ವಿಕಾರಕ್ಕೆ ಒಳಗಾಗುವುದು. ಆಗ 'ಹೀಗೆ ಮಾಡುವೆನು, ಹಾಗೆ ಮಾಡುವೆನು' ಎಂಬ ಅನೇಕ ಕಲ್ಪನಾಯುಕ್ತ ಸಂಕಲ್ಪವು ಹುಟ್ಟುತ್ತದೆ. ಅದರಿಂದ ಅಮಂಗಳ ಬುದ್ಧಿಯುಳ್ಳ ಮನುಷ್ಯನು ಶಬ್ದಾದಿವಿಷಯಗಳನ್ನು ಧ್ಯಾನಿಸುವನು. ಅದರಿಂದ ಕಾಮವು ಹುಟ್ಟುವುದು. ಕಾಮವಶನು ಇಂದ್ರಿಯಗಳನ್ನು ನಿಗ್ರಹಿಸಲಾರನು. ಆ ಅವಸ್ಥೆಯಲ್ಲಿ ವನಿತಾದಿರೂಪವನ್ನು ನೋಡಿ ವೀರ್ಯೋದ್ರೇಕವನ್ನು ಹೊಂದಿ, ವಿವೇಕಶೂನ್ಯನೂ, ವಿಹ್ವಲಿತಾಂಗನೂ ಆಗಿ ದುಃಖಪ್ರದ ಕರ್ಮಗಳನ್ನು ಮಾಡುವನು. ಅಂದರೆ ಕಾಮಸೌಖ್ಯಕ್ಕಾಗಿ ವಿಷಯಗಳನ್ನು ಸೇವಿಸುವನು. ಹೀಗಾದರೆ ಎಂದಿಗೂ ದುಃಖನಿವೃತ್ತಿಯಾಗುವುದಿಲ್ಲ. ಆದುದರಿಂದ ಮನಸ್ಸನ್ನು ನಿಗ್ರಹಿಸಿ, ಆನಂದರೂಪಿಯಾದ ಹರಿಯನ್ನು ಧ್ಯಾನಿಸಬೇಕು. ಈ ಯೋಗವನ್ನೇ ನನ್ನ ಶಿಷ್ಯರಾದ ಸನಕಾದಿಗಳು ಆಜ್ಞಾಪಿಸಿರುವರು.

**ಉದ್ಧವ :–** ಸ್ವಾಮಿಯೆ ! ಸನಕಾದಿಗಳಿಗೆ ನೀನು ಯಾವ ರೂಪದಿಂದ ಉಪದೇಶಿಸಿದೆ ?

**ಶ್ರೀಕೃಷ್ಣ :–** ಮುಕ್ತಿಯೋಗ್ಯನು ವಿಷಯಗಳಿಂದ ಮನಸ್ಸನ್ನೂ ಮನಸ್ಸಿನಿಂದ ವಿಷಯಗಳನ್ನೂ ಸೆಳೆಯುವುದು ಹೇಗೆ ? ಎಂದು ಬ್ರಹ್ಮದೇವರನ್ನು ಸನಕಾದಿಗಳು ಕೇಳಿದರು. ಮುಖ್ಯಕರ್ಮ ಮತ್ತು ಸರ್ವಕರ್ತನಾದ್ದರಿಂದ ಕರ್ಮಶಬ್ದ ವಾಚ್ಯನಾದ ಹರಿಯು ಕಾರಣವೆಂದು ಬ್ರಹ್ಮದೇವರಿಗೆ ತಿಳಿದಿದ್ದಿತು. ಆದರೆ ಇದಕ್ಕೆ ಶ್ರೀಹರಿಯೇ ಉತ್ತರಹೇಳಬೇಕೆಂದಿಚ್ಛಿಸಿರುವುದನ್ನೂ, ತಾನೇ ಉತ್ತರವನ್ನು ಹೇಳದೆ ಹೋಗುವುದ ರಿಂದ ಶ್ರೀಶನ ವಿಶೇಷ ಅನುಗ್ರಹಕ್ಕೆ ಪಾತ್ರರಾಗುವರೆಂಬುದನ್ನೂ ಬಲ್ಲ ಬ್ರಹ್ಮದೇವರು ನನ್ನನ್ನೇ ಧ್ಯಾನಿಸುತ್ತ ಕುಳಿತರು. ಇದನ್ನು ನೋಡಿದ ಅಯೋಗ್ಯರು ಇದಕ್ಕೆ ಉತ್ತರ ಕೊಡಲಾರದ ಬ್ರಹ್ಮದೇವರು ದಡ್ಡರೆಂದು ತಿಳಿದರು. ಆಗ ನಾನು ಹಂಸ ರೂಪದಿಂದ ಬ್ರಹ್ಮನ ಬಳಿಗೆ ಹೋದೆನು. ಸನಕಾದಿಗಳು ಬ್ರಹ್ಮನೊಡನೆ ನನಗೆ ನಮಿಸಿ, ನನ್ನನ್ನು ವಿಶೇಷವಾಗಿ ತಿಳಿಯಬೇಕೆಂದು ಬಯಸಿ "ನೀನು ಯಾರು" ಎಂದು ಕೇಳಿದರು. ಆಗ ನಾನು ಕೊಟ್ಟ ಉತ್ತರವನ್ನು ತಿಳಿಸುವೆನು.

**ಹಂಸ –** ಬ್ರಹ್ಮನು ನನಗೆ ನಮಿಸಿದುದರಿಂದ ನಾನೇ ಸ್ವತಂತ್ರವಸ್ತುವಾದ ಪರಮಾತ್ಮನೆಂದು ಹೇಳಿದಂತಾಯಿತು. ಇದನ್ನು ನೀವು ತಿಳಿದೇ ಇರುವಿರಿ. ಈ ಬಗ್ಗೆ ನಿಮಗೆ ಸಂದೇಹವಿಲ್ಲವಾದುದರಿಂದ 'ನೀನಾರು' ಎಂಬ ಪ್ರಶ್ನೆಯೇ ಅಸಂಗತ ವಾಗುತ್ತದೆ. ಸುರನರಪಿತೃಗಂಧರ್ವಅಸುರರೆಂಬ ಐದು ಬಗೆಯವರಲ್ಲಿ ನೀನು ಯಾರು ? ಎಂದು ನೀವು ಪ್ರಶ್ನಿಸುವುದೂ ಉಚಿತವಲ್ಲ. ಹೇಗೆಂದರೆ ಸುರನರಾದಿ ಐದು ಬಗೆಯ ಜೀವರೂ ಚತುರ್ಮುಖನಿಗಿಂತ ಕೆಳಗಿನವರು. ಈ ಐದು ಬಗೆಯ ಜೀವರಿಗೆ ಉತ್ತಮನಾದ ಬ್ರಹ್ಮನು ನನಗೆ ನಮಸ್ಕರಿಸಿದುದರಿಂದ ನಾನು ಅವನಿಗೆ ಸ್ವಾಮಿಯೆಂದು ನಿಶ್ಚಯವಾಗುವುದರಿಂದ ಉಕ್ತ ಐದು ಬಗೆಯ ಜೀವರಲ್ಲಿ 'ನೀನು ಯಾರು' ಎಂಬ ಪ್ರಶ್ನೆಯು ನಿರರ್ಥಕವು. ಮತ್ತು ಅದಕ್ಕೆ ಉಪಯೋಗಿಸಿದ ವಾಗಿಂದ್ರಿಯವೂ ನಿರರ್ಥಕ.

ಏಕೆಂದರೆ ನಾನು ವಾಕ್, ಮನಸ್ಸು ಮುಂತಾದ ಇಂದ್ರಿಯಗಳಿಗೆ ನನ್ನ ಪ್ರಸಾದವಿಲ್ಲದೆ ಗೋಚರನಲ್ಲವಾದುದರಿಂದ ಮಾತಿಗೆ ನಿಲುಕದ ನನ್ನನ್ನು 'ನೀನು ಯಾರು ?' ಎಂಬ ಮಾತಿನಿಂದ ಪ್ರಶ್ನಿಸುವುದು ನಿರರ್ಥಕ. ಹಾಗಾದರೆ ಶ್ರವಣಾದಿ ಗಳೂ ವ್ಯರ್ಥವೆಂದಾದೀತು ಎನ್ನುವಿರಾ ? ಹಾಗಿಲ್ಲ. ಶ್ರವಣಾದಿಗಳು ಸಾರ್ಥಕಗಳೇ ಆದುದರಿಂದ ನಮ್ಮ ಪ್ರಶ್ನೆಯುವ್ಯರ್ಥವಲ್ಲ ಎನ್ನುವಿರಾ ? ಶ್ರವಣಾದಿ ಪುರುಷ ಪ್ರಯತ್ನದಿಂದ ತಿಳಿಯಲ್ಪಡುವ ವಸ್ತುವು ನಾನಲ್ಲ. ಅದು ನನಗಿಂತ ಭಿನ್ನವಾದುದು.

ನನ್ನ ಇಚ್ಛೆಯಂತೆ ತಿಳಿಯಲ್ಪಡುವವನಾನಾದ್ದರಿಂದ ಶ್ರವಣಾದಿಗಳಿಂದ ನಿನ್ನನ್ನು ತಿಳಿಯಬಹುದಲ್ಲವೆ ? ಎಂಬ ಪ್ರಶ್ನೆಯೂ ಸರಿಯಲ್ಲ.

ನಿನ್ನ ಪ್ರಸಾದವಾದರೆ ನಾವು ತಿಳಿಯಬಹುದಷ್ಟೆ ? ಆದ್ದರಿಂದ ಪ್ರಶ್ನಿಸಿದೆವು ಎನ್ನುವಿರಾ ? ನನ್ನ ಅನುಗ್ರಹದಿಂದ ಉಂಟಾದ ವಿಚಾರದಿಂದಲೂ, ನನ್ನ ಪ್ರೇರಣೆ ಯಿಂದಲೂ ಜಗತ್ತು ಬ್ರಹ್ಮನಿಂದ ಭಿನ್ನವೆಂದೂ, ಭಗವಂತನ ಸ್ವರೂಪವು ಉತ್ತಮ ವೆಂದೂ ನೀವು ತಿಳಿದೇ ಇರುವಿರಿ. ಆದುದರಿಂದ ಜಗತ್ತಿನ ಕೋಟಿಯಲ್ಲಿ ನನ್ನನ್ನು ಸೇರಿಸಿ "ಯಾರು ನೀನು" ಎಂದು ಕೇಳಲೇ ಕೂಡದು. ಹಾಗಾದರೆ ಏನನ್ನು ಕೇಳ ಬೇಕು ? ಎಂದರೆ ನಿಮ್ಮ ತಂದೆಯನ್ನು ಕುರಿತು ನೀವು ಮಾಡಿದ ಪ್ರಶ್ನೆಗೆ ಉತ್ತರ ವನ್ನು ಕೊಡಲು ನಾನು ಬಂದಿರುವೆನಾಗಿ ಆ ಪ್ರಶ್ನೆಯನ್ನೇ ಕೇಳಿ. ಉತ್ತರಿಸುವೆನು.

ಸನಕಾದಿಗಳಿರಾ ! ಕೇಳಿ :- ನಿಮ್ಮ ಮನಸ್ಸು ವಿಷಯಗಳಲ್ಲಿಯೂ, ವಿಷಯಗಳು ಮನಸ್ಸಿನಲ್ಲಿಯೂ ಪ್ರವೇಶಿಸುತ್ತವೆ ಈ ಎರಡಕ್ಕೂ ನಾನೇ ಪ್ರೇರಕನು. ನನ್ನನ್ನೇ ಧ್ಯಾನಿಸಿದರೆ ವಿಷಯಾಸಕ್ತಿಯು ಹೋಗುವುದು. ಹರಿಸ್ಮರಣೆಗೆ ಪ್ರತಿಬಂಧಕಗಳಾದ ವಿಷಯಗಳು ಮತ್ತು ಮನಸ್ಸು ಇವೆರಡು ನನ್ನ ಅಧೀನಗಳು ಮತ್ತು ನನ್ನಿಂದ ಪ್ರೇರಿತಗಳು ಎಂದು ಚಿಂತಿಸುವುದೇ ಅವುಗಳ ತ್ಯಾಗ ವೆನಿಸುವುದು.

**ಅವ :-** ಜೀವನಿಗೆ ವಿಷಯ ಸಂಗವು ಸ್ವಾಭಾವಿಕವಾದರೆ ಪುರುಷಾಯುಷ್ಯದ ಅನಂತಕಾಲ ಯತ್ನಮಾಡಿದರೂ ಸಂಗತ್ಯಾಗ ಶಕ್ಯವಲ್ಲವೆಂದರೆ ಹೇಳುತ್ತಾನೆ :-

ಸುಪ್ತ್ಯವಸ್ಥೆಯು ತಮೋಗುಣದ ಕಾರ್ಯ. ಸ್ವಪ್ನಾವಸ್ಥೆ ರಜೋಗುಣದ ಕಾರ್ಯ. ಜಾಗ್ರದವಸ್ಥೆ ಸತ್ವಗುಣದ ಕಾರ್ಯ. ಜೀವನಾದರೋ ಸ್ವಾಭಾವಿಕವಾಗಿ ತ್ರಿಗುಣಗಳಿಂದ ಆಗುವ ಮೂರು ಅವಸ್ಥೆಗಳಿಗೆ ಬದ್ಧನಲ್ಲ. ಹಾಗಾದರೆ ತಾವಾಗಿಯೇ ತೊಲಗುವುವು. ಆದಕ್ಕಾಗಿ ಯತ್ನ ಮಾಡಬೇಕಾಗಿಲ್ಲವೆಂದರೆ ಕೇಳಿ :- ಜೀವನಿಗೆ ಅವಸ್ಥಾತ್ರಯವು ಎಂಬ ಸಂಸಾರಬಂಧವು ಸತ್ವಾದಿಗುಣತ್ರಯಪ್ರವೃತ್ತಿಯಿಂದಲೇ ಉಂಟಾಗು ವುದು. ಸ್ವತಃ ಅಲ್ಲ. ಆದುದರಿಂದ ಈ ಸಂಸಾರ ಬಂಧವು ಅನಿತ್ಯ ಮತ್ತು ಅಪಾರ ಎಂದು ತಿಳಿದು ತುರಿಯನಾದ ನನ್ನನ್ನು ಆಶ್ರಯಿಸಿ, ನನ್ನ ಉಪಾಸನೆಯಿಂದ ಈ ಸಂಸಾರಚಿಂತೆಯನ್ನು ಬಿಡಬೇಕು. ಬಂಧತ್ಯಾಗವೆಂದರೆ ವಿಷಯಗಳೆಲ್ಲವೂ ವಿಷ್ಣುವಿನ ಅಧೀನಗಳು ಎಂದು ತಿಳಿದು ಅವುಗಳ ಚಿಂತೆಯನ್ನು ಬಿಟ್ಟು ಶ್ರೀವಿಷ್ಣುವಿ ನಲ್ಲಿಯೇ ಮನಸ್ಸು ಆಸಕ್ತವಾಗುವಿಕೆಯು. ಅಹಂಕಾರಕೃತವಾದ ಬಂಧದ ತ್ಯಾಗಕ್ಕೆ ಜ್ಞಾನಭಕ್ತಿ ವೈರಾಗ್ಯ ಪೂರ್ವಕ ಶ್ರೀಹರಿಯನ್ನು ಆಶ್ರಯಿಸಬೇಕು.

ಈ ಸಂಸಾರವು ಜೀವನಿಗೆ ಎಲ್ಲಿಯವರೆಗೆ ಇರುವುದು ? ಎಂದರೆ ಜೀವನು ದೇವರು ಒಂದೇ. ಹರಿಯ ರೂಪಗಳು ಭಿನ್ನಗಳು' ಎಂಬ ಮಿಥ್ಯಾಜ್ಞಾನವು ಸ್ವಾತಂತ್ರ್ಯ-ಪಾರತಂತ್ರ್ಯ ಮೊದಲಾದ ಯುಕ್ತಿಗಳಿಂದ ನಿವೃತ್ತಿ ಆಗದೇ ಇರುವವರೆಗೆ ಭಗವಂತನ ವಿಷಯದ ಅಜ್ಞಾನದಿಂದ ಬರುವ ಸಂಸಾರಬಂಧನವು ಇರುವುದು ಆದ್ದರಿಂದ ಉಕ್ತವಾದ ಅನ್ಯಥಾ ಜ್ಞಾನವನ್ನು ಕಳೆದು ಕೊಳ್ಳಬೇಕು.

**ಪ್ರಶ್ನೆ** :– 'ತತ್ತ್ವಮಸಿ, ಅಹಂಬ್ರಹ್ಮಾಸ್ಮಿ' ಮುಂತಾದ ಶ್ರುತಿಗಳೂ, ಬ್ರಹ್ಮಜೀವರಿಗೆ ಅಭೇದವಿರುವುದರಿಂದ ಭೇದವು ಮಿಥ್ಯೆಯು–ಇವೇ ಮುಂತಾದ ಯುಕ್ತಿಗಳೂ, ಐಕ್ಯಜ್ಞಾನವೇ ಯಥಾರ್ಥವು ಎಂದು ಸಾಧಿಸುವುದಿಲ್ಲವೆ ?

**ಉತ್ತರ** :– ಪೂರ್ಣನಾದ ಶ್ರೀಹರಿಯಿಂದ ಭಿನ್ನರಾದ ಬ್ರಹ್ಮಾದಿ ಪದಾರ್ಥ ಗಳು ಅಸತ್ ಅಂದರೆ ಅಶಕ್ತಗಳು. ಶ್ರೀಹರಿಯು ಸತ್ ಅಂದರೆ ಸರ್ವಶಕ್ತಿಪೂರ್ಣ. ಹೀಗೆ ಜೀವೇಶರಿಗೆ ವಿರುದ್ಧಧರ್ಮಗಳು ಸರ್ವದಾ ಇರುವುದರಿಂದ ಯಾವ ಯುಕ್ತಿಯೂ, ಯಾವ ಶ್ರುತಿಯೂ ಅಭೇದವನ್ನು ಸಾಧಿಸಲಾರವು ಪರಮಾತ್ಮನ ರೂಪಗಳಿಗೆ ಭೇದವಿಲ್ಲ. ಹೇಗೆಂದರೆ ,– ಜೀವನ ಬಲಗಣ್ಣಿನಲ್ಲಿರತಕ್ಕ ವಿಶ್ವನಾಮಕ ಪರಮಾತ್ಮನು ಜಾಗ್ರದವಸ್ಥೆಯಲ್ಲಿ ಅನಿತ್ಯಗಳಾದ, ಬಹು ಬಗೆಯಾದ ಶಬ್ದ, ರೂಪಾದಿಗಳನ್ನು ಅಸ್ವತಂತ್ರನಾದ ಜೀವನಿಗೆ ತೋರಿಸುತ್ತಿರುವನು. ಸ್ವಪ್ನದಲ್ಲಿ ಕಂಠ ದಲ್ಲಿರುವ ತೈಜಸನು ಮನಸ್ಸಿನಲ್ಲಿ ಸಂಸ್ಕಾರ ರೂಪದಿಂದಿರತಕ್ಕ ಜಾಗ್ರತ್ಪದಾರ್ಥ ಸದೃಶಪದಾರ್ಥಗಳನ್ನು ಜೀವನಿಗೆ ತೋರಿಸುತ್ತಾನೆ. ಸುಷುಪ್ತಿಯಲ್ಲಿ ಹೃದಯದಲ್ಲಿ ರತಕ್ಕ ಪ್ರಾಜ್ಞರೂಪೀ ಹರಿಯು ವಿಷಯಗಳ ಕಡೆಗೆ ಇಂದ್ರಿಯಗಳು ಹೋಗದಂತೆ ತಡೆದು, ತಾನು ಸರ್ವವನ್ನೂ ನೋಡಿ ಜೀವನಿಗೆ ಸ್ವರೂಪಾನಂದವನ್ನು ಉಣ್ಣಿಸು ತ್ತಾನೆ. ಈ ವಿಶ್ವಾದಿ ತ್ರಿರೂಪಿಯಾದ ಹರಿಯು ಭೇದವಿಲ್ಲದವನೆಂದು ಶ್ರುತ್ಯಾದಿ ಪ್ರಮಾಣ ಸಿದ್ಧನು. ಹೀಗೆ ವಿಚಾರ ಮಾಡಿ ಜೀವೇಶ್ವರರು ಭಿನ್ನರೆಂದೂ ನಿಶ್ಚಯಿಸಿ ಭಗವಂತನ ಜ್ಞಾನದಿಂದ ಸಂಶಯವನ್ನು ಕಳೆದುಕೊಂಡು ನನ್ನನ್ನು ಸೇವಿಸಿರಿ. ಅದ ರಿಂದ ಮುಕ್ತಿಯಾಗುವುದು ಅಜ್ಞಾನಿಗಳಿಗೆ ತ್ರಿಗುಣಗಳೂ ಅವುಗಳ ಕಾರ್ಯಗಳಾದ ಪಾಪಾದಿಗಳಿಂದ ಭಗವಂತನ ರೂಪಗಳು, ಸ್ಥಾನ ಭೇದಗಳಿಂದ ಭಿನ್ನಗಳು ಎಂಬ ಭ್ರಮೆಯು ಬರುವುದು. ಗುರೂಪದೇಶ ಮುಂತಾದುವುಗಳಿಂದ ಆ ಭ್ರಮೆಯನ್ನು ಕಳೆದುಕೊಳ್ಳಲು ಶಕ್ಯವಾಗುವುದು. ಅವತಾರಾದಿ ಭಗವಂತನ ರೂಪಗಳಿಗಿರುವ ಅಭೇದ ಜ್ಞಾನವು ಮೋಕ್ಷವನ್ನೂ, ಮಿಶ್ರಜ್ಞಾನವು ಸಂಸಾರವನ್ನೂ, ಭೇದಜ್ಞಾನವು ಅಂಧಂತಮಸ್ಸನ್ನೂ ಹೊಂದುವಂತೆ ಮಾಡುತ್ತದೆ ಎಂದು ಜ್ಞಾನಿಗೆ ಯಾವುದರ ಫಲವು ಯಾವುದು ಎಂಬ ಸ್ಮೃತಿಯಿರುವ ಪ್ರಯುಕ್ತ ಮೂಢರಲ್ಲಿರುವ ಭ್ರಮೆಯು ಜ್ಞಾನಿಗಿಲ್ಲ. ಆದುದರಿಂದ ಪಾಪದ ಫಲವಾದ ಮಿಥ್ಯಾಜ್ಞಾನವನ್ನು ವಿನಾಶಗೊಳಿಸಿ, ವಿಷಯಾಭಿಲಾಷೆಯನ್ನು ಬಿಟ್ಟು, ನಿಷಿದ್ಧಾಚರಣೆರಹಿತನಾಗಿ, ಸ್ವರೂಪಭೂತ ಸುಖ

ವನ್ನು ಅನುಭವಿಸುತ್ತ ಸುಮ್ಮನಿರಬೇಕು ಮಿಥ್ಯಾಜ್ಞಾನಕ್ಕೆ ಕಾರಣವಾದ ತ್ರಿಗುಣಾತ್ಮಕ ದೇಹದಲ್ಲಿ ಜ್ಞಾನಿಯು ಇದ್ದರೂ, ಶ್ರೀಹರಿಯನ್ನು ಸರ್ವದಾ ಧ್ಯಾನಿಸುವವನು ಜೀವಸ್ವರೂಪವನ್ನು ಆರಂಭಿಸಿ ಪರಮಾತ್ಮ ಪರ್ಯಂತ ತತ್ತ್ವಗಳನ್ನು ತಾರತಮ್ಯದಿಂದಲೇ ಅಪರೋಕ್ಷೀಕರಿಸಿರುವುದರಿಂದ, ದೇಹಾಭಿಮಾನವಿಲ್ಲದ ಕಾರಣ ಮದ್ಯಪಾನದಿಂದ ಮತ್ತನಾದವನು ವಸ್ತ್ರವು ಮೇಲೆ ಬಟ್ಟೆ ಇದ್ದರೂ, ಹೋದರೂ ಹೇಗೆ ತಿಳಿಯುವುದಿಲ್ಲವೋ ಹಾಗೆ ತನ್ನ ದೇಹ ಬಂದರೂ, ಹೋದರೂ ದುಃಖಿಸುವುದಿಲ್ಲ. ಜ್ಞಾನಿಯು ತನಗೆ ಉದರಪೋಷಣೆಯಲ್ಲಿ ಉದಾಸೀನನಾಗಿರುವನು. ಆದರೂ ಅವನ ದೇಹಕ್ಕೆ ಧಕ್ಕೆ ಇರುವುದಿಲ್ಲ. ಏಕೆಂದರೆ ತನ್ನ ಅದೃಷ್ಟಪ್ರೇರಕ ಶ್ರೀಲಕ್ಷ್ಮೀನಾರಾಯಣರ ಅಧೀನವಾದ ದೇಹವು ತನ್ನನ್ನು ಹುಟ್ಟಿಸತಕ್ಕ ಅದೃಷ್ಟ ರೂಪ ಕರ್ಮವು ಇರುವವರೆಗೂ ಜೀವಿಸಿಕೊಂಡಿರುತ್ತದೆ. ಆದುದರಿಂದ ಅಸಂಪ್ರಜ್ಞಾಧಿಸ್ಥ ಆ ದೇಹದಲ್ಲಿ ಆದರವನ್ನು ಮಾಡುವುದಿಲ್ಲ

ಸನಕಾದಿಗಳಿರಾ ! ನಾನು ನಿಮಗೆ ಸಾಂಖ್ಯ ಅಂದರೆ ಯಥಾರ್ಥಜ್ಞಾನ ಸಾಧನವನ್ನೂ, ಕರ್ಮಯೋಗದ ರಹಸ್ಯಪ್ರಮೇಯವನ್ನೂ ಹೇಳಿರುವೆನು. ಇದಕ್ಕಾಗಿ ವಿಷ್ಣುವಾದ ನಾನು ಬಂದೆನೆಂದು ತಿಳಿಯಿರಿ. ನಾನು ಯೋಗಾದಿಗಳಿಗೆ ಮುಖ್ಯಾಶ್ರಯನು. ನಿರ್ಗುಣನು, ನಿರಪೇಕ್ಷನು., ಅನಿಮಿತ್ತ ಬಂಧುವು, ಸಮನು, ನಿರ್ಲಿಪ್ತ, ಸರ್ವೋತ್ತಮ. ಈ ನನ್ನನ್ನು ಅಪ್ರಧಾನರಾದ ಬ್ರಹ್ಮಾದಿ ದೇವತೆಗಳು ಭಜಿಸುತ್ತಾರೆ. ಉದ್ಧವಾ ! ಹೀಗೆ ಸನಕಾದಿಗಳಿಗೆ ಉಪದೇಶಿಸಿದೆ. ಅವರು ಕೊಂಡಾಡಿ ನನ್ನನ್ನು ಪೂಜಿಸಿದರು. ಬಳಿಕ ವೈಕುಂಠದಲ್ಲಿ ವಿರಾಜಿಸಿದೆ.

## ಹದಿಮೂರನೆಯ ಅಧ್ಯಾಯವು ಮುಗಿದುದು

ಉದ್ಧವ :– ಕೃಷ್ಣನೇ ! ಋಷಿಗಳು ಶ್ರೇಯಸ್ಸಾಧನೆಗೆ ಅನೇಕ ಧರ್ಮಗಳನ್ನು ಹೇಳಿರುವರು ನೀನಾದರೋ ಭಕ್ತಿ ಯೋಗವು ಒಂದೇ ಸಾಧನವೆಂದು ಹೇಳುತ್ತಿರುವೆ. ಹಾಗಾದರೆ ಮುನಿಗಳ ಮತಕ್ಕೇನು ಗತಿ ?

ಕೃಷ್ಣ :– ವೇದೋಕ್ತವಾದುವೇ ಶ್ರೇಯಸ್ಸಾಧನೆಗಳು ಜ್ಞಾನಿಗಳ ಮತಕ್ಕೂ ನನ್ನ ಮತಕ್ಕೂ ವಿರೋಧವಿಲ್ಲ. ಋಷಿಗಳಿಂದ ಉಕ್ತಗಳಾದ ಸಾಧನೆಗಳೆಲ್ಲ ಭಕ್ತಿಯ ಮೂಲಕ ಮೋಕ್ಷಸಾಧನೆಗಳಾಗುವುವು. ಇವೆಲ್ಲವನ್ನೂ ತಿಳಿಸುವ ವೇದಗಳ ಉಪದೇಶವು ಹೇಗೆ ಬಂದಿತೆಂಬುದನ್ನು ತಿಳಿಸುವೆನು. ಕೇಳು. ಪ್ರಳಯಕಾಲದಲ್ಲಿ ಜೀವರಿಗೆ ಯಾವುದನ್ನೂ ಬೋಧಿಸದೆ ನನ್ನನ್ನು ಮಾತ್ರ ಹೊಗಳುತ್ತಿದ್ದುವು. ಆದಿಯಲ್ಲಿ ನಾನು ಬ್ರಹ್ಮದೇವನಿಗೆ ಧರ್ಮಬೋಧಕವೇದಗಳನ್ನು ಉಪದೇಶಿಸಿದೆ. ಅವನು ರುದ್ರ, ಇಂದ್ರ, ಸನತ್ಕುಮಾರ, ಸ್ವಾಯಂಭುವ ಮನು ಇವರಿಗೆ ಉಪದೇಶಿಸಿದನು.

ಭೃಗು ಮೊದಲಾದವರಿಂದ ದೇವ ದೈತ್ಯಾದಿಗಳು ವೇದೋಪದೇಶವನ್ನು ಹೊಂದಿದರು. ಅವರು ತ್ರಿವಿಧಜೀವರು. ಅವರವರ ಸ್ವಭಾವವನ್ನು ಅನುಸರಿಸಿ ವೇದವನ್ನು ತಿಳಿದರು. ಅವರಲ್ಲಿ ಸಾತ್ವಿಕರಾದ ದೇವತೆಗಳು ತಿಳಿದ ವೇದಾರ್ಥವೇ ಪ್ರಮಾಣ. ಪಾಷಂಡಿಗಳ ಅಭಿಪ್ರಾಯವನ್ನು ತೆಗೆದುಕೊಳ್ಳಬಾರದು. ಧರ್ಮ, ಯಶಸ್ಸು, ಕಾಮ ಸತ್ಯ, ಶಮ, ದಮ, ಅರ್ಥ, ಅಭಿಮಾನ ತ್ಯಾಗ, ಯಜ್ಞ, ತಪಸ್ಸು, ವ್ರತ, ದಾನ, ನಿಯಮ ಮತ್ತು ಯಮ ಇವುಗಳನ್ನು ಒಬ್ಬೊಬ್ಬ ಭ್ರಾಂತನೂ ಒಂದೊಂದನ್ನು ಶ್ರೇಯಸ್ಸಾಧನವೆಂದು ಹೇಳುತ್ತಾನೆ, ಅದರಿಂದ ದೊರೆವ ಸ್ವರ್ಗಾದಿ ಫಲಗಳು ದುಃಖಶಿರಸ್ಕಗಳು. ಭಗವದ್ಭಕ್ತಿರಹಿತಗಳಾದ ಧರ್ಮಗಳೆಲ್ಲವೂ ಶ್ರೇಯಸ್ಸಾಧನಗಳೆಂದು ತಿಳಿಯುವವರಿಗೆ ಕೊನೆಯಲ್ಲಿ ತಮಸ್ಸೇ ದೊರೆಯುವುದು. ನನ್ನಲ್ಲೇ ಮನಸ್ಸಿಟ್ಟು, ವಿಷಯಾಭಿಲಾಷೆಯನ್ನು ಬಿಟ್ಟಿರುವ ನನ್ನ ಭಕ್ತರಿಗೆ ಆಗುವ ಮೋಕ್ಷ ಸುಖವು ವಿಷಯಲಂಪಟನಾದ ದುರ್ಜೀವಿಗೆ ಎಂದಿಗೂ ಆಗಲಾರದು. ಏಕಾಂತ ಭಕ್ತನು ಮೋಕ್ಷವನ್ನೂ ಬಯಸದೆ ನನ್ನನ್ನೇ ಇಚ್ಛಿಸುತ್ತಾನೆ. ಉದ್ಧವಾ ! ರಮಾ ಬ್ರಹ್ಮಾದಿಗಳಲ್ಲಿ ನನಗಿರುವ ಪ್ರೇಮವು ಯಾರಲ್ಲಿಯೂ ಇಲ್ಲವಾದರೂ, ನಿನ್ನಲ್ಲಿ ತಾತ್ಕಾಲಿಕ ವಿಶೇಷ ಪ್ರೇಮವಿದೆ.

ಉತ್ಸವದಲ್ಲಿ ಹೊರಟಾಗ ಭಕ್ತರನ್ನು ಮುಂದಿಟ್ಟು ಅವರ ಹಿಂದೆ ಹೋಗುತ್ತೇನೆ. ನನ್ನಪಾದ ಧೂಳಿ ಅವರ ತಲೆಯ ಮೇಲೆ ಬೀಳುವಂತೆ ಗಾಳಿಯನ್ನೆಬ್ಬಿಸುವೆನು. ಈ ಭಾಗ್ಯವನ್ನು ಪಡೆದವರೂ, ನಿಷ್ಕಿಂಚನರೂ, ಚಿತ್ತವನ್ನು ನನ್ನಲ್ಲಿಯೇ ಇಟ್ಟವರೂ, ಸಕಲ ಸಜ್ಜನರಲ್ಲಿ ವಾತ್ಸಲ್ಯ ನಿರತರೂ, ವಿಷಯವನ್ನು ವಿಷದಂತೆ ನಿರಾಕರಿಸಿರುವವರೂ ಆದ ಬ್ರಹ್ಮಾದಿ ಜ್ಞಾನಿಗಳು ನನ್ನಿಂದಲೇ ನಿರ್ದುಃಖಸ್ವರೂಪಾನಂದವು ದೊರೆಯುವುದೆಂದು ಬಲ್ಲರು. ಭಗವದ್ಭಕ್ತನು ಅಕಸ್ಮಾತ್ ವಿಷಯವನ್ನು ಸೇವಿಸಿ ಅದರಿಂದ ದೋಷ ಬಂದರೆ ಅದನ್ನು ಭಗವದ್ಭಕ್ತಿಯು ಪರಿಹರಿಸಿ ಬಿಡುತ್ತೆ. ಉದ್ಧವಾ ! ನಾನು ಕೇವಲ ಭಕ್ತಿಮಾತ್ರಕ್ಕೇ ವಶನಾಗತಕ್ಕವನು. ಕರ್ಮ, ಧರ್ಮ, ಅಧ್ಯಯನ. ತಪಸ್ಸು ಮುಂತಾದುವು ಭಕ್ತಿಯಿಲ್ಲದವನನ್ನು ಶುದ್ಧಿಗೊಳಿಸಲಾರವು. ರೋಮಾಂಚ, ಆನಂದಬಾಷ್ಪ, ಮುಖಪ್ರಸನ್ನತೆ ಇವು ಭಕ್ತಿಯ ಬಾಹ್ಯ ಚಿಹ್ನೆಗಳು. ಕೊರಳಸೆರೆ ಉಬ್ಬಿ, ಮನಸ್ಸು ಕರಗಿ ಒಮ್ಮೆ ಅಳುವುದು, ಆಗಾಗ ನಗುವುದು, ನಾಚಿಕೆಬಿಟ್ಟು ಕುಣಿಯುವುದು, ಗಟ್ಟಿಯಾಗಿ ಹಾಡುವುದು ಇಂತಹ ವ್ಯಾಪಾರವನ್ನು ಮಾಡತಕ್ಕ ಸಮೀಚೀನ ಭಕ್ತನು ಸರ್ವ ಜಗತ್ತನ್ನೂ ಪಾವನ ಮಾಡುವನು. ಮನಸ್ಸು ಕರಗುವುದು, ಸ್ಥೈರ್ಯ, ಮುಖ ಪ್ರಸಾದ ಇವು ಮೂರು ಅಧಿಕವಾಗಿ ಭಕ್ತಿಯಿದೆ ಎಂಬುದಕ್ಕೆ ಚಿಹ್ನೆಗಳು. ಅವುಗಳಲ್ಲಿಯೂ ಸ್ಥೈರ್ಯವು ವಿಶೇಷವಾಗಿ ಭಕ್ತಿಯಿದೆ ಎಂಬುದನ್ನು ತಿಳಿಸುವ ಚಿಹ್ನೆಯು.

ಸುವರ್ಣವನ್ನು ಪುಟ ಹಾಕಿದರೆ, ದೋಷವು ಹೋಗಿ ಅಪರಂಜಿ ಚಿನ್ನದ ಸ್ವರೂಪವನ್ನು ಹೊಂದುವಂತೆ ಆತ್ಮನು ಭಕ್ತಿಯೋಗದಿಂದ ಕರ್ಮವಾಸನೆಯನ್ನು ಬಿಟ್ಟು ಸ್ವರೂಪವನ್ನು ಹೊಂದುವನು.

ಸದಾ ವಿಷಯ ಧ್ಯಾನದಿಂದ ಮನಸ್ಸು ವಿಷಯಾಸಕ್ತವಾಗುವಂತೆ ಸದಾ ನನ್ನನ್ನೇ ಸ್ಮರಿಸುವುದರಿಂದ ಮನಸ್ಸು ನನ್ನಲ್ಲಿಯೇ ಆಸಕ್ತವಾಗುತ್ತದೆ. ಸ್ತ್ರೀಸಂಗವೆಂದರೆ ಮಿಥ್ಯಾಜ್ಞಾನಿಗಳ ಸಂಗ, ಅವರ ಸಂಗಿಗಳ ಸಂಗಮಾಡುವುದರಿಂದ ಕ್ಲೇಶ ಮತ್ತು ಅಂಧಂತಮಸ್ಸು ಹೇಗೆ ಆಗುವುದೋ ಹಾಗೆ ಬ್ರಹ್ಮಹತ್ಯಾದಿ ಪಾಪಗಳ ಸಂಬಂಧದಿಂದ ತಮಸ್ಸಾಗುವುದಿಲ್ಲ.

ಉದ್ಧವ :– ಧ್ಯಾನಪ್ರಕಾರವನ್ನು ತಿಳಿಸು.

ಶ್ರೀಕೃಷ್ಣ :– ಎತ್ತರ. ತಗ್ಗು ಇಲ್ಲದ ಸಮವಾದ ಆಸನದಲ್ಲಿ ಕುಳಿತು, ಮೂಗಿನ ತುದಿಯನ್ನು ನೋಡುತ್ತಾ, ರೇಚಕ= ಬಲಮೂಗಿನ ಹೊಳ್ಳೆಯಿಂದ ಗಾಳಿಯನ್ನು ಬಿಟ್ಟು, ಪೂರಕ= ಎಡಹೊಳ್ಳೆಯಿಂದ ಶುದ್ಧವಾದ ಗಾಳಿಯನ್ನು ಒಳಗೆ ಸೇದಿಕೊಂಡು, ಸುಷುಮ್ನಾ ನಾಡಿಯಲ್ಲಿ, ಕುಂಭಕ= ವಾಯುನಿರೋಧವನ್ನು ಮಾಡಬೇಕು. ಇದೇ ಪ್ರಾಣಾಯಾಮ. ಆವಶ್ಯಕವಿದ್ದಷ್ಟು ಸ್ಥಿತಿಗೆ ಬಂದಾಗ ನಾಡಿಗಳು ಶುದ್ಧವಾಗುತ್ತವೆ. ವಾಯುದ್ವಾರಾ ಓಂಕಾರವನ್ನು ಪ್ರಾಣಬಲದಿಂದ ಗಟ್ಟಿಯಾಗಿ ಉಚ್ಚರಿಸಬೇಕು. ಬಳಿಕ ಮೆಲ್ಲಗೆ ಉಚ್ಚರಿಸಿ, ತಿರುಗಿ ಗಟ್ಟಿಯಾಗಿ ಉಚ್ಚರಿಸಬೇಕು. ವಾಯುಜಯಕ್ಕಾಗಿ ಶ್ರೀಹರಿವಾಯುಗಳನ್ನು ಪ್ರಾರ್ಥಿಸಿ, ಅನುಮತಿ ಪಡೆದು ಹಗಲಿನ ಮೂರು ಕಾಲಗಳಲ್ಲಿಯೂ ಹತ್ತು ಹತ್ತು ಬಾರಿ ಪ್ರಾಣಾಯಾಮಾಭ್ಯಾಸವನ್ನು ಮಾಡುತ್ತ ಬಂದರೆ ತಿಂಗಳೊಳಗೆ ಪ್ರಾಣದೇವರು ವಶರಾಗುವರು. ಅಧಿಕಾರಿಯು ಶ್ವಾಸಜಯವನ್ನು ಪಡೆಯುವನು. ದೇಹದಲ್ಲಿ ಎಲ್ಲಿರುವ ನಿನ್ನನ್ನು ಧ್ಯಾನಿಸಬೇಕೆನ್ನುವಿಯೋ ಕೇಳು. ಅಧೋಮುಖವಾದ ಹೃತ್ಕಮಲವನ್ನು ಊರ್ಧ್ವಮುಖವನ್ನಾಗಿ ಧ್ಯಾನಿಸಿ, ಆ ಹೃತ್ಕರ್ಣಿಕೆಯಲ್ಲಿ ಸೂರ್ಯ–ಚಂದ್ರ ಮಂಡಲಾಂತರ್ಗತ ಅಗ್ನಿಮಂಡಲದಲ್ಲಿ ಶಂಖಚಕ್ರಾದಿಗಳನ್ನು ಹಿಡಿದಿರುವ ನನ್ನ ರೂಪವನ್ನು ಧ್ಯಾನಿಸಬೇಕು. ವಿಷಯಗಳಲ್ಲಿ ಇಂದ್ರಿಯಗಳು ಹೋಗದಂತೆ ತಡೆದು ನನ್ನ ಸಮಗ್ರ ಅವಯವಗಳನ್ನು ಮೊದಲು ಧ್ಯಾನಿಸಬೇಕು. ಅದು ಅಶಕ್ಯವಾದರೆ ಒಂದೊಂದೇ ಅಂಗದಲ್ಲಿ ಚಿತ್ತವಿಡಬೇಕು. ಆಗ ಇತರ ಅಂಗಗಳನ್ನು ಚಿಂತಿಸಬಾರದು. ಹೀಗೆ ಅಭ್ಯಾಸಮಾಡಿ ಒಂದೇ ಕಾಲಕ್ಕೆ ಸಮಗ್ರವಿಶಿಷ್ಟ ರೂಪವನ್ನು ಧ್ಯಾನಿಸುವ ಸಿದ್ಧಿಯನ್ನು ಪಡೆದು, ಆ ರೂಪವು ಮಾಸದಂತೆ ಅದರಲ್ಲಿಯೇ ಮನಸ್ಸು ಲೀನವಾಗಿ ಪರಮಸುಖ ಕಾರಣವಾಗುವುದು. ಧ್ಯಾನ ಪರಿಪಾಕಾನಂತರ ದೇಹದಲ್ಲಿ ಬಿಂಬನಾದ ನನ್ನನ್ನು ಜೀವರಿಂದ ಭಿನ್ನನಾಗಿರುವವನನ್ನಾಗಿ ತಿಳಿಯುವನು.

ದರ್ಶನದ ಫಲವೇನೆಂದರೆ ಭಗವತ್ಸಾಕ್ಷಾತ್ಕಾರವಾದಾಗ ದೇಹ, ಇಂದ್ರಿಯ ಗಳು, ವಿಷಯ ಇವುಗಳಲ್ಲಿದ್ದ ಸ್ವಾತಂತ್ರ್ಯಭ್ರಮರೂಪವಾದ ಪ್ರಾಕೃತಾಂತಃಕರಣವು ನಶಿಸುವುದು.

## ಹದಿನಾಲ್ಕನೆಯ ಅಧ್ಯಾಯ ಮುಗಿದುದು

**ಶ್ರೀಕೃಷ್ಣ :-** ನನ್ನಲ್ಲಿಯೇ ಮನಸ್ಸನ್ನಿಟ್ಟು, ಮುಖ್ಯಪ್ರಾಣನ ಪ್ರಸಾದ ದಿಂದ ಧ್ಯಾನಸಿದ್ಧಿಯನ್ನು ಪಡೆದ ಯೋಗಿಗೆ ಅಣಿಮಾದಿ ಸಿದ್ಧಿಗಳು ಉಂಟಾಗುತ್ತವೆ. ಅಯೋಗ್ಯರಿಗೂ ಈ ಸಿದ್ಧಿಗಳು ಬರುತ್ತವೆಯಾದರೂ ಅವು ತಾಮಸಗಳು.

**ಉದ್ಧವ :-** ಅಪರೋಕ್ಷಜ್ಞಾನಿಯು ಯಾವಯಾವ ಅಧಿಷ್ಠಾನದಲ್ಲಿರುವ ಭಗವಂತನ ರೂಪವನ್ನು ಧ್ಯಾನಿಸುವುದರಿಂದ ಯಾವ ಯಾವ ಸಿದ್ಧಿಬರುವುದು ? ಸಿದ್ಧಿಗಳೆಷ್ಟು ವಿಧ ?

**ಶ್ರೀ ಭಗವಾನ್ :-** ಅಣಿಮಾದಿ ಸಿದ್ಧಿಗಳನ್ನುಂಟು ಮಾಡತಕ್ಕ ಅನುಸ್ಮರಣ ವೆಂಬ ಧಾರಣೆಯ ಸಾಧನದಲ್ಲಿ ಪಾರಂಗತರಾದ ಅಪರೋಕ್ಷಜ್ಞಾನಿಗಳು ಸಿದ್ಧಿಗಳು ಹದಿನೆಂಟವೆಯೆಂದು ಹೇಳುವರು. ಅವುಗಳ ಪೈಕಿ ಎಂಟು ಸಿದ್ಧಿಗಳು ಅನುಸ್ಮರಣೆ ಯಿಲ್ಲದೆ ಸ್ವಾಭಾವಿಕವಾಗಿ ನನ್ನಲ್ಲಿಯೇ ಮುಖ್ಯಗಳಾಗಿರುತ್ತವೆ ತತ್ತ್ವಾಭಿಮಾನಿ ಗಳಲ್ಲಿ ಅವು ಅಮುಖ್ಯಗಳಾಗಿರುತ್ತವೆ. ಅಣಿಮಾದಿಎಂಟುಸಿದ್ಧಿಗಳೇ ಹದಿನೆಂಟ ಸಿದ್ಧಿಗಳಿಗೂ ಕಾರಣಗಳು. ಸ್ವಾಭಾವಿಕವಾಗಿ ಅಣಿಮಾದಿಎಂಟುಸಿದ್ಧಿಗಳಲ್ಲಿಯೆ ಇತರ ಹದಿನೆಂಟು ಸಿದ್ಧಿಗಳು ಅಂತರ್ಭೂತಗಳು.

**ಅಣಿಮಾ, ಮಹಿಮಾ, ಲಘಿಮಾ** ಈ ಮೂರು ಸಿದ್ಧಿಗಳು ಸ್ವರೂಪ ಮತ್ತು ದೇಹವನ್ನು ಅತಿ ಸೂಕ್ಷ್ಮವಾಗಿಯೂ, ಅತಿಮಹತ್ತಾಗಿಯೂ, ಅತಿ ಹಗುರ ವಾಗಿಯೂ ಮಾಡಿಕೊಳ್ಳುವುದಕ್ಕೆ ಸಹಾಯಕಗಳು. **ಪ್ರಾಪ್ತಿ**=ಇತರ ಇಂದ್ರಿಯ ಗಳಿಂದ ವಿಷಯಗಳನ್ನು ಗ್ರಹಿಸುವ ಸಿದ್ಧಿ. **ಪ್ರಕಾಶ್ಯ**=ಭೂವಿವರಗಳಾದ ಅತಳ, ವಿತಳಾದಿ ಲೋಕಗಳಲ್ಲಿನ ಕೇಳಿರುವ ಮತ್ತು ನೋಡಿರುವ ಭೋಗಗಳನ್ನು ತಾನಿದ್ದೆ ಡೆಯೇ ನೋಡುವ ಸಿದ್ಧಿ. ಈಶಿತ್ವ=ಸಕಲ ಕಾರ್ಯಗಳಲ್ಲಿಯೂ ಶಕ್ತಿಯನ್ನು ಪ್ರೇರಿಸುವ ಸಿದ್ಧಿ. ವಶಿತ್ವ=ಗುಣತ್ರಯಗಳ ಸಂಪರ್ಕವಿಲ್ಲದಿರುವುದು ಮತ್ತು ವಿಷಯ ಭೋಗಗಳಲ್ಲಿ ಆಸಕ್ತಿಯಿರದಂತೆ ಮಾಡುವ ಸಿದ್ಧಿ. ಪ್ರಾಕಾಮ್ಯ = ಆಯಾ ವಿಷಯಗಳನ್ನು ಭೋಗಿಸದೇ ಇದ್ದರೂ ಇಚ್ಛಾಮಾತ್ರದಿಂದ ಆ ಭೋಗದ ಸುಖ ವನ್ನುಂಟುಮಾಡುವ ಸಿದ್ಧಿ.

ಹದಿನೆಂಟು ಸಿದ್ಧಿಗಳನ್ನು ಹೇಳುವೆನು ಕೇಳು :– 1. ಅನೂರ್ಮಿತ್ವಂ – ದೇಹದಲ್ಲಿ ಭಯವಿಲ್ಲದಿರುವುದು. 2. ದೂರಶ್ರವಣ 3. ದೂರದರ್ಶನ. 4. ಮನಸ್ಸಿನ ವೇಗ 5. ಇಚ್ಛಾನುಸಾರ ಅಭಿಲಷಿತ ರೂಪಪ್ರಾಪ್ತಿ. 6. ಪರಕಾಯ ಪ್ರವೇಶ. 7. ಸ್ವೇಚ್ಛಾನುಸಾರ ಮರಣ. 8. ದೇವತೆಗಳಿಂದ ಕೂಡಿ ಕ್ರೀಡಿಸುವುದು. 9. ಸಂಕಲ್ಪಾನುಸಾರ ಸಿದ್ಧಿ. 10. ತನ್ನ ಆಜ್ಞೆಗೆ ತಡೆಯಿಲ್ಲದಿರುವಿಕೆ 11. ಶೀತೋಷ್ಣಾದಿಗಳನ್ನು ಸಹಿಸುವಿಕೆ. 12. ತ್ರಿಕಾಲ ಜ್ಞಾನ. 13. ಪರರ ಚಿತ್ತಾದಿಗಳನ್ನು ತಿಳಿಯುವಿಕೆ. 14. ಅಗ್ನಿಸ್ತಂಭ. 15. ಸೂರ್ಯಸ್ತಂಭ. 16. ಜಲಸ್ತಂಭ. 17. ವಿಷಸ್ತಂಭ. 18 ಅಪರಾಜಯ.

ಅವ :– ಅಣಿಮಾದಿ ಸಿದ್ಧಿಯನ್ನುಂಟುಮಾಡತಕ್ಕ ಧ್ಯಾನ ಪ್ರಕಾರವನ್ನು ಹೇಳುವೆನು ಕೇಳು :–

ಪಾರ್ಥಿವಾದಿ ಪರಮಾಣುಗಳಲ್ಲಿರತಕ್ಕ ಅಣುರೂಪನಾದ ನನ್ನನ್ನು ಧ್ಯಾನಿಸ ತಕ್ಕವನು ಅಣುರೂಪನಾಗುತ್ತಾನೆ. ವ್ಯಾಪ್ತನೂ, ಆಯಾ ವಸ್ತು ಸದೃಶವಾದ ರೂಪದಿಂದಿರತಕ್ಕವನೂ ಆದ ನನ್ನ ರೂಪವನ್ನು ಚಿಂತಿಸುವವನು ಆಯಾ ವಸ್ತು ಸದೃಶವಾದ ಆಕಾರವನ್ನುಳ್ಳವನಾಗುತ್ತಾನೆ. ಪಂಚಭೂತಪರಮಾಣುಗಳಿಗಿಂತಲೂ ಅತಿಶಯವಾಗಿರತಕ್ಕ ನನ್ನನ್ನು ಧ್ಯಾನಿಸತಕ್ಕವನು ಲಘುವಾಗುತ್ತಾನೆ. ವೈಕಾರಿಕಾ ಹಂಕಾರದಲ್ಲಿರತಕ್ಕ ನನ್ನನ್ನು ಧ್ಯಾನಿಸುವವನು ತನ್ನಿಚ್ಛೆ ಒಂದಂತೆ ಇಂದ್ರಿಯಗಳನು ನಿಯಮಿಸಬಲ್ಲವನಾಗಿ ಇತರ ಇಂದ್ರಿಯಗಳಿಂದಲೇ ದರ್ಶನ ಮುಂತಾದ ವ್ಯಾಪಾರ ವನ್ನು ಮಾಡುವನು. ಇದೇ 'ಪ್ರಾಪ್ತಿ' ಎಂಬ ಸಿದ್ಧಿಯು. ಮಹತ್ತತ್ತ್ವಾಭಿಮಾನಿ ಯಾದ ಚತುರ್ಮುಖ ಮತ್ತು ಮುಖ್ಯಪ್ರಾಣದೇವರಲ್ಲಿರತಕ್ಕ ನನ್ನನ್ನು ಧ್ಯಾನಿಸುವ ರುದ್ರಶೇಷಾದಿಗಳು ನನ್ನ ಮತ್ತು ಬ್ರಹ್ಮ, ವಾಯು, ಭಾರತಿ ಇವರ ಅನುಗ್ರಹದಿಂದ ಪ್ರಾಕಾಶ್ಯ ಅಂದರೆ ಸರ್ವವೇದಾದಿಜ್ಞಾನವನ್ನು ಹೊಂದುತ್ತಾರೆ. ಚತುರ್ಮುಖನು ಶ್ರೀವಿಷ್ಣುವಿನ ಅನುಗ್ರಹದಿಂದ ಪ್ರಾಕಾಶ್ಯವನ್ನು ಹೊಂದುವನು. ಪರಮಾಣು ಮೊದಲಾದ ರೂಪವಾಗಿರುವ ಕಾಲವನ್ನೇ ಪ್ರತಿಮೆಯಾಗಿ ಉಳ್ಳವನೂ, ವ್ಯಾಪ್ತನೂ, ಸಕಲಕ್ಕೂ ನಿಯಾಮಕನೂ ಆದ ನನ್ನನ್ನು ಧ್ಯಾನಿಸುವವನೂ ಈಶಿತ್ವ ಅಂದರೆ ಶರೀರ ಮತ್ತು ಜೀವರಿಗೆ ಪ್ರೇರಕವಾದ ಸರ್ವವನ್ನೂ ನಿಯಮಿಸುವ ಶಕ್ತಿವಂತ ನಾಗುವನು. ತುರೀಯನಾದ ನನ್ನನ್ನು ಧ್ಯಾನಿಸುವವನು ವಶಿತ್ವ ಅಂದರೆ ಸರ್ವತ್ರ ವಿಷಯ ಸಂಪರ್ಕರಹಿತನಾಗುವನು. ನನ್ನನ್ನು ತ್ರಿಗುಣರಹಿತನೆಂದೂ, ಸಕಲ ಕಲ್ಯಾಣ ಗುಣಪೂರ್ಣನೆಂದೂ ಧ್ಯಾನಿಸುವವನು ಪ್ರಾಕಾಮ್ಯ ಅಂದರೆ ಸಕಲ ಇಚ್ಛೆಯನ್ನೂ ಪೂರ್ಣ ಮಾಡುವ ಯಥೇಷ್ಟಾನಂದವೆಂಬ ಸಿದ್ಧಿಯನ್ನು ಹೊಂದುವನು.

ಉದ್ಧವಾ ! ಈಗ ಹದಿನೆಂಟು ಸಿದ್ಧಿಗಳ ಸಂಧಾನಗಳನ್ನು ತಿಳಿಸುವೆನು ಕೇಳು.-

1. **ಅನೂರ್ಮಿತ್ವಸಿದ್ಧಿ** – ಸಕಲ ಧರ್ಮಗಳ ಫಲವನ್ನೂ ಕೊಡತಕ್ಕ ಶ್ವೇತದ್ವೀಪಕ್ಕೆ ಪತಿಯಾದ ನನ್ನನ್ನು ಧ್ಯಾನಿಸತಕ್ಕವನು ಷಡೂರ್ಮಿಗಳ ಅಭಾವ ವೆನಿಸಿದ ಶ್ವೇತ ಅಂದರೆ ಅಮರತ್ವಸಿದ್ಧಿಯನ್ನು ಹೊಂದುವನು.

2. **ದೂರಶ್ರವಣತ್ವಸಿದ್ಧಿ** – ಆಕಾಶದಲ್ಲಿರುವ ಪ್ರಾಣದೇವನಲ್ಲಿ ನೆಲೆಸಿರ ತಕ್ಕ ಶ್ರೀಹರಿಯು ಶಬ್ದಕ್ಕೆ ಆಧಾರನೂ, ಪ್ರವರ್ತಕನೂ ಆಗಿರುವನೆಂದು ಶರೀರಾಭಿ ಮಾನವಿಲ್ಲದಿರುವ ಜೀವನು ಧ್ಯಾನಿಸಿದರೆ ಆಕಾಶ ಸಂಬಂಧಿ ಭೂತಗಳ ವಚನಗಳನ್ನು ಕೇಳುವನು.

3. **ದೂರದರ್ಶನ** :– ಸೂರ್ಯಾಧೀನವಾದ ಚಕ್ಷುರಿಂದ್ರಿಯ ಮತ್ತು ತತ್ಪ್ರೇರಕನಾದ ಸೂರ್ಯನಿಗೆ ಮುಖ್ಯ ಪ್ರೇರಕನೆಂದು ಶ್ರೀಹರಿಯನ್ನು ಧ್ಯಾನಿಸುವವನು ಸಾವಿರ ಯೋಜನಗಳೊಳಗಿರುವ ಪದಾರ್ಥಗಳನ್ನು ಕುಳಿತಲ್ಲಿಯೇ ಕಾಣುವನು.

4. **ಮನಸ್ಸಿನ ವೇಗ** .– ಯೋಗಿಯು ಮನೋಜವ ಸಿದ್ಧಿಯನ್ನು ಅಪೇಕ್ಷಿಸಿದಾಗ ಮನಸ್ಸಿನಲ್ಲಿ ಅಂತರ್ಗತನಾದ ಶ್ರೀಹರಿಯನ್ನು ಧ್ಯಾನಿಸಿದರೆ, ಅವನ ಮನಸ್ಸು ಬಯಸಿದ ದೇಶಾದಿಗಳಿಗೆ ದೇಹಸಹಿತವಾಗಿ ಹೋಗುವನು.

5. **ಕಾಮರೂಪಸಿದ್ಧಿ** .– ಗಜಾದಿರೂಪಗಳನ್ನು ಬಯಸಿ ಗಜಾದಿಗಳಲ್ಲಿರ ತಕ್ಕ ಹರಿಯನ್ನು ಧ್ಯಾನಿಸತಕ್ಕವನು ಗಜಾದಿರೂಪಗಳನ್ನು ಹೊಂದುವನು.

6. **ಪರಕಾಯ ಪ್ರವೇಶ** .– ಇತರರ ದೇಹದೊಳಗೆ ಪ್ರವೇಶಿಸುವ ಇಚ್ಛೆಯುಳ್ಳ ಯೋಗಿಯು ತನ್ನಲ್ಲಿ ಅಂತರ್ಗತನಾದ ಪರಮಾತ್ಮನನ್ನು ಇತರರ ದೇಹ ದಲ್ಲಿ ಚಿಂತಿಸಬೇಕು. ಹೀಗೆ ಧ್ಯಾನಿಸಲ್ಪಟ್ಟ ವಾಯ್ವಂತರ್ಗತನಾದ ಶ್ರೀಹರಿಯು ಜೀವ ನನ್ನು ಕರೆದುಕೊಂಡು ಪರರ ದೇಹದಲ್ಲಿ ಪ್ರವೇಶಿಸುವನು.

7. **ಸ್ವೇಚ್ಛಾಮರಣಸಿದ್ಧಿ** :– ನಾಭಿ, ಹೃದಯ, ವಕ್ಷಃಸ್ಥಳ, ಕಂಠ, ನಡುಹುಬ್ಬು ಎಂಬ ಈ ಆರು ಸ್ಥಾನಗಳಲ್ಲಿರತಕ್ಕ ಶ್ರೀಹರಿಯನ್ನು ಧ್ಯಾನಿಸತಕ್ಕವನು ಕ್ಲುಪ್ತವಾದ ಆಯುಷ್ಯವು ಮುಗಿಯದೇ ಇದ್ದರೂ ಮರಣವನ್ನು ಇಚ್ಛಿಸಿದರೆ ದೇಹ ತ್ಯಾಗವನ್ನು ಮಾಡಿಬಿಡುವನು.

8. **ದೇವತೆಗಳ ಸಹಿತ ಕ್ರೀಡೆ** :– ದೇವತೆಗಳ ಉಪವನಗಳಲ್ಲಿ ಕ್ರೀಡಿಸ ಬೇಕೆಂದು ಬಯಸುವ ಯೋಗಿಯು ಹರಿಯು ಸತ್ವಗುಣಾಧಾರನೆಂದು ಧ್ಯಾನಿಸಿದರೆ, ಇಂದ್ರಾದಿ ತತ್ತ್ವಾಭಿಮಾನಿಗಳ ಹೊರತು ಉಳಿದ ದೇವತೆಗಳು, ದೇವತಾಸ್ತ್ರೀಯರು ವಿಮಾನಾದಿಗಳಲ್ಲಿ ಆ ಯೋಗಿಯನ್ನು ಕೂಡಿಸಿಕೊಂಡು, ತಿರುಗಿಸಿ, ಸುಖಪಡಿಸುವರು.

9. **ಸಂಕಲ್ಪಾನುಸಾರ ಸಿದ್ಧಿ** :– ಅನ್ನ, ಪಾನ, ಸುತಾದಿಗಳಲ್ಲಿರುವ ಶ್ರೀಹರಿಯು ಯಾವ ಯಾವ ಗುಣವುಳ್ಳವನೆಂದು ಚಿಂತಿಸುವನೋ ಆಯಾ ಕಾಮಿತ ಗಳನ್ನು ಹೊಂದುವನು.

10. **ಅಪ್ರತಿಹತಾಜ್ಞೆಯ ಸಿದ್ಧಿ** :– ಶ್ರೀಹರಿಯಲ್ಲಿ ಈಶಿತೃತ್ವ, ವಶಿತ್ವಾದಿ ಗುಣಗಳನ್ನು ಭಕ್ತಿಯಿಂದ ಚಿಂತಿಸುವವನು ಮಾಡುವ ಆಜ್ಞೆಯು ಬ್ರಹ್ಮಾಸ್ತ್ರ ಮತ್ತು ಮಹಾತಪಸ್ವಿಗಳ ಶಾಪ ಇವುಗಳ ಹೊರತು ಉಳಿದೆಲ್ಲಕಡೆಯೂ ತಡೆ ಯಿಲ್ಲದೆ ನಡೆಯುವುದು.

11. **ತ್ರಿಕಾಲಜ್ಞಾನ ಸಿದ್ಧಿ** :– ಶ್ರೀಹರಿಯು ಭೂತ ಭವಿಷ್ಯದ್ವರ್ತ ಮಾನಕಾಲದಲ್ಲಿ ಅಂತರ್ಯಾಮಿ ಮತ್ತು ತ್ರಿಕಾಲಗಳಲ್ಲಿಯೂ ಪ್ರೇರಕನೆಂದು ಧ್ಯಾನಿಸು ವವನು ಮೂರು ಕಾಲಗಳಲ್ಲಿಯೂ ನಡೆಯುವ ಸೃಷ್ಟಿ ಸಂಹಾರಗಳ ಜ್ಞಾನವನ್ನು ಹೊಂದುವನು.

12. 12ರಿಂದ 17ರ **ಪೂರ್ತಿ ಇರುವ ಆರು ಸಿದ್ಧಿಗಳು** :– ಸೂರ್ಯ, ಜಲ, ವಿಷಾದಿಗಳಲ್ಲಿರತಕ್ಕ ಶ್ರೀಹರಿಯನ್ನು ಧ್ಯಾನಿಸತಕ್ಕವನು ಅಗ್ನಿ, ಜಲಾದಿಗಳ ಶಕ್ತಿಯನ್ನು ಸ್ತಂಭನ ಮಾಡಬಲ್ಲನು.

13. **ಅಪರಾಜಯಸಿದ್ಧಿ** :– ಶ್ರೀವತ್ಸ, ಚಕ್ರಾದಿ ಆಯುಧಗಳು ಮತ್ತು ಧ್ವಜಾದಿಗಳು ಇವುಗಳಲ್ಲಿರತಕ್ಕವನೂ, ಇವುಗಳಿಂದ ಸಹಿತನಾಗಿರತಕ್ಕವನೂ ಆದ ರಾಮಕೃಷ್ಣಾದಿ ವಿಭೂತಿರೂಪವನ್ನು ಧ್ಯಾನಿಸುವವನು ಪರಾಜಯವಿಲ್ಲದವ ನಾಗುವನು.

ಈ ಸಿದ್ಧಿಗಳನ್ನು ಪಡೆಯಲು ಕಾಮದಿಂದ ಉಪಾಸನೆ ಮಾಡಬೇಕಾದರೂ ಶ್ರೀಹರಿ ವಾಯುಗಳ ಅನುಗ್ರಹವು ಬೇಕೇ ಬೇಕು. ಕಾಮ್ಯ ಫಲವನ್ನು ಹೊಂದುತ್ತಾ ಇದ್ದರೆ ಆ ಯೋಗಿಗೆ ಮೋಕ್ಷವು ವಿಳಂಬವಾಗುತ್ತದೆ. ಮೊದಲಿಂದ ನಿಷ್ಕಾಮನೇ ಆಗಿದ್ದರೆ ಬೇಗ ಮೋಕ್ಷವು ದೊರೆಯುವುದು. ಋಜುಗಳಂತೆಯೂ, ಕರ್ದಮಾದಿ ಗಳಂತೆಯೂ ಅಧಿಕೃತಾಪರೋಕ್ಷಿಗಳಾದವರು ಸಿದ್ಧಿಗಳನ್ನು ಅವಶ್ಯ ಅನುಭವಿಸಲೇ ಬೇಕೆಂಬ ಈಶನಿಯಮವಿರುವುದರಿಂದ ಅಂತಹವರಿಗೆ, ಸಿದ್ಧಿಗಳನ್ನು ಪಯೋಗಿಸು ವುದರಿಂದ ಮೋಕ್ಷಪ್ರತಿಬಂಧಕಗಳಾಗುವುದಿಲ್ಲ. ಅವರೆಲ್ಲರೂ ಅಪರೋಕ್ಷ ಜ್ಞಾನವಾದ ಜನ್ಮದಿಂದಲೂ ಅಣಿಮಾದಿ ಅಷ್ಟಸಿದ್ಧಿಗಳನ್ನುಳ್ಳವರು. ಮನಸ್ಸಿಗೆ ವ್ಯತಿರಿಕ್ತಗಳಾದ ಇಂದ್ರಿಯಗಳನ್ನು ಜಯಿಸಿ, ನನ್ನ ಧ್ಯಾನದಲ್ಲಿಯೇ ಆಸಕ್ತನಾದ ಅಪರೋಕ್ಷ ಜ್ಞಾನಿಗೆ ಸ್ಮರಣೆಮಾತ್ರದಿಂದಲೇ ಸರ್ವಸಿದ್ಧಿಯೂ ದೊರೆಯುವುದು. ಈ ಜ್ಞಾನಿಯು ಜನ್ಮ,

ಔಷಧಿ, ತಪಸ್ಸು, ಮಂತ್ರಗಳಿಂದ ಹೊಂದುವಷ್ಟು ಫಲಗಳನ್ನು ಉಕ್ತಧ್ಯಾನದಿಂದಲೇ ಹೊಂದುತ್ತಾನೆ.

ಸರ್ವಸಿದ್ಧಿಗಳಿಗೂ ನಾನೇ ಸ್ವಾಮಿಯು. ಸರ್ವರ ಒಳಗೂ ಹೊರಗೂ ಇರುವವನು ನಾನೇ !

## ಹದಿನೈದನೆಯ ಅಧ್ಯಾಯ ಮುಗಿದುದು

**ಉದ್ಧವ :–** ಸ್ವಾಮಿಯೆ ! ಪರಮರ್ಷಿಗಳು ಯಾವ ಯಾವ ಪದಾರ್ಥಗಳಲ್ಲಿ ನಿನ್ನ ಉಪಾಸನೆ ಮಾಡಿ ಜ್ಞಾನವನ್ನೂ, ಮೋಕ್ಷವನ್ನೂ ಹೊಂದುವರೋ ಅದನ್ನು ಹೇಳು. ಭೂ, ಸ್ವರ್ಗ, ಪಾತಾಳಾದಿಗಳಲ್ಲಿರತಕ್ಕ ನಿನ್ನ ವಿಭೂತಿ ರೂಪಗಳನ್ನೆಲ್ಲವನ್ನೂ ತಿಳಿಸು. ನಿನಗೆ ನಮಸ್ಕರಿಸುವೆನು.

**ಶ್ರೀಕೃಷ್ಣ :–** ಹಿಂದೆ ಅರ್ಜುನನಿಗೆ ಹೇಳಿದಂತೆ ನಿನಗೂ ವಿಭೂತಿ ರೂಪಗಳನ್ನು ತಿಳಿಸುವೆನು ಕೇಳು :–

ನಾನು ಸಕಲ ಪ್ರಾಣಿಗಳ ಅಂತರ್ಯಾಮಿ, ಸ್ವಾಮಿಯು. ಸೃಷ್ಟ್ಯಾದಿಗಳನ್ನು ಮಾಡತಕ್ಕವನೂ ನಾನೇ. ಜ್ಞಾನಿಗಳಲ್ಲಿರುವ ಜ್ಞಾನವು ಶ್ರೇಷ್ಠವೆನಿಸುವುದಕ್ಕಾಗಿ ಅಲ್ಲಿ ಜ್ಞಾನನಾಮಕ ವಿಭೂತಿರೂಪದಿಂದಿರುವೆನು (ಮುಂದೆ ಹೇಳುವ ವಿಭೂತಿಗಳ ಲಕ್ಷಣಗಳನ್ನು ಹೀಗೆಯೇ ತಿಳಿಯಬೇಕು.) ಕಾಲ, ಕರ್ಮ, ಅದೃಷ್ಟಗಳಲ್ಲಿ ಕಾಲವು ಶ್ರೇಷ್ಠವೆನಿಸಲು ಅಲ್ಲಿ ಕಾಲನಾಮಕ ನನ್ನ ವಿಭೂತಿರೂಪವಿದೆ. ಭಕ್ತ್ಯಾದಿಗಳಲ್ಲಿ ಸೌಮ್ಯ ಅಂದರೆ ಆನಂದವೇ ಶ್ರೇಷ್ಠವೆನಿಸಲು ಅಲ್ಲಿ ಸೌಮ್ಯನಾಮಕ ನನ್ನ ವಿಭೂತಿ ರೂಪವಿದೆ. ಗುಣವಂತರಲ್ಲಿರುವ ಗುಣಗಳಲ್ಲಿ ಯೋಗ್ಯತೆ ಶ್ರೇಷ್ಠವೆನಿಸಲು ತನ್ನಾಮಕ ವಿಭೂತಿ ರೂಪವು ಅಲ್ಲಿರುವುದು. ಗುಣವಂತರಲ್ಲಿ ವಾಯುದೇವರು ಶ್ರೇಷ್ಠರೆನಿಸಲು ತನ್ನಾಮಕ ವಿಭೂತಿ ರೂಪವು ಅವರೊಳಗಿದೆ. ಹೀಗೆಯೇ ಸ್ಥೂಲ ಪದಾರ್ಥಗಳಲ್ಲಿ ಮಹತ್ತತ್ತ್ವವು ಶ್ರೇಷ್ಠ. ಸೂಕ್ಷ್ಮಪದಾರ್ಥಗಳಲ್ಲಿ ಜೀವನು ಶ್ರೇಷ್ಠ. ಜಯಿಸಲು ಅಶಕ್ಯಗಳಲ್ಲಿ ಮನಸ್ಸು ಶ್ರೇಷ್ಠ. ದೇವತೆಗಳಲ್ಲಿ ಚತುರ್ಮುಖನು ಶ್ರೇಷ್ಠನು. ಮಂತ್ರಗಳಲ್ಲಿ ಪ್ರಣವ. ಅಕ್ಷರಗಳಲ್ಲಿ ಅಕಾರ. ವೇದಗಳು ವಾಚಕಗಳು. ಪದಗಳು ವಾಚ್ಯಗಳು. ಅವು ಶ್ರೇಷ್ಠಗಳೆನಿಸಲು ಅದೇ ಹೆಸರಿನ ನನ್ನ ವಿಭೂತಿ ರೂಪಗಳು ಅಲ್ಲಿವೆ. ದೇವತೆಗಳಲ್ಲಿ ಇಂದ್ರ. ವಸುಗಳಲ್ಲಿ ಅಗ್ನಿ. ಆದಿತ್ಯರಲ್ಲಿ ವಿಷ್ಣು. ಸಿದ್ಧೇಶ್ವರರಲ್ಲಿ ಕಪಿಲ. (ಇವು ಸಾಕ್ಷಾದ್ವಿಭೂತಿ ರೂಪಗಳು.) ರುದ್ರರಲ್ಲಿ ನೀಲಲೋಹಿತನಾದ ಶಿವನು. ಆಶ್ರಮಗಳಲ್ಲಿ ಸನ್ಯಾಸ. ವರ್ಣಗಳಲ್ಲಿ ಬ್ರಾಹ್ಮಣ. ಬ್ರಹ್ಮರ್ಷಿಗಳಲ್ಲಿ ಭೃಗುವು. ರಾಜರ್ಷಿಗಳಲ್ಲಿ ಸ್ವಾಯಂಭುಮನುವು. ದೇವರ್ಷಿಗಳಲ್ಲಿ ನಾರದ. ಗೋವುಗಳಲ್ಲಿ ಕಾಮಧೇನು. ಪಕ್ಷಿ

ಗಳಲ್ಲಿ ಗರುಡ. ಪ್ರಜೇಶ್ವರರಲ್ಲಿ ದಕ್ಷ. ಪಿತೃಗಳಲ್ಲಿ ಅರ್ಯಮ. ದೈತ್ಯರಲ್ಲಿ ಪ್ರಹ್ಲಾದ. ನಕ್ಷತ್ರ ಮತ್ತು ಓಷಧಿಗಳಲ್ಲಿ ಚಂದ್ರ. ಯಕ್ಷರಾಕ್ಷಸರಲ್ಲಿ ಕುಬೇರನು. ಗಜೇಂದ್ರಗಳಲ್ಲಿ ಐರಾವತ. ಜಲಚರಗಳಲ್ಲಿ ವರುಣ. ಗ್ರಹಗಳಲ್ಲಿ ಸೂರ್ಯ. ಮನುಷ್ಯರಲ್ಲಿ ರಾಜನು. ಕುದುರೆಗಳಲ್ಲಿ ಉಚ್ಚೈಃಶ್ರವಸ್ಸು. ಲೋಹಗಳಲ್ಲಿ ಬಂಗಾರ. ಶಿಕ್ಷಕರಲ್ಲಿ ಯಮ. ಸರ್ಪ ಗಳಲ್ಲಿ ವಾಸುಕಿ. ನಾಗೇಂದ್ರರಲ್ಲಿ ಶೇಷ ಮೃಗಗಳಲ್ಲಿ ಸಿಂಹ. ನದಿಗಳಲ್ಲಿ ಗಂಗೆ. ಸರೋ ವರಗಳಲ್ಲಿ ಸಮುದ್ರ. ಆಯುಧಗಳಲ್ಲಿ ವಜ್ರಾಯುಧವನ್ನು ಬಿಟ್ಟು ಬಿಲ್ಲು. ಬಿಲ್ಲಾಳು ಗಳಲ್ಲಿ ಶಿವ. ಗಿರಿಗಳಲ್ಲಿ ಮೇರು. ದುರ್ಗಮ ಸ್ಥಾನಗಳಲ್ಲಿ ಹಿಮಾಲಯ. ವೃಕ್ಷಗಳಲ್ಲಿ ಅಶ್ವತ್ಥ. ಓಷಧಿಗಳಲ್ಲಿ ಜವೆಗೋಧಿ. ಪುರೋಹಿತರಲ್ಲಿ ವಸಿಷ್ಠರು. ವೈದಿಕರಲ್ಲಿ ಬೃಹ ಸ್ಪತಿ. ಸೇನಾನಿಗಳಲ್ಲಿ ಸ್ಕಂದ. ಯಜ್ಞಗಳಲ್ಲಿ ವೇದಾಧ್ಯಯನ. ವ್ರತಗಳಲ್ಲಿ ಅಹಿಂಸೆ. ಶುದ್ಧೀಕರಣ ವಸ್ತುಗಳಲ್ಲಿ ವಾಯು, ಸೂರ್ಯ, ಅಗ್ನಿ, ಜಲ, ವೈಷ್ಣವರ ವಾಣಿ. ಯೋಗ ಗಳಲ್ಲಿ ಮನೋನಿಗ್ರಹ. ಜಯಕಾರಣಗಳಲ್ಲಿ ಗುಪ್ತಮಂತ್ರಾಲೋಚನೆ, ಶುಭ ತರ್ಕ ಗಳಲ್ಲಿ ಬ್ರಹ್ಮತರ್ಕಾದಿವಿದ್ಯೆ. ಜ್ಞಾನವೇ ಮೋಕ್ಷಸಾಧನವೆಂದು ಹೇಳುವವರಲ್ಲಿ ಜೀವೇಶ್ವರ ಭೇದವಾದಿ. ಶಚ್ಯಾದಿಗಳನ್ನು ಬಿಟ್ಟು ಉಳಿದ ಸ್ತ್ರೀಯರಲ್ಲಿ ಶತರೂಪಾದೇವಿ ಶ್ರೇಷ್ಠಳು. ಇಂದ್ರಾದಿಗಳನ್ನು ಬಿಟ್ಟು ಉಳಿದ ಪುರುಷರಲ್ಲಿ ಸ್ವಾಯಂಭುವ ಮನುವು ಶ್ರೇಷ್ಠ. ಮುನಿಗಳಲ್ಲಿ ಸಾಕ್ಷಾದ್ವಿಭೂತಿರೂಪಿಯಾದ ಬದರಿ ನಾರಾಯಣನು ಶ್ರೇಷ್ಠನು. ಬ್ರಹ್ಮಚಾರಿಗಳಲ್ಲಿ ಸನತ್ಕುಮಾರ. ಸುಕೃತಗಳಲ್ಲಿ ಫಲಾಪೇಕ್ಷೆಯಿಂದ ಮಾಡುವ ಕರ್ಮತ್ಯಾಗವು ಶ್ರೇಷ್ಠ. ಮೋಕ್ಷಸಾಧನೆಗಳಲ್ಲಿ ಭಗವದ್‌ಜ್ಞಾನವೇ ಶ್ರೇಷ್ಠ. ಗೋಪ್ಯ ಗಳಲ್ಲಿ ವಾಕ್‌ನಿಯಮ ಅಥವಾ ವಾಙ್ನಿಯಮ. ದಂಪತಿಗಳಲ್ಲಿ ಪುರುಷ. ಕ್ಷಣಲವಾದಿ ಕಾಲಗಳಲ್ಲಿ ಸಂವತ್ಸರ. ಋತುಗಳಲ್ಲಿ ವಸಂತ. ಮಾಸಗಳಲ್ಲಿ ಮಾರ್ಗಶೀರ್ಷ. ನಕ್ಷತ್ರ ಗಳಲ್ಲಿ ಅಭಿಜಿತ್. ಯುಗಗಳಲ್ಲಿ ಕೃತಯುಗ. ಗಂಭೀರರಲ್ಲಿ ದೇವಲೋಸಿತನು. ವೇದ ವಿಭಾಗ ಕರ್ತರಲ್ಲಿ ದ್ವೈಪಾಯನರು. ವಾಗ್ಮಿಗಳಲ್ಲಿ ಶುಕ್ರ. ಭಗವಚ್ಛಬ್ದ ವಾಚ್ಯರಲ್ಲಿ ವಾಸುದೇವ. ಭಗವದ್ಭಕ್ತರಲ್ಲಿ ಭೀಮಾರ್ಜುನಾದಿಗಳನ್ನು ಬಿಟ್ಟು ಉದ್ಧವನಾದ ನೀನು ಕಿಂಪುರುಷರಲ್ಲಿ ಹನುಮಂತನು. ವಿದ್ಯಾಧರರಲ್ಲಿ ಸುದರ್ಶನನು. ರತ್ನಗಳಲ್ಲಿ ಪದ್ಮರಾಗ ಮಣಿ. ಮೊಗ್ಗುಗಳಲ್ಲಿ ತಾವರೆ ಮೊಗ್ಗು. ತೃಣಜಾತಿಗಳಲ್ಲಿ ದರ್ಭೆ. ಹವಿಸ್ಸುಗಳಲ್ಲಿ ಹಸುವಿನ ತುಪ್ಪ. ಉದ್ಯೋಗಗಳಲ್ಲಿ ಐಶ್ವರ್ಯಪ್ರದ ಉದ್ಯೋಗ. ಮೋಸದ ಉಪಾಯ ಗಳಲ್ಲಿ ಜೂಜು. ದ್ವಂದ್ವಸಹನೆಯಲ್ಲಿ ಸಹಿಷ್ಣುತೆ. ಬಲಿಷ್ಠರಲ್ಲಿ ಬಲಿ. ಸಹಿಸುವ ಶಕ್ತಿ ಗಳಲ್ಲಿ ಅವಷ್ಟಂಭ ಶಕ್ತಿ. ಪಂಚರಾತ್ರಾಗಮದಲ್ಲಿ ಉಕ್ತರಾಗಿರುವ ಶ್ರೀ, ಬ್ರಹ್ಮ ವಾಯು, ಸುಪರ್ಣಾದಿ ಒಂಭತ್ತು ಮೂರ್ತಿಗಳಲ್ಲಿ ಅವುಗಳಿಗೆ ಕಾರಣಗಳಾಗಿ, ಪ್ರಥಮ ಪೂಜೆಗೆ ಅರ್ಹಗಳೂ ಆಗಿರುವ ನನ್ನ (ಕೃಷ್ಣನ) ಒಂಭತ್ತು ಮೂರುತಿಗಳು ಸಾಕ್ಷಾದ್ವಿಭೂತಿರೂಪಗಳು. ಗಂಧರ್ವರಲ್ಲಿ ವಿಶ್ವಾವಸು. ಅಪ್ಸರೆಯರಲ್ಲಿ ಪೂರ್ವ ಚಿತ್ತಿ. ಪರ್ವತದ ಗುಣಗಳಲ್ಲಿ ಸ್ಥೈರ್ಯಗುಣವು ಶ್ರೇಷ್ಠ. ಭೂಮಿಯ ಗುಣಗಳಲ್ಲಿ ಗಂಧ

ಜಲದ ಗುಣಗಳಲ್ಲಿ ರಸವು ಶ್ರೇಷ್ಠ. ಸುಡತಕ್ಕವರಲ್ಲಿ ಅಗ್ನಿ- ಸೂರ್ಯ – ಚಂದ್ರ-ನಕ್ಷತ್ರ ಗಳಲ್ಲಿರುವ ಗುಣಗಳ ಪೈಕಿ ಪ್ರಭಾವ ಎಂಬ ಸ್ವಭಾವ. ಆಕಾಶದಲ್ಲಿರುವ ಗುಣಗಳಲ್ಲಿ ಶಬ್ದ. ಬ್ರಾಹ್ಮಣಪ್ರೇಮಿಗಳಲ್ಲಿ ಬಲಿ. ವೀರರಲ್ಲಿ ಅರ್ಜುನ. ಪ್ರಾಣಿಗಳಲ್ಲಿರುವ ಧರ್ಮ ಗಳಲ್ಲಿ ಸೃಷ್ಟಿಸ್ಥಿತಿ ಸಂಹಾರಗಳೆಂಬ ಸ್ವಭಾವದಲ್ಲಿ ನನ್ನ ವಿಭೂತಿರೂಪವಿದೆ. ಪಾದ, ವಾಕ್ ಮೊದಲಾದ ಸರ್ವೇಂದ್ರಿಯಗಳಿಗೂ ಗಮನಾದಿ ಶಕ್ತಿಪ್ರದನು ನಾನು. ಪಂಚಭೂತಗಳು, ಅಹಂಕಾರ, ಮಹತ್ತತ್ವ, ಬ್ರಹ್ಮಾಂಡ, ವೈರಾಜಪುರುಷನಾದ ಚತು ರ್ಮುಖ, ಪ್ರಕೃತಿ ಮತ್ತು ಗುಣಗಳು ಇವುಗಳೆಲ್ಲೆಲ್ಲ ಇದ್ದು ಆ ನಾಮಗಳಿಂದಲೇ ಕರೆಯಲ್ಪಡುತ್ತ ನಿಯಮಿಸುವವನು ನಾನೇ. ಇತರವಾದ ಜ್ಞಾನಗಳಲ್ಲಿ ತತ್ತ್ವಗಳ ಗಣನೆಗೆ ಸಾಧನವಾದ ಶ್ರೀಹರಿಯ ಯಥಾರ್ಥಸ್ವರೂಪವನ್ನು ನಿಶ್ಚಯಿಸುವ ಜ್ಞಾನವೇ ಶ್ರೇಷ್ಠವೆನಿಸುವೆನು. ಅಘಟಿತ ಘಟಕನು ನಾನು, ಸರ್ವತ್ರ ವ್ಯಾಪ್ತನಾಗಿ ಸರ್ವಶಬ್ದ ವಾಚ್ಯನಾಗಿರುವ ನನ್ನಿಂದ ವಿರಹಿತವಾದ ಒಂದು ಪದಾರ್ಥವೂ ಯಾವ ದೇಶಕಾಲಗಳಲ್ಲಿಯೂ ಇಲ್ಲವೇ ಇಲ್ಲ. ಪರಮಾಣುಗಳು ಅನಂತಗಳಾದುದರಿಂದ ಅವುಗಳ ಗಣನೆ ಹೇಗೆ ಸಾಧ್ಯವಿಲ್ಲವೋ ಹಾಗೆ ಸರ್ವಗುಣಸ್ವರೂಪನಾಗಿ, ಬ್ರಹ್ಮಾಂಡ ಗಳನ್ನು ಸೃಷ್ಟಿಸತಕ್ಕ ನನ್ನ ವಿಭೂತಿಗಳಿಗೆ ಕೊನೆಯೇ ಇಲ್ಲವಾದ ಕಾರಣ ಅವುಗಳನ್ನು ಗಣನೆ ಮಾಡಲು ಸಾಧ್ಯವೇ ಇಲ್ಲ. ಎಲ್ಲೆಲ್ಲಿ ಸಂಪತ್ತು, ತೇಜಸ್ಸು, ಕೀರ್ತಿ, ವೈಭ ವಾದಿಗಳಿವೆಯೋ ಅವೆಲ್ಲವೂ ನನ್ನ ವಿಭೂತಿರೂಪಗಳು. ಇದೇ ವಿಭೂತಿ ರೂಪಗಳ ಸಂಕ್ಷೇಪ ವರ್ಣನೆ.

ನನ್ನನ್ನೇ ಸರ್ವಶಬ್ದವಾಚ್ಯನೆಂದು ಧ್ಯಾನಿಸು. ಜೀವಾದಿಗಳೆಲ್ಲರೂ ನನ್ನ ಅಧೀನ ರೆಂದೇ ಚಿಂತಿಸು. ಹೀಗೆ ಮಾಡಿದರೆ ಮುಕ್ತನಾಗುವೆ. ಅಧಿಕಾರಿಯು ಶ್ರುತಿಯಲ್ಲಿ ಹೇಳಿರುವ ಕ್ರಮದಿಂದ ಭಕ್ತಿಪೂರ್ವಕವಾಗಿ ಇಂದ್ರಿಯಗಳನ್ನು ನನ್ನಲ್ಲಿಯೇ ಇಟ್ಟು ಮನಸ್ಸಿನಿಂದ ನನ್ನನ್ನೇ ಧ್ಯಾನಿಸುತ್ತ ಸರ್ವ ಜೀವ, ಇಂದ್ರಿಯಗಳನ್ನು ನನ್ನ ಅಧೀನಗಳೆಂದು ಧ್ಯಾನಿಸಿ ಮುಕ್ತನಾಗುವನು.

## ಹದಿನಾರನೆಯ ಅಧ್ಯಾಯ ಮುಗಿದುದು

**ಉದ್ಧವ :–** ಕಲ್ಪಾದಿಯಲ್ಲಿ ಭಕ್ತಿಸಾಧನವನ್ನು ನೀನು ಹೇಳಿರುವೆ. ಬಹುಕಾಲ ವಾದುದರಿಂದ ಅದು ನಷ್ಟಪ್ರಾಯವಾಗಿದೆ. ನಿನ್ನ ಹಾಗೆ ಧರ್ಮವನ್ನು ಹೇಳುವ ವನೂ, ಅನುಷ್ಠಿಸುವವನೂ ರಕ್ಷಿಸುವವನೂ ಯಾರೂ ಇಲ್ಲ. ಆದ್ದರಿಂದ ನೀನೇ ಉಪದೇಶಿಸು.

**ಶ್ರೀಭಗವಾನ್ :–** ಈಗ ವರ್ಣಕ್ಕೆ ಬ್ರಾಹ್ಮಣಾದಿ ಹೆಸರಿದ್ದಂತೆ ಮೊಟ್ಟ ಮೊದಲಿನ ಕೃತಯುಗದಲ್ಲಿ ಹಂಸವೆಂದು ಹೆಸರು. ಆಯುಗದಲ್ಲಿ ಪ್ರಜೆಗಳೆಲ್ಲರೂ ಕೃತಕೃತ್ಯರಾಗಿದ್ದರು. ಆದ್ದರಿಂದಲೇ ಕೃತಯುಗವೆಂದು ಹೆಸರಾಯಿತು. ಪ್ರಣವದ

ವ್ಯಾಖ್ಯಾನರೂಪವಾದ ವೇದವು ಒಂದೇ. ವೇದಪ್ರತಿಪಾದ್ಯನೂ, ಇಂದ್ರಾದಿ ನಾಮವುಳ್ಳವನೂ ಶ್ರೀಹರಿಯೇ. ಬ್ರಹ್ಮಾದಿದೇವತೆಗಳಿಗೆ ಮನುಗಳು ಎಂದು ಹೆಸರು. ಮುಖ್ಯ ಧರ್ಮವು ನಾನೇ. ಆಗ ಧರ್ಮವು ಮುಕ್ಕಿಲ್ಲದೆ ಪರಿಪೂರ್ಣವಾಗಿದ್ದಿತು. ಹಂಸನಾಮಕ ವರ್ಣವುಳ್ಳ ಪ್ರಜೆಗಳೆಲ್ಲರೂ ನನ್ನನ್ನೇ ಉಪಾಸಿಸುತ್ತಿದ್ದರು. ತ್ರೇತೆಯಲ್ಲಿ ಚತುರ್ಮುಖನಿಂದ ಋಗ್ವೇದ, ಯಜುರ್ವೇದ ಮತ್ತು ಸಾಮವೇದವೆಂದು ವೇದವು ಮೂರು ಪ್ರಕಾರ ವಿಭಕ್ತವಾಯಿತು. ನನ್ನ ಮುಖದಿಂದ ಅವಯವಗಳಿಂದ ಬ್ರಾಹ್ಮಣಾದಿ ವರ್ಣಗಳೂ, ಬ್ರಹ್ಮಚರ್ಯಾದಿ ಆಶ್ರಮಗಳೂ, ಅವರವರಿಗೆ ಯೋಗ್ಯಗಳಾದ ಧರ್ಮಗಳೂ ಸೃಷ್ಟಿಸಲ್ಪಟ್ಟುವು. ನಾಲ್ಕು ವರ್ಣಗಳ ಸ್ವಭಾವ ಧರ್ಮಗಳು ಹೀಗಿವೆ :- ಶೀಲ, ದಮ, ಶೌಚ, ಸಂತೋಷ, ಕ್ಷಮೆ, ತ್ರಿಕರಣಗಳೂ ಒಂದೇ ರೀತಿಯಾಗಿರುವುದು. ತಪಸ್ಸು, ಭಕ್ತಿ, ದಯೆ ಮತ್ತು ಸತ್ಯ ಈ ಗುಣಗಳು ಬ್ರಾಹ್ಮಣರ ಸ್ವಾಭಾವಿಕ ಗುಣಗಳು. ಇವು ಇತರರಲ್ಲಿರುವುದಕ್ಕಿಂತ ಇವರಲ್ಲಿ ಅಧಿಕವಾಗಿವೆ.

ಪ್ರಭಾವ, ಶಕ್ತಿ, ಧೈರ್ಯ, ಶೌರ್ಯ, ದ್ವಂದ್ವ ಸಹಿಷ್ಣುತೆ, ಔದಾರ್ಯ, ಉದ್ಯೋಗ, ಸ್ಥೈರ್ಯ, ಬ್ರಾಹ್ಮಣಭಕ್ತಿ ಮತ್ತು ಅಧಿಕಾರ ಶಕ್ತಿ ಇವು ಕ್ಷತ್ರಿಯರ ಗುಣಗಳು.

ಆಸ್ತಿಕ್ಯ, ಸತ್ಪಾತ್ರಕ್ಕೆದಾನ, ಕರ್ಮಶ್ರದ್ಧೆ, ದಂಭವಿಲ್ಲದಿರುವುದು, ವಿಪ್ರಸೇವೆ, ದ್ರವ್ಯಾಭಿವೃದ್ಧಿಯಲ್ಲಿ ತೃಪ್ತಿಯನ್ನು ಹೊಂದದೇ ಇರುವುದು ಇವು ವೈಶ್ಯರಗುಣಗಳು.

ದೇವದ್ವಿಜಗೋವುಗಳನ್ನು ನಿಷ್ಕಪಟದಿಂದ ಸೇವಿಸುವುದು, ಅದರಿಂದ ದೊರೆತ ಅನ್ನಾದಿಗಳಿಂದ ತೃಪ್ತಿಯನ್ನು ಹೊಂದುವುದು ಇವು ಶೂದ್ರನ ಗುಣಗಳು.

ಒಳಗೆ ಹೊರಗೆ ಅಶುಚಿ, ಸುಳ್ಳು, ಕಳ್ಳತನ, ನಾಸ್ತಿಕ್ಯ, ಕಲಹ, ಕಾಮ, ಕ್ರೋಧ, ಅತ್ಯಾಶೆ ಇವು ವರ್ಣಬಾಹಿರರ ಸ್ವಭಾವ ಧರ್ಮಗಳು.

ಸತ್ಯ, ಅಸ್ತೇಯ, ನಿಷಿದ್ಧಕಾಮತ್ಯಾಗ, ಅಕ್ರೋಧ, ವಿಷ್ಣು ವೈಷ್ಣವರಿಗೆ ದ್ರವ್ಯದಾನ, ಅಲೋಭ ಮತ್ತು ಭೂತವಿಶ್ವಾಸ ಇವು ಸರ್ವವರ್ಣದವರಲ್ಲಿಯೂ ಇರಬೇಕಾದ ಸಾಧಾರಣ ಧರ್ಮಗಳು.

## ಬ್ರಹ್ಮಚಾರಿಯ ಧರ್ಮ

ಬ್ರಹ್ಮಚಾರಿಯು ಜಿತೇಂದ್ರಿಯನೂ, ಹರಿಭಕ್ತನೂ, ಮಿತಭಾಷಿಯೂ ಆಗಿದ್ದು ವೇದಾಧ್ಯಯನವನ್ನು ಮಾಡಬೇಕು. ಮೌಂಜಿ, ಅಜಿನ, ದಂಡ, ಕಮಂಡಲು, ಅಕ್ಷಮಾಲೆ, ಯಜ್ಞೋಪವೀತ ಇವುಗಳನ್ನು ಧರಿಸಿ, ಅಭ್ಯಂಜನವಿಲ್ಲದೆ ಜಟೆಬೆಳೆಸಬೇಕು. ಹಲ್ಲುಜ್ಜಬಾರದು. ಸ್ನಾನ, ಹೋಮ, ಜಪ, ಮತ್ತು ಮಲ

ಮೂತ್ರ ವಿಸರ್ಜನೆ ಮಾಡುವ ಈ ಕಾಲಗಳಲ್ಲಿ ಮೌನವಾಗಿರಬೇಕು. ಯಾವ ಕಾರಣದಿಂದಲೂ ತನ್ನ ರೇತಸ್ಸನ್ನು ಕಳೆದುಕೊಳ್ಳಬಾರದು. ಗುರ್ವಾಜ್ಞೆಗೆ ಬದ್ಧನಾಗಿ ವಿದ್ಯೆಯನ್ನು ಸಂಪೂರ್ಣವಾಗಿ ಹೊಂದುವವರೆಗೂ ಗುರು ಕುಲವಾಸ ಮಾಡಬೇಕು. ಅಗ್ನಿ, ಸೂರ್ಯ, ಗುರು, ಹೃದಯ ಮತ್ತು ಸಕಲ ಪ್ರಾಣಿಗಳು ಈ ಸ್ಥಳಗಳೊಳಗೆಲ್ಲ ನಿಯಾಮಕನಾಗಿರುವ ಶ್ರೀಹರಿಯು ಎಲ್ಲರಿಂದ ಭಿನ್ನನೆಂದು ತಿಳಿದು ವಿಷಯಾಭಿಲಾಷೆ ಯನ್ನು ತೊರೆದು ಭಜಿಸುವವನು ಬ್ರಹ್ಮವರ್ಚಸ್ವಿಯಾಗುವನು. ಸತ್ಯಲೋಕದಲ್ಲಿ ವಾಸಿಸಬೇಕೆಂದು ಅಪೇಕ್ಷಿಸುವವನು ಬ್ರಹ್ಮಚಾರಿಯಾಗಿಯೇ ಗುರುವಿನ ಮನೆಯಲ್ಲಿ ಸಾಯುವವರೆಗೂ ಇರಬೇಕು. ಗೃಹಸ್ಥನಾಗಬೇಕೆನ್ನುವವನು, ಗುರುದಕ್ಷಿಣೆಯನ್ನು ಕೊಟ್ಟು ಸ್ನಾತಕವ್ರತಧಾರಿಯಾಗಿ ತೀರ್ಥಯಾತ್ರೆಯನ್ನು ಮಾಡಿ ಬಳಿಕ ಮದುವೆ ಯಾಗಬೇಕು. ಅಥವಾ ವಾನಪ್ರಸ್ಥಿಯಾಗಬಹುದು. ವೈರಾಗ್ಯವು ಬಂದಿದ್ದರೆ ಸಂನ್ಯಾಸಿಯೇ ಆಗಬಹುದು. ಮುಖ್ಯವಾಗಿ ದ್ವಿಜನು ಯಾವ ಆಶ್ರಮವೂ ಇಲ್ಲದೆ ಕ್ಷಣಮಾತ್ರವೂ ಇರಬಾರದು.

## ಗೃಹಸ್ಥಧರ್ಮ

ಸ್ವಜಾತಿಯ ಯೋಗ್ಯಕನ್ಯೆಯನ್ನು ಮದುವೆಯಾಗಬೇಕು. ಯಜನ, ಅಧ್ಯಯನ, ದಾನ ಈ ಮೂರು ಕರ್ಮಗಳೂ ತ್ರೈವರ್ಣಿಕರಿಗೆ ಸಮಾನ. ಯಾಜನ, ಅಧ್ಯಾಪನ, ಪ್ರತಿಗ್ರಹ ಈ ಮೂರು ಬ್ರಾಹ್ಮಣನಿಗೆ ಮಾತ್ರ ವಿಹಿತ. ಪ್ರತಿಗ್ರಹವೊಲ್ಲೆ ಎಂಬ ಬ್ರಾಹ್ಮಣನು ನಿಃಸ್ಪೃಹನಾಗಿ ಯಾಜನ, ಅಧ್ಯಾಪನೆಯಿಂದ ಜೀವಿಸಬೇಕು. ಅವೂ ಬೇಡವೆನಿಸಿದರೆ ಶಿಲೋಂಛವೃತ್ತಿಯಿಂದ ಜೀವಿಸಬೇಕು. ಇದು ಕಷ್ಟವಲ್ಲವೆ ? ಎಂದರೆ "ಬ್ರಾಹ್ಮಣಸ್ಯ ಹಿ ದೇಹೋऽಯಂ ಕ್ಷುದ್ರಕಾಮಾಯ ನೇಷ್ಯತೇ" ಅಂದರೆ ಬ್ರಾಹ್ಮಣದೇಹವು ಅಲ್ಪ ಸುಖಕ್ಕಾಗಿ ನಿರ್ಮಿತವಾದುದೇ ಅಲ್ಲ. ವಿಪ್ರನು ಗೃಹಸ್ಥ ನಾಗಿ ಭಾಗವತಧರ್ಮವನ್ನು ಅನುಸರಿಸಿ ಹರಿವಾಯುಗುರುಗಳ ಅನುಗ್ರಹವನ್ನು ಅಪೇಕ್ಷಿಸಿದರೆ ಅದರಿಂದ ಮುಕ್ತಿಯನ್ನು ಪಡೆವನು. ಯಾವ ಬ್ರಾಹ್ಮಣನು ಜ್ಞಾನಭಕ್ತಿ ವೈರಾಗ್ಯವನ್ನುಳ್ಳವನಾಗಿ ಜೀವನಕ್ಕೆ ಸಾಲದೆ ಕಷ್ಟವನ್ನು ಪಡುತ್ತಿದ್ದರೆ ಅವನಿಗೆ ಸಹಾಯ ಮಾಡುವವನನ್ನು ನಾನು ವಿಪತ್ತುಗಳಿಂದ ದಾಟಿಸುವೆನು. ರಾಜನು ಪ್ರಜೆಗಳನ್ನು ಮಕ್ಕಳಂತೆ ಕಾಪಾಡಬೇಕು. ಹಾಗೆ ನಡೆದುಕೊಂಡವನು ಸ್ವರ್ಗದಲ್ಲಿ ಸುಖಪಡುವನು.

## ಆಪದ್ಧರ್ಮಗಳು

ಆಪತ್ಕಾಲದಲ್ಲಿ ಬ್ರಾಹ್ಮಣನಾದವನು ಧಾನ್ಯಾದಿಗಳನ್ನು ಮಾರಿ, ಅಥವಾ ವೀರನಾಗಿದ್ದಲ್ಲಿ ಸೈನ್ಯಕ್ಕೆ ಸೇರಿ ಖಡ್ಗವನ್ನು ಹಿಡಿದು ಜೀವಿಸಬಹುದು. ಆದರೂ

ಎಂದೂ ನೀಚ ಸೇವೆಯಿಂದ ಜೀವಿಸಬಾರದು. ಕ್ಷತ್ರಿಯನೂ ಆಪತ್ಕಾಲದಲ್ಲಿ ಗೋರಕ್ಷಣಾದಿ ವೃತ್ತಿನಿರತನಾಗಬಹುದು. ಬೇಟೆಯಾಡಿ ಅದರಿಂದ ದೊರೆತ ವಿಹಿತ ಮಾಂಸದಿಂದ ಜೀವಿಸಬಹುದು. ವಿಪ್ರವೇಷದಿಂದ ಜೀವಿಸಬಹುದು. ಆವನೂ ನೀಚಸೇವೆಯನ್ನು ಎಂದೂ ಮಾಡಕೂಡದು. ವೈಶ್ಯನು ಶೂದ್ರ ವೃತ್ತಿಯಿಂದ ಜೀವಿಸಬಹುದು. ಶೂದ್ರನು ಅಗಸನ ವೃತ್ತಿಯಿಂದ ಅಥವಾ ಮೇದರ ವೃತ್ತಿಯಿಂದ ಜೀವಿಸಬಹುದು. ಎಂದೂ ನೀಚವೃತ್ತಿಯಿಂದ ಜೀವಿಸಬಾರದು.

ಗೃಹಸ್ಥನು ಅಧ್ಯಯನ, ಯಥಾಶಕ್ತಿ ಪೈತೃಕ, ದೇವಕರ್ಮ, ಬಲಿಹರಣ, ಅನ್ನಾದಿ ದಾನಗಳಿಂದ ನನ್ನ ಪ್ರತಿಮಾರೂಪರಾದ ದೇವ, ಋಷಿ, ಪಿತೃ, ಭೂತ ಗಳನ್ನು ಆರಾಧಿಸಬೇಕು. ದಾರಾಪುತ್ರಾದಿಗಳಲ್ಲಿ ಅತ್ಯಾಸಕ್ತನಾಗಬಾರದು. ಮೋಕ್ಷ ವೊಂದೇ ಶಾಶ್ವತವಾದ ಫಲವೆಂದು ತಿಳಿಯಬೇಕು. ಜೀವರ ಸಹವಾಸವು ಅನಿತ್ಯವೆಂದು ವಿಚಾರ ಮಾಡಿ ನಿರ್ಣಯಿಸಿ, ನನ್ನಲ್ಲಿಯೇ ಮನಸ್ಸನ್ನಿಟ್ಟು ಅಹಂಕಾರ ಮಮಕಾರಗಳನ್ನು ಬಿಟ್ಟು, ಸತಿಸುತಾದಿಗಳಲ್ಲಿ ತಾನು ಹೊರಗಿನ ಅತಿಥಿಯಂತೆ ಅಭಿಮಾನರಹಿತನಾಗಿ ವರ್ತಿಸಿದರೆ ಕುಟುಂಬ ಬಂಧನಕ್ಕೆ ಗುರಿಯಾಗುವುದಿಲ್ಲ. ವೈರಾಗ್ಯ ಬಂದರೆ ವಾನಪ್ರಸ್ಥಾಶ್ರಮವನ್ನು ಕೈಗೊಳ್ಳಬಹುದು. ಅದಕ್ಕಿಂತ ಹೆಚ್ಚಾದ ವೈರಾಗ್ಯವು ಬಂದಿದ್ದರೆ ಸಂನ್ಯಾಸಿಯಾಗಬಹುದು. ಆದರೆ ಪುತ್ರಮಿತ್ರ ಕಳತ್ರಾದಿಗಳಲ್ಲಿಯೇ ಆಸಕ್ತನಾದವನು ಸತ್ತಮೇಲೆ ಅಂಧಂತಮಸ್ಸನ್ನು ಹೊಂದುವನು.

## ಹದಿನೇಳನೆಯ ಅಧ್ಯಾಯ ಮುಗಿದುದು

## ವಾನಪ್ರಸ್ಥಧರ್ಮ

ವಾನಪ್ರಸ್ಥನು ವನವನ್ನು ಪ್ರವೇಶಿಸಲಿಚ್ಛಿಸಿ ತನ್ನ ಭಾರ್ಯೆಯನ್ನು ಪುತ್ರನ ವಶದಲ್ಲಿಯೇ ಇರಿಸಿ ಅಥವಾ ಅವಳ ಜೊತೆಯಲ್ಲಿಯೋ ವನದಲ್ಲಿ ಎಪ್ಪತ್ತೈದು ವರ್ಷ ವಯಸ್ಸಿನವರೆಗೆ ಅಂದರೆ ಆಯುಷ್ಯದ ಮೂರನೆಯ ಭಾಗವನ್ನು ಕಳೆಯಬೇಕು. ಶುದ್ಧವಾದ ಕಂದಮೂಲಗಳನ್ನೇ ತಿಂದು ಜೀವಿಸುತ್ತ, ತ್ರಿಕಾಲ ಸ್ನಾನಮಾಡಿ ತಪಸ್ಸು ಮೊದಲಾದುವುಗಳಿಂದ ನನ್ನನ್ನೇ ಆರಾಧಿಸುತ್ತ ಮಹರ್ಲೋಕಾದಿ ಕ್ರಮದಿಂದ ನನ್ನನ್ನು ಹೊಂದುತ್ತಾನೆ. ಹೀಗೆ ಮಾಡಿದ ತಪಸ್ಸನ್ನು ತುಚ್ಛಕಾಮಕ್ಕೆ ಪ್ರಯೋಗಿಸಿದವನು ಅಜ್ಞನು. ನನ್ನನ್ನು ಪೂಜಿಸಲು ಅಸಮರ್ಥನಾದರೆ ನನ್ನನ್ನೇ ಸ್ಮರಿಸುತ್ತ ಅಗ್ನಿಯನ್ನು ಪ್ರವೇಶಿಸಬೇಕು. ಎಲ್ಲದರಲ್ಲಿಯೂ ವಿರಕ್ತಿವುಂಟಾದಾಗ ನನ್ನನ್ನು ಪೂಜಿಸಿ ಋತ್ವಿಜರಿಗೆ ಸರ್ವಸ್ವದಾನ ಮಾಡಿ ಸಂನ್ಯಾಸಿಯಾಗಬೇಕು.

## ಸಂನ್ಯಾಸಧರ್ಮ

ವೈರಾಗ್ಯವಿಲ್ಲದೆ ಸಂನ್ಯಾಸಿಯಾದರೆ ದೇವತೆಗಳು ಅವನ ಮಗ ಹೆಂಡತಿಯು ರಿಂದ ವಿಘ್ನವನ್ನು ತಂದಿಟ್ಟು ಆತನು ಅಧಃಪತನ ಹೊಂದುವಂತೆ ಮಾಡಿ ಬಿಡುವರು. ದೇವತೆಗಳನ್ನು ಪೂಜಿಸಿ ಸಂನ್ಯಾಸಿಯಾಗಲಿಚ್ಛಿಸಿದರೆ ಆಗ ದೇವತೆಗಳು ಅನುಮೋದಿಸಿ ಅವನ ಯಶೋಭಿವೃದ್ಧಿಗಾಗಿ ವಿಘ್ನವನ್ನು ತಂದಿಟ್ಟಂತೆ ತೋರಿಸು ತ್ತಾರೆ. ಯತಿಗಳು ಕೌಪೀನ ಮತ್ತು ಆಚ್ಛಾದನಕ್ಕೆ ಬೇಕಾದ ವಸ್ತ್ರವನ್ನು ಮಾತ್ರ ಧರಿಸಬೇಕು. ಸತ್ಯವನ್ನೇ ಹೇಳಬೇಕು. ವಿಚಾರ ಮಾಡಿ ಶುದ್ಧಾಚಾರವನ್ನೇ ಆಚರಿಸಬೇಕು. ಜಿತೇಂದ್ರಿಯನೂ, ವಿರಕ್ತನೂ ಆಗಿ, ಸದಾ ಭಗವಂತನನ್ನು ಚಿಂತಿಸುತ್ತಾ ಪುಣ್ಯಭೂಮಿಯಲ್ಲಿ ಸಂಚರಿಸಬೇಕು. ಈ ಜಗತ್ತು ರುದ್ರ, ಭಾರತಿ, ಮುಖ್ಯ ಪ್ರಾಣದೇವರಿಂದ ಕೂಡಿದೆ. ಶ್ರೀಹರಿಯ ಆಧಾರದಿಂದಿದೆ. ಜಡ ಪ್ರಕೃತಿಯಿಂದ ಪರಿಣತವಾಗಿದೆ. ಹೀಗೆಂದು ತರ್ಕದಿಂದ ತಿಳಿದು ಅದರಲ್ಲಿ ಆಸಕ್ತ ನಾಗದೆ ಸ್ವತಂತ್ರನಾದ ಭಗವಂತನ ಸ್ಮರಣೆ ಮಾಡಬೇಕು. ಜ್ಞಾನಿಯಾದ ಯತಿಯು ಆಶ್ರಮ ಚಿಹ್ನೆಗಳನ್ನು ತೊರೆದು ಯಾರಿಗೂ ತಾನು ಯತಿಯೆಂದು ತಿಳಿಯದಂತೆ ಅರಣ್ಯದಲ್ಲಿ ಸಂಚರಿಸಬೇಕು. 'ತತ್ತ್ವಮಸಿ' ಮೊದಲಾದ ವೇದವಾಕ್ಯಗಳಿಗೆ ಐಕ್ಯಾರ್ಥವನ್ನು ಕಲ್ಪಿಸಬಾರದು. ಪಾಶುಪತಾದಿ ಪಾಖಂಡ ಮತಗಳಲ್ಲಿ ಅಭಿಮಾನ ವಿಟ್ಟು ಅವುಗಳ ಪಕ್ಷವನ್ನು ಆಶ್ರಯಿಸಬಾರದು. ಶ್ರೀಹರಿಯು ಸರ್ವತ್ರ ಇರುವುದ ರಿಂದ ಯತಿಯೂ ಯಾರಲ್ಲಿಯೂ ವೈರಬೆಳೆಸಬಾರದು. ಆಹಾರವು ದೊರೆಯದಿದ್ದರೆ ಭಕ್ತಿ ಹ್ರಾಸಮಾಡಿಕೊಂಡು ದುಃಖಿಸಬಾರದು. ಅನ್ನ ದೊರೆತಾಗ ಅದು ಕದನ್ನ ವಾಗಲಿ, ಮೃಷ್ಟಾನ್ನವಾಗಲಿ, ವಿಕಾರ ಹೊಂದದೆ ಅದನ್ನೇ ತಿಂದು, ಆಗು ಹೋಗುಗಳಿಗೆ ಅಂಜದೆ ಶ್ರೀಶನು ಇಟ್ಟ ಹಾಗೆ ಇರಬೇಕು. ಆಶ್ರಮೋಚಿತ ಆಚಾರ ತಪ್ಪದೆ ಆಚರಿಸಬೇಕು. ಬಿಟ್ಟರೆ ದೋಷಬರುವುದೆಂದು ವಿಧಿಗೆ ಹೆದರಿ ಮಾಡ ಬಾರದು. ಪ್ರಾರಬ್ಧಕರ್ಮದಿಂದ ಜ್ಞಾನಿಯ ಮನಸ್ಸು ನಿಷಿದ್ಧ ವಿಷಯದಲ್ಲಿ ಹೋಗಬಹುದು. ಆದರೂ ಅಪರೋಕ್ಷಜ್ಞಾನದಿಂದ ಆ ಪಾಪವು ನಿವೃತ್ತಿ ಯಾಗುವುದು. ಬಳಿಕ ನನ್ನ ಅನುಗ್ರಹದಿಂದ ಮುಕ್ತನಾಗುತ್ತಾನೆ. ಸಂನ್ಯಾಸಿಯು ವಿವಿಧ ಸಾಂಸಾರಿಕ ದುಃಖವನ್ನು ಕಂಡು ವಿರಕ್ತನಾಗಿ ಭಾಗವತಧರ್ಮಗಳನ್ನು ವಿಚಾರ ಮಾಡುವುದಕ್ಕಾಗಿ ಗುರುಗಳನ್ನು ಹೊಂದಿ ಪರಬ್ರಹ್ಮನನ್ನು ತಿಳಿಯುವ ತನಕ ಶ್ರದ್ಧೆಯಿಂದ ಗುರುವನ್ನು ಸೇವಿಸಬೇಕು. ಜ್ಞಾನವಾದ ಮೇಲೂ ಗುರು ಸೇವೆಯನ್ನು ಬಿಡಬಾರದು.

ಯಾವನು ಇಂದ್ರಿಯಗಳನ್ನು ನಿಗ್ರಹಿಸದೆ, ವಿಷಯಾಸಕ್ತನಾಗಿ, ಜ್ಞಾನ ವೈರಾಗ್ಯಗಳ ವಾಸನೆ ಕೂಡ ಇಲ್ಲದೆ, ಕೇವಲ ಹೊಟ್ಟೆ ಹೊರೆಯುವುದಕ್ಕಾಗಿ ತ್ರಿದಂಡಧರನಾಗಿರುವನೋ ಅವನು ಆಶ್ರಮಾಭಿಮಾನಿ ದೇವತೆಗಳಾದ ವಾಯ್ವಾದಿ ದೇವತೆಗಳನ್ನೂ, ಅಂತರ್ಯಾಮೀ ದೇವರನ್ನೂ ನಿರಾಕರಿಸಿ ಧರ್ಮಭ್ರಷ್ಟನಾಗಿ

ಅಧಃಪತನವನ್ನು ಹೊಂದುವನು. ಮುಮುಕ್ಷುಗಳಾದ ಸಕಲ ಆಶ್ರಮ ಧರ್ಮವಂತರಿಗೂ ನನ್ನ ಉಪಾಸನೆಯು ಮುಖ್ಯ ಧರ್ಮವಾಗಿದೆ. ಸ್ವಧರ್ಮಾನುಷ್ಠಾನದಿಂದ ಶುದ್ಧಾಂತಃಕರಣನಾಗಿ, ನನ್ನ ಸ್ವರೂಪವನ್ನು ಚೆನ್ನಾಗಿ ನಿರ್ಣಯಿಸಿಕೊಂಡು, ಜ್ಞಾನವಿಜ್ಞಾನ ಸಂಪನ್ನನಾಗಿ ವಿರಕ್ತನಾಗಿರುವವನು ನನ್ನನ್ನು ಹೊಂದಿಯೇ ತೀರುವನು. ಹೀಗೆ ಸ್ವಧರ್ಮದಿಂದ ಯಾರು ನನ್ನನ್ನು ಸೇವಿಸುವರೋ ಅವನು ಬೇಗ ಭಕ್ತಿಯನ್ನು ಹೊಂದಿ ಮುಕ್ತನಾಗುತ್ತಾನೆ. ಉದ್ಧವಾ ! ನನ್ನ ಪ್ರಾಪ್ತಿಗೆ ಕಾರಣವಾದ ಭಕ್ತಿಪೂರ್ವಕ ಆಚರಿಸಬೇಕಾದ ಧರ್ಮವನ್ನು ಅಂದರೆ ವಿಹಿತಾಚಾರದ ಬಗೆಯನ್ನು ನಿರೂಪಿಸಿರುವೆನು.

### ಹದಿನೆಂಟನೆಯ ಅಧ್ಯಾಯ ಮುಗಿದುದು

**ಶ್ರೀಕೃಷ್ಣ** :– ವೇದಾಂತಶ್ರವಣದಿಂದ ಜ್ಞಾನವನ್ನು ಹೊಂದಿ, ಇಂದ್ರಿಯಗಳನ್ನು ನಿಗ್ರಹಿಸಿ, ಉಪಕ್ರಮಾದಿ ಲಿಂಗಗಳಿಂದ ಸಂಶಯ ವಿಪರ್ಯಯಗಳನ್ನು ಕಳೆದುಕೊಂಡು ಇರುವ ಜ್ಞಾನಿಯು 'ಪ್ರಕೃತಿನಿರ್ಮಿತವಾದ ಜಗತ್ತು ಅಸ್ವತಂತ್ರವೂ, ಹರಿಯ ಅಧೀನವೂ ಆಗಿದೆ. ನಾವು ಮಾಡುವುದೆಲ್ಲ ಹರಿಯ ಪೂಜೆ. ಎಲ್ಲವನ್ನೂ ಮಾಡಿಸುವವನು ಶ್ರೀಹರಿಯೇ' ಎಂದು ತಿಳಿದು ಎಲ್ಲವನ್ನೂ ಶ್ರೀಹರಿಗೇ ಅರ್ಪಿಸಬೇಕು. ಜ್ಞಾನಿಗೆ ಇಷ್ಟನಾದವನು ನಾನೇ ಹೊರತು ಸ್ವರ್ಗಾದಿಗಳಲ್ಲ. ಈ ಜ್ಞಾನಿಯೇ ನನಗೆ ಪ್ರಿಯತಮನು. ಜ್ಞಾನಲೇಶದಿಂದಾಗುವ ಸ್ಥಿತಿಯು ತಪಸ್ಸು ಮತ್ತು ತೀರ್ಥಸ್ನಾನ ಮುಂತಾದುವುಗಳಿಂದ ಆಗಲಾರದು. ಈ ಕಾರಣದಿಂದ ಜ್ಞಾನವನ್ನು ಪಡೆದು ನನ್ನನ್ನು ಭಜಿಸು. ಅನೇಕ ಜ್ಞಾನಿಗಳು ಮಾನಸ ಯಜ್ಞಗಳಿಂದ ನನ್ನನ್ನು ಪೂಜಿಸಿ, ನನ್ನನ್ನು ಕೊನೆಯಲ್ಲಿ ಹೊಂದಿದರು. ಅಭಿಮಾನಿಕ ಸಂಸಾರವು ನನ್ನ ಅಪರೋಕ್ಷ ಜ್ಞಾನದಿಂದ ನಿವೃತ್ತವಾಗುವುದು.

**ಉದ್ಧವ** :– ದೇವ ! ಭಕ್ತಿಯೋಗವನ್ನು ಹೇಳಿ ಸುಜೀವರನ್ನು ಉದ್ಧರಿಸು.

**ಶ್ರೀಕೃಷ್ಣ** :– ಜೀವರಲ್ಲಿರತಕ್ಕ ಇಪ್ಪತ್ತುನಾಲ್ಕು ತತ್ತ್ವಗಳನ್ನು ತಿಳಿದು ಇವೆಲ್ಲಕ್ಕೂ ನಿಯಾಮಕನಾದವನು ಈಶ್ವರನೊಬ್ಬನೇ. ಹೀಗೆ ತಿಳಿಯುವುದೇ ಜ್ಞಾನವು. ಗುರೂಪದೇಶದಿಂದ ಉಂಟಾದ ಬಿಂಬ ಮೂರುತಿಯ ತಿಳುವಳಿಕೆಯಿಂದ ಸಹಿತವಾದ ಜ್ಞಾನವೇ ವಿಜ್ಞಾನವು. ಶ್ರೀಹರಿಯಾದ ನಾನೇ ಸ್ವತಂತ್ರನು. ಈ ವಿಷಯಕ್ಕೆ ಶ್ರುತಿ, ಪ್ರತ್ಯಕ್ಷ, ಐತಿಹ್ಯ (ಆಗಮಭೇದ) ಮತ್ತು ಅನುಮಾನ ಎಂಬ ನಾಲ್ಕು ಪ್ರಮಾಣಗಳಿವೆ. ಜೀವನೇ ಸ್ವತಂತ್ರನೆಂಬುದು ಮಿಥ್ಯಾಜ್ಞಾನವು. ಇದು ಭಗವಂತನೇ ಸ್ವತಂತ್ರನೆಂದು ತಿಳಿಯುವುದರಿಂದ ಪರಿಹಾರವಾಗುತ್ತದೆ. ಬ್ರಹ್ಮಲೋಕ ಪರ್ಯಂತವಾದ ಲೋಕಗಳಲ್ಲಿ ಆಗುವ ಸುಖವೆಲ್ಲ ಅಸ್ಥಿರ. ಆದುದರಿಂದ

ಆ ಲೋಕಗಳ ಸುಖವನ್ನು ಬಯಸಬಾರದು ಇದೇ ವೈರಾಗ್ಯ. ಇನ್ನು ಭಕ್ತಿಯ ಸಾಧನೆಗಳನ್ನು ಹೇಳುವೆನು ಕೇಳು –:

ನನ್ನ ಕಥೆಯಲ್ಲಿ ಶ್ರದ್ಧೆ, ನನ್ನ ಮಹಿಮೆಗಳನ್ನು ಕೊಂಡಾಡುವುದು, ನನ್ನ ಭಕ್ತರ ಪೂಜೆ, ನನ್ನನ್ನು ಕುರಿತೇ ಯಾಗದಾನಾದಿಗಳನ್ನು ಮಾಡುವುದು, ನನ್ನಲ್ಲಿಯೇ ಮನಸ್ಸನ್ನಿಟ್ಟು ಧರ್ಮಾದಿಗಳನ್ನು ಸಂಪಾದಿಸುವುದು. ನಿಂದ್ಯವಾದ ವಿಷಯಗಳಲ್ಲಿ ಮನಸ್ಸು ಹೋದರೆ ಅಧರ್ಮ ದುಃಖಾದಿಗಳು ಗಂಟುಬೀಳುತ್ತವೆ.

ನನ್ನಲ್ಲಿ ಭಕ್ತಿಯನ್ನು ಹುಟ್ಟಿಸುವ ಯಮ, ನಿಯಮ, ಶಮ ಮತ್ತು ದಮಾದಿ ಗಳೇ **ಧರ್ಮ**ಗಳು. ಭಗವದ್ರೂಪಗಳು ಪರಸ್ಪರ ಅಭಿನ್ನಗಳೆಂಬ ತಿಳಿವಳಿಕೆಯೇ **ಜ್ಞಾನ**. ವಿಷಯಾಸಕ್ತಿಯಿಲ್ಲದಿರುವುದೇ **ವೈರಾಗ್ಯ**. ಅಣಿಮಾದಿಗಳೇ ಐಶ್ವರ್ಯಗಳು.

**ಉದ್ಧವ** :– ಯಮನಿಯಮಗಳು ಎಷ್ಟು ವಿಧ ? ಶಮದಮಾದಿ ಗಳಾವುವು ?

**ಶ್ರೀಕೃಷ್ಣ** :– ಅಹಿಂಸೆ, ಸತ್ಯ ಮೊದಲಾದ ಯಮಗಳು ಹನ್ನೆರಡು ವಿಧ. ಶೌಚ, ಜಪಾದಿ ನಿಯಮಗಳು ಹನ್ನೆರಡು ವಿಧ. ಭಗವಂತನಲ್ಲಿಯೇ ಆಸಕ್ತವಾದ ಬುದ್ಧಿಯು ಶಮ. ಇಂದ್ರಿಯ ನಿಗ್ರಹವೇ ದಮ. ದುಃಖ ಸಹನೆ ತಿತಿಕ್ಷೆ. ಮುಕ್ತಿಯ ಸುಖವೇ ಸುಖವು. ವಿಷಯಸುಖಾಭಿಲಾಷೆಯೇ ದುಃಖ. ಬಂಧಮೋಕ್ಷಗಳಿಗೆ ಕಾರಣವನ್ನು ತಿಳಿದವನೇ ಪಂಡಿತ. ದೇಹಾದಿಗಳು ತಾನೇ ಎಂದು ತಿಳಿಯುವವನೇ ಮೂರ್ಖ. ವೇದವೇ ಸನ್ಮಾರ್ಗ. ಅಜ್ಞಾನಾಭಿವೃದ್ಧಿಯೇ ನರಕ. ಚಿತ್ತಚಾಂಚಲ್ಯವೇ ಅಪಮಾರ್ಗ. ಸತ್ವಗುಣಾಭಿವೃದ್ಧಿಯೇ ಸ್ವರ್ಗ. ಗುರುವೂ, ಸ್ನೇಹಿತನೂ ಆದ ನಾನೇ ಅನಿಮಿತ್ತ ಬಂಧುವು. ಮಾನುಷ ಶರೀರವೇ ಮನೆ. ಭಕ್ತ್ಯಾದಿ ಗುಣವುಳ್ಳ ವನೇ ಆಢ್ಯನು. ದೊರೆತನದಲ್ಲಿ ತೃಪ್ತಿಯಿಲ್ಲದವನೇ ದರಿದ್ರನು. ವಿಷಯಗಳು ಕೆಟ್ಟವೆಂದು ತಿಳಿದಿದ್ದರೂ ಅವುಗಳ ಕಡೆಗೇ ಹೋಗುತ್ತಿರುವ ಇಂದ್ರಿಯಗಳನ್ನು ನಿಗ್ರಹಿಸಲು ಅಸಮರ್ಥನಾದವನೇ ಕೃಪಣನು. ವಿಷಯಾಸಕ್ತಬುದ್ಧಿಯುಳ್ಳವನಾಗಿ ವಿಷಯ ಸಂಗವುಳ್ಳವನೇ ವಿಪರೀತಗಾಮಿಯು ಅಂದರೆ ಅಡ್ಡದಾರಿ ಹಿಡಿದಿರುವವನು.

ಉದ್ಧವಾ ! ನಿನ್ನ ಪ್ರಶ್ನೆಗಳಿಗೆಲ್ಲ ಉತ್ತರವನ್ನು ಕೊಟ್ಟಿರುವೆನು. ಬಹುಮಾತಿ ನಿಂದೇನು ? ಶಾಸ್ತ್ರದ ತಾತ್ಪರ್ಯವನ್ನು ಹೇಳಿ ಬಿಡುವೆನು ಕೇಳು :- **ಶ್ರೀಹರಿಗೆ ಪ್ರಿಯವಾದುದು ಗುಣವು. ಅಪ್ರಿಯವಾದುದು ದೋಷವು.**

**ಹತ್ತೊಂಭತ್ತನೆಯ ಅಧ್ಯಾಯ ಮುಗಿದುದು**

**ಉದ್ಧವ** :– ದೇವ ! ವಿಧಿ ನಿಷೇಧಗಳನ್ನು ತಿಳಿಸುವ, ನಿನ್ನಾಜ್ಞಾರೂಪ ವಾದ ವೇದವು ಕರ್ಮಗಳ ಗುಣ ದೋಷಗಳನ್ನೂ, ವರ್ಣಾಶ್ರಮಗಳ ಭೇದವನ್ನೂ

ಮತ್ತು ಸ್ವರ್ಗನರಕಾದಿ ಫಲಗಳನ್ನೂ ಹೇಳುತ್ತವೆ. ಆದರೆ ಗುಣದೋಷಗಳನ್ನು ಗಮನಿಸದೆ ಮೋಕ್ಷವನ್ನು ಹೊಂದಲು ಹೀಗೆ ಕರ್ಮವನ್ನು ಮಾಡು ಎಂದು ನೀನು ಹೇಳುತ್ತಿರುವೆ. ವೇದಗಳಲ್ಲಿ ಹೇಳುತ್ತಿರುವುದನ್ನು ಬಿಟ್ಟು ನೀನು ಹೇಳುವುದೇ ಮೋಕ್ಷ ಸಾಧನವಾಗುವುದು ಹೇಗೆ ?

**ಶ್ರೀಕೃಷ್ಣ :–** ವೇದಗಳ ವಿಧಿ ಮತ್ತು ನಿಷೇಧಗಳ ಅರಿವು ಅಜ್ಞಾನಿಗಳಿಗೆ ಅಗತ್ಯವೇ ಸರಿ. ಆದರೆ ಜ್ಞಾನಿಗಳಿಗೆ ವೇದೋಕ್ತ ಕರ್ಮಗಳು ವಿಹಿತವಾದರೂ ಅದು ಹರಿಗೆ ಪ್ರೀತಿಕರವಾಗದಿದ್ದರೆ ದೋಷವೇ. ಹಾಗೆಯೇ ವೇದನಿಷಿದ್ಧವಾದರೂ ಹರಿಗೆ ಪ್ರೀತಿಕರವಾದರೆ ಅದು ಗುಣವೇ. ವಿಧಿ ನಿಷೇಧಗಳ ವಿವೇಕವೇ ಹೇಯ ವೆಂದು ನನ್ನ ಅಭಿಪ್ರಾಯವಲ್ಲ. ಭಗವತ್ಪ್ರೀತಿಗಳನ್ನು ಗಮನಿಸದೆ ಗುಣದೋಷ ವಿವೇಕವು ಅತಿಹೇಯವೆಂದು ನನ್ನ ಅಭಿಪ್ರಾಯವು ವೇದಗಳ ತಾತ್ಪರ್ಯವೂ ಇದೇ ಆಗಿರುವುದರಿಂದ, ವೇದಗಳು ಪ್ರಾಮಾಣಿಕಗಳೇ ಆಗಿವೆ. ಪ್ರತಿಯೊಬ್ಬ ಶ್ರೇಯ ಸ್ಸಾಧಕನೂ ತನ್ನ ಅಧಿಕಾರ ಯಾವುದು ಎಂದು ತಿಳಿದು, ಅದಕ್ಕನುಸಾರವಾಗಿ "ಕರ್ಮವು ಭಗವಂತನ ಅಪ್ಪಣೆ. ಆತನಿಗೆ ಅದು ಪ್ರೀತಿಯಾಗಲಿ" ಎಂಬ ಇಚ್ಛೆಯಿಂದ ಶ್ರದ್ಧಾಪೂರ್ವಕವಾಗಿ ಅದನ್ನು ಆಚರಿಸುವುದು ಗುಣವು. ತನಗಲ್ಲದ ಅಧಿಕಾರವನ್ನು ಹೊಂದುವುದು ದೋಷವು.

ಉದ್ಧವಾ ! ಅಧಿಕಾರ ಮತ್ತು ಅನಧಿಕಾರ ಯಾವುದೆಂಬುದನ್ನು ತಿಳಿಸುವೆನು ಕೇಳು :– ಮೋಕ್ಷ ಯೋಗ್ಯ ಮನುಷ್ಯರಿಗೆ ಶ್ರೇಯಸ್ಸನ್ನುಂಟುಮಾಡುವ ಇಚ್ಛೆಯಿಂದ ಜ್ಞಾನ, ಭಕ್ತಿ, ಕರ್ಮ, ಎಂಬ ಮೂರು ಮೋಕ್ಷಸಾಧನೆಗಳನ್ನು ಹೇಳಿರುವೆನು. ಇವನ್ನು ಬಿಟ್ಟು ಮೋಕ್ಷಸಾಧನವು ಬೇರೆ ಯಾವುದೂ ಇಲ್ಲ. ಸನಕಾದಿಗಳು ಜ್ಞಾನ ಯೋಗಿಗಳು. ದೇವತೆಗಳು ಭಕ್ತಿಯೋಗಿಗಳು. ಮನುಷ್ಯರು ಕರ್ಮಯೋಗಿಗಳು. ಮೋಕ್ಷಕ್ಕೆ ಸರ್ವರಿಗೂ ಈ ಮೂರೂ ಬೇಕು. ಈ ಮೂರು ಬಗೆಯ ಯೋಗಗಳಲ್ಲಿ ಒಬ್ಬೊಬ್ಬರಿಗೆ ಒಂದೊಂದು ಯೋಗವು ಅಧಿಕವಾಗಿರುವುದರಿಂದ ಜ್ಞಾಯೋಗಿ, ಭಕ್ತಿಯೋಗಿ ಮತ್ತು ಕರ್ಮಯೋಗಿ ಎಂದು ವ್ಯವಹಾರವಿದೆ.

ದೈವೇಚ್ಛೆಯಿಂದ ನನ್ನ ಕಥಾಶ್ರವಣಾದಿಗಳಲ್ಲಿ ಶ್ರದ್ಧೆ ಇದ್ದು ಅತಿ ವಿರಕ್ತನೂ, ನಿತ್ಯಸಂಪೂರ್ಣಭೋಗಿಯೂ ಆದ ದೇವತೆಗೆ ಭಕ್ತಿಯೋಗವು ಸಿದ್ಧಿಪ್ರದವು. ಜ್ಞಾನ ಯೋಗಿಗಳಿಗೂ, ಭಕ್ತಿ ಯೋಗಿಗಳಿಗೂ ಜ್ಞಾನ ಭಕ್ತಿಗಳುಂಟಾಗುವುದಕ್ಕೆ ಮೊದಲು ಕರ್ಮಯೋಗವು ಕರ್ತವ್ಯವು. ಅಧಿಕಾರಿಯು ನಿಷ್ಕಾಮನಾಗಿ ಸ್ವಧರ್ಮಾನುಷ್ಠಾನ ವನ್ನು ಮಾಡುತ್ತಿದ್ದರೆ ಸ್ವರ್ಗನರಕಗಳನ್ನು ಹೊಂದುವುದಿಲ್ಲ. ಸ್ವಧರ್ಮಾಚರಣೆ ಯಿಂದ ಶುದ್ಧಭಕ್ತಿಯನ್ನು ಹೊಂದಿ ಮುಕ್ತನಾಗುವನು. ಮಾನುಷ ಶರೀರವೇ

ಪುರುಷಾರ್ಥಸಾಧಕವಾದುದರಿಂದ ಸ್ವರ್ಗನರಕಗಳಲ್ಲಿರುವವರೂ ಮಾನುಷ ಶರೀರ ವನ್ನು ಅಪೇಕ್ಷಿಸುತ್ತಾರೆ. ವಿವೇಕಿಯಾದವನು ಮಾನುಷ ಶರೀರವನ್ನು ಹೊಂದಿರುವಾಗ ಆಲಸ್ಯವಿಲ್ಲದೆ ಮೋಕ್ಷವನ್ನು ಹೊಂದುವುದಕ್ಕಾಗಿ ಯತ್ನ ಮಾಡಬೇಕು. ಮರವನ್ನು ಕತ್ತರಿಸುತ್ತಿರುವಾಗ ಗೂಡಿನೊಳಗಿರುವ ಪಕ್ಷಿಯು ಅದನ್ನು ಬಿಟ್ಟು ಹಾರಿಹೋಗಿ ಸುರಕ್ಷಿತವಾಗಿರುವಂತೆ ಜೀವನೂ ಕಾಲದಿಂದ ನಾಶವಾಗುವ ದೇಹವನ್ನು ಬಿಟ್ಟು ಮೋಕ್ಷವನ್ನು ಹೊಂದುವನು. ಈ ಶರೀರವು ವಿನಾಶಿಯೆಂದು ತಿಳಿದು, ಮರಣಕ್ಕೆ ಮುಂಚೆ ಅಭಿಮಾನ ಬಿಟ್ಟು ಸರ್ವತ್ರ ಹರಿಯ ವ್ಯಾಪಾರವನ್ನು ಬಯಸಿ ಭಗವದ ಪರೋಕ್ಷ ಜ್ಞಾನವನ್ನು ಹೊಂದಬೇಕು. ಕಲ್ಪವೃಕ್ಷದಂತೆ ಅಭೀಷ್ಟ ಸಾಧನವಾದ ಮನುಷ್ಯ ಶರೀರವನ್ನು ಹೊಂದಿಯೂ ಸಂಸಾರ ಸಮುದ್ರವನ್ನು ದಾಟದಿರುವವನ ಜನ್ಮ ವ್ಯರ್ಥ. ಯೋಗಿಯು ಮೊದಲು ಮನಸ್ಸನ್ನು ನಿಗ್ರಹಿಸುವುದಕ್ಕೆ ಯತ್ನಿಸಬೇಕು. ಪ್ರಾಣಾಯಾಮ ಪ್ರತ್ಯಾಹಾರಗಳಿಂದ ಮನಸ್ಸನ್ನು ವಶಮಾಡಿಕೊಳ್ಳಬೇಕು. ಇದೇ ಮೋಕ್ಷಸಾಧನ ಉಪಾಯ. ಮನಸ್ಸು ಪ್ರಸನ್ನವಾಗುವವರೆಗೆ ತತ್ತ್ವಗಳು ಹರಿ ಯಿಂದಲೇ ಉತ್ಪನ್ನವಾಗಿ, ಅವನಿಂದಲೇ ಲಯವಾಗುವುವು ಎಂದು ಚಿಂತಿಸುತ್ತಿರ ಬೇಕು. ಕಾಮ್ಯಕರ್ಮಗಳಲ್ಲಿ ವಿರಕ್ತನಾಗಿ, ಮನಸ್ಸನ್ನು ಸಂಪೂರ್ಣವಾಗಿ ನಿಗ್ರಹಿಸಿ, ಯಮಾದಿ ಸಾಧನಗಳಿಂದಲೂ, ತತ್ತ್ವವಿದ್ಯೆಯಿಂದಲೂ, ಚಲಪ್ರತಿಮೆಗಳೆನಿಸಿದ ಬ್ರಾಹ್ಮಣ ಮತ್ತು ಸಂನ್ಯಾಸಿಗಳ ಹಾಗೂ ಅಚಲ ಪ್ರತಿಮೆಗಳ ಪೂಜೆಯಿಂದಲೂ, ಶುದ್ಧವಾದ ಮನಸ್ಸು ಹರಿಯನ್ನು ಸ್ಮರಿಸುವುದರಿಂದಲೂ ಮನಸ್ಸು ಹರಿಯನ್ನು ಸ್ಮರಿಸುವುದಕ್ಕೆ ಇವೇ ಉಪಾಯಗಳು. ಈ ಸಾಧನೆಗಳನ್ನು ಬಿಟ್ಟು ಬೇರೆ ಯಾವುದ ರಿಂದಲೂ ಮನಸ್ಸು ಹರಿಯನ್ನು ಸ್ಮರಿಸುವುದಿಲ್ಲ. ಶ್ರೀಹರಿಯ ಧ್ಯಾನದಿಂದಲೇ ಪಾಪ ಗಳನ್ನು ಕಳೆದುಕೊಳ್ಳಬೇಕು. ದೇವಾದಿಗಳಿಗೆ ನಾನು ಕೊಟ್ಟಿರುವ ಅಧಿಕಾರಕ್ಕೆ ತಕ್ಕಂತೆ ಅವರು ವಿಹಿತ ಕರ್ಮವನ್ನು ಮಾಡಿದರೆ ನನಗೆ ಪ್ರೀತಿಯಾಗುವುದು. ಅದೇ ಗುಣವೆನಿಸುವುದು. ಅದಕ್ಕೆ ವಿರುದ್ಧವಾದ ನಿಯಮವು ಪ್ರೀತಿಕರವಲ್ಲವಾದುದರಿಂದ ಅದು ದೋಷವೆನಿಸುವುದು. ಉದ್ಧವಾ ! ಗುಣದೋಷಗಳ ನಿರ್ಣಯವು ಹೀಗಿದೆ. ಅಜ್ಞರಿಗಾದರೋ ವೇದವಿಧಿಯು ಅಪೇಕ್ಷಿತವಾದುದರಿಂದ ವೇದ ವಿಧಾನವು ವ್ಯರ್ಥವಲ್ಲ.

ಗುಣದೋಷಗಳನ್ನು ಬಲ್ಲವರು ಭಕ್ತಿಯೋಗಿಗಳು. ಅವರ ಸ್ಥಿತಿಯನ್ನು ಹೇಳುವೆನು ಕೇಳು :— ನನ್ನ ಕಥೆಗಳನ್ನು ಕೇಳುವುದರಲ್ಲಿ ಶ್ರದ್ಧೆಯಿರತಕ್ಕ ಭಕ್ತನು ಕಾಮಗಳು ದುಃಖಸ್ವರೂಪಗಳೆಂದು ತಿಳಿದಿದ್ದರೂ, ಪ್ರಾರಬ್ಧಕರ್ಮದಿಂದ ಅದನ್ನು ಬಿಡಲು ಅಶಕ್ತನಾದರೆ, ನನ್ನನ್ನು ಭಜಿಸುತ್ತ, ನಿಷಿದ್ಧ ವಿಷಯಗಳನ್ನು ಪ್ರೀತಿಸದೆ ನಿಂದಿಸುತ್ತ, ಏನೇ ಆಗಲೀ ಭಗವಂತನ ಉಪಾಸನೆಯನ್ನು ಬಿಡುವುದೇ ಇಲ್ಲ ಎಂದು ದೃಢನಿಶ್ಚಯವನ್ನು ಮಾಡಿ ಧ್ಯಾನಿಸುವ ಯೋಗಿಗೆ ಹೃದಯದಲ್ಲಿ ನಾನು

ಪ್ರಕಟನಾಗುವೆನು. ಆಗ ಅವನಿಗೆ ಇಷ್ಟವಲ್ಲದ ಕಾಮಗಳೆಲ್ಲ ನಾಶ ಹೊಂದುವುವು. ಭಕ್ತಿಯೋಗಿಗಳಾದ ದೇವತೆಗಳು ಇಂದ್ರಾದಿ ಪದವಿಗಳನ್ನು ಅಪೇಕ್ಷಿಸಿದರೂ ಅಂದರೆ ಅವುಗಳಲ್ಲಿ ವಿರಕ್ತರಾಗಿ ಬೇಡವೆನಿಸಿದ್ದರೂ ಮುಕ್ತಿಯನ್ನು ಅವರು ಹೊಂದಿಯೇ ತೀರುವರು.

ಸತ್ಕರ್ಮ, ತಪಸ್ಸು ಮೊದಲಾದುವುಗಳಿಂದ ಆಗತಕ್ಕ ಚಿತ್ತಶುದ್ಧಿಯೂ ಭಕ್ತಿಯೋಗದಿಂದಲೇ ಆಗುತ್ತದೆ. ಒಂದು ವೇಳೆ ಸ್ವರ್ಗವನ್ನಾಗಲಿ, ಮೋಕ್ಷವನ್ನಾಗಲಿ ಬಯಸಿದರೂ ಭಕ್ತಿಯಿಂದಲೇ ಅವುಗಳನ್ನೂ ಹೊಂದುವನು. ಏಕಾಂತ ಭಕ್ತರು ನಾನು ಕೊಡುವ ಮುಕ್ತಿಯನ್ನು ತಮ್ಮ ಭಕ್ತಿಗೆ ಫಲವೆಂದು ಸ್ವೀಕರಿಸುವುದೇ ಇಲ್ಲ. ನಾನು ಹೇಳಿದಂತೆ ನಡೆಯುವವರೇ ವೈಕುಂಠವನ್ನು ಹೊಂದಬಲ್ಲರು. ಆದುದರಿಂದ ನನ್ನಲ್ಲಿ ಭಕ್ತಿಯನ್ನು ಮಾಡುವುದೇ ಶ್ರೇಷ್ಠವು.

## ಇಪ್ಪತ್ತನೆಯ ಅಧ್ಯಾಯ ಮುಗಿದುದು

**ಶ್ರೀಕೃಷ್ಣ** ;— ಉದ್ಧವನೇ ! ಭಕ್ತಿ, ಜ್ಞಾನ ಮತ್ತು ಕರ್ಮಯೋಗಗಳೆಂಬ ಮೋಕ್ಷಮಾರ್ಗವನ್ನು ಬಿಟ್ಟು ಕ್ಷುದ್ರ ಕಾಮಗಳನ್ನು ಸೇವಿಸುವವರು ಸಂಸಾರದಲ್ಲಿಯೇ ಸುತ್ತುತ್ತಿರುವರು.

**ಅವ** :— ಗುಣದೋಷಗಳನ್ನು ಹೇಳಲು ಉದ್ದೇಶ್ಯವೇನೆಂದರೆ :— ಇದು ಶುದ್ಧ – ಇದು ಅಶುದ್ಧ ಎಂಬ ವಿಚಾರದಿಂದ ಸಂಪಾದಿಸುವ ಜ್ಞಾನವು ಪುಣ್ಯಾಧಿಕ್ಯವನ್ನುಂಟು ಮಾಡುತ್ತದೆ. ಆದುದರಿಂದ ಶುದ್ಧವಾದುದು ಗುಣವೆಂದೂ, ಅಶುದ್ಧವಾದುದು ದೋಷವೆಂದೂ ಹೇಳಿರುವೆನು. ಇದು ಶುದ್ಧ ಪದಾರ್ಥವು. ಇದು ಅಶುದ್ಧ ಪದಾರ್ಥವು ಎಂದು ವ್ಯವಸ್ಥೆ ಮಾಡಲು ಯಾವುದನ್ನು ಅನುಸರಿಸಬೇಕು ? ಎಂದರೆ ಕೇಳು :—

ಜಗತ್ತಿನಲ್ಲಿರುವ ಸಕಲ ವಸ್ತುಗಳೂ ಪಂಚಭೂತಾತ್ಮಕಗಳಾಗಿರುವುದರಿಂದ ಎಲ್ಲವೂ ಸಮಾನಗಳೇ ಆಗಿದ್ದರೂ, ನನ್ನ ಸನ್ನಿಧಾನ ಅಂದರೆ "ಸನ್ನಿಧಾನಂ ಹಿ ತತ್ ಪ್ರೋಕ್ತಂ ಸಾಮರ್ಥ್ಯಂವ್ಯಂಜನಂ ಹರೇಃ" ಎಂಬ ವಚನದಂತೆ ಹರಿಯ ಸಾಮರ್ಥ್ಯ ಪ್ರಕಟನೆಯುಳ್ಳ ಪದಾರ್ಥವು ಶುದ್ಧವೆಂದೂ, ಅದಿಲ್ಲದಿರುವುದು ಅಶುದ್ಧವೆಂದೂ ವ್ಯವಸ್ಥಿತವಾಗಿದೆ.

ಧರ್ಮಪ್ರವರ್ತಕನಾದ ನಾನು ಭಕ್ತರಿಗೆ ಪುಣ್ಯ ಬರುವುದಕ್ಕಾಗಿಯೂ ಮತ್ತು ಭಕ್ತರಿಗೆ ಇದು ಶುದ್ಧ – ಇದು ಅಶುದ್ಧ ಎಂಬ ನಿಶ್ಚಯ ಜ್ಞಾನಕ್ಕಾಗಿಯೂ, ಶುದ್ಧ

ಗುಣಗಳು ಶುಭಕರಗಳು. ಆದುದರಿಂದ ಅವುಗಳನ್ನು ನನ್ನ ಭಕ್ತರು ಸಂಪಾದಿಸಲಿ ಎಂದೂ, ಅಶುದ್ಧಗಳು ದೋಷಗಳಾದುದರಿಂದ ಅವುಗಳನ್ನು ತ್ಯಜಿಸಲಿ ಎಂಬುವುದಕ್ಕಾಗಿಯೂ ಧರ್ಮಶಾಸ್ತ್ರವೆಂಬ ಆಚಾರವನ್ನು ತೋರಿಸಿರುವೆನು. ಸರ್ವಪ್ರಾಣಿಗಳ ಶರೀರದಲ್ಲಿರುವ ಪಂಚಭೂತಗಳಲ್ಲಿ ಶ್ರೀಹರಿಯಾದ ನನ್ನ ಸಂನಿಧಾನವಿದೆ. ಬ್ರಹ್ಮಾದಿ ಪ್ರಾಣಿ ಗಳಲ್ಲಿಯೂ ನಾನು ಸಂನಿಹಿತನಾಗಿರುವುದರಿಂದ ಅವರು ಶುದ್ಧರೆನಿಸುವರು. ನನ್ನ ಸನ್ನಿಧಾನವುಳ್ಳ ಕೆಲವು ಪದಾರ್ಥಗಳೂ, ಜೀವರಲ್ಲಿ ಕೆಲವರೂ ಶುದ್ಧತರರೂ ಎಂದು ಕರೆಯಲ್ಪಡುವರು. ಇದರಿಂದ ಭೇದವೂ, ತಾರತಮ್ಯವೂ ತಿಳಿಯಲ್ಪಡುವುದು. ಪರಮಾತ್ಮನು ಸ್ವಾಭಾವಿಕವಾಗಿ ಮುಖ್ಯ ಶುಚಿಯಾದವನು ಎಂದು ತಿಳಿಯಬೇಕು. ಹೀಗೆ ತಿಳಿಯುವುದರಿಂದ ಮೋಕ್ಷವು ದೊರೆಯುವುದು. ನನ್ನ ವಚನವೇ ದೇಶಕಾಲಾದಿ ಗಳ ಗುಣದೋಷಗಳ ವಿವೇಚನೆಯನ್ನೂ, ಫಲಸಾಧನಗಳಾದ ಕರ್ಮಗಳನ್ನೂ ತಿಳಿಸುತ್ತವೆ.

ಶುದ್ಧದೇಶಗಳಾವುವೆಂದರೆ :– ಕೃಷ್ಣಸಾರಮೃಗವು ಇರುವ ದೇಶವು ಸದಾಚಾರ ಕರ್ಮಕ್ಕೆ ಶುದ್ಧವು. ಸೌವೀರ, ಕೀಟಕ ಅಂದರೆ ಸಾಲಗ್ರಾಮ – ದೇವರಗುಡಿಗಳಿಲ್ಲದ ಅಸಂಸ್ಕೃತ ಅಂದರೆ ಎಲುಬುಗಳಿರುವ ಸ್ಥಳಗಳು ಮತ್ತು ಹರಿದ್ವೇಷಿಗಳಿರುವ ಸ್ಥಳ ಮತ್ತು ಈರಿಣ ಅಂದರೆ ಉಪ್ಪಿನ ಉತ್ಪತ್ತಿ ಸ್ಥಾನಗಳಾದ ಉಪದ್ವೀಪಗಳು ಈ ಸ್ಥಳ ಗಳಲ್ಲಿ ಹೆಣ್ಣು ಜಿಂಕೆಗಳಿದ್ದರೂ ಸದಾಚಾರಕ್ಕೆ ಅರ್ಹಗಳಲ್ಲ.

**ಕರ್ಮಯೋಗ್ಯಕಾಲ** :- ವಸಂತಾದಿ ಕಾಲವೂ, ಸಂಧ್ಯಾದಿ ಕಾಲವೂ ಕರ್ಮಯೋಗ್ಯಗಳಾಗಿವೆ. ಅರ್ಧರಾತ್ರಿಯ ಕಾಲವು ಕರ್ಮಕ್ಕೆ ಯೋಗ್ಯವಾದ ಕಾಲವಲ್ಲ. ತಾಮ್ರದ ಪಾತ್ರೆಯು ಹುಣಿಸೆಹಣ್ಣಿನಿಂದ ಶುದ್ಧಿ. ವಸ್ತ್ರವು ನೀರಿನಿಂದ ಶುದ್ಧಿ. ಪಾತ್ರೆ ಮುಂತಾದುವುಗಳಿಗೆ ಎಂಜಲು, ಮಲ, ಹೆಂಡ ಮೊದಲಾದ ಸಂಬಂಧ ಎಂದರೆ ತಗುಲಿದರೆ ಅವು ಅಶುದ್ಧಗಳಾಗುವುವು. ದೊಡ್ಡವರ ಮಾತಿನಿಂದ ಸೋರೇಬುರುಡೆ ಯತಿಗಳಿಗೆ ಪಾತ್ರೆಯಾಗಲು ಅರ್ಹವಾಗಿರುವುದರಿಂದ ಅದು ಶುದ್ಧವೆನಿಸುವುದು. ದೊಡ್ಡವರು ಯಾವುದನ್ನು ತಿನ್ನಬಾರದೆಂದು ನಿಷೇಧಿಸಿರುವರೋ ಅದನ್ನು ತಿಂದರೆ ಅಶುದ್ಧನಾಗುವನು. ಪುಷ್ಪಾದಿಗಳಿಗೆ ಜಲಪ್ರೋಕ್ಷಣಾದಿ ಸಂಸ್ಕಾರ ಮಾಡಿದರೆ ಅವು ಶುದ್ಧಗಳಾಗುವುವು. ಇಲ್ಲವಾದರೆ ಅವು ಅಶುದ್ಧಗಳೇ ಸರಿ. ಮ್ಲೇಚ್ಛನು ಬಾಡಿಗೆಯಿದ್ದ ಮನೆಯನ್ನು ಬಿಟ್ಟು ಹೋದರೆ ಆ ಮನೆಯು ಬಹುಕಾಲದ ಮೇಲೆ ಶುದ್ಧವಾಗುವುದೇ ಹೊರತು ತಕ್ಷಣ ಶುದ್ಧವಲ್ಲ. ಯಾಮಾದಿ ಕಾಲ ಕಳೆದ ಅನ್ನ ಅಶುದ್ಧ. ರಾಶಿ ಅನ್ನಕ್ಕೆ ನಾಯಿಯು ಬಾಯಿ ಹಾಕಿದಾಗ ಆ ಭಾಗದ ಅನ್ನವನ್ನು ತೆಗೆದು ಹಾಕಿದರೆ ಆ ಅನ್ನ ರಾಶಿಯು ಶುದ್ಧ. ನಾಯಿಯು ಮುಟ್ಟಿದ ಅನ್ನ ಅಶುದ್ಧ.

**ಕರ್ಮದ ಅಂಗಗಳ ಶುದ್ಧಿ ಪ್ರಕಾರ** :– ಸ್ನಾನದಾನಾದಿಗಳಿಂದಲೂ, ಭಗವಂತನ ಸ್ಮರಣೆಯಿಂದಲೂ. ದೇಹ ಮತ್ತು ಮನಸ್ಸು ಶುದ್ಧವಾಗುವುವು. ಆಗಲೇ ಯಜ್ಞ, ವ್ಯಾಖ್ಯಾನ ಮೊದಲಾದ ಅಭೀಷ್ಟವಾದ ಕರ್ಮವನ್ನು ಆರಂಭಿಸಬೇಕು. ಕರ್ಮಾಂಗ ಭೂತವಾದ ಮಂತ್ರಕ್ಕೆ ಋಷ್ಯಾದಿಗಳು ಇರುವರೆಂದು ತಿಳಿದುಕೊಂಡು ಕರ್ಮ ಮಾಡಿ ನನಗೆ ಅರ್ಪಿಸಿದರೆ ಆಗ ಈ ಕರ್ಮವು ಶುದ್ಧವೆನಿಸುವುದು. ಮಾಡಿದ ಸತ್ಕರ್ಮ ವನ್ನು ನನಗೇ ಅರ್ಪಿಸುವುದರಿಂದ ಭಕ್ತಿಯು ಉಂಟಾಗುವುದು. ನನಗೆ ಅರ್ಪಿಸದ ಕರ್ಮದಿಂದ ಪಾಪವು ಬರುತ್ತದೆ. ಅಭಕ್ತರು ವೇದವಿಹಿತ ಕರ್ಮವನ್ನು ಮಾಡಿದರೂ ಶ್ರೀಹರಿಯ ಅಪ್ರೀತಿಗೆ ಸಾಧನವಾದ ದೋಷವೇ ಬರುವುದು. ದೋಷವೆಂದು ತೋರತಕ್ಕ ವೃತ್ರಹತ್ಯಾದಿ ಕರ್ಮವೂ ಹರಿಯ ಪ್ರೀತಿಗೆ ಕಾರಣವಾದರೆ ಅದೇ ಗುಣವಾಗುವುದು. ಇದಕ್ಕೆ ಆಧಾರ :– 'ಇಂದ್ರೋ ವೃತ್ರಂ ಹತ್ವಾ ಮಹಾನಭೂತ್' ಶ್ರುತಿ. ಜರಾಸಂಧನು ಪ್ರತಿದಿನವೂ ಬ್ರಾಹ್ಮಣರಿಗೆ ದಾನ ಮಾಡಿದರೂ, ಅವನು ಹರಿಯಲ್ಲಿ ದ್ವೇಷ ಮಾಡಿದುದರಿಂದ ಆ ದಾನವು ನಿತ್ಯನರಕಕ್ಕೆ ಕಾರಣವಾಯಿತು. ಗುಣ ದೋಷಗಳನ್ನೂ, ಅವುಗಳ ಫಲಗಳಿಂದ ಸ್ವರ್ಗನರಕಗಳನ್ನೂ ತಿಳಿದಿದ್ದರೂ ಅವುಗಳನ್ನು ಅನುಸರಿಸದಿರುವವರಿಗೆ ನರಕವು ತಪ್ಪುವುದಿಲ್ಲ. ತಿರ್ಯಗಾದಿ ಪ್ರಾಣಿಗಳು ನಿಷಿದ್ಧ ಕರ್ಮಗಳನ್ನು ಮಾಡಿದರೂ, ಅವುಗಳಿಗೆ ವಿವೇಕವಿಲ್ಲದುದರಿಂದ ದೋಷ ಬರುವುದಿಲ್ಲ. ಶೂದ್ರನು ನೀರುಳ್ಳಿ, ಮೂಲಂಗಿ, ಸಪ್ಸಿಗೆಸೊಪ್ಪು, ಮುಂತಾದುವು ಗಳನ್ನು ತಿಂದರೂ ದೋಷವೂ ಬರುವುದಿಲ್ಲ. ಆದರೆ ವೈಷ್ಣವದೀಕ್ಷೆಯನ್ನು ಹೊಂದಿರುವ ಶೂದ್ರರು ತಿಂದರೆ ದೋಷ ಬರುವುದು.

ವಿಹಿತ ಕರ್ಮವನ್ನು ಅಹಂಕಾರ ರಹಿತನಾಗಿ, ಶ್ರೀಹರಿಗೆ ಪ್ರೀತಿಯಾಗುವಂತೆ ಮಾಡಿದರೆ ಅದು ಬಂಧಕವಾಗದೆ ಮುಕ್ತಿಗೆ ಕಾರಣವಾಗುತ್ತದೆ. ಅಹಂಕಾರಿಗೆ ದುರ್ಜನ ಸಂಗದಿಂದ ವಿಷಯಗಳಲ್ಲಿ ಸ್ನೇಹವುಂಟಾಗಿ ಅತ್ಯಂತ ಭೋಗದ ಆಶೆ ಯುಂಟಾಗುವುದು. ಅವನಲ್ಲಿ ಕಲಿಯು ಪ್ರವೇಶಿಸುವನು. ಅವನಿಗೆ ಸ್ಮೃತಿಯೇ ಇರುವುದಿಲ್ಲ. ಕೋಪಮೋಹಗಳಿಂದ ಅಂತಹವನು ಮೋಕ್ಷಾದಿ ಪುರುಷಾರ್ಥಗಳನ್ನು ಕಳೆದುಕೊಳ್ಳುವನು. ದುಃಖಾಧಿಕ್ಯದಿಂದ ತನ್ನನ್ನೂ, ಇತರರನ್ನೂ ತಿಳಿಯುವುದಿಲ್ಲ. ವ್ಯರ್ಥವಾಗಿ ಜೀವಿಸುತ್ತ ದುಃಖಿಯಾಗಿ ನಿಟ್ಟುಸಿರನ್ನು ಬಿಡುವನು. ಆದ್ದರಿಂದ ಹೆಣ್ಣು–ಹೊನ್ನು–ಮಣ್ಣು ಮುಂತಾದ ವಿಷಯಗಳನ್ನೇ ಬಯಸಬಾರದು. ವೇದಾಭಿಪ್ರಾಯವನ್ನು ತಿಳಿಯದ ಅಸುರರು ಮೋಕ್ಷವಿಷಯವನ್ನು ತಿಳಿಸತಕ್ಕ ಶ್ರುತಿಯನ್ನು ಸ್ವರ್ಗವಿಷಯಕವನ್ನಾಗಿ ಹೇಳುತ್ತಾರೆ. ಪಶುವಧೆ ಮಾಡಿ, ರುದ್ರಾದಿ ಗಳನ್ನು ಸರ್ವೋತ್ತಮರೆಂದು ಪೂಜಿಸಿ, ಕೊನೆಯಲ್ಲಿ ನಿತ್ಯನರಕಕ್ಕೆ ಗುರಿಯಾಗಿ ಬಹಳವಾಗಿ ದುಃಖಿಸುತ್ತಾರೆ.

ವೇದಗಳು ಪರಬ್ರಹ್ಮ, ದೇವತೆಗಳು ಮತ್ತು ಕರ್ಮಗಳನ್ನು ಹೇಳುವಂತೆ ಮೇಲ್ನೋಟಕ್ಕೆ ತೋರಿದರೂ, ಉತ್ತಮಾಧಿಕಾರಿಗಳಿಗೆ ಕೇವಲ ಪರಬ್ರಹ್ಮ ಸ್ವರೂಪ ಪ್ರತಿಪಾದಕಗಳಾಗಿವೆ. ವೇದವು ನನಗೆ ಪ್ರಿಯವಾದ ಗೂಢಾರ್ಥವನ್ನೇ ಹೇಳತಕ್ಕುದು. ನನ್ನ ಅನುಗ್ರಹವಿಲ್ಲದೆ ವೇದಾರ್ಥವನ್ನು ತಿಳಿಯುವುದು ಅಶಕ್ಯ. ನನ್ನ ಅನುಗ್ರಹಕ್ಕೆ ಪಾತ್ರರಾದ ಮುಖ್ಯಪ್ರಾಣಾದಿದೇವತೆಗಳು ವಿನಾಶವಿಲ್ಲದ ಮತ್ತು ಪರಿಮಿತಿಯಿಲ್ಲದ ವೇದವನ್ನು ತಿಳಿಯಬಲ್ಲರು. ಅನಂತಗುಣಪೂರ್ಣನೂ, ಬ್ರಹ್ಮಾದಿ ಸರ್ವ ಶಬ್ದವಾಚ್ಯನೂ ಆದ ನನ್ನನ್ನು ವೇದವು ಪ್ರತಿಪಾದಿಸಿದರೇ ಅದು ಪೂರ್ಣಾರ್ಥವುಳ್ಳದ್ದಾಗುವುದು. ಜೇಡರ ಹುಳುವು ಮುಖದಿಂದ ದಾರವನ್ನು ಹೊರಡಿಸಿ, ತಿರುಗಿ ಹೃದಯದಲ್ಲಿ ಇಟ್ಟುಕೊಳ್ಳುವಂತೆ, ನನ್ನ ಅನುಗ್ರಹದಿಂದ ಮುಕ್ತಿಪ್ರದನಾದ ಮುಖ್ಯ ಪ್ರಾಣದೇವನು ತನ್ನಲ್ಲಿದ್ದುದು, ಶ್ರೀವಿಷ್ಣುವಿನ ಮಹಿಮೆಯನ್ನು ತಿಳಿಸತಕ್ಕುದೂ, ಅನಂತ ಶಾಖೆಗಳನ್ನುಳ್ಳುದೂ ಆದ ಶ್ರುತಿಯನ್ನು ಸೃಷ್ಟಿಕಾಲದಲ್ಲಿ ರುದ್ರಾದಿಗಳಿಗೆ ಉಪದೇಶಿಸಿ, ಕಲ್ಪಾಂತರದಲ್ಲಿಯೇ ಒಳಗೆ ಇಟ್ಟುಕೊಳ್ಳುತ್ತಾನೆ. ಹೀಗೆ ಭಗವಂತನನ್ನೇ ಮುಖ್ಯವಾಗಿ ಹೊಗಳುವ ಸಕಲ ವೇದಗಳೂ ಸರ್ವ ಅವತಾರಗಳಲ್ಲಿ ಅಭಿನ್ನನೂ, ನಿರ್ದೋಷನೂ ಆದ ನನ್ನನ್ನು ಪ್ರತಿಪಾದಿಸುತ್ತಾ ನನ್ನ ಉಪಾಸನೆಗಾಗಿ, ನನ್ನಿಚ್ಛೆಯಿಂದ ನಿರ್ಮಿತವಾದ ಸ್ಥೂಲದೇಹಾದಿಗಳನ್ನು ನಿರೂಪಿಸಿ, ಅಪರೋಕ್ಷಜ್ಞಾನಾನಂತರ ದೇಹತ್ಯಾಗವೇ ಮೋಕ್ಷವು ಎಂದೂ ತಿಳಿಸಿ ಮೋಕ್ಷದಲ್ಲಿ ಕೇವಲ ಭಗವಂತನನ್ನೇ ಪ್ರತಿಪಾದಿಸಿಕೊಂಡಿರುತ್ತವೆ.

### ಇಪ್ಪತ್ತೊಂದನೆಯ ಅಧ್ಯಾಯ ಮುಗಿದುದು

**ಉದ್ಧವ :–** ಸ್ವಾಮಿಯೇ ! ತತ್ತ್ವಗಳು ಎಷ್ಟು ? ನೀನು ಇಪ್ಪತ್ತೆಂಟು ಎಂದು ಹೇಳಿರುವೆ. ಋಷಿಗಳು 25, 29, 11, 9, 7, 6, 4 ಇತ್ಯಾದಿ ಪ್ರಕಾರದಲ್ಲಿ ಹೇಳುತ್ತಾರೆ. ಅವರೆಲ್ಲ ಜ್ಞಾನಿಗಳಾದುದರಿಂದ ವ್ಯತ್ಯಾಸವಾಗಿ ಹೇಳುವವರಲ್ಲ. ಬೇರೆ ಬೇರೆ ದೃಷ್ಟಿಯಿಂದ ಹೇಳಿರಬಹುದು. ಆ ವಿವಕ್ಷೆಯನ್ನು ತಿಳಿಸು.

**ಶ್ರೀಕೃಷ್ಣ :–** ಋಷಿಗಳು ವೇದ ವಿಚಾರ ಚತುರರು. ತತ್ತ್ವಗಳನ್ನು ಹಾಗೆ ಹೇಳುವುದರಲ್ಲಿ ಯುಕ್ತಿಯು ಇದೆ. ವಿವಿಧ ತತ್ತ್ವಗಣನೆಯೂ ಪ್ರಾಮಾಣಿಕವು. ನನ್ನಲ್ಲಿಯೇ ಅಂತಃಕರಣವನ್ನಿಟ್ಟು, ಅಹಂಕಾರ ಬಿಟ್ಟು ವಿಚಾರ ಮಾಡಿದರೆ ಭಗವಂತನಾದ ನನ್ನ ಮತಕ್ಕೆ ವಿರೋಧವಿಲ್ಲದ ಜ್ಞಾನವುಂಟಾಗುವುದು.

ಉದ್ಧವಾ ! ಕಾರ್ಯತತ್ತ್ವದಲ್ಲಿ ಕಾರಣತತ್ತ್ವವೂ, ಕಾರಣತತ್ತ್ವದಲ್ಲಿ ಕಾರ್ಯತತ್ತ್ವವೂ ಪ್ರವೇಶಿಸುವುದರಿಂದ ವಕ್ತೃವಿನ ವಿವಕ್ಷೆಯಿಂದ ತತ್ತ್ವಗಣನೆಯಲ್ಲಿ ವ್ಯತ್ಯಾಸವುಂಟಾಗುವುದು.

ಋಷಿಗಳೆಲ್ಲರೂ ಈಶ್ವರನು ಜೀವಭಿನ್ನನೆಂದು ಒಪ್ಪಿರುವರು. ಜೀವನು ಅನಾದಿ ಕಾಲವನ್ನು ಆರಂಭಿಸಿ ಅವಿದ್ಯಾಕಾಮಕರ್ಮಗಳಿಂದ ಪರತಂತ್ರನಾಗಿರುವನು. ಅವನಿಗೆ ತನ್ನ ರೂಪದ ಜ್ಞಾನವಾಗಲೀ, ಪರಮಾತ್ಮನ ಅಪರೋಕ್ಷ ಜ್ಞಾನವಾಗಲೀ ತಾನಾಗಿ ಹುಟ್ಟಲಾರದು. ಆದ್ದರಿಂದ ವಿಷ್ಣುವು ಜೀವರಿಂದ ಭಿನ್ನನೇ. ಪುರುಷ ನಾಮಕ ಹರಿಯ ರೂಪಕ್ಕೂ ಹೊರಗಿರುವ ಮುಕ್ತಿಪ್ರದ ಈಶ್ವರ ರೂಪಕ್ಕೂ ಭೇದವಿಲ್ಲ. ಜ್ಞಾನ ಸ್ವರೂಪವಾದ ಜೀವನಿಗೆ ಒಳಗಿರುವ ಪುರುಷ ರೂಪದ ಹರಿಯು ಜ್ಞಾನವನ್ನು ಹುಟ್ಟಿಸುತ್ತಾನೆಂಬುದು ಹೇಗೆ ಕೂಡುತ್ತದೆ ? ಎಂದರೆ ಜನ್ಯ ಜ್ಞಾನವು ಸತ್ವಗುಣದಿಂದ ಹುಟ್ಟುವುದು. ವಿಷ್ಣುವು ಜೀವನ ಸ್ವರೂಪಜ್ಞಾನವನ್ನು ನಿಯಮಿಸುವನು. ಭಕ್ತ್ಯಾದಿ ಸಾಧನವನ್ನು ಮಾಡಿದ ಜೀವನಿಗೆ ಪುರುಷರೂಪೀ ಹರಿಯು ಪ್ರಾಕೃತ ಜ್ಞಾನವನ್ನು ಹುಟ್ಟಿಸುವನು.

ಸೃಷ್ಟಿಕಾಲದಲ್ಲಿ ಜೀವನಿಗೆ ಸತ್ವಗುಣದಿಂದ ಜ್ಞಾನವೂ, ರಜೋಗುಣದಿಂದ ಕರ್ಮವೂ, ತಮೋಗುಣದಿಂದ ಅಜ್ಞಾನವೂ ಹುಟ್ಟುತ್ತದೆ. ಗುಣಗಳನ್ನು ತತ್ತ್ವಗಳ ರೂಪದಿಂದ ವಿಕಾರ ಹೊಂದಿಸತಕ್ಕ ಹರಿಗೆ ಕಾಲ ಎಂದು ಹೆಸರು. ಅವನು ಸ್ವತಂತ್ರ, ಸರ್ವಾಧಾರ.

ಒಂಭತ್ತೇ ತತ್ತ್ವಗಳು ಎಂದು ಹೇಳುವವರು ಎಣಿಸುವ ಕ್ರಮವು ಹೀಗಿದೆ :- ಹಿರಣ್ಯಗರ್ಭ, ಗಾಯತ್ರಿ, ರುದ್ರ, ಸ್ಕಂದ, ಆಕಾಶ, ಅನಿಲ, ಜ್ಯೋತಿ, ಜಲ ಮತ್ತು ಭೂಮಿ. ಒಟ್ಟು ಒಂಭತ್ತು. ಸತ್ವ, ರಜಸ್ಸು, ತಮಸ್ಸು ಎಂಬ 3 ಗುಣಗಳು ಮೂರು ತತ್ತ್ವಗಳು.

ಏಳು ತತ್ತ್ವಗಳು :- ಶಬ್ದಾದಿ 5 ವಿಷಯಗಳು. ಅಥವಾ ಪಂಚಭೂತಗಳು, ಜ್ಞಾನನಾಮಕ ಬ್ರಹ್ಮ ಮತ್ತು ಪರಮಾತ್ಮ.

ಒಂಭತ್ತು ತತ್ತ್ವಗಳು :- ಪಂಚಭೂತಗಳು, ಪರಮಾತ್ಮ, ದೇಹಾಭಿಮಾನೀ ದಿವಾಕರ, ಇಂದ್ರಿಯಾಭಿಮಾನೀ ಇಂದ್ರ ಮತ್ತು ಪ್ರಾಣ.

ಆರು ತತ್ತ್ವಗಳು :- ಪಂಚಭೂತಗಳು ಮತ್ತು ಪರಮಾತ್ಮನು,

ನಾಲ್ಕು ತತ್ತ್ವಗಳು :- ತೇಜಸ್ಸು, ಜಲ, ಪೃಥಿವಿ, ಪರಮಾತ್ಮನು.

17 ತತ್ತ್ವಗಳು :- ಪಂಚಭೂತಗಳು, ರೂಪಾದಿ ಪಂಚ ವಿಷಯಗಳು, ಪಂಚಜ್ಞಾನೇಂದ್ರಿಯಗಳು, ಮನಸ್ಸು ಮತ್ತು ಪರಮಾತ್ಮನು.

11 ತತ್ತ್ವಗಳು :- ಪಂಚಭೂತಗಳು, ಶಬ್ದ, ರೂಪ ಮೊದಲಾದ ಐದು ವಿಷಯಗಳು, ಪರಮಾತ್ಮನು.

16 ತತ್ತ್ವಗಳು .– ಪಂಚಭೂತಗಳು, ಶಬ್ದಾದಿ ಪಂಚ ವಿಷಯಗಳು, ಪಂಚಜ್ಞಾನೇಂದ್ರಿಯಗಳು ಮತ್ತು ಮನಸ್ಸು.

13 ತತ್ತ್ವಗಳು ;– ಪಂಚಭೂತಗಳು, ಪಂಚ ಜ್ಞಾನೇಂದ್ರಿಯಗಳು, ಮನಸ್ಸು, ಬ್ರಹ್ಮ ಮತ್ತು ವಿಷ್ಣು.

ಸರ್ವಮತಗಳಲ್ಲಿಯೂ ಯುಕ್ತಿಯಿರುವುದರಿಂದ ತತ್ತ್ವಗಳನ್ನು ನಾನಾ ಪ್ರಕಾರ ವಾಗಿ ಗಣನೆ ಮಾಡಿರುವುದು ಯುಕ್ತವಾಗಿದೆ.

**ಉದ್ಧವ** :– ಪ್ರಕೃತಿ ಮತ್ತು ಪುರುಷ ಇವೆರಡೂ ಸಮಾನವೆಂದು ತೋರು ವುದು. ಈ ಭ್ರಾಂತಿಗೆ ಕಾರಣವೇನು ?

**ಶ್ರೀಕೃಷ್ಣ** :– ತ್ರಿಗುಣ ಸ್ವರೂಪವು, ನನ್ನ ಆಧೀನವೂ ಆಗಿರುವ ಪ್ರಕೃತಿ ಮತ್ತು ನನ್ನ ಇಚ್ಛೆಯು, ಹರಿಯು ನಿರ್ಗುಣನು, ಪ್ರಕೃತಿಯೂ ಹರಿಯೂ ಸಮರು' ಇತ್ಯಾದಿ ಭ್ರಮರೂಪವಾದ ಬುದ್ಧಿಯನ್ನು ಹುಟ್ಟಿಸುತ್ತದೆ. ಅಹಂಕಾರವಿದ್ದರೇ ಭ್ರಮೆಯು ಹುಟ್ಟುವುದು. ವೈಕಾರಿಕ, ತೈಜಸ ಮತ್ತು ತಾಮಸ ಎಂದು ಅಹಂಕಾರವು ಮೂರು ಬಗೆ. ಸೂರ್ಯಾದಿಗಳು ವೈಕಾರಿಕಾಹಂಕಾರಗಳಿಂದ ಹುಟ್ಟಿರುವ ಕಾರಣ ಅಹಂಕಾರದ ಅಧಿದೈವವೆನಿಸುವರು. ತೈಜಸಾಹಂಕಾರದಿಂದ ಚಕ್ಷುರಾದಿ ಇಂದ್ರಿಯ ಗಳು. ಹುಟ್ಟಿರುವುದರಿಂದ ಅಧ್ಯಾತ್ಮಾಹಂಕಾರವೆನಿಸುವುವು. ತಾಮಸಾಹಂಕಾರದಿಂದ ದೇಹದ ಹೊರಗಿರುವ ರೂಪಾದಿ ವಿಷಯಗಳು ಹುಟ್ಟಿರುವುದರಿಂದ ಅಧಿಭೂತಾ ಹಂಕಾರವೆನಿಸುವುವು.

ಅಜ್ಞಾನ, ಅನ್ಯಥಾಜ್ಞಾನವು ಅಹಂಕಾರ ತತ್ತ್ವದಿಂದ ಹುಟ್ಟಿದೆಯಷ್ಟೆ ? ಅಹಂಕಾರ ತತ್ತ್ವವು ಮಹತ್ತತ್ತ್ವದಿಂದ ಹುಟ್ಟಿದ್ದು. ಇದಕ್ಕೆ ಪ್ರಕೃತಿಯೇ ಕಾರಣವು. ಇದು ಜಗತ್ತಿನ ಸೃಷ್ಟಿಗೆ ಕಾರಣವಾಗಿದೆ. ಜ್ಞಾನಸ್ವರೂಪನಾದ ಜೀವನು ಮಹದಾದಿ ವಿಕಾರಕ್ಕೆ ಅಭಿಮಾನಿಯೇ ಹೊರತು ಗುಣಕ್ಷೋಭಕಾರ್ಯವಾದ ವಿಕಾರವನ್ನು ಹೊಂದುವುದಿಲ್ಲ. ಹೀಗೆ ಬ್ರಹ್ಮನಿಗೇ ಇಲ್ಲದಿರುವಾಗ, ಪೂರ್ಣಾನಂದ ಸ್ವರೂಪನೂ, ಸ್ವತಂತ್ರನೂ ಆಗಿರುವ ಶ್ರೀಹರಿಯು ಗುಣಕ್ಷೋಭಕಾರ್ಯವಾದ ವಿಕಾರವನ್ನು ಸುತರಾಂ ಹೊಂದುವುದೇ ಇಲ್ಲ. ಹೀಗಿದ್ದರೂ 'ದೇವರು ಜೀವ ಒಂದು, ಜಗತ್ತು ಮಿಥ್ಯೆ' ಎಂದು ಭ್ರಾಂತಿ ರೂಪವಾದ ವಾದವನ್ನು ಮಾಡುವವರಿದ್ದಾರೆ. ಈ ವಾದವು ನಿಷ್ಫಲವಾದರೂ ನನ್ನ ಪಾದಾರವಿಂದ ವಿಮುಖರಿಗೆ ಸದಾ ಇರುತ್ತದೆ.

**ಉದ್ಧವ** :– ಜೀವರು ನಿತ್ಯರು. ಅವರಿಗೆ ಜನನ ಮರಣಗಳೆಂದರೇನು ?

**ಶ್ರೀಕೃಷ್ಣ** ;– ಪರಮಾತ್ಮನ ಪ್ರೇರಣೆಯಂತೆ ಅಂಗದೇಹಸಹಿತನಾದ ಜೀವನು ಬೇರೆ ದೇಹವನ್ನು ಹೊಂದುವುದೇ ಉತ್ಪತ್ತಿ. ಭಗವಂತನ ಇಚ್ಛೆಯಂತೆ

ಮುಂದಿನ ದೇಹದಲ್ಲಿ ಸಂಪೂರ್ಣ ಮನಸ್ಸು ಬಿದ್ದು, ಹಿಂದಿನ ದೇಹದ ಸ್ಮರಣೆ ಸಂಪೂರ್ಣವಾಗಿ ತಪ್ಪುವುದೇ ಮರಣ. ಜೀವನು ಮೂರುಕಾಲಗಳಲ್ಲಿಯೂ ಇರುವುದರಿಂದ ನಿತ್ಯನಾಗಿಯೇ ಇರುವನು. ಜೀವನಿಗೆ ದೇಹ ಯೋಗವೇ ಜನನ, ವಿಯೋಗವೇ ಮರಣವೆನಿಸಿದ್ದರೂ 'ಜೀವನೇ ಹುಟ್ಟಿದನು. ಅವನೇ ಸತ್ತನು' ಎಂದು ಜನರು ಭ್ರಾಂತಿಯಿಂದ ವ್ಯವಹರಿಸುತ್ತಾರೆ. ದೇಹಧಾರಿಯಾದ ಜೀವನೂ, ಪರಮಾತ್ಮನೂ ಭಿನ್ನರೆಂದು ತಿಳಿದವನೇ ಮೋಕ್ಷಾದಿಪುರುಷಾರ್ಥವನ್ನು ಹೊಂದುವವನು. ಭಿನ್ನರೆಂದು ತಿಳಿದವನು ತಾಮಸಕರ್ಮದಿಂದ ಭ್ರಾಂತಿಯನ್ನು ಹೊಂದಿ ರಾಕ್ಷಸ, ಭೂತ, ಪಶುಪಕ್ಷಿ ಯೋನಿಗಳಲ್ಲಿ ಹುಟ್ಟುತ್ತಾನೆ.

ಸಂಸಾರವು ಸ್ವಾಭಾವಿಕವಲ್ಲ. ತಾನಾಗಿ ತೊಲಗುವುದೂ ಇಲ್ಲ. ಈ ದುಃಖವು ತಪ್ಪಬೇಕಾದರೆ ಏನನ್ನು ಮಾಡಬೇಕೆಂಬುದನ್ನು ಶ್ರೀ ಪುರಂದರದಾಸರು ಸರಳವಾಗಿ ತಿಳಿಸುತ್ತಾರೆ .-

**ರೇಗುಪ್ತಿರಾಗ** **ಝಂಪೆತಾಳ**

ವಿಷಯದ ವಿಚಾರ ಬಿಡು ವಿಹಿತ ಕರ್ಮವ ಮಾಡು
ವೈರಾಗ್ಯ ಭಾಗ್ಯ ಬೇಡು ಪ
ವಿಷವೆಂದು ಕಾಮಕ್ರೋಧಗಳೆಲ್ಲ ಈಡಾಡು
ಮಸಣ ಮನವೇ ಮಾಧವನನ್ನು ಕೊಂಡಾಡು ಅ. ಪ.

ಅನುದಿನವು ಹರಿಕಥೆಯ ಕೇಳಿ ಸಂತೋಷಪಡು
ವಿನಯದಲಿ ಸಜ್ಜನರ ಕೂಡು
ಮನಮುಟ್ಟಿ ದುರಾಚಾರ ಮಾಳ್ಪರನು ನೀಕಾಡು
ಹಣಹೊನ್ನು ಪರಹೆಣ್ಣು ಹೆಂಟೆಯಂತೆ ನೋಡು ೧

ವೇದಶಾಸ್ತ್ರಾರ್ಥತತ್ತ್ವದ ವಿಚಾರವ ಮಾಡು
ಮಾಧವನ ಭಕ್ತಿ ಬೇಡು
ಪಾದದಿಂದಲಿ ತೀರ್ಥಯಾತ್ರೆಗಳ ನೀ ಮಾಡು
ಖೇದ ಪಡದಲೆ ದಿನವ ಕಳೆದು ಸಂತೋಷಪಡು ೨

ಅಂಬುಗುಳ್ಳೆಗಳಂತೆ ಈ ದೇಹ ಸ್ಥಿರವಲ್ಲ
ನಂಬಿ ನೀ ಕೆಡಲು ಬೇಡ
ಕೊಂಬುವರು ಬಂದರೆ ಕೊಡರೊಂದು ಕಾಸನ್ನು
ಅಂಬುಜಾಕ್ಷ ಪುರಂದರ ವಿಠಲನ ನೆನೆ ಮನವೆ ೩

**ಉದ್ಧವ :–** ಸ್ವಾಮಿಯೇ ! ಇತರರ ನಿಷ್ಠೂರ ವಚನವನ್ನೂ, ಇತರರು ಮಾಡುವ ತಾಡನಾದಿಗಳನ್ನೂ, ಅಪಮಾನವನ್ನೂ ಸಹಿಸುವ ಪ್ರಕಾರವನ್ನು ತಿಳಿಸು.

**ಇಪ್ಪತೆರಡನೆಯ ಅಧ್ಯಾಯ ಮುಗಿದುದು**

**ಶ್ರೀಕೃಷ್ಣ :–** ಉದ್ಧವಾ ! ನೀನು ಕೇಳಿದ ವಿಷಯಕ್ಕೆ ಒಬ್ಬ ಸಂನ್ಯಾಸಿಯು ತನಗಾದ ತಿರಸ್ಕಾರಗಳೊಂದಕ್ಕೂ ಪರಿತಪಿಸದೆ, ಸುಖದುಃಖಗಳಿಗೆ ತನ್ನ ಕರ್ಮವೇ ಕಾರಣವೆಂದು ಹೇಳಿರುವ ಗಾಥೆಯನ್ನು ತಿಳಿಸುವೆನು ಕೇಳು. ಅವಂತೀದೇಶದಲ್ಲಿ ಒಬ್ಬ ಬ್ರಾಹ್ಮಣನಿದ್ದನು. ಅವನು ಬಹಳ ಧನಿಕನು. ಆದರೆ ಪರಮಲೋಭಿ. ಅವನು ತಾನೂ ತಿನ್ನದೆ ಹೆಂಡತಿ ಮಕ್ಕಳಿಗೂ ಅನ್ನ ಹಾಕದೆ, ಜ್ಞಾತಿ, ಅತಿಥಿ ಯಾರನ್ನೂ ತೃಪ್ತಿಪಡಿಸಲಿಲ್ಲ. ಇದರಿಂದ ದೇವಋಷಿ ಪಿತೃಗಳೇ ಮೊದಲಾದವರು ಕುಪಿತರಾದರು. ಅದರಿಂದ ದ್ರವ್ಯವೆಲ್ಲ ನಾಶವಾಯಿತು. ಬಳಿಕ ಸಂತಪ್ತನಾದ ಆ ಬ್ರಾಹ್ಮಣನಿಗೆ ಕ್ರಮ ಕ್ರಮವಾಗಿ ವೈರಾಗ್ಯ ಬಂದಿತು. ಅಹಂಕಾರ, ಮಮಕಾರಗಳನ್ನು ಬಿಟ್ಟು ಭಿಕ್ಷುವಾಗಿ ಭೂಮಿಯಲ್ಲಿ ಸಂಚರಿಸುತ್ತಿದ್ದನು. ಆತನನ್ನು ದುರ್ಜನರು ತಿರಸ್ಕರಿಸುತ್ತಿದ್ದರು. ಬೂಟಾಟಿಕೆ ಯವನು ಎಂದು ಹೀಯಾಳಿಸುತ್ತಿದ್ದರು. ಭಿಕ್ಷವೆತ್ತಿ ತಂದ ಅನ್ನವನ್ನು ತಿನ್ನಬೇಕೆಂದಿದ್ದಾಗ ಕೆಲವು ಮಂದಿ ಪಾಪಿಷ್ಠರು ಬಂದು ಅನ್ನದ ಮೇಲೆ ಮೂತ್ರ ವನ್ನು ಸುರಿದು, ತಲೆಯ ಮೇಲೆ ಎಂಜಲು ಉಗುಳಿ ಹೋದರು. ಆಗ ದೈವೇಚ್ಛೆ ಯಿಂದ ಬಂದ ದುಃಖವನ್ನು ನಾನು ಅನುಭವಿಸಲೇಬೇಕೆಂದು ತಿಳಿದು ಗಾದೆಯನ್ನು ಗಾನ ಮಾಡಿದನು. :–

"ಈ ಜನರಾಗಲಿ, ನವಗ್ರಹಗಳಾಗಲಿ, ಕರ್ಮವಾಗಲಿ. ದೇವತೆಗಳಾಗಲಿ, ಕಾಲವಾಗಲಿ ನನ್ನ ಸುಖದುಃಖಗಳಿಗೆ ಕಾರಣರಲ್ಲ. ಅಭಿಮಾನಗ್ರಸ್ತವಾದ ಮನಸ್ಸೇ ಸುಖದುಃಖಗಳಿಗೆ ಕಾರಣವು. ಅಭಿಮಾನವನ್ನು ಬಿಟ್ಟವನಿಗೆ ಮನಸ್ಸೂ ಪೀಡಿಸಲಾರದು. ಸುಜೀವನು ಸುಖದುಃಖಾದಿಗಳು ತನ್ನ ಕರ್ಮಫಲ ರೂಪವಾಗಿ ಶ್ರೀಹರೀಚ್ಛೆಯಿಂದ ತನಗೆ ಬರುವಾಗ ಇತರ ಜೀವರಾಗಲಿ, ಅವರ ದೇಹಾದಿಗಳಾಗಲಿ ನಿಜವಾದ ಕಾರಣಗಳಲ್ಲವೆಂದು ತಿಳಿದು ಸಹಿಸಿ ನಿಶ್ಚಿಂತನಾಗುವನು. ಅವರು ದುಃಖ ಕಾರಣರಲ್ಲವೆಂದು ಯಾರಲ್ಲಿಯೂ ಕೋಪಿಸುವುದಿಲ್ಲ. ತನ್ನ ನಾಲಗೆಯನ್ನು ತನ್ನ ಹಲ್ಲಿನಿಂದ ಕಚ್ಚಿಕೊಂಡಾಗ ಯಾರ ಮೇಲೆ ಕೋಪಿಸಬೇಕು ? ಹಲ್ಲನ್ನು ಮುರಿಯ ಬೇಕೋ, ನಾಲಿಗೆಯನ್ನು ಸೀಳಬೇಕೊ ? ಎರಡೂ ಇಲ್ಲ. ಆದುದರಿಂದ ಸುಖ ದುಃಖಕ್ಕೆ ಕಾರಣ ಅಭಿಮಾನವೇ ಸರಿ. ಆದ್ದರಿಂದ ಮನಸ್ಸನ್ನು ವಿಷಯಗಳಿಂದ ಸೆಳೆದು ಪರಮಾತ್ಮನಲ್ಲಿಡಬೇಕು. ಇದೇ ಮನೋನಿಗ್ರಹ.

**ಇಪ್ಪತ್ತ ಮೂರನೆಯ ಅಧ್ಯಾಯ ಮುಗಿದುದು**

**ಶ್ರೀಕೃಷ್ಣ :–** ಉದ್ಧವಾ ! ಜ್ಞಾನಸಾಧನವಾದ ಸಾಂಖ್ಯಶಾಸ್ತ್ರೋಕ್ತ ಪ್ರಮೇಯವನ್ನು ಹೇಳುವೆನು ಕೇಳು :- ಕೃತಯುಗದ ಜನರು ಉಪಕ್ರಮಾದಿ ಲಿಂಗಗಳಿಂದ ವೇದಾರ್ಥ ಜ್ಞಾನದಲ್ಲಿ ನಿಪುಣರು. ಆದುದರಿಂದ ಅವರಿಗೆ ಸಂಶಯ, ವಿಪರ್ಯಯ ಜ್ಞಾನಗಳಿಲ್ಲದೆ ಯಥಾರ್ಥ ಜ್ಞಾನಿಗಳಾಗಿರುವರು. ತ್ರೇತಾಯುಗದಲ್ಲಿನ ಜನರಿಗೆ ಸಂಶಯವೂ, ದ್ವಾಪರದ ಜನರಿಗೆ ವಿಪರೀತ ಜ್ಞಾನವೂ ಹುಟ್ಟುವಂತೆ ನಾನು ಶಾಸ್ತ್ರವನ್ನು ಕಲ್ಪಿಸಿರುವೆನು.

ಜ್ಞಾನಕ್ಕೆ ಪುರುಷನಾಮಕ ಬ್ರಹ್ಮದೇವರು ಅಭಿಮಾನಿ. ಅವರು ಸೃಷ್ಟ್ಯಾದಿಯಲ್ಲಿ ನನ್ನ ಮತ್ತು ಗುಣಾಭಿಮಾನಿನೀಲಕ್ಷ್ಮಿಯಿಂದ ಪುರುಷ ನಾಮಕರಾಗಿಯೂ, ಪ್ರಕೃತಿ ನಾಮಕಳಾಗಿ ಗಾಯತ್ರಿಯೂ ಹುಟ್ಟಿದರು. ಬ್ರಹ್ಮದೇವರಿಂದ ಪ್ರಕೃತಿ ದೇವಿಯಾದ ಗ್ರಾಯತ್ರೀದೇವಿಯಲ್ಲಿ ಗಾಯತ್ರಿ, ಸಾವಿತ್ರಿ, ಸರಸ್ವತಿ ಎಂಬ ನಾಮವುಳ್ಳ ಮೂರು ರೂಪಗಳು ಹುಟ್ಟಿದುವು. ಬ್ರಹ್ಮನು ಆ ಮೂರು ರೂಪಗಳಲ್ಲಿಯೂ ಪ್ರತ್ಯೇಕವಾಗಿ ವೀರ್ಯವನ್ನಿಟ್ಟನು. ಆದರಿಂದ ಹುಟ್ಟಿದ ಮೂರು ಶರೀರಗಳೂ ಒಂದೇ ಆಗಿ ಸರ್ವಲೋಕ ಪ್ರೇರಕನಾದ ವಾಯುವೇ ಸೂತ್ರ (ಧಾರಕ) ನಾಮಕನಾದನು. ಬ್ರಹ್ಮದೇವರಿಂದ ಅಹಂಕಾರಾಭಿಮಾನಿ ಶೇಷನೂ, ವಾಯು ದೇವರಿಂದ ತೈಜಸಾಹಂಕಾರಾಭಿಮಾನಿ ರುದ್ರನೂ ಹುಟ್ಟಿದರು. ಶೇಷನಿಂದ ತಾಮಸಾಹಂಕಾರಿ ರುದ್ರನು ಹುಟ್ಟಿದನು. ವೈಕಾರಿಕಾದಿಭೇದದಿಂದ ಮೂರು ರೂಪಗಳುಳ್ಳ ರುದ್ರನಿಂದ ಪಂಚತನ್ಮಾತ್ರೆಗಳು, ಇಂದ್ರಿಯಗಳು ಮತ್ತು ಮನಸ್ಸು ಈ ತತ್ತ್ವಗಳೂ ಮತ್ತು ದೇಹಸಹಿತರಾದ ತತ್ತ್ವಾಭಿಮಾನಿಗಳೂ ಹುಟ್ಟಿದರು ಮಹದಾದಿ ಇಪ್ಪತ್ತುನಾಲ್ಕು ತತ್ತ್ವಗಳು ನನ್ನ ಪ್ರೇರಣಾನುಸಾರ ಒಟ್ಟು ಸೇರಿ. ಬ್ರಹ್ಮಾಂಡವನ್ನು ಸೃಷ್ಟಿಸಿದುವು. ನಾನು ಅದರೊಳಗೆ ಪ್ರಕಟನಾದೆ. ನನ್ನ ನಾಭಿಯಿಂದ ಪದ್ಮವು ಹುಟ್ಟಿತು. ಅದರಲ್ಲಿ ಚತುರ್ಮುಖನು ಹುಟ್ಟಿದನು. ಬಳಿಕ ಅವನು ಭೂರಾದಿ ಲೋಕಗಳನ್ನೂ ಮತ್ತು ದಿಕ್ಪಾಲಕರನ್ನೂ ಸೃಷ್ಟಿಸಿದನು. ಸಾತ್ವಿಕ ಕರ್ಮದಿಂದ ಸ್ವರ್ಗವೂ, ರಾಜಸ ಕರ್ಮದಿಂದ ಭೂಲೋಕವೂ, ತಾಮಸ ಕರ್ಮದಿಂದ ಭುವರ್ಲೋಕವೂ ದೊರೆಯುತ್ತೆ. ಧ್ಯಾನ, ತಪಸ್ಸು, ಜ್ಞಾನ, ಭಕ್ತಿ ಇವುಗಳಿಂದ ಮಹ ಜನ ತಪ ಸತ್ಯಲೋಕಗಳು ದೊರೆಯುವುವು. ಅಧಿಕವಾದ ಭಕ್ತಿ ಯೋಗದಿಂದ ವೈಕುಂಠಾದಿ ಲೋಕಪ್ರಾಪ್ತಿ.

ಪ್ರಕೃತ್ಯಾದಿಗಳಿಗೂ ಜಗತ್ತಿಗೂ ಭೇದವೇ ? ಭೇದಾಭೇದವೆ ? ಎಂದರೆ ಹೇಳುತ್ತಾನೆ :– ಉಪಾದಾನ ಕಾರಣದಿಂದ ಕಾರ್ಯವು ಭಿನ್ನ. ಉದಾ :– ಮಣ್ಣು ಮತ್ತು ಗಡಿಗೆ. ನಿಮಿತ್ತ ಕಾರಣದಿಂದ ಕಾರ್ಯವು ಭಿನ್ನ. ಉದಾ ;– ಘಟದಿಂದ ಕೋಲು ಭಿನ್ನ. ಪ್ರಕೃತ್ಯಾದಿಗಳೇ ಜಗತ್ತಾಗಿರುವುದರಿಂದ ಪ್ರಕೃತ್ಯಾದಿಗಳಿಂದ ಜಗತ್ತು ಅಭಿನ್ನ.

ಪರಬ್ರಹ್ಮನ ವಿಕಾರವೇ ಪ್ರಪಂಚವು ಎಂದು ಹೇಳುವುದು ತಪ್ಪು. ದೇವರು ಪ್ರಪಂಚಕ್ಕೆ ನಿಮಿತ್ತಕಾರಣನು. ಜಗತ್ತು ಪರಮಾತ್ಮನ ಅಧೀನವಾಗಿಯೇ ಇದೆ, ಪರಬ್ರಹ್ಮನು ಪಾರಮಾರ್ಥಿಕ ಸತ್ಯನು ಅಂದರೆ ಸರ್ವ ಸ್ವತಂತ್ರನು. ಉಪಾದಾನಕಾರಣವಾದ ಪ್ರಕೃತಿಗೆ ಸೃಷ್ಟಿಶಕ್ತಿಯನ್ನೂ ಚತುರ್ಮುಖನಿಗೆ ಆಧಾರವಾಗುವ ಶಕ್ತಿಯನ್ನೂ ಮತ್ತೂ ವ್ಯಂಜಕನಾಗುವ ಶಕ್ತಿಯನ್ನೂ ಹೀಗೆ ಈ ಮೂರು ಶಕ್ತಿಗಳನ್ನೂ ಕೊಡುವವನು ನಾನೇ. ಮತ್ತು ಸೃಷ್ಟಿ, ಆಧಾರ ಹಾಗೂ ವ್ಯಂಜನಕರ್ತನೂ ನಾನೇ ಆದ್ದರಿಂದ ಈ ಜಗತ್ತು ನನ್ನ ವಿಕಾರವಲ್ಲ. ನನ್ನಿಂದ ಅತ್ಯಂತ ಭಿನ್ನ. ಪ್ರಳಯದವರೆಗೆ ಸೃಷ್ಟಿ ಸ್ಥಿತಿಗಳು ನಡೆಯುತ್ತಾ ಇರುತ್ತವೆ. ಪ್ರಳಯದಲ್ಲಿ ಹುಟ್ಟಿದ ಜಡಪದಾರ್ಥವು ತನ್ನನ್ನು ಸೃಷ್ಟಿ ಮಾಡಿದ ಜಡ ಪದಾರ್ಥದೊಂದಿಗೆ ಒಂದಾಗಿ ಸೇರುತ್ತದೆ. ಹುಟ್ಟಿದ ಅಭಿಮಾನಿಯು ಅದರ ಅಧೀನನಾಗುವನು. ಹೀಗೆ ಲಯವಾಗುತ್ತ ಬಂದು ಪುರುಷ ನಾಮಕ ಬ್ರಹ್ಮದೇವನು ಕಾಲನಾಮಕ ತನ್ನ ರೂಪದಲ್ಲಿಯೂ, ಆತನು ಮಾಯಾಮಯ ಶಬ್ದ ವಾಚ್ಯಳಾದ ಮಾಯಾದೇವಿಯಲ್ಲಿಯೂ, ಅವಳು ವ್ಯಾಪ್ತನಾದ ನನ್ನಲ್ಲಿಯೂ ಲಯವನ್ನು ಹೊಂದುತ್ತಾಳೆ. ಅಂದರೆ ನನ್ನ ಸಮೀಪದಲ್ಲಿರುತ್ತಾಳೆ. ನಾನು ಪೂರ್ಣ ಗುಣನು. ಪ್ರಕೃತಿಸಂಬಂಧರಹಿತನು. ನನಗೆ ಸಮನೂ ಇಲ್ಲ. ಉತ್ತಮನೂ ಇಲ್ಲ. ಆದುದರಿಂದಲೇ ನಾನು ಲಯ ಶೂನ್ಯನು. ಸಮ್ಯಕ್ ಜ್ಞಾನ ಸ್ವರೂಪನು.

ಉದ್ಧವಾ ! ಈ ರೀತಿಯಾಗಿ ಸೃಷ್ಟ್ಯಾದಿಗಳಲ್ಲಿ ಭಗವಂತನು ಸ್ವತಂತ್ರನೆಂದೂ, ಸರ್ವಜಡಚೇತನರೂ ನನ್ನ ಅಧೀನರೆಂದೂ ವಿಚಾರ ಮಾಡುವ ಅಧಿಕಾರಿಗೆ ಭ್ರಮೆಯು ನಾಶವಾಗುವುದು. ಸಾಂಖ್ಯ ಶಾಸ್ತ್ರದಲ್ಲಿ ಹೇಳಿರುವ ಪ್ರಕಾರ ಸೃಷ್ಟಿ ಸಂಹಾರಗಳನ್ನು ನಿನಗಾಗಿ ನಾನು ಹೇಳಿರುವೆನು.

## ಇಪ್ಪತ್ತನಾಲ್ಕನೆಯ ಅಧ್ಯಾಯ ಮುಗಿದುದು

**ಶ್ರೀಕೃಷ್ಣ** :- ಉದ್ಧವಾ ! ಮೂರು ಗುಣಗಳ ಭಿನ್ನಭಿನ್ನವ್ಯಾಪಾರಗಳನ್ನು ಕೇಳು :-

ಶಮದಮಾದಿ ಗುಣವುಳ್ಳವರು ಸಾತ್ವಿಕರು. ಅವರೇ ಸಾಂಖ್ಯಜ್ಞಾನಾಧಿಕಾರಿಗಳು. ವಿಷಯರಾಗ, ನಿಷಿದ್ಧ ವ್ಯಾಪಾರ, ಮದ, ಆಶೆ, ಹೇಳಿದುದನ್ನು ಒಪ್ಪದೇ ಇರುವುದು, ಹಣದಾಸೆ, ಅನ್ಯಥಾಜ್ಞಾನ, ದುಃಖಾದಿಗಳು ರಜೋಗುಣದ ವ್ಯಾಪಾರಗಳು. ಕೋಪ, ಲೋಭ, ಕಪಟ, ಕಲಹ ಮುಂತಾದುವು ತಮೋಗುಣದ ವ್ಯಾಪಾರಗಳು.

ಮಿಶ್ರಗುಣಗಳ ವ್ಯಾಪಾರಗಳನ್ನು ಕೇಳು :– ದೇಹ, ಕಳತ್ರಾದಿಗಳಲ್ಲಿ ಮಾಡುವ ಅಹಂ ಮಮಕಾರಗಳು ಸತ್ವಾದಿ ಮಿಶ್ರಗುಣಗಳ ಕಾರ್ಯವೆನಿಸುತ್ತವೆ.

ಶಮಾದಿಗುಣವುಳ್ಳವನು ಸಾತ್ವಿಕನು. ರಾಗಾದಿಗಳುಳ್ಳವವನು ರಾಜಸನು. ಕೋಪಾದಿಗಳುಳ್ಳವವನು ತಾಮಸನು.

ನಿಷ್ಕಾಮವಾಗಿ ಭಕ್ತಿಯಿಂದ ಸ್ವಧರ್ಮವನ್ನಾಚರಿಸಿ ನನಗೆ ಅರ್ಪಿಸುವ ಪುರುಷರೂ, ಸ್ತ್ರೀಯರೂ ಸಾತ್ವಿಕಭಕ್ತರು. ಸಂಪತ್ತನ್ನೂ ಸ್ವರ್ಗಾದಿಗಳನ್ನೂ ಬಯಸಿ ಸ್ವಧರ್ಮದಿಂದ ನನ್ನನ್ನು ಆರಾಧಿಸುವವನು ರಾಜಸಭಕ್ತನು. ಪರಹಿಂಸೆ ಗಾಗಿ ಸ್ವಧರ್ಮದಿಂದ ನನ್ನನ್ನು ಆರಾಧಿಸುವವನು ತಾಮಸ ಭಕ್ತನು.

ಸತ್ವಗುಣನು ರಾಜಸತಾಮಸಗುಣಗಳನ್ನು ಅಡಗಿಸಿ ಸತ್ತ್ವವು ಅಭಿವೃದ್ಧಿ ಯಾದಾಗ, ಧರ್ಮಜ್ಞಾನಾದಿ ಗುಣಗಳುಳ್ಳವನಾಗಿ ಸುಖಿಯಾಗುವನು. ವಿಷಯಸಂಗ, ಮೋಹ, ಚಾಂಚಲ್ಯಗಳನ್ನುಂಟು ಮಾಡುವ ರಜೋಗುಣವು ಅಭಿವೃದ್ಧಿಯಾದಾಗ ಜೀವನು ದುಃಖಿಯೂ, ಕರ್ಮಾಸಕ್ತನೂ, ಕೀರ್ತಿ ಸಂಪತ್ತುಗಳ ಕಾಮಿಯೂ ಆಗುವನು. ಮೌಢ್ಯ ವನ್ನುಂಟು ಮಾಡುವ ತಮೋಗುಣವು ಅಭಿವೃದ್ಧಿಯಾದಾಗ ಮೂಢ ಜೀವನು ಅತಿ ದುಃಖಿ, ಅಜ್ಞಾನ, ನಿದ್ರೆ, ಹಿಂಸೆ, ಅತಿದುರಾಸೆಗಳಿಂದ ಯುಕ್ತನಾಗುವನು.

ಚಿತ್ತವು ಪ್ರಸನ್ನವಾಗಿ, ಇಂದ್ರಿಯಗಳು ವಿಷಯಾತುರವನ್ನು ಬಿಟ್ಟು ಹರ್ಷಗೊಂಡು, ದೇಹವು ರೋಗಾದಿಗಳಿಲ್ಲದೆ, ಮನಸ್ಸು ವಿಷಯಗಳ ಕಳವಳವನ್ನೇ ಬಿಟ್ಟಿರುವಾಗ ನನ್ನ ವಿಶೇಷ ಸಂನಿಧಾನ ಪಾತ್ರವಾದ ಸತ್ವಗುಣವು ಉದ್ರೇಕವಾಗಿರುವು ದೆಂದು ತಿಳಿ. ಜ್ಯೋತಿಷ್ಟೋಮಾದಿ ಯಜ್ಞಮಾಡಿ ಅಹಂಕಾರಿಯಾಗಿ, ಮನೋವ್ಯಥೆ ಬಂದು, ಚಿತ್ತವು ವಿಷಯನಿವೃತ್ತಿ ಹೊಂದದೆ, ಆರೋಗ್ಯವಿಲ್ಲದೆ, ಮನಸ್ಸು ಭ್ರಾಂತಿಯುಕ್ತವಾದಾಗ ರಜೋಗುಣವು ಉದ್ರೇಕವಾಗಿದೆ ಎಂದು ತಿಳಿ. ಸ್ಮರಣೆಯು ನಾಶವಾಗಿ, ಮನಸ್ಸು ನಿಗ್ರಹಿಸಲ್ಪಡದೆ, ಅಜ್ಞಾನ, ಮ್ಲಾನತೆ ಉಂಟಾದಾಗ ತಮೋಗುಣದ ವ್ಯಾಪಾರವು ವಿಜೃಂಭಿಸುವುದೆಂದು ತಿಳಿ.

ಸತ್ವಗುಣವು ಹೆಚ್ಚಿದಷ್ಟೂ ದೇವತೆಗಳ ಮತ್ತು ದೇವಸ್ವಭಾದವವರ ಬಲವು ಹೆಚ್ಚುವುದು. ರಜೋಗುಣವು ಹೆಚ್ಚಿದಷ್ಟೂ ಮಿತ್ರಜೀವರ ಬಲವು ಹೆಚ್ಚಾಗುವುದು. ತಮೋಗುಣವು ಹೆಚ್ಚಿದಷ್ಟೂ ಅಧಮ ಜೀವರ ಬಲವು ಹೆಚ್ಚುವುದು, ಆದುದರಿಂದ ಯೋಗ್ಯನು ಸತ್ವಗುಣವು ಹೆಚ್ಚುವಂತೆ ಮಾಡಿಕೊಳ್ಳಬೇಕು.

ದೇಹಸಂಬಂಧವುಳ್ಳವನಿಗೆ ಸತ್ವಗುಣದಿಂದ ಜಾಗ್ರದವಸ್ಥೆಯೂ ರಜೋಗುಣದಿಂದ ಸ್ವಪ್ನಾವಸ್ಥೆಯೂ, ತಮೋಗುಣದಿಂದ ನಿದ್ರಾವಸ್ಥೆಯೂ,

ಉಂಟಾಗುವುದು. ತ್ರಿಗುಣ ಸಂಬಂಧವಿಲ್ಲದ ಮೋಕ್ಷಾವಸ್ಥೆಯೇ ತುರೀಯಾವಸ್ಥೆ ಯೆಂದು ತಿಳಿ.

ಸತ್ವಗುಣವು ಅಭಿವೃದ್ಧಿಯಾದಾಗ ಸತ್ತವರು ಸ್ವರ್ಗವನ್ನೂ, ರಜೋಗುಣವು ಅಭಿವೃದ್ಧಿಯಾದಾಗ ಸತ್ತವರು ಭೂಲೋಕವನ್ನೂ, ತಮೋಗುಣವು ಅಭಿವೃದ್ಧಿಯಾದಾಗ ಸತ್ತವರು ನರಕವನ್ನೂ ಹೊಂದುತ್ತಾರೆ. ಮೋಕ್ಷ ಸಾಧನಾನುಷ್ಠಾನ ಮಾಡುವವರು ನನ್ನನ್ನೇ ಹೊಂದುವರು. ಫಲಾಪೇಕ್ಷೆಯಿಲ್ಲದೆ ನನಗರ್ಪಿತವಾಗುವ ವರ್ಣಾಶ್ರಮ ವಿಹಿತ ಕರ್ಮವು ಸಾತ್ವಿಕವು. ಕಾಮ್ಯಕರ್ಮವು ರಾಜಸವು. ಹಿಂಸಾದಿ ಕರ್ಮವು ತಾಮಸವು .

ಜ್ಞಾನಭೇದವನ್ನು ಕೇಳು :– ಶಾಸ್ತ್ರೋಕ್ತತತ್ತ್ವವಿಷಯಕಜ್ಞಾನವು ಸಾತ್ವಿಕವು. ಅಗ್ನಿಷ್ಟೋಮಾದಿ ಕರ್ಮನಿಷ್ಠವಾದ ಜ್ಞಾನವು ರಾಜಸವು. ಮಿಥ್ಯಾ ಜ್ಞಾನವು ತಾಮಸವು. ಮೋಕ್ಷ ಸಾಧನವಾದ ಜ್ಞಾನವು ನಿರ್ಗುಣವೆನಿಸುವುದು. ವನವಾಸವು ಸಾತ್ವಿಕವು. ಗ್ರಾಮ ವಾಸವು ರಾಜಸವು. ಜೂಜಿನ ಮನೆಯಲ್ಲಿನ ವಾಸವು ತಾಮಸ. ದೇವಾಲಯ ಮೊದಲಾದುವುಗಳಲ್ಲಿನ ವಾಸವು ನಿರ್ಗುಣವು. ಅಂದರೆ ಮೋಕ್ಷ ಸಾಧನೆಗೆ ತಕ್ಕುದಾದ ವಾಸಸ್ಥಾನವು. ಶಾಸ್ತ್ರವಿಷಯಕ ಶ್ರದ್ಧೆಯು ಸಾತ್ವಿಕವು. ಕರ್ಮವಿಷಯಕ ಶ್ರದ್ಧೆಯು ರಾಜಸವು. ಅಧರ್ಮದಲ್ಲಿನ ಶ್ರದ್ಧೆಯು ತಾಮಸವು. ನನ್ನ ಸೇವೆಯಲ್ಲಿನ ಶ್ರದ್ಧೆಯು ನಿರ್ಗುಣವು. ಪರೋಕ್ಷಜ್ಞಾನದಿಂದ ಹುಟ್ಟುವ ಮಾನಸ ಸುಖವು ಸಾತ್ವಿಕವು. ವಿಷಯಗಳಿಂದಾಗುವ ಸುಖವು ರಾಜಸವು. ಮೋಹಾದಿಗಳಿಂದಾಗುವ ಸುಖವು ತಾಮಸವು. ಭಗವದಾರಾಧನೆಯಿಂದಾಗುವ ಸುಖವು ನಿರ್ಗುಣ ಸುಖವು. ಬಹುಮಾತಿನಿಂದೇನು ? ದ್ರವ್ಯ, ದೇಶ, ಕಾಲ ಮುಂತಾದ ಸಕಲವೂ ತ್ರಿಗುಣಕಾರ್ಯಗಳಾಗಿ ಸಾತ್ವಿಕಾದಿ ಭೇದವನ್ನು ಹೊಂದಿರುವುವು. ಸಕಲವೂ ಸಿರಿಹರಿಗಳಿಂದ ವ್ಯವಸ್ಥಾಪಿತಗಳಾಗಿರುವ ಪ್ರಯುಕ್ತ ಶಾಸ್ತ್ರಶ್ರವಣ ಮಾಡಿ, ಮಾಡಿ, ಬುದ್ಧಿಯಿಂದ ವಿಚಾರ ಮಾಡಿ ತಿಳಿದುಕೊಂಡು, ಪರಬ್ರಹ್ಮನು ಸರ್ವತ್ರ ಸಂನಿಹಿತನಾಗಿರುವನೆಂದು ನಿರಂತರ ಧ್ಯಾನಿಸಬೇಕು. ಸಾತ್ವಿಕಾದಿ ಗುಣಗಳ ವ್ಯಾಪಾರ ಸಂಬಂಧದಿಂದಲೇ ಜೀವರಿಗೆ ಸಂಸಾರ. ಚಿತ್ತದಲ್ಲಿ ವ್ಯಕ್ತವಾಗುವ ಗುಣಗಳನ್ನು ಗೆಲ್ಲುವ ಪರಬ್ರಹ್ಮನ ಉಪಾಸಕನು ಸಂಸಾರಗಳನ್ನು ಜಯಿಸುವನು. ಭಕ್ತಿಯೋಗದಿಂದ ಸಂಸಾರವನ್ನು ಗೆದ್ದು ನನ್ನನ್ನಾಶ್ರಯಿಸಿದವನು ಮುಕ್ತನಾಗಿ ಆನಂದಿಸುವನು. ಮಾನುಷ ದೇಹವು ಬಂದಿರುವಾಗ ಸರ್ವೋತ್ತಮನಾದ ನನ್ನನ್ನು ತಿಳಿದು, ನನ್ನಿಂದ ಕಾರ್ಯಸಿದ್ಧಿಯನ್ನು ಪಡೆದವನು ಹೊರಗಿನ ವಿಷಯಗಳಲ್ಲಿ ಆಸಕ್ತನಾಗಬಾರದು. ಇಂದ್ರಿಯಗಳನ್ನು ಅಂತರ್ಯಾಮಿಯ ವಿಷಯಗಳನ್ನಾಗಿಯೇ ಮಾಡಬೇಕು.

**ಇಪ್ಪತ್ತೈದನೆಯ ಅಧ್ಯಾಯ ಮುಗಿದುದು**

**ಶ್ರೀಕೃಷ್ಣ :–** ಮನುಷ್ಯನಾಗಿ ಹುಟ್ಟಿದಾಗ ಭಾಗವತ ಧರ್ಮವನ್ನು ಆಚರಿಸಿ ಹೃದಯಸ್ಥ ಹರಿಯನ್ನು ನೋಡಿದವನು ಪರಮಾತ್ಮನನ್ನೇ ಹೊಂದುವನು. ಎಷ್ಟೇ ಜ್ಞಾನಿಯಾದರೂ ಯೋಗ್ಯತೆಮೀರಿ ವಿಷಯಗಳನ್ನು ಸೇವಿಸಬಾರದು. ಅಂದ ಬಳಿಕ ಜ್ಞಾನಾರ್ಥಿಯು ವಿಷಯ ಸೇವನೆಯನ್ನು ಸುತರಾಂ ಬಿಡಬೇಕು. ಅವನು ದುರ್ಜನರ ಸಂಗವನ್ನು ಮಾಡಬಾರದು. ಮಾಡಿದರೆ ನಿತ್ಯನರಕವಾಗುವುದು. ಈ ವಿಷಯದಲ್ಲಿ ಇತಿಹಾಸವನ್ನು ಹೇಳುವೆನು ಕೇಳು :–

ಇಳಾದೇವಿಯಲ್ಲಿ ಬುಧನಿಂದ ಹುಟ್ಟಿದ ಪುರೂರವಸ್ಸು ರಾಜನು ಉರ್ವಶಿಯ ವಿಯೋಗದಿಂದ ಮೋಹವನ್ನು ಹೊಂದಿ, ತನ್ನನ್ನು ಬಿಟ್ಟು ಹೋದ ಉರ್ವಶಿಯನ್ನು 'ಹೇಜಾಯೇ ! ನಿಲ್ಲು ನಿಲ್ಲು' ಎಂದು ಹಂಬಲಿಸಿ ಮರುಗುತ್ತ ಯಥೇಷ್ಟ ಕಾಮಗಳನ್ನು ಅನುಭವಿಸುತ್ತಿದ್ದನು. ಯೋಗ್ಯನಾದಕಾರಣ ಕದಾಚಿತ್ ವಿರಕ್ತನಾಗಿ ಈ ಗಾಥೆಯನ್ನು ಹೇಳಿದನು :– "ಆಹಾ ! ಉರ್ವಶೀಪ್ರಯುಕ್ತ ನನಗುಂಟಾದ ಮೋಹವನ್ನು ನೋಡಿರಿ ! ಸೂರ್ಯೋದಯ, ಅಸ್ತಮಾನಗಳಾದುದು ನನಗೆ ತಿಳಿಯ ಲಿಲ್ಲ. ನನ್ನ ದೇಹವು ಕೇವಲ ಸ್ತ್ರೀಯಳ ಅಧೀನವಾಯಿತು. ಚಕ್ರವರ್ತಿಯಾದ ನನ್ನನ್ನು ತೃಣದಂತೆ ಭಾವಿಸಿ ಬಿಟ್ಟು ಹೋಗತಕ್ಕ ಉರ್ವಶಿಯನ್ನೇ ನಾನೂ ಅನುಸರಿಸಿ ಹೋಗುತ್ತ ಅವಳು ಕಾಲಿನಿಂದ ಒದ್ದರೂ ಅವಳನ್ನೇ ಅನುಸರಿಸಿ ಹೋದೆನು. ಬಹು ಕಾಲ ಭೋಗಿಸಿದರೂ ಕಾಮದಿಂದ ನನಗೆ ತೃಪ್ತಿಯಾಗಲಿಲ್ಲ. ನಾನು ಬಹಳ ಅಪರಾಧಿ ಯಾಗಿರುವೆನು. ಇಂತಹ ನನಗೆ ದೇವರು ಹೊರತು ಮತ್ತಾರೂ ರಕ್ಷಕರಿಲ್ಲವೇ ಇಲ್ಲ. ವಿಷಯೇಂದ್ರಿಯಗಳ ಸಂಪರ್ಕದಿಂದ ಬಹು ಅನರ್ಥಗಳಾಗುವುವು. ಆದುದರಿಂದ ಸ್ತ್ರೀಮುಂತಾದವರ ಸಂಗವನ್ನು ಮಾಡಬಾರದು."

ಹೀಗೆ ಹೇಳುತ್ತ ಉರ್ವಶಿಯ ಲೋಕವನ್ನು ಬಿಟ್ಟು, ಮೋಹವಿರಹಿತನಾಗಿ, ಭಗವಂತನಾದ ನನ್ನನ್ನೇ ಧ್ಯಾನಿಸುತ್ತಿದ್ದು, ಭ್ರಾಂತಿಯನ್ನು ತ್ಯಜಿಸಿ, ನನ್ನಲ್ಲಿಯೇ ಮನಸ್ಸನ್ನಿಟ್ಟು ಶಾಂತಿಯನ್ನು ಹೊಂದಿರುವನು.

ಆದ ಕಾರಣ ದುರ್ಜನರ ಸಹವಾಸವನ್ನು ಮಾಡದೆ ಸಜ್ಜನರ ಸಂಗವನ್ನು ಮಾಡಬೇಕು. ಅದರಿಂದ ಪಾಪಪರಿಹಾರವಾಗುವುದು. ಸಂಸಾರಭಯವೂ ಮತ್ತು ಅದರ ಮೂಲಕ ಬರುವ ಅಜ್ಞಾನವೂ ನನ್ನಿಂದಲೇ ನಾಶ ಮಾಡಲ್ಪಟ್ಟು ಮೋಕ್ಷಾದಿ ಪುರುಷಾರ್ಥವು ಲಭಿಸುತ್ತದೆ. ದುಃಖಿತರಿಗೆ ನಾನೇ ರಕ್ಷಕನು. ಸಂಸಾರದಿಂದ ಹೆದರು ವವರಿಗೆ ಸಜ್ಜನರ ಸಹವಾಸವು ಆವಶ್ಯಕ. ಸೂರ್ಯನು ಕಣ್ಣಿಗೆ ಕಾಣಿಸುವ ಪದಾರ್ಥಗಳ ಜ್ಞಾನವನ್ನುಂಟು ಮಾಡುವಂತೆ ಸಜ್ಜನರು ಪರಾಪರತತ್ತ್ವವನ್ನುಪದೇಶಿಸುತ್ತಾರೆ. ಉದ್ಧವಾ ! ನಾನೇ ದೇವತೆಗಳೂ, ಬಂಧುಗಳೂ, ಸಜ್ಜನರೂ, ತಂದೆಯೂ,

ತಾಯಿಯೂ ಆಗಿರುವೆನು. ಅಂದರೆ ದೇವತೆಗಳೇ ಮೊದಲಾದ ಸರ್ವರಿಗೂ ನಾನೇ ನಿಯಾಮಕನೂ, ಅವರೆಲ್ಲರಿಗೂ ಪ್ರಧಾನನೂ ಆಗಿರುವೆನು. ಆದ್ದರಿಂದ ಮುಮುಕ್ಷುವು ಮುಕ್ತಸಂಗನಾಗಿ ನನ್ನಲ್ಲಿಯೇ ರಮಿಸುತ್ತಿರಬೇಕು.

## ಇಪ್ಪತ್ತಾರನೆಯ ಅಧ್ಯಾಯ ಮುಗಿದುದು

**ಉದ್ಧವ :–** ಶ್ರೀಕೃಷ್ಣನೇ ! ಭಗವದಾರಾಧನವೆಂಬ ಕ್ರಿಯಾಯೋಗವನ್ನು ನನಗೆ ಉಪದೇಶಿಸು. ನಾರದರೂ, ವೇದವ್ಯಾಸರೂ, ಬೃಹಸ್ಪತಿಗಳೂ ಈ ಕ್ರಿಯಾ ಯೋಗವನ್ನು ಮನುಷ್ಯರಿಗೆ ಮೋಕ್ಷಸಾಧನವೆಂದು ಹೇಳುತ್ತಾರೆ. ಆದಿಯಲ್ಲಿ ಬ್ರಹ್ಮ ದೇವರು ನಿನ್ನಿಂದ ಇದನ್ನು ಉಪದೇಶ ಹೊಂದಿ ತಮ್ಮ ಮಕ್ಕಳಾದ ಭೃಗು ಮೊದ ಲಾದವರಿಗೆ ಉಪದೇಶಿಸಿದರು. ಶಿವನೂ ಪಾರ್ವತಿಗೆ ಇದನ್ನು ಉಪದೇಶಿಸಿದನು. ಈ ಕರ್ಮಯೋಗವು ಸಕಲ ವರ್ಣಾಶ್ರಮದವರಿಗೂ, ಸ್ತ್ರೀ ಶೂದ್ರರಿಗೂ, ಉತ್ತಮ ಶ್ರೇಯಸ್ಸಾಧನ ಮತ್ತು ಕರ್ಮ ಬಂಧಮೋಚಕವೂ ಆಗಿದೆ. ಆದುದರಿಂದ ಅದನ್ನು ಹೇಳು.

**ಶ್ರೀಕೃಷ್ಣ :–** ಪಂಚರಾತ್ರಾಗಮವನ್ನು ಅತಿ ಸಂಕ್ಷೇಪದಿಂದ ಹೇಳುವೆನು. ನನ್ನ ಪೂಜಾವಿಧಿಯು ವೇದಾದಿಯ ವಿಷಯವಾದ ಅಗ್ನಿಷ್ಟೋಮಾದಿ ಕರ್ಮವೆಂದೂ, ತಾಂತ್ರಿಕ ಅಂದರೆ ಪುಷ್ಪ, ಅಂಜಲಿ ಮುಂತಾದುವೆಂದೂ, ಮಿಶ್ರ ಅಂದರೆ ಸ್ತ್ರೀ ಶೂದ್ರ ವಿಷಯಕವಾದ ನನ್ನ ಸಂಕೀರ್ತನೆ ಮುಂತಾದುದೆಂದೂ ಮೂರು ಬಗೆ ಯಾಗಿದೆ. ಅವುಗಳಲ್ಲಿ ಇಷ್ಟವಾದ ವಿಧಿಯಿಂದ ಪ್ರತಿಷ್ಠಿತ ಪ್ರತಿಮೆ, ಸ್ಥಂಡಿಲ, ಅಗ್ನಿ, ಸೂರ್ಯ, ಜಲ, ಹೃದಯ ಮತ್ತು ಬ್ರಾಹ್ಮಣ ಈ ಅಧಿಷ್ಠಾನಗಳಲ್ಲಿ ನನ್ನನ್ನು ಪೂಜಿಸಬೇಕು. ಮೃತ್ತಿಕಾ ಶೌಚ, ದಂತಧಾವನ, ಸ್ನಾನ, ಸಂಧ್ಯಾವಂದನ ಮೊದ ಲಾದುವುಗಳನ್ನು ಪೂಜಾರೂಪದಿಂದ ಮಾಡಬೇಕು. ನನ್ನನ್ನು ಪೂಜಿಸುವುದಕ್ಕೆ ಶಿಲೆ, ದಾರು, ಲೋಹ, ಓಷಧಿ ರಸ ಸಂಲಿಪ್ತ ಶಿಲೆ, ಚಿತ್ರಪಟ, ಮರಳು, ಚಿತ್ತದಲ್ಲಿ ಪ್ರತಿ ಬಿಂಬಿತ ಆಕಾರ, ಸ್ಫಟಿಕಾದಿ ಮಣಿ ವಿರಚಿತ ಎಂಬ ಎಂಟು ಬಗೆಯ ಪ್ರತಿಮೆಗಳಿವೆ. ಜೀವನಿರುವ ದೇಹವು ಚಲಪ್ರತಿಮೆ. ಪ್ರತಿಮೆಗಳು ಅಚಲ ವಿಗ್ರಹಗಳು. ಪ್ರತಿಷ್ಠಿತ ವಿಗ್ರಹಗಳಿಗೆ ಪೂಜಾಕಾಲದಲ್ಲಿ ಆವಾಹನೆ ಮತ್ತು ವಿಸರ್ಜನೆಗಳಿಲ್ಲ. ಶಿಲಾದಿ ಪ್ರತಿಮೆಗಳಿಗೆ ಸ್ನಾನವುಂಟು. ಚಿತ್ರ, ಸ್ಥಂಡಿಲಾದಿ ಪ್ರತಿಮೆಗಳಿಗೆ ತುಳಸೀ ಸಂಬಂಧ ಜಲ ಪ್ರೋಕ್ಷಣೆಯೇ ಸ್ನಾನ. ಪಾಂಚರಾತ್ರ ಮೊದಲಾದುವುಗಳಲ್ಲಿ ಪ್ರಶಸ್ತಗಳೆಂದು ಉಕ್ತವಾದ ದ್ರವ್ಯಗಳಿಂದ ಭಕ್ತಿಪೂರ್ವಕ ಪೂಜಿಸಬೇಕು. ಹೃದಯಸ್ಥ ಮೂರ್ತಿ ಯನ್ನು ಭಕ್ತಿಪೂರ್ವಕ ಧ್ಯಾನಿಸಬೇಕು. ಪ್ರತಿಮೆಗೆ ಸ್ನಾನ, ಅಲಂಕಾರ, ಪೂಜೆ ನನಗೆ ಪ್ರೀತಿಜನಕ. ಸ್ಥಂಡಿಲದಲ್ಲಿ ನನ್ನ ಸನ್ನಿಧಾನ ಚಿಂತನೆಯೇ ಪೂಜೆ. ಅಗ್ನಿಯಲ್ಲಿ

ಆಜ್ಯಮಿಶ್ರಿತ ಹವಿಸ್ಸಿನ ಹೋಮವೇ ಪೂಜೆ. ಸೂರ್ಯನಲ್ಲಿ ಪ್ರಸ್ಥಾದಿಗಳರ್ಪಣೆಯೇ ಪೂಜೆ. ನೀರಿನಲ್ಲಿ ನೀರಿನಿಂದ ನನ್ನ ಪೂಜೆ ನನಗೆ ಪ್ರೀತಿಜನಕ. ಹೆಚ್ಚೇನು ? ಭಕ್ತನು ಶ್ರದ್ಧೆಯಿಂದ ಜಲವನ್ನು ಕೊಟ್ಟರೂ ನನಗದು ಅತಿಪ್ರಿಯ. ಪೂಜೆಗೆ ಮೊದಲು ಷಡಂಗನ್ಯಾಸ ಮಾಡಿಕೊಂಡು ಪ್ರತಿಮೆಯಲ್ಲಿ ನನ್ನ ಸಂನಿಧಾನವನ್ನು ಚಿಂತಿಸಬೇಕು. ಅಗ್ರೋದಕ ಪಾತ್ರೆ, ಪಾದ್ಯಾದಿಗಳಿಗೆ ಮೂರು ಪಾತ್ರೆಗಳನ್ನು ಅಣಿಯಾಗಿಟ್ಟು ಕೊಂಡು ಗಾಯತ್ರೀಮಂತ್ರದಿಂದ ಹೃದಯ, ಶಿರಸ್ಸು, ಶಿಖೆಗಳಲ್ಲಿ ಅಭಿಮಂತ್ರಿಸ ಬೇಕು.

ಧ್ಯೇಯ ಸ್ವರೂಪವನ್ನು ಹೇಳುವೆನು ಕೇಳು :- ಪಾಪ ಪುರುಷ ವಿಸರ್ಜನೆ ಯಿಂದ ಪವಿತ್ರವಾದ ದೇಹದಲ್ಲಿ ಹೃತ್ಪದ್ಮದಲ್ಲಿರುವ ಅತಿ ಸೂಕ್ಷ್ಮವಾದ, ಜ್ಞಾನಿ ಉಪಾಸ್ಯವಾದ ಬಿಂಬಸ್ವರೂಪವನ್ನು ಧ್ಯಾನಿಸಬೇಕು. ಬಳಿಕ ಪ್ರತಿಮೆಗಳಲ್ಲಿ ಬಿಂಬ ರೂಪವನ್ನು ಆವಾಹನೆ ಮಾಡಿ ಮಾತೃಕಾದಿ ಮಂತ್ರಾಕ್ಷರಗಳಿಂದ ಪೂಜಿಸಬೇಕು. ಪಾದ್ಯ, ಅರ್ಘ್ಯಮೊದಲಾದ ಉಪಚಾರಗಳನ್ನು ಕಲ್ಪಿಸುತ್ತ ನನಗೆ ಎಂಟುದಳ ಪದ್ಮವನ್ನು ಆಸನವೆಂದು ಧ್ಯಾನಿಸಿ, ಅದರಲ್ಲಿ ಸುದರ್ಶನಾದಿ ಆಯುಧಗಳನ್ನೂ, ನಂದಾದಿಪಾರ್ಷದರನ್ನೂ, ಲೋಕಪಾಲಕರನ್ನೂ ಆಯಾ ಸ್ಥಾನಗಳಲ್ಲಿರುವರೆಂದು ತಿಳಿದು ಪೂಜಿಸಬೇಕು. ಶ್ರೀಹರಿಯ ಪ್ರತಿಮೆಗೆ ಸುವಾಸಿತ ಜಲದಿಂದ ಅಭಿಷೇಕ ಮಾಡಬೇಕು. ಆಗ ವಿಷ್ಣುಸೂಕ್ತ, ಘರ್ಮಸೂಕ್ತ, ಜಿತಂತೇ ಸ್ತೋತ್ರ ಪುರುಷ ಸೂಕ್ತ 'ಸಮುದ್ರಾದೂರ್ಮಿಃ' ಎಂಬ ಸೂಕ್ತ, ಪವಮಾನ ಮೊದಲಾದ ಸೂಕ್ತಗಳನ್ನು ಹೇಳುತ್ತಾ ಅವುಗಳ ಅರ್ಥವನ್ನು ಚಿಂತಿಸಬೇಕು. ಬಳಿಕ ವಸ್ತ್ರಾಭರಣಗಳಿಂದ ಅಲಂಕರಿಸಿ ಗುಡಪಾಯಸ ಮುಂತಾದುವುಗಳನ್ನು ಸಮರ್ಪಿಸಿ, ಪೂಜೆಮಾಡಿ, ಔಪಾಸನ, ವೈಶ್ವದೇವ ಹೋಮಗಳನ್ನು ಮಾಡಬೇಕು. ಚಾಮರಾದ್ಯುಪಚಾರ ಗಳಿಂದಲೂ ನನ್ನನ್ನು ಪೂಜಿಸಬೇಕು. ನನ್ನ ವ್ಯಾಪಾರಗಳನ್ನು ಗಾನಮಾಡುತ್ತ, ಹೊಗಳುತ್ತ, ಅಭಿನಯಿಸುತ್ತ, ತಾನೂ ಕೇಳುತ್ತ ಇತರರಿಗೆ ಕೇಳಿಸುತ್ತ ಇರಬೇಕು. ಸಕಲ ಮುಹೂರ್ತ, ಕ್ಷಣಗಳಲ್ಲಿಯೂ ಹರಿಕಥಾಶ್ರವಣಾದಿಗಳಿಂದ ಕಾಲಕ್ಷೇಪ ಮಾಡ ಬೇಕು. ಶ್ರುತ್ಯುಕ್ತ, ಪುರಾಣೋಕ್ತ ಪ್ರಾಕೃತ ದೇವರನಾಮಗಳಿಂದ ಹರಿಯನ್ನು ಸ್ತುತಿಸಿ 'ಪ್ರಸೀದ ಭಗವನ್' ಎಂದು ಹೇಳುತ್ತ ಸಾಷ್ಟಾಂಗಪ್ರಣಾಮವನ್ನು ಮಾಡ ಬೇಕು. ನಿರ್ಮಾಲ್ಯವನ್ನು ಶಿರಸ್ಸಿನಲ್ಲಿ ಧರಿಸಿ, ಪ್ರತಿಮಾಂತರ್ಗತ ಜ್ಯೋತಿಯನ್ನು ಹೃತ್ಕಮಲಸ್ಥ ಬಿಂಬಜ್ಯೋತಿಯಲ್ಲಿ ಉದ್ವಾಸನೆ ಮಾಡಬೇಕು. ಇದರಿಂದ ಜ್ಞಾನಾದಿ ಸಿದ್ಧಿಯನ್ನು ಹೊಂದಿ ಕೊನೆಗೆ ಮೋಕ್ಷವನ್ನು ಪಡೆಯುವನು. ಮುಮುಕ್ಷುವು ನಿರಂತರವೂ ಈ ಪೂಜಾಕ್ರಮವನ್ನು ಅನುಸರಿಸಬೇಕು.

ಗುಡಿಯನ್ನು ಕಟ್ಟಿಸಿ, ಪೂಜಾದಿಗಳು ತಪ್ಪದೆ ನಡೆಯುವಂತೆ ಮಾಡುವವನಿಗೆ

ನನ್ನ ಲೋಕವು ದೊರೆಯುತ್ತದೆ. ದೇವಸ್ವ, ಬ್ರಾಹ್ಮಣಸ್ವವನ್ನು ಅಪಹರಿಸಿದವನು ಹಂದಿ, ನಾಯಿ, ಕ್ರಿಮಿಜನ್ಮಗಳನ್ನು ಹೊಂದುವನು.

## ಇಪ್ಪತ್ತೇಳನೆಯ ಅಧ್ಯಾಯ ಮುಗಿದುದು

ಪರಮಾತ್ಮನನ್ನು ನಿಂದಿಸುವವನು ಅಂಧಂತಮಸ್ಸಿನಲ್ಲಿ ಬೀಳುವನು. ಅವಸ್ಥಾತ್ರಯವೂ ಶ್ರೀಹರಿಯ ಅಧೀನವೆಂದೂ, ಅವನು ಸರ್ವತ್ರ ವ್ಯಾಪ್ತನೆಂದೂ ಚಿಂತಿಸಬೇಕು. ವೈಷ್ಣವನು ಅವೈಷ್ಣವನನ್ನು ಹೊಗಳಬಾರದು. ಶುಭವಾಗಲೆಂದು ಕೋರಲೂಬಾರದು.

ಶ್ರೀಹರಿಯೇ ಸೃಷ್ಟ್ಯಾದಿಗಳನ್ನು ಮಾಡುವುದರಿಂದ ಎಲ್ಲವೂ ಅವನ ಅಧೀನವೇ ಸರಿ. ಹರಿಯು ತನ್ನಿಂದಲೇ ತಾನು ಸೃಷ್ಟನಾಗುವನು. ಅಂದರೆ ದೀಪದಿಂದ ಇನ್ನೊಂದು ದೀಪವು ವ್ಯಕ್ತವಾಗುವಂತೆ ಅಭಿವ್ಯಕ್ತನಾಗುವನು. ಅವನು ತನ್ನಿಂದಲೇ ತಾನು ಸ್ಥಿತಿಯನ್ನು ಹೊಂದುವನು. ಅಂದರೆ 'ಇಷ್ಟು ಕಾಲದ ವರೆಗೆ ಮನುಷ್ಯ ಲೋಕದಲ್ಲಿರುವೆನು' ಎಂದು ಆಲೋಚಿಸುವನು. ತನ್ನಿಚ್ಛೆಯಿಂದಲೇ ತನ್ನ ಮೂಲ ರೂಪವನ್ನು ಸೇರುತ್ತಾನೆ. ಇದೇ ಅವನ ಸಂಹಾರ.

ಬ್ರಹ್ಮಾದಿಗಳೇ ಸೃಷ್ಟಿಕರ್ತರೆಂದು ವೇದವು ಹೇಳುತ್ತಿದೆ. ಹರಿಯು ಹೇಗೆ ಕರ್ತನೆಂದು ಶಂಕಿಸಬೇಡ. ಶ್ರೀಹರಿಯೇ ಸೃಷ್ಟ್ಯಾದಿ ಕರ್ತನಾದುದರಿಂದ ಅವನಿಗೆ ಇನ್ನೊಬ್ಬ ಕರ್ತನಿರುವನೆಂದು ವೇದಾದಿಗಳಲ್ಲಿ ಎಲ್ಲಿಯೂ ಹೇಳಿಲ್ಲ. ಜೀವರು ಗುಣ ಬದ್ಧರಾದುದರಿಂದ ಅವರಿಗೆ ಇತರರಿಂದ ಉತ್ಪತ್ತ್ಯಾದಿಗಳು ಕೂಡುತ್ತವೆ. ಶ್ರೀಹರಿಯಾದರೋ ಸರ್ವದಾ ತ್ರಿಗುಣರಹಿತನಾದುದರಿಂದ ಅವನಿಗೆ ಇತರರಿಂದ ಸೃಷ್ಟ್ಯಾದಿಗಳು ಹೇಗಾದಾವು ?

ಶ್ರೀಹರಿಯೇ ಸರ್ವಕ್ಕೂ ಪ್ರೇರಕನೆಂಬ ಯಥಾರ್ಥಜ್ಞಾನವುಳ್ಳವನು ಯೋಗ್ಯರನ್ನು ನಿಂದಿಸದೆ, ಅಯೋಗ್ಯರನ್ನು ಹೊಗಳದೆ ಸೂರ್ಯನಂತೆ ನಿಸ್ಸಂಗಿಯಾಗಿ ಸಂಚರಿಸುತ್ತಾನೆ. ಆದುದರಿಂದ ಪ್ರತ್ಯಕ್ಷ, ಅನುಮಾನ, ಆಗಮ ಪ್ರಮಾಣ ಗಳಿಂದಲೂ, ಸಾಕ್ಷಿಯಿಂದಲೂ, ತ್ರಿಗುಣಮಯವಾದ ಜಗತ್ತು ಹುಟ್ಟಿ ನಾಶ ವಾಗುತ್ತದೆ ಮತ್ತು ಅಸ್ವತಂತ್ರವಾಗಿದೆ ಎಂದು ತಿಳಿದು ಸಂಸಾರದಲ್ಲಿ ಅನಾಸಕ್ತನಾಗಿ ಸಂಚರಿಸುತ್ತಿರಬೇಕು.

**ಉದ್ಧವ :–** ದೇಹವು ಜಡವಾದುದರಿಂದ ಅದಕ್ಕೆ ಸಂಸಾರವಿಲ್ಲ. ಜೀವನು ಸ್ವಪ್ರಕಾಶಕನಾದುದರಿಂದ ಅವನಿಗೂ ಸಂಸಾರವಿಲ್ಲ. ಶ್ರೀಹರಿಯಂತೂ ಸ್ವತಂತ್ರ

ನಾದುದರಿಂದ ಆವನಿಗೂ ಸಂಸಾರವಿಲ್ಲವೇ ಇಲ್ಲ. ಅಂದ ಬಳಿಕ ಸಂಸಾರವು ಯಾರಿಗೆ ?

**ಶ್ರೀಕೃಷ್ಣ :–** ಸಂಸಾರವು ಜಡಕ್ಕೂ ಇಲ್ಲ. ಹರಿಗೂ ಇಲ್ಲ. **ಜೀವನಿಗೇ ಸಂಸಾರ.** ಹೇಗೆಂದರೆ ಜೀವನಿಗೆ ದೇಹ, ಇಂದ್ರಿಯಗಳು ಮತ್ತು ಪ್ರಾಣಗಳಿಂದ ಸಂಬಂಧವಿರುವವರೆಗೂ ಅವನಿಗೇ ದುಃಖಾದಿರೂಪ ಸಂಸಾರವು ಇರುವುದು ಈ ಸಂಸಾರವು ಜೀವನಿಗೆ ಸಾರ್ಥಕವೂ ಆಗಿದೆ ಮತ್ತು ನಿರರ್ಥಕವೂ ಆಗಿದೆ. ಹೇಗೆಂದರೆ ಜೀವನಿಗೆ ದೇಹ ಸಂಬಂಧವು ಇದ್ದಾಗಲೇ ಶಾಸ್ತ್ರಶ್ರವಣಾದಿಗಳುಂಟಾಗಿ ಮೋಕ್ಷವಾಗಬೇಕಾದುದರಿಂದ ದುಃಖಾದಿರೂಪ ಸಂಸಾರವು ಅವನಿಗೆ ಪ್ರಯೋಜನಕಾರಿಯಾಗಿದೆ. ಸುಜೀವನು ನಿತ್ಯಾನಂದ ಸ್ವರೂಪ ನಾಗಿರುವುದರಿಂದ ಆತನ ದುಃಖಾದಿರೂಪಸಂಸಾರವು ನಿರರ್ಥಕವೆಂದೂ ಹೇಳಲ್ಪಡುವುದು ಹೀಗೆ ಈ ಸಂಸಾರವು ಅವನಿಗೆ ಪ್ರಯೋಜನಕಾರಿಯಲ್ಲದಿದ್ದರೂ ವಿಷಯಗಳನ್ನು ಚಿಂತಿಸುವ ಅವಿವೇಕಿಗೆ ಸಂಸಾರವು ನಿವೃತ್ತವಾಗುವುದಿಲ್ಲ. ಆದುದರಿಂದ ಈ ಸಂಸಾರವು ಅಜ್ಞಾನಿಗಳಿಗೇ ಅನರ್ಥಕಾರಿ. ಜ್ಞಾನಿಗಳಿಗೆ ಅಲ್ಲ. ಜೀವನಿಗೆ ಅಭಿಮಾನ ನಿಮಿತ್ತವೇ ಶೋಕಾದಿಗಳೂ, ಜನನ ಮರಣಗಳೂ ಗಂಟು ಬೀಳುತ್ತವೆ. ಚಿದಾನಂದ ಸ್ವರೂಪಕ್ಕೆ ಶೋಕಾದಿಗಳಿಲ್ಲ. ಚಿದಾನಂದ ಸ್ವರೂಪಿಯೂ, ಸ್ವರೂಪಭೂತವಾದ ಇಚ್ಛೆಯನ್ನುಳ್ಳವನೂ ಆದ ಶ್ರೀಹರಿಗೆ ಸಂಸಾರವು ಸರ್ವಥಾ ಕೂಡುವುದೇ ಇಲ್ಲ.

ಜೀವನಿಗೇ ಸಂಸಾರವೆಂಬುದಕ್ಕೆ ಕೈಮುತ್ಯಯುಕ್ತಿಯನ್ನು ಹೇಳುವೆನು ಕೇಳು .–

ದೇಹೇಂದ್ರಿಯ ಪ್ರಾಣ ಮನಸ್ಸುಗಳ ಅಭಿಮಾನಿದೇವತೆಗಳಲ್ಲಿ ಶ್ರೇಷ್ಠನೂ, ಸರ್ವಾಂತರ್ಗತನೂ, ಗುಣಕರ್ಮಗಳಿಂದ ಆರಬ್ಧವಾದ ಶರೀರವುಳ್ಳವನೂ, 'ಸೂತ್ರ, ಮಹಾನ್' ಇತ್ಯಾದಿ ನಾಮವುಳ್ಳವನೂ, ದುರ್ಗಾದೇವಿಯ ಅಧೀನನೂ ಆದ ಚತುರ್ಮುಖನೂ ಕೂಡ ಈ ಸಂಸಾರವನ್ನು ಹೊಂದಿರುವನೆಂದ ಬಳಿಕ ಇತರ ಜೀವರು ಸಂಸಾರವನ್ನು ಹೊಂದಿರುವರೆಂದು ಹೇಳುವುದೇನು ?

ಚತುರ್ಮುಖನು ಸದಾ ಹರಿಸ್ಮರಣ ಸಮರ್ಥನು. ಶ್ರೀಹರಿಯಿಂದ ಪ್ರೇರಿತ ವಾದ ಮನಸ್ಸು ಮತ್ತು ಇಂದ್ರಿಯಗಳಲ್ಲಿರುವ "ನಾನೇ ಶರೀರ, ನಾನೇ ತಿಳಿಯತಕ್ಕವನು, ಮಾತಾಡತಕ್ಕವನು ಮತ್ತು ಸರ್ವ ಚಟುವಟಿಕೆಗಳನ್ನೂ ಸ್ವತಂತ್ರವಾಗಿ ಮಾಡತಕ್ಕವನು" ಇತ್ಯಾದಿ ಆಕಾರದ ಪ್ರಬಲವೂ, ಸಂಸಾರಕ್ಕೆ ಮೂಲವೂ ಆದ ಮಿಥ್ಯಾಜ್ಞಾನವನ್ನು ಸುಜ್ಞಾನದಿಂದ ನಾಶಗೊಳಿಸಿ, ನಿಸ್ಸಂಗಿ

ಯಾಗಿ, ಶರೀರಪಾತ ಪರ್ಯಂತ ಭೂಮಿಯಲ್ಲಿ ಸಂಚರಿಸುವನು. ಆದುದರಿಂದ ಮಿಥ್ಯಾ ಜ್ಞಾನದಿಂದ ಉಂಟಾದ ಸಂಸಾರವು ಮಿಥ್ಯಾಜ್ಞಾನವು ನಾಶವಾದಾಗ **ಹೋಗುವುದು**

ಮಿಥ್ಯಾಜ್ಞಾನವನ್ನು ನಾಶ ಮಾಡುವ ಸುಜ್ಞಾನದ ಆಕಾರವನ್ನು ಹೇಳುವೆನು ಕೇಳು :– ಪರಮಾತ್ಮನು **ಜ್ಞಾನಂ**=ಜ್ಞಾನಸ್ವರೂಪನು. **ವಿವೇಕಃ**=ಇತರರಿಂದ ವಿಲಕ್ಷಣನು. **ನಿಗಮಃ**=ಭಕ್ತರು ತಮ್ಮ ಅಭೀಷ್ಟಗಳನ್ನು ಹೊಂದುವಂತೆ ಮಾಡು ವವನು. **ತಪಶ್ಚ**=ಸರ್ವರಿಂದಲೂ ವಿಚಾರ ಮಾಡಲ್ಪಡತಕ್ಕವನು. **ಪ್ರತ್ಯಕ್ಷ**= ಸಕಲೇಂದ್ರಿಯಗಳಲ್ಲಿಯೂ ನಿಯಾಮಕನಾಗಿರುವವನು. **ಐತಿಹ್ಯಂ**=ಆಚಾರ್ಯರ ಸಂಪ್ರದಾಯ ಸಿದ್ಧನಾದವನು ಅಂದರೆ ಶಿಷ್ಟ ಪರಂಪರಾ ಸಂಪ್ರಾಪ್ತನು. **ಅನುಮಾನಂ** =ವೇದಾದಿ ಪ್ರಮಾಣಗಳಿಂದ ಸಿದ್ಧನೆಂದು ಊಹಿಸಲ್ಪಡತಕ್ಕವನು. **ಕೇವಲಂ**= ಸ್ವತಂತ್ರನು. **ಆದ್ಯಂತಯೋರಸ್ಯಯದೇವ**=ಆದ್ಯಂತಗಳಲ್ಲಿ ಸ್ವತಂತ್ರನಾಗಿರು ವವನೇ ಮಧ್ಯಕಾಲದಲ್ಲಿಯೂ ಸ್ವತಂತ್ರನು. **ಕಾಲಃ**= ಪರಿಪೂರ್ಣಗುಣಸ್ವರೂಪನು. **ಹೇತುಃ** = ಜಗತ್ಸೃಷ್ಟಿಕಾರಣನು. ಇಂತಹ ಪರಬ್ರಹ್ಮನನ್ನೇ **"ಸತ್ಯಂ ಜ್ಞಾನ ಮನಂತಂ ಬ್ರಹ್ಮ"** ಇತ್ಯಾದಿ ಶ್ರುತ್ಯುಕ್ತ ಪ್ರಕಾರ ತಿಳಿದುಕೋ. ಭಗವಂತನು ಸರ್ವದಾ ಜಗದ್ವಿಲಕ್ಷಣನು. ಹೇಗೆಂದರೆ ಸುವರ್ಣಪದ ವಾಚ್ಯವಾದ ಪ್ರಧಾನ ಚಿನ್ನವೇ ಕುಂಡಲಾದಿ ವಿಕಾರವನ್ನು ಹೊಂದುವುದಕ್ಕಿಂತ ಮೊದಲೂ, ಕುಂಡಲಾದಿ ಆಕಾರವು ನಾಶವಾದ ಮೇಲೂ, ಕುಂಡಲಾದಿ ಆಕಾರವಿರುವಾಗಲೂ ಸುವರ್ಣವೇ ಎಂದು ಹೇಗೆ ಕರೆಯಲ್ಪಡುವುದೋ ಹಾಗೆಯೇ ಜಗತ್ಸೃಷ್ಟಿಗೆ ಮೊದಲೂ, ಜಗತ್ಸಂಹಾರಾನಂತರದಲ್ಲಿಯೂ, ಜಗತ್ ಸ್ಥಿತಿಯ ಕಾಲದಲ್ಲಿಯೂ ನಾನು ಸ್ವತಂತ್ರನು ಮತ್ತು ಜಗತ್ತಿನಿಂದ ಭಿನ್ನನು. ಜಗತ್ಸೃಷ್ಟಿಗೆ ಮೊದಲೂ, ಸಂಹಾರಾನಂತರವೂ ನಾನು ಸರ್ವಶಬ್ದವಾಚ್ಯನು. ಸ್ಥಿತಿಕಾಲದಲ್ಲಿಯೂ ಸುರನರಾದಿ ನಾನಾ ಶಬ್ದಗಳಿಂದ ಕರೆಯಲ್ಪಡುವೆನು.

ಮೋಕ್ಷಾದಿಗಳನ್ನು ಕೊಡುವುದರಿಂದಲೂ ಶ್ರೀಹರಿಯೇ ನಿರುಪಚರಿತ ಸ್ವತಂತ್ರನು ಎಂದು ಹೇಳುವನು – ಸಾತ್ವಿಕ, ರಾಜಸ, ತಾಮಸ ಜೀವರ ಸಮೂಹಕ್ಕೆ ಮೋಕ್ಷ, ಸಂಸಾರ, ತಮಸ್ಸನ್ನು. ಕೊಡುವವನೂ, ಸರ್ವಕ್ಕೂ ಸೃಷ್ಟಿ ಕರ್ತನು. ಅವನ ಇಚ್ಛೆಯಿದ್ದರೆ ಜಗದಾದಿಗಳಿರುತ್ತವೆ, ಇಲ್ಲವಾದರೆ ಇರುವುದಿಲ್ಲ. ಇಂತಹ ವಿಜ್ಞಾನರೂಪಿಯಾದ ಪರಬ್ರಹ್ಮನೇ ಸ್ವತಂತ್ರನು. ಇನ್ನಾವನೂ ಅಲ್ಲ. ಹೇಗೆಂದರೆ . ಜಗತ್ತು ಉತ್ಪತ್ತಿನಾಶವುಳ್ಳುದುದರಿಂದ ಪೂರ್ವೋತ್ತರಗಳಲ್ಲಿ ಅದು ಸ್ವತಂತ್ರವಾಗಲಾರದಷ್ಟೆ ? ಸ್ಥಿತಿಕಾಲದಲ್ಲಿಯೂ ಸ್ವತಂತ್ರವಾಗಿಲ್ಲ. ಶ್ರೀಹರಿ ಯಿಂದಲೇ ಜಗತ್ತು ಸತ್ತಾದಿಗಳನ್ನುಳ್ಳುದು. ಶ್ರೀ ಪರಬ್ರಹ್ಮನೇ ಪರಮ ಸತ್ಯನು

ಸರ್ವಸ್ವತಂತ್ರನು. ಜಗತ್ತು ಕಾಲತ್ರಯದಲ್ಲಿಯೂ ಅವನ ಅಧೀನವಾಗಿದೆ. ಹಾಗಿದ್ದರೂ ಅಜ್ಞರಿಗೆ ಇದು ಸ್ವತಂತ್ರವೆಂದು ತೋರುತ್ತದೆ. ಏಕೆಂದರೆ ಸ್ವತಂತ್ರನು ಪರಮಾತ್ಮನೊಬ್ಬನೇ ಹೊರತು ಇನ್ನಾರೂ ಅಲ್ಲ, ಇನ್ನಾವುದೂ ಅಲ್ಲ. ಅಂದ ಬಳಿಕ ಜಗತ್ತು ಅವನ ಅಧೀನವಾಗಿದ್ದಮೇಲೆ ಅದು ಸ್ವತಂತ್ರವಾಗಿ ತೋರುವುದು ಭ್ರಾಂತಿಯು. ಆದುದರಿಂದ ಪರಬ್ರಹ್ಮನ ಜ್ಞಾನವನ್ನು ಸಂಪಾದಿಸಿ, ಆದರಿಂದ ಸಂಶಯಾದಿಗಳನ್ನು ಕಳೆದುಕೊಂಡು, ಜೀವಪರಮಾತ್ಮರು ಭಿನ್ನರೆಂಬ ಜ್ಞಾನವೇ ಮೋಕ್ಷ ಸಾಧನವೆಂದರಿತು ಸಕಲ ವಿಷಯಗಳಲ್ಲಿಯೂ ವಿರಕ್ತನಾಗಬೇಕು.

ಪರಮಾತ್ಮನು ನಿರ್ದೋಷನು. ಹೇಗೆಂದರೆ :— ಇಂದ್ರಿಯಗಳನ್ನು ನಿಗ್ರಹಿಸಿ ಶ್ರೀಹರಿಯಲ್ಲಿಯೇ ಅವುಗಳನ್ನು ನಿಲ್ಲಿಸುವವನಿಗೇ ಸುಖವಾಗುವುದೇ ಹೊರತು ಶ್ರೀಹರಿಗೆ ಯಾವ ಸುಖವೂ ಆಗುವುದಿಲ್ಲ. ಇಂದ್ರಿಯಗಳು ವಿಷಯಗಳನ್ನು ಕುರಿತು ಹೋಗುವುದಕ್ಕೆ ಅವಕಾಶವನ್ನು ಕೊಟ್ಟ ಜೀವನಿಗೇ ದುಃಖವಾಗುವುದೇ ಹೊರತು ಪರಮಾತ್ಮನಿಗೆ ಯಾವ ದುಃಖವೂ ಆಗುವುದಿಲ್ಲ. ಹೀಗೆ ಶ್ರೀಹರಿಯು ನಿರ್ದೋಷನಾದುದರಿಂದ ಅವನಿಗೆ ಗುಣಗಳ ಮತ್ತು ದೋಷಗಳ ಸಂಬಂಧವೇ ಇಲ್ಲ. ಜೀವನಿಗಾದರೋ ವಿಷಯಗಳ ಸಂಬಂಧವು ಮುಕ್ತಿಯ ಪರ್ಯಂತ ಯಾವಾಗಲೂ ಇರುವುದರಿಂದ ಅವನಿಗೆ ಸುಖದುಃಖಗಳು ತಪ್ಪಿದ್ದಲ್ಲ. ಹೀಗಿರುವುದರಿಂದ ಮೋಕ್ಷಾಪೇಕ್ಷಿಯು ರಜೋಗುಣ ತಮೋಗುಣಗಳಿಂದ ಉಂಟಾಗುವ ಪಾಪವೂ ತೊಲಗುವವರೆಗೂ ವಿಷಯಗಳಲ್ಲಿ ಆಸಕ್ತಿಯನ್ನು ಬಿಡಬೇಕು. ವಿಷಯಾಸಕ್ತನಾದ ಅಪಕ್ವಯೋಗಿಯು ಮಾಡುವ ಭಗವದ್ಧ್ಯಾನಕ್ಕೂ ವಿಘ್ನವುಂಟಾಗುವುದು. ಅವನು ಭಕ್ತಿಯಿಂದ ಧ್ಯಾನಮಾಡಿದಾಗ ಹರಿಯನ್ನು ಹೊಂದುವನು. ಸರ್ವಕ್ಕೂ ಭಗವಂತನೇ ಪ್ರೇರಕನೆಂದು ತಿಳಿದ ಜ್ಞಾನಿಯು, ವಿಷಯದ ಆಶೆಯನ್ನು ಬಿಟ್ಟು ಕರ್ಮಗಳನ್ನು ಮಾಡುತ್ತಿದ್ದರೂ ಕರ್ಮಗಳಲ್ಲಿ ಬದ್ಧನಾಗುವುದಿಲ್ಲ.

ಅಸಂಪ್ರಜ್ಞಾತ ಸಮಾಧಿಯಲ್ಲಿರುವ ಯೋಗಿಯು ಹೇಗೆ ಇರುವನೆಂಬುದನ್ನು ಹೇಳುವೆನು ಕೇಳು :— ಶ್ರೀಹರಿಯೇ ಯೋಗಿಯ ದೇಹದೊಳಗಿದ್ದು, ಅವನಿಂದ ತನ್ನ ದೇಹವು ಮಾಡುತ್ತಿರುವ ಗಮನಾದಿ ಕ್ರಿಯೆಗಳನ್ನು ಯೋಗಿಯು ತಿಳಿಯುವುದಿಲ್ಲ. ಅವನು ತಿಳಿಯುವುದು ಪರಮಾತ್ಮನೊಬ್ಬನನ್ನೇ. ಜ್ಞಾನಿಗೆ ಪ್ರಾರಬ್ಧಕರ್ಮದಿಂದ ದೇಹದ ಕಡೆ ಗಮನವು ಬಂದರೂ, ಆ ದೇಹವನ್ನು ಸ್ವತಂತ್ರವೆಂದು ತಿಳಿಯುವುದಿಲ್ಲ.

ಜ್ಞಾನವು ಹುಟ್ಟುವುದಕ್ಕೆ ಮೊದಲು ಹರಿಯ ಗುಣ ಮತ್ತು ಕರ್ಮ ಈ ವಿಷಯದಲ್ಲಿ ಅಜ್ಞಾನವಿರುವುದು. ಜಗತ್ತು ಸ್ವತಂತ್ರವೆಂದು ತಿಳಿಯುವುದಕ್ಕೆ ಅಜ್ಞಾನವೇ ಕಾರಣ. ಹರಿಯ ಉಪಾಸನೆಯಿಂದ ಉಂಟಾದ ಸುಜ್ಞಾನದಿಂದ ಈ

ಅಜ್ಞಾನವು ನಿವೃತ್ತವಾಗುವುದು. ಅಪರೋಕ್ಷಜ್ಞಾನಿಗೆ ಇತರರು ಸ್ವತಂತ್ರರೆಂಬ ಭಾವನೆ ಬರುವುದೇ ಇಲ್ಲ ಪರಮಾತ್ಮನ ಅಪರೋಕ್ಷಜ್ಞಾನದಿಂದ ಹರಿಶರಣನ ಅಜ್ಞಾನವು ನಾಶವಾಗುವುದೇ ಹೊರತು ಹರಿಗೆ ಯಾವ ವಿಶೇಷವಾದ ಲಾಭವೂ ಆಗುವುದಿಲ್ಲ.

ನನ್ನ ಸ್ವರೂಪವನ್ನು ತಿಳಿಸುವೆನು ಕೇಳು .– ವೈದಿಕ, ಲೌಕಿಕ ವ್ಯವಹಾರ ಗಳಿಗೆ ಪ್ರೇರಕನಾದ ನಾನು ಸ್ವಯಂ ಪೂರ್ಣ ಪ್ರಕಾಶನು. ಅಜನು. ಅಪ್ರಮೇಯನು. ಸರ್ವಜ್ಞನು. ಪೂರ್ಣ ಸುಖಜ್ಞಾನ ಸ್ವರೂಪನು ನನ್ನ ಗುಣಾದಿಗಳಿಂದ ಭೇದವಿಲ್ಲ ದವನು. ವೇದಾದಿಗಳಿಗೂ ಸಂಪೂರ್ಣವಾಗಿ ಅಗೋಚರನು.

ಮಿಥ್ಯಾಜ್ಞಾನವೆಂದರೆ – ಜೀವನಿಗೆ ಸ್ವಾತಂತ್ರ್ಯ, ಹರಿಗೆ ಅಸ್ವಾತಂತ್ರ್ಯ, ಜೀವಪರಮಾತ್ಮರಿಗೆ ಅಭೇದ ಮೊದಲಾದ ಪ್ರಮಾಣ ವಿರುದ್ಧ ಕಲ್ಪನೆಯೇ ಮಿಥ್ಯಾ ಜ್ಞಾನ ಸ್ವತಂತ್ರನಾದ ನನ್ನನ್ನೇ ಜೀವನ ಸ್ವಭಾವವು ಆಶ್ರಯಿಸಿದೆ. ಅದು ಅಸ್ವತಂತ್ರ. ಹೀಗೆ ಜೀವನು ನಿಶ್ಚಯವಾಗಿ ತಿಳಿದುಕೊಳ್ಳುವುದಿಲ್ಲ. ಪಂಚಭೇದವುಳ್ಳ ಜಗತ್ತು ಸತ್ಯ. ಅದ್ವೈತ ಜ್ಞಾನವು ಇದನ್ನು ಅಲ್ಲಗಳೆಯಲಾರದು. ಏಕೆಂದರೆ ಜಗತ್ತು ಮತ್ತು ಪರಮಾತ್ಮ ಎಂಬ ಎರಡು ತತ್ತ್ವಗಳನ್ನು ಜ್ಞಾನಿಗಳು ತಿಳಿದು ಮುಕ್ತಿಯನ್ನು ಹೊಂದುತ್ತಾರೆ ಮೋಕ್ಷವನ್ನು ಹೊಂದಲು ಸಹಾಯಕವಾದ ಜ್ಞಾನಕ್ಕೆ ಜಗತ್ತು ವಿಷಯವಾದುದರಿಂದ ಈ ಜಗತ್ತು ಸತ್ಯವೆಂದೇ ಸಿದ್ಧವಾಗುತ್ತದೆ ರಸಾಯನಾದಿ ಗಳಿಂದ ಅನಿತ್ಯವಾದ ದೇಹವನ್ನು ಪುಷ್ಟಿಗೊಳಿಸುವುದು ವ್ಯರ್ಥ ಶ್ರಮವೇ ಸರಿ.

ನನ್ನ ಪಾದವನ್ನೇ ಆಶ್ರಯಿಸಿ, ಫಲಾಪೇಕ್ಷೆಯಿಲ್ಲದೆ ವಿಹಿತ ಕರ್ಮಾನುಷ್ಠಾನ ವೆಂಬ ಕರ್ಮಯೋಗವನ್ನು ಅಭ್ಯಾಸ ಮಾಡಬೇಕು. ಅದರಿಂದ ಜ್ಞಾನದ್ವಾರಾ ಸ್ವರೂಪ ಸುಖವನ್ನು ಅನುಭವಿಸುವನು. ಹೀಗಿರುವುದರಿಂದ ಕರ್ಮಯೋಗವು ಸರ್ವಾಪೇಕ್ಷಿತ ಅಶೇಷ ಪುರುಷಾರ್ಥಸಾಧನವೆಂದು ತಿಳಿ.

### ಇಪ್ಪತ್ತೆಂಟನೆಯ ಅಧ್ಯಾಯ ಮುಗಿದುದು

**ಉದ್ಧವ** - ಸಜ್ಜನಪ್ರಿಯನೇ ! ನಿನ್ನನ್ನೇ ನಂಬಿದ ಗೋಪಾಲರಿಗೆ ನಿನ್ನನ್ನೇ ಅರ್ಪಿಸಿಕೊಂಡಿರುವೆ. ಇದು ಆಶ್ಚರ್ಯವಲ್ಲ. ನಿನ್ನ ಪಾದಭಜನೆಯ ಸವಿ ಯನ್ನು ಅನುಭವಿಸಿದವನು ನಿನ್ನನ್ನು ಎಂದಿಗೂ ಬಿಡಲಾರನು. ನಿನ್ನ ಮರೆತವನು ಪಶುವೇ ಸರಿ. ನಿಯಾಮಕನೇ ! ನಿನ್ನ ಭಕ್ತರ ಅಮಂಗಳಗಳನ್ನು ಕಳೆದು ಸ್ವಯೋಗ್ಯ ಜ್ಞಾನವನ್ನು ವ್ಯಕ್ತಮಾಡುವೆ. ಇಂತಹ ಮಹೋಪಕಾರಿಯಾದ ನಿನಗೆ ನಮಿಸಿ ಸದಾ ಸ್ಮರಿಸುತ್ತಿರುವ ಬ್ರಹ್ಮಜ್ಞಾನಿಗಳು ನಿನಗೆ ಸ್ವಲ್ಪವೂ ಪ್ರತಿಉಪಕಾರಮಾಡಲು

ಸಮರ್ಥರಾಗಲಾರರು. ಅಚ್ಯುತನೇ ! ಮನಸ್ಸನ್ನು ಗೆಲ್ಲಲು ಬಹಳ ಕಷ್ಟ. ನಿನ್ನನ್ನು ಹೊಂದಲು ಸುಲಭವಾದ ಸಾಧನೆಯನ್ನು ಹೇಳು.

**ಶ್ರೀಕೃಷ್ಣ** :– ಉದ್ಧವಾ ! ಸಂತೋಷ ! ನನ್ನನ್ನು ಸುಲಭವಾಗಿ ಹೊಂದಲು, ಮಂಗಳಕರಗಳಾದ ಭಾಗವತಧರ್ಮಗಳನ್ನು ಹೇಳುವೆನು ಕೇಳು :– ಇವನ್ನು ಅನುಷ್ಠಿಸಿ ಸಂಸಾರವನ್ನು ಜಯಿಸಿ ಸುಖಿಸಬಹುದು. ಮುಮುಕ್ಷುವು ನನ್ನನ್ನೇ ಸ್ಮರಿಸುತ್ತ ಸಕಲ ವಿಹಿತಕರ್ಮಗಳನ್ನೂ ನನ್ನ ಪ್ರೀತ್ಯರ್ಥವಾಗಿ ಮಾಡುವುದನ್ನು ಮೊದಲು ಕ್ರಮವಾಗಿ ಅಭ್ಯಾಸ ಮಾಡಬೇಕು. ನನ್ನಲ್ಲಿಯೇ ಮನಸ್ಸನ್ನು ನೆಲೆಗೊಳಿಸ ಬೇಕು. ನನ್ನ ಮತ್ತು ನನ್ನ ಭಕ್ತರಲ್ಲಿ ಪ್ರೀತಿಯನ್ನು ಮಾಡಬೇಕು. ದೇವತೆಗಳೂ, ಪ್ರಹ್ಲಾದಾದಿಗಳೂ, ಮನುಷ್ಯ ಭಕ್ತರೂ ನಡೆಸಿದ ಸದಾಚಾರವನ್ನು ಯೋಗ್ಯತಾನು ಸಾರ ನಡೆಸಬೇಕು. ನನ್ನ ಪ್ರಾಪ್ತಿಗಾಗಿ ಬಹು ಜನರಿಂದ ಕೂಡಿ ರಥೋತ್ಸವ ಮೊದ ಲಾದುವನ್ನು ನರ್ತನಗಾನಾದಿರಾಜವೈಭವಗಳಿಂದ ಮಾಡಬೇಕು. ನಿರ್ಲಿಪ್ತನಾಗಿ ಹೃದಯದೊಳಗೆ ಅಂತರ್ಯಾಮಿಯಾದ ನನ್ನನ್ನು ನೋಡಬೇಕು. ಶ್ರೀಹರಿಯು ಸರ್ವ ಗುಣವಿಶಿಷ್ಟನಾಗಿ ಸರ್ವಪ್ರಾಣಿಗಳೊಳಗೆ ನೆಲೆಸಿರುವನೆಂದು ಭಾವಿಸಿ ಸಕಲರ ದೇಹವೂ ಹರಿಯ ಮಂದಿರವೆಂದು ತಿಳಿದು ಪೂಜಿಸಬೇಕು. ತಿರಸ್ಕರಿಸಬಾರದು. ಶ್ರೀಹರಿಯು ವಿಪ್ರನಲ್ಲಿಯೂ, ಪುಲ್ಕಸಾದಿಗಳಲ್ಲಿಯೂ ಏಕಪ್ರಕಾರನಾಗಿರುವನೆಂಬ ಕೇವಲ ಈ ಜ್ಞಾನವನ್ನೇ ಹೊಂದಬೇಕು. ಇಂತಹ ಜ್ಞಾನಿಗೆ ಅಹಂಕಾರವು ಹೋಗಿ ಭಕ್ತಿಯು ವೃದ್ಧಿಯಾಗಿ ಮುಕ್ತಿಯು ಆಗುವುದು. ನನ್ನ ಭಕ್ತರು ಅಹಂಕಾರವನ್ನು ಬಿಟ್ಟು ನಾಯಿ, ಚಂಡಾಲ, ಕತ್ತೆ ಪರ್ಯಂತವಾದ ಪ್ರಾಣಿಗಳಲ್ಲಿರುವ ನನ್ನನ್ನು ಸಾಕ್ಷಾತ್ತಾಗಿ ನಮಿಸದೆ, ಮನಸ್ಸಿನಿಂದ ನಮಿಸಬೇಕು. ವಿಪ್ರಾದಿಗಳನ್ನು ಸಾಕ್ಷಾತ್ತಾಗಿ ನಮಿಸಬೇಕು. ಸಕಲಪ್ರಾಣಿಗಳಲ್ಲಿಯೂ ಶ್ರೀ ವಿಷ್ಣುವು ಅಂತರ್ಯಾಮಿಯಾಗಿರುವನೆಂಬ ಜ್ಞಾನವು ಹುಟ್ಟುವವರೆಗೆ ಉಪಾಸನೆಯನ್ನು ಮಾಡುತ್ತಿರಬೇಕು. ಅಂತಹವನಿಗೆ ಸಮಸ್ತ ಜಗತ್ತೂ ಪರಬ್ರಹ್ಮನ ಅಧೀನವೆಂಬ ಬುದ್ಧಿಯು ಬರುತ್ತದೆ. ಇದರ ಫಲ ವೇನೆಂದರೆ, ಸ್ವರೂಪಭೂತವಾದ ಬುದ್ಧಿಯಿಂದಲೂ ಶ್ರೀ ಪರಮಾತ್ಮನು ಸರ್ವಭಿನ್ನ ಮತ್ತು ಸರ್ವಕರ್ತೃ-ಕಾರಯಿತೃ ಎಂದು ಮಾಡುವ ಉಪಾಸನೆಯು ಸಕಲ ಮೋಕ್ಷೋ ಪಾಯಗಳಲ್ಲಿ ಅತ್ಯಂತ ಮುಖ್ಯವೂ, ಸುಲಭವೂ ಆಗಿರುವುದೆಂದು ನನ್ನ ಸಿದ್ಧಾಂತ. ಅಂದ ಬಳಿಕ ಈ ಉಪಾಸನೆಯನ್ನು ತ್ರಿಕರಣಗಳಿಂದಲೂ ನಿರಂತರ ಆಚರಿಸಬೇಕು. (ಹೀಗೆ ಹೇಳಿರುವುದರಿಂದ ಅನ್ಯ ಮತಗಳೆಲ್ಲ ನಿಷ್ಫಲಗಳೆಂದು ತಿಳಿಸಿದಂತಾಯಿತು.)

ನಿಷ್ಕಾಮಧರ್ಮಕ್ಕೆ ಮೋಕ್ಷವೇ ಫಲವಾದುದರಿಂದ ಈ ಧರ್ಮವನ್ನು ಉಪ ಕ್ರಮಿಸಿದರೂ ಮೋಕ್ಷವು ಲಭಿಸುವುದು. ಇದರ ಆಚರಣೆಯಿಂದ ಅಣುಮಾತ್ರ ಆಯಾಸವೂ ಆಗುವುದಿಲ್ಲ.

ಉದ್ಧವಾ ! ಇತರ ದೇವತೆಗಳನ್ನು ಉದ್ದೇಶಿಸಿ ಜನರು ಮಾಡತಕ್ಕ ಧ್ಯಾನ, ಪೂಜಾದಿಗಳು ನಿನಗೂ, ನಿನ್ನಂತಹ ಅಧಿಕಾರಿಗಳಿಗೂ ನಿಷ್ಫಲವೇ ಆಗುವುದು. ಅದರಲ್ಲಿ ಮಾಡುವ ಪ್ರಯತ್ನವೂ ದುರ್ನಯ ರೂಪವಾದ ಅಧರ್ಮದಂತೆ ನಿಷ್ಫಲವೇ ಸರಿ. ಜಗತ್ತು ಕ್ಷಣಕ್ಷಣಕ್ಕೂ ಬೇರೆ ಬೇರೆ ರೀತಿಯಾಗಿ ತಿಳಿಯಲ್ಪಡುವುದರಿಂದ ಅನೃತವೆನಿಸುವುದು. ಇಂತಹ ಜಗತ್ತಿನಿಂದ ಅಥವಾ ದೇಹದಿಂದ ನಿತ್ಯ ಮುಕ್ತನೂ, ಸರ್ವದಾ ಏಕಪ್ರಕಾರನೂ ಆದುದರಿಂದ ಸತ್ಯವೆನಿಸುವವನೂ ಆದ ನನ್ನನ್ನು ಹೊಂದಬೇಕೆಂಬುದೇ ಸಾತ್ವಿಕರ ನಿಶ್ಚಯರೂಪಬುದ್ಧಿ. ಸಾರವನ್ನಿಚ್ಛಿಸುವವರ ಮನಸ್ಸಿನಿಂದ ಸಾರಾನ್ವೇಷಣೆಯು ಶಕ್ಯ.

ಉದ್ಧವ ! ಸಂಸಾರಮೋಚಕವಾದ ಬ್ರಹ್ಮಜ್ಞಾನವನ್ನು ನಿನಗೆ ಉಪದೇಶಿಸಿರುವೆನು. ಇದನ್ನು ಅನುಸಂಧಾನಮಾಡುವವರೆಲ್ಲರೂ ಮುಕ್ತರಾಗುವರು. ಈ ಬ್ರಹ್ಮಪ್ರತಿಪಾದಕಶಾಸ್ತ್ರವನ್ನು ನನ್ನ ಭಕ್ತರಿಗೆ ಉಪದೇಶಿಸುವವನೂ ನನ್ನನ್ನು ಹೊಂದುತ್ತಾನೆ. ಇದನ್ನು ಪ್ರತಿದಿನವೂ ಶ್ರದ್ಧೆಯಿಂದ ಅಧ್ಯಯನ ಮಾಡುವವನೂ, ಏಕಾಗ್ರ ಮನಸ್ಸಿನಿಂದ ಶ್ರವಣ ಮಾಡುವವನೂ, ಜ್ಞಾನಿಯಾಗಿ, ಪಾವನನಾಗಿ, ಪರಮಭಕ್ತಿಯಿಂದ ಸಂಸಾರದಿಂದ ಮುಕ್ತನಾಗುತ್ತಾನೆ.

ಮಿತ್ರಉದ್ಧವಾ ! ಪರಬ್ರಹ್ಮನ ವಿಷಯವನ್ನು ನಾನು ಹೇಳಿದಂತೆ ನೀನು ಚೆನ್ನಾಗಿ ತಿಳಿದುಕೊಂಡೆಯಾ ? ನಿನ್ನ ಅಜ್ಞಾನವು ದೂರವಾಯಿತೆ ? ಶೋಕವು ನಷ್ಟವಾಯಿತೆ ?

ಇದನ್ನು ನಾಸ್ತಿಕರೂ, ಗೂಢದ್ವೇಷಿಗಳೂ, ದಾಂಭಿಕರೂ ಇವರೇ ಮೊದಲಾದವರಿಗೆ ಸರ್ವಥಾ ಹೇಳಬಾರದು. ಇಬ್ಬರಿಗೂ ಹಾನಿಕರ. ಇಂತಹ ದೋಷಗಳಿಲ್ಲದ ಹರಿಪಾಯುಭಕ್ತನಿಗೇ ಹೇಳಬೇಕು. ನನ್ನಲ್ಲಿಯೂ, ನನ್ನ ಭಕ್ತರಲ್ಲಿಯೂ ಭಕ್ತಿಯನ್ನು ಮಾಡತಕ್ಕ ಶೂದ್ರರಿಗೂ, ಸ್ತ್ರೀಯರಿಗೂ, ಉಪದೇಶಿಸಬೇಕು. ಅಮೃತವನ್ನು ಕುಡಿದ ಮೇಲೆ ಬೇರೆ ಪೇಯವು ಹೇಗಿಲ್ಲವೋ, ತತ್ತ್ವವನ್ನು ತಿಳಿಯಲಿಚ್ಛಿಸುವವನು ಇದನ್ನು ತಿಳಿದ ಮೇಲೆ ತಿಳಿಯಬೇಕಾದುದು ಒಂದೂ ಇಲ್ಲ. ಇತರ ಜ್ಞಾನ. ಕರ್ಮ, ದಂಡನೀತಿ ಮೊದಲಾದುವುಗಳಿಂದ ಮೋಕ್ಷವಾಗುವುದಿಲ್ಲ.

ನನ್ನಿಂದ ಉಕ್ತವಾದ ಶಾಸ್ತ್ರವನ್ನು ಮೋಹಗೊಂಡ ಅನ್ಯಥಾ ಜ್ಞಾನಿಗಳು ಸೇವಿಸುವುದಿಲ್ಲ. ನಾನು ಯಾರಿಗೆ ಅನುಗ್ರಹವನ್ನು ಮಾಡುವೆನೋ ಅವನಿಗೇ ನನ್ನ ಉಪದೇಶದಲ್ಲಿ ವಿಶ್ವಾಸವುಂಟಾಗಿ, ಜ್ಞಾನಪೂರ್ವಕವಾಗಿ ನಿಷ್ಕಾಮಕರ್ಮವನ್ನು ಮಾಡಿ ಜ್ಞಾನವನ್ನು ಹೊಂದಿ ಮುಕ್ತನಾಗುವನು.

**ಶ್ರೀ ಶುಕಾಚಾರ್ಯರು :–** 'ಸಂದೇಹವು ಹೋಯಿತೆ ? ಜ್ಞಾನವಾಯಿತೆ ? ಎಂದು ತನ್ನಲ್ಲಿ ಅತಿ ಪ್ರೀತಿಯಿಂದ ಆಡಿದ ಶ್ರೀಕೃಷ್ಣನ ಮಾತನ್ನು ಉದ್ಧವನು ಕೇಳಿ ಕರವನ್ನು ಮುಗಿದನು. ಭಕ್ತಿಯು ವೃದ್ಧಿಯಾದುದರಿಂದ ಕೊರಳ ಶಿರವು ಉಬ್ಬಿ ಆನಂದ ಬಾಷ್ಪವನ್ನುದುರಿಸುತ್ತ 'ಮುಂದೆ ಶ್ರೀಕೃಷ್ಣನ ದರ್ಶನವು ದುರ್ಲಭ' ಎಂದು ಖೇದವನ್ನು ಹೊಂದಿದನು. ಮತ್ತು ಶ್ರೀಕೃಷ್ಣನು ವಿಶ್ವಾಸದಿಂದ ಉಪದೇಶಿಸಿದನು ಎಂದು ಮಹದಾನಂದವನ್ನು ಹೊಂದಿ ಸುಮ್ಮನೆ ಕುಳಿತುಬಿಟ್ಟನು. ಬಳಿಕ ಸಮಾಧಾನ ಚಿತ್ತನಾಗಿ ಶ್ರೀಕೃಷ್ಣನಚರಣಕ್ಕೆ ಹಣೆಯನ್ನು ಚಾಚಿ ನಮಸ್ಕರಿಸಿ ಕೈ ಮುಗಿದುಕೊಂಡು ಬಿನ್ನವಿಸುವನು :–

**ಉದ್ಧವ :–** ಸ್ವಾಮಿಯೇ ! ನೀನು ನನ್ನಲ್ಲಿ ವಿಜ್ಞಾನ ಜ್ಯೋತಿಯನ್ನು ಹಚ್ಚಿದಾಗಲೇ ನಿನ್ನ ಕೃಪಾತಿಶಯವು ನನ್ನ ಮೇಲೆ ಅಭಿವೃದ್ಧಿ ಹೊಂದಿತೆಂದು ನಿಶ್ಚಯಿಸಿದೆನು. ಪರಮೋಪಕಾರಿಯಾದ ನೀನೇ ನಿಷೇವ್ಯನು. ಯಾದವರಲ್ಲಿ ನನ್ನ ಮೇಲೆ ಸ್ನೇಹವನ್ನು ನೀನು ವಿಸ್ತರಿಸಿರುವೆ. ನಿನ್ನ ಇಚ್ಛೆಯಿಂದ ನನಗೆ ಉಂಟಾದ ಜ್ಞಾನದಿಂದ ಮೋಹ, ಅಭಿಮಾನ ಪಾಶವು ನಾಶವಾಯಿತು.

ಶ್ಲೋಕ

**ನಮೋಸ್ತು ತೇ ಮಹಾಯೋಗಿನ್ ಪ್ರಪನ್ನಮನುಶಾಧಿ ಮಾಂ ।**
**ಯಥಾ ತ್ವಚ್ಚರಣಾಂಭೋಜೇ ರತಿಃ ಸ್ಯಾದನಪಾಯಿನೀ॥**

**ಶ್ರೀಕೃಷ್ಣ :–** ಉದ್ಧವಾ ! ಬದರಿಗೆ ಹೋಗಿ ಅಲಕನಂದೆಯಲ್ಲಿ ಸ್ನಾನ ಮಾಡಿ, ನಿಷ್ಕಲ್ಮಷನಾಗು. ದೇಹಸುಖವನ್ನು ಬಯಸದಿರು. ಜಿತೇಂದ್ರಿಯನೂ, ಶಾಂತಚಿತ್ತನೂ ಆಗಿ ನಾನು ಗೈದ ಉಪದೇಶವನ್ನು ಮನನ ಮಾಡುತ್ತಾ, ದೃಢ ಭಕ್ತಿಯಿಂದ ನನ್ನ ಮಹಿಮೆಗಳನ್ನು ಕೊಂಡಾಡುತ್ತ, ಮನಸ್ಸನ್ನು ನನ್ನಲ್ಲಿಯೇ ಇಟ್ಟು ನನ್ನ ಧರ್ಮಗಳನ್ನೇ ಆಚರಿಸುತ್ತಿರು, ಬಳಿಕ ನನ್ನನ್ನು ಹೊಂದುವೆ.

**ಶ್ರೀಶುಕ .–** ಉದ್ಧವನು ಶ್ರೀಕೃಷ್ಣನಿಗೆ ಬಲವಂದು, ಭಕ್ತಿಯಿಂದ ಪಾದ ಗಳ ಮೇಲೆ ಶಿರಸ್ಸನ್ನಿಟ್ಟು ನಮಿಸಿ, ಆನಂದ ಬಾಷ್ಪಗಳಿಂದಲೇ ಹರಿಯ ಚರಣಗಳನ್ನು ತೊಳೆದು, ಅವನನ್ನು ಅಗಲಿರಲಾರದೆ ಸಂಕಟಪಟ್ಟು, ಕೊನೆಗೆ ಶ್ರೀಕೃಷ್ಣನ ಪಾದುಕೆ ಗಳನ್ನು ತಲೆಯ ಮೇಲಿಟ್ಟುಕೊಂಡು ಬಾರಿಬಾರಿಗೂ ಅವನ ಪಾದಗಳಿಗೆ ನಮಿಸಿ ಬಹಳ ಕಷ್ಟದಿಂದ ಆ ಸ್ಥಳವನ್ನು ಬಿಟ್ಟು ಹೊರಟನು. ಬಳಿಕ ಅವನು ಬದರಿಗೆ ಹೋಗಿ, ಧ್ಯಾನವನ್ನು ಮಾಡಿ, ಕೊನೆಗೆ ಶ್ರೀನಾರಾಯಣನ ಸಂನಿಧಾನವನ್ನು ಸೇರಿದನು.

ಪರೀಕ್ಷಿದ್ರಾಜನೇ ! ಈ ಜ್ಞಾನಾಮೃತವನ್ನು ಸೇವಿಸಿದವನು ಮುಕ್ತನಾಗುತ್ತಾನೆ. ಈ ಜ್ಞಾನಾಮೃತವು ಜ್ಞಾನ ಮತ್ತು ವಿಜ್ಞಾನಗಳೆಂಬ ಸವಿಯುಳ್ಳದ್ದು. ವೇದವೆಂಬ ಕುಮುದಪುಷ್ಪದ ಅಂಶವೇ ಆಗಿರುವುದು. ಜ್ಞೇಯಗಳಲ್ಲಿ ಶ್ರೇಷ್ಠ. ಅಧಿಕಾರಿಗಳ ಯೋಗ್ಯತೆಗೆ ಪೂರ್ಣವಾಗಿ ತಿಳಿಸಿ ಕೊಡತಕ್ಕುದು. ಇಂತಹ ಜ್ಞಾನಾಮೃತವನ್ನು ತನ್ನ ಭಕ್ತರ ಸಂಸಾರಭಯವನ್ನು ಪರಿಹರಿಸಲಿಚ್ಛಿಸಿ, ತನ್ನ ದಾಸರಿಗೆ ಪಾನ ಮಾಡಿಸುತ್ತಿರುವ ಸರ್ವಜ್ಞನೂ, ಪುರುಷೋತ್ತಮನೂ ಆದ ಶ್ರೀಕೃಷ್ಣನನ್ನು ನಮಿಸುತ್ತೇನೆ.

## ಇಪ್ಪತ್ತೊಂಭತ್ತನೆಯ ಅಧ್ಯಾಯ ಮುಗಿದುದು

**ಪರೀಕ್ಷಿತ್ :–** ಉದ್ಧವನು ಹೊರಟು ಹೋದ ಮೇಲೆ ಶ್ರೀಕೃಷ್ಣನು ದ್ವಾರಕಿಯಲ್ಲಿ ಮಾಡಿದ ಕಾರ್ಯಗಳೇನು ? ಕುಲಕ್ಕೆ ಬ್ರಹ್ಮಶಾಪವು ಬರಲಾಗಿ ಶ್ರೀಕೃಷ್ಣನು ತನಗೆ ಅತಿಪ್ರಿಯವಾದ ಶರೀರವನ್ನು ಭೂಲೋಕದಿಂದ ಮೇಲಿನ ಲೋಕಕ್ಕೆ ಹೇಗೆ ಒಯ್ದನು ? ಅವನ ದೇಹವು ಬಿಡಲಾಗದದು. ಆ ಹರಿಯ ದೇಹದ ಮಹಿಮೆ ಅಪಾರ ! ಸ್ತ್ರೀಯರು ಶ್ರೀಕೃಷ್ಣನನ್ನು ನೋಡುತ್ತಿದ್ದರೂ ನೇತ್ರಗಳನ್ನು ಹಿಂತಿರುಗಿಸಲು ಶಕ್ತರಾಗಲಿಲ್ಲ. ಕಿವಿಯಿಂದ ಕೇಳಿದ 'ಕಂಸಸಂಹಾರಿ' ಮುಂತಾದ ಯಶಸ್ಸನ್ನು ಮರೆಯಲು ಅಶಕ್ತರಾದರು. ಇವನ ಮಾತುಗಳು ಮನಸ್ಸು ಮತ್ತು ಕರ್ಣಗಳಿಗೆ ಸುಖಪ್ರದಗಳಾಗಿವೆ. ದೇಹವು ಸುಖಮಯವಾಗಿದೆ. ಮತ್ತು ಜ್ಞಾನಿಗಳಿಗೆ ಪ್ರಮಾಣ ವೇದ್ಯವಾದುದು. ಭಾರತ ಯುದ್ಧದಲ್ಲಿ ಪಾರ್ಥನ ರಥದಲ್ಲಿದ್ದ ರೂಪವು ಭೀಷ್ಮಾದಿಗಳಿಗೆ ಸಾರೂಪ್ಯ ಮೋಕ್ಷಕ್ಕೆ ಕಾರಣವಾಯಿತು. ಇಂತಹ ಅಪ್ರಾಕೃತ ದೇಹ ಸಹಿತ ಶ್ರೀಕೃಷ್ಣನು ಪರಂಧಾಮಕ್ಕೆ ತೆರಳಿದ ರೀತಿಯನ್ನು ತಿಳಿಸಿ.

**ಶ್ರೀಶುಕ –** ಶ್ರೀಕೃಷ್ಣನು ಸ್ವರ್ಗ, ಅಂತರಿಕ್ಷ, ಭೂಲೋಕಗಳಲ್ಲಿನ ಉತ್ಪಾತಗಳನ್ನು ಕಂಡು "ಯಾದವರೇ ! ವಿನಾಶಸೂಚಕಗಳಾದ ಭಯಂಕರ ಉತ್ಪಾತಕಗಳು ತೋರುತ್ತಿವೆ. ಆದುದರಿಂದ ನಾವು ಕ್ಷಣಮಾತ್ರವೂ ಇಲ್ಲಿರಬಾರದು. ಪ್ರಭಾಸ ಕ್ಷೇತ್ರಕ್ಕೆ ಹೋಗಿ ಸ್ನಾನ ಮಾಡಿ ದೇವತೆಗಳನ್ನು ಪೂಜಿಸಿ ದಾನ, ಭೋಜನಾದಿಗಳಿಂದ ಬ್ರಾಹ್ಮಣರನ್ನು ತೃಪ್ತಿಪಡಿಸೋಣ. ಸ್ತ್ರೀಬಾಲವೃದ್ಧರು ಶಂಖೋದ್ಧಾರಕ್ಕೆ ಹೋಗಲಿ" ಎಂದನು. ಯಾದವರು ಶ್ರೀಕೃಷ್ಣನ ಮಾತಿನಂತೆ ಪ್ರಭಾಸಕ್ಕೆ ಹೋಗಿ ಶ್ರೇಯಸ್ಸಾಗುವಂತೆ ದೇವಬ್ರಾಹ್ಮಣರನ್ನು ಪೂಜಿಸಿದರು. ಬಳಿಕ ಮದ್ಯಪಾನ ಮಾಡಿ, ದೈವದಿಂದ ಬುದ್ಧಿಭ್ರಷ್ಟರಾಗಿ, ಕಲಹವಾಡುತ್ತ ಪರಸ್ಪರ ಹೊಡೆದಾಡಿ ಮೃತರಾದರು. ಆಗ ಶ್ರೀಕೃಷ್ಣನು ಭೂಭಾರವು ಸಂಪೂರ್ಣವಾಗಿ ನಾಶವಾಯಿತೆಂದು ತಿಳಿದನು. ಆ ಮೇಲೆ ಬಲರಾಮನು ಮೂಲ ರೂಪವನ್ನು ಸೇರಬೇಕೆಂದು

ಸಮುದ್ರದ ತೀರಕ್ಕೆ ಬಂದು ಅಲ್ಲಿ ಭಗವಂತನ ಧ್ಯಾನ ಮಾಡುತ್ತ ತನ್ನ ಅಂತ ರ್ಯಾಮಿಯು ಹೊರಗಿರುವ ವ್ಯಾಪ್ತವಾದ ತನ್ನ ರೂಪದಲ್ಲಿ ಒಂದಾಗುವನು ಎಂದು ಲಯ ಚಿಂತನೆ ಮಾಡಿ ದೇಹವನ್ನು ಬಿಟ್ಟನು. ಶ್ರೀಕೃಷ್ಣನಾದರೋ ಒಂದು ಆಲದ ಮರದ ಬುಡದಲ್ಲಿ ಕುಳಿತು ಚತುರ್ಭುಜರೂಪವನ್ನು ಪ್ರಕಟಿಸಿ ಬಲತೊಡೆಯ ಮೇಲೆ ಕೆಂಪಾದ ಎಡ ಅಂಗಾಲನ್ನು ಇಟ್ಟು ಕುಳಿತನು. ಜರಾ ಎಂಬ ವ್ಯಾಧನು ಅದನ್ನು ಮೃಗವೆಂದು ತಿಳಿದು ಅಂಗಾಲಿಗೆ ಮುಸಲ ಮೋನನ್ನುಳ್ಳ ಬಾಣವನ್ನು ಬಿಟ್ಟು ಸಮೀಪಕ್ಕೆ ಬಂದು ನೋಡುತ್ತಾನೆ ಚತುರ್ಭುಜದಿಂದೊಪ್ಪುವ ವಾಸುದೇವ ಮೂರುತಿ. (ಈ ವ್ಯಾಧನು ಹಿಂದೆ ಭೃಗುಮುನಿಯಾಗಿದ್ದವನು. ಕರ್ಮದಿಂದ ಈಗ ಬೇಡರವನು.) ಸ್ವಾಮಿಯನ್ನು ಕಂಡು ನಡುಗಿ, ತನ್ನ ತಪ್ಪಿಗಾಗಿ ಪಶ್ಚಾತ್ತಾಪಪಟ್ಟು ಅವನ ಪಾದಗಳ ಮೇಲೆ ಬಿದ್ದು "ಮಧುಸೂದನನೇ ! ತಿಳಿಯದೆ ಮಾಡಿದ ನನ್ನ ಅಪರಾಧವನ್ನು ಕ್ಷಮಿಸು. ಮಹಾಪಾಪಿಯಾದ ನನ್ನನ್ನು ಕೊಂದು ಬಿಡು. ತಿರುಗಿ ಸಜ್ಜನರಿಗೆ ದ್ರೋಹ ಮಾಡುವುದು ತಪ್ಪುತ್ತದೆ. ನಿನ್ನ ಸೃಷ್ಟ್ಯಾದಿ ವ್ಯಾಪಾರಗಳನ್ನು ಬ್ರಹ್ಮಾದಿಗಳೇ ತಿಳಿಯಲಾರರು. ನಾವು ಬೇಡರು. ಅಜ್ಞಾನಿಗಳು. ನಿನ್ನನ್ನು ಹೊಗಳ ಬಲ್ಲೆವೆ ? ಅಧೋಗತಿಗೆ ನಾನು ಬೀಳುವುದಕ್ಕೆ ಮೊದಲೇ ನನ್ನನ್ನು ಕೊಂದು ಬಿಡು" ಎಂದು ಬೇಡಿದನು.

**ಶ್ರೀಕೃಷ್ಣ** .– ವ್ಯಾಧನೇ ! ಹೆದರಬೇಡ. ಇದು ನನಗೆ ಇಷ್ಟವೇ ಆಗಿದೆ. ನನ್ನಾಜ್ಞೆಯಿಂದ ಸ್ವರ್ಗಕ್ಕೆ ಹೋಗು !

**ಶುಕ** ·– ವ್ಯಾಧನು ಹರಿಗೆ ಬಲವಂದು ನಮಿಸಿ, ಆಗ ಬಂದ ವಿಮಾನದಲ್ಲಿ ಕುಳಿತು ಸ್ವರ್ಗಕ್ಕೆ ತೆರಳಿದನು. ದಾರುಕನು ಕೃಷ್ಣನನ್ನು ಹುಡುಕುತ್ತ ಬಂದು, ಅವನನ್ನು ಕಂಡು ಕಣ್ಣೀರನ್ನು ಸುರಿಸಿ ದುಃಖಿತನಾಗಿ ಶ್ರೀಕೃಷ್ಣನ ಪಾದದ ಮೇಲೆ ಬಿದ್ದನು. ಆಗ ಗರುಡಧ್ವಜ ಸಹಿತವಾದ ರಥ, ಅಶ್ವಗಳು, ಆಯುಧಗಳು ವೈಕುಂಠಕ್ಕೆ ಹೊರಟು ಹೋದುವು. ಇದನ್ನು ನೋಡಿದ ದಾರುಕನು ಆಶ್ಚರ್ಯವನ್ನು ಹೊಂದಿ ಗರಬಡಿದವನಂತೆ ನಿಂತುಬಿಟ್ಟನು.

**ಶ್ರೀಕೃಷ್ಣ** · ದಾರುಕ ! ದ್ವಾರಕಿಗೆ ಹೋಗಿ ಯಾದವರ ನಿಧನವನ್ನೂ ಬಲರಾಮನ ನಿರ್ಯಾಣವನ್ನೂ, ನನ್ನ ಸ್ಥಿತಿಯನ್ನೂ ಬಂಧುಗಳಿಗೆ ತಿಳಿಸು. ಎಲ್ಲರೂ ದ್ವಾರಕಿಯನ್ನು ಬಿಟ್ಟು ಹೋಗಬೇಕೆಂದು ತಿಳಿಸು ನಾನು ಅದೃಶ್ಯನಾದೊಡನೆಯೇ ಸಮುದ್ರವು ದ್ವಾರಕಿಯನ್ನು ಮುಳುಗಿಸಿ ಬಿಡುತ್ತದೆ. ಆದುದರಿಂದ ಅಲ್ಲಿಗೆ ಬರುವ ಅರ್ಜುನನೊಡನೆ ಇಂದ್ರಪ್ರಸ್ಥಕ್ಕೆ ಹೋಗಬೇಕೆಂದು ತಿಳಿಸು. ನೀನು ನನಗೆ ಪ್ರೀತಿ ಯಾಗುವ ಧರ್ಮವನ್ನು ನಡೆಸುತ್ತ ಜ್ಞಾನಿಯಾಗಿ ಎಲ್ಲವೂ ಶ್ರೀ ಹರೀಚ್ಛೆಯಿಂದಲೇ ಆಯಿತು–ಎಂದು ತಿಳಿದು ಶಾಂತಿಯನ್ನು ಹೊಂದು.

**ಶುಕ :--** ದಾರುಕನು ಶ್ರೀಕೃಷ್ಣನಿಗೆ ನಮಸ್ಕರಿಸಿ ಅವನನ್ನೇ ಧ್ಯಾನಿಸುತ್ತ, ದುಃಖಿತನಾಗಿ ದ್ವಾರಕಾಪಟ್ಟಣಕ್ಕೆ ಹೋದನು.

## ಮೂವತ್ತನೆಯ ಅಧ್ಯಾಯ ಮುಗಿದುದು

**ಶುಕ :--** ಬಳಿಕ ಅಲ್ಲಿಗೆ ಬ್ರಹ್ಮರುದ್ರೇಂದ್ರಾದಿ ದೇವತೆಗಳೂ, ಮುನಿಗಳೂ ಗಂಧರ್ವಾದಿ ಸರ್ವರೂ ಭಗವಂತನು ಪರಂಧಾಮಕ್ಕೆ ಚಿತ್ತೈಸುವುದನ್ನು ನೋಡ ಬೇಕೆಂದು ಬಂದು, ಗಗನದಲ್ಲೇ ನಿಂದು ಅವನ ಮಹಿಮೆಗಳನ್ನು ಗಾನ ಮಾಡುತ್ತ ಪುಷ್ಪವೃಷ್ಟಿಯನ್ನು ಮಾಡಿದರು.

ಶ್ರೀಕೃಷ್ಣನು ತನ್ನ ಸಂನಿಧಾನವುಳ್ಳ ಆ ದೇವತೆಗಳನ್ನು ನೋಡಿ, ತನ್ನ ಮೂಲ ರೂಪದಲ್ಲಿ ತನ್ನನ್ನು ಸಂಯೋಜಿಸಿ, ಕಮಲ ನೇತ್ರಗಳನ್ನು ಮುಚ್ಚಿಕೊಂಡು ಪರಮ ಸುಂದರವಾದ ತನ್ನ ದೇಹವನ್ನು ಅಗ್ನಿಸಂಬಂಧಿಯಾದ ಯೋಗ ಧಾರಣೆಯಿಂದ ಉಂಟಾದ ಅಗ್ನಿಯಿಂದ ದಹನ ಮಾಡದೆ, ತನ್ನ ಸ್ಥಾನವನ್ನು ಪ್ರವೇಶಿಸಿದನು. ಆಗ ದೇವದುಂದುಭಿಗಳು ಬಾರಿಸಲ್ಪಟ್ಟುವು. ಪುಷ್ಪವೃಷ್ಟಿಯಾಯಿತು. ಅದು ವರೆಗೆ ಭೂಮಿಯಲ್ಲಿ ನೆಲೆಸಿದ್ದ ಸತ್ಯ, ಧರ್ಮ, ಧೃತಿ, ವಿಜ್ಞಾನ, ಕೀರ್ತಿ ಮತ್ತು ಕಾಂತಿ ಇವೆಲ್ಲ ಅದೃಶ್ಯವಾದುವು. ಇತರರಿಗೆ ತಿಳಿಯಲಾಗದ ಗಮನವುಳ್ಳ ಶ್ರೀಕೃಷ್ಣ ನನ್ನು ಬ್ರಹ್ಮಾದಿಗಳು ನೋಡಿ ಅತಿವಿಸ್ಮಿತರಾದರು. ಶ್ರೀಹರಿಯ ಯೋಗಗತಿ ಯನ್ನು ನೋಡಿ ಅವರೆಲ್ಲರೂ ಬಹುವಾಗಿ ಪ್ರಶಂಸಿಸಿ ತಮ್ಮ ತಮ್ಮ ಲೋಕಗಳಿಗೆ ಹೊರಟುಹೋದರು. ಶ್ರೀಹರಿಯು ತನ್ನ ಶಕ್ತಿಯಿಂದಲೇ ಜಗತ್ತನ್ನು ಸೃಷ್ಟಿಸಿ ಪ್ರಳಯ ಕಾಲದಲ್ಲಿ ಸಂಹರಿಸಿ, ತನ್ನ ಸಾಮರ್ಥ್ಯದಿಂದಲೇ ವಿರಾಜಿಸುತ್ತಿರವನು. ಆದುದರಿಂದ ಲೋಕವಿಲಕ್ಷಣನಾದ ಶ್ರೀಹರಿಯು ಪ್ರಾಣಿಗಳ ಜನನ ಮರಣಗಳಂತೆ ಸ್ವೇಚ್ಛೆಯಿಂದಲೇ ನಟಿಸುವನು.

ಶ್ರೀಹರಿಯು ಮನುಷ್ಯಶರೀರದಂತೆ ಕಾಣಿಸುತ್ತಿದ್ದ ಅಪ್ರಾಕೃತ ಶರೀರದಿಂದಲೇ ಯಮಲೋಕಕ್ಕೆ ಹೋಗಿ ಗುರುಪುತ್ರನು ಮರಣಶೀಲದೇಹವನ್ನು ಹೊಂದುವಂತೆ ಮಾಡಿ ಕರೆತಂದನು. ಬ್ರಹ್ಮಾಸ್ತ್ರದಿಂದ ದಗ್ಧನಾದ ನಿನ್ನನ್ನು ಬದುಕಿಸಿದನು ಬಾಣನ ಯುದ್ಧದಲ್ಲಿ ಮೃತ್ಯುಂಜಯನೆನಿಸಿದ ರುದ್ರನನ್ನು ಗೆದ್ದನು. ಜರಾವ್ಯಾಧನನ್ನು ಸಶರೀರನಾಗಿರುವಂತೆಯೇ ಸ್ವರ್ಗಕ್ಕೆ ಕಳುಹಿಸಿದನು. ಅವನು ಸ್ವಾಮಿ ರಹಿತನಾದ ಜಗನ್ನಾಥನು. ರುದ್ರಾದಿದೇವತೆಗಳಿಗೆ ಸ್ವಾಮಿತ್ವವನ್ನು ಕೊಡತಕ್ಕವನು. ಇಂತಹವನ ಅಪ್ರಾಕೃತದೇಹಕ್ಕೆ ಮರಣವೆಲ್ಲಿಂದ ಬಂದೀತು ? ವ್ಯಾಧನ ಬಾಣದಿಂದ

ರಕ್ಷಿಸಿಕೊಳ್ಳಲು ಅವನು ಶಕ್ತನಲ್ಲವೇನು ? ಅವನು ಸರ್ವಜ್ಞನು. ಪರಿಪೂರ್ಣ ಶಕ್ತಿಯುಳ್ಳವನು. ಸ್ವೇಚ್ಛೆಯಂತೆ ನಡೆಯುವ ಪ್ರಭು. ಈ ಕೃಷ್ಣನು ಮರ್ತ್ಯಶರೀರವು ನಶ್ವರವೆಂದು ತೋರಿಸುವುದಕ್ಕಾಗಿ ಬಲರಾಮಾದಿ ದೇವಾಂಶರು, ಅವರವರ ದೇಹಗಳನ್ನು ಇಲ್ಲಿಯೇ ಬಿಟ್ಟು ಹೋಗುವಂತೆ ಮಾಡಿದನು. ಅಯೋಗ್ಯರಾದ ಅಸುರರು ಕೃಷ್ಣನು ತಮ್ಮಂತೆ ಮನುಷ್ಯನು, ದೇವತೆಯಲ್ಲ ಎಂದು ಭ್ರಾಂತಿಯಿಂದ ತಿಳಿಯಲಿ ಎಂಬುದಕ್ಕಾಗಿ ಶ್ರೀಪರಮಾತ್ಮನು ವೈಕುಂಠಕ್ಕೆ ಹೋಗುವಾಗ "ಮಾಯಯಾ ಮೃತಕಂ ದೇವಃ ತದಾ ಸೃಷ್ಟ್ವಾ ಪ್ರದರ್ಶಯೇತ್" ಎಂಬ ಶ್ರೀಮದಾಚಾರ್ಯರ ತಾತ್ಪರ್ಯ ವಚನದಂತೆ ತನ್ನಂತಿರುವ ಒಂದು ಮೃತದೇಹವನ್ನು ಸೃಷ್ಟಿಮಾಡಿ, ವೈಕುಂಠಕ್ಕೆ ತನ್ನ ದೇಹದಿಂದಲೇ ತೆರಳಿದನು.

ಶ್ರೀಕೃಷ್ಣನು ಪರಂಧಾಮಕ್ಕೆ ಪಯಣಿಸಿದ ರೀತಿಯನ್ನೂ, ಉತ್ಕೃಷ್ಟವಾದ ಅವನ ಸ್ವರೂಪವನ್ನೂ ಬೆಳಗ್ಗೆ ಎದ್ದು ಗಾನಮಾಡುವವನೂ ಮುಕ್ತಿಯನ್ನು ಹೊಂದುತ್ತಾನೆ.

ದಾರುಕನು ದ್ವಾರಕೆಗೆ ಹೋಗಿ ಉಗ್ರಸೇನ ವಸುದೇವರಿಗೆ ನಮಸ್ಕರಿಸಿ, ಸಕಲ ಸಂಗತಿಗಳನ್ನೂ ಹೇಳಿದನು. ಕೇಳಿ ಸರ್ವರೂ ದುಃಖದಿಂದ ಮೂರ್ಛಿತರಾದರು. ಎಚ್ಚೆತ್ತಮೇಲೆ ಮೇಲೆ ಮೃತರಾದ ಯಾದವರ ಸ್ಥಾನಕ್ಕೆ ಹೋದರು. ತಮ್ಮ ಮಕ್ಕಳನ್ನು ಕಾಣದೆ ದೇವಕೀ ರೋಹಿಣಿಯರು ಮತ್ತು ವಸುದೇವನು ಇವರು ಪ್ರಾಣ ಬಿಟ್ಟರು. ಸ್ತ್ರೀಯರು ತಮ್ಮ ತಮ್ಮ ಮೃತರ ಪತಿಗಳ ದೇಹಗಳೊಡನೆ ಸಹಗಮನ ಮಾಡಿದರು. ಬಲರಾಮನ ಪತ್ನಿಯರು ತಮ್ಮ ಪತಿಯ ದೇಹವನ್ನೂ, ವಸುದೇವನ ಪತ್ನಿಯರು ಅವನ ದೇಹವನ್ನೂ ಶ್ರೀಕೃಷ್ಣನ ಸೊಸೆಯರು ಪ್ರದ್ಯುಮ್ನಾದಿಗಳ ದೇಹಗಳನ್ನೂ ಕೂಡಿಕೊಂಡು ಸಹಗಮನ ಮಾಡಿದರು. ರುಗ್ಮಿಣಿಯು ಅಗ್ನಿಯಲ್ಲಿಯೂ, ಸತ್ಯಭಾಮೆಯು ಕಾಡಿನಲ್ಲಿಯೂ ಅದೃಶ್ಯರಾದರು. ಶುದ್ಧ ಚಿದಾನಂದ ಸ್ವರೂಪರಾದ ರುಗ್ಮಿಣೀ ಸತ್ಯಭಾಮಾ ದೇವಿಯರಿಗೆ ದೇಹತ್ಯಾಗವಿಲ್ಲ. ಇತರ ಜಾಂಬವತಿ ಮೊದಲಾದ ಆರುಮಂದಿ ದೇವಿಯರು ಅಗ್ನಿಯಲ್ಲಿ ದೇಹವನ್ನು ಬಿಟ್ಟರು.

ಬಳಿಕ ಅಲ್ಲಿಗೆ ಬಂದಿದ್ದ ಅರ್ಜುನನು ಶ್ರೀಕೃಷ್ಣನ ಅಗಲಿಕೆಯನ್ನು ಸಹಿಸಲಾರದೆ, ಹಿಂದೆ ಶ್ರೀಹರಿಯು ಮಾಡಿದ ಗೀತೋಪದೇಶವನ್ನು ಸ್ಮರಿಸಿಕೊಂಡು ಸಮಾಧಾನವನ್ನು ಹೊಂದಿದನು. ಹತರಾದ ಬಂಧುಗಳಿಗೆ ಪ್ರೇತಕಾರ್ಯವನ್ನು ಮಾಡಿಸಿದನು. ಶ್ರೀಕೃಷ್ಣನು ದ್ವಾರಕೆಯನ್ನು ತ್ಯಜಿಸಿದ ಮೇಲೆ ಸಮುದ್ರವು ಶ್ರೀಕೃಷ್ಣನು ವಾಸ ಮಾಡುತ್ತಿದ್ದ ಅರಮನೆಯೊಂದನ್ನು ಬಿಟ್ಟು ದ್ವಾರಕಾನಗರವನ್ನೆಲ್ಲ ಮುಳುಗಿಸಿತು. ಈಗಲೂ ಆ ಅರಮನೆಯಲ್ಲಿ ಶ್ರೀಕೃಷ್ಣನು ನಿತ್ಯವೂ ಸಂನಿಹಿತವಾಗಿದ್ದು, ಮಂಗಳ

ಪ್ರದನಾದ ಅವನು, ತನ್ನನ್ನು ಸ್ಮರಿಸುವ ಭಕ್ತರಿಗೆ ಸರ್ವದಾ ಸಕಲಾರಿಷ್ಟನಾಶಕನಾಗಿ ಶುಭಪ್ರದನಾಗಿರುವನು. ಆಮೇಲೆ ಅರ್ಜುನನು ಉಳಿದ ಸ್ತ್ರೀಬಾಲವೃದ್ಧರನ್ನು ಕರೆದು ಕೊಂಡು ಬಂದು ಇಂದ್ರಪ್ರಸ್ಥದಲ್ಲಿ ಸ್ಥಾಪಿಸಿ, ಅಲ್ಲಿ ವಜ್ರನಿಗೆ ಪಟ್ಟಾಭಿಷೇಕವನ್ನು ಮಾಡಿದನು.

ಪರೀಕ್ಷಿದ್ರಾಜನೇ ! ನಿನ್ನ ಪಿತಾಮಹರೆಲ್ಲರೂ ಈ ವೃತ್ತಾಂತವನ್ನು ಕೇಳಿ ನಿನ್ನನ್ನು ವಂಶದ ಉದ್ಧಾರಕ್ಕಾಗಿ ಪಟ್ಟವನ್ನು ಕಟ್ಟಿ ಆರುಮಂದಿಯೂ ಮಹಾ ಪ್ರಸ್ಥಾನಕ್ಕೆ ಹೊರಟು ಬಿಟ್ಟರು

ರಾಜನೇ ! ದೇವೋತ್ತಮನಾದ ಶ್ರೀ ವಿಷ್ಣುವಿನ ಈ ಅವತಾರವನ್ನೂ ಮತ್ತು ಈ ಅವತಾರದಲ್ಲಿ ಮಾಡಿದ ವ್ಯಾಪಾರಗಳನ್ನೂ .ಶ್ರದ್ಧೆಯಿಂದ ಹೇಳಿ, ಕೇಳಿ ಮತ್ತು ಕೊಂಡಾಡುವ ಸುಜೀವಿಯು ಸಕಲ ಪಾಪಗಳಿಂದಲೂ ಮುಕ್ತನಾಗುತ್ತಾನೆ.

(ಈ ಸ್ಕಂಧದ ಕೊನೆಯ ಶ್ಲೋಕ :–)

ಇತ್ಥಂ ಹರೇರ್ಭಗವತೋ ರುಚಿರಾವತಾರ<br>
ವೀರ್ಯಾಣಿ ಚಾಸ್ಯ ಚರಿತಾನಿ ಚ ಸಂಮತಾನಿ ।<br>
ಅನ್ಯತ್ರ ಚೇಹ ಚ ಶ್ರುತಾನಿ ಗೃಣನ್ಮನುಷ್ಯೋ<br>
ಭಕ್ತಿಂ ಪರಾಂ ಪರಮಹಂಸಗತೌ ಲಭೇತ ॥

ಅರ್ಥ :– ಹೀಗೆ ಷಡ್ಗುಣೈಶ್ವರ್ಯಪೂರ್ಣನಾದ ಶ್ರೀಹರಿಯ ನಿರ್ದುಷ್ಟ ಗಳೂ, ಈ ಗ್ರಂಥದಲ್ಲಿಯೂ, ಬೇರೆ ಗ್ರಂಥಗಳಲ್ಲಿಯೂ ಪ್ರತಿಪಾದಿಸಲ್ಪಡುತ್ತಿರು ವುದೂ, ಅವತಾರಗಳಲ್ಲಿ ನಡೆಸಿದ ಮನೋಹರಗಳೂ ಆದ ಪರಾಕ್ರಮಗಳನ್ನೂ, ಅವನ ಬಾಲ್ಯ ಚರಿತ್ರೆಗಳನ್ನೂ ಹೇಳುವ ಮನುಷ್ಯನು ಪರಮ ಹಂಸರಿಗೆ ಆಶ್ರಯ ನಾಗಿ ಜ್ಞಾತನೂ ಆಗಿರುವ ಶ್ರೀಹರಿಯಲ್ಲಿ ಉತ್ತಮವಾದ ಭಕ್ತಿಯನ್ನು ಹೊಂದುವನು.

## ಮೂವತ್ತೊಂದನೆಯ ಅಧ್ಯಾಯ ಮುಗಿದುದು

## ಏಕಾದಶಸ್ಕಂಧ ಸಂಪೂರ್ಣ

# ದ್ವಾದಶಸ್ಕಂಧ ಆರಂಭ

**ಶ್ರೀಶುಕ ಉವಾಚ :-**

**ಯೋಽಂತ್ಯೋಽ ರಿಪುಂಜಯೋ ನಾಮ ಭವಿಷ್ಯೋಽಥ ಬಾರ್ಹದ್ರಥಃ ।**
**ತಸ್ಯಾಮಾತ್ಯಸ್ತು ಶುನಕೋ ಹತ್ವಾ ಸ್ವಾಮಿನಮಾತ್ಮಜಂ ॥**

ಶ್ರೀಶುಕಾಚಾರ್ಯರು :- ಪರೀಕ್ಷಿದ್ರಾಜನೇ ! ನವಮಸ್ಕಂಧದಲ್ಲಿ ಮುಂದೆ ನಡೆಯುವ ಪುರುವಂಶವನ್ನು ವಿಸ್ತರಿಸುವಾಗ, ಬೃಹದ್ರಥನ ಕುಲದಲ್ಲಿ ರಿಪುಂಜಯ ನೆಂಬುವನೇ ಕೊನೆಯವನು ಎಂದು ಹೇಳಿದ್ದೆನಷ್ಟೆ ? ಅವನ ಮಂತ್ರಿ ಶುನಿಕನು ರಿಪುಂಜ ಯನನ್ನು ಕೊಂದು ತನ್ನ ಮಗ ಪ್ರದ್ಯೋತನನಿಗೆ ಪಟ್ಟಗಟ್ಟುವನು. ಪ್ರದ್ಯೋತನಾದಿ ಐವರು ರಾಜರು ನೂರ ಮೂವತ್ತೆಂಟು ವರ್ಷಗಳ ಕಾಲ ಆಳುವರು ಬಳಿಕ ಈ ವಂಶ ದವರೇ ಆದ ಶಿಶುನಾಗ ಮೊದಲಾಗಿ ಮಹಾನಂದಿಯೆಂಬುವನವರೆಗೆ ಹತ್ತು ಮಂದಿ ರಾಜರು ಮುನ್ನೂರ ಅರವತ್ತು ವರ್ಷಗಳ ಕಾಲ ರಾಜ್ಯವಾಳುವರು. ಮಹಾನಂದಿಗೆ ಶೂದ್ರ ಸ್ತ್ರೀಯಲ್ಲಿ ಹುಟ್ಟಿದ ನಂದ ಎಂಬುವನು ಕ್ಷತ್ರಿಯ ಕುಲವನ್ನು ನಾಶ ಮಾಡು ವನು. ನಂದನ ಮಕ್ಕಳು ಸುಮಾಲಿ ಮೊದಲಾದ ಎಂಟು ಮಂದಿ ನೂರು ವರ್ಷಗಳ ಕಾಲ ರಾಜ್ಯವಾಳುವರು. ನಂದ ಮತ್ತು ಅವನ ಎಂಟು ಮಂದಿ ಮಕ್ಕಳು ಸೇರಿ ನವ ನಂದನರೆಂದು ಪ್ರಸಿದ್ಧರಾಗುವರು. ಅವರು ಚಾಣಕ್ಯ (ವಾತ್ಸ್ಯಾಯನ)ನಿಂದ ಸಾಯು ವರು. ಬಳಿಕ ಮುರುವಂಶದಲ್ಲಿ ಹುಟ್ಟಿದ ಇಂದ್ರ ಗುಪ್ತನಿಂದಾರಂಭಿಸಿ ಬೃಹದ್ರಥನ ಪರ್ಯಂತ ಹತ್ತು ಮಂದಿ ರಾಜರು ನೂರಮೂವತ್ತೇಳು ವರ್ಷಗಳ ಕಾಲ ರಾಜ್ಯವಾಳು ವರು. ಮೌರ್ಯರಲ್ಲಿ ಕೊನೆಯವನಾದ ಬೃಹದ್ರಥನನ್ನು ಅವನ ಸೇನಾಪತಿ ಶುಂಗವಂಶ ದಲ್ಲಿ ಹುಟ್ಟಿದ ಪುಷ್ಯಮಿತ್ರನು ಕೊಂದು ರಾಜನಾಗುವನು. ಅವನ ವಂಶದಲ್ಲಿ ಹುಟ್ಟಿದ ದೇವಭೂತಿ ಎಂಬುವನ ಪರ್ಯಂತ ಹತ್ತು ಮಂದಿ ರಾಜರು ನೂರ ಹನ್ನೆರಡು ವರ್ಷಗಳ ಕಾಲ ರಾಜ್ಯವಾಳುವರು. ಆ ಶುಂಗ ವಂಶದ ದೇವಭೂತಿಯನ್ನು ಅವನ ಮಂತ್ರಿ ಕಣ್ವವಂಶದ ವಸುದೇವನೆಂಬುವನು ಕೊಂದು ತಾನೇ ರಾಜನಾಗುವನು. ಕಣ್ವವಂಶದ ಸುಶರ್ಮನೆಂಬುವನ ಪೂರ್ತಿ ನಾಲ್ಕು ಮಂದಿ ರಾಜರು ಮುನ್ನೂರ ನಲವತ್ತೈದು ವರ್ಷಗಳ ಕಾಲ ರಾಜ್ಯವಾಳುವರು. ಆ ಸುಶರ್ಮನನ್ನು ಆತನ ಭೃತ್ಯನಾದ ಆಂಧ್ರಜಾತೀಯನಾದ ಒಬ್ಬ ಶೂದ್ರನು ಕೊಂದು ತಾನೇ ರಾಜ ನಾಗುವನು. ಬಳಿಕ ಆತನ ಸಹೋದರನಾದ ಕೃಷ್ಣನೆಂಬುವನೂ, ಅವನ ಮಗನಾದ ಶ್ರೀಶಾಂತಕರ್ಣ ಮೊದಲಾದ ಮೂವತ್ತು ಮಂದಿ ರಾಜರು ನಾನ್ನೂರ ಐವತ್ತಾರು ವರ್ಷಗಳ ಕಾಲ ರಾಜ್ಯವಾಳುವರು. ಬಳಿಕ ಏಳು ಮಂದಿ ಆಭೀರರು, ಹತ್ತು

ಮಂದಿ ಗರ್ದಭಿರಾಜರು, ಹದಿನಾರು ಮಂದಿ ಕಂಕರು, ಎಂಟು ಮಂದಿ ಯವನರು, ಹದಿನಾಲ್ಕು ಮಂದಿ ತುರುಷ್ಕರು, ಹತ್ತು ಮಂದಿ ಪುರುಂಡರು, ಹನ್ನೊಂದು ಮಂದಿ ಮೌನರು ಮತ್ತು ಇವರಿಂದ ಬೇರೆಯವರಾದ ಅರವತ್ತೈದು ಮಂದಿ ರಾಜರು ಸಾವಿರದ ತೊಂಭತ್ತೊಂಭತ್ತು ವರ್ಷಗಳ ಕಾಲ ಭೂಮಿಯನ್ನಾಳುವರು. ಉಕ್ತ ಹನ್ನೊಂದು ಮಂದಿ ಮೌನರು ಮುನ್ನೂರು ವರ್ಷಗಳ ಕಾಲ ರಾಜ್ಯವಾಳುವರು. ಅವರು ಮೃತರಾದ ಮೇಲೆ ಭೂತವಂಶಾದಿಗಳು ನೂರು ಆರು ವರ್ಷಗಳ ಕಾಲ ರಾಜ್ಯವಾಳುವರು. ಅವರ ಮಕ್ಕಳು ಹದಿಮೂರು ಮಂದಿ ಬಾಹ್ಲಿಕ ದೇಶಾಧಿಪತಿಗಳಾಗುವರು. ಬಾಹ್ಲೀಕ ದೇಶವು ಯಾವುವೆಂದರೆ ಕಕಾಯ ಎಂಬ ನಗರದ ಈಶಾನ್ಯ ದಿಕ್ಕಿನಲ್ಲಿರುವ ಬೀಸ್ ಮತ್ತು ಸಟ್ಲೆಜ್ ಮಧ್ಯೆ ಇರುವ ದೇಶ. ಬಳಿಕ ಪುಷ್ಪಮಿತ್ರ, ದುರ್ಮಿತ್ರ [ಮೊದಲಾದ ಏಳು ಮಂದಿ ಆಂಧ್ರದೇಶಾಧಿಪತಿಗಳು, ಏಳು ಮಂದಿ ಕೋಸಲ ದೇಶಾಧಿಪತಿಗಳು, ವೈದೂರಾಖ್ಯ ನಗರಾಧಿಪತಿಗಳು, ನಿಷಧ ದೇಶಾಧಿಪತಿಗಳೂ ಒಂದೇ ಕಾಲದಲ್ಲಿ ಭೂಮಿಯನ್ನಾಳುವರು. ಬಳಿಕ ನಿಷಧ ದೇಶಕ್ಕೆ ವಿಸ್ಫೂರ್ಜ ಎಂಬುವನು ರಾಜನಾಗುವನು. ಸೌರಾಷ್ಟ್ರರು, ಆವಂತ್ಯರು, ಆಭೀರಾದಿಗಳೂ ಆಗ ರಾಜರಾಗಿರುವರು.

ಕಲಿಯುಗದಲ್ಲಿ ದಿನೇ ದಿನೇ ಧರ್ಮವು ಕಡಿಮೆಯಾಗುತ್ತ ಬಂದು ಬ್ರಾಹ್ಮಣರು ಉಪನಯನಾದಿ ಸಂಸ್ಕಾರರಹಿತರೂ, ರಾಜರು ಶೂದ್ರಪ್ರಾಯರೂ ಆಗುವರು. ಅಲ್ಲಿಂದ ಮೊದಲು ಮಾಡಿ ರಾಜರು ಮ್ಲೇಚ್ಛಪ್ರಾಯರೂ ಆಗುವರು. ಸರ್ವರೂ ಅಧರ್ಮ, ಅನೃತಗಳಲ್ಲಿ ಆಸಕ್ತರಾಗುವರು.

## ಒಂದನೆಯ ಅಧ್ಯಾಯ ಮುಗಿದುದು

ಬಳಿಕ ಕಲಿಯುಗದಲ್ಲಿ ಧರ್ಮಸತ್ಯಾದಿಗಳೆಲ್ಲ ನಾಶಹೊಂದುವುವು. ಹಣವಂತರೇ ಪೂಜ್ಯರು. ನ್ಯಾಯವ್ಯವಸ್ಥೆಯಲ್ಲಿ ಪಕ್ಷದ ಬಲವೇ ಕಾರಣವು. ದಾಂಪತ್ಯದಲ್ಲಿ ಕುಲಗೋತ್ರಾದಿಗಳು ಕಾರಣಗಳಾಗದೆ ಪರಸ್ಪರ ಸ್ನೇಹವೇ ಕಾರಣವಾಗುವುದು. ಕ್ರಯವಿಕ್ರಯಾದಿಗಳಲ್ಲಿ ಕಪಟವೇ ತುಂಬಿರುವುದು. ಜನಿವಾರವಿದ್ದವನು ಬ್ರಾಹ್ಮಣನು ಹೀಗೆ ದುಷ್ಟಪ್ರಜೆಗಳು ಭೂಮಿಯಲ್ಲಿ ವ್ಯಾಪಿಸಲು ಬಲಿಷ್ಠನಾದವನೇ ರಾಜನಾಗುವನು. ದಸ್ಯುಪ್ರಾಯರಾದ ರಾಜರಿಂದ ಪ್ರಜೆಗಳ ಧನ, ದಾರಾದಿಗಳು ಅಪಹೃತವಾಗಿ, ಅವರು ಕಾಡು, ಬೆಟ್ಟ ಮುಂತಾದ ಸ್ಥಳಗಳಿಗೆ ಹೋಗಿ ಅಲ್ಲಿ ನೆಲೆಸಿ ಶೀತವಾತಾದಿಗಳಿಂದ ಪೀಡಿತರಾಗಿ ನಾಶ ಹೊಂದುವರು. ಹೀಗೆ ಕ್ಷೀಣಿಸುತ್ತ ಬಂದು ಕಲಿಯುಗದ ಕೊನೆಯಲ್ಲಿ ಮನುಷ್ಯರಿಗೆ ಪೂರ್ಣಾಯುಷ್ಯ ಮೂವತ್ತು ಅಥವಾ ಇಪ್ಪತ್ತು ವರ್ಷಗಳಾಗುವುವು. ಮನುಷ್ಯರು ಕ್ಷೀಣಿಸಿ, ವರ್ಣಾಶ್ರಮ ಧರ್ಮ ಮತ್ತು

ವೇದ ಮಾರ್ಗವು ನಾಶವಾಗಲು, ರಾಜರು ಚೋರಪ್ರಾಯರಾಗಲು, ಧರ್ಮವನ್ನು ಕಾಪಾಡುವುದಕ್ಕಾಗಿ ಶ್ರೀ ಹರಿಯು ಶಂಬಲ ಗ್ರಾಮದಲ್ಲಿ ವಿಷ್ಣುಯಶನೆಂಬ ಬ್ರಾಹ್ಮಣನ ಮನೆಯಲ್ಲಿ ಕಲ್ಕಿನಾಮಕನಾಗಿ ಅವತರಿಸುವನು. ಅವನು ಅಶ್ವಾರೂಢನಾಗಿ ದಸ್ಯುಪ್ರಾಯರಾದ ರಾಜರನ್ನು ಸಂಹರಿಸುವನು. ಆಗ ಕೃತಯುಗದ ಧರ್ಮವು ಪ್ರವರ್ತಿಸುವುದು.

ರಾಜನೇ ! ನಿನಗೆ ಸೂರ್ಯವಂಶದ ಮತ್ತು ಚಂದ್ರವಂಶದ ರಾಜರ ವಿಚಾರವನ್ನು ತಿಳಿಸಿರುವೆನು. ನಿನ್ನ ಕಾಲದಿಂದ ಮಹಾನಂದಿ ಪೂರ್ತಿ ರಾಜರು ಆಳಿದ ಕಾಲ ಒಟ್ಟು 1498 ವರ್ಷಗಳು. ಒಳಿಕ ನಂದನ ಆಳ್ವಿಕೆ ಆರಂಭವಾದಾಗಲೇ ಕಲಿಯು ಪ್ರವೇಶಿಸಿದನು. ನಂದನವರೆಗೇ ಕ್ಷತ್ರಿಯರ ಆಳ್ವಿಕೆ. ಶ್ರೀ ಕೃಷ್ಣನು ಪರಂಧಾಮಕ್ಕೆ ಹೋದಾಗಿನಿಂದ ಕಲಿಯುಗ ಪ್ರಾರಂಭವಾಯಿತು. ದೇವಮಾನ ಸಾವಿರ ವರ್ಷಗಳು ಕಳೆದ ನಂತರ ಕೃತಯುಗವು ಪ್ರಾರಂಭವಾಗುತ್ತದೆ. ಆಗ ಚಂದ್ರವಂಶದ ದೇವಾಪಿ, ಇಕ್ಷ್ವಾಕುವಂಶದ ಮರು ಎಂಬ ಇಬ್ಬರು ಪುರುಷರು ಮಹಾಜ್ಞಾನಬಲದಿಂದ ಯುಕ್ತರಾಗಿ, ಕಲಾಪ ಗ್ರಾಮದಲ್ಲಿದ್ದು ಕಲಿಯುಗವು ಮುಗಿದೊಡನೆಯೇ ಬಂದು ವರ್ಣ, ಆಶ್ರಮ, ಆಚಾರಗಳ ಧರ್ಮವನ್ನು ಹಿಂದಿನಂತೆ ಪ್ರಸಿದ್ಧಪಡಿಸುವರು. ಕೃತಾದಿ ಯುಗಗಳಲ್ಲಿ ಹೇಳಿದ ರಾಜರೆಲ್ಲ ಹುಟ್ಟಿ ಈ ಭೂಮಿಯಲ್ಲಿ ಮಮತೆಯಿಟ್ಟು ನಾಶ ಹೊಂದಿರುವರು ಆಳುತ್ತಿದ್ದ ಪ್ರತಿಯೊಬ್ಬರೂ ಸತ್ತು ಹೋದರೇ ಹೊರತು ಉಳಿದವನೊಬ್ಬನೂ ಇಲ್ಲ.

## ಎರಡನೆಯ ಅಧ್ಯಾಯ ಮುಗಿದುದು

ಪೃಥು, ಪುರೂರವಸ್ಸು ಮೊದಲಾದ ರಾಜರು ಸ್ಥಿರವಾದ ಭೂಮಿಯನ್ನು ತಮ್ಮದು ಎಂದು ವಿಶೇಷವಾಗಿ ಮಮತೆಯಿಟ್ಟು ಕೊನೆಗೆ ತಮ್ಮ ಜೊತೆಗೆ ಒಯ್ಯಲಾಗದೆ ಇಲ್ಲಿಯೇ ಬಿಟ್ಟು ಮರಣಹೊಂದಿದರು. ಹೀಗಿದ್ದರೂ "ಈ ಭೂಮಿಯು ನನಗೇ ಸ್ಥಿರವಾಗಿದೆ. ಶತ್ರುಗಳನ್ನೆಲ್ಲ ಗೆದ್ದು ನಾನೇ ಸಂಪೂರ್ಣವಾಗಿ ಭೋಗಿಸುತ್ತೇನೆ" ಇತ್ಯಾದಿಯಾಗಿ ರಾಜರ ವ್ಯರ್ಥವಾದ ಸಂಕಲ್ಪವನ್ನು ನೋಡಿ ಭೂದೇವಿಯು ನಗುತ್ತಿರುವಳು.

ಪರೀಕ್ಷಿದ್ರಾಜನೇ ! ಯೋಗ್ಯರಿಗೆ ಜ್ಞಾನ, ವೈರಾಗ್ಯವುಂಟಾಗಲಿ ಎಂಬುದಕ್ಕಾಗಿಯೇ ಮನು ಮುಂತಾದ ರಾಜರ ಚರಿತ್ರೆಯನ್ನು ಹೇಳಿರುವೆನು ಪರಮಾತ್ಮನ ಸಂಬಂಧವಾದ ದೃಷ್ಟಿಯಿಂದ ಹೇಳಿದುದಲ್ಲ ನಿರಂತರವೂ ಅಮಂಗಳಪರಿಹಾರಕವಾದ ಶ್ರೀ ಕೃಷ್ಣನ ಗುಣಗಳನ್ನು ಸಾಕ್ಷಾತ್ತಾಗಿ ವರ್ಣಿಸುವ ಗ್ರಂಥವನ್ನೇ ಕೇಳುತ್ತಿರಬೇಕು.

**ಪರೀಕ್ಷಿತ್ :–** ಕಲಿದೋಷನಾಶಕ್ಕೆ ಉಪಾಯವೇನು ? ಯುಗಗಳ ಮಾನ, ಆಯಾ ಯುಗಗಳ ಧರ್ಮಗಳು, ಪ್ರಳಯ ಮಾನ, ಕಲ್ಪಗಳ ಮಾನ, ಕಾಲನಾಮಕ ಹರಿಯ ಗಮನ ಪ್ರಕಾರ ಇವುಗಳನ್ನು ಹೇಳೋಣವಾಗಲಿ.

**ಶುಕ :–** ಧರ್ಮಕ್ಕೆ ಸತ್ಯ, ದಯೆ, ತಪಸ್ಸು ಮತ್ತು ದಾನ ಎಂಬ ನಾಲ್ಕು ಪಾದಗಳು ಈ ನಾಲ್ಕು ಪಾದಗಳೂ ಕೃತಯುಗದಲ್ಲಿ ಪೂರ್ಣವಾಗಿರುತ್ತವೆ. ಆಗ ಎಲ್ಲರೂ ಸಂತುಷ್ಟರಾಗಿರುವರು. ತ್ರೇತೆಯಲ್ಲಿ ಅನೃತಾದಿ ಅಧರ್ಮ ಪಾದಗಳಿಂದ ದಾನವೆಂಬ ಒಂದು ಪಾದ ಹ್ರಾಸವಾಗುತ್ತದೆ. ದ್ವಾಪರದಲ್ಲಿ ಸತ್ಯ ಮುಂತಾದ ಪಾದ ಗಳಲ್ಲಿ ಅರ್ಧ ಹ್ರಾಸವಾಗುತ್ತದೆ. ಕಲಿಯುಗದಲ್ಲಿ ಸತ್ಯ ಮಾತ್ರ ಉಳಿದು ಮಿಕ್ಕಪಾದ ಗಳು ನಾಶವಾಗಿ, ಕೊನೆಯಲ್ಲಿ ಆ ಸತ್ಯವೆಂಬ ಪಾದವೂ ನಾಶವಾಗುವುದು.

ಕಲಿಯುಗದಲ್ಲಿ ಜನರು ಲೋಭಿಗಳೂ, ದುರಾಚಾರಿಗಳೂ, ದಯಾಶೂನ್ಯರೂ, ನಿಷ್ಫಲ ವೈರಿಗಳೂ, ದುರದೃಷ್ಟವಂತರೂ, ಮಹಾದರ್ಪವುಳ್ಳವರೂ ಆಗುವರು. ಆಗ ಪ್ರಧಾನರು ಶೂದ್ರರು. ಅವರಿಗೆ ಉತ್ತಮರು ದಾಸರಾಗಿ ಜೀವಿಸುವರು. ಪರಮಾತ್ಮನ ಪ್ರೇರಣೆಯಿಂದ ಸತ್ವಗುಣವು ಕಾರ್ಯೋನ್ಮುಖವಾಗಿ ಮನಸ್ಸು, ಬುದ್ಧಿ ಮತ್ತು ಇಂದ್ರಿಯಗಳು ಪ್ರಸನ್ನಗಳಾದಾಗ ಕೃತಯುಗವು ಬಂದಿತೆಂದು ತಿಳಿಯಬೇಕು. ಧರ್ಮ, ಕಾಮ್ಯಕರ್ಮ, ಯಶಸ್ಸಂಪಾದನೆ ಇವುಗಳಲ್ಲಿ ವಿಶ್ವಾಸವು ಉಂಟಾದಾಗ ರಜೋಗುಣ ಪ್ರವೃತ್ತಿಯುಳ್ಳ ತ್ರೇತೆಯು ಬಂದಿತೆಂದು ತಿಳಿಯಬೇಕು. ಲೋಭ, ಅತೃಪ್ತಿ, ದಂಭ, ಮತ್ಸರ ಮತ್ತು ಕಾಮ್ಯ ಕರ್ಮದಲ್ಲಿ ವಿಶ್ವಾಸವುಂಟಾದಾಗ ರಜಸ್ತಮ ಪ್ರವೃತ್ತಿಯುಳ್ಳ ದ್ವಾಪರವು ಬಂದಿತೆಂದು ತಿಳಿಯಬೇಕು. ಕಪಟ, ಸುಳ್ಳು, ಸೋಮಾರಿತನ, ನಿದ್ರೆ, ಹಿಂಸೆ, ವಿಷಾದ, ಶೋಕ, ಭಯ ಮತ್ತು ದೈನ್ಯ ಇವು ಮನುಷ್ಯರಲ್ಲಿ ತೋರಿದಾಗ ತಾಮಸಗುಣ ಪ್ರಚುರವಾದ ಕಲಿಯುಗವು ಬಂದಿತೆಂದು ತಿಳಿಯಬೇಕು. ಈ ಕಲಿಯ ದೋಷದಿಂದ ಜನರು ಅಲ್ಪಜ್ಞಾನಿಗಳಾಗಿ ಉಪದ್ರವ ಕಾರಿಗಳಾಗುವರು. ಗೃಹಸ್ಥರು ಹೆಂಡಿರುಮಕ್ಕಳನ್ನು ಸಂರಕ್ಷಿಸಲಾರದೆ ಸಂನ್ಯಾಸಿ ಗಳಂತೆ ತಿರುಗುವರು. ಸಂನ್ಯಾಸಿಗಳು ಗೃಹಸ್ಥರಂತೆ ದುಡಿಯುವರು. ಪಾಷಂಡಿಗಳ ಬೋಧೆಯಿಂದ ಜನರಿಗೆ ಅಪ್ರಾಕೃತಮತದಲ್ಲಿ ಅಭಿರುಚಿಯು ಹುಟ್ಟುವುದು. ಆದರಿಂದ ಜನರು ವಿಷ್ಣುವನ್ನು ಪೂಜಿಸುವುದಿಲ್ಲ, ಸಾಯುವಾಗ, ರೋಗದಿಂದ ಬಳಲುವಾಗ ಬಿದ್ದಾಗ ಪರವಶನಾಗಿ 'ನಾರಾಯಣ' ನೆಂದವನು ವೈಕುಂಠವನ್ನು ಹೊಂದುವನು. ಇಂತಹ ಸ್ವಾಮಿಯನ್ನು ಜನರು ಸೇವಿಸುವುದಿಲ್ಲ. ನಾರಾಯಣನ ಸ್ಮರಣೆಯೊಂದೇ ಕಲಿಕೃತದೋಷಕ್ಕೆ ಪರಿಹಾರದ ಉಪಾಯ. ಆದುದರಿಂದ ಸಕಲಪಾಪ ಪರಿಹಾರಕ ನಾದ ಶ್ರೀಹರಿಯನ್ನು ಹೃದಯದಲ್ಲಿ ಧ್ಯಾನಿಸಬೇಕು.

ಕೃತಯುಗದಲ್ಲಿ ಭಗವಂತನ ಧ್ಯಾನದಿಂದಲೂ, ತ್ರೇತೆಯಲ್ಲಿ ಯಜ್ಞಗಳಿಂದಲೂ ದ್ವಾಪರದಲ್ಲಿ ಹರಿ, ಅವನ ಭಕ್ತರ ಸೇವೆಯಿಂದಲೂ ಯಾವ ಫಲವು ಬರುವುದೋ ಆ ಫಲವು ಕಲಿಯುಗದಲ್ಲಿ ಭಗವನ್ನಾಮಸಂಕೀರ್ತನೆ ಮಾತ್ರದಿಂದಲೇ ಬರುವುದರಿಂದ ದೋಷಯುಕ್ತವಾದ ಕಲಿಯುಗದಲ್ಲಿ ಇದೊಂದು ಮಹಾಗುಣವಿದೆ.

## ಮೂರನೆಯ ಅಧ್ಯಾಯ ಮುಗಿದುದು

ಚತುರ ಯುಗಸಾವಿರ ಬ್ರಹ್ಮದೇವರಿಗೆ ಒಂದು ಹಗಲು. ಅದರಲ್ಲಿ ಹದಿನಾಲ್ಕು ಮನುಗಳು ಆಳಿ ಹೋಗುವರು. ಚತುರ್ಯುಗಸಾವಿರದಷ್ಟು ಕಾಲವೇ ಬ್ರಹ್ಮದೇವರ ರಾತ್ರಿ. ಅದು ದಿನಪ್ರಳಯವೆನಿಸುತ್ತದೆ. ಆಗ ಮೂರು ಲೋಕಗಳೂ ಲಯವಾಗುತ್ತವೆ. ನಾರಾಯಣನು ಜಗತ್ತನ್ನು ಸಂಹರಿಸಿ ಮಲಗುತ್ತಾನೆ. ಬ್ರಹ್ಮದೇವರ ನಿದ್ರೆಯನ್ನು ನಿಮಿತ್ತ ಮಾಡಿಕೊಂಡು ಪ್ರವೃತ್ತವಾಗುವುದರಿಂದ ಅದು ನೈಮಿತ್ತಿಕ ಪ್ರಳಯ ಎನಿಸುತ್ತದೆ. ಬ್ರಹ್ಮದೇವರ ನೂರು ವರ್ಷಗಳು ಕಳೆದಾಗ ಮಹತತ್ತ್ವ, ಅಹಂಕಾರತತ್ತ್ವ, ಪಂಚಭೂತ ಮತ್ತು ತತ್ಕಾರ್ಯವಾದ ಬ್ರಹ್ಮಾಂಡವು ಇವುಗಳಿಗೆ ಲಯವಾಗುವುದರಿಂದ ಇದು ಪ್ರಾಕೃತಿಕ ಲಯವೆನಿಸುವುದು. ಆಗ ಹಸಿವು ಮೊದಲಾದುವುಗಳಿಂದ ಬಳಲಿ ಪ್ರಜೆಗಳು ನಾಶವಾಗುವರು. ಪ್ರಕೃತಿಯು ನಿತ್ಯವಾಗಿರುವುದು. ಕಾರ್ಯವು ನಾಶವಾದರೂ, ಕಾರಣವು ಅವ್ಯಯವಾಗಿರುವುದು. ಈ ಪ್ರಕೃತಿಯೇ ಜಗತ್ಸೃಷ್ಟಿಗೆ ಕಾರಣವು.

ಈಗ ಕಾಲಾಖ್ಯ ಹರಿಯ ಸ್ವರೂಪವನ್ನು ತಿಳಿಸುವೆನು ಕೇಳು .— ವಾಗಾದಿ ಇಂದ್ರಿಯಗಳೂ, ಗುಣತ್ರಯವೂ, ಮಹದಾದಿ ತತ್ತ್ವಗಳೂ, ಪ್ರಾಣಾದಿ ದೇವತೆಗಳೂ ಶ್ರೀ ಪರಮಾತ್ಮನಿಗೆ ಯಾವ ವಿಶೇಷವನ್ನೂ ಉಂಟು ಮಾಡಲಾರರು. ಪ್ರಳಯ ಕಾಲದಲ್ಲಿ ಪ್ರಪಂಚಕ್ಕೆ ಆಧಾರಭೂತನಾದ, ನಿತ್ಯ ನಿರ್ದೋಷ ಸ್ವರೂಪನಾದ, ಜ್ಞಾನಮಯನಾದ ಪರಬ್ರಹ್ಮನು ಲಕ್ಷ್ಮಿ ಮತ್ತು ಮುಕ್ತರ ಇಂದ್ರಿಯ ಗೋಚರನಾಗಿಯೂ, ವೇದ ಪ್ರತಿಪಾದ್ಯನಾಗಿಯೂ ಇರುವನು. ಉತ್ಪತ್ತಿ ನಾಶವುಳ್ಳ ಜಗತ್ತು ನಿತ್ಯಶಕ್ತಿಯುಕ್ತನಾದ ಭಗವಂತನಿಂದ ಭಿನ್ನವಾಗಿಯೂ, ಅಸ್ವತಂತ್ರವಾಗಿಯೂ, ಅವನ ಅಧೀನವಾಗಿಯೂ ಇರುವುದು. ಬುದ್ಧಿ, ಇಂದ್ರಿಯಗಳು, ವಿಷಯಗಳು ಮುಖ್ಯಪ್ರಾಣದೇವರನ್ನು ಬಿಟ್ಟು ಸ್ವತಂತ್ರವಾಗಿ ಜ್ಞಾನವನ್ನು ಹುಟ್ಟಿಸಲಾರವು. ಅಂದ ಬಳಿಕ ಮುಖ್ಯಪ್ರಾಣದೇವರಿಗೆ ನಿಯಾಮಕನಾದ ಶ್ರೀಹರಿಯನ್ನು ಬಿಟ್ಟು ಬುದ್ಧ್ಯಾದಿಗಳು ಸ್ವತಂತ್ರವಾಗಿ ವ್ಯಾಪಾರ ಮಾಡಲಾರವು ಎಂಬುದು ಸುತರಾಂ ಸಿದ್ಧವು. ಜಾಗ್ರದಾದಿ ಅವಸ್ಥೆಗಳು ಜೀವನಿಗೆ ಹೊರತು ಭಗವಂತನಿಗಿಲ್ಲ. ಪರಮಾತ್ಮನ ಮೂಲರೂಪಕ್ಕೂ ಅವಸ್ಥಾ ಪ್ರೇರಕಗಳಾದ ವಿಶ್ವ ತೈಜಸ ಪ್ರಾಜ್ಞ

ರೂಪಗಳಿಗೂ, ರಾಮಕೃಷ್ಣಾದಿಗಳ ಅನಂತಅವತಾರರೂಪಗಳಿಗೂ, ತೋರುವ ಭೇದವು ಭ್ರಾಂತಿಯು. ಗಗನಕ್ಕೂ ಮೇಘಕ್ಕೂ ಹೇಗೆ ಸದಾ ಪರಸ್ಪರ ಭೇದವಿದೆಯೋ ಹಾಗೆಯೇ ಪರಮಾತ್ಮನಿಗೂ ಜಗತ್ತಿಗೂ ಸದಾ ಪರಸ್ಪರ ಭೇದವಿದೆ. ನೂಲಿನ ಒಂದು ಎಳೆಗೂ. ಮತ್ತೊಂದು ಎಳೆಗೂ ಭೇದ ವಿದ್ದರೂ, ನೆಯ್ದ ಬಟ್ಟೆಯಲ್ಲಿರುವ ದಾರಗಳ ಸಮುದಾಯದಿಂದ ಅಭೇದವಿದೆ. ಆದುದರಿಂದ ಇರುವ ಭೇದವು ಅಭೇದವನ್ನು ಬಿಟ್ಟಿರುತ್ತದೆ ಎಂದು ಅರ್ಥವಲ್ಲ. ಒಟ್ಟಿಗೆ ಇರುತ್ತವೆ. ಅವಯವಿ, ಅವಯವಗಳಿಗೂ, ಕಾರ್ಯಕಾರಣವಸ್ತುಗಳಿಗೂ ಸಾಕ್ಷಾನ್ನಾರಾಯಣನೊಬ್ಬನೇ ಪ್ರೇರಕನು. ನಷ್ಟವಾಗತಕ್ಕ ಅವಯವಕ್ಕೂ, ಅವ ಯವಿಗೂ ಭೇದವೇ ಹೊರತು ಅಭೇದವಲ್ಲ. ಅನಂತ ಪದಾರ್ಥಗಳ ಸ್ವರೂಪಭೇದ ವನ್ನು ನಿರೂಪಿಸುವುದಕ್ಕೂ ಮತ್ತು ಭೇದಜ್ಞಾನವನ್ನು ಹುಟ್ಟಿಸುವುದಕ್ಕೂ ಶ್ರೀನಾರಾಯಣನೊಬ್ಬನೇ ಸಮರ್ಥನು. ಪರಬ್ರಹ್ಮನ ರೂಪಗಳಿಗೆ ಭೇದವೆಂದು ತಿಳಿಯುವವನು ಅಜ್ಞಾನಿ. ಈ ಭೇದವು ಸತ್ಯವಲ್ಲ. ಕಡಗ, ಕುಂಡಲ ಮೊದಲಾದ ರೂಪಗಳಿಂದಿರುವ ಬಂಗಾರವನ್ನು ನಾನಾ ಸಂಜ್ಞಾ ವಿಷಯವನ್ನಾಗಿ ತಿಳಿಯುತ್ತಾರೆ. ಅದರಂತೆ ಭಗವಂತನನ್ನೂ ಕೂಡ ನರ, ವರಾಹ, ಶುಕ್ಲ, ಪೀತ, ಹ್ರಸ್ವ, ದೀರ್ಘ, ಅಣು, ಮಹತ್ತು ಎಂದು ವೈದಿಕರು, ಲೌಕಿಕರು ನಾನಾವಿಧ ಆಕಾರದಿಂದ ಪ್ರಕಾಶ ಪಡಿಸುತ್ತಾರೆ.

ರಾಜನೇ ! ಇದುವರೆಗೂ ಶ್ರೀಹರಿಯ ಸ್ವರೂಪವನ್ನು ತಿಳಿಸಿದೆನು. ಈಗ ಸಂಸಾರವು ಬರುವುದಕ್ಕೂ, ತಪ್ಪುವುದಕ್ಕೂ ಕಾರಣವನ್ನು ತಿಳಿಸುವೆನು ಕೇಳು .—

ಹೊಗೆ, ಬೆಂಕಿ ನೀರು, ಗಾಳಿ ಇವುಗಳಿಂದ ಹುಟ್ಟಿದ ಮೋಡವು ಸೂರ್ಯ ಪ್ರಕಾಶವಿದ್ದಾಗ ಕಾಣಿಸುತ್ತದೆ. ಅದಿಲ್ಲದಾಗ ಕಾಣಿಸುವುದಿಲ್ಲ. ಸೂರ್ಯಾಂಶವನ್ನುಳ್ಳ ಕಣ್ಣುಗಳಲ್ಲಿರುವ ಸೂರ್ಯಪ್ರಕಾಶವನ್ನು ಮೋಡವು ಪ್ರತಿಬಂಧಿಸುವುದು. ಅದರಂತೆಯೇ ಪರಬ್ರಹ್ಮನಿಂದ ಅನುಸ್ಯೂತವಾಗಿ (ಒಟ್ಟಿಗೆ ಸೇರಿಕೊಂಡಿರುವ) ಲಿಂಗಶರೀರದಲ್ಲಿ ಕಲ್ಪಿತವೂ, ಅವನಿಂದಲೇ ಪ್ರಕಟಿತವೂ ಆದ ಅಹಂಕಾರವು ಜೀವನಿಗೆ ಅಭಿಮಾನ ವನ್ನು ಹುಟ್ಟಿಸಿ ಹರಿಯ ಜ್ಞಾನವಾಗದಂತೆ ಮಾಡುತ್ತದೆ. ಸೂರ್ಯಕಿರಣಗಳಿಂದ ಮೋಡವು ಕರಗಿ ನಷ್ಟವಾದಾಗ, ಸೂರ್ಯಾಂಶವುಳ್ಳ ಚಕ್ಷುಸ್ಸು ತನ್ನ ಬಿಂಬನಾದ ಗಗನಸ್ಥ ಸೂರ್ಯನನ್ನು ನೋಡಬಲ್ಲುದು. ಅದರಂತೆ ಪರಮಾತ್ಮನ ದರ್ಶನವಾಗದಂತೆ ತಡೆದಿರುವ ಅಹಂಕಾರವು ಹರಿಯ ಉಪಾಸನೆಯಿಂದ ನಷ್ಟವಾದಾಗ, ಜೀವನು ಪರ ಮಾತ್ಮನನ್ನು ಸ್ಮರಿಸಲು ಸಮರ್ಥನಾಗುವನು.

ನಿತ್ಯಮುಕ್ತನಾದ ಶ್ರೀ ಪರಮಾತ್ಮನ ಅಪರೋಕ್ಷದರ್ಶನದಿಂದ ಅಸಂಪ್ರಜ್ಞಾತ

ಸಮಾಧಿದಶೆಯಲ್ಲಿ ತೃಪ್ತನಾಗಿ, ಲಿಂಗದೇಹದಲ್ಲಿ ಅಭಿಮಾನವನ್ನು ಬಿಟ್ಟಿರುವ ಜ್ಞಾನಿಯ ಅವಸ್ಥೆಯನ್ನು ಆತ್ಯಂತಿಕ ಪ್ರಳಯವೆನ್ನುವರು.

ಪ್ರತಿದಿನವೂ ಬ್ರಹ್ಮಾದಿ ಸಕಲ ಪ್ರಾಣಿಗಳಿಗೆ ಆಗತಕ್ಕ ಉತ್ಪತ್ತಿ ಲಯಗಳನ್ನು ದೈನಂದಿನ ಜನ್ಮಪ್ರಳಯಗಳೆಂದು ಜ್ಞಾನಿಗಳು ಹೇಳುವರು. ನಿರ್ವಿಕಾರ ಚೇತನರಿಗೆ ನಾಶವಿಲ್ಲದಿದ್ದರೂ, ಕಾಲರೂಪನದೀಪ್ರವಾಹದಿಂದ ಹ್ರಾಸವನ್ನು ಹೊಂದುವ ದೇಹಕ್ಕೆ ನಾಶವಿರುವುದರಿಂದ ದೇಹಕ್ಕೇ ಉತ್ಪತ್ತಿ ನಾಶಗಳು. ಹೀಗೆ ಲಯಗಳು ನಿತ್ಯ, ನೈಮಿತ್ತಿಕ, ಪ್ರಾಕೃತಿಕ ಮತ್ತು ಆತ್ಯಂತಿಕ ಎಂದು ನಾಲ್ಕು ಬಗೆಯಾಗಿರುವುವು.

ರಾಜನೇ ! ನಾರಾಯಣನ ಲೀಲಾ ಕಥೆಗಳನ್ನು ಸಂಕ್ಷೇಪವಾಗಿ ನಿನಗೆ ಹೇಳಿರುವೆನು. ಸಂಪೂರ್ಣವಾಗಿ ಹೇಳಲು ಚತುರ್ಮುಖನೂ ಶಕ್ತನಲ್ಲ.

ಸಂಸಾರ ಸಾಗರವನ್ನು ದಾಟಲಿಚ್ಛಿಸುವವರಿಗೆ ಶ್ರೀಹರಿಯ ಲೀಲಾಕಥಾರಸ ಸೇವನೆಯ ಹೊರತು ಬೇರೆ ಯಾವ ಉಪಾಯವೂ ಇಲ್ಲ.

ವೇದಾರ್ಥಬೃಂಹಿತವಾದ ಈ ಭಾಗವತವನ್ನು ಬದರಿನಾರಾಯಣನು ನಾರದರಿಗೂ, ಅವರು ವ್ಯಾಸರಿಗೂ, ಅವರು ನನಗೂ ಹೇಳಿರುವರು. ಇದನ್ನೇ ಸೂತರು ಶೌನಕಾದಿಗಳಿಗೆ ಉಪದೇಶಿಸುವರು. ಯಾವನ ಪ್ರಸಾದದಿಂದ ಬ್ರಹ್ಮನು ಹುಟ್ಟಿದನೋ, ಯಾವನ ಕ್ರೋಧದಿಂದ ರುದ್ರನು ಹುಟ್ಟಿದನೋ, ಯಾವನು ವಿಶ್ವನಾಥನೂ, ಆಶ್ರಿತರ ದುಃಖನಿವಾರಕನೂ ಆಗಿರುವನೋ ಅಂತಹ ಶ್ರೀಹರಿಯ ಗುಣಗಳನ್ನು ಈ ಭಾಗವತದಲ್ಲಿ ಎಡಬಿಡದೆ ವರ್ಣಿಸಿರುವರು.

ಪರೀಕ್ಷಿದ್ರಾಜನೇ ! ನೀನು ಕೃತಾರ್ಥನಾಗಿರುವೆ. 'ನಾನು ಸಾಯುವೆನಲ್ಲ' ಎಂಬ ಅಲ್ಪ ಬುದ್ಧಿಯನ್ನು ಬಿಡು. ಜನನಮರಣಾದಿಗಳು ದೇಹಕ್ಕೆ ಹೊರತು ಜೀವನಿಗಿಲ್ಲ. ಜೀವನು ಜರಾಮರಣರಹಿತನಾಗಿರುವನು ಕಟ್ಟಿಗೆಗೂ, ಅದರೊಳಗಿರುವ ಬೆಂಕಿಗೂ ಭೇದವಿರುವಂತೆ ದೇಹಕ್ಕೂ, ಜೀವನಿಗೂ ಭೇದವಿರುವುದರಿಂದ, ಬೀಜದಿಂದ ಅಂಕುರವೂ, ಅಂಕುರದಿಂದ ಬೀಜವೂ ಹುಟ್ಟುವಂತೆ ಜೀವರು ಹುಟ್ಟುವುದಿಲ್ಲ. ತಂದೆಯು ಮಗನಾಗಿಯೂ, ಮಗನು ತಂದೆಯಾಗಿಯೂ ಹುಟ್ಟುವುದಿಲ್ಲ. ಜಡ ಪ್ರಕೃತಿಯಿಂದ ಹುಟ್ಟಿದ ಮನಸ್ಸು ಸುರನರಾದಿ ದೇಹಗಳನ್ನೂ, ಆ ಪ್ರವೃತ್ತಿಗೆ ಕಾರಣವಾದ ಪುಣ್ಯಪಾಪಗಳನ್ನೂ ಸಂಪಾದಿಸಿ ಕೊಡುವುದು. ಆದರಿಂದಲೇ ಜೀವನಿಗೆ ಸಂಸಾರವು. ಈ ಸಂಸಾರವು ದೇಹಾದಿಗಳಿರುವವರಿಗೆ ಮಾತ್ರ. ಜೀವನು ಜ್ಞಾನಸ್ವರೂಪನಾಗಿರುವುದರಿಂದ ಹುಟ್ಟುವುದೂ ಇಲ್ಲ. ಬೆಳೆಯುವುದೂ ಇಲ್ಲ. ಸಾಯುವುದೂ ಇಲ್ಲ.

ಭಗವದುಪಾಸನಾಕ್ರಮವನ್ನು ಹೇಳುವೆನು ಕೇಳು :– ಆಕಾಶದಂತೆ ವ್ಯಾಪ್ತನೂ, ನಿತ್ಯಾಧಾರನೂ, ನಿತ್ಯನೂ, ಅಪಾರ ಮಹಿಮನೂ ಆಗಿರುವ, ನಿನ್ನ ಹೃದಯ ಕಮಲದಲ್ಲಿರುವ ಪರಮಾತ್ಮನನ್ನು ಸರ್ವ ಪ್ರಯತ್ನದಿಂದಲೂ ಚೆನ್ನಾಗಿ ವಿಚಾರಮಾಡಿ ಧ್ಯಾನಿಸು. "ನಾನು ಪರಮಾತ್ಮನ ಸೇವಕನು. ನನಗೆ ಅವನೇ ಸ್ವಾಮಿಯು. ಸಾಧನ ಶರೀರವನ್ನು ಕೊಟ್ಟಿರುವವನೂ ಅವನೇ. ಅವನೊಬ್ಬನೇ ಅಪರಿಮಿತ ಶಕ್ತನು. ಉಳಿದವರೆಲ್ಲರೂ ಪರಿಮಿತ ಶಕ್ತಿಯುಳ್ಳವರು. ಅಸ್ವತಂತ್ರರಾದ ನಮಗೆ ಶ್ರೀಹರಿಯೇ ಉದ್ಧಾರಕನು" ಇತ್ಯಾದಿ ಯುಕ್ತಿಗರ್ಭಿತ ಪ್ರಮೇಯ ಜ್ಞಾನ ದಿಂದ ವಾಸುದೇವನನ್ನು ನಿರಂತರ ಧ್ಯಾನಿಸುತ್ತಿರುವ ನಿನ್ನನ್ನು ಶೃಂಗಿಶಾಪ ಪ್ರೇರಿತ ತಕ್ಷಕನು ಕಚ್ಚಿದರೂ ದುರ್ಮರಣದೋಷವು ನಿನಗಿಲ್ಲ. ಏಕೆಂದರೆ ಮಾರಕರಿಗೆ ಮಾರಕನಾದ ಈಶ್ವರನ ಬಳಿಯಲ್ಲಿಯೇ ನೀನಿರುವೆ. ಭಗವಂತನನ್ನು ನೀನು ಧ್ಯಾನಿಸು ತ್ತಿರುವಾಗ ನಿನ್ನನ್ನು ಕಚ್ಚತಕ್ಕ ತಕ್ಷಕನಾಗಲಿ, ಇತರ ಜಗತ್ತಾಗಲಿ ಯಾವುದೂ ಸ್ವತಂತ್ರವೆಂದು ನೀನು ತಿಳಿಯುವುದಿಲ್ಲ.

ಅಪ್ಪರಾಜನೇ ! ವಿಶ್ವನಾಥನ ವಿಷಯದಲ್ಲಿ ನೀನು ಕೇಳಿದ ಪ್ರಶ್ನೆಗಳಿಗೆಲ್ಲ ನಾನು ಉತ್ತರವನ್ನು ಹೇಳಿದ್ದಾಯಿತು. ಇನ್ನೂ ಕೇಳಬೇಕೆಂದಿದ್ದರೆ ಕೇಳಬಹುದು

**ನಾಲ್ಕನೆಯ ಅಧ್ಯಾಯ ಮುಗಿದುದು**

**ಪರೀಕ್ಷಿತ್ :–** (ನಮಸ್ಕರಿಸಿ) ಪೂಜ್ಯರೇ ! ತಮ್ಮ ಉಪದೇಶವನ್ನು ಹೊಂದಿದ್ದರಿಂದ ನಾನು ಅನುಗೃಹೀತನೂ, ಕೃತಾರ್ಥನೂ ಆಗಿರುವೆನು. ಭಾಗವತ ಪುರಾಣವನ್ನು ಕೇಳಿ ಭಗವದ್ವಿಷಯಕ ತತ್ತ್ವವನ್ನು ತಿಳಿದುಕೊಂಡಿದ್ದರಿಂದ ಮರಣಕ್ಕೆ ಹೆದರುವುದಿಲ್ಲ. ಮುಕುಂದನ ಸ್ವರೂಪವನ್ನು ತೋರಿಸಿದಿರಿ. ಶ್ರೀಪರಮಾತ್ಮನನ್ನೇ ಧ್ಯಾನಿಸುತ್ತ ಪ್ರಾಣಗಳನ್ನು ಬಿಡುವೆನು. ಅನುಜ್ಞೆಯನ್ನು ಕೊಡಿ.

**ಸೂತ :–** ಶುಕಾಚಾರ್ಯರು ರಾಜನಿಗೆ ಅಪ್ಪಣೆಯನ್ನು ಕೊಟ್ಟು, ರಾಜನಿಂದ ಪೂಜಿತರಾಗಿ ಯತಿಗಳ ಜೊತೆಯಲ್ಲಿ ಹೊರಟು ಹೋದರು. ಪರೀಕ್ಷಿದ್ರಾಜನು ಗಂಗಾ ನದಿಯಲ್ಲಿ ಅದರ ತೀರದ ಹತ್ತಿರ ಕಟ್ಟಿದ್ದ ಮಂದಿರದೊಳಗೆ ದರ್ಭೆಗಳ ಮೇಲೆ ಉತ್ತರಾಭಿಮುಖವಾಗಿ ಕುಳಿತು ಏಕಾಗ್ರಚಿತ್ತದಿಂದ ಶ್ರೀ ನಾರಾಯಣನನ್ನು ಧ್ಯಾನಿಸುತ್ತಿದ್ದನು. ಶೃಂಗಿಶಾಪದಿಂದ ಪ್ರೇರಿತನಾದ ತಕ್ಷಕನು ಪರೀಕ್ಷಿತನನ್ನು ಕೊಲ್ಲಲು ಬರುವಾಗ ಮಾರ್ಗದಲ್ಲಿ ರಾಜನಿಗೆ ಚಿಕಿತ್ಸೆಯನ್ನು ಮಾಡಿ ವಿಷವನ್ನು ಪರಿಹಾರ ಮಾಡಬಲ್ಲ ವೈದ್ಯನಾದ ಕಾಶ್ಯಪ ಬ್ರಾಹ್ಮಣನ ಕೈಚಳಕವನ್ನು ನೋಡಿ, ಅವನಿಗೆ ಹೇರಳ ಧನವನ್ನು ಕೊಟ್ಟು ಮನೆಗೆ ಕಳುಹಿಸಿಕೊಟ್ಟು ಛದ್ಮವೇಷಧಾರಿಗಳಾದ

ಬ್ರಾಹ್ಮಣರೊಂದಿಗೆ ರಾಜನ ಬಳಿಗೆ ಬಂದನು. ಆ ಬ್ರಾಹ್ಮಣರು ಕೊಟ್ಟ ಬದರೀ ಫಲ ದಲ್ಲಿ ಕ್ರಿಮಿ ರೂಪನಾಗಿ ಅಡಗಿದ್ದ ತಕ್ಷಕನು ರಾಜನನ್ನು ಕಚ್ಚಿದನು. ಪರೀಕ್ಷಿದ್ರಾಜನ ಆತ್ಮವು ವಾಸುದೇವನನ್ನು ಸೇರಿಬಿಟ್ಟಿದ್ದಿತು. ಅವನ ದೇಹವು ವಿಷಾಗ್ನಿಯಿಂದ ದಗ್ಧ ವಾಯಿತು. ದೇವಾದಿಗಳು ಅಚ್ಚರಿಗೊಂಡು ಪುಷ್ಪವೃಷ್ಟಿಯನ್ನು ಮಾಡಿ ರಾಜರ ಗುಣಗಾನ ಮಾಡಿದರು.

ಜನಮೇಜಯನು ತಕ್ಷಕನಿಂದ ತನ್ನ ತಂದೆಗೆ ಮರಣ ಬಂದುದನ್ನು ಕೇಳಿ ಕುಪಿತನಾಗಿ ಬ್ರಾಹ್ಮಣರೊಡಗೂಡಿ ಸರ್ಪಗಳನ್ನು ಸತ್ರಯಾಗದಲ್ಲಿ ಹೋಮಿಸಿದನು. ಅದನ್ನು ನೋಡಿ ತಕ್ಷಕನು ಭೀತನಾಗಿ ದೇವೇಂದ್ರನನ್ನು ಮರೆಹೊಕ್ಕನು. ಇತ್ತ ಜನ ಮೇಜಯನು "ವಿಪ್ರರೇ ! ತಕ್ಷಕನು ಇನ್ನೂ ಅಗ್ನಿಯಲ್ಲಿ ಬೀಳಲಿಲ್ಲೇಕೆ ?" ಎಂದು ಕೇಳಿದನು. ತಕ್ಷಕನು ಇಂದ್ರನನ್ನು ಮೊರೆಹೊಕ್ಕಿರುವನೆಂದೂ, ಇಂದ್ರನು ಅವನನ್ನು ರಕ್ಷಿಸುತ್ತಿರುವನೆಂದೂ ವಿಪ್ರರು ಹೇಳಿದರು. ಜನಮೇಜಯನು ಇಂದ್ರನನ್ನೂ ತಕ್ಷಕನ ಸಹಿತವಾಗಿ ಹೋಮಿಸಿಬಿಡುವಂತೆ ಬ್ರಾಹ್ಮಣರಿಗೆ ಹೇಳಿದನು. ಋತ್ವಿಜರು ಮಂತ್ರ ವನ್ನು ಹೇಳಿ 'ತಕ್ಷಕನೇ ! ಇಂದ್ರನೊಡನೆ ನೀನು ಈ ಅಗ್ನಿಯಲ್ಲಿ ಬೀಳು" ಎಂದು ಹೇಳಿದರು. "ಸೇಂದ್ರಾಯ ತಕ್ಷಕಾಯ ಸ್ವಾಹಾ" ಎಂಬ ಮಂತ್ರದಿಂದ ಇಂದ್ರನು ತನ್ನ ಸ್ಥಾನದಿಂದ ಚಲಿಸಿದನು ವಿಮಾನದೊಂದಿಗೆ ತಕ್ಷಕನೊಡನೆ ಆಕಾಶದಿಂದ ಬೀಳ ತಕ್ಕ ದೇವೇಂದ್ರನನ್ನು ನೋಡಿ ಬೃಹಸ್ಪತಿಗಳು ಬಂದು ಜನಮೇಜಯನನ್ನು ಕುರಿತು ಹೇಳುತ್ತಾರೆ.

**ವಿಶೇಷ** :- ಇಂದ್ರನು ತನ್ನ ಪೌತ್ರನಾದ ಜನಮೇಜಯನಿಗೂ, ಅವನ ಋತ್ವಿಕ್ಕುಗಳಿಗೂ ಕೀರ್ತಿಯನ್ನು ಕೊಡುವುದಕ್ಕಾಗಿ ಹೋಮಕುಂಡದಲ್ಲಿ ಬೀಳದೆ ಉಳಿಯಲು ಸಮರ್ಥನಾಗಿದ್ದರೂ ಅಶಕ್ತನಂತೆ ತನ್ನನ್ನು ತೋರಿಕೊಂಡನು. ಅಂದ ಬಳಿಕ ಇಂದ್ರನನ್ನು ಸಂರಕ್ಷಿಸಲು ಸಮರ್ಥನಾದ ಉಪೇಂದ್ರನು ಅವನನ್ನು ಕೈ ಬಿಡು ವವನಲ್ಲವೆಂದು ಹೇಳತಕ್ಕುದೇನು ? ವೇದಮಂತ್ರವು ಪ್ರಮಾಣವೆಂದು ಅದನ್ನು ಕಾಪಾಡಲು ಶ್ರೀಹರಿಯು ಸುಮ್ಮನಿದ್ದು ಬೃಹಸ್ಪತಿಯ ಮೂಲಕ ಇಂದ್ರನನ್ನು ರಕ್ಷಿಸಿದನು.

**ಬೃಹಸ್ಪತಿ** :- ರಾಜನೇ ! ತಕ್ಷಕನು ಅಮೃತಪಾನವನ್ನು ಮಾಡಿರುವುದ ರಿಂದ ಅವನನ್ನು ನೀನು ಕೊಲ್ಲಲು ಸಾಧ್ಯವಿಲ್ಲ. ಅವನು ಜರಾಮರಣರಹಿತನಾಗಿರು ವನು. ನಿಮ್ಮ ತಂದೆಯ ಮರಣಕ್ಕೆ ತಕ್ಷಕನು ಕಾರಣವಲ್ಲ. ಪ್ರಾಣಿಗಳ ಜನನ, ಮರಣ ಸುಖ, ದುಃಖ ಎಲ್ಲವೂ ಅವರವರ ಕರ್ಮಾನುಸಾರ ಶ್ರೀಹರಿಯಿಂದಲೇ ಬರುತ್ತದೆ. ನಿಮ್ಮಪ್ಪನಸಾವಿಗೆ ಅವನ ಕರ್ಮವೇ ಕಾರಣ. ಆದುದರಿಂದ ಈ ಆಭಿಚಾರಿಕ

ಕರ್ಮವನ್ನು ನಿಲ್ಲಿಸು ನಿರಪರಾಧಿಗಳಾದ ಅನೇಕ ಸರ್ಪಗಳನ್ನು ವೃಥಾ ಸಂಹರಿಸಿದಿ, ಜನರು ತಮ್ಮ ತಮ್ಮ ಕರ್ಮದ ಫಲವನ್ನು ತಪ್ಪದೆ ಅನುಭವಿಸುವರು.

**ಸೂತ :–** ಜನಮೇಜಯನು ಬೃಹಸ್ಪತಿಯ ಮಾತಿಗೆ ಗೌರವವನ್ನು ಕೊಟ್ಟು ಸರ್ಪಯಾಗವನ್ನು ನಿಲ್ಲಿಸಿಬಿಟ್ಟನು. ಆಸ್ತಿಕನಿಗೆ ವರವನ್ನಿತ್ತನು. ಶೌನಕಾದಿಗಳಿರಾ ! ಜೀವರ ಅದೃಷ್ಟವೇ ಸುಖದುಃಖಾದಿಗಳಿಗೆ ಮುಖ್ಯ ಕಾರಣವಲ್ಲ. ಜೀವರಿಗೆ ತನ್ನ ದೆಂಬ ಅಭಿಮಾನವನ್ನು ಹುಟ್ಟಿಸತಕ್ಕ ಬಾಧ್ಯಬಾಧಕನಾಮನಾದ ಶ್ರೀ ವಿಷ್ಣುವಿನ ಮಹಿಮೆ ಅಥವಾ ಅವನ ಇಚ್ಛೆಯೇ ಮುಖ್ಯ ಕಾರಣವು. ಶ್ರೀ ಹರಿಯಲ್ಲಿ ಮೋಹನ ಶಕ್ತಿಯ ಆಟವು ಏನೂ ನಡೆಯಲಾರದು. ಆದರೆ ಇತರರು ಅದನ್ನು ಊಹಿಸಲೂ ಶಕ್ತರಲ್ಲ, ಅವರೆಲ್ಲರನ್ನೂ ಮೋಹನ ಶಕ್ತಿಯು ಆಟವಾಡಿಸುತ್ತಿರುವುದು. ಜಗತ್ತು ಶ್ರೀಹರಿಯನ್ನು ಬಾಧಿಸಲಾರದು. ಅವನಿಂದಲೇ ದೇವಾಸುರರು ತಮತಮಗೆ ಯೋಗ್ಯವಾದ ಸುಖವನ್ನು ಹೊಂದುವರು. ಸತ್ವಾದಿಗುಣಯುಕ್ತನಾದ ಜೀವನು ಶ್ರೀ ಹರಿಗೆ ಯಾವ ವಿಶೇಷವನ್ನೂ ಉಂಟುಮಾಡಲಾರನು. ಇಂತಹ ಬಾಧ್ಯ ಬಾಧಕತ್ವವನ್ನು ವಶಮಾಡಿಕೊಂಡಿರುವ ಪರಬ್ರಹ್ಮನನ್ನು ತಿಳಿದ ಜ್ಞಾನಿಯು ಜನ್ಮಾದಿ ಆರು ಊರ್ಮಿಗಳನ್ನು ತುಚ್ಛೀಕರಿಸಿ ಸಂಸಾರದಿಂದ ಬಿಡುಗಡೆ ಹೊಂದುವನು. ಜ್ಞಾನಿ ಗಳು ವಿರಕ್ತರಾಗಿ ಯಾವನನ್ನು ವಶಮಾಡಿಕೊಂಡಿರುವರೋ ಅವನು ಜೀವನಲ್ಲ, ಜಡವನಲ್ಲ–ಇತ್ಯಾದಿಯಾಗಿ ನಿಷೇಧಿಸಿದಾಗ ಪರಿಶೇಷ ಪ್ರಮಾಣದಿಂದ ಯಾವನು ಉಳಿದಿರುವನೋ ಅಂತಹ ಪರಬ್ರಹ್ಮನನ್ನು ವಿಷ್ಣುಸ್ವರೂಪನೆಂದು ಹೇಳುತ್ತಾರೆ. ಅಹಂಕಾರ ಮಮಕಾರಗಳನ್ನು ಬಿಟ್ಟವರೇ ಈ ಹರಿಯನ್ನು ಹೊಂದಬಲ್ಲರು. ಶೌನಕಾದಿಗಳಿರಾ ! ಹರಿಯ ಅನುಗ್ರಹವನ್ನು ಬಯಸುವವನು ಇತರ ದುಷ್ಟರ ವಚನವನ್ನು ಕೇಳಿ ಸಹಿಸಬೇಕು. ಯಾರನ್ನೂ ಅವಮಾನ ಮಾಡಬಾರದು. ಹಾಗೂ ದ್ವೇಷಿಸಲೂಬಾರದು. ಶ್ರೇಯಃಪ್ರಾಪ್ತಿಗೆ 'ಶ್ರೀ ಕೃಷ್ಣನಿಗೆ ನಮಃ' ಎಂದು ನಮಿಸಿ, ಸ್ಮರಿಸಿ ಭಾಗವತ ಶ್ರವಣಾದಿಗಳನ್ನು ಮಾಡುವುದೇ ಮುಖ್ಯ ಸಾಧನೆಯು.

## ಐದನೆಯ ಅಧ್ಯಾಯ ಮುಗಿದುದು

**ಶೌನಕ –** ವ್ಯಾಸಶಿಷ್ಯರಾದ ಪೈಲಾದಿಗಳು ವೇದಗಳನ್ನು ಎಷ್ಟು ವಿಭಾಗ ಮಾಡಿದರು.

**ಸೂತ :–** ಆದಿಯಲ್ಲಿ ಪರಬ್ರಹ್ಮನಿಂದ ಅಕಾರ ಉಕಾರ ಮಕಾರಗಳೆಂಬ ಮೂರು ವರ್ಣಗಳ ಸಹಿತವಾದ ಓಂಕಾರವು ಅಭಿವ್ಯಕ್ತವಾಯಿತು. ಅದಕ್ಕೆ ಅಕಾರ ಉಕಾರ ಮಕಾರಗಳೇ ಅವಯವಗಳಾದುವು. ಈ ಮೂರು ಅವಯವಗಳಿಂದ

ಭೂಃ ಭುವಃ ಸುವಃ ಎಂಬ ವ್ಯಾಹೃತಿಗಳಾದುವು. ಆವ್ಯಾಹೃತಿಗಳಿಂದ ಶ್ರೀಹರಿಯು ಎಲ್ಲ ವರ್ಣಗಳನ್ನೂ ವ್ಯಕ್ತಮಾಡಿದನು. ಚತುರ್ಮುಖನು ತನ್ನ ನಾಲ್ಕು ಮುಖಗಳಿಂದ ವ್ಯಾಹೃತಿ ಸಹಿತಗಳಾದ ನಾಲ್ಕು ವೇದಗಳನ್ನುಚ್ಚರಿಸಿ, ತನ್ನ ಮಕ್ಕಳಾದ ಮರೀಚಿ ಮೊದಲಾದ ಋಷಿಗಳಿಗೂ, ಅವರು ತಮ್ಮ ತಮ್ಮ ಮಕ್ಕಳಿಗೂ ಕಲಿಸಿದರು. ಹೀಗೆ ನಾಲ್ಕು ವೇದಗಳು ನಾಲ್ಕು ಯುಗಗಳಲ್ಲಿ ಅವರ ಶಿಷ್ಯಪರಂಪರೆಯಿಂದ ಪ್ರಾಪ್ತವಾದುವು. ಬಳಿಕ ಅಲ್ಪಾಯುಗಳೂ ಮಂದಬುದ್ಧಿಗಳೂ ಆದ ಜನರನ್ನು ನೋಡಿ, ದ್ವಾಪರಾಂತ್ಯದಲ್ಲಿ ಧರ್ಮರಕ್ಷಣೆಗಾಗಿ ಬ್ರಹ್ಮರುದ್ರಾದಿದೇವತೆಗಳಿಂದ ಪ್ರಾರ್ಥಿತನಾದ ನಾರಾಯಣನು ಪರಾಶರರಿಂದ ಸತ್ಯವತೀದೇವಿಯಲ್ಲಿ ವೇದವ್ಯಾಸನಾಮಕನಾಗಿ ಅವತರಿಸಿ ಋಕ್. ನಿಗದ, ಸಾಮ, ಅಥರ್ವ ಎಂಬ ಈ ನಾಲ್ಕು ವೇದಾದಿಗಳಿಂದ ಉದ್ಧೃತಗಳಾದ ಋಕ್, ಯಜಸ್ಸು, ಅಥರ್ವಣ ಸಂಹಿತೆಗಳೆಂಬ ನಾಲ್ಕು ಸಂಹಿತೆಗಳನ್ನು ಮಾಡಿ, ಪೈಲ, ವೈಶಂಪಾಯನ, ಜೈಮಿನಿ ಮತ್ತು ಸುಮಂತು ಎಂಬ ಋಷಿಗಳಿಗೆ ಕ್ರಮವಾಗಿ ಉಪದೇಶಿಸಿದರು, ಅವರಲ್ಲಿ ಪೈಲರು ತಮ್ಮ ಋಕ್‌ಸಂಹಿತೆಯನ್ನು ಇಂದ್ರಪ್ರಮತಿಗೂ, ಅವರು ಬಾಷ್ಕಲರಿಗೂ ಉಪದೇಶಿಸಿದರು. ಬಾಷ್ಕಲರು ತಮ್ಮ ಸಂಹಿತೆಯನ್ನು ನಾಲ್ಕುರೀತಿ ವಿಭಾಗ ಮಾಡಿ ಬೋಧ್ಯ, ಯಾಜ್ಞವಲ್ಕ್ಯ, ಪರಾಶರ ಮತ್ತು ಅಗ್ನಿಮಿತ್ರ ಎಂಬ ಈ ನಾಲ್ವರಿಗೆ ಉಪದೇಶಿಸಿದರು. ಇಂದ್ರಪ್ರಮಿತಿಯು ಮಾಂಡೂಕೇಯನಿಗೂ, ಅವನು ವೇದಮಿತ್ರನಿಗೂ ಅವನು ಸೌಭರ್ಯಾದಿಗಳಿಗೂ ಉಪದೇಶಿಸಿದನು. ವೇದಮಿತ್ರನ ಮಗನಾದ ಶಾಕಲ್ಯನು ತಾನು ಕಲಿತ ಸಂಹಿತೆಯನ್ನು ಐದು ಪ್ರಕಾರ ವಿಭಾಗ ಮಾಡಿ ಸುಮಾತ್ಸ್ಯ, ಮೌದ್ಗಲ್ಯ, ಶಾಲೀಯ, ಗೋಪತ್ಯ ಮತ್ತು ಶಿಶಿರ ಎಂಬ ಋಷಿಗಳಿಗೆ ಉಪದೇಶಿಸಿದನು. ಶಾಕಲ್ಯನ ಶಿಷ್ಯ ಜಾತೂಕರ್ಣ್ಯನು ಆ ಸಂಹಿತೆಯನ್ನು ವ್ಯಲೀಕ, ಪೈಂಗಿ, ಪೈಲಾಲ ಮತ್ತು ವಿರಜ ಎಂಬ ನಾಲ್ವರಿಗೆ ಉಪದೇಶಿಸಿದನು. ಬಾಷ್ಕಲನ ಪುತ್ರನಾದ ಬಾಷ್ಕಲಿಯು ಸರ್ವಶಾಖೆಗಳಿಂದ ವಾಲಖಿಲ್ಯ ಎಂಬ ಸಂಹಿತೆಯನ್ನು ಮಾಡಿ ಪಾಲಾಯನಿ ಮೊದಲಾದವರಿಗೆ ಅಧ್ಯಯನ ಮಾಡಿಸಿದನು. ಈ ಋಷಿಗಳೆಲ್ಲರೂ ಈ ಋಕ್ಸಂಹಿತೆಗಳನ್ನು ಅಧ್ಯಯನ ಮಾಡುತ್ತಿದ್ದರು.

ಈ ಛಂದಸ್ಸುಗಳ ವಿಭಾಗವನ್ನು ಕೇಳಿದವನು ಸಕಲ ಪಾಪಗಳಿಂದ ವಿಮುಕ್ತನಾಗುವನು.

ವೈಶಂಪಾಯನರ ಶಿಷ್ಯರು ಅಧ್ವರ್ಯುಗಳೆಂದೂ, ಚರಕರೆಂದೂ ಎರಡು ಬಗೆಯಾಗಿ ಪ್ರಸಿದ್ಧರಾದರೂ ಗುರುಗಳಿಗೆ ಬಂದ ಬ್ರಹ್ಮಹತ್ಯೆಯನ್ನು ಪರಿಹರಿಸುವುದಕ್ಕಾಗಿ ತೀರ್ಥಸ್ನಾನ ಮೊದಲಾದ ವ್ರತಗಳನ್ನು ಮಾಡಿರುವುದರಿಂದ ಚರಕರೆಂಬ ನಾಮವುಳ್ಳವರಾದರು.

ಆಗ ವೈಶಂಪಾಯನ ಶಿಷ್ಯನಾದ ಯಾಜ್ಞವಲ್ಕ್ಯನು 'ಗುರುವೆ ! ಅಲ್ಪಜ್ಞರಾದ ಇವರು ಮಾಡಿದ ವ್ರತಗಳಿಂದೇನು ಫಲ ? ಸುದುಷ್ಕರ ವ್ರತವನ್ನು ನಾನು ಮಾಡಿ ನಿಮ್ಮ ಬ್ರಹ್ಮಹತ್ಯೆಯನ್ನು ಪರಿಹರಿಸುವೆನು' ಎಂದನು. ವೈಶಂಪಾಯನರು ಕುಪಿತರಾಗಿ ಬ್ರಾಹ್ಮಣರಿಗೆ ಅವಮಾನ ಮಾಡುವ ನಿನ್ನಿಂದ ನನಗೇನೂ ಆಗಬೇಕಾದ್ದಿಲ್ಲ. ನಿನ್ನ ಸಹವಾಸವು ಸಾಕು. ನಮ್ಮಿಂದ ಕಲಿತುದನ್ನು ಬಿಟ್ಟುಹೋಗು ಎಂದರು. ಯಾಜ್ಞವಲ್ಕ್ಯನು ತಾನು ಕಲಿತಿದ್ದ ಯಜುರ್ಗಣವನ್ನು ವಮನ ಮಾಡಿ ಹೊರಟುಹೋದನು. ವಮನ ಮಾಡಿದ ಆ ಯಜುರ್ಗಣವನ್ನು ನೋಡಿ ಅದರಲ್ಲಿ ಲೋಲುಪರಾದ ಕೆಲವರು ಋಷಿಗಳು ತಿತ್ತಿರಿ ಪಕ್ಷಿ (ಲಾವಿಗೆ ಹಕ್ಕಿ) ರೂಪವನ್ನು ತೆಗೆದುಕೊಂಡು ಆ ವಮನರೂಪ ಯಜುರ್ಗಣವನ್ನು ತೆಗೆದುಕೊಂಡರು. ಅದರಿಂದ ತೈತ್ತಿರೀಯ ಎಂಬ ಯಜುಃಶಾಖೆಗಳಾದುವು. ಬಳಿಕ ಯಾಜ್ಞವಲ್ಕ್ಯನು ಅಪೂರ್ವ ವೇದಗಳನ್ನು ಹೊಂದಬೇಕೆಂಬ ಇಚ್ಛೆಯಿಂದ ಅರ್ಕನನ್ನು ಉಪಾಸಿಸಿದನು

ಆ ಅರ್ಕನಾರು ? ಎಂದರೆ ಅರ್ಕ = ಪರಮಾನಂದರೂಪನೂ, ನೀರಿನಿಂದ ಅರ್ಚಿಸಲ್ಪಡುವವನೂ, ಸೂರ್ಯಾಂತರ್ಯಾಮಿಯೂ ಆದ ಶ್ರೀ ಮನ್ನಾರಾಯಣನು. ಅವನನ್ನು ಯಾಜ್ಞವಲ್ಕ್ಯನು ಹೀಗೆ ಸ್ತುತಿಸುವನು :—

"ಓಂ ಅಂದರೆ ಗುಣಪೂರ್ಣ, ಷಡ್ಗುಣಾರ್ಣವ, ಆದಿತ್ಯ ಅಂದರೆ ಆದಿಭೂತ ಅಂದರೆ ಸನಾತನನಾದ ಶ್ರೀ ಹರಿಗೆ ನಮಸ್ಕಾರ ! ನೀನು ಬ್ರಹ್ಮಾದಿತೃಣಾಂತವಾದ ಜರಾಯುಜಾದಿ ನಾಲ್ಕು ಬಗೆಯ ಪ್ರಾಣಿಗಳ ಹೃದಯಾಂತರ್ಯಾಮಿಯಾಗಿರುವೆ. ಕ್ಷಣ, ಲವಾದಿ ಅವಯವಗಳಿಂದ ವಿಸ್ತೃತವಾದ ಸಂವತ್ಸರಾದಿ ಎಲ್ಲ ಕಾಲಗಳಲ್ಲಿಯೂ ಕಾಲನಾಮಕರೂಪದಿಂದ ಆಕಾಶದಂತೆ ವ್ಯಾಪ್ತನಾಗಿರುವೆ. ಸುರನರಾದಿ ದೇಹಗಳಲ್ಲಿ ಪರಿಮಿತರೂಪದಿಂದ ನೆಲೆಸಿರುವವನು ನೀನೊಬ್ಬನೇ. ಕಿರಣಗಳಿಂದ ನೀರನ್ನು ಶೋಷಿಸಿ ಜಲವನ್ನು ಕೊಡುತ್ತ ಜನರನ್ನು ಜೀವಿಸುವಂತೆ ಮಾಡುವೆ ದೇವೋತ್ತಮನೇ ! ಜಗತ್ಸೃಷ್ಟಿಕರ್ತನೇ ! ಪ್ರಕಾಶಶೀಲನೇ ! ನಿನ್ನ ಮಂಡಲವು ಸದಾ ವೇದೋಕ್ತ ಪ್ರಕಾರ ಉಪಾಸನೆ ಮಾಡುತ್ತಿರುವವರ ದುಃಖಗಳಿಗೆ ಕಾರಣವಾದ ದುಷ್ಕರ್ಮಗಳೆಂಬ ಬೀಜಗಳನ್ನು ಹುರಿದುಬಿಡುವುದು. ಪ್ರತಿದಿನದ ಹಗಲು ನಿನ್ನಿಂದ ಪ್ರಕಾಶಿಸುವುದು. ಇಂತಹ ಮಂಡಲವನ್ನೂ, ಅದರಲ್ಲಿರುವ ನಿನ್ನನ್ನೂ ಚೆನ್ನಾಗಿ ಚಿಂತಿಸುವೆನು. ದೇವ ! ನಿನ್ನಾಧಾರದಲ್ಲಿರುವ ಸ್ಥಾವರಜಂಗಮಗಳಿಗೆ ನೀನೇ ಸ್ವಾಮಿಯಾಗಿದ್ದು ಒಳಗೆ ಸುಖಪ್ರೇರಕನಾಗಿರುವೆ. ಅಬಾಧಿತಸ್ವರೂಪನಾದ ನೀನು ಮನಸ್ಸು, ಇಂದ್ರಿಯಗಳು ಮತ್ತು ಪ್ರಾಣಗಳು ಇವಕ್ಕೆ ಪ್ರೇರಕನಾಗಿರುವೆ. ದೇವನೇ! ಅಜ್ಞಾನವೆಂಬ ಆಜಗರದ ಬಾಯಿಗೆ ಸಿಕ್ಕಿ, ರಾತ್ರಿಯಲ್ಲಿ ಹೆಣದಂತೆ ಬಿದ್ದಿರುವ ಜನರನ್ನು ನೋಡಿ ಕನಿಕರಗೊಂಡು ಕರುಣಾಕಟಾಕ್ಷವನ್ನು ಬೀರಿ, ಎಚ್ಚರಗೊಳಿಸಿ,

ಪ್ರಾತಃಕಾಲ ಮುಂತಾದ ಪ್ರತಿ ಹಗಲುಗಳಲ್ಲಿಯೂ ಸ್ವೋಚಿತಕರ್ಮಾನುಷ್ಠಾನ ಮಾಡಿ ಶ್ರೇಯಸ್ಸನ್ನು ಹೊಂದುವಂತೆ ಅನುಗ್ರಹಿಸುವೆ. ದಿಕ್ಪಾಲಕರು ಅರ್ಪಿಸುವ ಕಾಣಿಕೆಯನ್ನೂ. ಪೂಜೆಯನ್ನೂ ಸ್ವೀಕರಿಸುತ್ತ, ದುರ್ಜನರಿಗೆ ಮರಣದ ಭಯವನ್ನು ಹುಟ್ಟಿಸುತ್ತಾ ನೀನು ನಾನಾಕಡೆ ಸಂಚರಿಸುವೆ. ಇಂತಹ ನಿನಗೆ ನಮಸ್ಕಾರ ! ಭಗವಂತನೇ ! ಬ್ರಹ್ಮಾದಿ ದೇವತೆಗಳಿಂದ ವಂದ್ಯನಾದ ನಿನ್ನ ಪಾದಾರವಿಂದಗಳಲ್ಲಿ ಮರೆ ಹೊಕ್ಕಿರುವೆನು. ಹಿಂದೆ ನಾನು ಅಧಿಕರಿಸಿದ್ದ ಯಜುರ್ವೇದವನ್ನು ವೀರ್ಯವತ್ತಾಗಿ ಸಂಪಾದಿಸಬೇಕೆಂದು ಬಯಸುವೆನು, ಅನುಗ್ರಹಿಸು."

ಹೀಗೆ ಸ್ತುತಿಸಲಾಗಿ ಭಗವಂತನು ಪ್ರಸನ್ನನಾಗಿ ಸೂರ್ಯನಿಗೆ ಪ್ರೇರಿಸಿದನು. ಸೂರ್ಯನು ಅಶ್ವರೂಪದಿಂದ ಬಂದು ವೀರ್ಯವತ್ತಗಳಾದ ಯಜುಃಸುಗಳನ್ನು ಅನುಗ್ರಹಿಸಿಕೊಟ್ಟನು. ಬಳಿಕ ಯಾಜ್ಞವಲ್ಕ್ಯನು ಆಯಜುಃಸುಗಳಿಂದ ಹದಿನೈದು ಶಾಖೆಗಳನ್ನು ಮಾಡಿದನು. ಸೂರ್ಯೋಪದಿಷ್ಟಗಳಾದ ವಾಜಸನೀ ಶಾಖೆಗಳನು ಕಾಣ್ವಾದಿಗಳೂ ಮಾಧ್ಯಂದಿನಾದಿಗಳೂ ಸ್ವೀಕರಿಸಿದರು.

ಸಾಮಗರಾದ ಜೈಮಿನಿಗಳ ಪುತ್ರನು ಸುಮಂತು. ಅವನ ಮಗ ಸುಮನ್ವಂತನು. ಜೈಮಿನಿಗಳು ತಮ್ಮ ಪುತ್ರ ಪೌತ್ರರಿಗೆ ಒಂದೊಂದು ಶಾಖೆಯನ್ನು ಉಪದೇಶಿಸಿದರು. ಜೈಮಿನಿಗಳ ಶಿಷ್ಯ ಸುಕರ್ಮನೆಂಬುವನು ಸಾಮವೇದದಲ್ಲಿ ಸಹಸ್ರಸಂಹಿತಾ ಭೇದವನ್ನು ಮಾಡಿದನು. ಸುಕರ್ಮನ ಶಿಷ್ಯರಾದ ಹಿರಣ್ಯನಾಭ, ಪೌಷ್ಯಂಜಿ ಮತ್ತು ಆವಂತ್ಯ ಎಂಬ ಮೂರು ಮಂದಿಯೂ ಆ ಸಂಹಿತೆಗಳನ್ನು ಅಧ್ಯಯನ ಮಾಡಿದರು. ಹಿರಣ್ಯನಾಭನ ಶಿಷ್ಯನಾದ ಕೃತನು ಇಪ್ಪತ್ತುನಾಲ್ಕು ಸಂಹಿತೆಗಳನ್ನು ತನ್ನ ಶಿಷ್ಯರಿಗೆ ಹೇಳಿದನು. ಉಳಿದ ಸಂಹಿತೆಗಳನ್ನು ಆವಂತ್ಯನು ತನ್ನ ಶಿಷ್ಯರಿಗೆ ಉಪವೇಶಿಸಿದನು.

ಅಥರ್ವಣ ವೇದಜ್ಞರಾದ ಸುಮಂತು ಋಷಿಗಳು ಈ ವೇದವನ್ನು ತನ್ನೊಬ್ಬ ಶಿಷ್ಯರಿಗೆ ಹೇಳಿಕೊಟ್ಟರು. ಆ ಶಿಷ್ಯನು ಪಥ್ಯ, ವೇದದರ್ಶನನಿಗೆ ಅದನ್ನು ಉಪದೇಶಿಸಿದನು. ವೇದದರ್ಶನನಿಗೆ ಶೌಕ್ಲಾಯನಿ ಮೊದಲಾದವರೂ, ಪಥ್ಯನಿಗೆ ಕುಮುದಾದಿಗಳೂ ಶಿಷ್ಯರಾದರು. ಅವರವರು ತಮ್ಮ ತಮ್ಮ ಶಿಷ್ಯರಿಗೆ ಉಪದೇಶಿಸಿದರು. ಹೀಗೆ ಪರಂಪರೆಯಿಂದ ಉಪದೇಶಿಸುತ್ತ ಬಂದರು.

ಆದಿಯಲ್ಲಿ ವೇದವ್ಯಾಸರು ಪುರಾಣಸಂಹಿತೆಗಳನ್ನು ಮಾಡಿ ತನ್ನ ತಂದೆಯಾದ ರೋಮಹರ್ಷಣನಿಗೆ ಕೊಟ್ಟರು. ಅವರಿಂದ ತ್ರಯ್ಯಾರುಣಿ, ಕಶ್ಯಪ, ಸಾವರ್ಣಿ, ಅಕೃತವ್ರಣ, ವೈಶಂಪಾಯನ ಮತ್ತು ಹಾರೀತ ಎಂಬ ಆರು ಮಂಗಿಯೂ ತಲಾ ಒಂದೊಂದು ಪುರಾಣಸಂಹಿತೆಯನ್ನು ಕಲಿತರು. ಇವರೆಲ್ಲರ ಶಿಷ್ಯನಾದ ನಾನು

ಆ ಎಲ್ಲ ಸಂಹಿತೆಗಳನ್ನೂ ಕಲಿತೆನು. ಕಶ್ಯಪ, ನಾನು, ಅಕೃತವ್ರಣ ಮತ್ತು ಸಾವರ್ಣಿ ಈ ನಾಲ್ವರು ಶುಕಾಚಾರ್ಯರಿಂದ ನಾಲ್ಕು ಮೂಲ ಸಂಹಿತೆಗಳನ್ನು ಕಲಿತಿರುವೆವು.

**ಪುರಾಣ ಲಕ್ಷಣಗಳು :–** 1. ಮಹದಾದಿ ತತ್ತ್ವಗಳ ಸೃಷ್ಟಿ 2. ವಿಸರ್ಗ ಅಂದರೆ ಚರಾಚರ ಪ್ರಾಣಿಗಳ ಸೃಷ್ಟಿ 3 ವೃತ್ತಿ ಅಂದರೆ ಶ್ರೀಹರಿಯಿಂದ ಪ್ರಾಣಿಗಳಿಗೆ ವಿಹಿತವಾದ ಜೀವನ 4. ರಕ್ಷಾ ಅಂದರೆ ಶ್ರೀಹರಿಯ ಅವತಾರಲೀಲೆ. 5. ಮನ್ವಂತರ ಅಂದರೆ ಮನು, ದೇವತೆಗಳು, ಮನುಪುತ್ರರು, ಇಂದ್ರ, ಸಪ್ತರ್ಷಿಗಳು ಮತ್ತು ಹರಿಯ ಅವತಾರ ಈ ಆರರ ಕಥೆಗಳನ್ನು ಹೇಳುವುದು. 6. ವಂಶ ಅಂದರೆ ಮನುವಿನಿಂದ ಹುಟ್ಟಿದ ರಾಜರಕುಲಗಳು 7. ವಂಶಾನು ಚರಿತೆ ಅಂದರೆ ಆ ವಂಶಗಳಲ್ಲಿ ಹುಟ್ಟಿದವರ ವೃತ್ತಾಂತಗಳನ್ನು ಹೇಳುವುದು 8. ಸಂಸ್ಥಾ ಅಂದರೆ ನೈಮಿತ್ತಿಕ, ಪ್ರಾಕೃತಿಕ, ನಿತ್ಯ ಮತ್ತು ಆತ್ಯಂತಿಕಗಳೆಂಬ ನಾಲ್ಕು ಬಗೆಯ ಪ್ರಳಯಗಳ ಕಥೆ. 9. ಹೇತು ಅಂದರೆ ಜೀವರು ಅಜ್ಞಾನದಿಂದ ಮಾಡಿದ ಕರ್ಮಾನುಸಾರ ಅವರವರ ಭೋಗಕ್ಕಾಗಿ ಶ್ರೀಹರಿಯು ಜಗತ್ತನ್ನು ಸೃಷ್ಟಿಸುವುದರಿಂದ ಜೀವನು ಸೃಷ್ಟ್ಯಾದಿಗಳಿಗೆ ಹೇತುವೆನಿಸುವನು. 10. ಅಪಾಶ್ರಯ ಅಂದರೆ ಅವಸ್ಥಾತ್ರಯಕ್ಕೆ ಮುಖ್ಯವಾಗಿ ಪ್ರೇರಕನಾದ ಪರಬ್ರಹ್ಮನು.

ಹದಿನೆಂಟು ಪುರಾಣಗಳೂ ಉಕ್ತ ಹತ್ತು ಲಕ್ಷಣಗಳಿಂದ ಕೂಡಿವೆ. ಬ್ರಾಹ್ಮ, ಪಾದ್ಮ, ವೈಷ್ಣವ, ಶೈವ, ಲಿಂಗ, ಗಾರುಡ, ನಾರದೀಯ, ಭಾಗವತ, ಆಗ್ನೇಯ, ಸ್ಕಾಂದ, ಭವಿಷ್ಯ, ಬ್ರಹ್ಮವೈವರ್ತ, ಮಾರ್ಕಂಡೇಯ, ವಾಮನ, ವಾರಾಹ ಮಾತ್ಸ್ಯ ಕೌರ್ಮ ಮತ್ತು ಬ್ರಹ್ಮಾಂಡ. ಇವು ಹದಿನೆಂಟು ಪುರಾಣಗಳ ಹೆಸರುಗಳು.

ಶೌನಕರೇ ! ಹರಿಮಹಿಮಾ ಪ್ರಕಾಶಕಗಳಾದ ವೇದ ಪುರಾಣಗಳನ್ನು ಅಲ್ಪ ಮೇಧೆಯುಳ್ಳವರೂ ತಿಳಿಯುವಂತೆ ವಿಭಾಗಿಸಿರಿ ಎಂದು ಬ್ರಹ್ಮದೇವರು ತಮ್ಮ ಶಿಷ್ಯ ಪ್ರಶಿಷ್ಯರಿಗೆ ಅಪ್ಪಣೆ ಮಾಡಿದರು ಅದರಂತೆ ಆ ಶಿಷ್ಯಾದಿಗಳು ವೇದ ಪುರಾಣಗಳನ್ನು ವಿಭಾಗಿಸಿದರು.

### ಆರನೆಯಅಧ್ಯಾಯ ಮುಗಿದುದು

**ಶೌನಕ :** ಸೂತಾಚಾರ್ಯನೇ ! ನೀನು ಚಿರಜೀವಿಯಾಗಿ ಬಾಳು. ಸಂಸಾರದಲ್ಲಿ ಅಲೆಯುತ್ತಿರುವವರಿಗೆ ತತ್ತ್ವೋಪದೇಶ ಮಾಡಿ ಉದ್ಧರಿಸುತ್ತಿರುವೆ. ನಮ್ಮ ಕುಲೋದ್ಭವರಾದ ಮಾರ್ಕಂಡೇಯ ಋಷಿಗಳು ಚಿರಜೀವಿಯೆಂದು ಕೇಳಬಲ್ಲೆವು. ಅವರು ಪ್ರಳಯದಲ್ಲಿ ಎಲ್ಲವನ್ನೂ ಉದರದೊಳಗಿಟ್ಟು ಮಲಗಿರುವ ಪರಮಾತ್ಮನನ್ನು

ನೋಡಿದರೆಂದು ಕೇಳಿದ್ದೇವೆ. ಪ್ರಳಯದಲ್ಲಿ ಒಬ್ಬ ಜೀವನೂ ಹೊರಗೆ ಇರುವುದಿಲ್ಲ. ಅಂದಮೇಲೆ ಮಾರ್ಕಂಡೇಯರು ಹೊರಗಿದ್ದು ಪ್ರಳಯವನ್ನು ಹೇಗೆ ನೋಡಿದರು ? ಈ ಸಂಶಯವನ್ನು ಪರಿಹರಿಸು.

**ಸೂತ** :- ನಿಮ್ಮ ಪ್ರಶ್ನೆಯು ಅತ್ಯುಪಯುಕ್ತವು. ಕೇಳಿರಿ ! ಮಾರ್ಕಂಡೇಯರು ಉಪನೀತರಾಗಿ ವೇದಾದಿಗಳೆಲ್ಲವನ್ನೂ ಅಧ್ಯಯನ ಮಾಡಿ, ನೈಷ್ಠಿಕ ಬ್ರಹ್ಮಚಾರಿಗಳಾಗಿ, ಅಗ್ನಿಕಾರ್ಯಾದಿ ಕರ್ಮಗಳನ್ನು ಮಾಡುತ್ತ, ಶ್ರೀಹರಿಯನ್ನು ಸ್ಮರಿಸಿಕೊಂಡು ಅಯುತಾಯುತ ವರ್ಷಗಳಲ್ಲಿ ತಪಸ್ಸನ್ನು ಮಾಡುತ್ತಾ ಇದ್ದರು. ಇದನ್ನು ನೋಡಿದ ಬ್ರಹ್ಮಾದಿಗಳು ಆಶ್ಚರ್ಯಗೊಂಡರು. ಮಾರ್ಕಂಡೇಯರು ಧ್ಯಾನದಲ್ಲಿಯೇ ಆರು ಮನ್ವಂತರಗಳನ್ನು ಕಳೆದರು. ಏಳನೆಯ ಮನ್ವಂತರದಲ್ಲಿ ಇಂದ್ರನು ಅವರ ತಪೋಭಂಗಕ್ಕಾಗಿ ಗಂಧರ್ವ, ಅಪ್ಸರ ಸ್ತ್ರೀಯರು, ಮನ್ಮಥ ಮತ್ತು ಅವನ ಪರಿವಾರಭೂತರಾದ ವಸಂತಾದಿಗಳನ್ನು ಕಳುಹಿಸಿದನು. ಅವರೆಲ್ಲರೂ ಮಾಡಿದ ಪ್ರಯತ್ನವು ವ್ಯರ್ಥವಾಯಿತು. ಇಂದ್ರನು ಆಶ್ಚರ್ಯಗೊಂಡನು. ಬಳಿಕ ನರ ನಾರಾಯಣರೂಪೀ ಶ್ರೀಹರಿಯು ಮಾರ್ಕಂಡೇಯರನ್ನು ಅನುಗ್ರಹಿಸುವುದಕ್ಕಾಗಿ ಅವರ ಆಶ್ರಮದಲ್ಲಿಯೇ ಪ್ರಕಟನಾದನು. ಅವರು ಸ್ವಾಮಿಗೆ ನಮಸ್ಕರಿಸಿ ಸ್ತುತಿಸುತ್ತಾರೆ :–

ಪ್ರಾಣಿಗಳ ಇಂದ್ರಿಯಗಳನ್ನು ಪ್ರೇರಿಸುವ ಮುಖ್ಯ ಪ್ರಾಣದೇವರು ಹಾಗೂ ಬ್ರಹ್ಮರುದ್ರದೇವೇಂದ್ರಾದಿಗಳೂ ನಿನ್ನಿಂದಲೇ ಪ್ರೇರಿತರಾಗಿ ವ್ಯಾಪಾರ ಮಾಡುತ್ತಾರೆ. ಅಂದ ಬಳಿಕ ನನ್ನ ಇಂದ್ರಿಯಗಳು ನಿನ್ನ ಅಧೀನವೆಂದು ಹೇಳಬೇಕಾದುದೇ ಇಲ್ಲ. ನಿನ್ನ ಮಹಿಮೆಗಳ ಏಕದೇಶವನ್ನೂ ವರ್ಣಿಸಲು ನಾನು ಶಕ್ತನಲ್ಲ. ಇಂದ್ರಿಯಗಳಿಗೆ ನೀನೇ ನಿಯಾಮಕನಾದುದರಿಂದ ನೀನೇ ಉಪಾಸ್ಯನು. ನೀನು ಭಕ್ತಿಗೆ ವಶನಾಗತಕ್ಕವನಾದುದರಿಂದಲೇ ನನಗೆ ಗೋಚರಿಸಿದೆ. ನರ, ನಾರಾಯಣ ಎಂಬ ಈ ಎರಡು ರೂಪಗಳೂ ಜಗದ್ರಕ್ಷಣೆ, ದುರ್ಜನರಿಂದ ಉಂಟಾಗುವ ಸಂತಾಪ ನಿವಾರಣೆ, ಸುಜೀವರಿಗೆ ಶತ್ರುವಾಗಿರುವ ಸಂಸಾರದಿಂದ ಅವರಿಗೆ ಜಯ ಈ ಅನುಗ್ರಹಕ್ಕಾಗಿಯೇ ಅವತರಿಸಿವೆ. ಕ್ಷೇಮಾದಿಗಳನ್ನುಂಟುಮಾಡಲು ನೀನು ಅಸದೃಶ ನಾನಾವಿಧವಾದ ಅವತಾರಗಳನ್ನು ಮಾಡುವೆ. ಜೇಡರ ಹುಳುವು ಎಳೆಗಳಿಂದ ಬಲೆಯನ್ನು ನಿರ್ಮಿಸಿ ನುಂಗುವಂತೆ ನೀನು ಜಗತ್ತನ್ನು ನಿರ್ಮಿಸಿ ಸಂಹರಿಸುವೆ. ನಿನ್ನ ಪಾದಾಶ್ರಯ ಮಾಡಿದ ಪುರುಷನನ್ನು ದುಷ್ಕರ್ಮವಾಗಲಿ, ತ್ರಿಗುಣಗಳಾಗಲೀ ಜನನಾದಿಗಳಿಗೆ ಕಾರಣಗಳಾದ ಕಾಲ, ಶುಕ್ಲ, ಶೋಣಿತಗಳೆಂಬ ದೋಷಗಳಾಗಲೀ ದುಃಖಪಡಿಸಲಾರವು. ವೇದ ತಾತ್ಪರ್ಯವನ್ನು ತಿಳಿದ ಬ್ರಹ್ಮಾದಿಗಳೆಲ್ಲರೂ ''ಪಾದೋಸ್ಯ ವಿಶ್ವಾಭೂತಾನಿ ತ್ರಿಪಾದಸ್ಯಾಮೃತಂ ದಿವಿ" ಎಂದು ನಿನ್ನ ಪಾದವನ್ನು ಪುನಃ ಪುನಃ

ನಮಿಸುವರು. ಮತ್ತು "ನಮೋ ವಿಷ್ಣವೇ ಮಹತೇ ಕರೋಮಿ" ಎಂದು ನಿರಂತರವೂ ಪೂಜಿಸುವರು. "ತ್ರಿಯಂಬಕಂ ಯಜಾಮಹೇ ಸುಗಂಧಿಂ ಪುಷ್ಟಿವರ್ಧನಂ" ಎಂದು ಧ್ಯಾನಿಸುವರು. ಇಂತಹ ನಿನ್ನ ಪಾದಗಳನ್ನು ಭಜಿಸುವೆನು. ಪುರುಷಾರ್ಥ-ಸ್ವರೂಪನೇ ! ನೀನು ಸರ್ವರಿಂದಲೂ ಭಯರಹಿತನು. ನೂರು ವರ್ಷಗಳ ಕಾಲ ಸತ್ಯಲೋಕವನ್ನು ಆಳುವ ಬ್ರಹ್ಮದೇವರೇ ಕಾಲನಾಮಕನಾದ ನಿನ್ನಿಂದ ಭಯಪಡುವರೆಂದ ಮೇಲೆ ಬ್ರಹ್ಮದೇವರಿಂದ ಸೃಷ್ಟಿಸಲ್ಪಡುವ ದೇಹಧಾರಿಗಳೆಲ್ಲ ಭಯಪಡುವರೆಂದು ಹೇಳಬೇಕಾದುದೇ ಇಲ್ಲ. ಹೀಗೆ ಸರ್ವರಿಂದಲೂ ಭಯಪಡತಕ್ಕವರಿಗೆ ನಿನ್ನ ಪಾದದಲ್ಲಿ ಶರಣು ಹೊಂದುವುದಕ್ಕಿಂತ ಕ್ಷೇಮಕ್ಕೆ ಕಾರಣವಾದುದು ಬೇರೆ ಯಾವುದೂ ಇಲ್ಲ. ಆತ್ಮನಾಶಕ್ಕೆ ಕಾರಣವೂ, ಪುರುಷಾರ್ಥಶೂನ್ಯವೂ, ಅಮಂಗಳಕರವೂ, ಅಜ್ಞಾನನಿರ್ಮಿತವೂ ಆದ ದೇಹಾದಿ ಅಭಿಮಾನವನ್ನು ಬಿಟ್ಟು ನಿಶ್ಚಲ ಬುದ್ಧಿವಂತನೂ, ಬ್ರಹ್ಮದೇವರಿಗೆ ಗುರುವೂ. ಪರಮಾತ್ಮನೂ ಆದ ನಿನ್ನ ಪಾದವನ್ನು ಭಜಿಸಿದ ಪಕ್ಷದಲ್ಲಿ, ನಿನ್ನ ಪ್ರಸಾದದಿಂದ ಅಪೇಕ್ಷಿತವಾದ ಸಕಲ ಪುರುಷಾರ್ಥವನ್ನೂ ಹೊಂದುವೆನು. ಅನಿಮಿತ್ತಬಂಧುವಾದ ಸ್ವಾಮಿಯೆ ! ನೀನು ಜಗನ್ನಿರ್ಮಾಣವೆಂಬ ಕ್ರೀಡೆಗಾಗಿ ತ್ರಿಗುಣಗಳನ್ನು ಅಂಗೀಕರಿಸುವೆ. ಹಾಗಿದ್ದರೂ ಸತ್ವಗುಣವು ಜೀವರ ಮುಕ್ತಿಗೆ ಕಾರಣವಾಗುವುದು. ರಜೋಗುಣ ತಮೋಗುಣಗಳು ವ್ಯಸನ, ಮೋಹ ಮತ್ತು ಭಯಗಳನ್ನುಂಟು ಮಾಡಿ ಮುಕ್ತಿಗೆ ಕಾರಣಗಳಾಗವೆ ಸಂಸಾರಕ್ಕೆ ಕಾರಣಗಳಾಗುವುವು. ಸಾತ್ವಿಕಜೀವನೇ ಮುಕ್ತಿಯನ್ನು ಪಡೆಯುವವನು. ಸತ್ವಗುಣ ಪ್ರವರ್ತಕನೂ, ಪುರುಷಶಬ್ದವಾಚ್ಯನೂ ಆದ ನಿನ್ನನ್ನೇ ಸಾತ್ವಿಕರು ಬಯಸುವರು. ಅವರೇ ನಿನ್ನ ಭಕ್ತರು. ಈ ನಿನ್ನ ಭಕ್ತರಿಗೆ ಅತ್ಯಂತ ಪ್ರೀತ್ಯಾಸ್ಪದವೂ, ಉಪಾಸನೆಗೆ ಯೋಗ್ಯವೂ, ಪರಮಶುದ್ಧವೂ ಆದ ನಿನ್ನ ದೇಹವನ್ನು ನಿಪುಣರು ಉಪಾಸಿಸುತ್ತಾರೆ. ದೇವನೇ ! ಭಗವಂತನೇ ! ಪುರುಷನಾಮಕನೇ! ಪೂರ್ಣನೇ ! ವಿಶ್ವನಾಮಕನೇ ! ಜಗದ್ಗುರುವೇ ! ಪರದೇವತೆಯೇ! ನಾರಾಯಣನೇ! ನರೋತ್ತಮನೇ ! ಋಷಿಯೇ ! ನಿತ್ಯನಿರ್ದೋಷ ಸಾರರೂಪನೇ ! ಮಿತಭಾಷಿಯೇ! ಮುಖ್ಯಪ್ರಾಣನನ್ನು ಸ್ವಾಧೀನಪಡಿಸಿಕೊಂಡಿರುವವನೇ ! ವೇದಪ್ರವರ್ತಕನೇ ! ನಿನಗೆ ನಮಸ್ಕಾರ ! ಸರ್ವತ್ರ ವ್ಯಾಪ್ತನೇ ! ಅಧಿಕಾರಿ ಜೀವನು ಸಕಲರಿಗೆ ಗುರುವಾದ ನಿನ್ನ ಮಹಿಮೆಗಳನ್ನು ಪ್ರತಿಪಾದಿಸುವ ವೇದಗಳನ್ನು ಅಧ್ಯಯನ ಮಾಡಿದ್ದರೂ, ವಿಷಯಭೋಗಿಯಾಗಿ, ನಿನ್ನ ಬಂಧಕ ಶಕ್ತಿಯಿಂದ ನಿನ್ನ ಜ್ಞಾನವು ಮುಚ್ಚಲ್ಪಟ್ಟು ಶಬ್ದಾದಿ ವಿಷಯಗಳಲ್ಲಿ ಆಸಕ್ತವಾಗಿರುವ ಮನಸ್ಸುಳ್ಳವನು ಇಂದ್ರಿಯ, ವಿಷಯಗಳಲ್ಲಿ ಮತ್ತು ಹೃದಯದಲ್ಲಿ ನೆಲೆಸಿರತಕ್ಕ ನಿನ್ನನ್ನು ತಿಳಿಯಲಾರನು. ನಿನ್ನ ಪ್ರಸಾದದಿಂದಲೇ ಜ್ಞಾನವು ಸುಲಭ. ನೀನು ತತ್ತ್ವನಿರ್ಣಾಯಕವಾದ ವೇದದಿಂದ ಪ್ರತಿಪಾದ್ಯನು ಮತ್ತು ತಿಳಿಯಲ್ಪಡತಕ್ಕವನು.' ರಹಸ್ಯ ಸ್ವರೂಪನಾದ ನಿನ್ನನ್ನು ವಿಷ್ಣುವ

ರಾಯಣರೂ, ಉಪಾಸನಾಶೀಲರೂ ಆದ ಜ್ಞಾನಿಗಳು ಹೀಗೆಯೇ ಸರಿಯೆಂದು ತಿಳಿಯುವುದಕ್ಕೆ ಮತ್ತು ಉಪದೇಶಿಸುವುದಕ್ಕೆ ಸಮರ್ಥರಲ್ಲ. ಅಜ್ಞಾತಸ್ವರೂಪನೂ, ಭಗವಂತನೂ ಆದ ನಿನಗೆ ನಮಸ್ಕಾರ ! (ಹೀಗೆಂದು ಮಾರ್ಕಂಡೇಯ ಮುನಿಗಳು ಪ್ರಾರ್ಥಿಸಿದರು.)

## ಏಳನೆಯ ಅಧ್ಯಾಯ ಮುಗಿದುದು

**ಸೂತ .** ನರಸಖಿನಾರಾಯಣನು ಮಾರ್ಕಂಡೇಯರ ಭಕ್ತಿ, ತಪಸ್ಸು, ವೇದಾಧ್ಯಯನ ಮೊದಲಾದುವುಗಳಿಂದ ಸಂತುಷ್ಟನಾಗಿ "ಮಾರ್ಕಂಡೇಯನೇ! ನಿನ್ನ ವ್ರತಾದಿಗಳಿಂದ ಸಂತುಷ್ಟನಾಗಿರುವೆನು. ಬೇಕಾದ ವರವನ್ನು ಕೇಳು" ಎಂದನು.

**ಮಾರ್ಕಂಡೇಯ :–** "ದೇವದೇವೇಶನೇ ! ಬ್ರಹ್ಮಾದಿಗಳಿಂದ ಪ್ರಾರ್ಥ್ಯವಾದ ನಿನ್ನ ದರ್ಶನವಾದ ಬಳಿಕ ಯಾವ ವರವು ತಾನೇ ಬೇಕಾಗಿದೆ. ಆದರೂ 'ವರವನ್ನು ಕೇಳು" ಎಂಬ ನಿನ್ನ ಆಜ್ಞೆಯನ್ನು ಮೀರಬಾರದೆಂಬುದಕ್ಕಾಗಿ ಕೇಳುವೆನು. ಜಗತ್ತಿನಿಂದ ಪರಬ್ರಹ್ಮನು ಭಿನ್ನನು ಎಂಬುದನ್ನು ತೋರಿಸತಕ್ಕ ಅಘಟ್ಯವಾದುದರ ಘಟಕಶಕ್ತಿಯನ್ನು ನೋಡ ಬಯಸುತ್ತೇನೆ' ಎಂದು ವರವನ್ನು ಬೇಡಿದರು. ನಾರಾಯಣನು ಆಗಲಿ ಎಂದು ಹೇಳಿ ಬದರಿಗೆ ಹೊರಟು ಹೋದನು. ಮಾರ್ಕಂಡೇಯರು ತಮ್ಮ ಆಶ್ರಮದಲ್ಲಿಯೇ ಇದ್ದುಕೊಂಡು ಅಗ್ನಿ, ರವಿ, ಶಶಿ ಮೊದಲಾದ ಸರ್ವರಲ್ಲಿಯೂ ಇರುವ ಶ್ರೀಹರಿಯನ್ನು ಧ್ಯಾನಿಸುತ್ತ ಅಹಿಂಸಾ ಮೊದಲಾದ ಮಾನಸಿಕ ಪುಷ್ಪಾದಿಗಳಿಂದಲೇ ಪೂಜಿಸುತ್ತ ಇದ್ದರು. ಒಮ್ಮೊಮ್ಮೆ ಕೇವಲ ವಿಷ್ಣುಪರವಶರಾಗಿ ಮಾನಸ ಪೂಜೆಯನ್ನು ಮರೆಯುತ್ತಿದ್ದರು. ಒಂದು ದಿನ ಪುಷ್ಪಭದ್ರಾ ನದಿಯ ತೀರದಲ್ಲಿ ಮಾರ್ಕಂಡೇಯರು ಹರಿಯ ಉಪಾಸನೆಯನ್ನು ಮಾಡುತ್ತಿದ್ದಾರೆ. ಆಗ ದೊಡ್ಡ ಬಿರುಗಾಳಿ ಎದ್ದು, ಮೋಡಗಳು ಭೀಕರಧ್ವನಿ ಮಾಡುತ್ತಿವೆ. ಮಿಂಚು ಬರುತ್ತಿದೆ ಧಾರಾಕಾರವಾಗಿ ಜಡಿಮಳೆ ಸುರಿಯಿತು. ಅಗಾಧ ಅಲೆಗಳಿಂದ ಭಯಂಕರಧ್ವನಿ ಸಹಿತ ನಾಲ್ಕು ಸಮುದ್ರಗಳೂ ಉಕ್ಕಿ ಬಂದು ಭೂಮಿಯು ಜಲದೊಳಗೆ ಮುಳುಗಿತು. ಇದನ್ನು ನೋಡಿ ಮಾರ್ಕಂಡೇಯ ಮುನಿ ಭಯಪಟ್ಟನು. ಹೀಗೆ ಲೋಕಗಳು ಜಲದಲ್ಲಿ ಮುಳುಗುತ್ತಿರಲು ಮುನಿಯು ಅಜ್ಞನಂತೆ, ಅಂಧನಂತೆ ನೀರಿನಲ್ಲಿ ಪರದಾಡಿದನು. ವಿಪರೀತ ಹಸಿವಾಯಿತು. ಮೀನು ಮೊಸಳೆಗಳ ಉಪದ್ರವವಾಯಿತು. ಎಲ್ಲೆಲ್ಲೂ ಕತ್ತಲು ಕವಿಯಿತು. ಮುನಿಯು ದಿಕ್ಕು ತೋಚದೆ ಅಲೆದಾಡುತ್ತಾ ಅತಿಶ್ರಾಂತನಾಗಿ, ದಿಕ್ಕು, ಆಕಾಶ, ಭೂಮಿ ಯಾವುದನ್ನೂ ತಿಳಿಯದಾದನು. ಮತ್ತು ಆಗಾಗ ಆ ನೀರಿನ ಸುಳಿಯಲ್ಲಿ ಮುಳುಗಿ ಏಳುತ್ತ, ಅಲೆಗಳಿಂದ ಬಡಿಸಿಕೊಳ್ಳುತ್ತ, ಜಲಚರಗಳಿಂದ ಹಿಂಸಿಸಲ್ಪಡುತ್ತ, ವ್ಯಾಧಿ

ಗ್ರಸ್ತನಾಗುತ್ತ ಶೋಕ, ಮೋಹ, ದುಃಖ, ಭಯ, ಸುಖ, ಮರಣಾದಿಗಳನ್ನು ಹೊಂದಿ ಹೀಗೆ ಹರಿಯ ಇಚ್ಛೆಯಿಂದ ಜ್ಞಾನವು ಮರೆಯಾಗಿ, ಪ್ರಳಯ ಜಲ ದಲ್ಲಿಯೇ ಸುತ್ತಾಡಿಕೊಂಡಿದ್ದ ಅವನಿಗೆ ಅನೇಕ ಲಕ್ಷೋಪಲಕ್ಷ ವರ್ಷಗಳು ಕಳೆದುವು. (ಹರಿಯು ಕಾಲವನ್ನು ಹಿಗ್ಗಿಸಿದ್ದೇ ಇದಕ್ಕೆ ಕಾರಣವು ) ಹೀಗಿರಲು ಒಂದು ಕಡೆ ತಿಟ್ಟಾದ ನೆಲವು ಸಿಕ್ಕಿತು. ಅಲ್ಲಿ ಒಂದು ಆಲದ ಸೊಸಿ. ಅದು ಸೊಸಿಯಾದರೂ ಚಿಗುರು ಫಲಗಳಿಂದ ಶೋಭಿಸುತ್ತಿತ್ತು. ಪೂರ್ವದಿಕ್ಕಿನಲ್ಲಿ ಹುಟ್ಟಿ ಉತ್ತರ ದಿಕ್ಕಿಗೆ ನೀಡಿದ ಅದರ ಒಂದು ಕೊಂಬೆಯ ಪರ್ಣಪುಟಕದಲ್ಲಿ ಅತಿಸುಂದರವಾದ ಒಂದು ಶಿಸುವು ಮಲಗಿದ್ದು ಪಾದಾಂಗುಷ್ಠವನ್ನು ಚೀಪುತ್ತಾ ಇದೆ. ಮಾರ್ಕಂಡೇಯ ಮುನಿಯು ಅದನ್ನು ನೋಡಿ, ಅತ್ಯಾಶ್ಚರ್ಯವನ್ನು ಹೊಂದಿ ಆ ಶಿಶುವಿನ ದರ್ಶನ ಮಾತ್ರದಿಂದಲೇ ಶ್ರಮವು ಹೋಗಿ, ರೋಮಾಂಚಗಾತನಾದನು. ಮಾತಾಡಿಸ ಬೇಕೆಂದು ಆ ಶಿಶುವಿನ ಬಳಿಗೆ ಹೋದನು. ಅಷ್ಟರಲ್ಲಿ ಆ ಶಿಶುವಿನ ಶ್ವಾಸವಾಯುವಿ ನಿಂದ ಆ ಮುನಿಯು ಸೊಣದಂತೆ ಶಿಶುವಿನ ಶರೀರದೊಳಗೆ ಪ್ರವೇಶಿಸಿ ಅಲ್ಲಿ ಇಡೀ ಜಗತ್ತಿರುವುದನ್ನೂ, ಹಿಮವತ್ಪರ್ವತಾದಿಗಳನ್ನೂ ತಮ್ಮ ಆಶ್ರಮವನ್ನೂ ನೋಡೀ ಅತಿ ವಿಸ್ಮಿತನಾಗಿ, ಆ ಮಗುವಿನ ಶ್ವಾಸದಿಂದಲೇ ಈಚೆಗೆ ದೂಡಲ್ಪಟ್ಟು ಹೊರಗೆ ಬಂದನು. ಆ ಪ್ರಳಯಸಮುದ್ರದಲ್ಲಿ ಮೊದಲಿದ್ದ ಆ ವಟವೃಕ್ಷವನ್ನೂ, ಅಲ್ಲಿರುವ ಶಿಶುವನ್ನೂ, ನೋಡಿ ಬಹ್ವಾಶ್ಚರ್ಯಭರಿತನಾಗಿ, ಪರಮ ಸಂತೋಷದಿ ದ ಆ ಶಿಶು ವನ್ನು ಆಲಂಗಿಸಲು ಹೋದನು. ಆಗ ಆ ಶಿಶುವೂ ಕಣ್ಮರೆಯಾದನು. ಪ್ರಳಯ ಜಲ, ವಟವೃಕ್ಷ ಮೊದಲಾದುವೆಲ್ಲ ಅದೃಶ್ಯವಾದುವು. ಆ ಮಾರ್ಕಂಡೇಯ ಮುನಿಗಳು ಮೊದಲಿನಂತೆ ತಮ್ಮ ಆಶ್ರಮದಲ್ಲಿಯೇ ಧ್ಯಾನಿಸುತ್ತ ಇದ್ದರು.

## ಎಂಟನೆಯ ಅಧ್ಯಾಯ ಮುಗಿದುದು

ಮಾರ್ಕಂಡೇಯ ಮುನಿಗಳು ನಾರಾಯಣನು ತೋರಿಸಿದ ಅಣಿಮಾದಿ ಐಶ್ವರ್ಯದ ವ್ಯಾಪ್ತಿಯನ್ನು ಅಥವಾ ಸ್ವರೂಪ ಶಕ್ತಿಯ ವೈಭವವನ್ನು ನೋಡಿ ಅನು ಭವಿಸಿ, ಅವನನ್ನೇ ಶರಣು ಹೊಂದಿ ಧ್ಯಾನಿಸುತ್ತಿದ್ದರು. ದೇಹದೊಳಗಿನ ರೂಪಕ್ಕೆ ನಮಸ್ಕರಿಸಿ, ಹೊರಗಡೆಯೂ "ಶ್ರೀಹರಿಯೇ ! ಜ್ಞಾನಿಗಳೂ ಕೂಡ ನಿನ್ನ ಮೋಹನ ಶಕ್ತಿಯಿಂದ ಮರುಳಾಗಿ ಅಜ್ಞಾನ ಮತ್ತು ಭಯಾದಿಗಳನ್ನು ಹೊಂದುವರು. ಆಶ್ಚರ್ಯವನ್ನೂ ಪಡುವರು. ಆಶ್ರಿತರ ಸಂಸಾರ ಪರಿಹಾರಕವೂ, ಜ್ಞಾನಸಾಧನವೂ ಆದ ನಿನ್ನ ಪಾದವಲ್ಲಿ ಶರಣಾಗತನಾಗಿರುವೆನು" ಎಂದರು.

ಹೀಗೆ ಅವರು ಚಿಂತಿಸುತ್ತಿರುವ ವೇಳೆಯಲ್ಲಿಯೇ ರುದ್ರದೇವರು ಪಾರ್ವತಿ ಯೊಡನೆ ನಂದಿಯನ್ನೇರಿ, ಪ್ರಮಥಗಣದೊಡನೆ ಅದೇ ಮಾರ್ಗವಾಗಿ ಬಂದರು.

**ಪಾರ್ವತಿ :–** ಸ್ವಾಮಿಯೇ ! ಶ್ರೀಹರಿಯಲ್ಲಿಯೇ ಮನಸ್ಸೇ ಮೊದಲಾದ ಸರ್ವೇಂದ್ರಿಯಗಳನ್ನೂ ಅರ್ಪಿಸಿ ಯಾವುದನ್ನೂ ಬಯಸದಿರುವ, ಆಶ್ಚರ್ಯಕರನಾದ ಈ ಮುನಿಯನ್ನು ನೋಡಬೇಕಾದುದೇ ನ್ಯಾಯ. ಮತ್ತು ಯಾವ ನಿಯಮವನ್ನೂ ನೋಡದೆ ಇವನಿಗೆ ತಾವು ಫಲವನ್ನು ಕೊಡಬೇಕು.

**ರುದ್ರ :–** ಪ್ರಿಯೇ ! ಇವನು ಶ್ರೀಹರಿಯ ಪ್ರಸಾದವೊಂದನ್ನು ಬಿಟ್ಟು ಕೊನೆಗೆ ಮೋಕ್ಷವನ್ನೂ ಬಯಸುವವನಲ್ಲ. ಅಂದ ಬಳಿಕ ಇವನಿಗೆ ನಾವು ಕೊಡ ಬೇಕಾದ ಫಲವು ಯಾವುದಿದೆ ? ಇವನು ಇಂತಹ ವಿರಕ್ತನಾಗಿದ್ದರೂ, ಸಾಧು ಸಂಗವು ಯೋಗ್ಯರಿಗೆ ಪರಮ ಲಾಭಕರವಾದಕಾರಣ ನಾವು ಹೋಗಿ ಹರಿಭಕ್ತನೂ, ಸತ್ಪುರುಷನೂ ಆದ ಈ ಮುನಿಯೊಡನೆ ಸಲ್ಲಾಪವನ್ನು ಮಾಡೋಣ.

ಹೀಗೆ ಹೇಳಿ ರುದ್ರದೇವರು ಪಾರ್ವತಿಯೊಡನೆ ಆ ಮಾರ್ಕಂಡೇಯರ ಬಳಿಗೆ ಹೊರಟು ಬಂದರು.)

**ಸೂತ :–** ಶೌನಕರೇ ! ಶಿವನು ಸಾಮಾನ್ಯನಲ್ಲ ! 'ಈ ಶಾನಃ ಸರ್ವವಿದ್ಯಾ ನಾಂ' ಎಂದು ಶ್ರುತಿ. ಅದರ ಅರ್ಥವೇನೆಂದರೆ 'ಶಿವನು ಸಜ್ಜನರಿಗೆ ಗತಿ, ಸರ್ವ ವಿದ್ಯೆಗಳಿಗೂ ಅವನು ಅಧಿಪತಿ.' ಅಂದರೆ ಇಂದ್ರಾದಿ ಸಕಲ ಜೀವರಿಗೂ ಅಧಿಪತಿಯು. ಜೀವರು ಶಿವನ ಅಧೀನರಾಗಿರುವುದರಿಂದಲೇ ಆಯಾ ಇಂದ್ರಿಯ ಸಾಧ್ಯವಾದ ಜ್ಞಾನವೂ ಶಿವನ ಪ್ರಸಾದದಿಂದಲೇ ಉಂಟಾಗಬೇಕಾದುದರಿಂದ ಭಗ ವಂತನಾದ ಹರಿಯ ಜ್ಞಾನವೂ ರುದ್ರಪ್ರಸಾದದಿಂದ ಫಲವತ್ತಾಗಬೇಕು. ಇದನ್ನು ಈಶಾನ ಮತ್ತು ಈಶ್ವರ ಎಂಬ ಶಬ್ದಗಳು ತೋರಿಸುತ್ತಿವೆ.

ಇಂತಹ ಶಿವನು ಮಾರ್ಕಂಡೇಯ ಮುನಿಯ ಇದಿರಿಗೆ ಬಂದು ನಿಂತರೂ ಆ ಮುನಿಯು ಅಸಂಪ್ರಜ್ಞಾತಸಮಾಧಿಯಲ್ಲಿದ್ದುದರಿಂದ ತನ್ನನ್ನು ನೋಡಲಿಲ್ಲವಾಗಿ ಶಿವನು ಹೃದಯ ಗುಹೆಯನ್ನು ಸೂಕ್ಷ್ಮರೂಪದಿಂದ ಪ್ರವೇಶಿಸಿದಾಗ, ಋಷಿಯು ವಿಸ್ಮಿತನಾಗಿ, ಸಮಾಧಿಯಿಂದ ಹೊರಬಂದು, ಪ್ರಮಥಗಣಗಳಿಂದಲೂ, ಪಾರ್ವತಿ ಯಿಂದಲೂ ಸಹಿತರಾಗಿ ಬಂದಿದ್ದ ರುದ್ರದೇವರನ್ನು ನೋಡಿ, ನಮಸ್ಕರಿಸಿ, ಪೂಜಿಸಿ ಕೈಮುಗಿದುಕೊಂಡು ವಿಜ್ಞಾಪಿಸುವನು.

**ಮಾರ್ಕಂಡೇಯ –** ಪ್ರಭುವೆ! ಈಶಾನ! ಈ ಜಗತ್ತು ನಿನ್ನಿಂದಲೇ ಸುಖ ವನ್ನು ಹೊಂದುವುದು. ಬ್ರಹ್ಮಜ್ಞಾನದಿಂದ ಪೂರ್ಣಕಾಮನಾದ ನಿನ್ನನ್ನು ಯಾವ ಬಗೆಯಿಂದ ಸಂತೋಷಪಡಿಸಬಲ್ಲೆನು ? ಮಂಗಳಾಂಗನೇ ! ಶಾಂತಮೂರ್ತಿಯೇ ! ಪರಬ್ರಹ್ಮನಲ್ಲಿ ಶರಣಾಗತನೂ, ಉತ್ಕೃಷ್ಟಪಾಲಕ ಅಥವಾ ಮೃಡನಾಮಕನೂ,

ತ್ರಿಗುಣ ಪ್ರವರ್ತಕನೂ, ಹರಿಭಕ್ತರಿಗೆ ಅಭಯಂಕರನೂ, ಅಭಕ್ತರಾದ ಶತ್ರುಗಳಿಗೆ ಭಯಂಕರನೂ ಆದ ನಿನಗೆ ನಮಸ್ಕಾರ ! (ಹೀಗೆ ಸ್ತುತಿಸಿದನು.)

**ರುದ್ರ** ;– ಬ್ರಹ್ಮರ್ಷಿಯೇ! ಹರಿ, ಹಿರಣ್ಯಗರ್ಭ ಮತ್ತು ಹರನಾದ ನಾನು ಈ ಮೂವರೂ ವರಪ್ರದದೇವತೆಗಳಲ್ಲಿ ದೊಡ್ಡವರು. ನಮ್ಮ ದರ್ಶನ ಮಾಡಿದ ಯೋಗ್ಯ ಜೀವನು ಮುಕ್ತಿಯನ್ನು ಹೊಂದುವನಾದುದರಿಂದ ನಮ್ಮ ದರ್ಶನವು ವ್ಯರ್ಥವಲ್ಲ. ಮಹರ್ಷಿಯೇ ! ನಿನ್ನಂತಹ ಬ್ರಾಹ್ಮಣರು ಪರಬ್ರಹ್ಮನನ್ನು ಅರಿತವರಾಗಿರುವರು. ಮತ್ತು ಬಹ್ಮೈಕ ನಿಷ್ಠರು. ರಾಗಾದಿ ದೋಷರಹಿತರು. ಸತ್ಸ್ವಭಾವದವರು. ಶಾಂತರೂ ದುಃಸಂಗವಿದೂರರು. ಪ್ರಾಣಿಗಳನ್ನು ಮಕ್ಕಳಂತೆ ಕಾಪಾಡ ತಕ್ಕವರು. ಶ್ರೀಹರಿಯೇ ಸರ್ವೋತ್ತಮನು – ಎಂಬ ನಿರ್ಣಯದಿಂದ ನಮ್ಮ ಮೂವ ಕಲ್ಪಿತ ರತಮಭಾವದಿಂದ ಭಕ್ತಿಯುಳ್ಳವರು, ಯೋಗ್ಯತಾತಿರೇಕದಿಂದ ವೈರವಿಲ್ಲ ದವರು. ಸಮದರ್ಶಿಗಳು. ಇಂತಹ ಬ್ರಾಹ್ಮಣರನ್ನು ಲೋಕಪಾಲಸಹಿತರಾದ ಸಜ್ಜನ ರೆಲ್ಲರೂ ನಮಿಸಿ, ಪೂಜಿಸಿ, ಉಪಾಸಿಸುವರು. ಸ್ವಯಂ ಹರಿಯು ಈಶ್ವರನು. ಅಂದರೆ ಈ = ಲಕ್ಷ್ಮೀ, ಶ = ಸದಾನಂದರಾದ ಬ್ರಹ್ಮದೇವರು ಅವರಿಬ್ಬರಿಗೂ ವರ= ಸ್ವಾಮಿಯು ಮತ್ತು ಈಶನಾದ ನನಗೂ ವರನು. ಆದುದರಿಂದ ಬ್ರಹ್ಮ ಮತ್ತು ಅಹಂ=ಶಿವನಾದ ನಾನು ಇಬ್ಬರೂ ಶ್ರೀಹರಿಯ ಅಧೀನರು. ನ ಪೃಥಕ್ – ಸ್ವತಂತ್ರ ರಲ್ಲ. ಈ ತತ್ತ್ವವನ್ನು ತಿಳಿದ ಬ್ರಾಹ್ಮಣರು ಮಯಿ = ಹರಿಯು ನನ್ನಲ್ಲಿರುವುದರಿಂದ 'ಮಯಿ' ಎಂದು ಕರೆಯಲ್ಪಡುವನು. ಈ ಹರಿಯ ರೂಪಕ್ಕೂ, ಅಜ=ಅಜನಾದ ಬ್ರಹ್ಮದೇವರಲ್ಲಿರುವುದರಿಂದ 'ಅಜ' ನಾಮಕನಾದ ಹರಿಯ ರೂಪಕ್ಕೂ, ಪ್ರತ್ಯೇಕ ವಾಗಿರುವ ಅಚ್ಯುತ ರೂಪಕ್ಕೂ ಮತ್ತು ಪ್ರಪಂಚದ ಅಂತರ್ಯಾಮಿಯ ರೂಪಕ್ಕೂ ಭೇದವನ್ನು ತಿಳಿಯುವುದಿಲ್ಲ. ಆದುದರಿಂದ ನಾವೆಲ್ಲರೂ ಬ್ರಾಹ್ಮಣರಾದ ನೀವು ಎಲ್ಲ ರಿಂದಲೂ ಪೂಜ್ಯರೆಂದು ತಿಳಿಯುವೆವು. ಜಡವಾದ ಜಲ ಮತ್ತು ಮಣ್ಣು ಮೊದ ಲಾದ ವಿಗ್ರಹಗಳಲ್ಲಿ ಸಂನಿಹಿತರಾದ ದೇವತೆಗಳು ತಮ್ಮನ್ನು ಸೇವಿಸತಕ್ಕ ಭಕ್ತರನ್ನು ಬಹುಕಾಲದ ಮೇಲೆ ಪಾವನ ಮಾಡುವರು. ಬ್ರಾಹ್ಮಣರಾದ ನೀವಾದರೋ ಕೇವಲ ನಿಮ್ಮನ್ನು ನೋಡುವ ಮಾತ್ರದಿಂದಲೇ ಅವರನ್ನು ಪಾವನ ಮಾಡುವಿರಿ. ವೇದಗಳ ಮುಖ್ಯ ಪ್ರತಿಪಾದ್ಯನೂ, ಅಸ್ಮದಾದಿಗಳ ಸ್ವರೂಪಾನಂದವನ್ನು ನಮ್ಮ ಅನುಭವಕ್ಕೆ ತಂದು ಕೊಡುವವನೂ, ಜೀವರಲ್ಲಿ ಸಂನಿಹಿತನಾಗಿರುವವನೂ ಆದ ಶ್ರೀಹರಿಯನ್ನು ಬ್ರಾಹ್ಮಣರು ಆಲೋಚನೆ, ಅಧ್ಯಯನ, ವಾಗಾದಿ ನಿಯಮಗಳಿಂದ ಶಿಷ್ಯ ಪ್ರಶಿಷ್ಯರಿಗೆ ಉಪದೇಶ ಮಾಡುತ್ತಾರೆ. ಆದುದರಿಂದ ಬ್ರಾಹ್ಮಣರಿಗೆ ನಾವು ನಮಸ್ಕರಿಸುತ್ತೇವೆ ಪಾಪಿಗಳಾದರೂ ನಿಮ್ಮ ಚರಿತ್ರೆಯ ಶ್ರವಣದಿಂದ ಮತ್ತು ನಿಮ್ಮ ದರುಶನದಿಂದ ಶುದ್ಧರಾಗುವರು. ಅಂದ ಬಳಿಕ ನಿಮಗೆ ನಮಿಸಿದವರೂ, ನಿಮ್ಮೊಡನೆ ಸಂಭಾಷಿಸಿದವರೂ ಶುದ್ಧರಾಗುವರೆಂದು ಬೇರೆ ಹೇಳಬೇಕೇನು ? ಹೀಗೆ ನೀವು ಸಂಭಾಷ್ಯರಾದುದರಿಂದಲೇ ನಿಮ್ಮಲ್ಲಿ ನಾವು ಪೂಜ್ಯ ಬುದ್ಧಿಯನ್ನಿಟ್ಟಿರುವೆವು.

**ಮಾರ್ಕಂಡೇಯ** :– ಮಹಾದೇವ ! ಈಶ್ವರಚರ್ಯೆಯನ್ನು ತಿಳಿಯಲು ಅಸಾಧ್ಯವು. ತಮ್ಮಂತಹವರು ನಿಯಾಮಕರಾಗಿದ್ದರೂ, ಲೋಕ ಸಂಗ್ರಹಕ್ಕಾಗಿ ನಿಯಮ್ಯರಾದ ಬ್ರಾಹ್ಮಣರನ್ನು ಸ್ತುತಿಸುವಿರಿ. ಇದರಿಂದ ನಿಮ್ಮ ಪ್ರಭಾವಕ್ಕೆ ಕೊರತೆಯೇನಿಲ್ಲ. ಭಗವಂತನು ಸ್ವೇಚ್ಛೆಯಿಂದ ಜಗತ್ತನ್ನು ಸೃಷ್ಟಿಸಿ, ಅಂತರ್ಯಾಮಿ ರೂಪದಿಂದ ಅದರೊಳಗೆ ಪ್ರವೇಶಿಸಿ ವ್ಯಾಪಾರ ಮಾಡುತ್ತಿದ್ದರೂ ಜೀವನಂತೆ ಇಂದ್ರಿಯ ಗುಣದೋಷಗಳ ಲೇಪವನ್ನು ಹೊಂದುವುದಿಲ್ಲ. ನಿನಗೂ, ನಿನ್ನಲ್ಲಿರುವ ಶ್ರೀಹರಿಗೂ ನಮಸ್ಕಾರ ! ವರಪ್ರದನಾದ ನಿನ್ನ ದರ್ಶನವಾದ ಮೇಲೆ ಯಾವ ವರವನ್ನು ಕೇಳಲಿ ? ಆದರೂ ಶ್ರೀ ಭಗವಂತನಲ್ಲಿಯೂ, ನಿನ್ನಲ್ಲಿಯೂ ಸಜ್ಜನರಲ್ಲಿಯೂ ಸ್ಥಿರವಾದ ಭಕ್ತಿಯನ್ನು ಬೇಡುವೆನು.

**ರುದ್ರ** :– ಋಷಿಯೇ ! ನಿನ್ನಿಷ್ಟದಂತೆ ಆಗಲಿ. ನಿನ್ನ ಕೀರ್ತಿಯು ಕಲ್ಪಾಂತ ಪೂರ್ತಿ ಎಲ್ಲ ಕಡೆಯೂ ಹರಡಲಿ. ಜರಾಮರಣರಹಿತನಾಗಿರು. ತ್ರಿಕಾಲಗಳಲ್ಲಿರುವ ವಸ್ತುಗಳ ಜ್ಞಾನ, ವಿರಕ್ತಿಯುಕ್ತ ಹರಿಯ ಜ್ಞಾನ, ಬ್ರಹ್ಮವರ್ಚಸ್ಸು ಇವು ಉಂಟಾಗಲಿ. ಪುರಾಣಾಚಾರ್ಯನೂ ಆಗು.

**ಸೂತ** :– ಮುಕ್ಕಣ್ಣನು ಹೀಗೆ ವರವನ್ನು ಕೊಟ್ಟು ಅಲ್ಲಿಂದ ಹೊರಟು ಬರುತ್ತಾ ಪಾರ್ವತಿಗೆ ಮಾರ್ಕಂಡೇಯನು ಕಂಡ ಪ್ರಳಯವನ್ನೂ, ಭಗವನ್ಮಹಿಮೆಯನ್ನೂ, ಈಗಿನ ಅವನ ಅನುಭವವನ್ನೂ ವಿವರಿಸಿ ಹೇಳುತ್ತ ತನ್ನ ಸ್ಥಾನಕ್ಕೆ ಹೊರಟು ಹೋದನು.

ಹೀಗೆ ಭಾರ್ಗವೋತ್ತಮರಾದ ಮಾರ್ಕಂಡೇಯರು ಮಹಾ ಅಣಿಮಾದಿಯೋಗ ಮಹಿಮೆಯನ್ನು ಹೊಂದಿ, ಶ್ರೀಹರಿಯಲ್ಲಿ ನಿಯತಭಕ್ತಿಯುಕ್ತರಾಗಿಯೇ ಈಗಲೂ ಸಂಚರಿಸುತ್ತಿರುವರು.

ಶ್ರೀಹರಿಯ ಈ ಸಾಮರ್ಥ್ಯವು ಅನಾದಿನಿತ್ಯವಾಗಿದ್ದರೂ ಅಜ್ಞಾನಿಗಳು ಆಕಸ್ಮಿಕವೆನ್ನುವರು. ಶೌನಕರೇ ! ಈ ಚರಿತ್ರೆಯನ್ನು ಹೇಳುವವರೂ, ಕೇಳುವವರೂ ಸಂಸಾರದಿಂದ ಮುಕ್ತರಾಗುವರು.

**ಒಂಭತ್ತನೆಯ ಅಧ್ಯಾಯ ಮುಗಿದುದು**

**ಶೌನಕ** :– ಸೂತಾಚಾರ್ಯನೇ ! ಹರಿಯ ಪೂಜೆಯನ್ನು ವಿಧಿಸುವ ಶಾಸ್ತ್ರದಲ್ಲಿ ನಿಪುಣರಾದ ತಾಂತ್ರಿಕರು ಹರಿಪೂಜೆಯಲ್ಲಿ ಭೂಮ್ಯಾದಿ ಪದಾರ್ಥಗಳಿಂದ ಅಂಗ, ಉಪಾಂಗ ಮತ್ತು ಆಯುಧ ಮೊದಲಾದುವುಗಳನ್ನು ಕಲ್ಪಿಸುವ ರೀತಿಯನ್ನು ಹೇಳು !

**ಸೂತ್ರ ;–** ಗುರುಗಳಿಗೆ ನಮಿಸಿ ಈ ವಿಷಯವನ್ನು ಹೇಳುವೆನು ಕೇಳು :– ಬ್ರಹ್ಮಾದಿ ಮುಖ್ಯ ಉಪದೇಶಕರು ವೇದ ಮತ್ತು ತಂತ್ರಶಾಸ್ತ್ರಗಳಿಂದ ಪ್ರತಿಪಾದಿಸಿರುವ ವಿಭೂತಿರೂಪಗಳ ಪೈಕಿ ನಾನು ತಿಳಿದಿರುವ ವಿಭೂತಿ ರೂಪಗಳನ್ನು ಹೇಳುವೆನು :–

ಪ್ರಕೃತಿ, ಮಹತ್ತತ್ತ್ವ, ಅಹಂಕಾರತತ್ತ್ವ, ಮನಸ್ತತ್ತ್ವ, ಪಂಚಭೂತಗಳು ಮತ್ತು ಇಂದ್ರಿಯಾದಿಗಳು ಇವುಗಳಿಂದ ವಿರಾಟ್‌ದೇಹವು ಅಂದರೆ ಬ್ರಹ್ಮಾಂಡವು ನಿರ್ಮಿತವಾಯಿತು. ಚೇತನರ ಸಹಿತವಾದ ಬ್ರಹ್ಮಾಂಡದಲ್ಲಿ ಮೂರು ಲೋಕಗಳು ಅಡಗಿವೆ. ಈ ಬ್ರಹ್ಮಾಂಡವು ಪುರುಷನಾಮಕ ಭಗವಂತನ ಸಂನಿಧಾನಯೋಗ ಪ್ರತಿಮೆಯಾಗಿರುವುದು. ಭೂಮಿಯು ಪುರುಷನಾಮಕ ಭಗವಂತನ ಪಾದಗಳಿಂ ಹುಟ್ಟಿ, ಅದೂ, ಅದರ ಅಭಿಮಾನಿಯೂ ಅಲ್ಲಿಯೇ ಆಶ್ರಯಿಸಿರುವುದರಿಂ ಭೂಮಿಯು ಅವನ ಪಾದಗಳೆನಿಸಿದೆ. ಸ್ವರ್ಗವು ಅವನ ಶಿರಸ್ಸು. ಆಕಾಶವು ಅವ ಹೊಕ್ಕಳು. ಸೂರ್ಯನು ಅವನ ಕಣ್ಣುಗಳು. ವಾಯುವು ಅವನ ಮೂಗು. ದಿಕ್ಕುಗಳ ಅವನ ಕಿವಿಗಳು. ದಕ್ಷನು ಅವನ ಗುಹ್ಯೇಂದ್ರಿಯು. ಮೃತ್ಯುವು ಅವನ ಗುದ. ಲೋ ಪಾಲಕರು ಅವನ ಬಾಹುಗಳು. ಚಂದ್ರನು ಮನಸ್ಸು. ಯಮನು ಹುಬ್ಬುಗಳು ಲಜ್ಜೆಯು ಅವನ ಮೇಲಿನ ತುಟಿ. ಲೋಭವು ಕೆಳಗಿನ ತುಟಿ. ಚಂದ್ರಿಕೆ ಅವ ಸ್ವರೂಪದ ಕಾಂತಿ. ಅವನ ಮಂದಹಾಸವು ಭ್ರಾಂತಿ. ವೃಕ್ಷಗಳು ರೋಮಗಳ ಮೇಘಗಳು ತಲೆಗೂದಲುಗಳು. ಈ ಪ್ರಕಾರ ಅಂಗ ಕಲ್ಪನಾ ಪ್ರಕಾರವನ್ನು ತಿಳಿ ಬೇಕು. ಬ್ರಹ್ಮಾಂಡದ ಪರಿಮಾಣವೆಷ್ಟೋ ಅಷ್ಟೇ ಪರಿಮಾಣವು ತದಂತರ್ಗ ಪರಮಾತ್ಮನದು.

**ಉಪಾಂಗಗಳು :–** ಶ್ರೀಪರಮಾತ್ಮನು ಸ್ವಾಧೀನಬ್ರಹ್ಮನೆಂಬ ಜ್ಯೋ ಸ್ಸನ್ನು ಕೌಸ್ತುಭನೆಪದಿಂದ ಕೊರಳಲ್ಲಿಯೂ, ಶ್ರೀವತ್ಸವನ್ನು ವಕ್ಷಃಸ್ಥಳದಲ್ಲಿಯ ಧರಿಸಿರುವನು. ನಾನಾ ವರ್ಣವುಳ್ಳ ಲಕ್ಷ್ಮೀರೂಪ ವನಮಾಲೆಯನ್ನು ಧರಿಸಿರುವ ವೇದಸ್ವರೂಪವಾದ ಪೀತಾಂಬರವನ್ನು ಉಟ್ಟಿರುವನು. ಪ್ರಣವಸ್ವರೂಪವಾ ಯಜ್ಞೋಪವೀತವನ್ನೂ, ಆತ್ಮತತ್ತ್ವ ವಿಜ್ಞಾನ ಮತ್ತು ಕರ್ಮಸ್ವರೂಪಗಳಾಗಿರು ಮಕರಕುಂಡಲಗಳನ್ನೂ, ಸರ್ವರಿಂದ ನಮಸ್ಕೃತವಾದ ಪಾರಮೇಷ್ಠ್ಯಸ್ಥಾನರೂ ವಾದ ಕಿರೀಟವನ್ನೂ ಧರಿಸಿರುವನು. ಪ್ರಧಾನಶೇಷದೇವರೆಂಬ ಪೀಠದ ಕುಳಿತಿರುವನು.

**ಆಯುಧಗಳು :–** ಧರ್ಮ, ಜ್ಞಾನ ಮೊದಲಾದ ಧರ್ಮಗಳಿಂದ ಸಹಿತ ಸತ್ತ್ವಗುಣಾಭಿಮಾನಿನಿಯಾದ ಶ್ರೀದೇವಿಯ ರೂಪದ ಪದ್ಮವನ್ನೂ, ಮುಖ್ಯಪ್ರಾ ರೂಪವಾದ ಗದೆಯನ್ನೂ, ಜಲದಲ್ಲಿ ಹುಟ್ಟಿ ಅಲ್ಲಿಯೇ ವ್ಯಾಪ್ತವಾದುದರಿಂದ ತತ್ತ್ವರೂಪವಾದ ಶಂಖವನ್ನೂ, ಮಹಾಜ್ವಾಲಾರೂಪವಾದ ಸುದರ್ಶನವನ

ಧರಿಸಿರುವವನು. ಆಕಾಶತತ್ತ್ವರೂಪವಾದ ನಂದಕ ಖಡ್ಗವನ್ನೂ, ದುರ್ಗಾ ಪ್ರಧಾನಕವಾದ ಗುರಾಣಿಯನ್ನೂ, ಕಾಲರೂಪ ಶಾರ್ಙ್ಗಧನುಃಸನ್ನೂ, ಪುಣ್ಯಕರ್ಮಸ್ವರೂಪಗಳಾದ ಎರಡು ಬತ್ತಳಿಕೆಗಳನ್ನೂ, ಪಂಚಾತ್ಮವಾಯುರೂಪಗಳಾದ ಬಾಣಗಳನ್ನೂ ಧರಿಸಿರುವವನು.

ಭೂಮಿಯೇ ಶ್ರೀಹರಿಯ ರಥವು. ಶಬ್ದಾದಿ ವಿಷಯಗಳೇ ಈ ರಥದ ವ್ಯಕ್ತಿಸ್ಥಾನಗಳು. ಕರ್ಮೇಂದ್ರಿಯ ವಿಷಯಗಳಾದ ವಿಸರ್ಗಾದಿಗಳು ಕರ್ಮಗಳೆನಿಸುವುವು. ಚಕ್ರಾಬ್ಜಾದಿಕ ಮಂಡಲವು ಶ್ರೀಹರಿಯ ಪೂಜಾ ಮಂಟಪ. ಪರಮಾತ್ಮನಿಂದಾಗುವ ಶರೀರ ಶುದ್ಧಿಯು ದೀಕ್ಷೆ. ಈ ರೀತಿಯಾಗಿ ಮಾಡುವ ಭಗವಂತನ ಪೂಜೆಯು ಜೀವರ ಪಾಪನಾಶನವು.

ಶ್ರೀಹರಿಯು ಪೂಜ್ಯನು. ಐಶ್ವರ್ಯಾದಿಗುಣಸಮುದ್ರನು, ಲೀಲೆಯೆಂಬ ಕಮಲವನ್ನು ಹಿಡಿದಿರುವವನು. ಧರ್ಮ ಮತ್ತು ಯಶಸ್ಸು ಎಂಬುವ ಚಾಮರ ವ್ಯಜನಗಳನ್ನುಳ್ಳವನು. ವೈಕುಂಠಾಭಿಮಾನಿದೇವತೆಯೇ ಶ್ವೇತಛತ್ರ. ಮೂರು ಬಗೆಯಾದ ವೇದವು ಗರುಡನೆಂಬ ವಾಹನ. ಶ್ರೀದೇವಿಯೇ ಪಟ್ಟದರಾಣಿ. ಪಂಚರಾತ್ರಾಭಿಮಾನಿಯಾದ ವಿಷ್ವಕ್ಸೇನನು ಪಾರ್ಷದನು. ನಂದಾದಿ ಎಂಟು ಮಂದಿ ದ್ವಾರಪಾಲಕರೇ ಅಣಿಮಾದಿ ಎಂಟು ಗುಣಗಳು. ಮೂರ್ತಿಸ್ಥಾಪನೆಯಲ್ಲಿ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧರೆಂದು ನಾರಾಯಣನೇ ಕರೆಯಲ್ಪಡುತ್ತಾನೆ. ಇವನೇ ವಿಶ್ವ, ತೈಜಸ, ಪ್ರಾಜ್ಞನೆಂಬ ಶಬ್ದವಾಚ್ಯನು. ಇಂತಹ ಶ್ರೀಹರಿಯೇ ಅಂಗ, ಉಪಾಂಗ, ಆಯುಧ, ಆಭರಣ ಈ ನಾಲ್ಕಕ್ಕೂ ಆಧಾರನು.

ಶೌನಕರೇ ! ಈ ಪುರುಷನೇ ಸೃಷ್ಟ್ಯಾದಿಕರ್ತನಾದ ಪರಬ್ರಹ್ಮನು ಎಂದು ವೇದಾದಿಗಳಲ್ಲಿ ಉಕ್ತನಾಗಿರುವನು. ಇವನು ಸ್ವರೂಪಭೂತಜ್ಞಾನವುಳ್ಳವನು. ತನ್ನ ಮಹಿಮೆಯಿಂದಲೇ ಪರಿಪೂರ್ಣನಾಗಿರುವನು. ಸರ್ವರಿಗೂ ಮೊದಲಿಗನು. ತನ್ನಿಚ್ಛೆಯಿಂದಲೇ ಸೃಷ್ಟಿಸುವವನಾದುದರಿಂದ ಸೃಷ್ಟಿಕರ್ತನೆಂದೂ, ಸಂಹರಿಸುವವನಾದುದರಿಂದ ಹರನೆಂದೂ, ಪಾಲಿಸುವವನಾದುದರಿಂದ 'ಪಾತೃ'ವೆಂದೂ ಕರೆಯಲ್ಪಡುವನು. ಆವರಣರಹಿತವಾದ ಜ್ಞಾನವುಳ್ಳವನು. ವಿವಿಧವಾಗಿ ಗೋಚರಿಸುವವನು. ತನ್ನ ಭಕ್ತರ ಮನಸ್ಸಿನಲ್ಲಿ ಹೊಳೆಯುವವನು.

"ಅಗಸೆಯ ಹೂವಿನಂತೆ ನೀಲವರ್ಣವಿಶಿಷ್ಟನೇ ! ಅರ್ಜುನನ ಮಿತ್ರನೇ ಯಾದವ ಶ್ರೇಷ್ಠನೇ ! ಮೇಘದಂತೆ ಇಷ್ಟಾರ್ಥವನ್ನು ಕೊಡುವವನೇ ! ಭೂಮಿದ್ರೋಹಿ ದುಷ್ಟರಾಜವಂಶದಹನಸ್ವಾಮಿಯೇ ! ದೇವಸ್ತುತ್ಯ ಪರಾಕ್ರಮಿಯೇ! ವೇದೋಕ್ತಗುಣವೈಭವವಂತನೇ ! ಗೋದ್ವಿಜದೇವತೆಗಳ ದುಃಖನಾಶಕ್ಕಾಗಿ ಅವತರಿ

ಸಿದವನೇ ! ಯೋಗಸಿದ್ಧಿಯೆಂಬ ಐಶ್ವರ್ಯವಂತನೇ ! ಜೀವರ ಯೋಗ್ಯತಾನುಸಾರ ಜ್ಞಾನೋಪದೇಶಕನೇ ! ಪೂಜ್ಯನಾದ ಶ್ರೀಕೃಷ್ಣನೇ ! ನಿನಗೆ ನಮಸ್ಕಾರ"

ಹೀಗೆ ಪ್ರಾರ್ಥಿಸುತ್ತ ಹಿಂದೆ ಹೇಳಿದ ಪ್ರಕಾರ ಮಹಾಪುರುಷನ ಲಕ್ಷಣಗಳನ್ನು ಬೆಳಗ್ಗೆ ಎದ್ದು, ಶ್ರೀಕೃಷ್ಣನಲ್ಲಿಯೇ ಮನಸ್ಸನ್ನು ಸ್ಥಿರೀಕರಿಸಿ, ಶುದ್ಧನಾಗಿ ಜಪಿಸುವವನು ಹೃದಯದಲ್ಲಿರುವ ಪರಬ್ರಹ್ಮನನ್ನು ತಿಳಿದು ಮುಕ್ತನಾಗುತ್ತಾನೆ.

## ಹತ್ತನೆಯ ಅಧ್ಯಾಯ ಮುಗಿದುದು

**ಶೌನಕ :** ಸೂತನೇ ! ಪಂಚಮಸ್ಕಂಧದಲ್ಲಿ ಸೂರ್ಯಮಂಡಲ ಮಧ್ಯವರ್ತಿಯಾದ ಶ್ರೀಹರಿಯನ್ನು ವಿಶೇಷವಾಗಿ ಉಪಾಸನೆ ಮಾಡಬೇಕೆಂಬ ಅಭಿಪ್ರಾಯದಿಂದ ಪ್ರಶ್ನಿಸಿದ ಪರೀಕ್ಷಿದ್ರಾಜನಿಗೆ ಶ್ರೀಶುಕಾಚಾರ್ಯರು, ಪ್ರತ್ಯೇಕ ನಾಮಗಳನ್ನೂ, ರೂಪ ಮೊದಲಾದುವುಗಳನ್ನೂ ಉಳ್ಳ ಸಪ್ತಕ ಗಣವು ಪ್ರತಿ ತಿಂಗಳಿನಲ್ಲಿಯೂ ನಾನಾ ನಾಮವುಳ್ಳ ಸೂರ್ಯನನ್ನು ಸೇವಿಸುತ್ತ ಸೂರ್ಯರಥದಲ್ಲಿರುವುದೆಂದು ಹೇಳಿದರಷ್ಟೆ ? ಆ ಗಣದಲ್ಲಿ ಸೇರಿದವರ ನಾಮಗಳನ್ನೂ, ಅವರ ಕರ್ಮಗಳನ್ನೂ, ಸೂರ್ಯಾಂತರ್ಯಾಮಿಯಾದ ಶ್ರೀಹರಿಯ ವ್ಯೂಹವನ್ನೂ, ಶ್ರೀಹರಿಯ ರಥದ ಸ್ಥಿತಿ ವಿಶೇಷವನ್ನೂ ಹೇಳು.

**ಸೂತ :**— ಶ್ರೀವಿಷ್ಣುವು ತನ್ನಿಚ್ಛೆಯಿಂದ ಜನರ ಪ್ರವರ್ತನೆಗೆ ಕಾರಣರಾದ ಸೂರ್ಯಾದಿಗಳನ್ನು ಸೃಷ್ಟಿಸಿರುವನು. ಅವರು ಉದಯಾದಿಗಳನ್ನು ಹೊಂದುತ್ತಾರೆ ಈ ಲೋಕಪರಲೋಕಗಳ ಅಂತರ್ಯಾಮಿಯೂ, ಸೂರಿಗಮ್ಯನಾದುದರಿಂದ ಸೂರ್ಯ ಶಬ್ದವಾಚ್ಯನೂ ಆದ ಶ್ರೀಹರಿಯೊಬ್ಬನೇ ಮುಖ್ಯಕರ್ತನು. ಅವನೇ ಉದಯಾದಿಗಳನ್ನು ಮಾಡಿಸುವವನು ಮತ್ತು ದಿನಾದಿಗಳನ್ನು ಕಳೆಸತಕ್ಕವನು. ಶ್ರೀವಿಷ್ಣುವೆ ಸಕಲ ವೇದೋಕ್ತಕ್ರಿಯೆಗಳಿಗೆ ಕಾರಣನಾಗಿರುವುದರಿಂದ ಜ್ಞಾನಿಗಳು ಅವನ ಸ್ವರೂಪವನ್ನು ನಾನಾವಿಧವಾಗಿ ಹೇಳುತ್ತಾರೆ. ಅದೇನೆಂದರೆ :—

ಪ್ರಾತರಾದಿ ಕಾಲ, ದೇಶ, ಕರ್ಮಾನುಷ್ಠಾನ ಬ್ರಾಹ್ಮಣಾದಿಕರ್ತರ ಇಂದ್ರಿಯಗಳು, ದೇಹ, ವೇದಾದಿಶಾಸ್ತ್ರ, ಚರು ಮೊದಲಾದ ದ್ರವ್ಯಗಳು ಮತ್ತು ಸ್ವರ್ಗಾದಿಫಲ ಇವುಗಳಲ್ಲಿ ತನ್ನಿಚ್ಛೆಯಿಂದಲೇ ಇದ್ದು, ನಿಯಾಮಕನಾಗಿ, ಕಾಲ ಶಬ್ದ ವಾಚ್ಯನಾಗಿ, ಒಂಭತ್ತು ಬಗೆಯಾಗಿ ಉಕ್ತನಾಗಿರುವನು. ಕಾಲರೂಪವನ್ನು ಧರಿಸಿರುವ ಶ್ರೀಹರಿಯು ಲೋಕವ್ಯಾಪಾರಕ್ಕಾಗಿ ಚೈತ್ರಾದಿ ಹನ್ನೆರಡು ಮಾಸಗಳಲ್ಲಿ ಹನ್ನೆರಡು ಬಗೆಯ ಕಾಲಗುಣದಿಂದ ಪ್ರತ್ಯೇಕ ಪ್ರತ್ಯೇಕವಾಗಿ ಸಂಚರಿಸುತ್ತಾನೆ. ಪ್ರತಿ ತಿಂಗಳಲ್ಲಿ ಸೂರ್ಯ, ಅಪ್ಸರಸ್ತ್ರೀ, ರಾಕ್ಷಸ, ಸರ್ಪ, ಬಡಗಿ, ಋಷಿ, ಗಂಧರ್ವ ಈ ಏಳು ಮಂದಿ ನೌಕರರ ಹೆಸರುಗಳನ್ನು ಹೇಳುತ್ತಾರೆ :—

**ಚೈತ್ರಮಾಸದಲ್ಲಿ :–** ಧಾತನೆಂಬ ಸೂರ್ಯ, ಕೃತಸ್ಥಲೀ ಎಂಬ ಅಪ್ಸರಸ್ತ್ರೀ, ಹೇತಿಯೆಂಬ ರಾಕ್ಷಸ, ವಾಸುಕಿಸರ್ಪ, ರಥಕೃತ್ ಎಂಬ ಬಡಗಿ, ಪುಲಸ್ತ್ಯಋಷಿ, ತುಂಬುರು ಗಂಧರ್ವ ಈ ಏಳು ಮಂದಿ ನೌಕರರು.

**ವೈಶಾಖ :–** ಅರ್ಯಮಾ ನಾಮಕ ಸೂರ್ಯ, ಪುಲಹಋಷಿ. ಅಥೌಜಸ್ ಬಡಗಿ, ಪ್ರಹೇತಿ ರಾಕ್ಷಸ, ಪುಂಜಕಸ್ಥಲೀ ಎಂಬ ಅಪ್ಸರಸ್ತ್ರೀ, ನಾರದಗಂಧರ್ವ ಮತ್ತು ಕಚ್ಛನೀರನೆಂಬ ನಾಗ.

**ಜ್ಯೇಷ್ಠ :–** ಮಿತ್ರನಾಮಕ ಸೂರ್ಯ, ಅತ್ರಿಋಷಿ, ಪೌರಷೇಯ ರಾಕ್ಷಸ. ತಕ್ಷಕನೆಂಬ ನಾಗ, ಮೇನಕೆ ಅಪ್ಸರಸ್ತ್ರೀ, ಹಾಹಾಗಂಧರ್ವ ಮತ್ತು ರಥಸ್ವನನೆಂಬ ಬಡಗಿ.

**ಆಷಾಢ :** ವಸಿಷ್ಠಋಷಿ, ವರುಣ ಸೂರ್ಯ, ರಂಭಾಪ್ಸರಸ್ತ್ರೀ, ಸಹಜನ್ಯ ನಾಯಕ ರಾಕ್ಷಸ, ಹೂಹೂ ಗಂಧರ್ವ, ಶುಕ್ರನೆಂಬ ನಾಗ ಮತ್ತು ಚಿತ್ರಸ್ವನನಾಮಕ ಬಡಗಿ .

**ಶ್ರಾವಣ :–** ಇಂದ್ರನೆಂಬ ಸೂರ್ಯ, ವಿಶ್ವಾವಸು ಗಂಧರ್ವ, ಸ್ರೋತಾ ನಾಮಕ ಬಡಗಿ, ಏಲಾಪತ್ರನೆಂಬ ನಾಗ, ಅಂಗಿರಾಋಷಿ. ಪ್ರಮ್ಲೋಚಾಪ್ಸರಸ್ತ್ರೀ ಮತ್ತು ಸ್ವರ್ಯನೆಂಬ ರಾಕ್ಷಸ.

**ಭಾದ್ರಪದ :–** ವಿವಸ್ವಾನ್ ಸೂರ್ಯ, ಉಗ್ರಸೇನನೆಂಬ ಗಂಧರ್ವ, ವ್ಯಾಘ್ರನೆಂಬ ರಾಕ್ಷಸ, ಸುಷೇಣನೆಂಬ ಬಡಗಿ, ಅನುಮ್ಲೋಚಾ ಎಂಬ ಅಪ್ಸರಸ್ತ್ರೀ ಮತ್ತು ಭೃಗು ಋಷಿ ಮತ್ತು ಶಂಖಪಾಲನೆಂಬ ನಾಗ,

**ಮಾಘ :–** ಪೂಷನೆಂಬ ಸೂರ್ಯ, ಧನಂಜಯನೆಂಬ ನಾಗ, ವಾತನೆಂಬ ರಾಕ್ಷಸ, ಸುಷೇಣನೆಂಬ ಬಡಗಿ, ಸುರುಚಿಗಂಧರ್ವ, ಘೃತಾಚೀ ಎಂಬ ಅಪ್ಸರಸ್ತ್ರೀ ಮತ್ತು ಗೌತಮನೆಂಬ ಋಷಿ.

**ಫಾಲ್ಗುನ :–** ಪರ್ಜನ್ಯನೆಂಬ ಸೂರ್ಯ, ಋತುವೆಂಬ ಅಪ್ಸರಸ್ತ್ರೀ, ವರ್ಚಾ ಎಂಬ ಗಂಧರ್ವ, ಭರದ್ವಾಜಋಷಿ, ಸೇನಜಿತ್ತೆಂಬ ಬಡಗಿ, ವಿಶ್ವನೆಂಬ ರಾಕ್ಷಸ ಮತ್ತು ಐರಾವತನಾಗ .

**ಮಾರ್ಗಶಿರ :–** ಅಂಶು ನಾಮಕ ಸೂರ್ಯ, ಕಶ್ಯಪಋಷಿ, ತಾರ್ಕ್ಷ್ಯನೆಂಬ ಬಡಗಿ, ಧೃತಸೇನನೆಂಬ ಗಂಧರ್ವ, ಉರ್ವಶೀ ಅಪ್ಸರಸ್ತ್ರೀ, ವಿದ್ಯುಚ್ಛಂಕುವೆಂಬ ರಾಕ್ಷಸ ಮತ್ತು ಮಹಾಶಂಖನೆಂಬ ನಾಗ.

**ಪುಷ್ಯ :–** ಭಗನೆಂಬ ಸೂರ್ಯ, ಸ್ಫೂರ್ಜನೆಂಬ ರಾಕ್ಷಸ, ಅರಿಷ್ಟನೇಮಿಯೆಂಬ ಋಷಿ, ಊರ್ಣನೆಂಬ ಗಂಧರ್ವನು, ಆಯುವೆಂಬ ಬಡಗಿ, ಕರ್ಕೋಟಕನೆಂಬ ನಾಗ ಮತ್ತು ಪೂರ್ವಚಿತ್ತಿಯೆಂಬ ಅಪ್ಸರಸ್ತ್ರೀ.

**ಆಶ್ವಯುಜ :–** ತ್ವಷ್ಟ್ರವೆಂಬ ಸೂರ್ಯ, ಋಚೀಕಪುತ್ರರಾದ ಜಮದಗ್ನಿ ಋಷಿ, ಕಂಬಲನೆಂಬ ನಾಗ, ತಿಲೋತ್ತಮೆಯೆಂಬ ಅಪ್ಸರಸ್ತ್ರೀ, ಬ್ರಹ್ಮರಾತನೆಂಟ ರಾಕ್ಷಸ, ಶತಜಿತ್ತೆಂಬ ಬಡಗಿ ಮತ್ತು ಧೃತರಾಷ್ಟ್ರನೆಂಬ ಗಂಧರ್ವ.

**ಕಾರ್ತಿಕ :–** ಸಾಕ್ಷಾದ್ವಿಷ್ಣುವೇ ಸೂರ್ಯ, ಅಶ್ವತರನೆಂಬ ನಾಗ, ರಂಭೆ ಅಪ್ಸರೆ, ಸೂರ್ಯವರ್ಚನೆಂಬ ಗಂಧರ್ವ, ಅಶ್ವನೆಂಬ ರಾಕ್ಷಸ, ಸತ್ಯಕನೆಂಬ ಬಡಗಿ ಮತ್ತು ವಿಶ್ವಾಮಿತ್ರ ಋಷಿ.

ಹೀಗೆ ಆದಿತ್ಯಾಂತರ್ಗತ ಶ್ರೀವಿಷ್ಣುವಿನ ವಿಭೂತಿ ರೂಪಗಳನ್ನೂ, ಅವುಗಳ ಸನ್ನಿಧಾನಪಾತ್ರರನ್ನೂ, ಪ್ರತಿದಿನವೂ ಉಭಯ ಸಂಧ್ಯೆಯಲ್ಲಿ ಸ್ಮರಿಸತಕ್ಕ ಮನುಷ್ಯರು ಸಕಲಪಾಪಗಳಿಂದ ಮುಕ್ತರಾಗುವರು. ಸೂರ್ಯಾಂತರ್ಯಾಮಿಯಾದ ಶ್ರೀಹರಿಯು ತನ್ನಿಂದ ಭಿನ್ನರಾದಋಷಿಗಂಧರ್ವಾದಿ ಪರಿವಾರಗಳೊಡನೆ ಲೋಕಗಳನ್ನು ಸಂಚರಿಸುತ್ತ, ತನ್ನ, ಭಕ್ತರಿಗೆ ಇಹಪರಲೋಕಗಳಲ್ಲಿ ನಿರ್ದುಃಖಾನಂದಾನುಭವ ರೂಪ ಶುಭಬುದ್ಧಿಯನ್ನು ಕೊಡುತ್ತಾನೆ.

ಸೂರ್ಯ, ಋಷಿ ಮೊದಲಾದ ಏಳು ಮಂದಿ ನೌಕರರ ಕಾರ್ಯವನ್ನು ಹೇಳುತ್ತಾರೆ ಗಂಧರ್ವರು ಹರಿಯ ಗುಣಗಳನ್ನು ಮಧುರವಾಗಿ ಗಾನ ಮಾಡುವರು. ಅಪ್ಸರಸ್ತ್ರೀಯರು ಸೂರ್ಯನ ರಥದ ಇದಿರುಗಡೆ ನರ್ತನ ಮಾಡುತ್ತಾರೆ. ಸರ್ಪಗಳು ರಥವನ್ನು ತಮ್ಮ ಶಿರಸ್ಸುಗಳಲ್ಲಿ ಹೊರುತ್ತಾರೆ. ಬಡಗಿಗಳು ರಥವನ್ನು ಹಗ್ಗದಿಂದ ಸೆಳೆಯುವರು. ರಾಕ್ಷಸರು ರಥದ ಹಿಂಭಾಗದಲ್ಲಿದ್ದು ಅದನ್ನು ನೂಕುತ್ತಾರೆ. ಇದಲ್ಲದೆ ಅರವತ್ತು ಸಾವಿರಮಂದಿ ವಾಲಖಿಲ್ಯರು ರಥದ ಇದಿರು ನಿಂತು ಪ್ರತಿತಿಂಗಳಲ್ಲಿಯೂ, ಪ್ರತಿನಿತ್ಯವೂ ಶ್ರೀಹರಿಯನ್ನು ಸ್ತುತಿಸುತ್ತಾರೆ. ಹೀಗೆ ನಾರಾಯಣನು ಪ್ರತಿಕಲ್ಪದಲ್ಲಿಯೂ ಮತ್ಸ್ಯಾದಿ ಅನೇಕ ರೂಪಗಳಿಂದಲೂ, ಧಾತ್ರಾದಿಗಳಿಂದಲೂ ವ್ಯೂಹ ಮಾಡಿಕೊಂಡು ಸರ್ವಲೋಕಗಳನ್ನೂ ನಿಯಮಿಸಿ ನಡೆಸುತ್ತಿರುವನು.

**ಹನ್ನೊಂದನೆಯ ಅಧ್ಯಾಯವು ಮುಗಿದುದು**

**ಸೂತ :–** ಶ್ರೀಕೃಷ್ಣನಿಗೂ, ಅವನನ್ನು ಅಪರೋಕ್ಷೀಕರಿಸಿದ ಬ್ರಾಹ್ಮಣರಿಗೂ ನಮಸ್ಕರಿಸಿ ವೇದಪ್ರತಿಪಾದ್ಯ ಧರ್ಮಗಳನ್ನು ಹೇಳುವೆನು. ಈ ಭಾಗವತದಲ್ಲಿ ಮುಖ್ಯ ಪ್ರತಿಪಾದ್ಯನು ನಾರಾಯಣನು. ಇದು ಹನ್ನೆರಡು ಸ್ಕಂಧಗಳಲ್ಲಿಯೂ ಬರುವ ವಿಷಯವಾಗಿದೆ.

ಪ್ರಥಮಸ್ಕಂಧದಲ್ಲಿ ಪರೀಕ್ಷಿತ್ತಿನ ವೃತ್ತಾಂತ, ಭಾಗವತವನ್ನು ರಚಿಸಬೇಕೆಂದು ನಾರದರು ವೇದವ್ಯಾಸರನ್ನು ಪ್ರಾರ್ಥಿಸಿದುದು, ವಿಪ್ರನ ಶಾಪ, ರಾಜನ ಪ್ರಾಯೋಪವೇಶ ಮತ್ತು ಶುಕಾಚಾರ್ಯರಿಗೂ ಪರೀಕ್ಷಿದ್ರಾಜನಿಗೂ ನಡೆದ ಸಂವಾದ.

ದ್ವಿತೀಯಸ್ಕಂಧದಲ್ಲಿ ಅಖಂಡಸ್ಮರಣೆಯಿಂದಾಗುವ ಉತ್ಕ್ರಾಂತಿ, ಬ್ರಹ್ಮ ನಾರದಸಂವಾದ, ಅವತಾರಗಳ ಕಥನ, ಹರಿಯು ಪ್ರಕೃತಿಸೃಷ್ಟಿಯನ್ನು ಮಾಡಿದುದು.

ತೃತೀಯ ಸ್ಕಂಧದಲ್ಲಿ ವಿದುರನಿಗೂ ಉದ್ಧವನಿಗೂ, ವಿದುರನಿಗೂ ಮೈತ್ರೇಯರಿಗೂ ನಡೆದ ಸಂವಾದಗಳು, ಪ್ರಳಯ, ಅದರನಂತರ ನಡೆಯುವ ಸೃಷ್ಟಿ, ಬ್ರಹ್ಮಾಂಡ ನಿರ್ಮಾಣ, ಕಾಲದ ಸೂಕ್ಷ್ಮ ಮತ್ತು ಸ್ಥೂಲ ವಿಭಾಗ, ಹರಿಯನಾಭಿಯಿಂದ ಪದ್ಮೋತ್ಪತ್ತಿ, ವರಾಹ ದೇವರ ವ್ಯಾಪಾರ, ಹಿರಣ್ಯಾಕ್ಷನ ವಧೆ, ಸ್ವಾಯಂಭುವಮನುವಿನ ಉತ್ಪತ್ತಿ. ಅವನ ಹೆಣ್ಣುಮಕ್ಕಳ ವಿವಾಹ, ಕಪಿಲಾವತಾರ ಮತ್ತು ದೇವಹೂತಿಗೆ ಕಪಿಲದೇವರ ಉಪದೇಶ.

ಚತುರ್ಥಸ್ಕಂಧದಲ್ಲಿ ದಕ್ಷಯಜ್ಞ ಧ್ವಂಸ, ಧ್ರುವ ಚರಿತ್ರೆ, ಪೃಥುಚಕ್ರವರ್ತಿಯ ಚರಿತ್ರೆ ಮತ್ತು ಪ್ರಾಚೀನಬರ್ಹಿರಾಜನಿಗೂ ನಾರದರಿಗೂ ನಡೆದ ಸಂವಾದ.

ಪಂಚಮಸ್ಕಂಧದಲ್ಲಿ ಪ್ರಿಯವ್ರತ, ನಾಭಿ, ಋಷಭ, ಭರತ ಇವರ ಚರಿತ್ರೆ. ಭೂಗೋಳ ಖಗೋಳಗಳ ವರ್ಣನೆ, ಪಾತಾಳ ಮತ್ತು ನರಕಗಳ ವರ್ಣನೆ.

ಆರನೆಯ ಸ್ಕಂಧದಲ್ಲಿ ಪ್ರಚೇತಸರು, ದಕ್ಷ ಅವನ ಕನ್ಯೆಯರಿಂದ ದೇವದಾನವಾದಿಗಳ ಸೃಷ್ಟಿ ಮತ್ತು ವೃತ್ರಾಸುರನ ವಧೆ.

ಏಳನೆಯ ಸ್ಕಂಧದಲ್ಲಿ ದಿತಿಪುತ್ರರ ವೃತ್ತಾಂತ, ಪ್ರಹ್ಲಾದ ಚರಿತ್ರೆ, ವರ್ಣಾಶ್ರಮ ಧರ್ಮಗಳ ವಿವರಣೆ.

ಎಂಟನೆಯ ಸ್ಕಂಧದಲ್ಲಿ ಮನ್ವಂತರ, ಮನುಗಳ ಚರಿತ್ರೆ, ಗಜೇಂದ್ರ ಮೋಕ್ಷ, ಸಮುದ್ರಮಥನ.

ಒಂಭತ್ತನೆಯ ಸ್ಕಂಧದಲ್ಲಿ ಸೂರ್ಯವಂಶ ಮತ್ತು ಚಂದ್ರವಂಶಗಳಲ್ಲಿ ಹುಟ್ಟಿದ ರಾಜರ ಚರಿತ್ರೆ, ಯದುರಾಜನ ವಂಶಾನುಕ್ರಮಣಿಕೆ.

ಹತ್ತನೆಯ ಸ್ಕಂಧದಲ್ಲಿ ಶ್ರೀಕೃಷ್ಣನ ಅವತಾರ, ಬಾಲಲೀಲೆ, ಕಂಸವಧೆ, ರುಕ್ಮಿಣೀ ಮೊದಲಾದವರನ್ನು ಶ್ರೀಕೃಷ್ಣನು ಮದುವೆಯಾದುದು, ಪ್ರದ್ಯುಮ್ನೋತ್ಪತ್ತಿ, ಕುರುಕ್ಷೇತ್ರ ಯುದ್ಧ.

ಹನ್ನೊಂದನೆಯ ಸ್ಕಂಧದಲ್ಲಿ ಯಾದವಕುಲ ಸಂಹಾರ, ಉದ್ಧವನಿಗೆ ಉಪದೇಶ, ಶ್ರೀಕೃಷ್ಣನು ಪರಂಧಾಮಕ್ಕೆ ತೆರಳಿದ ವೃತ್ತಾಂತ.

ಹನ್ನೆರಡನೆಯ ಸ್ಕಂಧದಲ್ಲಿ ಪ್ರತಿಯುಗದಲ್ಲಿಯೂ ನಡೆಯುವ ವ್ಯಾಪಾರ, ಕಲಿಯುಗದ ವರ್ಣನೆ, ಪರೀಕ್ಷಿದ್ರಾಜರ ನಿರ್ಯಾಣ, ಮಾರ್ಕಂಡೇಯ ಚರಿತ್ರೆ ಮತ್ತು ಚೈತ್ರಾದಿ ಮಾಸಗಳಲ್ಲಿ ಸೂರ್ಯಾದಿಗಳ ವ್ಯಾಪಾರ.

ಭಾಗವತವು ಹರಿಲೀಲೆಯ ವೃತ್ತಾಂತವನ್ನೊಳಗೊಂಡಿದೆ. ಹರಿಸ್ಮರಣೆಯು ಸಕಲ ಪಾಪಪರಿಹಾರಕವು. ಹರಿಮಹಿಮೆಗಳನ್ನು ತಿಳಿಸುವ ಕಥೆಯೇ ಸತ್ಕಥೆ. ಭಕ್ತಿಯು ಆವಶ್ಯಕ, ಶೌನಕಾದಿಗಳಿರಾ ! ನೀವೆಲ್ಲರೂ ಶ್ರೀಕೃಷ್ಣನ ಭಕ್ತರಾದುದರಿಂದ ಪರಮಭಾಗ್ಯಶಾಲಿಗಳು. ಭಾಗವತವನ್ನು ನನ್ನ ಕೈಲಿ ಹೇಳಿಸಿದುದರಿಂದ ನಾನೂ ಕೃತಾರ್ಥನಾದೆನು. ವೇದಾದಿಗಳಿಗಿಂತಲೂ ಭಾಗವತವು ಮಹಾಫಲಪ್ರದವಾದುದರಿಂದ ಅದನ್ನು ಕಡ್ಡಾಯವಾಗಿ ಹೇಳಲೇಬೇಕು. ಹೇಳಿ ಕೇಳುವವರು ಪರಿಶುದ್ಧರಾಗುವರು.

ಇತರ ಪುರಾಣಗಳಿಗಿಂತ ಭಾಗವತವು ಅಧಿಕವಾದ ಮಹಿಮೆಯುಳ್ಳದುದರಿಂದ ಅದರ ಫಲವೂ ಅತ್ಯಧಿಕವು ಭಾಗವತ ಪುರಾಣವನ್ನು ವ್ಯಾಖ್ಯಾನ ಮಾಡಿ ವಿಸ್ತರಿಸಿದ ವ್ಯಾಸಪುತ್ರರಿಗೆ ನಮಸ್ಕರಿಸುವೆನು. ಜನನಾದಿ ದೋಷರಹಿತನೂ, ಸೃಷ್ಟ್ಯಾದಿ ಸ್ವರೂಪ ಶಕ್ತಿ ಮೊದಲಾದ ಗುಣಗಳಿಂದ ಪೂರ್ಣನಾದ ಶ್ರೀಹರಿಯನ್ನು ನಮಸ್ಕರಿಸುವೆನು. ಜಗತ್ಸೃಷ್ಟ್ಯಾದಿಕರ್ತನೂ, ಜ್ಞಾನಸ್ವರೂಪನೂ, ದೇವೋತ್ತಮನೂ, ಅನಾದಿಯೂ, ವೇದಾದಿವೇದ್ಯನೂ ಆದ ಭಗವಂತನಿಗೆ ನಮಸ್ಕಾರ !

## ಹನ್ನೆರಡನೆಯ ಅಧ್ಯಾಯ ಮುಗಿದುದು

**ಸೂತ :–** ಬ್ರಹ್ಮೇಂದ್ರಾದಿಗಳಿಂದ ವೇದಗಳ ಮೂಲಕ ಸ್ತುತ್ಯನೂ, ಸಾಮಗರಿಂದ ಗಾನ ಮಾಡಲ್ಪಡತಕ್ಕವನೂ, ಯೋಗಿಗಳಿಂದ ನೋಡಲ್ಪಡುವವನೂ, ದೇವಾಸುರರಿಂದ ಸಂಪೂರ್ಣವಾಗಿ ತಿಳಿಯಲ್ಪಡದವನೂ ಆದ ಶ್ರೀಹರಿಗೆ ನಮಸ್ಕಾರ !

ಯಾರ ಶ್ವಾಸದ ಗಾಳಿಯಿಂದ ಈಗಲೂ ಸಮುದ್ರದ ಅಲೆಗಳು ಅಲ್ಲೋಲ ಕಲ್ಲೋಲಗಳಾಗಿವೆಯೋ ಅಂತಹ ಕೂರ್ಮಭಗವಂತನ ಶ್ವಾಸಾನಿಲವು ನಿಮ್ಮನ್ನು ರಕ್ಷಿಸಲಿ !

ಬ್ರಹ್ಮಪುರಾಣವು 10 ಸಾವಿರ, ಪದ್ಮಪುರಾಣ 55 ಸಾವಿರ, ವಿಷ್ಣುಪುರಾಣ 23 ಸಾವಿರ, ಶಿವ ಪುರಾಣ 24 ಸಾವಿರ, ಶ್ರೀಮದ್ಭಾಗವತ 18 ಸಾವಿರ, ನಾರದ ಪುರಾಣ 25 ಸಾವಿರ, ಮಾರ್ಕಂಡೇಯ ಪುರಾಣ 9 ಸಾವಿರ, ಆಗ್ನೇಯ ಪುರಾಣ 15 ಸಾವಿರ, ಭವಿಷ್ಯತ್ಪುರಾಣ 14 ಸಾವಿರದ 500, ಬ್ರಹ್ಮವೈವರ್ತಪುರಾಣ 18 ಸಾವಿರ, ಲಿಂಗಪುರಾಣ 11 ಸಾವಿರ, ವಾರಾಹ ಪುರಾಣ 24 ಸಾವಿರ, ಸ್ಕಾಂದ ಪುರಾಣ 71 ಸಾವಿರದ ಒಂದು ನೂರು, ವಾಮನ ಪುರಾಣ 10 ಸಾವಿರ, ಕೂರ್ಮ

ಪುರಾಣ 17 ಸಾವಿರ, ಮತ್ಸ್ಯಪುರಾಣ 14 ಸಾವಿರ, ಗರುಡಪುರಾಣ 19 ಸಾವಿರ ಮತ್ತು ಬ್ರಹ್ಮಾಂಡ ಪುರಾಣ 12 ಸಾವಿರ. ಒಟ್ಟು ಹದಿನೆಂಟು ಪುರಾಣಗಳ ಗ್ರಂಥ ಗಳ ಸಂಖ್ಯೆ ನಾಲ್ಕು ಲಕ್ಷಗಳು.

ಭಾಗವತವನ್ನು ಶ್ರೀಹರಿಯು ಬ್ರಹ್ಮದೇವರಿಗೆ ಉಪದೇಶಿಸಿದನು. ಈ ಪುರಾಣ ದಲ್ಲಿ ಉಪನಿಷದ್ರಹಸ್ಯನೂ, ಸಮಾಭ್ಯಧಿಕಶೂನ್ಯನೂ, ಜೀವರಿಗೆ ಪ್ರಧಾನನೂ ಆದ ಪರಬ್ರಹ್ಮನನ್ನು ಮುಖ್ಯವಾಗಿ ವರ್ಣಿಸಿದೆ. ಮೋಕ್ಷವೇ ಈ ಗ್ರಂಥದ ಮುಖ್ಯ ಫಲವು.

ಭಾದ್ರಪದ ಹುಣ್ಣಿಮೆಯದಿನ ಸುವರ್ಣಸಿಂಹಾಸನಸಹಿತವಾದ ಭಾಗವತ ಪುಸ್ತಕವನ್ನು ಸತ್ಪಾತ್ರಕ್ಕೆ ದಾನಮಾಡಿದವನು ವೈಕುಂಠವನ್ನು ಹೊಂದುವನು.

ಭಾಗವತ ಪುರಾಣವು ಸಕಲ ಪುರಾಣಗಳ ಸಾರಾಂಶವಾಗಿದೆ. ಸಕಲ ವೇದಾಂತ ಗಳ ಸಾರವೆಂದರೆ ಭಾಗವತವೇ. ಇದರಿಂದ ತೃಪ್ತನಾದವನಿಗೆ ಇನ್ನಾವುದರಲ್ಲಿಯೂ ಅನುರಾಗವುಂಟಾಗುವುದಿಲ್ಲ. ನದಿಗಳಲ್ಲಿ ಗಂಗೆ, ದೇವತೆಗಳಲ್ಲಿ ಅಚ್ಯುತನು, ವೈಷ್ಣವ ರಲ್ಲಿ ಶಿವನು, ಕ್ಷೇತ್ರಗಳಲ್ಲಿ ಕಾಶಿ ಹೇಗೆ ಸರ್ವೋತ್ತಮಗಳೋ ಹಾಗೆಯೇ, ಸಕಲ ಪುರಾಣಗಳಲ್ಲಿಯೂ ಶ್ರೀಮದ್ಭಾಗವತವು ಸರ್ವೋತ್ತಮವಾಗಿರುವುದು. ಶ್ರೀ ಮದ್ಭಾಗವತವು ಪರಮಹಂಸರಿಗೆ ಯೋಗ್ಯವು, ವಿಷ್ಣುಭಕ್ತರಿಗೆ ಪ್ರಿಯವು, ಜ್ಞಾನ ಸಾಧನವು, ಹರಿಗೆ ಪ್ರೀತಿಕರವಾದ ಕರ್ಮಭೋಧಕವು. ಇದನ್ನು ಭಕ್ತಿಯಿಂದ ಕೇಳ ತಕ್ಕವರು, ಯುಕ್ತಿ ಪೂರ್ವಕವಾಗಿ ಚಿಂತಿಸತಕ್ಕವರು ಸಂಸಾರದಿಂದ ಮುಕ್ತರಾಗಿ ನೈಜಸುಖವನ್ನು ಅಂದರೆ ಮುಕ್ತಿಯನ್ನು ಹೊಂದುವರು.

ಜ್ಞಾನ ಪ್ರದೀಪವೆಂಬ ಭಾಗವತವನ್ನು ಬ್ರಹ್ಮನಿಗೂ, ಅವನಲ್ಲಿದ್ದು ನಾರದ ನಿಗೂ, ಅವನಲ್ಲಿದ್ದು ವಾಸಿಷ್ಠರೂಪನಾದ ವೇದವ್ಯಾಸರೂಪಿಯಾದ ತನಗೂ ಪ್ರಕಟಿಸಿದವನೂ, ವ್ಯಾಸರೂಪದಿಂದ ಶುಕಾಚಾರ್ಯರಿಗೂ, ಅವರಲ್ಲಿದ್ದು ಪರೀಕ್ಷಿ ದ್ರಾಜನಿಗೂ ಉಪದೇಶ ಮಾಡಿದವನೂ, ನಿರ್ದೋಷನೂ, ಸ್ವತಂತ್ರನೂ, ಸರ್ವೋ ತ್ತಮನೂ ಆದ ಶ್ರೀಹರಿಯನ್ನು ಧ್ಯಾನಿಸುವೆವು ! ವಾಸುದೇವನಿಗೆ ನಮಸ್ಕಾರ ! ಜನ್ಮಜನ್ಮದಲ್ಲಿಯೂ ನಿನ್ನ ಪಾದಪದ್ಮಗಳಲ್ಲಿ ಭಕ್ತಿಯುಂಟಾಗುವಂತೆ ಅನುಗ್ರಹಿಸು !

### ಮಂಗಳ ಶ್ಲೋಕ

**ನಾಮ ಸಂಕೀರ್ತನಂ ಯಸ್ಯ ಸರ್ವಪಾಪ್ರಣಾಶನಂ ।**
**ಪ್ರಣಾಮೋ ದುಃಖಶಮನಃ ತಂ ನಮಾಮಿ ಹರಿಂ ಪರಂ ॥**

**ಅರ್ಥ** :- ಯಾವನ ನಾಮಸಂಕೀರ್ತನೆಯು ಸಕಲಪಾಪ ನಾಶಕವೋ, ಯಾವನಿಗೆ ಮಾಡುವ ನಮಸ್ಕಾರವು ದುಃಖ ಪರಿಹಾರಕವೋ ಅಂತಹ ಪರನು ಅಂದರೆ ಸರ್ವೋತ್ತಮನೂ, ಗುಣಪೂರ್ಣನೂ ಆದ ಶ್ರೀಹರಿಯನ್ನು ನಮಸ್ಕರಿಸು ವೆನು.

**ವಿಶೇಷ :–** ಶ್ರೀಮದ್ಭಾಗವತದ ಮೊದಲನೆಯ ಶ್ಲೋಕದಲ್ಲಿ ಹೇಳಿದ '**ಪರಂ**' ಎಂಬ ಪದವನ್ನು ಕೊನೆಯಲ್ಲಿಯೂ ಹೇಳಿ ಅದಕ್ಕೆ ಹರಿಯೆಂಬ ಅರ್ಥವನ್ನು **ವಿವರಿಸಿರುವರು.**

**ಹದಿಮೂರನೆಯ ಅಧ್ಯಾಯವು ಮುಗಿದುದು**

**ದ್ವಾದಶಸ್ಕಂಧ ಸಮಾಪ್ತ**

ಶ್ರೀಮದ್ಭಾಗವತಗ್ರಂಥಕ್ಕೆ ತಾತ್ಪರ್ಯವನ್ನು ಹೇಳಿದ ಭಗವಾನ್ ಪೂರ್ಣ ಪ್ರಜ್ಞಾಚಾರ್ಯರು, ತಾವು ವಿಘ್ನರಹಿತರಾದರೂ, ಶಿಷ್ಯರ ಶಿಕ್ಷೆಗಾಗಿ, ಗ್ರಂಥದ ಕೊನೆ ಯಲ್ಲಿಯೂ ಮಂಗಳವನ್ನಾಚರಿಸುವರು .–

**ನಿತ್ಯಾದೋಷಸ್ವರೂಪಾಯ ಗುಣಪೂರ್ಣಾಯ ಸರ್ವದಾ ।**
**ನಾರಾಯಣಾಯ ಹರಯೇ ನಮಃಪ್ರೇಷ್ಟತಮಾಯ ಮೇ ॥**

**ಅರ್ಥ :–** ಅನಾದಿ ನಿತ್ಯನೂ, ನಿರ್ದೋಷಸ್ವರೂಪನೂ, ಸರ್ವದಾ ಸರ್ವ ಗುಣಪರಿಪೂರ್ಣನೂ ಆದುದರಿಂದ ನಾರಾಯಣನೆನಿಸಿದವನೂ, ಭಕ್ತರ ಪಾಪ ಪರಿಹಾರಕನಾದುದರಿಂದ ಹರಿನಾಮಕನೂ, ನನಗೆ ಯಾವಾಗಲೂ ಅತ್ಯಂತ ಪ್ರಿಯನೂ ಆದ ಲಕ್ಷ್ಮೀಪತಿ ನಾರಾಯಣನಿಗೆ ನಮಸ್ಕಾರ !

## ಶ್ರೀಮದ್ಭಾಗವತ ಸಂಪೂರ್ಣ

## ಶ್ರೀಕೃಷ್ಣಾರ್ಪಣಮಸ್ತು.



# ತಿದ್ದುಪಡಿ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| 25 | 14 | ಪರಂಗ್ರಾ | ಪರಂಧಾ |
| 33 | 15 | ತಮೀಕ | ಶಮೀಕ |
| 46 | 21 | ಜಾನ | ಜ್ಞಾನ |
| 47 | 18 | ಸಮಸ | ಸಮಸ್ತ |
| 51 | 15 | ಶಿಳಿಯ | ತಿಳಿಯ |
| 76 | 16 | ಪಾತೃದು | ಪಿತೃದೇ |
| 83 | 3 | ವಷನಗಳು | ವರ್ಷಗಳು |
| 103 | 4 | ಕಳೆಯಬೆ | ಕಳೆದ |
| 104 | 11 | ಧೃಗು | ಭೃಗು |
| 104 | 16 | ಕದರ್ಮ | ಕರ್ದಮ |
| 104 | 33 | ಹೃದ್ಗುಡಾ | ಹೃದ್ಗುಹಾ |
| 113 | 1 | ಗೊಳ್ಳಲಿಲ್ಲ | ಗೊಳ್ಳುವರಲ್ಲಿ |
| 134 | 20 | ಏಣ್ವಪಾದಿ | ಏಷ್ಣ್ವಾದಿ |
| 135 | 10 | ಹಲೆಯಿಂದ | ಹತಿಯಿಂದ |
| 135 | 15 | ವೂಷನ | ಪೂಷನ |
| 141 | 21 | ಕ್ಷ್ಲೀಶ | ಕ್ಲೀಶ |
| 148 | 8 | ಮೂವತ್ತು ಸಾವಿರ | ಮೂವತ್ತಾರು ಸಾವಿರ |
| 148 | 14 | ಮದದಿಂದ | ಮುದದಿಂದ |
| 201 | 22 | ಜೀವನು | ಜೀವನ್ಮುಕ್ತನು |
| 210 | 3 | ಭದ್ರಾಕ್ಷ್ವ | ಭದ್ರಾಶ್ವ |
| 222 | 11 | ಸುಕರು | ಸುರರು |
| 223 | 14 | ಪಂತ್ರ | ಮಂತ್ರ |
| 224 | 27 | ಅಗ್ನಿನಾಯಕ | ಅಗ್ನಿನಾಮಕ |
| 227 | 25 | 25 ಯೋಜನ | 25 ಕೋಟಿ ಯೋಜನ |
| 274 | 10 | ಕಾರಣಗಳಾದ | ಭಕ್ತಿಗೆ ಕಾರಣಗಳಾದ |
| 290 | 14 | ಕರಿಸಿ | ಕವರಿಸಿ |
| 350 | 22 | ಮನುವುತ್ರರು | ಮನುಪುತ್ರರು |
| 354 | 6 | ಜಡಪ್ರಕೃತಿಭಿನ್ನವಾದ | ಜಡಪ್ರಕೃತ್ಯಭಿನ್ನವಾದ |

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| 364 | 3 | ಣ್ಮರೆಯಾದನು | ಕಣ್ಮರೆಯಾದನು |
| 369 | 20 | ಸತ್ಸಭಾವ | ಸತ್ಸ್ವಭಾವ |
| 375 | 8 | — | ಹತ್ತನೆಯ ಅಧ್ಯಾಯ ಮುಗಿದುದು |
| 377 | 20 | ಮೀರಿದ | ತನ್ನಿಂದ ಮೀರಲ್ಪಟ್ಟ |
| 381 | 19 | ಗದಲ್ಲಿಯೂ | ಗಾನುಸಾರವಾದ |
| 396 | 20 | ಫಲಲ್ಲವ | ಫಲವಲ್ಲ. |
| 411 | 2 | ಸ್ತೂಗಳನ್ನು | ಸೂಕ್ತಗಳನ್ನು |
| 412 | 15 | ಯಸು | ಯಸ್ಯ |
| 429 | 18 | ರಾವಣನ | ರಾಮನ |
| 438 | 12 | ಲೋವನ್ನು | ಲೋಕವನ್ನು |
| 442 | 15 | ಸಾಕ್ಷಾದ್ದಷ್ಟಃ | ಸಾಕ್ಷಾದ್ದಷ್ಟಃ |
| 458 | 11 | ಆಳಲ್ಲಿ | ಅವಳಲ್ಲಿ |
| 467 | 13 | ಕಾಲಿಗರಗೆ | ಕಾಲಿಗೆರಗಿ |



"ಭಕ್ತ್ಯಾ ಭಾಗವತಂ ಶಾಸ್ತ್ರಂ" ಮುಕ್ತಿಗೆ ಭಕ್ತಿಯೇ ಕಾರಣವೆಂಬುದು ಆಚಾರ್ಯರ ಸ್ಪಷ್ಟ ನುಡಿ. ಮುಮುಕ್ಷುಗಳಿಗೆಲ್ಲರಿಗೂ ಭಕ್ತಿ ಅತ್ಯಂತ ಆವಶ್ಯಕ. ಭಕ್ತಿಯ ಉದ್ದೀಪನಕ್ಕೆ ಭಾಗವತ ವಂತಹ ಉತ್ತಮಗ್ರಂಥ ಮತ್ತೊಂದಿಲ್ಲ.

ಪರಮ ಪೂಜ್ಯರಾದ ಶ್ರೀದಾಸರು ಇಂತಹ ಭಾಗವತವನ್ನು ಮೈಗೂಡಿಸಿಕೊಂಡ ಭಕ್ತಿಯ ಪ್ರತಿಮೂರ್ತಿಗಳು. ಪಂಡಿತೋತ್ತಮರಾದ ಶ್ರೀ ದೊಡ್ಡಬಳ್ಳಾಪುರಂ ವಾಸುದೇವಾಚಾರ್ಯರಲ್ಲಿ ಸಮಗ್ರ ಭಾಗವತವನ್ನು ಅಧ್ಯಯನ ಮಾಡಿ ಅದನ್ನು ಕೀರ್ತನ ಕಲೆಗೆ ಅಳವಡಿಸಿಕೊಂಡದ್ದು ಶ್ರೀ ದಾಸರ ಚಾತುರ್ಯ. ರಾಮಾಯಣ, ಭಾರತ, ಭಾಗವತಾದಿ ಗ್ರಂಥಗಳನ್ನು ಕೀರ್ತನ ಕಲೆಗೆ ಅಳವಡಿಸಿ ಶ್ರೋತೃಗಳ ಮನೋಭಿತ್ತಿಯಲ್ಲಿ ಭಕ್ತಿಕಾರಂಜಿಯನ್ನು ಪುಟಿಸಿ ಕೀರ್ತನ ರಂಗಕ್ಕೆ ಹೊಸ ಆಯಾಮವನ್ನೇ ಸೃಷ್ಟಿಸಿ ಕೊಟ್ಟ ಕಲಾನಿಪುಣರು. ಭಾಗವತದ ಕಥೋಪಕಥೆಗಳಿಗೆ ದಾಸಸಾಹಿತ್ಯ ಮೆರುಗನ್ನಿತ್ತು ಭಕ್ತಿಭಾವವು ಪುಟದೇಳುವಂತೆ, ಆಭಾವವು ರಸಗಂಗೆಯಾಗಿ ಆನಂದಾಶ್ರುಗಳು ಮೈದಳೆಯುವಂತೆ ಮಾಡುವ ಇವರ ಅಪ್ಲುತ ಕಥನ ಕೌಶಲಕ್ಕೆ ಬೆರಗಾಗದವರೇ ಇಲ್ಲ.

"ಸಂತತಂ ಚಿಂತಯೇಽನಂತಂ" ಎಂಬ ಆಚಾರ್ಯರ ಅಪ್ಪಣೆಯನ್ನು ಜೀವನದ ಉಸಿರನ್ನಾಗಿಸಿಕೊಂಡು ಸದಾ ಭಾಗವತ ಲೇಖನ, ಅಧ್ಯಯನ, ವಾಚನ ಇವುಗಳನ್ನೇ ತಪಸ್ಸನ್ನಾಗಿ ಮೈಗೂಡಿಸಿಕೊಂಡ ಮಹಾನುಭಾವರು. ಇವರು.

ಇಂತಹ ಪರಿಪಕ್ವ ಜೀವನಾನುಭವಗಳನ್ನು ಚಿಂತನಶೀಲತೆಗೆ ಅಳವಡಿಸಿ ಸಾತ್ವಿಕ ದೃಷ್ಟಿಯಿಂದ ಮಿಂಚಿಸುತ್ತಿರುವ ಅವರ ಅಮೃತವಾಣಿ ಪಂಡಿತೋತ್ತಮರನ್ನೂ ತಲೆದೂಗುವಂತೆ ಮಾಡುತ್ತಿದೆ.

ಈ ಎಲ್ಲ ಅನುಭವಗಳ ಸಾರಸರ್ವಸ್ವವೂ ಈ ಸಂಗ್ರಹರೂಪದ ಭಾಗವತದ ಹೊತ್ತಿಗೆಯಲ್ಲಿ ಮೂಡಿಬಂದಿದೆ. ಜೊತೆಗೆ ಸರಳವೂ, ಸರಸವೂ, ಆದ ಭಾಷೆಯು ಮುಖ್ಯ ವಿಷಯಕ್ಕೆ ಮುಕ್ತಾಭರಣವಿಟ್ಟಂತಿದೆ. ಇಂತಹ ಭಾಗವತ ಕಥೆ ಭಕ್ತಿ ಗಂಗೆಯ ಉತ್ತುಂಗ ತರಂಗಗಳಲ್ಲಿ ಮಿಂದು ಸಕಲ ಸಜ್ಜನರೂ ಪುನೀತರಾಗುವುದರಲ್ಲಿ ಸಂಶಯವಿಲ್ಲ.

---


## ಗುರುರಾಜ ಪ್ರಕಾಶನ

35, 2ನೇ ಅಡ್ಡರಸ್ತೆ, ರಾಮಚಂದ್ರ ಅಗ್ರಹಾರ
ಚಾಮರಾಜಪೇಟೆ, ಬೆಂಗಳೂರು–560 018

**ಬೆಲೆ : ರೂ. 50**